ಕರ್ನಾಟಕ ಸರ್ಕಾರ : ಪಠ್ಯಪುಸ್ತಕಗಳ ಇಲಾಖೆ

# ಸಂಸ್ಕೃತ ಭಾಷಾಶಾಸ್ತ್ರ

ಮತ್ತು

# ಸಾಹಿತ್ಯ ಚರಿತ್ರೆ


ಲೇಖಕರು :

ಡಾ॥ ಕೆ. ಕೃಷ್ಣಮೂರ್ತಿ

ವಿದ್ವಾನ್ ಎನ್. ರಂಗನಾಥಶರ್ಮ

ವಿದ್ವಾನ್ ಎಚ್. ಕೆ. ಸಿದ್ಧಗಂಗಯ್ಯ





ಕರ್ನಾಟಕ ಸರ್ಕಾರಿ ಪಠ್ಯಪುಸ್ತಕಗಳ ಮುದ್ರಣಾಲಯದ

ಸಹನಿರ್ದೇಶಕರಿಂದ ಮುದ್ರಿಸಲ್ಪಟ್ಟಿತು. 1993

ಕರ್ನಾಟಕ ಸರ್ಕಾರ : ಪಠ್ಯಪುಸ್ತಕಗಳ ಇಲಾಖೆ

# ಸಂಸ್ಕೃತ ಭಾಷಾಶಾಸ್ತ್ರ

ಮತ್ತು

# ಸಾಹಿತ್ಯ ಚರಿತ್ರೆ



ಲೇಖಕರು :

ಡಾ॥ ಕೆ. ಕೃಷ್ಣಮೂರ್ತಿ
ವಿದ್ವಾನ್ ಎನ್. ರಂಗನಾಥಶರ್ಮ
ವಿದ್ವಾನ್ ಎಚ್. ಕೆ. ಸಿದ್ಧಗಂಗಯ್ಯ

# ಮುನ್ನುಡಿ

ಸಂಸ್ಕೃತ ವಿದ್ವನ್ಮಧ್ಯಮಾ ಪರೀಕ್ಷೆಗೆ ಭಾಷಾಶಾಸ್ತ್ರ ಮತ್ತು ಸಂಸ್ಕೃತ ಕವಿಕಾವ್ಯ ಚರಿತ್ರೆಯನ್ನು ಪಠ್ಯವಿಷಯವನ್ನಾಗಿ ಗೊತ್ತು ಮಾಡಲಾಗಿದೆ. ಈ ವಿಷಯಗಳು ಆಂಗ್ಲ ಭಾಷೆಯ ಅನೇಕ ಗ್ರಂಥಗಳಲ್ಲಿ ಹಂಚಿಹೋಗಿ ವಿದ್ಯಾರ್ಥಿಗಳಿಗೆ ತುಂಬಾ ಅಸೌಕರ್ಯವೆನಿಸಿತ್ತು. ಇದನ್ನು ಗಮನಿಸಿ ಕರ್ನಾಟಕ ಸರ್ಕಾರವು ಈ ಕೊರತೆಯನ್ನು ನಿವಾರಿಸುವ ಉತ್ತಮ ಪಠ್ಯ ಗ್ರಂಥವನ್ನು ರಚಿಸುವುದಕ್ಕಾಗಿ ಈ ಸಮಿತಿಯನ್ನು ನೇಮಿಸಿತು. ಸಮಿತಿಯ ಒಂದು ವರ್ಷದ ಪರಿಶ್ರಮದ ಫಲ ಈ ಗ್ರಂಥ.

ಇದನ್ನು ಸಿದ್ಧಪಡಿಸಿದಾಗ ಸಮಿತಿಯು ಪ್ರೌಢಪರೀಕ್ಷಾರ್ಥಿಗಳ ಅಗತ್ಯವನ್ನು ಗಮನ ದಲ್ಲಿರಿಸಿಕೊಂಡುದಲ್ಲದೆ, ಸಂಸ್ಕೃತಾಭಿಮಾನಿಗಳಾದ ಕನ್ನಡಿಗರೆಲ್ಲರಿಗೂ ಇಂದಿನವರೆಗೆ ಜೀವಂತ ವಿರುವ ಈ ಸಾಹಿತ್ಯದ ಆಳ-ಅಗಲ-ಮಹತ್ವ ಮತ್ತು ಸೌಂದರ್ಯಗಳ ಪರಿಚಯಮಾಡಿ ಕೊಡುವ ಉದ್ದೇಶವನ್ನೂ ಇಟ್ಟುಕೊಂಡಿತ್ತು. ಆದ್ದರಿಂದ ಈವರೆಗೆ ಪ್ರಕಟವಾದ ಸಂಶೋಧನೆಯ ಸಾರವನ್ನೂ ಕೃತಿಗಳ ಲಾಕ್ಷಣಿಕಸಮ್ಮತ ಸರಸವಿಮರ್ಶೆಯನ್ನೂ ಆಯ್ದ ರುಚಿಕರ ಉದಾಹರಣೆಗಳೊಡನೆ ಇಲ್ಲಿ ಒಂದೆಡೆ ದೊರಕಿಸಿಕೊಡಲಾಗಿದೆ. ಪಂಡಿತರಲ್ಲಿ ವಾದಗ್ರಸ್ತವಿರುವ ಕವಿಕಾಲವಿಚಾರವನ್ನು ಲಂಬಿಸಿಲ್ಲ. ಸಾಮಾನ್ಯವಾಗಿ ಸಾಹಿತ್ಯಚರಿತ್ರೆಗಳಲ್ಲಿ ಕಾಣದ ಶಿಲಾ ಲೇಖನಗಳ ಪ್ರಶಸ್ತಿ, ಚಿತ್ರಕಾವ್ಯ, ದೂತಕಾವ್ಯ, ಕವಯಿತ್ರಿಯರು, ಚಂಪೂ ಪ್ರಕಾರ ಆಧುನಿಕ ಸಾಹಿತ್ಯ ಇತ್ಯಾದಿ ವಿಶೇಷಾಂಶಗಳಿಗೆ ಪ್ರತ್ಯೇಕ ಅಧ್ಯಾಯಗಳನ್ನೂ ಬಹು ಶ್ರಮದಿಂದ ವಿಷಯ ಸಂಗ್ರಹ ಮಾಡಿ ಬರೆಯಲಾಗಿದೆ. ಭಾಷಾಶಾಸ್ತ್ರದ ಅತ್ಯಾಧುನಿಕ ಸಂಶೋಧನೆಗಳನ್ನೂ ಕ್ರೋಢೀಕರಿಸಿ ಸರಳವಾಗಿ ತಿಳಿಸಲಾಗಿದೆ. ವೇದಗಳಿಂದಾರಂಭಿಸಿ ಪುರಾಣ, ಆಗಮ, ರಾಮಾಯಣ ಮಹಾಭಾರತಾದಿಗಳನ್ನು ಮಹಾಕಾವ್ಯನಾಟಕಾದಿಗಳನ್ನೂ ಇಂದಿನ ಇಪ್ಪತ್ತನೆಯ ಶತಮಾನದವರೆಗೆ ಸಪ್ರಮಾಣವಾಗಿ ಕನ್ನಡದಲ್ಲಿ ಪರಿಚಯಿಸಲು ಯತ್ನಿಸಿರುವ ಪ್ರಯತ್ನಗಳಲ್ಲಿ ಪ್ರಾಯಶಃ ಇದು ಮೊದಲನೆಯದು. ಯಾವುದನ್ನೂ ಅತಿಯಾಗಿ ಹಿಗ್ಗಿಸದೆ, ಅತಿಯಾಗಿ ಕುಗ್ಗಿಸದೆ, ಮಧ್ಯಮಾರ್ಗವನ್ನು ಅನುಸರಿಸಲಾಗಿದೆ. ಮೂಲಗ್ರಂಥಗಳ ಅಧ್ಯಯನದ ಫಲವಾಗಿ ಈ ಗ್ರಂಥದಲ್ಲಿ ಅಭಿಪ್ರಾಯಗಳು ಮೂಡಿಬಂದಿವೆಯಾದರೂ, ಪ್ರಸಿದ್ಧ ಲೇಖಕರ ಗ್ರಂಥಗಳಿಂದ ದೇಶಕಾಲಾದಿಗಳ ವಿವರಗಳನ್ನು ಯಥೋಚಿತವಾಗಿ ಸಂಗ್ರಹಿಸಲಾಗಿದೆ. ಇದು ಸಂಶೋಧನ ಗ್ರಂಥವಲ್ಲವಾದ್ದರಿಂದಲೂ, ಆಧಾರ ಗ್ರಂಥಗಳ ಸಂಖ್ಯೆ ಅಮಿತವಾದ್ದರಿಂದಲೂ, ಪ್ರಮಾಣಲೇಖನಾವಳಿಯನ್ನು ಕೊಟ್ಟಿಲ್ಲ. ಕನ್ನಡಿಗರು ಈ ಗ್ರಂಥದಿಂದ ಪ್ರಯೋಜನ ಪಡೆಯಲೆಂದು ಸಮಿತಿ ಆಶಿಸುತ್ತದೆ.

ಈ ಕಾರ್ಯವನ್ನು ನಡೆಸಲು ಎಲ್ಲ ಸೌಕರ್ಯಗಳನ್ನೂ ಒದಗಿಸಿದ ಪಠ್ಯಪುಸ್ತಕ ನಿರ್ದೇಶನಾಧಿಕಾರಿಗಳಾದ ಶ್ರೀ ಎಸ್. ಮುಚಯ್ಯನವರಿಗೆ ಸಮಿತಿಯು ಹೃತ್ಪೂರ್ವಕವಾದ ಧನ್ಯವಾದಗಳನ್ನರ್ಪಿಸುತ್ತದೆ.

ಡಾ|| ಕೃಷ್ಣಮೂರ್ತಿ,
ವಿದ್ವಾನ್ ಎಸ್. ರಂಗನಾಥಶರ್ಮ,
ವಿದ್ವಾನ್ ಎಚ್. ಕೆ. ಸಿದ್ಧಗಂಗಯ್ಯ.

1-5-1976

# ಅನುಕ್ರಮಣಿಕೆ

## ಭಾಗ I

### ಭಾಷಾಶಾಸ್ತ್ರ







## ಭಾಗ II

### ವೇದವಾಙ್ಮಯ



## ಭಾಗ III

### ಲೌಕಿಕ ಸಾಹಿತ್ಯ

ಪುಟ



ಅನುಬಂಧ:



———



ಭಾಗ I

# ಭಾಷಾಶಾಸ್ತ್ರ

## ಸಂಸ್ಕೃತ ಮತ್ತು ಭಾಷಾಶಾಸ್ತ್ರ

ವೈಜ್ಞಾನಿಕವಾಗಿ ಭಾಷೆಯ ಘಟಕಗಳಾದ ವರ್ಣ, ಪದ, ರೂಪನಿಷ್ಪತ್ತಿ, ಅರ್ಥ, ವಾಕ್ಯ ಇತ್ಯಾದಿಗಳ ಕೂಲಂಕಷ ವಿಶ್ಲೇಷಣಾತ್ಮಕ ಅಧ್ಯಯನ ಆಧುನಿಕ ಕಾಲದಲ್ಲಿ ಭಾಷಾಶಾಸ್ತ್ರವೆನಿಸುತ್ತದೆ. ಇದರ ಜೊತೆಗೆ ತುಲನಾತ್ಮಕವಾಗಿ ಒಂದು ಭಾಷೆಯನ್ನು ಇತರ ಭಾಷೆಗಳೊಂದಿಗೆ ಅಂಶಾಂಶಗಳಲ್ಲೂ ಹೋಲಿಸಿ ನೋಡಿ ಭಾಷಾವರ್ಗಗಳ ನಿರ್ದೇಶನ, ಶಬ್ದವ್ಯುತ್ಪತ್ತಿ, ಶಬ್ದ ಮತ್ತು ಅರ್ಥವಿಪರಿಣಾಮಗಳು ಮತ್ತು ಅದರ ಕಾರಣಗಳು, ಧ್ವನಿಗಳ ವಿಭಾಗ ಹಾಗು ಪರಿಣಾಮಗಳ ನಿಯಮಗಳು, ಭಾಷೆಯ ಉತ್ಪತ್ತಿಯ ಬಗೆಗಿನ ತಾತ್ತ್ವಿಕ ವಿಚಾರಧಾರೆಗಳು— ಮುಂತಾದುವನ್ನೂ ಇಂದಿನ ಭಾಷಾಶಾಸ್ತ್ರ ತನ್ನಲ್ಲಿ ಮೈಗೂಡಿಸಿಕೊಂಡು ಶ್ರೀಮಂತವಾದ ಒಂದು ಸ್ವತಂತ್ರ ಅಧ್ಯಯನಕ್ಷೇತ್ರವಾಗಿ ಪರಿಣಮಿಸಿದೆ, ಧ್ವನಿಗಳ ಉಚ್ಚಾರಗಳ ಶಾಸ್ತ್ರೀಯ ಅಧ್ಯಯನಕ್ಕೆ ನಾನಾ ವೈಜ್ಞಾನಿಕ ಯಂತ್ರಸಾಮಗ್ರಿಗಳನ್ನೂ ಬಳಸಲಾಗುತ್ತದೆ. ಆದರೆ ಈ ಸ್ವತಂತ್ರ ಭಾಷಾಶಾಸ್ತ್ರದ ಬಹ್ವಂಗಗಳು ಅತ್ಯಂತ ಪ್ರಾಚೀನ ಕಾಲದಲ್ಲಿಯೇ ಭಾರತದ ಅಧ್ಯಯನ ವಿಷಯಗಳಾಗಿದ್ದು, ಸಂಸ್ಕೃತಭಾಷೆಯ ಅತ್ಯಂತ ಶಾಸ್ತ್ರೀಯ ವಿಶ್ಲೇಷಣೆಯನ್ನು ಪಾಣಿನಿ ಮಾಡಿರುವುದು ಜಗತ್ತಿನ ಭಾಷಾಶಾಸ್ತ್ರದ ಇತಿಹಾಸದಲ್ಲಿಯೇ ಒಂದು ಮೈಲಿಗಲ್ಲಾಗಿದೆ. ಜಗತ್ತಿನ ಮತ್ತಾವ ಭಾಷೆಗೂ ಪಾಣಿನಿಯಂತಹ ವೈಜ್ಞಾನಿಕ ವಿವರಣೆ ಕ್ರಿಸ್ತಶಕ 19 ನೆಯ ಶತಮಾನದವರೆಗೂ ದೊರೆಯುವುದಿಲ್ಲ. ಭಾರತದಲ್ಲಿ ಪಾಣಿನಿ, ಯಾಸ್ಕ, ಶಿಕ್ಷಾ ಮತ್ತು ಪ್ರಾತಿಶಾಖ್ಯಗ್ರಂಥಗಳು—ಇತ್ಯಾದಿಗಳ ಪರಿಚಯವಾದ ಮೇಲೆಯೇ ಯುರೋಪಿನಲ್ಲಿ ಜರ್ಮನ್ ವಿದ್ವಾಂಸರೂ ತಮ್ಮ ತಮ್ಮ ಭಾಷೆಗಳಿಗೆ ಭಾಷಾಶಾಸ್ತ್ರೀಯ ವಿಶ್ಲೇಷಣೆ ಮಾಡಲುದ್ಯುಕ್ತರಾಗಿ ಸಾವಿರಾರು ಗ್ರಂಥಗಳನ್ನು ಬರೆದಿದ್ದಾರೆ. ಅಷ್ಟೇ ಅಲ್ಲ, ಇಂಗ್ಲಿಷ್, ಜರ್ಮನ್ ಮುಂತಾದ ಆಧುನಿಕ ಯೂರೋಪಿನ ಭಾಷೆಗಳೂ, ಪ್ರಾಚೀನ ಇರಾನಿನ ಝಂಡ್, ಅವಸ್ತಾ ಭಾಷೆಯೂ ಮೂಲತಃ ಸಂಸ್ಕೃತಭಾಷೆಯ ಮೂಲವಾದ ಇಂಡೋ–ಯೂರೋಪಿಯನ್ ಭಾಷಾವರ್ಗಕ್ಕೇ ಸೇರುವುವೆಂಬ ತೀರ್ಮಾನವನ್ನು ಅನೇಕ ಅಂತರಪ್ರಮಾಣಗಳಿಂದ ಸಿದ್ಧಪಡಿಸಿದ್ದಾರೆ. ಒಂದೇ ಭಾಷೆಯನ್ನಾಡುತ್ತಿದ್ದ ಆ ವಿವಿಧ ಭಾಷೆಗಳ ಮೂಲವಂಶೀಯರಾದರೂ ಒಂದೇ ಬುಡಕಟ್ಟಿನವರಾಗಿದ್ದಿರಬಹುದೆಂಬ ವಾದವೂ ಇದೆ. ಹೀಗೆ ತುಲನಾತ್ಮಕ ಭಾಷಾಶಾಸ್ತ್ರದ ಐತಿಹಾಸಿಕ ಅಧ್ಯಯನದಿಂದ ಆಯಾ ಭಾಷೆಗಳ ಸಾಹಿತ್ಯ, ಪುರಾಣೇತಿಹಾಸಗಳ ಅಧ್ಯಯವನ್ನೂ ಧರ್ಮಾಚರಣೆಗಳ ಸ್ವರೂಪದ ಅಧ್ಯಯನವನ್ನೂ ಮುಂದುವರೆಸಿ ಪಾಶ್ಚಾತ್ಯರು ತುಲನಾತ್ಮಕ

ದೈವತಕಥಾಶಾಸ್ತ್ರ (Comparative mythology) ಮತ್ತು ತುಲನಾತ್ಮಕ ಮತಧರ್ಮ ಚರಣಶಾಸ್ತ್ರ (Comparative religion) ಗಳನ್ನೂ ಆವಿಷ್ಕರಿಸಿದ್ದಾರೆ. ಇವರಂತೆ ವೈದಿಕ ದೇವತೆ 'ದ್ಯೌಸ ಪಿತರ', ಗ್ರೀಕ್ ದೇವಾಧಿಪ 'ಜ್ಯೂಸ' ಮತ್ತು ಲ್ಯಾಟಿನ್ ದೇವ 'ಜೂಪಿಟರ್' ಇವರ ವರ್ಣನೆಗಳಲ್ಲಿ ಅನೇಕ ರೀತಿಯ ಸಾಮ್ಯಗಳು ಎದ್ದು ಕಾಣುತ್ತವೆ. ಹೀಗಾಗಿ ಪ್ರಾಚೀನ ಮಾನವ ಸಂಸ್ಕೃತಿಯ ಸ್ವರೂಪಾನುಸಂಧಾನ ಮಾಡಬೇಕೆನ್ನುವ ಸಂಶೋಧಕರಿಗೆ ಸಂಸ್ಕೃತದಲ್ಲಿರುವ ಸಾಹಿತ್ಯ ಹಾಗು ಶಾಸ್ತ್ರಗಳಷ್ಟೇ ಅದರ ಭಾಷಾಶಾಸ್ತ್ರವೂ ಆಕರ್ಷಕವಾಗುತ್ತದೆ.

ಆಧುನಿಕ ತುಲನಾತ್ಮಕ ಭಾಷಾಶಾಸ್ತ್ರದ ಸಂಶೋಧಕ ವಿದ್ವಾಂಸರು :

1. ಫ್ರೆಡೆರಿಕ್ ಫಾನ ಷ್ಲೆಗೆಲ—'ಭಾರತೀಯ ಭಾಷೆ ಹಾಗು ಜ್ಞಾನ', 1808, (ಜರ್ಮನ್)—ಇವರಲ್ಲಿ ಗ್ರೀಕ್, ಲ್ಯಾಟಿನ್, ಜರ್ಮನ್, ಸಂಸ್ಕೃತಭಾಷೆಗಳ ಅನೇಕ ಶಬ್ದಗಳ ಧ್ವನಿಸಾಮ್ಯ ಹಾಗು ಅರ್ಥಸಾಮ್ಯಗಳ ಉಲ್ಲೇಖವಿದೆ.

2. ವ್ಹಿಲ್ಹೆಲ್ಮ ಫಾನ ಹಂಬೋಲ್ಟ (1767–1835) (ಜರ್ಮನ್)—ಭಾಷಾಧ್ಯಯನದಲ್ಲಿ ಪ್ರಾದೇಶಿಕ ನುಡಿಗಟ್ಟುಗಳ ಮಹತ್ತ್ವವನ್ನು ಇವನು ಪ್ರಸ್ತಾಪಿಸಿದ್ದಾನೆ.

3. ಜೇಕಬ್ ಗ್ರಿಮ್ (1775–1863) (ಜರ್ಮನ್)—ಇವನು ವ್ಯುತ್ಪತ್ತಿಶಾಸ್ತ್ರ, ಧ್ವನಿವಿಪರಿಣಾಮ, ವಾಕ್ಯವಿಜ್ಞಾನಗಳ ಕ್ಷೇತ್ರದಲ್ಲಿ ಮಹತ್ವದ ಸಂಶೋಧನೆಗಳಿಗೆ ಹೆಸರಾಗಿದ್ದಾನೆ.

4. ಫ್ರಾನ್ಸ್ ಬಾಪ್ (ಜರ್ಮನ್)—ಇವನು ಸಂಸ್ಕೃತ, ಗ್ರೀಕ್, ಲ್ಯಾಟಿನ್, ಅವೆಸ್ತಾ, ಜರ್ಮನ್ ಇತ್ಯಾದಿ ಭಾಷೆಗಳ ತುಲನಾತ್ಮಕ ಹಾಗು ಶಾಸ್ತ್ರೀಯ ಅಧ್ಯಯನ ಮಾಡಿದವರಲ್ಲಿ ಅಗ್ರಗಣ್ಯನೆನಿಸಿರುವುದರಿಂದ ಈ ಶಾಸ್ತ್ರಕ್ಕೆ ಇವನನ್ನು ಜನಕನೆನ್ನುವ ರೂಢಿಯಿದೆ.

5. ಆಗಸ್ಟ್ ಷ್ಲೈಖರ್ (ಜರ್ಮನ್) (1821–1868)—ಇವನು ಜನಭಾಷೆಗಳನ್ನು ವಿಶೇಷವಾಗಿ ಅಧ್ಯಯನ ಮಾಡಿ ಭಾಷೆಗಳನ್ನು ವ್ಯಾಸಪ್ರಧಾನ (Isolating), ಪ್ರತ್ಯಯ ಪ್ರಧಾನ (Agglutinating) ಮತ್ತು ವಿಭಕ್ತಿಪ್ರಧಾನ (Inflexional) ಮುಂತಾಗಿ ವಿಭಾಗಿಸಿ ಕೀರ್ತಿಶಾಲಿಯಾಗಿದ್ದಾನೆ.

6. ಮ್ಯಾಕ್ಸ್ ಮ್ಯೂಲರ್ (ಜರ್ಮನ್) (1823–1900)—ಭಾಷೆಯ ಉತ್ಪತ್ತಿ, ವಿಕಾಸ, ಪ್ರಕೃತಿ, ವಿಕಾಸಕಾರಣ, ವರ್ಗೀಕರಣ, ಅರ್ಥವಿಜ್ಞಾನ ಮುಂತಾದ ಅನೇಕ ಅಂಶಗಳ ಮೇಲೆ ವಿವರವಾದ ಗ್ರಂಥಗಳನ್ನು ಬರೆದ ಕೀರ್ತಿ ಈತನದು. ವೈದಿಕ ಸಂಸ್ಕೃತವನ್ನಾಡುತ್ತಿದ್ದ ಆರ್ಯರ ಮೂಲವಾಸಸ್ಥಾನದ ಬಗೆಗೂ ಇವನು ಸಂಶೋಧನೆ ನಡೆಸಿದನು.

7. ವಿಲಿಯಮ್ ವ್ಹಿಟ್ನಿ (ಅಮೇರಿಕನ್)—ಇವನು ಸಂಸ್ಕೃತಭಾಷೆಯ ವ್ಯಾಕರಣವನ್ನೂ (1879), ಅನೇಕ ಭಾಷಾಶಾಸ್ತ್ರೀಯ ಉದ್ಗ್ರಂಥಗಳನ್ನೂ ಬರೆದಿದ್ದಾನೆ. ಅನೇಕ ವಿಷಯಗಳಲ್ಲಿ ಮ್ಯಾಕ್ಸ್ ಮ್ಯೂಲರ್ ಮತ್ತು ಇವನಿಗೆ ಮತಭೇದಗಳಾದವು.



ಇವರಲ್ಲದೆ ಭಾಷಾಶಾಸ್ತ್ರದ ಸಾಮಾನ್ಯ ಸಿದ್ಧಾಂತಗಳನ್ನು ಕುರಿತು ಯೆಸ್ಪರ್ಸನ್, ಮಿಲೇಟ್, ಬ್ಲೂಮ್‌ಫೀಲ್ಡ್ ಮುಂತಾದವರೂ, ಅರ್ಥವಿಜ್ಞಾನವನ್ನು ಕುರಿತು ಟಕರ್, ಓರ್ಟೆಲ್ ಮುಂತಾದವರೂ, ಧ್ವನಿವಿಜ್ಞಾನವನ್ನು ಕುರಿತು ಸ್ವೀಟ್, ಪೈಕ್ ಮುಂತಾದವರೂ, ರೂಪವಿಜ್ಞಾನದ ಮೇಲೆ ಬ್ಲೂಮ್ ಮುಂತಾದವರೂ, ವಾಕ್ಯವಿಜ್ಞಾನದ ಮೇಲೆ ಬ್ರುಗ್‌ಮಾನ್ ಮುಂತಾದವರೂ ಮನನೀಯವಾದ ಪ್ರೌಢಗ್ರಂಥಗಳನ್ನು ಬರೆದಿದ್ದಾರೆ. ಹೆಚ್ಚಿನ ವಿವರಗಳನ್ನೀಯಲು ಇಲ್ಲಿ ಅವಕಾಶವಿಲ್ಲ. ಆದರೆ ಯುರೋಪಿಯನ್ ವಿದ್ವಾಂಸರು ತಮ್ಮ ತಮ್ಮ ಭಾಷೆಗಳಿಗೂ ವೈಜ್ಞಾನಿಕ ವ್ಯಾಕರಣಗಳನ್ನು ರಚಿಸಿಕೊಳ್ಳಲು ಪಾಣಿನಿಯ ಭಾಷಾವಿಶ್ಲೇಷಣಕ್ರಮವು ಮಾರ್ಗದರ್ಶಕವಾಯಿತೆಂಬ ಮಹತ್ತ್ವದ ವಿಷಯ ಭಾರತೀಯರಿಗೆ ಹೆಮ್ಮೆ ತರುವಂತಹದಾಗಿದೆ.

**ಭಾಷಾವಿಜ್ಞಾನಕ್ಕೆ ಪ್ರಾಚೀನ ಭಾರತೀಯ ಕೊಡುಗೆ**

ವೇದಶಬ್ದಗಳ ಉಚ್ಚಾರಣೆ ಹಾಗೂ ಪಾಠಕ್ರಮ ವ್ಯವಸ್ಥೆಗಾಗಿ 'ಶಿಕ್ಷಾ' ಎಂಬ ವೇದಾಂಗವೇ ಆವಿಷ್ಕೃತವಾದುದು ಗಮನಾರ್ಹ. ಬ್ರಾಹ್ಮಣಗ್ರಂಥಗಳಲ್ಲಿ ಭಾಷಾಶಾಸ್ತ್ರೀಯ ವಿಚಾರಗಳು ಹೇರಳವಾಗಿ ಬರುತ್ತವೆ. ಉದಾಹರಣೆಗೆ ಕೃಷ್ಣಯಜುರ್ವೇದ ಸಂಹಿತೆಯಲ್ಲಿಯೇ ದೇವತೆಗಳು ಭಾಷೆಯನ್ನು ವಿಶ್ಲೇಷಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸುವ ಮಾತು ಬರುತ್ತದೆ. "ತೇ ದೇವಾ ಇಂದ್ರಮಬ್ರುವನ್ ಇಮಾಂ ನೋ ವಾಚಂ ವ್ಯಾಕುರ್ವಿತಿ" (ತೈತ್ತಿರೀಯ ಸಂಹಿತಾ 6/4/7), ಬ್ರಾಹ್ಮಣಗಳಲ್ಲಿ ಎಷ್ಟೋ ಶಬ್ದಗಳಿಗೆ ಪ್ರಾಮಾಣಿಕ ನಿರ್ವಚನವನ್ನೂ ಕೊಟ್ಟಿದೆ. ಉದಾ. : 'ಪ್ರೈಷ,' 'ಮಾನುಷ,' 'ಛಾಯಾ' (ಐತರೇಯ ಬ್ರಾಹ್ಮಣ III 9, III 23 ಮತ್ತು VII 13).

ವೇದಸಂಹಿತೆಗಳ ಪದವಿಭಾಗ, ಸಂಧಿ-ಸಮಾಸವಿಚ್ಛೇದ, ಸ್ವರನಿಯಮಗಳ ನಿರ್ಣಯ ಮುಂತಾದುವನ್ನು ಪದಪಾಠಗಳೇ ಕ್ರಮಬದ್ಧವಾಗಿ ನಿರ್ದೇಶಿಸುತ್ತವೆ.

ಪ್ರಾತಿಶಾಖ್ಯಗಳಲ್ಲಿ ವೇದಶಾಖಾನುಸಾರವಾಗಿ ಶಬ್ದ ಹಾಗೂ ಧ್ವನಿಗಳ ವರ್ಗೀಕರಣವನ್ನು ಮಾಡಲಾಗಿದೆ. ಪದಗಳ ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂದು ನಾಲ್ಕು ವಿಭಾಗಗಳು ಪ್ರಥಮತಃ ಪ್ರಾತಿಶಾಖ್ಯಗಳಲ್ಲೇ ಕಾಣಬರುತ್ತವೆ. ವೈಜ್ಞಾನಿಕವಾಗಿ ಸ್ವರ–ವ್ಯಂಜನಗಳನ್ನು ಉತ್ಪತ್ತಿಸ್ಥಾನಗಳ ಮೇಲಿಂದ ವರ್ಗೀಕರಿಸಿರುವುದನ್ನೂ ಕಾಣುತ್ತೇವೆ.

ವೇದಶಬ್ದಗಳ ಪರ್ಯಾಯಗಳನ್ನು ಹೇಳುವ 'ನಿಘಂಟು' ಗಳು ದೊರೆಯುತ್ತವೆ. ಯಾಸ್ಕನ ನಿರುಕ್ತವು ಈ ನಿಘಂಟುಗಳ ಭಾಷ್ಯವೇ ಆಗಿದೆ. ಅರ್ಥವಿಮೋಚನೆಯ ತಾತ್ತ್ವಿಕ ಗ್ರಂಥಗಳಲ್ಲಿ ಮೊದಲ ಸ್ಥಾನ ವಿಶ್ವದಲ್ಲೇ ಇದಕ್ಕೆ ಮೀಸಲೆನ್ನಬಹುದು. ಯಾವುದೇ ಶಬ್ದವಿರಲಿ ಮೂಲತಃ ಒಂದು ಧಾತುವಿನಿಂದ ಅದು ಜನಿತವೆಂಬುದನ್ನು ಯಾಸ್ಕನು ಸ್ಪಷ್ಟವಾಗಿ ಹೇಳುತ್ತಾನೆ :

"ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ।
ಧಾತೋಸ್ತದರ್ಥಾತಿಶಯೇನ ಯೋಗಸ್ತದುಚ್ಯತೇ ಪಂಚವಿಧಂ ನಿರುಕ್ತಮ್ ॥"

—ಎಂಬಂತೆ ನಿರುಕ್ತದಲ್ಲಿ ವರ್ಣಾಗಮಾದಿ ಭಾಷಾಶಾಸ್ತ್ರೀಯ ವಿಷಯಗಳೆಲ್ಲ ಅಡಕವಾಗಿವೆ.

ಪಾಣಿನಿ ವ್ಯಾಕರಣವಂತೂ ವಿಶ್ವದ ಭಾಷಾಧ್ಯಯನಗಳಲ್ಲಿ ಗೌರೀಶಂಕರಪ್ರಾಯವಾದುದು. ಇವನ ಕಾಲ ಬಹುಶಃ ಕ್ರಿ.ಪೂ. 500ಕ್ಕಿಂತ ಅರ್ವಾಚೀನವಲ್ಲವೆನ್ನುತ್ತಾರೆ. ಸೂತ್ರಶೈಲಿಯ ಅನ್ವೇಷಣೆ, ಭಾಷೆಯ ಅಂತ್ಯಾವಯವ ವಾಕ್ಯವೇ ಹೊರತು ಶಬ್ದವಲ್ಲವೆಂಬ ಸಿದ್ಧಾಂತ, ಶಬ್ದಗಳನ್ನು ಸುಬನ್ತ, ತಿಙನ್ತ, ಅವ್ಯಯಗಳೆಂದು ಮೂರಾಗಿ ವಿಭಾಗಿಸುವ ವ್ಯವಸ್ಥೆ, ಸ್ಥಾನ-ಪ್ರಯತ್ನವಿವೇಕ, ಲೌಕಿಕ ಮತ್ತು ಸಂಸ್ಕೃತಪದಗಳ ತುಲನಾತ್ಮಕ ಅಧ್ಯಯನ—ಇವು ಪಾಣಿನಿ ವ್ಯಾಕರಣದ ಕೆಲವು ವೈಶಿಷ್ಟ್ಯಗಳು. ಇಂದಿನ ಭಾಷಾಶಾಸ್ತ್ರಕ್ಕೂ ಇವುಗಳಿಂದ ಸ್ಫೂರ್ತಿ ದೊರೆತಿದೆ. ಕಾಲಕಾಲಕ್ಕೆ ಭಾಷೆಯ ಪರಿವರ್ತನೆಯ ವಿಚಾರ ಕಾತ್ಯಾಯನನ ವಾರ್ತಿಕಗಳಲ್ಲೂ ಪತಂಜಲಿಯ ಮಹಾಭಾಷ್ಯದಲ್ಲೂ ಅಭಿವ್ಯಕ್ತವಾಗುತ್ತದೆ.

ಸಂಸ್ಕೃತದಲ್ಲಿ ಪಾಣಿನಿವ್ಯಾಕರಣದಂತೆ "ಇಂದ್ರಶ್ಚಂದ್ರಃ ಕಾಶಕೃತ್ಸ್ನಾಪಿಶಲೀ ಶಕಟಾಯನಃ" ಎಂದಂತೆ ಇನ್ನೂ ಅನೇಕ ವ್ಯಾಕರಣಪ್ರಸ್ಥಾನಗಳಿವೆ. ಹೀಗೆ ಸಂಸ್ಕೃತಭಾಷೆಯ ಅಭ್ಯಾಸ ಮತ್ತು ಆಧುನಿಕ ಭಾಷಾಶಾಸ್ತ್ರಗಳು ಪರಸ್ಪರ ಪೂರಕವಾಗಿವೆ.

## ಭಾಷೆಯ ಲಕ್ಷಣ

ಭಾಷೆ ಮಾನವಜೀವನದ ಅತಿ ಪ್ರಮುಖ ಉಪಕರಣ. ದಂಡಿ ಹೇಳುವಂತೆ 'ವಾಚಾಮೇವ ಪ್ರಸಾದೇನ ಲೋಕಯಾತ್ರಾ ಪ್ರವರ್ತತೇ।', 'ಇದಮಂಧಂತಮಃ ಕೃತ್ಸ್ನಂ ಜಾಯೇತ ಭುವನತ್ರಯಮ್। ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಂ ನ ದೀಪ್ಯತೇ॥' (ಕಾವ್ಯಾದರ್ಶ, 1, 3-4). ಭಾಷೆಯಿಲ್ಲದೆ ಭಾವಾಭಿವ್ಯಕ್ತಿಯಾಗದು, ಸಾಮಾಜಿಕವ್ಯವಹಾರ ಸಾಗದು. ಭಾಷಾಶಾಸ್ತ್ರೀಯ ಅಧ್ಯಯನಕಾಲದಲ್ಲಿ ಭಾಷೆಯೆಂದರೆ ಭಾವಾಭಿವ್ಯಕ್ತಿಯ ಚೇಷ್ಟಾದಿ ಇತರ ಪ್ರಕಾರಗಳನ್ನು ಹೊರತುಪಡಿಸಿ ಕೇವಲ ಮನುಷ್ಯನ ವಾಕ್ಕಿನ ಉಚ್ಚಾರಣೆಯೆಂದೇ ಅರ್ಥ; ಈ ವಾಕ್ಕು ಪುನಃಪುನಃ ಪ್ರಯೋಗಕ್ಕೂ ಬರುವಂತಹದಾಗಿರುತ್ತದೆ. ಸಂಸ್ಕೃತದಲ್ಲಿಯೂ ಇದನ್ನೇ 'ಭಾಷಣಾದ್ ಭಾಷಾ' ಎಂಬ ನಿರ್ವಚನ ಎತ್ತಿ ತೋರಿಸುತ್ತದೆ. ಉಚ್ಚರಿತವಾದ ವಾಕ್ಕು ಭಾಷೆಯ ಭೌತಿಕಾಂಶ; ಅರ್ಥ ಭಾವಾಂಶ. ಇದು ಈ ಶಾಸ್ತ್ರದ ಪರಿಭಾಷೆ.

ಆದರೆ ಭಾಷೆಯೆಂಬುದನ್ನು ವಿಶಾಲಾರ್ಥದಲ್ಲಿಯೂ ಬಳಸುವ ರೂಢಿಯಿದೆ. ಸಂಸ್ಕೃತ, ಕನ್ನಡ ಮುಂತಾದುವನ್ನು ಭಾಷೆಗಳೆನ್ನುತ್ತೇವೆ. ಹಾಗೆಯೇ ಒಂದು ವಿಶಿಷ್ಟ ಜನವರ್ಗದವರ ಆಡುನುಡಿಯನ್ನೂ ಭಾಷೆಯೆನ್ನುತ್ತೇವೆ. ಒಂದು ಪ್ರಾಂತೀಯ ನುಡಿಗಟ್ಟನ್ನೂ (dialect) ಭಾಷೆಯೆನ್ನುತ್ತೇವೆ. ಒಂದು ಸಾಹಿತ್ಯವಿರುವ ವ್ಯಾಕರಣಪರಿಷ್ಕೃತಭಾಷಾಸ್ವರೂಪವನ್ನೂ ಭಾಷೆಯೆನ್ನುತ್ತೇವೆ. ಆದರೆ ಇವುಗಳಲ್ಲೆಲ್ಲ ಇರುವ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಿಕೊಳ್ಳಬೇಕು.

ಶಿಷ್ಟವ್ಯವಹಾರದ ಭಾಷೆ ಸ್ಟಾಂಡರ್ಡ್ ಭಾಷೆಯಾದರೆ, ಇದನ್ನೊಪ್ಪುವ ಅನೇಕ ಪ್ರಾದೇಶಿಕ ರೂಪಗಳು ಆ ಭಾಷೆಯಲ್ಲಿ ಅಂತರ್ಗತವಾಗಬಹುದು. ಎರಡಕ್ಕೂ ಕೊಳುಕೊಡೆ ನಡೆದೇ



ಇರುತ್ತದೆ. ಎರಡೂ ಕಾಲಕಾಲಕ್ಕೆ ವಿಕಸಿತವಾಗುತ್ತ ಸಾಗುತ್ತವೆ. ಭಾಷೆ ಕೇವಲ ಗ್ರಂಥಸ್ಥವಿರಬಹುದು (ಲ್ಯಾಟಿನಿನಂತೆ) ಅಥವಾ ಗ್ರಂಥಸ್ಥ ಮತ್ತು ವ್ಯಾವಹಾರಿಕ ಎರಡು ರೂಪಗಳನ್ನೂ ಪಡೆದಿರಬಹುದು (ಕನ್ನಡದಂತೆ). ಆದರ್ಶರೂಪ ಗ್ರಂಥಭಾಷೆಯಾದರೆ, ವ್ಯಾವಹಾರಿಕರೂಪ ಆಡುನುಡಿಯಲ್ಲಿ ಕಾಣುತ್ತದೆ. ಸಾಹಿತ್ಯಭಾಷೆ ಸಾಮಾನ್ಯಭಾಷೆಗಿಂತ ವ್ಯಾಕರಣಾದಿ ನಿಯಮಬದ್ಧವಿದ್ದು ಕೃತ್ರಿಮವಿರುತ್ತದೆ. ಸಾಹಿತ್ಯಭಾಷೆ ಸಾಮಾನ್ಯಭಾಷೆಯಷ್ಟು ತೀವ್ರವಾಗಿ ಪರಿಣಾಮಶೀಲವಿರುವುದಿಲ್ಲ. ಹೀಗೆ ಭಾಷೆಯ ಕ್ಷೇತ್ರ ನುಡಿಯ ಕ್ಷೇತ್ರಕ್ಕಿಂತ ಹೆಚ್ಚು ವ್ಯಾಪಕ. ಒಂದು ಭಾಷೆಯ ಅನೇಕ ಪ್ರಾಂತಭೇದಗಳೂ ಬೋಧೆಗೆ ಅಡ್ಡಿಯಾಗವು; ಆದರೆ ಬೇರೆ ಬೇರೆ ಎರಡು ಭಾಷೆಗಳನ್ನಾಡುವವರಿಗೆ ಪರಸ್ಪರ ಬೋಧೆಯಾಗದು. ಸಾಹಿತ್ಯ, ಶಾಸನ ಮುಂತಾದ್ದಕ್ಕೆ ಬರುವ ಭಾಷೆಯ ಸ್ವರೂಪವೇ ಬೇರೆ; ನಿತ್ಯವ್ಯವಹಾರಕ್ಕೆ ಬಳಕೆಯಾಗುವ ಭಾಷೆಯ ಸ್ವರೂಪವೇ ಬೇರೆ. ಒಂದು ಭಾಷೆ ಪ್ರಾಂತಭೇದಗಳನ್ನೂ ಮೀರಿ ಸಮಗ್ರ ರಾಷ್ಟ್ರದಲ್ಲಿಯೇ ಪ್ರಚಾರದಲ್ಲಿದ್ದರೆ ಅದು ರಾಷ್ಟ್ರಭಾಷೆ; ಒಂದು ರಾಷ್ಟ್ರದ ಪ್ರಾಂತಗಳಿಗೆ ಸೀಮಿತವಾದವು ಪ್ರಾಂತಭಾಷೆಗಳು; ರಾಜ್ಯಶಾಸನಕ್ಕೆ ಬಳಸುತ್ತಿರುವುದೇ ರಾಜಭಾಷೆ; ಮನುಷ್ಯರೇ ಸಂಕೇತದಿಂದ ನಿರ್ಮಿಸಿಕೊಂಡ ನುಡಿಯಿದ್ದರೆ ಅದು ಕೃತ್ರಿಮಭಾಷೆ ('ಎಸ್ಪರಾಂಟೊ'ವಿನಂತೆ).

ಈ ದೃಷ್ಟಿಯಿಂದ ನೋಡಿದಾಗ ಸಂಸ್ಕೃತವು ಮೊದಮೊದಲು ಶಿಷ್ಟಭಾಷೆಯ ಆಡುನುಡಿಯಾಗಿಯೂ, ಅನಂತರ ಹೆಚ್ಚು ಹೆಚ್ಚು ಗ್ರಂಥಭಾಷೆಯಾಗಿಯೂ ಪರಿಣಮಿಸಿದ ರಾಷ್ಟ್ರಭಾಷೆಯೆಂಬುದು ಒಡೆದು ಕಾಣುತ್ತದೆ. ಸಂಸ್ಕೃತದ ಆಡುನುಡಿಯ ವಿಕಸಿತ ರೂಪಗಳೇ ಪ್ರಾಕೃತ, ಅಪಭ್ರಂಶ, ಹಿಂದೀ, ಬಂಗಾಲೀ ಇತ್ಯಾದಿ ಭಾಷೆಗಳು. ಗ್ರಂಥಸ್ಥರೂಪ ಮಾತ್ರ ತ್ರಿಮುನಿ ವ್ಯಾಕರಣದ ಮಹಿಮೆಯಿಂದ ಬದಲಾವಣೆ ಹೊಂದದೆ ಉಳಿದಿದೆ.

## ಭಾಷೆಯ ಪರಿವರ್ತನೆ ಮತ್ತು ಅದಕ್ಕೆ ಕಾರಣಗಳು

ಭಾಷೆಯು ನುಡಿದವನ ಸ್ವಾತಂತ್ರ್ಯದ ಹಾಗು ಸ್ವೇಚ್ಛೆಯ ಫಲವಾಗಿ ಪರಿವರ್ತನಶೀಲವಾದರೆ, ಸಾಮಾಜಿಕವೂ ಆದ ಕಾರಣ ಕೆಲವೊಂದು ಇತಿಮಿತಿಗಳಲ್ಲಿ ಮಾತ್ರ ಪರಿಣಾಮಗೊಳ್ಳುತ್ತದೆ. ಭಾಷೆಯೆಂಬುದು ನಿಂತ ನೀರಲ್ಲ; ನಿರಂತರವಾಗಿ ಹರಿಯುತ್ತಿರುವ ನದೀಪ್ರವಾಹ. ಪ್ರತಿ ಮನುಷ್ಯನ ಕಂಠತಾಲ್ವಾದಿಗಳ ಭೇದದಿಂದಲೂ, ಮನೋವ್ಯಾಪಾರಗಳ ಭೇದದಿಂದಲೂ ಒಬ್ಬೊಬ್ಬ ಮನುಷ್ಯನಿಗೂ ಅವನವನ ಭಿನ್ನಭಾಷೆಯೇ ತಾತ್ತ್ವಿಕವಾಗಿ ಇರುತ್ತದೆನ್ನಬೇಕು. ಸಂಸ್ಕೃತ ಮುಂತಾದ ವ್ಯಾಕರಣಬದ್ಧಭಾಷೆಗಳಲ್ಲಿ ಕೂಡ ಕಾಲಕಾಲಕ್ಕೆ ಶಬ್ದೋಚ್ಚಾರಣೆಯಲ್ಲಿ ಭೇದಗಳು ತಲೆದೋರಬಹುದು. ಬಂಗಾಳಿಗಳು ಇಂದು ಉಚ್ಚರಿಸುವ ಸಂಸ್ಕೃತವೇ ಕನ್ನಡಿಗರ ಸಂಸ್ಕೃತೋಚ್ಚಾರಣೆಗಿಂತ ಭಿನ್ನವಾಗಿರುತ್ತದೆ. ಆದ್ದರಿಂದ ಇಂದಿನ ಬಂಗಾಳಿ ಮುಂತಾದವು ವ್ಯಾಕರಣಬದ್ಧ ಸಂಸ್ಕೃತದ ಪರಿಣತರೂಪಗಳೆನ್ನಲಾಗದು; ಆಡುಭಾಷೆಯಾಗಿದ್ದ ಪ್ರಾಚೀನ ಸಂಸ್ಕೃತದ ರೂಪಾಂತರಗಳೆಂದೇ ತಿಳಿಯಬೇಕು. ಆದ್ದರಿಂದಲೇ ಭಾರತದ ಆರ್ಯವರ್ಗದ ಭಾಷೆಗಳನ್ನೆಲ್ಲ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕವೆಂದು ವಿಭಾಗಿಸುತ್ತಾರೆ.

ಪ್ರಾಚೀನ — ಋಗ್ವೇದ, ಬ್ರಾಹ್ಮಣ, ರಾಮಾಯಣಗಳ ಭಾಷೆ.

ಮಧ್ಯಕಾಲೀನ — ಧಮ್ಮಪದ ಮತ್ತು ಸಂಸ್ಕೃತ ನಾಟಕಗಳಲ್ಲಿ ಬರುವ ಪ್ರಾಕೃತಭಾಷೆ.

ಆಧುನಿಕ — ತುಲಸೀದಾಸನ ರಾಮಾಯಣದಿಂದ ಈಚಿನ ಹಿಂದೀಭಾಷೆ.

ಈ ಮೂರೂ ಒಂದೇ ಭಾಷೆಯ ಅವಸ್ಥಾಂತರಗಳು ಎಂಬುವನ್ನು ಈಗ ಊಹಿಸುವದೇ ಕಷ್ಟವಾಗುವಂತಿದೆ. ಈ ಮೂರು ಕಾಲಗಳಲ್ಲಿಯೂ ಭಾಷೆಗೆ ಬೇರೆ ಬೇರೆ ವೈಶಿಷ್ಟ್ಯಗಳು ಕಾಣುತ್ತವೆ. ಪ್ರಾಚೀನಭಾಷೆ ಸಂಶ್ಲೇಷಣಾತ್ಮಕವಾಗಿತ್ತು. 'ಕರೋತಿ' ಎಂಬುದಕ್ಕೆ 'ಅವನು ಮಾಡುತ್ತಾನೆ' ಎಂಬ ವಾಕ್ಯದ ಅರ್ಥವಿತ್ತು; ಅದರಲ್ಲಿ ಕರ್ತೃ-ಕ್ರಿಯೆಗಳೆರಡೂ ಸಂಶ್ಲಿಷ್ಟವಿರುತ್ತಿದ್ದವು. ಮಧ್ಯಕಾಲದಲ್ಲಿಯೂ ಭಾಷೆಗೆ ಈ ಸ್ವರೂಪವೇ ಇದ್ದರೂ, ವ್ಯಾಕರಣ ನಿಯಮಗಳು ಸಡಿಲವಾಗುತ್ತ ಬಂದಿದ್ದವು. ಉಚ್ಚಾರಣೆಯಲ್ಲೇ ಸ್ಫುಟವಾದ ಭೇದಗಳು ಬಂದು 'ತತ್ಸಮ' ಸ್ಥಾನದಲ್ಲಿ 'ತದ್ಭವ'ಗಳು ಪ್ರಾಕೃತದಲ್ಲಿ ಬಂದಿದ್ದವು. ಉದಾಹರಣೆಗೆ— ಧರ್ಮ—ಧಮ್ಮ; ಶ್ಲಕ್ಷ್ಣ—ಸಣ್ಣ; ಯೋಗಿ—ಜೋಗಿ. ಆದರೆ ಆಧುನಿಕ ಭಾಷಾ ಸ್ವರೂಪದ ಸಂಶ್ಲೇಷಣಾತ್ಮಕತೆಯನ್ನು ಕಳೆದುಕೊಂಡು ವಿಶ್ಲೇಷಣಾತ್ಮಕವಾಗಿದೆ. ಅನೇಕ ಹೊಸ ಶಬ್ದಗಳೂ ಸೇರಿಕೊಂಡಿವೆ. ಇವೇ ಅಂಶಗಳು ವೈದಿಕ ಸಂಸ್ಕೃತ ಹಾಗೂ ಲೌಕಿಕ ಸಂಸ್ಕೃತಭಾಷೆಗಳನ್ನು ನೋಡಿದಾಗಲೂ ಎದ್ದು ಕಾಣುತ್ತವೆ. ವೈದಿಕ ಸಂಸ್ಕೃತದಲ್ಲಿ ಪ್ರಾತಿಪದಿಕಗಳಿಗೂ, ಧಾತುಗಳಿಗೂ ಅನೇಕ ಬಗೆಯ ರೂಪಗಳು ಕಾಣುತ್ತವೆ. ಲೌಕಿಕ ಸಂಸ್ಕೃತದಲ್ಲಿ ಇವು ಕಾಣಸಿಗುವುದಿಲ್ಲ.

| ವೈದಿಕ ಭಾಷೆ | ಲೌಕಿಕ ಭಾಷೆ |
| --- | --- |
| ದೇವಾಸಃ | ದೇವಾಃ |
| ಪೂರ್ವೇಭಿಃ | ಪೂರ್ವೈಃ |
| ಅಗ್ನಾ | ಅಗ್ನೌ |
| ದೇವೇಭಿಃ | ದೇವೈಃ |
| ಇಮಸಿ | ಇಮಃ |
| ಸ್ಮಸಿ | ಸ್ಮಃ |
| ಯಾತನ | ಯಾತ |
| ಶೃಧಿ, ಶೃಣುಧಿ, ಶೃಣುಹಿ | ಶೃಣು |
| ಸ್ನಾತ್ವೀ | ಸ್ನಾತ್ವಾ |
| ಜೀವಸೇ | ಜೀವಿತುಮ್ |
| ಕರ್ತವೈ | ಕರ್ತುಮ್ |



ಹಾಗೆಯೇ, 'ದರ್ಶತ್' (=ದರ್ಶನೀಯ), 'ರಪಸ್' (=ಗಾಯ), 'ಅಮೂರ' (=ಜಾಣ), 'ಋದೂದರ' (=ದಯಾಲು), 'ಅಕ್ತು' (=ರಾತ್ರಿ)—ಇವೇ ಮುಂತಾದ ವೈದಿಕ ಶಬ್ದಗಳೇ ಲೌಕಿಕ ಸಂಸ್ಕೃತದಲ್ಲಿ ಅದೃಶ್ಯವಾಗಿಬಿಡುತ್ತವೆ. ಕೆಲವು ಶಬ್ದಗಳಿಗೆ ಬೇರೆ ಅರ್ಥಗಳೇ ಗೋಚರಿಸುತ್ತವೆ. 'ವಧ' (ವೇದದಲ್ಲಿ ಆಯುಧವೆಂದರ್ಥ ; ಲೌಕಿಕ ಭಾಷೆಯಲ್ಲಿ ಕೊಲೆಯೆಂದರ್ಥ).

ಹೀಗೆ ಭಾಷೆಯಲ್ಲಿ ಪರಿವರ್ತನೆಯಾಗಲು ಶಾರೀರಿಕ, ಮಾನಸಿಕ, ಭೌತಿಕ, ಭೌಗೋಲಿಕ, ಸಾಂಸ್ಕೃತಿಕ, ಸಾಮಾಜಿಕ ಇತ್ಯಾದಿ ಹಲವಾರು ಕಾರಣಗಳಿರುತ್ತವೆ. ಅವನ್ನೆಲ್ಲ ಸ್ವಾಭಾವಿಕ ಹಾಗು ಬಾಹ್ಯವೆಂಬ ಎರಡು ಜಾತಿಗಳಲ್ಲಿ ತರಬಹುದು.

## ಸ್ವಾಭಾವಿಕ ಅಥವಾ ಆಂತರಿಕ ಕಾರಣಗಳು

(1) ಪ್ರಯೋಗಾಧಿಕ್ಯ — ಶತಶತಮಾನಗಳ ಕಾಲ ಒಂದು ಶಬ್ದ ವಿಶೇಷವಾಗಿ ವ್ಯವಹೃತವಾಗುವಾಗ ಗುರುತು ಸಿಗದಷ್ಟು ಪರಿವರ್ತನೆ ಅದರ ಉಚ್ಚಾರಣೆಯಲ್ಲಿ ಆಗಬಹುದು. ಉದಾ. :—ಸಂಸ್ಕೃತ— 'ಉಪಾಧ್ಯಾಯ', ಹಿಂದೀ—'ಓಝಾ', ಕನ್ನಡ —'ಓಜ'.

(2) ಬಲಾಘಾತ — ಯಾವ ಧ್ವನಿ ಅಥವಾ ಅರ್ಥದ ಮೇಲೆ ಹೆಚ್ಚಿನ ಒತ್ತು ಬೀಳುವುದೋ ಅದು ಮಿಕ್ಕವನ್ನು ಗೌಣವಾಗಿಸುತ್ತದೆ. ಉದಾ. :— ವೈದಿಕ ಸಂಸ್ಕೃತದಲ್ಲಿ 'ಅರಿ' ಎಂದರೆ ಈಶ್ವರ, ಧಾರ್ಮಿಕ, ಶತ್ರು ಮತ್ತು ನಿವಾಸಸ್ಥಾನಗಳೆಂಬ ನಾಲ್ಕು ಅರ್ಥಗಳಿದ್ದವು ; ಮುಂದೆ ಸಂಸ್ಕೃತದಲ್ಲಿ ಶತ್ರುವೆಂಬ ಒಂದೇ ಅರ್ಥ ಉಳಿಯಿತು ; ಮಿಕ್ಕವು ನಷ್ಟವಾದವು.

(3) ಪ್ರಯತ್ನಲಾಘವ — ಪರಿಶ್ರಮವನ್ನು ತಪ್ಪಿಸುವ ಯತ್ನ ಮಾನವನ ಸಹಜಗುಣ. ಇದರಿಂದಾಗಿ ವರ್ಣಲೋಪ, ವರ್ಣಾಗಮ, ವರ್ಣವಿಪರ್ಯಾಯ ಮುಂತಾದವು ಪದಗಳ ಉಚ್ಚಾರಣೆಯಲ್ಲಿ ಉಂಟಾಗುತ್ತವೆ. ಮುಂದಿನ ಹೆಸರುಗಳಲ್ಲಿ ಇದನ್ನು ನೋಡಬಹುದು :— ಪಾರ್ವತಿ — ಪಾತು ; ಬಸವಯ್ಯ—ಬಸ್ಯ ; ಸುಶೀಲೇಂದ್ರ— ಸುಶ್ಯ.

(4) ವೈಯಕ್ತಿಕ ವಿಭಿನ್ನತೆ — ಉಚ್ಚಾರಣಾಂಗಗಳಲ್ಲಿ ಪ್ರತಿವ್ಯಕ್ತಿಗೂ ವೈಶಿಷ್ಟ್ಯವಿರುವ ಕಾರಣ ಮತ್ತು ಅವು ಪರಿವರ್ತನಶೀಲವಿರುವ ಕಾರಣ ಭಾಷೆಯೂ ಪರಿವರ್ತನೆ ಹೊಂದುತ್ತಲೇ ಇರುತ್ತದೆ. ಶ-ಷ-ಸ ಗಳ ಉಚ್ಚಾರಣೆಯ ವ್ಯತ್ಯಯ, ಋ—ರಿ ಇತ್ಯಾದಿ ವ್ಯತ್ಯಯಗಳಿಗೆಲ್ಲ ಇದೇ ಮೂಲಕಾರಣ.

(5) ರಾಷ್ಟ್ರೀಯ ಮನೋಧರ್ಮಗಳಲ್ಲಿ ಭಿನ್ನತೆ — ಭಿನ್ನ ಜನವರ್ಗಗಳ ಭಿನ್ನ ಮನೋಧರ್ಮಗಳೂ ಭಾಷಾಪರಿವರ್ತನೆಗೆ ಕಾರಣವೆಂದು ಗ್ರಿಮ್ ಮೊದಲಾದ ಕೆಲವರ ಮತ.

(6) ಅನುಕರಣೆಯಲ್ಲಿ ನ್ಯೂನತೆ — ಅವಯವಗಳ ಪಾಟವಭೇದ, ಸಂಸ್ಕಾರಭೇದ, ಸಾದೃಶ್ಯಮೂಲ ಭ್ರಾಂತಿ ಇತ್ಯಾದಿಗಳಿಂದ ಉಚ್ಚಾರಣೆಯ ಅನುಕೃತಿಯಲ್ಲಿ ಭೇದವೊದಗುತ್ತದೆ.

ಇಂಗ್ಲಿಷಿನ 'ಟೈಮ್' ಹಿಂದಿಯಲ್ಲಿ 'ಟೇಮ್' ಎಂದೂ, 'ಸ್ಕೂಲ್' ಎಂಬುದು 'ಇಸ್ಕೂಲ್' ಎಂದೂ ಆಗುವುದಕ್ಕೆ ಇದೇ ಕಾರಣ.

ಬಾಹ್ಯಕಾರಣಗಳು

ಭಾಷಾವಿಕಾಸಕ್ಕೆ ಬಾಹ್ಯಕಾರಣಗಳೂ ಉಂಟು :

(1) ಭೌಗೋಲಿಕ ವಿಭಿನ್ನತೆ :— ಭಾಷೆಯ ಮೇಲೂ ಭೌಗೋಲಿಕ ಪ್ರಭಾವವುಂಟು. ಜನರ ನಡೆ, ವೇಷಾದಿಗಳ ಮೇಲಿರುವಂತೆಯೇ ಮಲೆನಾಡಿನವರ ಮಾತು ಮೈದಾನದವರ ಮಾತಿಗಿಂತ ಬೇರೆಯಾಗಲು ಇದೇ ಕಾರಣ. ಸಮೃದ್ಧದೇಶದ ನುಡಿ ಸಂಸ್ಕೃತವಾಗಂತ್ತದೆ. ಜೀವಿಕೆ ದುಸ್ತರವಾದ ದೇಶದ ನುಡಿಯು ಅಪ್ರಬುದ್ಧವಾಗಿ ಉಳಿದಿರುತ್ತದೆ.

(2) ಅನ್ಯಜನರ ಸಂಪರ್ಕ :— ದ್ರಾವಿಡಭಾಷಾಸಂಪರ್ಕದಿಂದ ಸಂಸ್ಕೃತದಲ್ಲಿ 'ನೀರ', 'ಮೀನ' ಮುಂತಾದ ಶಬ್ದಗಳು ಬಂದಿವೆ. ಶಬ್ದಸಂಪತ್ತು ಹೆಚ್ಚಿದೆ.

(3) ರಾಜಕೀಯ ಪರಿಸ್ಥಿತಿ :— ಹಿಂದೂರಾಜರ ಕಾಲದಲ್ಲಿ ಸಂಸ್ಕೃತ ಉನ್ನತಿ ಪಡೆದಂತೆ ಬೌದ್ಧರಾಜರ ಕಾಲದಲ್ಲಿ ಪಾಳಿ, ಆಭೀರರಾಜರ ಕಾಲದಲ್ಲಿ ಅಪಭ್ರಂಶ ಪ್ರಖ್ಯಾತಿಗೆ ಬಂದವು.

(4) ಸಾಂಸ್ಕೃತಿಕ ಮತ್ತು ಧಾರ್ಮಿಕ ಪ್ರಭಾವ :— ಧರ್ಮಗ್ರಂಥಗಳ ಭಾಷೆ ಪವಿತ್ರವೆಂಬ ಭಾವನೆಯಿರುವದರಿಂದ ಧರ್ಮಭಾವನೆ ಒಂದು ಭಾಷೆಯ ವಿಕಾಸಕ್ಕೆ ಕಾರಣವಾಗುತ್ತದೆ. ವೇದಗಳಿಂದ ವೈದಿಕ ಸಂಸ್ಕೃತಕ್ಕೆ ಮಹತ್ತ್ವ ಬಂದಿದೆ.

(5) ಸಾಮಾಜಿಕ ವ್ಯವಸ್ಥೆ :— ಬೇರೆ ಬೇರೆ ಸಮಾಜಗಳು ಬೇರೆ ಬೇರೆ ಭಾಷೆಗಳ ಪ್ರಯೋಗಕ್ಕೆ ಪ್ರೋತ್ಸಾಹವೀಯುವುದುಂಟು. ಹಿಂದೂ ಸದ್ಗೃಹಸ್ಥರ ಭಾಷೆಗೂ, ಬೇರೆ ನಿಮ್ನವರ್ಗದವರ ಭಾಷೆಗಳಿಗೂ ತುಂಬಾ ಅಂತರವಿರುತ್ತದೆ.

(6) ಕಾಲಭೇದ :- ಕಾಲಭೇದದಿಂದ ಭಾಷೆಗಳ ಮೂಲಸ್ವರೂಪವೇ ಒದೆಯಿಸುತ್ತದೆ. ಸಂಶ್ಲಿಷ್ಟಭಾಷೆಯಾದ ಸಂಸ್ಕೃತ ಕಡೆಯ ಹೊತ್ತಿಗೆ ಅಸಂಶ್ಲಿಷ್ಟ ಹಿಂದಿಯ ಸ್ವರೂಪವನ್ನು ತಾಳಿದೆ.

(7) ಸ್ಥಾನಭೇದ :— ಪ್ರಾಂತಭೇದಗಳಿಂದಲೂ ಭಾಷೆಯ ಉಚ್ಚಾರಣೆಯಲ್ಲಿ ಶಬ್ದಾವಲಿಯಲ್ಲಿ ಭೇದಗಳು ಬರುವುದುಂಟು. ಪಾಣಿನಿಯೇ 'ಉದೀಚ್ಯ', 'ಪ್ರಾಚ್ಯ' ಮುಂತಾದ ಭಾಷಾಭೇದಗಳನ್ನು ಉಲ್ಲೇಖಿಸಿದ್ದಾನೆ.

(8) ಶಿಕ್ಷಣ ಮತ್ತು ಸಂಸ್ಕೃತಿ :— ಸಭ್ಯ-ಅಸಭ್ಯರ ಮಾತಿನಲ್ಲಿ ಅಂತರವಿದ್ದೇ ಇರುವುದಕ್ಕೆ ಶಿಕ್ಷಣ ಮತ್ತು ಸಂಸ್ಕೃತಿಯ ವ್ಯತ್ಯಾಸವೇ ಕಾರಣ.

(9) ದ್ವ್ಯರ್ಥಕ ಶಬ್ದಪ್ರಯೋಗ :— ಪಾದ=ಕಾಲು ಅಥವಾ $\frac{1}{4}$ ಭಾಗ.

(10) ಸಾದೃಶ್ಯ ಅಥವಾ ಮಿಥ್ಯಾಸಾದೃಶ್ಯ :— ನಿಯಮವಿರುದ್ಧವಾಗಿಯೂ ಒಂದು ಶಬ್ದರೂಪ ಬಳಕೆಗೆ ಬರುವುದಕ್ಕೆ ಸಾದೃಶ್ಯ (Analogy) ಪ್ರಬಲ ಕಾರಣವೆನಿಸುತ್ತದೆ.



'ದ್ವಾದಶೀ' ಎಂಬುದರ ಸಾದೃಶ್ಯದ ಮೇಲಿಂದ 'ಏಕಾದಶೀ' ಎಂಬ ರೂಪ ಬರುತ್ತದೆ. 'ಏಕ' ಶಬ್ದ ದೀರ್ಘವಾಗಲು ಮತ್ತಾವ ಪ್ರಬಲಕಾರಣವೂ ಇಲ್ಲ.

ವರ್ಣಪರಿವರ್ತನೆ

ಮೇಲಿನ ಕಾರಣಗಳ ಪೈಕಿ ಪ್ರಯತ್ನಲಾಘವದಿಂದಾಗಿ ಬರುವ ವರ್ಣಪರಿವರ್ತನೆಗಳಲ್ಲಿ ಕೆಲವನ್ನು ಹೀಗೆ ನಿರ್ದೇಶಿಸಬಹುದು :—

1. ಸವರ್ಣೀಕರಣ (Assimilation) :—ಮುಂದಿನ ಅಥವಾ ಹಿಂದಿನ ಅಕ್ಷರಕ್ಕೆ ಸವರ್ಣವಾಗುವಂತೆ ವರ್ಣವ್ಯತ್ಯಯವೇ ಇದು. ಉದಾ. :—

| | ಸಂಸ್ಕೃತ | ಪ್ರಾಕೃತ |
|---|---|---|
| ಪೂರ್ವಸವರ್ಣ | ಚಕ್ರ | ಚಕ್ಕ |
| | ವಜ್ರ | ವಜ್ಜ |
| | ಅಗ್ನಿ | ಅಗ್ಗಿ |
| ಪರಸವರ್ಣ | ಸಪ್ತ | ಸತ್ತ |
| | ಖಡ್ಗ | ಖಗ್ಗ |
| | ವಲ್ಕಲ | ವಕ್ಕಲ |

2. ವಿಷಮೀಕರಣ (Dissimilation) :—ವರ್ಣಗಳು ಅಸಮವಾಗುವಂತೆ ಉಚ್ಚರಿಸುವುದು. ಇದು ಸವರ್ಣೀಕರಣಕ್ಕೆ ಪ್ರತಿದ್ವಂದ್ವಿ. ಉದಾ.:—

| ಸಂಸ್ಕೃತ | ಪ್ರಾಕೃತ |
|---|---|
| ಪುರುಷ | ಪುರಿಸ |
| ಮುಕುಟ | ಮಉಡ |
| ಗುರುಕ | ಗರುಅ |

ಇಲ್ಲಿ 'ಉ–ಉ' ಎಂಬ ಎರಡು ಸ್ವರಗಳ ಸಮತೆಯನ್ನು ನಿವಾರಿಸಲು 'ಉ–ಇ' ಅಥವಾ 'ಅ–ಉ' ಎಂದಾಗಿರುವುದನ್ನು ಕಾಣುತ್ತೇವೆ.

3. ಪ್ರಾಗುಪಧಾನ (Prothesis) :—ಉಚ್ಚಾರಣ ಸೌಕರ್ಯಕ್ಕಾಗಿ ಸಂಯುಕ್ತಾಕ್ಷರಗಳ ಪೂರ್ವದಲ್ಲಿ ಒಂದು ಸ್ವರವನ್ನು ಸೇರಿಸಿಕೊಳ್ಳುವುದು. ಉದಾ. :—

'ಸ್ನಾನ' —'ಅಸ್ನಾನ' (ಹಿಂದಿ); 'ಸ್ತ್ರೀ' —'ಇಸ್ತ್ರೀ' (ಹಿಂದಿ) : 'ಇತ್ಥೀ' (ಪ್ರಾಕೃತ).

4. ಸ್ವರಭಕ್ತಿ (Anaptyxis) :— ಸಂಯುಕ್ತಾಕ್ಷರಗಳ ಉಚ್ಚಾರದಲ್ಲಿ ಅಸೌಕರ್ಯವನ್ನು ನಿವಾರಿಸಲೆಂದು ಒಂದು ಸ್ವರಾಂಶವನ್ನು ನಡುವೆ ಸೇರಿಸುವುದು. ಉದಾ.:—

'ಇಂದ್ರ' —'ಇಂದರ' (ವೈದಿಕಪ್ರಯೋಗ) ; 'ಪೃಥ್ವೀ' — 'ಪೃಥಿವೀ' ;
'ಸ್ವರ್ಣ' — 'ಸುವರ್ಣ' ; ಮತ್ತು

| ಸಂಸ್ಕೃತ | ಪ್ರಾಕೃತ |
|---|---|
| ಶ್ರೀ | ಸಿರೀ |
| ಸ್ನೇಹ | ಸಣೇಹ |
| ಕ್ಲಿಷ್ಟ | ಕಿಲಿಟ್ಟ |
| ಪ್ರಸಾದ | ಪರಸಾದ (ಹಿಂದೀ) |

ಕೆಲವೊಮ್ಮೆ ಶಬ್ದಗಳ ನಡುವೆ ವ್ಯಂಜನಗಳ ಆಗಮವನ್ನೂ ಕಾಣುತ್ತೇವೆ. ಉದಾ. :—

| ವೈದಿಕ ಭಾಷೆ | ಸಂಸ್ಕೃತ |
|---|---|
| ಸೂನರ | ಸುನ್ದರ |
| ಸಂಸ್ಕೃತ | ಹಿಂದೀ |
| ವಾನರ | ಬನ್ದರ |

5. ಸ್ವರಲೋಪ (Syncope) :— ಸ್ವರಭಕ್ತಿಗೆ ಇದು ವಿರುದ್ಧ ; ಎರಡು ವ್ಯಂಜನಗಳ ನಡುವಣ ಸ್ವರ ಲೋಪವಾಗುವುದು. ಉದಾ. :—

ರಾಜನ್ + ಆ = ರಾಜ್ಞಾ (ಅಕಾರ ಲೋಪವಾಗಿದೆ)

| ಸಂಸ್ಕೃತ | | ಪ್ರಾಕೃತ |
|---|---|---|
| ಅರಣ್ಯ | — | ರಣ್ಣ |
| ಅಪಿ | — | ಪಿ |
| ಇತಿ | — | ತಿ |

ಸ್ವರಲೋಪದಂತೆ ವ್ಯಂಜನಲೋಪವೂ ಕಾಣಸಿಗುತ್ತದೆ :

| ಸಂಸ್ಕೃತ | | ಪ್ರಾಕೃತ |
|---|---|---|
| ಲೋಕ | — | ಲೋಅ |
| ನಗರ | — | ಣಅರ |
| ಪ್ರಿಯ | — | ಪಿಅ |



6. ಅಕ್ಷರಲೋಪ (Haplology) :— ಸದೃಶಾಕ್ಷರಗಳು ಕೂಡಿಬರುವಾಗ ಉಚ್ಚಾರ ಸೌಲಭ್ಯಕ್ಕಾಗಿ ಒಂದನ್ನು ಲೋಪಮಾಡುವುದು.

ಉದಾ. : 'ಹಾ' ಧಾತುವಿನ ಲೋಟ್ ಮಧ್ಯಮಪುರುಷ ಏಕವಚನದಲ್ಲಿ 'ಜಹೀಹಿ' ಎಂಬುದರ 'ಹೀ' ಲುಪ್ತವಾಗಿ 'ಜಹಿ' ಎಂಬ ರೂಪವೂ ಸಿದ್ಧವಾಗುವುದು. ತ್ರಿ + ಋಚಃ ಎಂಬಲ್ಲಿ 'ರಿ' ಲುಪ್ತವಾಗಿ 'ತೃಚಃ' ಎಂದಾಗುವುದು. ಪೃಷೋದರಾದಿಗಳೂ ಶಕಂಧ್ವಾದಿಗಳೂ ಇದರ ಉದಾಹರಣೆಗಳೇ.

7. ವರ್ಣವ್ಯತ್ಯಯ (Metathesis):— ಎರಡು ವರ್ಣಗಳಲ್ಲಿ ಪೂರ್ವಾಪರ ಸ್ಥಾನದ ವ್ಯತ್ಯಯ ಬರುವುದು. ಉದಾ. : 'ನಾರಿಕೇಲ'—'ನಾಲಿಕೇರ' 'ವಾರಾಣಸೀ' —'ಬನಾರಸ್', 'ಮರಕತ—ಮರತಕ,'.

## ಭಾಷೆಯ ಉತ್ಪತ್ತಿಯನ್ನು ಕುರಿತ ವಿಭಿನ್ನಮತಗಳು

1. ದೈವೀ ಉತ್ಪತ್ತಿವಾದ (Divine origin theory) :—

ಇದನ್ನು ಸಂಸ್ಕೃತದಲ್ಲಿಯೂ ನೋಡಬಹುದು. 'ದೇವೀಂ ವಾಚಮಜನಯನ್ತ ದೇವಾಃ,' 'ಸಂಸ್ಕೃತಂ ನಾಮ ದೈವೀ ವಾಗನ್ವಾಖ್ಯಾತಾ ಮಹರ್ಷಿಭಿಃ' ಮುಂತಾದ ಸೂಕ್ತಿಗಳಲ್ಲಿ ಭಾಷೆಯನ್ನು ಭಗವಂತನೇ ಸೃಷ್ಟಿಸಿದನೆಂಬ ವಾದ ಕಾಣಸಿಗುತ್ತದೆ. ಬೈಬಲ್ಲಿನಲ್ಲಿಯೂ ಮೊದಲಿಗೆ ವಿಶ್ವದಲ್ಲೆಲ್ಲ ಭಗವತ್ಕೃತವಾದ ಒಂದೇ ಭಾಷೆಯಿತ್ತೆಂಬ ಉಲ್ಲೇಖವಿದೆ. ಆದರೆ ಧಾರ್ಮಿಕಶ್ರದ್ಧೆಯೊಂದೇ ಈ ವಾದಕ್ಕೆ ಪೋಷಕ ; ಇದು ಅನ್ವೇಷಕಬುದ್ಧಿಗೆ ಸರಿಗಾಣುವುದಿಲ್ಲ. ಈಶ್ವರಕೃತವಾದ ಭಾಷೆ ಸ್ಥಿರವಾಗಿ ಒಂದೇ ರೀತಿಯಾಗಿ ಉಳಿಯದೆ ಬದಲಾಯಿಸುತ್ತಿರುವುದೇಕೆಂಬ ಸಮಸ್ಯೆಗೆ ಈ ವಾದದಲ್ಲಿ ಉತ್ತರವಿಲ್ಲ. ಶಿಕ್ಷಿತ, ಅಶಿಕ್ಷಿತವರ್ಗದವರ ಭಾಷೆಗಳಲ್ಲಿ ವ್ಯತ್ಯಾಸವೇಕೆಂದು ಕೇಳಿದರೆ ಪರಿಹಾರವಿಲ್ಲ. ನ್ಯಾಯದರ್ಶನದಲ್ಲಿ ಕೂಡ 'ಸಾಮಯಿಕಃ ಶಬ್ದಾರ್ಥಸಂಪ್ರತ್ಯಯಃ, ನ ಸ್ವಾಭಾವಿಕಃ' ಎನ್ನಲಾಗುತ್ತದೆ.

2. ಸಾಂಕೇತಿಕ ಉತ್ಪತ್ತಿವಾದ (Coventional origin theory) :—

ಆದಿಮನುಷ್ಯರ ಸಂಕೇತದಿಂದ ಭಾಷೆಯ ಉತ್ಪತ್ತಿಯಾಯಿತೆಂಬ ವಾದವೂ ಕೂಡ ನಿರ್ದುಷ್ಟವಾಗಿಲ್ಲ. ಆದಿಮನುಷ್ಯರ ಸಭೆ ಸೇರುವ ಮುನ್ನವೇ ಭಾಷೆ ಅವರಿಗೆ ಗೊತ್ತಿದ್ದರೆ ಸಭೆಯ ಅಗತ್ಯವಿಲ್ಲ ; ಗೊತ್ತಿಲ್ಲವಾದರೆ ಅವರು ಸಭೆಯಲ್ಲಿ ವ್ಯವಹರಿಸಿದ್ದಾದರೂ ಹೇಗೆ ? ಇತ್ಯಾದಿ ತರ್ಕ ವಿಕಲ್ಪಗಳಿಗೆ ಎಡೆಯಿದೆ.

3. ಧಾತುಜನ್ಯವೇ ಭಾಷೆಯೆಂಬ ವಾದ (Root theory) :—

ಈ ಸಿದ್ಧಾಂತದ ಆಧುನಿಕ ಪುರಸ್ಕರ್ತನೆಂದರೆ ಮ್ಯಾಕ್ಸ್ ಮ್ಯೂಲರ್. ಆದಿಮನುಷ್ಯನ ವಿಶಿಷ್ಟ ಶಕ್ತಿಯಿಂದ ಮೊದಲು ನೂರಾರು ಧಾತುಗಳಷ್ಟೇ ಸೃಷ್ಟವಾದವು. ಇವುಗಳಿಂದ ಕಾಲಾಂತರದಲ್ಲಿ

ಮಿಕ್ಕ ಶಬ್ದಸಂಪತ್ತು ಬೆಳೆಯಿತು ಎಂದು ಈ ವಾದ ಹೇಳುತ್ತದೆ. ಆದ್ದರಿಂದಲೇ ವಿಶ್ವದ ನಾನಾ ಭಾಷೆಗಳಲ್ಲಿ ಸಾಮ್ಯವಿರುವುದು ಉಪಪನ್ನವೆಂದು ಇವರ ಹೇಳಿಕೆ.

ಇದಾದಾರೂ ಮೂಲಭಾಷೆಯ ಉತ್ಪತ್ತಿಯ ರಹಸ್ಯವನ್ನು ಭೇದಿಸಿದೆಯೆನ್ನುವಂತಿಲ್ಲ. ಏಕೆಂದರೆ ಜಗತ್ತಿನ ಎಲ್ಲ ಭಾಷೆಗಳಿಗೂ ಈ ಪರಿಮಿತ ಮೂಲಧಾತುಗಳಿಂದ ಉತ್ಪತ್ತಿಯನ್ನು ಸಾಧಿಸುವುದು ಆಗದ ಮಾತು. ಭಾಷೆಯ ವಿಕಾಸಕ್ಕೆ ವಾಕ್ಯವು ಆಧಾರವೇ ಹೊರತು, ಕೇವಲ ಧಾತುವಲ್ಲ. ಧಾತುವಿಲ್ಲದ ಭಾಷೆಗಳೂ ಉಂಟು. ಉದಾಹರಣೆ—ಚೀಣೀ ಭಾಷೆ. ಸಂಸ್ಕೃತದಲ್ಲಿ ಸುಮಾರು 2.000 ಧಾತುಗಳಿವೆ; ಅವುಗಳ ಸಂಖ್ಯೆ ಕೇವಲ 400–500 ಎನ್ನುವುದೆಂತು ? ಮ್ಯಾಕ್ಸ್ ಮೂಲೆರನೇ ಈ ವಾದವನ್ನು ಕಡೆಕಡೆಗೆ ಬಿಟ್ಟುಕೊಟ್ಟನು.

## 4. ಅನುಕರಣವಾದ (Bow–wow Theory):—

ಪಶುಪಕ್ಷಿಗಳ ಅನುಕರಣ ಮಾಡುತ್ತ ಮೂಲಮಾನವನು ಭಾಷಾಶಬ್ದಗಳ ನಿರ್ಮಾಣ ಮಾಡಿರಬೇಕೆಂಬುದು ಈ ವಾದದ ತಿರುಳು. ಕಾಗೆ 'ಕಾ—ಕಾ' ಎನ್ನುವುದನ್ನು ಅನುಕರಿಸಿ 'ಕಾಕ' ಎಂದು ಅದಕ್ಕೆ ಹೆಸರಿಡುವುದು ; ನಾಯಿ ; 'ಬೌ–ಬೌ' ಎನ್ನುವುದನ್ನು ಅನುಕರಿಸಿ ಅದನ್ನೆ 'ಬ್ವೌವೌ' ಎನ್ನುವುದು. ವಿಟ್ನಿ ಮುಂತಾದವರು ಅನುಕರಣಶಬ್ದಗಳ ವಿವರಣೆಗೆ ಮಾತ್ರ ಈ ವಾದವನ್ನು ಆಶ್ರಯಿಸುತ್ತಾರೆ. ಆದರೆ ಯಾವದೇ ಭಾಷೆಯ ಶಬ್ದಸಂಪತ್ತಿನಲ್ಲೂ ಅನುಕರಣಶಬ್ದಗಳ ಸಂಖ್ಯೆ ಬಹಳ ಕಡಿಮೆಯದಾಗಿರುತ್ತದೆ. ಈ ವಾದವು ಭಾಷೋತ್ಪತ್ತಿಯನ್ನೆಲ್ಲ ಪೂರ್ಣವಾಗಿ ವಿವರಿಸಲಾರದು.

## 5. ಮನೋಭಾವಾಭಿವ್ಯಕ್ತಿವಾದ (Pooh–pooh Theory) :—

ಇದಾದರೂ ಅನುಕರಣವಾದದಂತೆಯೇ ಇದೆ. ಮನುಷ್ಯನು ಸುಖ–ದುಃಖ, ಕೋಪ–ತಾಪಗಳನ್ನು ಅಭಿವ್ಯಕ್ತ ಮಾಡುವಾಗ ಅಂಗಾಭಿನಯದಂತೆಯೇ ಶಬ್ದಾಭಿನಯವನ್ನೂ ಮಾಡುತ್ತಾನೆ. 'ಆಹಾ, ಹಾ, ಹಾಯ್' ಮುಂತಾದ ಉದ್ಗಾರವಾಚಕಗಳೇ ಉದಾಹರಣೆ. ಈ ವಾದವಾದರೂ ಅನುಕರಣವಾದದಂತೆ ಒಂದು ಅಂಶಿಕ ಸತ್ಯವನ್ನು ಒಳಗೊಂಡಿದೆಯೇ ಹೊರತು ಪೂರ್ಣ ಸಿದ್ಧಾಂತವೆನಿಸಲಾರದು. ಇಂತಹ ಶಬ್ದಗಳ ಸಂಖ್ಯೆಯೂ ಭಾಷೆಗಳಲ್ಲಿ ಬಹು ಸೀಮಿತವೇ ಆಗಿರುತ್ತದೆ.

## 6. ಶ್ರಮಪರಿಹಾರವಾದ (Yo–he––ho Theory) :—

ಆಯಾಸದ ಕೆಲಸದ ನಂತರ ಮನುಷ್ಯನು ಶ್ರಮಪರಿಹಾರಕ್ಕಾಗಿ ನಿಟ್ಟುಸಿರನ್ನು ಬಿಡುತ್ತಾನೆ. ಆಗ ಕೆಲವು ಧ್ವನಿಗಳನ್ನೂ ಉಚ್ಚರಿಸುತ್ತಾನೆ. ಇಂದೂ ದೋಣಿ ನಡೆಸುವ, ಭಾರ ಎತ್ತುವ ಕೂಲಿ ಜನರು ಶ್ರಮಪರಿಹರಿಹಾರಕ್ಕಾಗಿ 'ಯೋ–ಹೀ–ಹೋ' ಒಬೇ. ಲೇಸು' ಮುಂತಾದ ಶಬ್ದಗಳನ್ನು ಸಾಮೂಹಿಕವಾಗಿ ಮಾಡುತ್ತಾರೆ. ಹಾಗೆಯೇ ಆದಿಮಾನವನು ಬೇರೆ ಬೇರೆ





ಕಾರ್ಯಗಳಲ್ಲಿ ವ್ಯಾಪೃತನಾದಾಗ ಬೇರೆ ಬೇರೆ ಶಬ್ದಗಳನ್ನು ಉತ್ಪಾದಿಸಿರಬೇಕೆಂದು ಈ ವಾದ ಹೇಳುತ್ತದೆ. ಈ ವಾದವಾದರೂ ಯುಕ್ತಿಸಹವಲ್ಲ ; ಇಂತಹ ಶಬ್ದಗಳ ಸಂಖ್ಯೆಯೂ ಕಡಿಮೆ. ಕೆಲವು ಭಾಷೆಗಳಲ್ಲಿ ಈ ಬಗೆಯ ಶಬ್ದಗಳೇ ಇಲ್ಲ.

## 7. ಅನುರಣನವಾದ (Ding–dong Theory) :—

ಜಡಪದಾರ್ಥಗಳ ತಾಕಲಾಟದಿಂದ ಸದ್ದು ಹೊರಬರುತ್ತದೆ. ಪಾತ್ರೆ ಕೆಳಗೆ ಬಿದ್ದರೆ ಢಣಢಣ ಸದ್ದಾಗುತ್ತದೆ, ನಾಣ್ಯ ಝಣಝಣ ಎನ್ನುತ್ತದೆ. 'ಕಲಕಲ', 'ಕೋಲಾಹಲ' ಮುಂತಾದ ಈ ಶಬ್ದಗಳ ಉತ್ಪತ್ತಿ ಅನುರಣನದಿಂದಾಗಿದೆಯೆಂಬುದೇ ಈ ವಾದ. ಇಂತಹ ಶಬ್ದಗಳ ಸಂಖ್ಯೆಯೂ ತುಂಬಾ ಕಡಿಮೆಯಾಗಿರುವುದರಿಂದ ಈ ವಾದವೂ ಪೂರ್ಣ ಸತ್ಯವನ್ನು ಪ್ರತಿನಿಧಿಸದು.

## 8. ಪ್ರತೀಕವಾದ (Symbolism Theory) :—

ಈ ವಾದದಂತೆ ಧ್ವನಿಗಳ ಪ್ರತೀಕವಾಗಿ ಶಬ್ದಗಳು ಹುಟ್ಟುತ್ತವೆ. ಕುಡಿಯುವಾಗ ತುಟಿ ತೆರದೊಡನೆ ಪ್ರಕಾರಶ್ರುತಿ ಕೇಳಿಸುತ್ತದೆ. ಅದರಿಂದ 'ಪಾ' ಧಾತು ಹುಟ್ಟುತ್ತದೆ. ಮಕ್ಕಳು 'ಮಾಮಾ', 'ಪಾಪಾ' ಎನ್ನುವುದು ಹೀಗೆಯೇ. ಈ ವಾದ ಕೂಡ ಭಾಷೆಯ ಕೆಲವೊಂದು ಶಬ್ದಗಳ ಉತ್ಪತ್ತಿಯನ್ನು ಸಮರ್ಪಕವಾಗಿ ವಿವರಿಸುತ್ತದೆಯೇ ಹೊರತು ಎಲ್ಲಾ ಶಬ್ದಗಳ ಉತ್ಪತ್ತಿಯನ್ನು ವಿವರಿಸಲಾರದು.

## 9. ಸಮನ್ವಿತವಿಕಾಸವಾದ (Evolution Theory) :—

ಮೇಲೆ ಹೇಳಿದ ವಾದಗಳು ಹೇಳುವಂತೆ ಕೆಲವೊಂದು ಶಬ್ದಗಳ ಸೃಷ್ಟಿಯಾದ ಮೇಲೆ ಇತರ ನೂತನಶಬ್ದಗಳು ಸಾದೃಶ್ಯೋಪಚಾರದಿಂದ ಜನಿಸಿದವೆಂದು ಈ ವಾದ ಹೇಳುತ್ತದೆ. ಭಾಷೆಯಲ್ಲಿ ಶಬ್ದಸೃಷ್ಟಿ ಎಂದೋ ಒಮ್ಮೆ ಆಗಿ ಮುಗಿದ ಕ್ರಿಯೆಯಲ್ಲ ; ನಿತ್ಯನೂತನವಾಗಿ ನಡೆಯುತ್ತಲೇ ಇರುವ ಕ್ರಿಯೆ ಎಂಬುದು ಸ್ವೀಟನ ಸಿದ್ಧಾಂತ. ಹಿಂದಿಯ ಶಬ್ದಗಳ ಆಧಾರದ ಮೇಲೆ ಹೊಸ ಶಬ್ದಗಳು ಹುಟ್ಟುತ್ತಲೇ ಇರುತ್ತವೆ. ಉದಾಹರಣೆಗೆ ಇಂಗ್ಲಿಷಿನ *understand* ಶಬ್ದವನ್ನು ನೋಡಬಹುದು. ಎಂದೋ ಪ್ರಾಚೀನ ಕಾಲದಲ್ಲಿ ಶಿಷ್ಯನು ಬೋಧಕನಿಗಿಂತ ಕೆಳಗಿನ ಸ್ಥಾನದಲ್ಲಿ ನಿಲ್ಲುವ ರೂಢಿಯಿತ್ತು. ಆಗ ಅದಕ್ಕೆ 'ಕೆಳಗೆ ನಿಲ್ಲು' ಎಂಬರ್ಥವೇ ಇತ್ತು. ಆಮೇಲೆ ತಿಳಿದುಕೊಳ್ಳುವ ಕ್ರಿಯೆಯೆಂದು ಅದಕ್ಕೆ ಅರ್ಥವಿಕಾಸವಾಯಿತು. ಈಗ ಎಲ್ಲ ವಿಜ್ಞಾನಗಳೂ ವಿಕಾಸವಾದವನ್ನೇ ಪುರಸ್ಕರಿಸುವಂತೆ ಭಾಷಾಶಾಸ್ತ್ರವೂ ಅದನ್ನು ಮಾನ್ಯ ಮಾಡುವುದು ಸಹಜವಾಗಿದೆ.

ಆದ್ದರಿಂದ ಭಾಷಾಶಾಸ್ತ್ರಕಾರರು ಐತಿಹಾಸಿಕವಾಗಿ ಮತ್ತು ಅವಸ್ಥಾಭೇದಗ್ರಾಹಿಯಾಗಿರುವಂತೆ ಬಾಲಭಾಷೆ, ಪ್ರಾಚೀನ ಮೂಲನಿವಾಸಿಗಳ ಭಾಷೆ ಹಾಗೂ ಯಾವುದೇ ಭಾಷೆಯ

ಭಿನ್ನಕಾಲೀನ ಐತಿಹಾಸಿಕ ಅವಸ್ಥೆಗಳಲ್ಲಿ ಧ್ವನಿ, ಪದ ಹಾಗೂ ಅರ್ಥಪ್ರಕ್ರಿಯೆಯು ಶಾಸ್ತ್ರೀಯ ವಿವೇಚನೆಗೆ ಹೊರಡುತ್ತಾರೆ. ಇವೆಲ್ಲ ಭಾಷಾಶಾಸ್ತ್ರದ ಅಂಗಗಳೆನಿಸುತ್ತವೆ. ಧ್ವನಿವಿಜ್ಞಾನವನ್ನು phonetics ಎಂದೂ, ಪದವಿಜ್ಞಾನವನ್ನು morphology ಎಂದೂ, ಅರ್ಥವಿಜ್ಞಾನವನ್ನು semantics ಎಂದು ಕರೆಯುತ್ತಾರೆ.

## ಭಾಷೆಗಳ ವರ್ಗೀಕರಣ

ಸಂಸ್ಕೃತ ಭಾಷೆಯು ಉತ್ಪತ್ತಿ ಹೇಗೆ ಆಯಿತೆಂದು ತಿಳಿಯಬೇಕಾದರೆ ತುಲನಾತ್ಮಕ ಭಾಷಾಶಾಸ್ತ್ರದ ರೀತ್ಯಾ ಜಗತ್ತಿನ ಭಾಷಾಕುಟುಂಬಗಳ ವರ್ಗೀಕರಣವನ್ನು ಮೊದಲು ಅರಿಯಬೇಕು.

ಭಾಷೆಗಳನ್ನು ವರ್ಗೀಕರಿಸಲು ಆಧಾರಗಳಾವುವು ? ಮೊದಲುಮೊದಲಿಗೆ ದೇಶವನ್ನೇ ಆಧಾರವಾಗಿ ಹಿಡಿದು ಭಾರತೀಯ, ಐರೋಪ್ಯ, ಅಮೆರಿಕನ್ ಇತ್ಯಾದಿ ವಿಭಾಗವನ್ನು ಸ್ಥೂಲವಾಗಿ ಹೇಳುತ್ತಿದ್ದರು. ಆದರೆ ಇದು ಶಾಸ್ತ್ರೀಯ ಆಧಾರವಲ್ಲ. ಇದರಂತೆ ಧರ್ಮವನ್ನಾಧರಿಸಿ ಮಾಡುವ ವರ್ಗೀಕರಣ –ಹಿಂದೂಭಾಷೆಗಳು, ಮುಸ್ಲಿಮ್‌ಭಾಷೆಗಳು, ಕ್ರಿಶ್ಚಿಯನ್‌ಭಾಷೆಗಳು ಇತ್ಯಾದಿ—ಕೂಡ ತೃಪ್ತಿಕರವಲ್ಲ. ಒಂದೇ ಧರ್ಮದ ಎಲ್ಲ ಅನುಯಾಯಿಗಳೂ ಒಂದೇ ಭಾಷೆಯನ್ನು ಆಡಬೇಕೆಂಬ ನಿಯಮವಿಲ್ಲ. ಒಂದು ಭಾಷೆಯ ರೂಪ ಅಥವಾ ಆಕೃತಿ ಅಥವಾ ರಚನೆಯನ್ನು ಅನುಲಕ್ಷಿಸಿ ವರ್ಗೀಕರಣ ಮಾಡಿದರೆ ಅದು ಹೆಚ್ಚು ಶಾಸ್ತ್ರೀಯವೆನಿಸುತ್ತದೆ. ಇದು ಭಾಷಾಶಾಸ್ತ್ರದಲ್ಲಿ ಕಂಡುಬರುವ ಒಂದು ಬಗೆಯ ವರ್ಗೀಕರಣ. ಭಾಷೆಯ ಉತ್ಪತ್ತಿ–ವಿಕಾಸಾದಿ ಇತಿಹಾಸವನ್ನಾಧರಿಸಿ ಮಾಡುವ ವರ್ಗೀಕರಣ ಇನ್ನೊಂದು ಬಗೆಯದು. ಇವೆರಡೂ ಭಾಷಾಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ.

### 1. ಆಕೃತಿಮೂಲಕ (Morphological) ವರ್ಗೀಕರಣ :—

ಇದಕ್ಕೇ ರೂಪಾತ್ಮಕ, ಪದಾತ್ಮಕ ಅಥವಾ ರಚನಾತ್ಮಕ ವರ್ಗೀಕರಣವೆಂದೂ ಹೆಸರು. ಪ್ರತಿ ವಾಕ್ಯದಲ್ಲೂ ಒಂದು ಅರ್ಥಾಂಶ ಹಾಗೂ ಒಂದು ಪ್ರತ್ಯಯಾಂಶವಿರುತ್ತದೆ. ‘ ರಾಮಃ ಪಠತಿ ’ ಎಂಬಲ್ಲಿ ‘ರಾಮ’ ಮತ್ತು ‘ಪಠ’ಈ ಪ್ರಾತಿಪದಿಕ ಮತ್ತು ಧಾತುಗಳು ಅರ್ಥಜನಕಾಂಶಗಳಾದರೆ ವಿಸರ್ಗ ಮತ್ತು ‘ತಿ’ ಇವುಗಳ ಸಂಬಂಧದ್ಯೋತಕ ಪ್ರತ್ಯಯಗಳಾಗಿವೆ. ಈ ಸಂಬಂಧತತ್ತ್ವಕ್ಕೆ ಸಂಬಂಧಿಸಿದ್ದನ್ನೇ ‘ ಆಕೃತಿತತ್ತ್ವ ’ ವೆನ್ನುವರು. ಯಾವ ಭಾಷೆಗಳ ಆಕೃತಿತತ್ತ್ವ ಸಮಾನವಾಗಿರುವುದೋ ಅವು ಒಂದು ವರ್ಗವೆನ್ನುವುದು ಯೋಗ್ಯ. ಇದನ್ನೇ ವಾಕ್ಯಮೂಲಕ (Syntactic) ವರ್ಗೀಕರಣವೆಂದೂ ಕರೆಯುತ್ತಾರೆ. ಈ ವರ್ಗೀಕರಣದ ಪ್ರಕಾರ ಜಗತ್ತಿನ ಭಾಷೆಗಳನ್ನೆಲ್ಲ ಈ ಗುಂಪುಗಳಲ್ಲಿ ತರಬಹುದು.



(1) ಅಯೋಗಾತ್ಮಕ (Isolating) ಉದಾ. : ಚೀಣೀ

(2) ಯೋಗಾತ್ಮಕ (Agglutinating)




### (1) ಅಯೋಗಾತ್ಮಕ :—

ಈ ಭಾಷೆಗಳಲ್ಲಿ ಪ್ರಕೃತಿ-ಪ್ರತ್ಯಯ ಸಂಯೋಗವಿರುವುದಿಲ್ಲ. ಪ್ರತಿಶಬ್ದವೂ ಸ್ವತಂತ್ರವಾಗಿರುತ್ತದೆ. ಕರ್ತೃಕ್ರಿಯಾದಿ ಸಂಬಂಧವೆಲ್ಲ ಕೇವಲ ಸ್ವರದಿಂದ ಅಭಿವ್ಯಕ್ತವಾಗುತ್ತದೆ. ವಾಕ್ಯದಲ್ಲಿ ಶಬ್ದದ ಸ್ಥಾನಬಲದಿಂದ ಅದು ಕರ್ತೃಪದವೋ ಇಲ್ಲವೇ ಕ್ರಿಯಾಪದವೋ ಎಂದು ನಿರ್ಣೀತವಾಗುತ್ತದೆಯೇ ಹೊರತು ಪ್ರತ್ಯಯಸ್ವರೂಪದಿಂದಲ್ಲ. ಒಂದೇ ವರ್ಣಾನುಪೂರ್ವಿಯ ಶಬ್ದಕ್ಕೆ ಪ್ರಕರಣಾನುಸಾರ ಅನೇಕಾರ್ಥಗಳಿರುತ್ತವೆ. ಇದಕ್ಕೆ ಚೀನೀಭಾಷೆ ಉದಾಹರಣೆ. ಅಲ್ಲಿ ಒಂದೇ ‘ ತೋ ’ ಎಂಬುದಕ್ಕೆ ಸೇರುವುದು, ಇಳಿಯುವುದು, ಬಾವುಟ, ದಾರಿ ಇತ್ಯಾದಿ ನಾನಾರ್ಥಗಳುಂಟು.

### (2) ಯೋಗಾತ್ಮಕ :—

ಈ ಭಾಷೆಗಳಲ್ಲಿ ಪ್ರಕೃತಿ-ಪ್ರತ್ಯಯಗಳ ಸಂಯೋಗದಿಂದ ಮಾತ್ರ ಶಬ್ದರಚನೆಯಾಗುತ್ತದೆ. ಶಬ್ದಕ್ಕೆ ಪ್ರತ್ಯಯಗಳಿಂದ ಭಿನ್ನರೂಪವುಂಟಾಗುತ್ತದೆ. ಪ್ರತ್ಯಯವನ್ನು ಪ್ರಕೃತಿಯಿಂದ ಪ್ರತ್ಯೇಕಿಸಲು ಸಾಧ್ಯವಿರುತ್ತದೆ. ಉದಾಹರಣೆಗೆ : ರಾಮನ+ಅಲ್ಲಿ= ‘ರಾಮನಲ್ಲಿ’. ಜಗತ್ತಿನ ಭಾಷೆಗಳಲ್ಲಿ ಹೆಚ್ಚಿನವೆಲ್ಲ ಈ ವರ್ಗದಲ್ಲಿಯೇ ಸೇರುತ್ತವೆ.

ಪ್ರಕೃತಿಪ್ರತ್ಯಯಗಳ ಪ್ರತ್ಯೇಕತೆ ಸ್ಪಷ್ಟವಾಗಿ ಕಾಣುತ್ತಿದ್ದರೆ ಅದು ಅಶ್ಲಿಷ್ಟಯೋಗಾತ್ಮಕ ಭಾಷೆ. ಪ್ರತ್ಯಯವನ್ನು ಪ್ರಕೃತಿಯ ಹಿಂದೆ, ನಡುವೆ ಅಥವಾ ಕಡೆಗೆ ಜೋಡಿಸುವ ರಚನೆಗಳು ಆಯಾ ಪ್ರಕಾರಾಂತರಗಳಾಗುತ್ತವೆ. ಕನ್ನಡವೇ ಮೊದಲಾದ ದ್ರಾವಿಡಭಾಷೆಗಳು ಅಂಥ ಯೋಗಾತ್ಮಕಗಳೆನ್ನಬಹುದು. ‘ಸೇವಕ–ರು’ (ಕರ್ತೃ), ‘ಸೇವಕ–ರನ್ನು’ (ಕರ್ಮ), ‘ ಸೇವಕ–ರಿಂದ’ (ಕರಣ), ‘ಸೇವಕ–ರಿಗೆ’ (ಸಂಪ್ರದಾನ), ‘ಸೇವಕ–ರ’ (ಸಂಬಂಧ), ‘ಸೇವಕ–ರಲ್ಲಿ’ (ಅಧಿಕರಣ)—ಇತ್ಯಾದಿಗಳಲ್ಲಿ ವಿಭಕ್ತಿಪ್ರತ್ಯಯಗಳು ಪ್ರಕೃತಿಯ ಕಡೆಗೆ ಸ್ಪಷ್ಟವಾಗಿ ಒಡೆದು ಕಾಣುವಂತೆ ಸೇರಿವೆ.

### (3) ಶ್ಲಿಷ್ಟಯೋಗಾತ್ಮಕ :—

ಈ ಭಾಷೆಗಳಲ್ಲಿ ವಿಭಕ್ತಿಗೆ ಪ್ರಾಶಸ್ತ್ಯವಿರುತ್ತದೆ. ಇಲ್ಲಿ ಪ್ರಕೃತಿ-ಪ್ರತ್ಯಯಗಳು ಒಡೆದು ಕಾಣದಂತೆ ಕೂಡಿಹೋಗಿರುತ್ತವೆ. ಸಂಸ್ಕೃತಭಾಷೆ ಈ ವರ್ಗದಲ್ಲೇ ಸಹಜವಾಗಿ ಬರುತ್ತದೆ. ಪದಮಧ್ಯದ ಸಂಧಿನಿಯಮಗಳು ಸಂಸ್ಕೃತಭಾಷೆಯಲ್ಲಿವೆ.

ವಿಮರ್ಶೆ :—

ಈ ಆಕೃತಿಮೂಲಕ ಭಾಷಾವಿಭಾಗಕ್ರಮ ಶಾಸ್ತ್ರೀಯವೆಂದು ವಿದ್ವದ್ಗ್ರಹೀತವಿದ್ದರೂ, ವಿಶ್ವದ ಎಲ್ಲ ಭಾಷೆಗಳನ್ನೂ ಈ ವರ್ಗೀಕರಣದಲ್ಲಿ ಅಂತರ್ಗತ ಮಾಡಲು ಶಕ್ಯವಿಲ್ಲ. ಈ ವಿಭಾಗಾನುಸಾರ ಪರಸ್ಪರ ಸಂಬಂಧವಿಲ್ಲದ ಯಾವುವೋ ಭಾಷೆಗಳೆಲ್ಲ ಒಂದು ವರ್ಗದಲ್ಲಿ ಬರುವುದುಂಟು. ಅಶ್ಲಿಷ್ಟಯೋಗಾತ್ಮಕ ಭಾಷೆಯ ವರ್ಗದಲ್ಲಿ ಹಿಂದೀಭಾಷೆಯಂತೆ ತುರ್ಕಿ, ಆಫ್ರಿಕದ ಕಾಫಿರ್ ಮತ್ತು ಫಿಲಿಫೈನ್, ನ್ಯೂಗಿನಿ ಮುಂತಾದ ದೇಶಗಳ ಭಾಷೆಗಳೆಲ್ಲ ಬಂದು ಬಿಡುತ್ತವೆ. ಅಲ್ಲದೆ ಪದಗಳ ಶ್ಲಿಷ್ಟ ಮತ್ತು ಅಶ್ಲಿಷ್ಟ ಸ್ವರೂಪದ ಸೀಮಾರೇಖೆಯಾದರೂ ಕರಾರುವಾಕ್ಕಾಗಿಲ್ಲ. ಎರಡು ಅಂಶಗಳು ಅಷ್ಟಿಷ್ಟು ಕೂಡಿಕೊಂಡ ಭಾಷೆಗಳೂ ಉಂಟು.

## ಭಾಷಾಕುಟುಂಬಗಳ ವರ್ಗೀಕರಣ

ಮೇಲಿನ ವರ್ಗೀಕರಣದ ದೋಷಗಳನ್ನು ಈ ಭಾಷಾಕುಟುಂಬಗಳ ವರ್ಗೀಕರಣವು ದೂರೀಕರಿಸುತ್ತದೆ. ಇದರಲ್ಲಿ ಕೇವಲ ಭಾಷೆಯ ಆಕೃತಿಯನ್ನಷ್ಟೇ ಗಮನಿಸುವ ಬದಲು, ಸಾಮ್ಯ, ವ್ಯುತ್ಪತ್ತಿ, ಧ್ವನಿಸಮೂಹ, ಇತಿಹಾಸ, ಭೂಗೋಲಗಳನ್ನೂ ಗಮನಿಸಲಾಗುತ್ತದೆ. ಐತಿಹಾಸಿಕವಾಗಿ ತುಲನೆ ಮಾಡುತ್ತ ಭಾಷೆಗಳ ಸ್ವರೂಪದ ಹಿಂದೆ ಹೋಗಿ ಮೂಲಸ್ವರೂಪ ದಲ್ಲಿದ್ದಿರಬಹುದಾದ ಒಂದೇ ಭಾಷೆಯುವರೆಗೂ ಈ ಸಂಶೋಧನೆ ಸಾಗುತ್ತದೆ. ಭಾಷೆಗಳ ಧ್ವನಿತತ್ತ್ವ, ರಚನಾತತ್ತ್ವ, ಅರ್ಥತತ್ತ್ವ. ಮೂರನ್ನೂ ಕ್ರೋಢೀಕರಿಸಿಕೊಂಡು ವಿಶ್ವದ ಭಾಷೆಗಳ ಕುಟುಂಬಗಳು ಇಷ್ಟೇ ಎಂದು ನಿರ್ಣಯಿಸುವುದೇ ಭಾಷಾಶಾಸ್ತ್ರದ ಮುಖ್ಯ ಗುರಿಗಳಲ್ಲಿ ಒಂದಾಗಿದೆ. ಹೀಗೆ ಬಹಳ ಕೂಲಂಕಷವಾಗಿ ಅಧ್ಯಯನ ಮಾಡಿರುವ ಒಂದು ಭಾಷಾ ಕುಟುಂಬವೆಂದರೆ ಇಂಡೋ-ಯೂರೋಪಿಯನ್ ಒಂದೇ ಎನ್ನಬಹುದು. ಒಂದೇ ಮೂಲ ಇಂಡೋ-ಯೂರೋಪಿಯನ್ ಭಾಷೆ ಕಾಲ-ದೇಶಗಳ ವ್ಯತ್ಯಾಸದಿಂದ ಗ್ರೀಕ್, ಲ್ಯಾಟಿನ್, ಜರ್ಮನ್, ಇಂಗ್ಲಿಷ್, ಅವೆಸ್ತನ್, ಸಂಸ್ಕೃತ ಇತ್ಯಾದಿ ನಾನಾರೂಪಗಳನ್ನು ತಾಳಿದೆಯೆಂಬಂಶ ಈ ಶಾಸ್ತ್ರಾಧ್ಯಯನದಿಂದ ಹೊರಪಡುತ್ತದೆ.

ಒಂದು ಭಾಷಾಕುಟುಂಬವೆನ್ನಲು ಮುಖ್ಯ ಆಧಾರಗಳು :—

1. ಭಾಷಾರಚನೆಯ ಸಮಾನತೆ—ಹೆಚ್ಚು ಭಾಷೆಗಳಲ್ಲಿ ಒಂದೇ ರೀತಿಯ ರಚನಾ ಸ್ವರೂಪ ಕಾಣುವುದು.

2. ವ್ಯುತ್ಪತ್ತಿ—ಶಬ್ದಗಳ ಇತಿಹಾಸ ಅನುಶೀಲನದಿಂದ ಮೂಲರೂಪದ ಪತ್ತೆ ಹಚ್ಚಿ ಅವುಗಳ ತುಲನೆ ಶಕ್ಯವಾಗುವುದು.

3. ಶಬ್ದಸಂಪತ್ತು—ಶಬ್ದಗಳ ಸಮಾನತೆ ಹೆಚ್ಚುಹೆಚ್ಚಾಗಿ ಕಂಡಷ್ಟೂ ಈ ಭಾಷೆಗಳು ಒಂದು ಕುಟುಂಬವೆನ್ನಲು ಸಹಾಯವಾಗುತ್ತದೆ.



ಉದಾ. :—

| ಸಂಸ್ಕೃತ | ಫಾರಸೀ | ಗ್ರೀಕ್ | ಜರ್ಮನ್ | ಇಂಗ್ಲಿಷ್ | ಲ್ಯಾಟಿನ್ |
|---|---|---|---|---|---|
| ಪಿತೃ | ಪಿದರ್ | ಪಾಟೆರ್ | ಪಾದರ್ | ಫಾದರ್ | ಪಾಟಿರ್ |
| ಭ್ರಾತೃ | ಬಿರಾದರ್ | ಫ್ರಾಟಿರ್ | ಬ್ರೂಡೆರ್ | ಬ್ರದರ್ | ಫ್ರಾಟಿರ್ |
| ಅಶ್ವ | ಅಸ್ಪ | ಹಿಪ್ಪೋಸ್ | — | ಹಾರ್ಸ್ | ಎಕ್ವಸ್ |
| ಹಂಸ | — | ಚೆನೆ | ಗಾನ್ಸ್ | ಗೂಸ್ | ಓನ್ಸರ್ |
| ವೇದ | — | ಒಯಿಡ | — | ವಿಟ್ | ವಿಡಿ |
| ತ್ರೀ | ಸಿಹ | ತ್ರಯಿಸ್ | ಡ್ರೈ | ತ್ರೀ | ಟ್ರೆಸ್ |
| ಸಪ್ತ | ಹಪ್ತ | ಹೆಪ್ಟ | ಸೀಬೆನ್ | ಸೆವೆನ್ | ಸೆಪ್ಟೆಮ್ |

ಹೀಗೆ ತಂದೆ, ತಾಯಿ ಮುಂತಾದ ಬಾಂಧವ್ಯವಾಚಕ ಪದಗಳ ಸಂಖ್ಯಾವಾಚಕ ಪದಗಳೂ ಹೆಚ್ಚಾಗಿ ಸ್ವರೂಪವಿದ್ದರೆ ಆ ಭಾಷೆಗಳು ಒಂದೇ ಕುಟುಂಬದವೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಆದರೆ ಇದೊಂದೇ ಆ ನಿರ್ಣಯಕ್ಕೆ ಸಾಧಕವಾಗಲಾರದು. ಏಕೆಂದರೆ ಒಂದು ಭಾಷೆಯಿಂದ ಇನ್ನೊಂದಕ್ಕೆ ಎರವು ಪಡೆದ ಶಬ್ದಗಳೂ ಎಷ್ಟೋ ಇರಬಹುದು. ಅವು ನೋಡಲು ಸ್ವರೂಪವೆನಿಸಿದರೂ ಬೇರೆ ವ್ಯುತ್ಪತ್ತಿಯಿರುವ ಶಕ್ಯತೆಯೂ ಇದೆ.

ಉದಾ. :—

| ಸಂಸ್ಕೃತ | ಗ್ರೀಕ್ | ಲ್ಯಾಟಿನ್ | ಜರ್ಮನ್ | ಇಂಗ್ಲಿಷ್ |
|---|---|---|---|---|
| ಗೌಃ | ಬೌಸ್ | ಬೋಸೆ | ಕೂಹೆ | ಕೌ |
| ಪಂಚ | ಪೆಂಟೆ | ಕ್ವಿನೆಕ್ವೆ | ಫ್ಯುನ್ಫ್ | ಫೈವ್ |

4. ಧ್ವನಿಸಮೂಹ—ಧ್ವನಿಸಾಮ್ಯವೂ ಒಂದು ಕುಟುಂಬಕ್ಕೆ ಸೇರುವ ಭಾಷಾವರ್ಗದಲ್ಲಿ ಹೆಚ್ಚಾಗಿ ಕಾಣಬರುತ್ತದೆ. ಆದರೆ ಧ್ವನಿಸ್ವರೂಪದ ಬದಲಾವಣೆ ವ್ಯಾಕರಣಸ್ವರೂಪದ ಬದಲಾವಣೆಗಿಂತ ತೀವ್ರತರವಾದ ಕಾರಣ ಇದು ವ್ಯಾಕರಣರೂಪದಷ್ಟು ನಿರ್ಣಾಯಕವಾದ ಆಧಾರವಲ್ಲ.

ಈ ಎಲ್ಲ ಆಧಾರಗಳನ್ನು ಕ್ರೋಢೀಕರಿಸಿಕೊಂಡು ಭಾಷೆಗಳಿಗೆ ಅನ್ವಯಿಸಿ ತುಲನಾತ್ಮಕವಾಗಿ ಅಧ್ಯಯನ ಮಾಡಿದಾಗ ವಿಶ್ವದ ಭಾಷೆಗಳಲ್ಲಿ ಕೆಲವೊಂದು ಭಾಷಾಕುಟುಂಬಗಳಿರುವುದು ಸ್ಪಷ್ಟವಾಗುತ್ತದೆ. ಅಮೆರಿಕ, ಆಫ್ರಿಕಾ, ಪ್ರಶಾಂತಸಾಗರ, ಯೂರೇಶಿಯಾ ಮುಂತಾಗಿ ಖಂಡಗಳೊಂದೊಂದರಲ್ಲೂ ಅನೇಕ ಭಾಷಾಕುಟುಂಬಗಳನ್ನು ನಿರ್ಣಯಿಸಲಾಗಿದೆ. ಇವುಗಳ ಸಂಖ್ಯೆ 40ಕ್ಕೂ ಹೆಚ್ಚಾಗಿದೆ. ಅವು ನಮಗೆ ಅಪ್ರಸ್ತುತ. ಯೂರೇಶಿಯಾ ಖಂಡದ ಸೆಮಿಟಿಕ್, ಕಕೇಶಿಯನ್, ದ್ರವಿಡಿಯನ್ ಇತ್ಯಾದಿ ಭಾಷಾಕುಟುಂಬಗಳ ಪೈಕಿ ಅತ್ಯಂತ ವಿಶಾಲವೂ, ಮಹತ್ವವುಳ್ಳದೂ ಆದ ಇಂಡೋ-ಯೂರೋಪಿಯನ್ ಭಾಷಾಕುಟುಂಬವೊಂದು

ಮಾತ್ರ ನಮಗೆ ಪ್ರಸ್ತುತ. ಇದು ಸಾಹಿತ್ಯದೃಷ್ಟಿಯಿಂದ ಶ್ರೀಮಂತವಾದುದು ಮತ್ತು ಕಾಲದೃಷ್ಟಿಯಿಂದ ಪ್ರಾಚೀನತಮವಾದುದು. ಈ ಕುಟುಂಬದ ಭಾಷೆಗಳು ಭಾರತ, ಇರಾನ್, ಆರ್ಮೀನಿಯ, ಯೂರೋಪ್ ಇತ್ಯಾದಿಗಳಲ್ಲಿ ಊರ್ಜಿತವಾಗಿವೆ. ವಿಶ್ವದಲ್ಲಿಯೇ ಈ ಕುಟುಂಬದ ಭಾಷೆಗಳನ್ನು ಮಾತಾಡುವ ಜನರ ಸಂಖ್ಯೆ ಅತ್ಯಂತ ಹೆಚ್ಚಿನದು. ಇದನ್ನೇ ಮೊದಲು ' ಇಂಡೋ-ಜರ್ಮಾನಿಕ್ ", ' ಇಂಡೋ-ಕೆಲ್ಟಿಕ್ '. ' ಇಂಡೋ-ಜರ್ಮನ್ ' ಎಂದೂ ಕರೆಯಲಾಗುತ್ತಿತ್ತು. ಈ ಭಾಷಾಕುಟುಂಬದಲ್ಲಿ ಎರಡು ಮುಖ್ಯ ಶಾಖೆಗಳಿವೆ:

(1) ಇಂಡೋ-ಯೂರೋಪಿಯನ್ (2) ಇಂಡೋ-ಇರಾನಿಯನ್.

ಈ ಎಲ್ಲ ಇಂಡೋ-ಯೂರೋಪಿಯನ್ ಭಾಷೆಗಳಿಗೂ ಸುದೀರ್ಘ ಇತಿಹಾಸವಿದೆ. ಆದರೆ ಸಂಸ್ಕೃತವೇ ಅವುಗಳಲ್ಲೆಲ್ಲ ಪ್ರಾಚೀನವಾದುದು. ಇವನ್ನೆಲ್ಲ ' ಸತಮ್ ' ಮತ್ತು ' ಕೆಂಟುಮ್ ' ಎಂದು ಎರಡು ಗುಂಪಾಗಿ ವಿಭಾಗಿಸುವ ರೂಢಿಯುಂಟು, ಒಂದೇ ಮೂಲ ಧ್ವನಿಯು ಗ್ರೀಕ್‌ನಲ್ಲಿ " ಕೆ " ರೂಪವನ್ನೂ ಸಂಸ್ಕೃತದಲ್ಲಿ ' ಶ, ರೂಪವನ್ನೂ ತಳೆಯುವ ವೈಶಿಷ್ಟ್ಯವೇ ಈ ವಿಭಾಗಕ್ಕೆ ಮೂಲಾಧಾರ. ಉದಾಹರಣೆ ನೋಡಿ.

| ಸಂಸ್ಕೃತ | ಗ್ರೀಕ್ |
|---|---|
| ಶತಮ್ | ಹೆಕಟೋನ್ |
| ಶುನಃ | ಕ್ಯುನೋಸ್ |
| ಶ್ವಾ (ಶ್ವನ್) | ಕ್ಯುಓನ್ |
| ದಶ | ಡೆಕ |
| ಶ್ರುತಿಃ | ಕ್ಲುಟೋಸ್ |
| ಅಶ್ಮನ್ | ಅಕ್ಮೊನ್ |
| ದದರ್ಶ | ದೆದೊರ್ಕ |

' ಸತಮ್ ' ಎಂಬುದು ಇರಾನಿಯನ್ ಶಬ್ದ ; ' ಕೆಂಟುಮ್ ' ಲ್ಯಾಟಿನ್ ಶಬ್ದ. ಈ ವಿಭಾಗದಂತೆ ಅಂತರ್ಗತವಾಗುವ ಭಾಷೆಗಳು ಹೀಗಿವೆ :

| ಸತಮ್ ಭಾಷೆಗಳು | ಕೆಂಟುಮ್ ಭಾಷೆಗಳು |
|---|---|
| ಭಾರತೀಯ | ಗ್ರೀಕ್ |
| ಇರಾನೀ | ಇಟಾಲಿಕ್ |
| ಆರ್ಮೀನಿಯನ್ | ಕೆಲ್ಟಿಕ್ |
| ಬಾಲ್ಟೋ-ಸ್ಲಾವೋನಿಕ್ | ಟ್ಯೂಟಾನಿಕ್ |
| ಅಲ್ಬೇನಿಯನ್ | ಟೊಖಾರಿಷ್ |

ಹೀಗೆ ಸತಮ್ ಭಾಷೆಗಳು ಹೆಚ್ಚಾಗಿ ಏಷ್ಯಾದಲ್ಲಿಯೂ ಕೆಂಟುಮ್ ಭಾಷೆಗಳು ಯೂರೋಪಿನಲ್ಲಿಯೂ ಇರುವುದು ವ್ಯಕ್ತವಾಗುತ್ತದೆ. ಇವುಗಳ ತುಲನಾತ್ಮಕ ಅಧ್ಯಯನದಿಂದ ಸಂಸ್ಕೃತ



ಭಾಷೆ ಹಾಗೂ ಈ ವರ್ಗದ ಇತರ ಭಾಷೆಗಳಿಗೆಲ್ಲ ಮೂಲವಾದ ಒಂದು ಅತಿ ಪ್ರಾಚೀನ ಇಂಡೋ-ಯೂರೋಪಿಯನ್ ಭಾಷೆಯಿದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಅದು ಇಂದು ನಷ್ಟವಾಗಿದ್ದರೂ ಭಾಷಾಶಾಸ್ತ್ರಗಳ ನಿಯಮಾನುಸಾರ ಹೀಗೆಯೇ ಇದ್ದಿರಬೇಕೆಂದು ಊಹಿಸಿದ್ದಾರೆ. ಸಂಸ್ಕೃತ—' ದಶ ', 'ಲ್ಯಾಟಿನ್—' ಡಿಸೆಮ್'', ಗಾಥಿಕ್—'ಟೈಹುಮ್' ರೂಪಗಳಿರುವುದರಿಂದ ಮೂಲ ಇಂಡೋ-ಯೂರೋಪಿಯನ್ ಭಾಷಾರೂಪ 'ಡೆಕ್ಮೆ ಎಂದಿದ್ದಿರ ಬೇಕೆಂದು ತರ್ಕಿಸಿದ್ದಾರೆ. ಮೂಲದ ಅನುನಾಸಿಕ ಸಂಸ್ಕೃತದಲ್ಲಿ ಲುಪ್ತವಾದರೂ ಇತರ ಭಾಷೆಗಳಲ್ಲಿ ಉಳಿದಿದೆ. ಹಾಗೇಯೇ ಸಂಸ್ಕೃತ 'ಶತಮ್', ಲ್ಯಾಟಿನ್ 'ಕೆಂಟುಮ್', ಗಾಥಿಕ್ 'ಹುಂಡೆ'—ಈ ರೂಪಗಳ ಮೂಲ ಇಂಡೋ-ಯೂರೋಪಿಯನ್ 'ಕ್ಮಟೋಮ್' ಎಂದಿದ್ದಿರ ಬೇಕೆಂದು ಊಹಿಸುವಷ್ಟು ಈ ಧ್ವನಿವ್ಯತ್ಯಾಸಗಳು ಕ್ರಮಬದ್ಧವಾಗಿವೆ.

## ಸ್ವರ-ಶ್ರೇಣಿಗಳು(Vowel-gradation):—

ಇಂಡೋ-ಯೂರೋಪಿಯನ್ ಭಾಷಾವರ್ಗದ ಒಂದು ವಿಶಿಷ್ಟ ಲಕ್ಷಣವೆಂದರೆ ಅದರ ಸ್ವರಶ್ರೇಣಿಯಾಗಿದೆ. ಒಂದು ಎ—ಶ್ರೇಣಿ ; ಇನ್ನೊಂದು ಒ—ಶ್ರೇಣಿ.

1. ಎ—ಶ್ರೇಣಿ · · ಇ ಈ ಏ ಐ
2. ಒ-ಶ್ರೇಣಿ . . ಉ ಊ ಓ ಔ

ಸಂಸ್ಕೃತವ್ಯಾಕರಣದಲ್ಲಿ ಇವನ್ನೇ ಸಂಪ್ರಸಾರಣ-ಗುಣ-ವೃದ್ಧಿ ಸ್ವರಗಳೆಂದು ವ್ಯವಹರಿಸುವರು. ಇವನ್ನೇ ಭಾಷಾಶಾಸ್ತ್ರದಲ್ಲಿ ದುರ್ಬಲಶ್ರೇಣಿ, ಸಬಲಶ್ರೇಣಿ, ದೀರ್ಘಶ್ರೇಣಿಯೆಂದು ವ್ಯವಹರಿಸುವರು. ಹ್ರಸ್ವ ಅಥವಾ ಸಂಪ್ರಸಾರಣ ಸ್ವರವನ್ನೇ ನಮ್ಮವರು ಆರಂಭದ ಅವಸ್ಥೆಯೆಂದು ತಿಳಿದರೆ ಆಧುನಿಕ ಭಾಷಾಶಾಸ್ತ್ರಕಾರರು ಸಬಲ ಶ್ರೇಣಿಯನ್ನೇ ಆರಂಭಾವಸ್ಥೆಯೆನ್ನುತ್ತಾರೆ. ಇದನ್ನು ತುಲನಾತ್ಮಕವಾಗಿ ನಕ್ಷೆಯಲ್ಲಿ ನೋಡಿ :—

| | |
|---|---|
| ವೃದ್ಧಿ | ದೀರ್ಘಶ್ರೇಣಿ |
| ಗುಣ | ಸಬಲಶ್ರೇಣಿ |
| ದೀರ್ಘಸ್ವರ | ದುರ್ಬಲಶ್ರೇಣಿ ಗೌಣ ಉದಾತ್ತಸ್ವರ |
| ಹ್ರಸ್ವಸ್ವರ ಅಥವಾ ಸಂಪ್ರಸಾರಣ | ಉದಾತ್ತರಹಿತ |
| ಸಂಸ್ಕೃತವ್ಯಾಕರಣ | ಆಧುನಿಕ ಭಾಷಾಶಾಸ್ತ್ರ |

ಸ್ವರಶ್ರೇಣಿಯಲ್ಲಿ ಒಂದರಿಂದ ಒಂದಕ್ಕೆ ಬದಲಾವಣೆಯಾಗುವುದನ್ನು ಭಾಷಾಶಾಸ್ತ್ರದಲ್ಲಿ 'ಅಬ್ಲೌಟ್' (Ablaut) ಎನ್ನುತ್ತಾರೆ. ಮೇಲೆ ಹ್ರಸ್ವದೀರ್ಘಾದಿ ಬದಲಾವಣೆಯಲ್ಲದೆ 'ಅ', ' ಇ ', 'ಒ' ಗಳಿಗೂ ಪರಸ್ಪರ ಬದಲಾವಣೆಯಾಗಬಹುದು. ಇದೂ ಅಬ್ಲೌಟಿನಲ್ಲೇ

ಸೇರುತ್ತದೆ. ಮೂಲ ಇಂಡೋ-ಯೂರೋಪಿಯನ್ ಭಾಷೆಯಲ್ಲಿದ್ದ ಈ ಮೂರು ಶ್ರೇಣಿಗಳೂ, ಅವುಗಳ ಸಂಯುಕ್ತಗಳೂ ಕಡಿಮೆಯಾಗಿ ಸಂಸ್ಕೃತದಲ್ಲಿ ಉಳಿದ ಶ್ರೇಣಿಗಳೂ. ಸಂಯುಕ್ತಗಳೂ ಕೆಳಗಿನಂತಿವೆ:

(1) ಅ—ಶ್ರೇಣಿ:—

1. ಅ
2. ಅಯ್, ಏ
3. ಅವ್, ಓ
4. ಅರ್
5. ಅಲ್
6. ಅನ್
7. ಅಮ್

(2) ಆ—ಶ್ರೇಣಿ:—

1. ಆ
2. ಆಯ್, ಐ
3. ಆವ್, ಔ

ಈ ರೀತಿಯ ಧ್ವನಿಬದಲಾವಣೆಗಳು ಬೇರಾವ ಭಾಷಾಕುಟುಂಬದಲ್ಲೂ ಕಾಣಬರುವುದಿಲ್ಲ. ಆದ್ದರಿಂದ ಇದು ಇಂಡೋ-ಯೂರೋಪಿಯನ್ ಭಾಷಾಕುಟುಂಬದಲ್ಲಿ ಸಾಧಾರಣ ಲಕ್ಷಣವಾಗಿದೆ.

## ಧ್ವನಿ ನಿಯಮಗಳು

ಈ ಕ್ರಮಬದ್ಧವಾದ ಧ್ವನಿಪರಿವರ್ತನೆಯ ನಿಯಮಗಳನ್ನು Phoneticlaws ಎನ್ನುತ್ತಾರೆ. ಧ್ವನಿನಿಯಮಗಳು ಪ್ರಾಕೃತಿಕ ವಿಜ್ಞಾನದ ನಿಯಮಗಳಂತೆ ಶಾಶ್ವತವಲ್ಲದಿದ್ದರೂ, ಸಾರ್ವದೇಶಿಕವಲ್ಲದಿದ್ದರೂ, ನಿರಪವಾದವಲ್ಲದಿದ್ದರೂ ತಮ್ಮ ಪರಿಮಿತ ಕ್ಷೇತ್ರದಲ್ಲಿ ಭಾಷಾಧ್ಯಯನಕ್ಕೆ ತುಂಬಾ ಪ್ರಯೋಜಕಗಳಾಗಿರುತ್ತವೆ. ಈ ನಿಯಮಗಳ ಸಂಶೋಧನೆಯೇ ಭಾಷಾಶಾಸ್ತ್ರದ ಮಹತ್ತ್ವದ ವಿಷಯಗಳಲ್ಲೊಂದಾಗಿದೆ. ನಿಜವಾಗಿಯೂ ಧ್ವನಿನಿಯಮಗಳಿಗೆ ಅಪವಾದ ವಿರಬಾರದು. ಆದರೆ ನಾವು ಕಾಲಭೇದವಿರುವ ಶಬ್ದಗಳನ್ನೋ ಅಥವಾ ಎರವುಪಡೆದ ಶಬ್ದಗಳನ್ನೋ ಅರಿಯದೆ ತುಲನೆ ಮಾಡುವುದರಿಂದ ಅಪವಾದಗಳಂತೆ ತೋರಿಬರುತ್ತವೆ ಅಷ್ಟೆ. ಸಾರೂಪ್ಯದಿಂದ ಎಷ್ಟೋ ವೇಳೆ ನಿಯಮಬಾಹಿರವಾದ ಉಚ್ಚಾರಣೆಗಳೂ ಸೇರಿಬಿಡುತ್ತವೆ. ಟಕರ್ ಎಂಬಾತನು ಧ್ವನಿನಿಯಮದ ಲಕ್ಷಣವನ್ನು ಹೀಗೆ ಹೇಳಿದ್ದಾನೆ: "ಒಂದು ನಿರ್ದಿಷ್ಟ ಕಾಲದಲ್ಲಿ ಒಂದು ನಿರ್ದಿಷ್ಟ ಭಾಷೆ ಒಂದು ನಿರ್ದಿಷ್ಟ ಧ್ವನಿಯ ಉಚ್ಚಾರಣೆಯಲ್ಲಿ ಅನುಸರಿಸುವ ನಿಯುತಪ್ರವೃತ್ತಿಯ ಪ್ರತಿಪಾದನೆಯೇ ಧ್ವನಿನಿಯಮ". ಗ್ರೇ ಎಂಬಾತನು ಇದನ್ನು ವಿವರಿಸುತ್ತ "ಒಂದು ಕಾಲದ ಭಾಷೆಯನ್ನು ಇನ್ನೊಂದು ಕಾಲದ ಭಾಷೆಯೊಡನೆ ಹೋಲಿಸುವಾಗ ಧ್ವನಿಪರಿವರ್ತನೆಗಳಲ್ಲಿ ಕಾಣಬರುವ ನಿಯುತಾಂಶದ ನಿರ್ದೇಶವೇ ಧ್ವನಿನಿಯಮ"ವೆನ್ನುತ್ತಾನೆ.



## ಗ್ರಿಮ್ ನಿಯಮ

ಇದರ ಹಿನ್ನಲೆ :

ಸಂಸ್ಕೃತಭಾಷೆಯ ಹೊಸ ಪರಿಚಯವಾದ ಯುರೋಪಿಯನ್ ವಿದ್ವಾಂಸರಿಗೆ 19ನೆಯ ಶತಮಾನದಲ್ಲಿ ತಮ್ಮ ಪ್ರಾಚೀನ ಭಾಷಾಶಬ್ದಗಳಿಗೂ, ಸಂಸ್ಕೃತಶಬ್ದಗಳಿಗೂ ಇರುವ ಕೆಲವೊಂದು ಸಾರೂಪ್ಯಗಳನ್ನು ಕಂಡು ಆಚ್ಚರಿಯಾಯಿತು. ತಮ್ಮ ಲ್ಯಾಟಿನ್, ಗ್ರೀಕ್ ಶಬ್ದಗಳೆಲ್ಲ ಮೂಲತಃ ಸಂಸ್ಕೃತಜನ್ಯವೇ ಇರಬಹುದೇ ಎಂಬ ಶಂಕೆ ಉತ್ಪನ್ನವಾಯಿತು. ಇನ್ನೂ ಹೆಚ್ಚು ಹೆಚ್ಚು ಅಧ್ಯಯನ ಮುಂದುವರಿದಂತೆ, ಅವರು ಸಂಸ್ಕೃತಪೂರ್ವದ ಇಂಡೋ-ಯೂರೋಪಿಯನ್ ಮೂಲಭಾಷೆ ಸಂಸ್ಕೃತ ಹಾಗೂ ಲ್ಯಾಟಿನ್ ಗ್ರೀಕ್‌ಗಳಿಗೆಲ್ಲ ಮಾತೃಪ್ರಾಯವಾಗಿರಬೇಕೆಂಬ ಸಿದ್ಧಾಂತಕ್ಕೆ ಬಂದರು. ಅಲ್ಲಿಂದಾಚೆಗೆ ಇನ್ನೊಂದು ಧ್ವನಿ ಪರಿವರ್ತನೆಯಾದ ಮೇಲೆ ಆಧುನಿಕ ಜರ್ಮನ್, ಇಂಗ್ಲಿಷ್ ಭಾಷೆಗಳಾದುವೆಂದೂ ಕಂಡು ಹಿಡಿದರು. ಇದನ್ನು ಸಾರ್ವತ್ರಿಕ ನಿಯಮವಾಗಿ ಹೇಳಿದ ಕೀರ್ತಿ ಗ್ರಿಮ್ (1785-1863) ಎಂಬಾತನದು. ಅವನು ಒಂಬತ್ತು ಸ್ಪರ್ಶವರ್ಣಗಳ ಪರಿವರ್ತನೆಯ ಬಗೆಗೆ ತನ್ನ ನಿಯಮವನ್ನು ಸೂತ್ರಿಸಿದ್ದಾನೆ. ಪ್ರಥಮ ವರ್ಣಪರಿವರ್ತನೆ ಪ್ರಾಗೈತಿಹಾಸಿಕ ಯುಗದಲ್ಲಾಗಿರಬೇಕೆಂದು ಊಹೆ. ಎರಡನೆಯ ವರ್ಣಪರಿವರ್ತನೆ ಕ್ರಿ. ಶ. 7ನೆಯ ಶತಮಾನದಲ್ಲಿ ನಡೆದದ್ದು—ಇದಕ್ಕೆ ಯೆಹೂದಿ ಮತ್ತು ಕ್ರೈಸ್ತರ ಸಾಂಸ್ಕೃತಿಕ ಸಂಕರವೂ ಕಾರಣವಿರಬಹುದು. ಪ್ರಥಮ ವರ್ಣಪರಿವರ್ತನೆ ಮಾತ್ರ ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳಿಗೆ ಸಂಬಂಧಪಟ್ಟದ್ದು. ಎರಡನೆಯದು ಲೋ ಜರ್ಮನ್ ಮತ್ತು ಹೈ ಜರ್ಮನ್ ಭಾಷೆಗಳಿಗೆ ಸಂಬಂಧಿಸಿದ್ದು.

ಪ್ರಥಮ ವರ್ಣಪರಿವರ್ತನೆ :—

ಈ ಪ್ರಥಮ ವರ್ಣಪರಿವರ್ತನೆಯಲ್ಲಿ ಮೂಲ ಇಂಡೋ-ಯೂರೋಪಿಯನ್ ಭಾಷೆಯ ಘೋಷ ಮಹಾಪ್ರಾಣ, ಘೋಷ ಅಲ್ಪಪ್ರಾಣ ಮತ್ತು ಅಘೋಷ ಅಲ್ಪಪ್ರಾಣಗಳು ಕ್ರಮವಾಗಿ ಜರ್ಮನ್ ಭಾಷೆಯ ಘೋಷ ಅಲ್ಪಪ್ರಾಣ, ಅಘೋಷ ಅಲ್ಪಪ್ರಾಣ ಮತ್ತು ಅಘೋಷ ಮಹಾಪ್ರಾಣಗಳಾಗುತ್ತವೆ. ಮೂಲಭಾಷೆಯ ವ್ಯಂಜನೋಚ್ಚಾರ ಸಂಸ್ಕೃತ, ಗ್ರೀಕ್‌ಗಳಲ್ಲಿ ಸುರಕ್ಷಿತವಾಗಿದೆ. ಉದಾಹರಣೆ—

| ಸಂಸ್ಕೃತ—ಲ್ಯಾಟಿನ್—ಗ್ರೀಕ್ | ಜರ್ಮನ್ |
|---|---|
| ಘ್, ಧ್, ಭ್ | ಗ್, ದ್, ಬ್ |
| ಗ್, ದ್, ಬ್ | ಕ್, ತ್, ಪ್ |
| ಕ್, ತ್, ಪ್ | ಖ್, [ಹ್], ಥ್, ಫ್—<br>[ಘ್, ಧ್, ಭ್] |

| | | |
|---|---|---|
| ಕ್—ಕೆಂಟುಮ್ [ಲ್ಯಾಟಿನ್]—ಹ್ ಖ್ [ಹ್]—ಹಂಡ್ರೆಡ್ | | [ಇಂಗ್ಲಿಷ್], |
| ತ್—ತೃಣ [ಸಂಸ್ಕೃತ] | —ಥ್—ಥಾರನ್ | [,,] |
| ಪ್—ಪಿತಾ [ಸಂಸ್ಕೃತ] | —ಫ್—ಫಾದರ್ | [,,] |
| ಗ್—ಗೌ, ಯುಗ, [ಸಂಸ್ಕೃತ] | —ಕ್—ಕೌ ಯೋಕ್ | [ಇಂಗ್ಲಿಷ್] |
| ದ್—ದ್ವಾ, ದಶ [,,] | ತ್—ತು, ತೆನ್ | [,,] |
| ಬ್—ಸ್ಲೇಉಬ್ [ಮೂಲಭಾಷೆ] | —ಪ್—ಸ್ಲಿಪ್ | [,,] |
| ಘ್—ಹಂಸ [ಸಂಸ್ಕೃತ] | —ಗ್—ಗೂಸ್ | [,,] |
| ಧ್—ವಿಧವಾ [,,] | —ದ್— ವಿಡೋ | [,,] |
| ಭ್—ಭೂ[,,] | —ಬ್—ಬಿ | [,,] |

ದ್ವಿತೀಯವರ್ಣಪರಿವರ್ತನೆ :—

| ಲೋ ಜರ್ಮನ್ | | ಹೈ ಜರ್ಮನ್ |
|---|---|---|
| ಗ್, ದ್, ಬ್ | — | ಕ್, ತ್, ಪ್ |
| ಕ್, ತ್, ಪ್ | — | ಖ್ (ಹ್), ಥ್, ಫ್ |
| ಖ್, ಥ್, ಫ್ | — | ಗ್, ದ್, ಬ್ |
| ಉದಾ:—ಬುಕ್ | — | ಬುಖ್ |
| ಡೀಪ್ | — | ತೀಫ್ |
| ನ್ಥ್ರ್ | — | ನಾರ್ಡ್ |
| ದೇ | — | ತಾಗ್ |

ಈ ಪರಿವರ್ತನೆ ಸ್ಪಷ್ಟವಾಗಲು ಕೆಳಗಿನ ತ್ರಿಕೋಣನಕ್ಷೆ ಸಹಾಯವಾಗುತ್ತದೆ.

ಖ್, ಥ್ ಫ್

[ಘ್, ಢ್, ಭ್]

ಕ್, ತ್, ಪ್ ಗ್, ದ್, ಬ್

ಈ ಗ್ರಿಮ್ ಧ್ವನಿನಿಯಮ ಹೆಚ್ಚು ಶಬ್ದಗಳನ್ನು ಸಮರ್ಪಕವಾಗಿ ವಿವರಿಸುವುದಾದರೂ ಅದಕ್ಕೆ ಅನೇಕ ಅಪವಾದಗಳಿರುವುದು ವಿದ್ವಾಂಸರ ಗಮನವನ್ನು ಸೆಳೆಯತೊಡಗಿತು. ಈ ಅಪವಾದಗಳಿಗೆ ಸೂಕ್ತ ಪರಿಹಾರ ಹೇಳಲೆಂದು ಮುಂದಿನ ಗ್ರಾಸ್‌ಮನ್ ಹಾಗೂ ವರ್ನರ್ ಇವರು ಬೇರೆ ಧ್ವನಿನಿಯಮಗಳನ್ನು ಸೂತ್ರಿಸುವಂತಾಯಿತು. ಉದಾಹರಣೆಗೆ ಕ್, ತ್, ಪ್‌ಗಳ ಹಿಂದೆ 'ಸ್' ಬಂದರೆ ಗ್ರಿಮ್ ಹೇಳುವ ಖ್, ಥ್, ಫ್ ಪರಿವರ್ತನೆ ಕಾಣುವದಿಲ್ಲ. ಉದಾ. :— ಸಂಸ್ಕೃತ 'ಅಸ್ತಿ'–ಜರ್ಮನ್ 'ಇಸ್ತ್'. ಹಾಗೆಯೇ 'ತ್' ಗೆ ಹಿಂದೆ ಕ್ ಅಥವಾ ಪ್ ಬಂದರೂ ನಿಯಮದಂತೆ ರೂಪವಾಗುವುದಿಲ್ಲ :— ಸಂಸ್ಕೃತ 'ನಪ್ತ್', ಜರ್ಮನ್—'ನಿಫ್ತ್'. ಇದಕ್ಕೇನು ಕಾರಣವೆಂದು ವಿವೇಚಿಸಿದ ಕೀರ್ತಿ ಹರ್ಮಾನ್ ಗ್ರಾಸ್‌ಮನ್‌ನದು (1809–1877).



## ಗ್ರಾಸ್‌ಮನ್ ನಿಯಮ

ಗ್ರಿಮ್ ನಿಯಮಗಳ ಅಪವಾದಗಳ ಹಿಂದೆಯೂ ಒಂದು ಏಕಸೂತ್ರತೆಯಡಗಿದೆ. ಅದೇ ಗ್ರಾಸ್‌ಮನ್ ನಿಯಮ. ಇಂಡೋ–ಯೂರೋಪಿಯನ್ ಮೂಲಭಾಷೆಯಲ್ಲಿ ಎರಡು ಅವಸ್ಥೆಗಳಿದ್ದಿರಬಹುದು. ಮೊದಲನೆಯ ಅವಸ್ಥೆಯಲ್ಲಿ ಮಹಾಪ್ರಾಣಗಳಿದ್ದಿರಬಹುದಾದರೂ ಎರಡನೆಯ ಅವಸ್ಥೆಯಲ್ಲಿ ಇರಲ್ಲಿಲ್ಲವೆನ್ನಬೇಕು. ಆದ್ದರಿಂದ ಪ್ರಥಮಾವಸ್ಥೆಯ ಖ್, ಥ್, ಫ್ ಗಳ ಬದಲು ದ್ವಿತೀಯಾವಸ್ಥೆಯ ಕ್, ತ್, ಪ್ ಗಳೇ ಕಾಣತೊಡಗುವುದು ಸೂಕ್ತವಾಗಿದೆ. ಮೂಲಭಾಷೆಯ ಆದ್ಯಂತಗಳಲ್ಲಿ ಎರಡು ಮಹಾಪ್ರಾಣಗಳಿದ್ದರೆ ಅದರಲ್ಲೊಂದು ಸಂಸ್ಕೃತ ಮತ್ತು ಗ್ರೀಕ್ ಭಾಷೆಗಳಲ್ಲಿ ಅಲ್ಪಪ್ರಾಣವಾಗುತ್ತದೆಂಬುದೇ ಗ್ರಾಸ್‌ಮನ್ ನಿಯಮ. ಇದರಂತೆ ಸಂಸ್ಕೃತದಲ್ಲಿ 'ಧಧಾಮಿ' ಎಂದಾಗದೆ 'ದಧಾಮಿ' ಎಂದೂ, 'ಭಭಾರ' ಎಂದಾಗದೆ 'ಬಭಾರ' ಎಂದೂ, 'ಹಹಾರ' ಆಗದೆ 'ಜಹಾರ' ಎಂದೂ 'ಹುಹೋತಿ' ಎಂದಾಗದೆ 'ಜುಹೋತಿ' ಎಂದೂ ಆಗುತ್ತದೆ.

## ವರ್ನರ್ ನಿಯಮ

ಗ್ರಾಸ್‌ಮನ್ ನಿಯಮವು ಗ್ರಿಮ್ ನಿಯಮದ ಕೆಲವು ಅಪವಾದಗಳನ್ನಷ್ಟೇ ವೈಜ್ಞಾನಿಕವಾಗಿ ವಿವರಿಸಲು ಸಮರ್ಥವಾಯಿತು. ಅದು ವಿವರಿಸದೆ ಬಿಟ್ಟ ಇನ್ನೂ ಕೆಲವು ಅಪವಾದಗಳು ಉಳಿದೇ ಇದ್ದವು. ಇದನ್ನು ಪರಿಹರಿಸಲು ಹೊಸ ಸಂಶೋಧನೆ ಮಾಡಿದವನೇ ವರ್ನರ್. ಇವನು ಗ್ರಿಮ್ ನಿಯಮ ಸ್ವರಾಘಾತವನ್ನು ಅವಲಂಬಿಸಿರುತ್ತದೆಂಬುದನ್ನು ಕಂಡುಹಿಡಿದನು. ವರ್ನರ್ ನಿಯಮ ಹೀಗಿದೆ :—ಇಂಡೋ–ಯೂರೋಪಿಯನ್ ಮೂಲಭಾಷೆಯ ಕ್, ತ್, ಪ್ ಗಳ ಹಿಂದೆ ಉದಾತ್ತ ಸ್ವರವಿದ್ದರೆ ಅವಶ್ಯವಾಗಿ ಅವು ಗ್ರಿಮ್ ನಿಯಮಾನುಸಾರ ಪರಿವರ್ತನೆ ಹೊಂದುತ್ತವೆ ; ಹಾಗಿಲ್ಲದೆ ಕ್, ತ್, ಪ್ ಗಳ ನಂತರ ಉದಾತ್ತ ಸ್ವರ ಬರುತ್ತಿದ್ದರೆ ಆಗ ಇನ್ನೊಂದು ಹೆಜ್ಜೆ ಮುಂದಿನ ಪರಿವರ್ತನೆಯಾಗಿ ಗ್ರಾಸ್‌ಮನ್ ನಿಯಮಾನುಸಾರ ಗ್, ದ್, ಬ್ ಗಳಾಗಿ ಪರಿವರ್ತನೆಗೊಳ್ಳುತ್ತವೆ.

| ಸಂಸ್ಕೃತ | ಲ್ಯಾಟಿನ್ | ಗಾಥಿಕ್ | ಇಂಗ್ಲಿಷ್ |
|---|---|---|---|
| ಯುವಂಶಸ್ | ಜುವೆಂಕಸ್ | ಯುಂಗ್ಸ್ | ಯಂಗ್ |
| ಶತಮ್ | ಕೆಂಟುಮ್ | ಹುಂಡ | ಹಂಡ್ರೆಡ್ |
| ಲಿಂಪಾಮಿ | ಲಿಪ್ಪುಸ್ | ಬಿ–ಲೀಬ | ಬಿ–ಲೈಫ್ |
| ಸಪ್ತನ್ | ಸೆಪ್ಟೆಮ್ | ಸಿಬುನ್ | ಸೆವೆನ್ |

### ತಾಲವ್ಯಭಾವ ನಿಯಮ (Palatalisation Law)

ಈ ನಿಯಮವನ್ನು ಅನೇಕ ಭಾಷಾಶಾಸ್ತ್ರಜ್ಞರು ಸ್ವತಂತ್ರವಾಗಿ ಕಂಡುಹಿಡಿದರು. ಈ ನಿಯಮದ ಸಂಶೋಧನೆಗೆ ಮುಂದೆ ಸಂಸ್ಕೃತವು ಇಂಡೋ–ಯೂರೋಪಿಯನ್

ಭಾಷಾಕುಟುಂಬದಲ್ಲೆಲ್ಲ ಪ್ರಾಚೀನತಮವಾದ ಭಾಷೆಯೆಂಬ ಭಾವನೆಯಿತ್ತು. ಸಂಸ್ಕೃತದ 'ಅ'ಕಾರಾಂತ ರೂಪ ಗ್ರೀಕ್, ಲ್ಯಾಟಿನ್‌ಗಳ 'ಎ' ಕಾರಾಂತ ಅಥವಾ 'ಒ' ಕಾರಾಂತ ರೂಪಕ್ಕಿಂತ ಪ್ರಾಚೀನವೆಂದು ನಂಬಲಾಗುತ್ತಿತ್ತು. ಉದಾ. :—

| ಸಂಸ್ಕೃತ | ಗ್ರೀಕ್ | ಲ್ಯಾಟಿನ್ |
|---|---|---|
| ಅಸ್ತಿ | ಎಸ್ತಿ | ಎಸ್ತ್ |
| ಜನಃ | ಜೆನೊಸ್ | ಜೆನಸ್ |
| ಅಪಃ | — | ಒಪಸ್ |
| ದದರ್ಶ | ದೆದೊರ್ಕ | — |
| ಅಸ್ಥಿ | ಒಸ್ಟಿಯೊನ್ | ಒಸ್ |

ಆದರೆ ತಾಲವ್ಯಭಾವ ನಿಯಮದಿಂದ ಈ ಮೊದಲ ಭಾವನೆಗಳು ತಪ್ಪೆಂದು ತೀರ್ಮಾನವಾಗುವಂತಾಯಿತು. ಮೂಲ ಇಂಡೋ-ಯುರೋಪಿಯನ್ ಭಾಷೆಯ ಕಂಠ್ಯ ಸ್ಪರ್ಶವರ್ಣಗಳು ಅನಂತರ ಕಾಲದಲ್ಲಿ ದ್ವಿಪ್ರಕಾರವಾಗಿ ವಿಕಸಿತವಾಗುತ್ತವೆ. ಒಂದು ಪ್ರಕಾರ ಗ್ರೀಕ್, ಲ್ಯಾಟಿನ್ ಮುಂತಾದ ಪಶ್ಚಿಮ ಭಾಷೆಗಳದು ; ಇನ್ನೊಂದು ಪ್ರಕಾರ ಸಂಸ್ಕೃತ ಮೊದಲಾದ ಪ್ರಾಚ್ಯ ಭಾಷೆಗಳದು. ಮೂಲಭಾಷೆಯಲ್ಲಿ ಕಂಠ್ಯವರ್ಣಸಮೇತವಾಗಿದ್ದ ಓಷ್ಠ್ಯ 'ವ' ಶ್ರುತಿ ಪಶ್ಚಿಮ ಭಾಷೆಗಳಲ್ಲಿ ಉಳಿದುಕೊಂಡಿತು (ಲ್ಯಾಟಿನ್—ಕ್ವ, ಕ್ವಿಂಕ್ವೆ, ಇತ್ಯಾದಿ) ಇಲ್ಲವೆ ರೂಪಾಂತರಗೊಂಡಿತು ; ಆದರೆ ಪೂರ್ವಭಾಷೆಗಳಲ್ಲಿ ಅದು ಲುಪ್ತವಾಗಿ ಕೇವಲ ಕ್, ಗ್ ಇತ್ಯಾದಿ ರೂಪದಲ್ಲಿ ನಿಂತಿತು.

| ಲ್ಯಾಟಿನ್ | ಸಂಸ್ಕೃತ |
|---|---|
| ಕ್ವೋಡ್ | ಕದೆ (ವೈದಿಕ) |
| ಕ್ವಿಸ್ | ಕಃ |

ಇಷ್ಟಾದರೂ, ಒಮ್ಮೊಮ್ಮೆ ಕೆಲವುಸಲ ಸಾಧಾರಣ ಕಂಠ್ಯವರ್ಣಗಳ ಬದಲು ತಾಲವ್ಯ (ಚವರ್ಗಾಕ್ಷರ)ಗಳು ಕಾಣುತ್ತವೆ. ಈ ಉದಾರಣೆಗಳನ್ನು ಗ್ರೀಕ್, ಲ್ಯಾಟಿನ್ ಶಬ್ದಗಳೊಂದಿಗೆ ತುಲನೆ ಮಾಡಿದರೆ ಆಗ ಅಲ್ಲೆಲ್ಲ ಗ್ರೀಕ್,ಲ್ಯಾಟಿನ್ ಶಬ್ದಗಳಲ್ಲಿ 'ಎ' ಎಂಬ ತಾಲವ್ಯ ಸ್ವರ ಕಂಠ್ಯಸ್ಪರ್ಶದ ಉತ್ತರದಲ್ಲಿ ಕಾಣುತ್ತದೆ ಆದ್ದರಿಂದ ಮೂಲ ಇಂಡೋ–ಯುರೋಪಿಯನ್ ಭಾಷೆಯ ತಾಲವ್ಯಸ್ವರಪೂರ್ವದ ಕಂಠ್ಯಸ್ಪರ್ಶವರ್ಣವು ಸಂಸ್ಕೃತದಲ್ಲಿ ತಾಲವ್ಯವಾಗುವುದೆಂಬ ನಿಯಮ ಹೊರಪಡುತ್ತದೆ. ಆದರೂ ಸಂಸ್ಕೃತದಲ್ಲಿ ಇಂತಹ ತಾಲವ್ಯೋತ್ತರಸ್ವರ 'ಎ' ಇರುವ ಬದಲು 'ಅ' ಎಂದೇ ಇರುತ್ತದೆ. ಮೂಲಭಾಷೆಯ ಅ, ಇ, ಒ ಈ ಸ್ವರಗಳು ಗ್ರೀಕ್, ಲ್ಯಾಟಿನ್‌ಗಳಲ್ಲಿ ಸುರಕ್ಷಿತವಾಗಿ ಉಳಿದಂತೆ ಸಂಸ್ಕೃತದಲ್ಲಿ ಉಳಿಯದೆ ಎಲ್ಲ 'ಅ' ಎಂದಾಗಿರುವುದೂ ಗೊತ್ತಾಗುತ್ತದೆ.



ಉದಾ :—

| ಇಂಡೋ–ಯುರೋಪಿಯನ್ ಮೂಲಭಾಷೆ | ಗ್ರೀಕ್ | ಲ್ಯಾಟಿನ್ | ಸಂಸ್ಕೃತ |
|---|---|---|---|
| ಕ್ವೇ | ತೇ | ಕ್ವೇ | ಚ |
| ಪಂಕ್ | ಪೆನ್ | ಕ್ವಿಂಕ್ವೆ | ಪಂಚ |
| ಕ್ವಿದ್ | ತಿ | ಕ್ವಿದ್ | ಚಿದ್ |
| ಕುಕಿಸ್ | ... | ... | ಶುಚಿಃ |

ತಾಲವ್ಯಸ್ವರ ಪರದಲ್ಲಿಲ್ಲದಾಗ ಮೂಲಭಾಷೆಯ ಕಂಠ್ಯಸ್ಪರ್ಶಗಳಿಗೆ ಸಂಸ್ಕೃತದಲ್ಲಿ ತಾಲವ್ಯಭಾವ ಬಾರದಿರುವುದಕ್ಕೆ ಉದಾಹರಣೆಗಳು :—

| ಮೂಲಭಾಷೆ | ಗ್ರೀಕ್ | ಲ್ಯಾಟಿನ್ | ಸಂಸ್ಕೃತ |
|---|---|---|---|
| ಕಕುದ್ | ... | ಕಕುಮೆನ್ | ಕಕುಂದ್ |
| ಕ್ವೊತೆರೊಸ್ | ಪೊತೆರೊಸ್ | | ಕತರಃ |
| ಉಗ್ರೊಸ್ | | ಔಗಟ | ಉಗ್ರಃ |

ಈ ನಿಯಮದಿಂದ ಒಂದು ಮಹತ್ವದ ತೀರ್ಮಾನ ಹೊರಪಡುತ್ತದೆ. ಎಲ್ಲ ಇಂಡೋ-ಯುರೋಪಿಯನ್ ಭಾಷಾಕುಟುಂಬದಲ್ಲಿ ಸಂಸ್ಕೃತಕ್ಕೆ ಮಾತೃಸ್ಥಾನವೆನ್ನುವಂತಿಲ್ಲ ; ಹಿರಿಯಕ್ಕನ ಸ್ಥಾನ ಮಾತ್ರ ಶಾಸ್ತ್ರೀಯ.

ಧ್ವನಿನಿಯಮಗಳಂತೆ ಮೇಲಿನ ಪರಿವರ್ತನೆಗಳಷ್ಟೇ ಅಲ್ಲದೆ ಲಿಂಗ–ವಚನ–ವಿಭಕ್ತಿಗಳ, ಆತ್ಮನೇಪದಿ, ಪರಸ್ಮೈಪದಿ ತಿಙನ್ತಪ್ರತ್ಯಯಗಳ, ವಾಕ್ಯರಚನಾಪ್ರಕಾರಗಳ, ಶಬ್ದಾರ್ಥಗಳ ಸಾಮ್ಯವನ್ನೂ ಕೂಡ ವಿವರವಾಗಿ ಭಾಷಾಶಾಸ್ತ್ರಕಾರರು ತೋರಿಸಿ ಗ್ರೀಕ್, ಲ್ಯಾಟಿನ್‌ಗಳ ಭಾಷಾಕುಟುಂಬಕ್ಕೇ ಸಂಸ್ಕೃತಭಾಷೆಯೂ ಸೇರುವುದೆಂಬ ಅಂಶವನ್ನು ನಿರ್ವಿವಾದವಾಗಿ ಸ್ಥಾಪಿಸಿದ್ದಾರೆ.

## ಸಂಸ್ಕೃತ ಮತ್ತು ಅವೆಸ್ತಾ ಭಾಷೆ

ತಮ್ಮ ಮಧ್ಯಏಷ್ಯಾದ ಮೂಲನಿವಾಸದಿಂದ ಆರ್ಯಭಾಷೆಗಳ ಒಂದು ಗುಂಪು ಇರಾನ್‌ಗೂ, ಇನ್ನೊಂದು ಗುಂಪು ಭಾರತಕ್ಕೂ ಅತಿಪ್ರಾಚೀನ ಕಾಲದಲ್ಲಿ ವಲಸೆ ಬಂದಂತೆ ಕಾಣುತ್ತದೆ. ಭೌಗೋಲಿಕ, ಸಾಮಾಜಿಕ ಹಾಗೂ ಐತಿಹಾಸಿಕ ಕಾರಣಗಳಿಂದ ಈ ಎರಡು ಗುಂಪುಗಳ ಭಾಷೆಗಳು ಮೂಲತಃ ಒಂದೇ ಆಗಿದ್ದರೂ ಕಾಲಕ್ರಮದಲ್ಲಿ ಪ್ರತ್ಯೇಕವಾಗಿ ವಿಕಾಸಗೊಂಡವು. ಭಾರತದಲ್ಲಿ ವೈದಿಕಭಾಷೆ ಮತ್ತು ಇರಾನಿನಲ್ಲಿ ಅವೆಸ್ತಾದ ಭಾಷೆ ಹೀಗೆ ಬೇರೆ ಭಾಷೆಗಳೆಂದರೂ ಅವುಗಳಲ್ಲಿ ಅತ್ಯಂತ ನಿಕಟ ಸಾರೂಪ್ಯವಿದೆ. ಧ್ವನಿನಿಯಮಗಳನ್ನು ಅನುಸರಿಸಿ ಒಂದನ್ನೊಂದಕ್ಕೆ ಸರಲವಾಗಿ ಪರಿವರ್ತಿಸುವಷ್ಟು ಅವಕ್ಕೆ ಸಾಮೀಪ್ಯವಿದೆ.

ಉದಾ :—

ಅವೆಸ್ತಾ—

ಯೋ ಯಥಾ ಪುಥ್ರಮ್ ತಉರುನ್‌ಅವ‌ ಹಓಮಮ್ ಬಂದಏತಾ ಮಶ್ಯೋ ।
ಪ್ರ ಆಬ್ಯೋ ತನುಬ್ಯೋ ಹಓಮೋ ವೀಸಃತೇ ಬಏಷಜಾಇ ॥

ವೇದ—

ಯೋ ಯಥಾ ಪುತ್ರಂ ತರುಣಂ ಸೋಮಂ ವಂದೇತ ಮರ್ತ್ಯಃ ।
ಪ್ರ ಆಭ್ಯಃ ತನುಭ್ಯಃ ಸೋಮೋ ಏಶತೇ ಭೇಷಜಾಯ ॥

ಇಂಡೋ–ಇರಾನಿಯನ್ ಭಾಷೆಯ ಕಾಲಕ್ಕಾಗಲೇ ಮೂಲಭಾಷೆಯ ಎ, ಒ, ಅ ಗಳು ಹಿಂದಾಗಿ ಅವುಗಳ ಬದಲು ಕೇವಲ ಅ–ಆ ಗಳು ಒಂದಾಗಿರುವುದನ್ನು ಕಾಣುತ್ತೇವೆ. ಗ್ರೀಕ್‌ನ 'ಎಪಿ ಪೆತೆತಃ' ಎನ್ನುವುದು ಸಂಸ್ಕೃತದ 'ಅಪಿ ಪತತಿ' ಮತ್ತು ಅವೆಸ್ತಾದ 'ಅಃಪಿ ಅಪತತ್' ಎಂಬುದಕ್ಕೆ ಸಂವಾದಿಯಾಗಿದೆ ಇನ್ನೂ ಕೆಲವು ಉದಾಹರಣೆಗಳನ್ನು ನೋಡಿ—

| ಸಂಸ್ಕೃತ | | ಅವೆಸ್ತಾ |
|---|---|---|
| ಶಫ | — | ಸಫ |
| ಸಖಾ | — | ಹಖಿ |
| ಭೂಮಿ | — | ಬೂಮಿ |
| ಧೇನು | — | ದಏನು |
| ಘರ್ಮ | — | ಗರ್ಮ |
| ಸಪ್ತ | — | ಹಪ್ತ |
| ಸಿಂಧು | — | ಹಿಂದು |
| ಶರತ್ | — | ಸರದ್ರ |
| ನಭಸ್ | — | ನಬಹ |

ವೇದಗಳ ಕಾಲ ಸುಮಾರು ಕ್ರಿ.ಪೂ. 1500 ಎಂದೂ ಅವೆಸ್ತಾದ್ದು ಸುಮಾರು ಕ್ರಿ.ಪೂ. 700 ಎಂದೂ ತಿಳಿಯುತ್ತಾರೆ. ಹೀಗೆ ಪ್ರಾಚೀನ ಆರ್ಯಸಂಸ್ಕೃತಿಯ ಅಭ್ಯಾಸಕ್ಕೆ ಇವೆರಡೂ ಭಾಷೆಗಳು ತುಂಬಾ ಪ್ರಯೋಜಕವಾಗಿದೆ. ವೇದಗಳು ಭಾರತೀಯ ಧರ್ಮ ಗ್ರಂಥವಾಗಿರುವಂತೆ ಝೂರಾಸ್ತರ್ ಎಂಬ ಧರ್ಮಗುರುವಿನ ಬೋಧೆಯೇ ಝೆಂಡ್. ಅವೆಸ್ತಾ. ಅವೆಸ್ತಾಭಾಷೆಯೇ ಮುಂದೆ ಪಾರ್ಸೀ ಮುಂತಾದ ಅವಸ್ಥಾಂತರಗಳನ್ನು ಪಡೆಯುತ್ತದೆ. ಭಾರತದಲ್ಲಿ ವೈದಿಕಭಾಷೆಯೇ ಮಾಗಧೀ ಮುಂತಾದ ಅವಸ್ಥಾಂತರಗಳನ್ನು ತಳೆಯುವಂತೆ.



## ಭಾರತೀಯ ಆರ್ಯಭಾಷಾಕುಟುಂಬ

ಈ ಭಾಷಾಕುಟುಂಬದ ಸಾಹಿತ್ಯವನ್ನು ಮೂರು ಭಾಗಗಳಾಗಿ ವಿಂಗಡಿಸುತ್ತಾರೆ :—

(1) ಪ್ರಾಚೀನ ಭಾರತೀಯ ಆರ್ಯಭಾಷಾಕಾಲ (ಕ್ರಿ.ಪೂ. 1500—ಕ್ರಿ.ಪೂ. 500)
(2) ಮಧ್ಯಕಾಲೀನ ಆರ್ಯಭಾಷಾಕಾಲ (ಕ್ರಿ.ಪೂ. 500—ಕ್ರಿ.ಶ. 1000)
(3) ಆಧುನಿಕ ಆರ್ಯಭಾಷಾಕಾಲ (ಕ್ರಿ.ಶ. 1000—ಇಂದಿನವರೆಗೆ)

ಚತುರ್ವೇದಗಳು ಮೊದಲನೆಯ ಕಾಲದವು; ಸೂತ್ರಗಳು, ರಾಮಾಯಣ, ಮಹಾಭಾರತ ಮತ್ತು ಪ್ರಾಚೀನ ಕಾವ್ಯ ಹಾಗು ಶಿಲಾಲೇಖಗಳು ಎರಡನೆಯ ಕಾಲದವು. ಮೂರನೆಯ ಕಾಲದಲ್ಲೂ ಬೇಕಾದಷ್ಟು ಶಾಸ್ತ್ರಕಾವ್ಯಾದಿಗಳ ರಚನೆ ಸಂಸ್ಕೃತಭಾಷೆಯಲ್ಲಿ ಆಗಿದೆ, ಆದರೆ ಮೊದಲನೆಯ ಕಾಲದಲ್ಲಿ ನಿಸ್ಸಂಶಯವಾಗಿ ಜನರ ಆಡು ನುಡಿಯಾಗಿದ್ದ ವೈದಿಕಭಾಷೆ ಮುಂದೆ ಕೇವಲ ಸಾಹಿತ್ಯಭಾಷೆಯಾಗುತ್ತ ನಡೆದು ಕಡೆಗೆ ಅತ್ಯಂತ ಕೃತ್ರಿಮರೂಪವನ್ನು ತಾಳಿ ಪಂಡಿತಭಾಷೆಯಾದುದನ್ನು ಅದರ ಇತಿಹಾಸ ತೋರಿಸುತ್ತದೆ. ಸುಮಾರು ಕ್ರಿ.ಶ. 12ನೆಯ ಶತಮಾನದವರೆಗೂ ಸಂಸ್ಕೃತಕ್ಕೆ ರಾಜಭಾಷೆಯ ಪ್ರಶಸ್ತಿಯೂ ದೊರೆತಿತ್ತು.

ಮಧ್ಯಕಾಲೀನ ಆರ್ಯಭಾಷಾಕಾಲದಲ್ಲಿ ಪಾಳಿ ಮತ್ತು ಪ್ರಾಕೃತಭಾಷೆಗಳ ಉದಯವನ್ನು ನೋಡುತ್ತೇವೆ. ಇವುಗಳಲ್ಲೂ ಪ್ರಾಚೀನ ಪ್ರಾಕೃತ (ಪಾಳಿ), ಮಧ್ಯ ಪ್ರಾಕೃತ ಮತ್ತು ಅಂತ್ಯ ಪ್ರಾಕೃತ ಅಥವಾ ಅಪಭ್ರಂಶ ಎಂಬ ಕಾಲಭೇದಗಳನ್ನು ಮಾಡಿಕೊಳ್ಳಬಹುದು.

ಸುಮಾರು ಕ್ರಿ.ಶ. 1000 ದ ವೇಳೆಗೆ ಆಧುನಿಕ ಉತ್ತರ ಭಾರತೀಯ ಭಾಷೆಗಳಾದ ಬಂಗಾಳೀ, ಹಿಂದೀ, ಮರಾಠಿ, ಗುಜರಾತಿ ಮುಂತಾದವು ಅಪಭ್ರಂಶ ಸ್ವರೂಪವನ್ನು ಬಿಟ್ಟು ಸ್ವತಂತ್ರ ಭಾಷೆಯ ಸ್ವರೂಪವನ್ನು ಮುಟ್ಟುತ್ತವೆ.

## ಪ್ರಾಚೀನ ಭಾರತೀಯ ಆರ್ಯಭಾಷೆ

ಇದರಲ್ಲಿ ಪಾಣಿನಿಪೂರ್ವದ ಭಾಷೆಗೆ ವೈದಿಕ ಸಂಸ್ಕೃತವೆಂದೂ, ಪಾಣಿನ್ಯುತ್ತರ ಭಾಷೆಗೆ ಲೌಕಿಕ ಸಂಸ್ಕೃತವೆಂದೂ ಹೇಳುವುದುಂಟು. ಇವೆರಡು ಭಾಷೆಗಳಿಗೂ ತುಂಬಾ ಅಂತರಗಳನ್ನು ನೋಡಬಹುದು :—

1. ಅಕಾರಾಂತ ಪುಲ್ಲಿಂಗ ಶಬ್ದಗಳಲ್ಲಿ 'ದೇವಾಃ' ಎನ್ನುವಂತೆ 'ದೇವಾಸಃ' ಎಂಬ ಪ್ರಥಮಾಬಹುವಚನರೂಪ ವೈದಿಕ.

2. ತೃತೀಯಾಬಹುವಚನದಲ್ಲಿ 'ದೇವೈಃ' ಎನ್ನುವಂತೆ 'ದೇವೇಭಿಃ' ಎಂಬ ರೂಪ ವೈದಿಕ.

3. ಅಕಾರಾಂತ ಪ್ರಥಮಾದ್ವಿವಚನರೂಪ ವೈದಿಕಭಾಷೆಯಲ್ಲಿ 'ಆ' ಪ್ರತ್ಯಯದಿಂದ ಆಗುತ್ತದೆ—'ಅಶ್ವಿನಾ'; ಇಕಾರಾಂತಕ್ಕೆ 'ಈ' ಪ್ರತ್ಯಯದಿಂದ ಆಗುತ್ತದೆ—'ಸಂಪ್ಸುತೀ,' ಲೌಕಿಕಭಾಷೆಯಲ್ಲಿ ಇವು 'ಅಶ್ವಿನೌ'. 'ಸಂಪ್ಸುತ್ಯೌ' ಎಂದಾಗುತ್ತವೆ.

4. ಸಪ್ತಮೀ ಏಕವಚನ ಪ್ರತ್ಯಯ ವೈದಿಕಭಾಷೆಯಲ್ಲಿ ಲುಪ್ತವಾಗಬಹುದು—'ವ್ಯೋಮನ್' ಲೌಕಿಕ ಭಾಷೆಯಲ್ಲಿ ಆಗುವುದಿಲ್ಲ—'ವ್ಯೋಮ್ನಿ' ಅಥವಾ 'ವ್ಯೋಮನಿ.'

5. ವೈದಿಕಭಾಷೆಯಲ್ಲಿ ಅಕಾರಾಂತ ನಪುಂಸಕಲಿಂಗ ಶಬ್ದಗಳ ಏಕವಚನದಲ್ಲಿ 'ಆ' ಮತ್ತು 'ಆನಿ' ಎರಡೂ ರೂಪಗಳಾಗುತ್ತವೆ. 'ವಿಶ್ವಾ', 'ಅದ್ಭುತಾ' ಲೌಕಿಕ ಭಾಷೆಯಲ್ಲಿ 'ವಿಶ್ವಾನಿ', 'ಅದ್ಭುತಾನಿ' ಎಂಬ ರೂಪಗಳಷ್ಟೇ ಸಾಧು.

6. ವೈದಿಕ ಕ್ರಿಯಾಪದಗಳಲ್ಲಿ 'ಮಸಿ—ಮಃ' ಎಂಬ ಎರಡೂ ಪ್ರತ್ಯಯಗಳಿವೆ. ಉದಾಹರಣೆಗೆ, 'ಇಮಸಿ—ಇಮಃ', 'ಸ್ಮಸಿ—ಸ್ಮಃ', 'ಮಿನೀಮಸಿ'—ಮಿನೀಮಃ.' ಲೌಕಿಕಭಾಷೆಯಲ್ಲಿ ಎರಡನೆಯದೊಂದೇ ಸರಿ. ಅಲ್ಲದೆ ಮುಂದಿನ 'ಹಿ' ಪ್ರತ್ಯಯದ ಬದಲಿಗೆ 'ಧಿ' ವೈದಿಕಭಾಷೆಯಲ್ಲಿ ಕಾಣುತ್ತದೆ—ಏಧಿ—ಏಹಿ, ಶೃಣುಧಿ, ಶ್ರುಧಿ—ಶೃಣು.

7. ವೈದಿಕ ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತ, ತನ, ತಾತ್ ಪ್ರತ್ಯಯಗಳಿವೆ—ಶೃಣೋತ, ಸುನೋತನ, ಕೃಣುತಾತ್, ಇತ್ಯಾದಿ.

8. ಪಾಣಿನಿಯ 'ತುಮುನ್' ಪ್ರತ್ಯಯಾರ್ಥದಲ್ಲಿ 'ತವೈ', 'ತವೇ' ಮುಂತಾದ ನಾನಾ ರೂಪಗಳೂ, 'ತ್ವಾ' ಎಂಬರ್ಥದಲ್ಲಿ 'ತ್ವೀ' ಮುಂತಾದ ನಾನಾ ಪರ್ಯಾಯಗಳೂ ಕಾಣಬರುತ್ತವೆ—ಗಂತವೈ, ಗಂತವೇ—'ಗಂತುಮ್'. 'ಸ್ನಾತ್ವೀ'—'ಸ್ನಾತ್ವಾ'.

9. ವೇದದಲ್ಲಿರುವ ಲೇಟ್ ಲಕಾರವೇ ಸಂಸ್ಕೃತದಲ್ಲಿ ಇಲ್ಲ. ಉದಾ.—ತಾರಿಷತ್, ಭವಾತಿ, ಪತಾತಿ, ಚರಾತಿ.

10. ಅನೇಕ ವೈದಿಕ ಶಬ್ದಗಳ ನಡುವೆ ಅಥವಾ ಕಡೆಗೆ ಬರುವ 'ಕ್ಯ', 'ಅಮ' ಮುಂತಾದವು ಲೌಕಿಕಭಾಷೆಯಲ್ಲಿಲ್ಲ.

11. ವೈದಿಕಭಾಷೆಯಲ್ಲಿಯ ರೇಫಗಳು ಮುಂದೆ ಲಕಾರವಾಗುತ್ತವೆ. ಉದಾ.—ಮ್ರುಚ್, ರಭ್, ರೋಮ, ರೋಹಿತ, ಇವು ಕ್ರಮವಾಗಿ ಮ್ಲುಚ್, ಲಭ್, ಲೋಮ, ಲೋಹಿತ ಎಂದಾಗುತ್ತವೆ.

12. ಶಬ್ದಸಂಪತ್ತಿಯಲ್ಲಿಯೂ ತುಂಬಾ ಪರಿವರ್ತನೆ ಕಾಣಬರುತ್ತದೆ. ಈಮ್, ವಿಚರ್ಷಣೀ, ಉರ್ಗಿಯಾ, ರಿಕ್ವನ್, ಉಷ್ಟಿ, ಊತಿ ಮುಂತಾದ ವೈದಿಕ ಶಬ್ದಗಳು ಸಂಸ್ಕೃತದಲ್ಲಿ ಅಪ್ರಯುಕ್ತ.

13. ಕೆಲವು ವೈದಿಕ ಶಬ್ದಗಳಿಗೆ ಲೌಕಿಕ ಸಂಸ್ಕೃತದಲ್ಲಿ ಅರ್ಥಾಂತರಗಳು ಬಂದಿವೆ. 'ಅರಾತಿ' ಇದರ ಕೃಪಣಾರ್ಥ ಲೌಕಿಕ ಭಾಷೆಯಲ್ಲಿಲ್ಲ. 'ಅರಿ' ಇದರ ಈಶ್ವರಾರ್ಥ ಲೌಕಿಕ ಭಾಷೆಯಲ್ಲಿಲ್ಲ. ವೇದದಲ್ಲಿಯ ಇವಾರ್ಥದ 'ನ' ಲೌಕಿಕ ಭಾಷೆಯಲ್ಲಿ ದೃಷ್ಟವಲ್ಲ.



14. ಛಂದಸ್ಸು ಮತ್ತು ಅಲಂಕಾರಗಳ ವೈವಿಧ್ಯದಲ್ಲಿಯೂ ಎರಡಕ್ಕೂ ತುಂಬಾ ಅಂತರವಿದೆ.

15. ವೈದಿಕಭಾಷೆಯಲ್ಲಿ ಧಾತುವಿನಿಂದ ಉಪಸರ್ಗವನ್ನು ಬೇರ್ಪಡಿಸಿ ನಡುವೆ ಬೇರೆ ಪದಗಳನ್ನು ಹೇಳಬಹುದು. ಲೌಕಿಕ ಭಾಷೆಯಲ್ಲಿ ಬೇರ್ಪಡಿಸುವಂತಿಲ್ಲ. ಉದಾ.—'ಆ ಸತ್ಯೇನ ರಜಸಾ ವರ್ತಮಾನಃ.'

16. ವೈದಿಕಭಾಷೆಯಲ್ಲಿ ಕ್ರಮಬದ್ಧವಾಗಿರುವ ಉದಾತ್ತಾನುದಾತ್ತಸ್ವರಿತಸ್ವರಗಳಿಗೆ ಲೌಕಿಕ ಭಾಷೆಯಲ್ಲಿ ಪ್ರಾಶಸ್ತ್ಯವಿಲ್ಲ.

17. ವೈದಿಕಭಾಷೆಯ ಸಂಧಿಕಾರ್ಯದಲ್ಲಿ ನಿಯಮಬದ್ಧತೆ ಕಡಿಮೆ.

18. ವೈದಿಕಭಾಷೆಯಲ್ಲಿ ನಾಲ್ಕೇ ಸಮಾಸಗಳು ಹೆಚ್ಚಾಗಿವೆ—ತತ್ಪುರುಷ, ಕರ್ಮಧಾರಯ, ಬಹುವ್ರೀಹಿ ಮತ್ತು ದ್ವಂದ್ವ. ಲೌಕಿಕ ಭಾಷೆಯಲ್ಲಿ ದ್ವಿಗು ಮತ್ತು ಅವ್ಯಯೀಭಾವಗಳು ಹೆಚ್ಚಿನವು.

19. ವೇದದಲ್ಲಿರುವ 'ಳ' ವರ್ಣ ಲೌಕಿಕ ಸಂಸ್ಕೃತದಲ್ಲಿ ಇಲ್ಲ.

20. ಸ್ವರಭಕ್ತಿಯಿಂದಾದ ರೂಪಗಳು ವೇದದಲ್ಲಿ ಅಧಿಕ—ತನುವಃ, ತನ್ವಃ, ಸುವಃ, ಸ್ವಃ, ಸುವರ್ಗಃ, ಸ್ವರ್ಗಃ, ಇತ್ಯಾದಿ. ಲೌಕಿಕ ಭಾಷೆಯಲ್ಲಿ ಸ್ವರರಹಿತ ರೂಪವೇ ಅಧಿಕ.

ಹೀಗೆ ಎರಡು ಭಾಷೆಗಳಲ್ಲಿ ಏಕತೆಯಿದ್ದರೂ ರಚನೆ—ರೂಪ—ಧ್ವನಿಗಳಲ್ಲಿ ಕಾಲಭೇದದಿಂದ ಸ್ಪಷ್ಟ ವ್ಯತ್ಯಾಸಗಳಾಗಿರುವುದನ್ನು ನೋಡಬಹುದು.

## ಸಂಸ್ಕೃತವು ಜನಸಾಮಾನ್ಯರ ಆಡುಭಾಷೆಯಾಗಿತ್ತೆ ?

ಪ್ರಾಕೃತಭಾಷೆ ಜನಸಾಮಾನ್ಯರ ಆಡುನುಡಿಯಾಗಿದ್ದು ಅವರ ಪರಿಷ್ಕರಣವೇ ಸಂಸ್ಕೃತವೆಂಬುದು ಕೆಲವರ ಮತ. ಈ ಮತದಂತೆ ಸಂಸ್ಕೃತ ವಿದ್ವಜ್ಜನರ ಭಾಷೆಯಾಗಬಹುದೇ ಹೊರತು ಎಂದೂ ಜನಸಾಮಾನ್ಯರ ನುಡಿಯಾಗಿರುವುದು ಸಾಧ್ಯವಿಲ್ಲ. ಆಧುನಿಕ ವಿದ್ವಾಂಸರಲ್ಲಿ ವೆಬರ್, ಹೋರ್ನ್ಲೆ, ಗ್ರಿಯರ್ಸನ್ ಮುಂತಾದವರು ಈ ವಾದದ ಅನುಯಾಯಿಗಳು.

ಆದರೆ ಭಾಷಾಶಾಸ್ತ್ರದ ಐತಿಹಾಸಿಕ ಪೂರ್ವವಿಚಾರಣೆ ಈ ವಾದವನ್ನು ಅಲ್ಲಗಳೆಯಲು ಸಮರ್ಥವಾಗುತ್ತದೆ. ಯಾರೂ ಎಂದೂ ಒಂದು ನೂತನ ಭಾಷೆಯನ್ನು ಸೃಷ್ಟಿಸಿರಲಾರರೆಂಬುದು ಈ ಶಾಸ್ತ್ರದ ಪ್ರಮೇಯವಾಗಿದೆ. ಸಂಸ್ಕೃತವು ನಿಜವಾಗಿಯೂ ಅನೇಕ ಶತಮಾನಗಳಷ್ಟು ದೀರ್ಘಕಾಲ ಜನಸಾಮಾನ್ಯರ ಆಡುನುಡಿಯಾಗಿದ್ದುದಕ್ಕೆ ಪುಷ್ಟಿಯನ್ನೀಯುವ ಇತರ ಪ್ರಮಾಣಗಳನ್ನೂ ಹೀಗೆ ಹೇಳಬಹುದು :—

1. ಪಾಣಿನಿಗೆ ಮುಂಚೆ ಸಂಸ್ಕೃತ ಜನರ ಆಡುನುಡಿಯಾಗಿತ್ತು ; ಬೇರಾವ ಭಾಷೆಯೂ ವ್ಯವಹಾರಕ್ಕೆ ಭಾರತದಲ್ಲಿರಲಿಲ್ಲ.

2. ಚರಕಸಂಹಿತೆಯ ಕಾಲದಲ್ಲಿಯೂ ಸಂಸ್ಕೃತವೇ ಜನರ ನುಡಿಯಾಗಿತ್ತು.

3. ವಾತ್ಸ್ಯಾಯನನ ಕಾಮಸೂತ್ರದಲ್ಲಿ ಸಭ್ಯರು ಸಂಸ್ಕೃತವನ್ನು ಬಲ್ಲವರಾಗಿರಬೇಕೆಂಬ ಮಾತು ಬರುತ್ತದೆ.

4. ಹ್ಯೂ-ಎನ್-ತ್ಸಾಂಗನ ಹೇಳಿಕೆಯಂತೆಯೂ ಜನರು ವಾದವಿವಾದಕ್ಕೆಲ್ಲ ಸಂಸ್ಕೃತವನ್ನು ಬಳಸುತ್ತಿದ್ದರು.

5. ಜೈನಲೇಖಕ ಸಿದ್ಧರ್ಷಿಯು (ಕ್ರಿ.ಶ. 906) ಸಂಸ್ಕೃತವೇ ಎಲ್ಲಕ್ಕಿಂತ ಸರಳವಾದ ಭಾಷೆಯೆನ್ನುತ್ತಾನೆ.

6. ಜನಸಾಮಾನ್ಯರ ಮಾಟಮಂತ್ರಗಳಿಗೂ ಸಂಸ್ಕೃತಭಾಷೆ ಬಳಕೆಯಾಗುತ್ತಿದ್ದಿತು.

7. ಧನುರ್ವಿದ್ಯೆ, ಗಾನವಿದ್ಯೆ, ಶಿಲ್ಪಕಲೆ, ನಾಟ್ಯವಿದ್ಯೆ, ರಾಜನೀತಿ ಮುಂತಾದ ಲೌಕಿಕ ವಿಷಯಗಳಲ್ಲಿ ಶಿಕ್ಷಣವನ್ನು ಸಂಸ್ಕೃತಭಾಷೆಯಿಂದಲೇ ಕೊಡುತ್ತಿದ್ದುದಕ್ಕೆ ಆಯಾ ಗ್ರಂಥಗಳೇ ಸಾಕ್ಷಿಯಾಗಿವೆ.

8. ಪಾಣಿನಿಯು ಸಂಸ್ಕೃತವನ್ನು 'ಭಾಷಾ' ಎಂದೇ ಹೆಸರಿಸಿದ್ದಾನೆ. ಆಡದಿದ್ದುದು 'ಭಾಷಾ' ಎನಿಸಲಾರದು. ಆದ್ದರಿಂದ ನಿಶ್ಚಿತವಾಗಿಯೂ ಸಂಸ್ಕೃತವು ವ್ಯಾವಹಾರಿಕ ಭಾಷೆಯೇ ಆಗಿದ್ದಿರಬೇಕು.

9. ಯಾಸ್ಕನ ನಿರುಕ್ತದಲ್ಲಿಯೇ 'ಪ್ರಾಚ್ಯೇಷು', 'ಉದೀಚ್ಯೇಷು' ಇತ್ಯಾದಿ ಪ್ರಾಂತೀಯ ಭಾಷಾಭೇದಗಳ ಉಲ್ಲೇಖವಿದೆ. ವ್ಯಾವಹಾರಿಕ ಭಾಷೆಯಲ್ಲಿ ಮಾತ್ರ ಪ್ರಾಂತೀಯ ಭೇದಗಳು ಬರುವುದು ಸಾಧ್ಯ.

10. ಪಾಣಿನಿಯು ಅಭಿವಾದನ ಕಾಲದಲ್ಲಿ ಸಂಬೋಧಿಸುವಾಗ ಹೇಗೆ ಹೇಳಬೇಕೆಂದು ವಿಧಿಸುವಾಗ ಶೂದ್ರರನ್ನೂ ಹೆಸರೆತ್ತಿ ಹೇಳುತ್ತಾನೆ. ಶೂದ್ರರಿಗೂ ಸಂಸ್ಕೃತ ತಿಳಿಯುತ್ತಿದ್ದ ವಿಷಯ ಇದರಿಂದ ಸೂಚಿತವಾಗುತ್ತದೆ.

11. ವ್ಯಾಕರಣವು ಭಾಷೆಯನ್ನು ನಿರ್ಮಾಣ ಮಾಡುವುದಿಲ್ಲ ; ವ್ಯವಹಾರದಲ್ಲಿರುವ ಶಬ್ದಗಳ ಸಾಧೂಚ್ಚಾರಣೆಯನ್ನು ಕಲಿಸುತ್ತದೆಂದು ಪತಂಜಲಿ ಸ್ಪಷ್ಟವಾಗಿ ಮಹಾಭಾಷ್ಯದಲ್ಲಿ ಹೇಳಿದ್ದಾನೆ.

12. ಬಿಲ್ಹಣನು (ಕ್ರಿ. ಶ. 1060) ಕಾಶ್ಮೀರದ ಗಂಡಸರೂ, ಹೆಂಗಸರೂ ಸಂಸ್ಕೃತ, ಪ್ರಾಕೃತಗಳೆರಡರಲ್ಲೂ ಪ್ರಾವೀಣ್ಯ ಪಡೆದಿದ್ದರೆಂದು ವರ್ಣಿಸುತ್ತಾನೆ.



13. ಬಾಲಕರ ಪಾಠಕ್ಕೆಂದು ರಚಿತವಾದ 'ಪಂಚತಂತ್ರ' ಸಂಸ್ಕೃತದಲ್ಲಿದೆ. ಹೀಗೆ ಎಲ್ಲ ಆಧಾರಗಳನ್ನೂ ಗಮನಿಸಿದರೆ ಸಂಸ್ಕೃತವು ಜನಭಾಷೆಯಾಗಿತ್ತೆಂಬ ಮಾತು ಸ್ಪಷ್ಟವಾಗುತ್ತದೆ.

## ಶಬ್ದಗಳ ಭಾಷಾಶಾಸ್ತ್ರೀಯ ನಿರ್ವಚನ

ಯಾವುದೇ ಭಾಷೆಯ ಶಬ್ದಗಳ ಶಾಸ್ತ್ರೀಯ ನಿರ್ವಚನಕ್ಕೆ ನಾವು ಈ ಮೊದಲೇ ನೋಡಿದಂತೆ ಧ್ವನಿನಿಯಮಗಳ ಸಮಗ್ರ ಪರಿಚಯ ಅತ್ಯಗತ್ಯವಾಗಿರುತ್ತದೆ. ಭಾಷಾಶಾಸ್ತ್ರದ ಆರಂಭವಾದುದೇ ಮನೋರಂಜಕವಾದ ನಿರ್ವಚನಗಳಿಂದ ಎನ್ನಬಹುದು. ಮೊದಮೊದಲು ಭಾಷಾಶಾಸ್ತ್ರವೆಂದರೆ ವ್ಯುತ್ಪತ್ತಿ ವಿಚಾರವೆಂಬ ಭಾವನೆಯೇ ಇತ್ತು.

ಪ್ರತಿಯೊಂದು ಶಬ್ದಕ್ಕೂ ತನ್ನದೇ ಆದ ಒಂದು ಇತಿಹಾಸವಿರುತ್ತದೆಂಬುದನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು. ಒಂದು ಅಸ್ಪಷ್ಟ ಶಬ್ದದ ಇತಿಹಾಸವನ್ನರಿಯಲು ಹೊರಟ ಸಂಶೋಧಕನು ಅದರ ಮೂಲಘಟಕಗಳನ್ನೆಲ್ಲ ಹುಡುಕಿ ತೆಗೆಯಬೇಕಾಗುತ್ತದೆ. ಯಾಸ್ಕನ ನಿರುಕ್ತದ ಮೇಲೆ ಭಾಷ್ಯ ಬರೆದ ದುರ್ಗಾಚಾರ್ಯನು ಗ್ರಂಥಾರಂಭದಲ್ಲಿಯೇ ಹೀಗೆ ಹೇಳಿದ್ದಾನೆ:— "ತ್ರಿವಿಧಾ ಹಿ ಶಬ್ದವ್ಯವಸ್ಥಾ—ಪ್ರತ್ಯಕ್ಷವೃತ್ತಯಃ ಪರೋಕ್ಷವೃತ್ತಯಃ ಅತಿಪರೋಕ್ಷವೃತ್ತಯಶ್ಚ. ತತ್ರೋಕ್ತಕ್ರಿಯಾಃ ಪ್ರತ್ಯಕ್ಷವೃತ್ತಯಃ, ಅಂತರ್ಲೀನಕ್ರಿಯಾಃ ಪರೋಕ್ಷವೃತ್ತಯಃ, ಅತಿಪರೋಕ್ಷವೃತ್ತಿಷು ಶಬ್ದೇಷು ನಿರ್ವಚನಾಭ್ಯುಪಾಯಃ, ತಸ್ಮಾತ್ಪರೋಕ್ಷವೃತ್ತಿತಾಮಾಪಾದ್ಯ ಪ್ರತ್ಯಕ್ಷವೃತ್ತಿನಾ ಶಬ್ದೇನ ನಿರ್ವಕ್ತವ್ಯಾಃ, ತದ್ಯಥಾ ನಿಘಂಟವಃ ಇತ್ಯತಿಪರೋಕ್ಷವೃತ್ತಿಃ". ಒಂದೇ ಭಾಷೆಯ ಪರಿಮಿತಿಯಲ್ಲಿ ನಮ್ಮ ಪ್ರಾಚೀನ ಶಾಸ್ತ್ರಕಾರರು ಶಬ್ದನಿರ್ವಚನ ಮಾಡಿದರೆ, ಅದನ್ನು ಇತರ ಭಾಷೆಗಳಿಗೂ ವಿಸ್ತರಿಸಿ ನಿರ್ವಚನವನ್ನು ಸಾಧಿಸುವುದು ಇಂದಿನ ಭಾಷಾಶಾಸ್ತ್ರಕಾರರ ಗುರಿ. ಒಂದು ಪ್ರಾಚೀನ ಶಬ್ದದ ಪ್ರತ್ಯಕ್ಷವೃತ್ತಿ ತಿಳಿಯಲು ಅದರ ಪರೋಕ್ಷ ಹಾಗು ಅತಿಪರೋಕ್ಷ ಪೂರ್ವೇತಿಹಾಸವನ್ನು ಮೊದಲು ಅವಲೋಕಿಸಬೇಕಾಗುತ್ತದೆ. ಹೀಗೆ ಅವಲೋಕಿಸಿದಾಗ ಒಂದೊಂದು ಶಬ್ದಕ್ಕೂ ಒಂದು ಪುರಾಣಕಥೆಯೇ ಇದೆಯೋ ಎನಿಸುವಂತೆ ಅಧ್ಯಯನ ಸಾಗುತ್ತದೆ. ಒಂದು ಉದಾಹರಣೆಯನ್ನು ನೋಡಿ. ಇಂದು 'ಗವೇಷಣೆ' ಎಂಬುದನ್ನು ಸಂಶೋಧನೆಯೆಂಬರ್ಥದಲ್ಲಿ ಬಳಸುತ್ತಾರಷ್ಟೇ ; ಪ್ರಾರಂಭದಲ್ಲಿ ಇದರರ್ಥ 'ಗೋವುಗಳನ್ನು ಹುಡುಕುವುದು' ಎಂದಿಷ್ಟೇ ಇತ್ತು. 'ಜುಗುಪ್ಸಾ' ಶಬ್ದದಲ್ಲಿ ಘೃಣಾರ್ಥಕ ಸ್ಪಷ್ಟವಿರುವ 'ಗುಪ್' ಧಾತು ಮೊದಲು (1) ಗೋವುಗಳನ್ನು ರಕ್ಷಿಸುವುದು, (2) ರಕ್ಷಣೆ, (3) ಮುಚ್ಚಿಡುವುದು (ಏಕೆಂದರೆ ಮುಚ್ಚಿಡುವುದೂ ರಕ್ಷಣೆಯ ಒಂದು ವಿಧಾನ). ಮತ್ತು ಕಡೆಗೆ (4) ಕಡೆಗಣಿಸುವುದು (ಮುಚ್ಚಿಟ್ಟಿದ್ದರ ಬಗೆಗೆ ಘೃಣೆ ಸಹಜ) ಎಂಬ ರೀತಿ ಅರ್ಥವಿಸ್ತಾರವನ್ನು ಪಡೆಯುತ್ತದೆ.

ಒಂದು ಭಾಷೆಯ ಶಬ್ದಗಳು ಹೀಗೆ ಕಾಲಕಾಲಕ್ಕೆ ಅರ್ಥವಲಯದಲ್ಲಿ ಸಂಕೋಚ-ವಿಸ್ತಾರಗಳನ್ನು ಪಡೆಯುತ್ತಲೇ ಇರುತ್ತವೆ. ನಾವು ಇಂದು ರೂಢಿಯಾಗಿ ಬಳಸುವ 'ಅಭ್ಯಾಸ' ಶಬ್ದದ

ಮೂಲಾರ್ಥ (ಅಭಿ + ಅಸನ). "ಶೂರೋ ಅಸ್ತೇವ ಶತ್ರೂನ್ ಬಾಧತೇ" (ಋಗ್ವೇದ 6·
64·3) ಎಂಬ ವಾಕ್ಯದಲ್ಲಿ 'ಅಸ್ತಾ' ಎಂದರೆ ಬಾಣಪ್ರಯೋಗಮಾಡುವವ ಎಂದೇ ಅರ್ಥ.
ಹಾಗೆಯೇ ಇದು ಹಣ, ಶ್ರೇಷ್ಠವಸ್ತು ಇತ್ಯಾದಿ ಅರ್ಥಗಳಲ್ಲಿ ಪ್ರಸಿದ್ಧವಾದ 'ದ್ರವ್ಯ' ಶಬ್ದ
ಪ್ರಾರಂಭದಲ್ಲಿ 'ಧ್ರು' ಅಥವಾ ಮರದಿಂದ ಮಾಡಲ್ಪಟ್ಟ ವಸ್ತುವೆಂಬ ಅರ್ಥವನ್ನೇ ಪಡೆದಿತ್ತು.

ಒಂದು ಶಬ್ದದ ಬೇರು ಇನ್ನೊಂದು ಭಾಷೆಯ ಶಬ್ದದಲ್ಲಿ ಸಿಕ್ಕಬಹುದು. ಏನೂ
ಸಂಬಂಧವಿಲ್ಲದಂತೆ ಕಾಣುವ ಶಬ್ದಗಳೂ ಒಂದೇ ಮೂಲದಿಂದ ಬಂದುವಾಗಿರಬಹುದು.
ಸಂಸ್ಕೃತದ 'ಸ್ವಸೃ' ಮತ್ತು ಫಾರಸೀಭಾಷೆಯ 'ಖಾಹರ್' ಒಂದೇ ಶಬ್ದಮೂಲವುಳ್ಳವು.
ಸರೂಪವಾದ ಶಬ್ದಗಳು ಬೇರೆ ಬೇರೆ ಮೂಲದಿಂದ ಬಂದುವಾಗಿಯೂ ಇರಬಹುದು.
ಉದಾಹರಣೆಗೆ ಇಂಗ್ಲಿಷಿನ Sound—ಸ್ವಸ್ಥ, Sound—ಶಬ್ದ ಎಂಬ ಪದಗಳು ಭಿನ್ನ
ಮೂಲಗಳಾಗಿವೆ. ಕೇವಲ ರೂಪಸಾಮ್ಯಕ್ಕಿಂತ ಅರ್ಥಸಾಮ್ಯವನ್ನು ಗಮನಿಸಿಯೇ
ಶಬ್ದನಿರ್ವಚನ ಮಾಡಬೇಕು. ಇಲ್ಲದಿದ್ದರೆ ವ್ಯುತ್ಪತ್ತಿ ಅಶಾಸ್ತ್ರೀಯವೆನಿಸುತ್ತದೆ.

ನಮ್ಮ ಪ್ರಾಚೀನ ಬ್ರಾಹ್ಮಣಗ್ರಂಥಗಳಲ್ಲಿಯೇ ಉತ್ತಮ ನಿರ್ವಚನಯತ್ನಗಳಂತೆ
ಅಶಾಸ್ತ್ರೀಯ ನಿರ್ವಚನಗಳಿಗೂ ಉದಾಹರಣೆಗಳು ದೊರೆಯುತ್ತವೆ.

ಮನುಸ್ಮೃತಿಯಲ್ಲಿ 'ಮಾಂಸ'ಕ್ಕೆ ಹೀಗೆ ವ್ಯುತ್ಪತ್ತಿ ಹೇಳಲಾಗಿದೆ :—

ಮಾಂ ಸ ಭಕ್ಷಯಿತಾಮುತ್ರ ಯಸ್ಯ ಮಾಂಸಮಿಹಾದ್ಮ್ಯಹಮ್ ।
ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥

ಶಾಕಟಾಯನನು 'ಸತ್ಯ' ಶಬ್ದಕ್ಕೆ ಇಂತಹದೇ ಹಾಸ್ಯಾಸ್ಪದ ವ್ಯುತ್ಪತ್ತಿಯನ್ನು
ಹೇಳಿದ್ದನೆಂದು ಯಾಸ್ಕ ಬರೆಯುತ್ತಾನೆ :—

ಅಥಾನನ್ವಿತೇಽರ್ಥೇಽಪ್ರಾದೇಶಿಕೇ ವಿಕಾರೇ ಪದೇಭ್ಯಃ ಪದೇತರಾರ್ಧಾನ್
ಸಂಚಸ್ಕಾರ ಶಾಕಟಾಯನಃ । ಏತೇಃ ಕಾರಿತಂ ಚ ಯಕಾರಾದಿಂ
ಚಾಂತಃಕರಣಮಸ್ತೇಃ ಶುದ್ಧಂ ಚ ಸಕಾರಾದಿಂ ಚ । (ನಿರುಕ್ತ. 1·13)

'ಅಯ' ಶಬ್ದದ ಕಡೆಯ
'ಅಸ್' ಧಾತುವಿನ ಸತ್ ಶಬ್ದಕ್ಕೆ ಇಣ್ ಧಾತುವಿನ
ಯಕಾರ ಕೂಡಿಸಿ 'ಸತ್ಯ' ಶಬ್ದದ ನಿರ್ವಚನ ಶಾಸ್ತ್ರೀಯವಲ್ಲ.

ಅನುಸಂಧಾನದಿಂದ ಪ್ರಾಚೀನ
ಆಧುನಿಕ ಭಾಷಾಶಾಸ್ತ್ರದ ಧ್ವನಿನಿಯಮಗಳ
ವ್ಯಾಕರಣರೀತ್ಯಾ ಸ್ಪಷ್ಟವಾಗದ ಎಷ್ಟೋ ಅಂಶಗಳು ಸ್ಪಷ್ಟವಾಗಬಲ್ಲವು. ಒಂದು ಉದಾಹರಣೆ
ನೋಡಿ : ತಾನ್ + ತರೂನ್ = ತಾಂಸ್ತರೂನ್ ಎಂದು ಸಕಾರಾಗಮಸಂಧಿಯಾಗುತ್ತದಷ್ಟೆ.
ತಾನ್ + ವೃಕ್ಷಾನ್ ಎಂದಾಗ ಬಾರದ ಸಕಾರಾಗಮ ತಾನ್ + ತರೂನ ಎಂದಾಗ ಎಲ್ಲಿಂದ
ಬರಬೇಕೆಂದರೆ ವ್ಯಾಕರಣದಲ್ಲಿ ಗೊತ್ತಾಗುವುದಿಲ್ಲ. ಮೂಲ ಇಂಡೋ-ಯೂರೋಪಿಯನ್
ಭಾಷೆಯ ದ್ವಿತೀಯಾ ಬಹುವಚನ ಪ್ರತ್ಯಯವೇ 'ಎಮ್ಸ್' ಎಂದು ಸಕಾರಾಗಮ



ಸಹಿತವಿದ್ದುದೂ, ಅದು ಮೊದಲು ವೈದಿಕಭಾಷೆಯಲ್ಲಿ 'ಅಮ್ಸ್' ಎಂದಾಗಿ ಅಕಾರ
ದೀರ್ಘದಿಂದ 'ಆಮ್ಸ್' ಆಗುವದೆಂಬ ಇತಿಹಾಸ ನೋಡಿದಾಗ ಸಕಾರಾಗಮಕ್ಕೆ ಉಪಪತ್ತಿ
ದೊರೆಯುತ್ತದೆ.

ಸಮಾಸದಲ್ಲೂ ಇಂತಹ ಪಳೆಯುಳಿಕೆ (historical survival)ಗಳಿಗೆ
ಉದಾಹರಣೆಗಳು ಸಿಕ್ಕುತ್ತವೆ. 'ಹರಿ' + 'ಚಂದ್ರ' ಎಂಬುದರ ರೂಪ 'ಹರಿಚಂದ್ರ'
ಎಂದಾಗಬೇಕೇ ಹೊರತು 'ಹರಿಶ್ಚಂದ್ರ' ಏಕೆ? ಎಂದರೆ ಪಾಣಿನಿವ್ಯಾಕರಣದಲ್ಲಿ ಕಾರಣ
ಸ್ಪಷ್ಟವಾಗದು. ಆದರೆ ಮೂಲ ಇಂಡೋ-ಯೂರೋಪಿಯನ್ ಶಬ್ದ ಚಂದ್ರ, ಎಂದಿರದೆ
ಸಕಾರಶ್ರುತಿಸಹಿತವಾಗಿ 'ಶ್ಚಂದ್ರ' ಎಂದಿತ್ತೆಂದೂ, ಅದರ ಪಳೆಯುಳಿಕೆ ಒಮ್ಮೊಮ್ಮೆ ಈಗಲೂ
ಕಾಣಬರುವುದೆಂದೂ ಹೇಳಿದರೆ ಉಪಪತ್ತಿ ದೊರೆತಂತಾಗುತ್ತದೆ.

## ಮಿಥ್ಯಾಸಾದೃಶ್ಯ (Analogy) ಮತ್ತು ಶಬ್ದರೂಪಗಳು

ಭಾಷಾಶಬ್ದಗಳನ್ನು ಕೇಳುವವರು ಶಾಸ್ತ್ರೀಯವಾಗಿ ಯಾವುದನ್ನೂ ಉಚ್ಚರಿಸುತ್ತಿರು ವುದಿಲ್ಲ. ಒಂದರಂತೆ ಇನ್ನೊಂದನ್ನು ತಾವೇ ಬದಲಾಯಿಸಿಕೊಂಡು ಹೊಸ ರೂಪಗಳನ್ನು ಸೃಷ್ಟಿಸಿಕೊಳ್ಳುವುದನ್ನೂ ನೋಡುತ್ತೇವೆ. ಕಿವಿಗೆ ಒಂದು ಸರಿಯಾದ ರೂಪ ಕಂಡರೆ ತತ್ಸದೃಶವಾದ ತಪ್ಪು ರೂಪಗಳನ್ನೂ ಪ್ರಯೋಗದಲ್ಲಿ ತಂದುಬಿಡುವ ಪ್ರವೃತ್ತಿ ಎಲ್ಲ ಭಾಷೆಗಳಲ್ಲಿಯೂ ಇದೆ. ಇದಕ್ಕೆ ಮಿಥ್ಯಾಸಾದೃಶ್ಯತತ್ತ್ವವೆಂದು ಭಾಷಾಶಾಸ್ತ್ರದಲ್ಲಿ ಹೆಸರಿದೆ.

ಕೆಲವು ಉದಾಹರಣೆಗಳನ್ನು ನೋಡಿ :—'ಬೃಹಸ್ಪತಿ', 'ಜಾಸ್ಪತಿ', 'ದಿವಸ್ಪತಿ' ಮುಂತಾದ ಶಬ್ದರೂಪಗಳಲ್ಲಿ ಸಕಾರ ಸಹಜವಾಗಿರುವುದನ್ನು ಅನುಲಕ್ಷಿಸಿ ಅದು ಸಹಜವಲ್ಲದ ಸ್ಥಳಗಳಲ್ಲಿಯೂ 'ಋತಸ್ಪತಿ', 'ರಥಸ್ಪತಿ', 'ವನಸ್ಪತಿ' ಮುಂತಾದ ಹೊಸ ಶಬ್ದಗಳನ್ನು ವೈದಿಕಭಾಷೆಯಲ್ಲಿ ಮಾಡಿಕೊಂಡಿದ್ದಾರೆ. ಇದಕ್ಕೆ ಕಾರಣ ಮಿಥ್ಯಾಸಾದೃಶ್ಯವೇ.

'ದ್ವಾದಶ' ಎಂಬಲ್ಲಿ 'ದ್ವಾ' ಎಂಬ ಆಕಾರಾಂತರೂಪ ಯೋಗ್ಯವಾಗಿದೆ. ಆದರೆ 'ಏಕಾದಶ' ಎನ್ನುವಾಗ 'ಏಕ' ಶಬ್ದ ಆಕಾರಾಂತವಾಗುವುದು ಸಕಾರಣವಲ್ಲ. 'ದ್ವಾದಶ'ದ ಮಿಥ್ಯಾ ಸಾದೃಶ್ಯದ ಮೇಲಿಂದಲೇ ಎಂದು ಅದನ್ನು ಭಾಷಾಶಾಸ್ತ್ರ ವಿವರಿಸುತ್ತದೆ.

ವೇದದಲ್ಲಿ 'ಇಂದ್ರಾಗ್ನೀ', 'ದ್ಯಾವಾಪೃಥಿವೀ' ಮುಂತಾದ ದೇವತಾ ದ್ವಂದ್ವ ಸಮಾಸ ಗಳಿರುವಂತೆ 'ಅಗ್ನಾಮರುತೌ' ಎಂಬ ಒಂದು ಸಮಾಸಪದವಿದೆ. ವ್ಯಾಕರಣರೀತ್ಯಾ ಅದು ಅಗ್ನೀಮರುತೌ ಎಂದಾಗಬೇಕಿತ್ತು. ಆದರೆ ಅಗ್ನಿಯ ಇಕಾರಾಂತ ಹೋಗಿ ಆಕಾರಾಂತ ಬಂದಿರಲು ಮಿಥ್ಯಾಸಾದೃಶ್ಯವೊಂದೇ ಪ್ರಯೋಜಕ.

ಇದರಂತೆಯೇ ಕನ್ನಡದಲ್ಲಿ ಜನರು ಬಳಸುತ್ತಿರುವ 'ಪಾಶ್ಚಿಮಾತ್ಯ' ಶಬ್ದವನ್ನೂ ಮಿಥ್ಯಾ ಸಾದೃಶ್ಯಕ್ಕೆ ಉದಾಹರಣೆಯೆನ್ನಬಹುದು. 'ದಾಕ್ಷಿಣಾತ್ಯ' ಎಂಬುದು ಸಾಧುರೂಪ ; ಅದರ ಮಾದರಿಯಲ್ಲಿ ಮಿಥ್ಯಾಸಾದೃಶ್ಯಕ್ಕೆ ಬಲಿಬಿದ್ದು 'ಪಾಶ್ಚಾತ್ಯ' ಎಂಬ ಸಾಧುರೂಪವನ್ನು ಬಿಟ್ಟು 'ಪಾಶ್ಚಿಮಾತ್ಯ' ಎಂಬ ಪದವನ್ನೇ ಜನರು ಬಳಸುತ್ತಾರೆ.

ಈ ಮಿಥ್ಯಾಸಾದೃಶ್ಯವು ಸುಬಂತಪ್ರತ್ಯಯಗಳಲ್ಲೂ ಕಾಣಸಿಗುತ್ತದೆ. ಆಕಾರಾಂತ ಸ್ತ್ರೀಲಿಂಗ ವಿಭಕ್ತಿರೂಪಗಳನ್ನು ಈಕಾರಾಂತ ವಿಭಕ್ತಿರೂಪಗಳ ಸಾದೃಶ್ಯದ ಮೇಲಿಂದ ನಿರೂಪಿಸಿದ ಹಾಗೆ ಕಾಣುತ್ತದೆ.

ತೃತೀಯಾ (ಆ), ಚತುರ್ಥೀ (ಐ), ಷಷ್ಠೀ (ಆಸ್), ಸಪ್ತಮೀ (ಆಮ್) ವಿಭಕ್ತಿ ಪ್ರತ್ಯಯಗಳನ್ನು ದೇವಿಶಬ್ದಕ್ಕೆ ಸೇರಿಸಿದಾಗ ಸಹಜವಾಗಿಯೇ ದೇವ್ಯಾ, ದೇವ್ಯೈ, ದೇವ್ಯಾಃ, ದೇವ್ಯಾಮ್ ಎಂಬ ರೂಪಗಳು ಸಿದ್ಧವಾಗುತ್ತವೆ. ಇವೇ ಪ್ರತ್ಯಯಗಳನ್ನು ಆಕಾರಾಂತ 'ಪ್ರಿಯಾ' ಶಬ್ದಕ್ಕೆ ಸೇರಿಸಿದಾಗ :—

ಪ್ರಿಯಾ, ಪ್ರಿಯೈ, ಪ್ರಿಯಾಃ, ಪ್ರಿಯಾಮ್ ಎಂದಾಗಬೇಕಿತ್ತು. ಹಾಗೆ ಆಗುವುದಿಲ್ಲ. ಏಕೆಂದರೆ ವಿಭಕ್ತಿಪ್ರತ್ಯಯಗಳೇ ಯಾ, ಯೈ, ಯಾಃ, ಯಾಮ್ ಎಂದು ಭ್ರಮಿಸಿ.

ಪ್ರಿಯಯಾ, ಪ್ರಿಯಾಯೈ, ಪ್ರಿಯಾಯಾಃ, ಪ್ರಿಯಾಯಾಮ್ ಎಂಬ ರೂಪಗಳನ್ನು ಮಾಡಿಕೊಂಡಿರುವುದು ಸಂಸ್ಕೃತದಲ್ಲಿ ಕಾಣುತ್ತದೆ. ಇದಕ್ಕೆ ಸಮಪ್ರಮಾಣಮೂಲ ಮಿಥ್ಯಾ ಸಾದೃಶ್ಯವೆನ್ನುತ್ತಾರೆ. (Proportion in Analogy).

ತಿಙನ್ತರೂಪಗಳಲ್ಲಿಯೂ ಮಿಥ್ಯಾಸಾದೃಶ್ಯಕ್ಕೆ ಹಲವಾರು ಉದಾಹರಣೆಗಳು ದೊರೆಯುತ್ತವೆ. ಸಂಯುಕ್ತಾಕ್ಷರಪೂರ್ವವಿದ್ದು, ಛಂದೋದೃಷ್ಟಿಯಿಂದ ದೀರ್ಘವೆನಿಸುವ ಅಕಾರವುಳ್ಳ 'ಅಂಜ್', 'ಅರ್ಜ್', 'ಅರ್ಘ್' ಮುಂತಾದ ಧಾತುಗಳ ಲಿಟ್ ರೂಪ 'ಆನಂಜೇ', 'ಆನರ್ಜ', 'ಆನರ್ಘ' ಎಂದು ದೀರ್ಘಾದಿಯಾಗಿ ಬರುವುದು ಸಹಜವಾಗಿದೆ. ಆದರೆ ದೀರ್ಘಸ್ವರ ಆದಿಯಲ್ಲಿ ಇಲ್ಲದ 'ಅಶ್' ಧಾತುವಿಗೆ 'ಆನಶೇ' ಎಂದಾಗುವುದು ಮಿಥ್ಯಾಸಾದೃಶ್ಯದಿಂದಲೇ.

ವೇದದಲ್ಲಿ 'ನಪಾತ್', 'ನಪಾತಮ್' ಎಂಬ ರೂಪಗಳಂತೆ 'ನಪ್ತ್ರಾ', 'ನಪ್ತ್ರೇ' ಎಂಬ ರೂಪಗಳೂ ಇವೆ. ಇದಕ್ಕೆ ಕಾರಣ ಪಿತೃ, ಭ್ರಾತೃ ಶಬ್ದಗಳಂತೆ ನಪ್ತೃ ಎಂಬ ಋಕಾರಾಂತ ಶಬ್ದವಿರುವ ಮಿಥ್ಯಾಸಾದೃಶ್ಯಭ್ರಮೆಯೇ.

ಸಂಸ್ಕೃತದಲ್ಲಿ 'ಪತಿ' ಮತ್ತು 'ಸಖಿ' ಶಬ್ದಗಳ ಕೆಲವು ರೂಪಗಳು 'ಪಿತೃ' ಶಬ್ದದ ಮಿಥ್ಯಾ ಸಾದೃಶ್ಯದಿಂದಷ್ಟೇ ಪತ್ಯೇ, ಪತ್ಯುಃ, ಸಖ್ಯೇ, ಸಖ್ಯುಃ ಎಂದು ಮುಂತಾಗಿ ಉಂಟಾಗಿವೆ.

ಆಕಾರಾಂತ ಪುಲ್ಲಿಂಗಶಬ್ದಗಳ ತೃತೀಯಾ ಏಕವಚನಪ್ರತ್ಯಯ ಸಂಸ್ಕೃತದಲ್ಲಿ 'ಏನ' ಎಂದಾಗಿರುವುದಕ್ಕೂ, ಸರ್ವನಾಮಶಬ್ದರೂಪಗಳಾದ 'ತೇನ', 'ಅನೇನ' ಇತ್ಯಾದಿಗಳ ಮಿಥ್ಯಾಸಾದೃಶ್ಯವೇ ಕಾರಣ. ಇಲ್ಲದಿದ್ದರೆ 'ರಾಜ್ಞಾ' ಎಂಬಲ್ಲಿರುವಂತೆ 'ಆ' ಎಂದೇ ಆಗಬೇಕಾಗಿತ್ತು.

## ಸಂಸ್ಕೃತ ಪದರಚನೆ

ಸಂಸ್ಕೃತಭಾಷೆಯ ಪದರಚನೆಯೂ ಅದು ಇಂಡೋ-ಯೂರೋಪಿಯನ್ ಭಾಷಾ ವರ್ಗಕ್ಕೆ ಸೇರಿದ್ದೆಂಬುದನ್ನು ಖಚಿತಪಡಿಸುತ್ತದೆ. ಮೊದಲಧಾತು + ಪ್ರತ್ಯಯ + ವಿಭಕ್ತಿ ಚಿಹ್ನೆ



ಎಂಬ ಮೂರು ಅಂಶಗಳ ವಿಶ್ಲೇಷಣೆ ಸಂಸ್ಕೃತಭಾಷೆಗೆ ಚೆನ್ನಾಗಿ ಅನ್ವಯಿಸುತ್ತದೆ. ಈ ಚಿಹ್ನೆಗಳ ಪ್ರಯೋಗಕಾಲದಲ್ಲಿ ಅನೇಕ ರೀತಿಯ ಸ್ವರಪರಿವರ್ತನೆಗಳಾಗಬಹುದು ; ಪ್ರತ್ಯಯ ಕಾಣಬಹುದು. ಲುಪ್ತವಾಗಲೂಬಹುದು. ಕೆಳಗಿನ ಪರಿವರ್ತನೆಗಳನ್ನು ಗಮನಿಸಿ :—

(1) ಅನುನಾಸಿಕಗಳ 'ನತಿಭಾವ' (ದನ್ತ್ಯಸ್ಯ ಮೂರ್ಧನ್ಯತಾಪತ್ತಿರ್ನತಿಃ—ಶುಕ್ಲ ಯಜುಃ ಪ್ರಾತಿಶಾಖ್ಯ 1—42) ಅಥವಾ Retroflexion :—ಯಾನ—ಪ್ರಯಾಣ.

(2) ಸ್ಪರ್ಶಧ್ವನಿಗಳ ಸಂಯೋಜನೆ :—ದದಾತಿ—ದತ್ತ—ದೇಹಿ ; ವಿಶಃ—ವಿಡಿಃ—ವಿಕ್ಷು.

(3) ಇಂಡೋ-ಯೂರೋಪಿಯನ್ ಕಂಠೋಷ್ಠ್ಯಗಳ ದ್ವಿಪ್ರಕಾರಕ ವಿಕಾಸ :—ಹನ್ತಿ—ಜಿಘ್ನತೇ ; ಭಜತಿ—ಭಾಗಃ

(4) ಇಂಡೋ-ಯೂರೋಪಿಯನ್ ತಾಲವ್ಯ ಕ್ಯ ಗೆ ಸಂಸ್ಕೃತದಲ್ಲಿ ದ್ವಿಪ್ರಕಾರದ ವಿಕಾಸ :—'ಕಃ', 'ಕಸ್ಯ' 'ಕಿಮ್' ಇವು 'ಚಿತ್' ಎಂಬುದರ ಉತ್ತರಕಾಲೀನ ರೂಪಗಳು (ನೋಡಿ—ಜೂಲ್ಸ್ ಬ್ಲಾಕ್—)L'Indo Aryen—ಪು. 99),

(5) 'ಗತಃ', 'ಮತಃ' ಎಂಬಲ್ಲಿ ಭಾಷಾಶಾಸ್ತ್ರೀಯ ಪರಿಭಾಷೆಯ ಶೂನ್ಯರೂಪ (Zero grade) ಗ್ಮ (ಜಗ್ಮುಃ), ಮ್ನ (ಮಮ್ನಾತೇ) ಎಂಬಲ್ಲಿ ಮೂಲರೂಪ ಅಥವಾ ಗುಣರೂಪ ಮತ್ತು 'ಗಮ್', 'ಮನ್' ಎಂಬಲ್ಲಿ ದೀರ್ಘರೂಪ ವ್ಯಕ್ತವಾಗಿ ಕಾಣಬರುತ್ತದೆ,

ನಮ್ಮ ವ್ಯಾಕರಣಕಾರರು ಧಾತುಗಳನ್ನೆಲ್ಲ ಕ್ರಿಯಾರ್ಥಕಗಳೆಂದೇ ತಿಳಿಯುತ್ತಾರೆ. ಆದರೆ ಇಂಡೋ-ಯೂರೋಪಿಯನ್ ಮೂಲಧಾತುಗಳು ಸಂಜ್ಞೆ, ಕ್ರಿಯೆ, ವಿಶೇಷಣ ಇತ್ಯಾದಿ ಯಾವುದು ಬೇಕಾದರೂ ಆಗಿರುತ್ತಿದ್ದ ಸೂಚನೆಯಿದೆ. ಸಂಸ್ಕೃತದಲ್ಲಿ ಕೂಡ 'ಪದ್' ಎಂಬ ಧ್ವನಿಯಲ್ಲಿ ಹೆಜ್ಜೆಯಿಡು ಎಂಬ ಕ್ರಿಯಾರ್ಥದಂತೆ ಹೆಜ್ಜೆಯೆಂಬ ನಾಮಾರ್ಥವೂ ಅಡಗಿಯೇ ಇದೆ. ಇವಕ್ಕೆ ಬೇರೆ ಬೇರೆ ವಿಕರಣಗಳು ಇಲ್ಲವೆ ಪ್ರತ್ಯಯಗಳು ಸೇರಿ ಬೇರೆ ಬೇರೆ ಅರ್ಥಗಳು ಬರುವ ವೈಶಿಷ್ಟ್ಯವಿದೆ. ಈ ಮೂಲರೂಪಗಳಿಂದಲೇ ಕೃತ್ ಅಥವಾ ತದ್ಧಿತ; ಸುಪ್ ಅಥವಾ ತಿಙ್‌ಪ್ರತ್ಯಯಗಳು ಸೇರಿ ಪದರಚನೆಯಾಗುವದು ಸಂಸ್ಕೃತಭಾಷೆಯ ಸ್ವಭಾವ. ಇದೂ ಅಲ್ಲದೆ ನಾನಾರೀತಿಯ ಸಮಾಸ ಈ ಭಾಷೆಯ ಇನ್ನೊಂದು ವೈಶಿಷ್ಟ್ಯ.

ವ್ಯಸ್ತ ನಾಮಪದಗಳನ್ನು ಸವಿಕರಣ (thematic) ಮತ್ತು ಅವಿಕರಣ (athematic) ಎಂದು ವಿಭಾಗಿಸಬಹುದು. ಅವಿಕರಣ ಮೂಲರೂಪಗಳಿಗೆ ದ್ಯಾ, ಕ್ಷಾ, ಗಾ, ಭ್ರೂ ಇತ್ಯಾದಿಗಳು ಉದಾಹರಣೆ. ಇವುಗಳ ಪ್ರಥಮೈಕವಚನ ದ್ಯಾಃ, ಕ್ಷಾಃ, ಗಾಃ, ಭ್ರೂಃ ಎಂದಾಗುತ್ತದೆ. ಪ್ರಾತಿಪದಿಕಕ್ಕೂ, ವಿಭಕ್ತಿಪ್ರತ್ಯಯಕ್ಕೂ ನಡುವೆ ಮತ್ತಾವ ವಿಕರಣವೂ ಬರುವುದಿಲ್ಲ, 'ಮಿ', 'ಸ್ತು', 'ಕೃ', 'ದ್ಯು' ಮುಂತಾದವುಗಳಿಂದಾಗುವ ಮಿತ್, ಸ್ತುತ್, ಕೃತ್, ದ್ಯುತ್ ಮುಂತಾದ ರೂಪಗಳನ್ನೂ ಇಲ್ಲಿ ಉಲ್ಲೇಖಿಸಬಹುದು.

ಸವಿಕರಣ ಮೂಲರೂಪಗಳಲ್ಲಿ ಹೆಚ್ಚಾಗಿ 'ಅ' ವಿಕರಣ ಬರುತ್ತದೆ. ಅವಿಕರಣಾವಸ್ಥೆಯ ಉತ್ತರಾವಸ್ಥೆಯೇ ಸವಿಕರಣಾವಸ್ಥೆಯೆಂದೂ ಈ ಶಾಸ್ತ್ರಕಾರರು ಭಾವಿಸುವುದುಂಟು. ಉದಾ.:—'ಬೃ' ದಿಂದ ಬರುವ 'ಭರ' ವೃ—ವರ್ ; ದ್ವಿತ್ವ ರೂಪಗಳಲ್ಲಿ ಇದು ವಿಶೇಷ ಪ್ರಯುಕ್ತ :—ದಧರ್ಷ ; ಜಗಾಮ ; ರುರೋದ. ಇಲ್ಲಿ ಇನ್ನೊಂದು ಮಹತ್ತ್ವದ ರಹಸ್ಯವೂ ಅಡಗಿದೆ. ಉದಾತ್ತಸ್ವರ ಮೂಲರೂಪದಲ್ಲಿದ್ದರೆ ಒಂದು ಶಬ್ದವೂ, ವಿಕರಣದ ಮೇಲಿದ್ದರೆ ಇನ್ನೊಂದು ಶಬ್ದವೂ ಹುಟ್ಟುತ್ತವೆ. 'ವೃ' ಮೂಲರೂಪದಿಂದ 'ವರ' ಆಗುವುದು ಸರಿಯಷ್ಟೆ. 'ವ' ಉದಾತ್ತವಾದರೆ ಅರ್ಥ 'ಇಚ್ಛೆ' 'ರ' ಉದಾತ್ತವಾದರೆ ಅರ್ಥ 'ವರಣ ಮಾಡುವವನು' ಎಂದು. 'ಸ್ವಯಂವರ' ಶಬ್ದದಲ್ಲಿ ಮೊದಲನೆಯ ಅರ್ಥವೂ, 'ಸ್ವಯಂವರಾ' ಶಬ್ದದಲ್ಲಿ ಎರಡನೆಯ ಅರ್ಥವೂ ಸ್ಪಷ್ಟ.

ಇಂಡೋ-ಯುರೋಪಿಯನ್ ಮೂಲಭಾಷೆಯಂತೆ ಸಂಸ್ಕೃತದಲ್ಲೂ ಸವಿಕರಣ, ಅವಿಕರಣ ರೂಪಗಳು ವೈಕಲ್ಪಿತವಾಗಿರುವ ಉದಾಹರಣೆಗಳೂ ಹೇರಳವಾಗಿವೆ. ಉದಾಹರಣೆ—ಆಪಃ—ಅಪಾಮ್—ಪಾದಮ್—ಪದಃ; ಭ್ರೂಃ—ಭ್ರುಃ; ವಃ; ಗಾಃ—ಗಾಮ್—ಗವಾಮ್- ಶ್ವಾ—ಶ್ವಾನಮ್—ಶುನಃ ; ಇನ್ನು ಕೆಲವಲ್ಲಿ ಈ ಚಿಹ್ನೆ ಅದೃಶ್ಯವಾಗಿದೆ—ವಾಕ್—ವಾಚಾಮ್—ವಾಚಾ. ಇಲ್ಲಿಯೂ ವಿಕರಣವಿತ್ತೆಂದೇ ಗುರುತಿಸಬೇಕು. ಒಂದು ನಾಮಪದದಿಂದ ಇನ್ನೊಂದು ನಾಮಪದ ಮಾಡಿಕೊಳ್ಳುವಾಗ ಅಭಿವೃದ್ಧಿ ಬರುವ ರೂಪಗಳೂ ಸಂಸ್ಕೃತದ ವೈಶಿಷ್ಟ್ಯಗಳಲ್ಲೊಂದಾಗಿದೆ :—ಭೃಗು—ಭಾರ್ಗವ ; ಸಪ್ತ—ಸಾಪ್ತ ; ಸುಮನಸ್—ಸಾಮನಮ್.

**ಪ್ರತ್ಯಯ** :—ಸಂಸ್ಕೃತದ ಪ್ರತ್ಯಯಗಳಿಗೂ ಮೂಲ ಇಂಡೋ–ಯುರೋಪಿಯನ್ ಹಾಗೂ ಇಂಡೋ–ಇರಾನಿಯನ್ ಪ್ರತ್ಯಯಗಳಿಗೂ ಸಾಮ್ಯವಿದೆ.

ಸಂಸ್ಕೃತದ ಕರ್ತೃಪ್ರತ್ಯಯವಾದ 'ಅಕೆ' (ಅನ್ತ್) ಮೂಲ ಇಂಡೋ–ಯುರೋಪಿಯನ್ 'ಎನ್ತ್' 'ಒನ್ತ್'ಗೆ ಸಂವಾದಿಯಾಗಿದೆ. ಉದಾ.: ಭರನ್, ಪಶ್ಯನ್, ಭವನ್ ಇತ್ಯಾದಿ. ಇದರ ದುರ್ಬಲ ರೂಪವನ್ನು 'ಸತ್' ('ಸನ್ತ್')ನಲ್ಲಿ ಕಾಣುತ್ತೇವೆ. ಈ ಕೃದಂತ 'ಎನ್ತ್' ನಿಂದಲೇ ಮುಂದೆ 'ವಂತ' ಎಂಬ ತದ್ಧಿತಪ್ರತ್ಯಯ ವಿಕಸಿತವಾಗಿದೆ. ಗ್ರೀಕ್‌ನಲ್ಲಿಯೂ ಇದು ಕಾಣುತ್ತದೆ. 'ವನ್ತ್'ನ ದುರ್ಬಲರೂಪವೇ 'ಉನ್'ಎಂದೂ ಒಮ್ಮೊಮ್ಮೆ ಕಾಣಿಸಿಗುತ್ತದೆ. ಧನ್ವನ್—ಧನುಃ (ಧನುಷ್). ಇದಕ್ಕೆ ಉದಾಹರಣೆ. ಇದಕ್ಕೆ ಸಂಬಂಧಿಸಿದ ಇನ್ನೊಂದು ಪ್ರತ್ಯಯವೇ 'ವಾಂಸ'. ಇದರ ದುರ್ಬಲ ರೂಪವಾದರೂ 'ವಸ್', 'ಉಸ್' ಎಂದೇ ನಿರನುನಾಸಿಕವಾಗಿರುತ್ತದೆ. ಉದಾ.:—ವಿದ್ವಾಸೌ, ವಿದ್ವಾಂಸಾಃ, ವಿದುಷ. ವಿದ್ವತ್ಸು, 'ಅನ್ತ್' ನ ಮಿಥ್ಯಾ ಸಾದೃಶ್ಯದ ಮೇಲೆ ಅನುಸ್ವಾರ ಸಂಸ್ಕೃತದಲ್ಲಿ ಉಂಟಾಗಿರಬೇಕು.

ಹೀಗೆಯೇ ಸಂಸ್ಕೃತದ ಈಯಸ್, ಇಷ್ಟ ಪ್ರತ್ಯಯಗಳಿಗೆ ಸಂವಾದಿಯಾಗಿ 'ಯಸ್' 'ಇಸೋ' ಪ್ರತ್ಯಯಗಳು ಗ್ರೀಕಿನಲ್ಲಿವೆ. ಮೂಲ ಇಂಡೋ–ಯುರೋಪಿಯನ್ 'ಇಸ್' 'ಯೆಸ್' 'ಯೊಸ್'ಗಳ ಸಬಲರೂಪ 'ಈಯಸ್' ಎಂದೂ, ದುರ್ಬಲರೂಪ 'ಇಷ್ಠ' ಎಂದೂ ಹೇಳುತ್ತಾರೆ. (ಇಸ್+ತ=ಇಷ್ಠ). ಉದಾ.:—ಸ್ವಾದೀಯಸ್—ಸ್ವಾದಿಷ್ಠ.



ಇದರಂತೆ ಸಂಸ್ಕೃತದ '—ಅನ್', '—ಮನ್'ಗಳು ಇಂಡೋ–ಯುರೋಪಿಯನ್ '—ಎನ್', '—ಮೆನ್' ಗಳಿಂದ ವಿಕಸಿತವಾದಂತಹವು. ಇವು ಗ್ರೀಕಿನಲ್ಲಿ 'ಒನ್', 'ಮ್' ಎಂದು ಕಾಣಸಿಗುತ್ತವೆ. ಸಂಸ್ಕೃತ—ತಕ್ಷನ್, ಗ್ರೀಕ್-ತೆಕ್ತೊನ್ ; ಸಂಸ್ಕೃತ—ಹೋಮ–ಗ್ರೀಕ್–ಖಿಉಮ ; 'ಧರ್ಮನ್' ಎಂಬುದು 'ಧರ್ಮ' ಎಂದೂ ಸಂಸ್ಕೃತದಲ್ಲಿಯೇ ಕಾಣಬರುತ್ತದೆ.

ಸಂಸ್ಕೃತದ ನಿಷ್ಠಾಪ್ರತ್ಯಯಗಳಾದ 'ತ', 'ತವತ್' ಗಳು ಭಾಷಾಶಾಸ್ತ್ರೀಯ ದೃಷ್ಟಿಯಿಂದ ಎರಡು ಪ್ರತ್ಯಯಗಳಾಗಿರದೆ ಒಂದೇ ಪ್ರತ್ಯಯದ ಎರಡು ರೂಪಗಳಾಗಿವೆ. ಎರಡೂ ಇಂಡೋ-ಯುರೋಪಿಯನ್ 'ತೊ' ದಿಂದ ಜನಿಸಿವೆ. ಈ 'ತೋ' ಗ್ರೀಕ್‌ನಲ್ಲಿಯೂ ಇದೆ. ಸಂಸ್ಕೃತದಲ್ಲಿ ಇದು ಕರ್ಮಣಿ ಪ್ರತ್ಯಯವೆಂದರೂ ಭಾಷಾಶಾಸ್ತ್ರದ ಪ್ರಕಾರ ಕೇವಲ ಕರ್ತರಿ ಪ್ರತ್ಯಯವೇ ಆಗಿದ್ದಿರಬಹುದು. ಇದರಲ್ಲಿ ಉದಾತ್ತಸ್ವರ ಪ್ರತ್ಯಯಾಂಶದ ಮೇಲೆಯೇ ಇರುತ್ತದೆ. ಕಾಲಕ್ರಮದಲ್ಲಿ ಪ್ರತ್ಯಯವು ನಪುಂಸಕಲಿಂಗದ್ದೂ, ಕರ್ಮಣಿ ದ್ಯೋತಕವೂ ಆಗಿ ವಿಕಸಿತಗೊಂಡಿರಬೇಕು. ಈ ಮೂರೂ ಕ್ರಮಾಗತ ರೂಪಗಳನ್ನು 'ಸೂತಃ' (ಕರ್ತರಿ ಪ್ರಯೋಗ), 'ದ್ಯೂತಂ' (ನಪುಂಸಕಲಿಂಗ) ಮತ್ತು 'ಹತಃ' (ಕರ್ಮಣಿ ಪ್ರಯೋಗ) ಗಳಲ್ಲಿ ನೋಡಬಹುದು.

ಮೂಲ ಇಂಡೊ-ಯುರೋಪಿಯನ್‌ನಲ್ಲಿ 'ತೋ' ಪ್ರತ್ಯಯಕ್ಕೆ ಪರ್ಯಾಯವಾಗಿ 'ನೋ' ಎಂಬುದೂ ಒಂದು ಪ್ರತ್ಯಯವಿತ್ತು. ಅದೂ ಸಂಸ್ಕೃತದಲ್ಲಿ ಕರ್ಮಣಿ ಪ್ರತ್ಯಯವಾಗಿಯೇ ಪರಿಣಮಿಸಿತು. ಪಾಣಿನಿಯು "ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದ" ಎಂಬ ಸೂತ್ರದಲ್ಲಿ ಈ 'ನ' ವನ್ನು 'ತ' ದ ಆದೇಶವೆಂದೇ ನಿರ್ದೇಶಿಸಿದ್ದಾನೆ. ಇದು 'ಸಂಪನ್ನ' 'ಪೂರ್ಣ' ಮುಂತಾದವುಗಳಲ್ಲಿ ಕಾಣಿಸುತ್ತದೆ. ಇದರ ವಾಸ್ತವಿಕ ರೂಪವು ಸ್ವಪ್+ನ=ಸ್ವಪ್ನ, ದಾ+ನ=ದಾನಗಳಲ್ಲಿಯೂ ಕಾಣಸಿಗುತ್ತದೆ. ಇಲ್ಲಿ ಕರ್ಮಣಿ ಪ್ರಯೋಗದ ಛಾಯೆಯೇ ಇಲ್ಲ.

ಹೀಗೆಯೇ 'ತಿ' ಪ್ರತ್ಯಯವಾದರೂ, ಇದರ ಗ್ರೀಕ್ ಸಂವಾದಿರೂಪ 'ಸಿ' ಸಂಸ್ಕೃತದ ಸ್ತ್ರೀಲಿಂಗರೂಪಗಳಾದ 'ಗತಿ', 'ಮತಿ', 'ಪ್ರೀತಿ', 'ಜ್ಞಾತಿ' ಗಳಲ್ಲಿ ಇದು ಕಾಣುತ್ತದೆ. ಮೊಟ್ಟಮೊದಲಿಗೆ 'ತ' ಎಂಬುದರ ಸ್ತ್ರೀರೂಪವೇ 'ತಿ' ಆಗಿದ್ದಿರಬಹುದು. ಉದಾ.:—'ತತಃ', ಮತಃ, ತತಿಃ, ಮತಿಃ, ಇದು ದುರ್ಬಲರೂಪದ ಮೇಲೆ ಬಂದ ಪ್ರತ್ಯಯವಾದರೆ ಸಬಲ ರೂಪದ ಮೇಲೆ ಬರುವದೇ 'ತು' ಎಂಬ ಪ್ರತ್ಯಯ. ಉದಾ.—'ತನ್ತು' 'ಮನ್ತು'. ಈ 'ತು'ದಿಂದಲೇ' ಮುಂದೆ 'ತುಮ್' ಎಂಬ ತುಮುನ್ ಪ್ರತ್ಯಯ ವಿಕಸಿತವಾಗಿದೆ. ಇದು 'ಗನ್ತುಮ್'; ಗನ್ತವೇ' 'ಗನ್ತವೈ' ಎಂಬ ವೈದಿಕರೂಪಗಳ ಇತಿಹಾಸದಿಂದ ಅಭಿವ್ಯಕ್ತವಾಗುತ್ತದೆ.

ಇದರಂತೆಯೇ 'ತರ್' (ತೃಲ್) ಪ್ರತ್ಯಯ ಇಂಡೋ-ಯುರೋಪಿಯನ್ 'ತೆರೊ' ದಿಂದ ವಿಕಸಿತವಾದದ್ದು. ಮಾತಾ, ಪಿತಾ, ಭ್ರಾತಾ, ದುಹಿತಾ, ಜಾಮಾತಾ ಇತ್ಯಾದಿಗಳಲ್ಲೆಲ್ಲ ಈ ಪ್ರತ್ಯಯವೇ ಇದೆ. ಗ್ರೀಕಿನಲ್ಲಿ ಇದು 'ತೆರ್' ಎಂದು ಕಾಣಸಿಗುತ್ತದೆ. ಈ ಶಬ್ದಗಳಲ್ಲೆಲ್ಲ ಉದಾತ್ತಸ್ವರ ಪ್ರತ್ಯಯದ ಮೇಲೆಯೇ ಇರುತ್ತದೆ. ಈ ತೆರೊ ಎಂಬುದೆ 'ತ್ರೊ' ಎಂದೂ

ಉಚ್ಚರಿತವಾಗುತ್ತಿದ್ದಿರಬೇಕು. ಅದು ಮುಂದೆ ಸ್ವತಂತ್ರಪ್ರತ್ಯಯ ಭ್ರಮೆಯನ್ನು ಹುಟ್ಟಿಸಿರಬೇಕು. ವಸ್ತುತಃ 'ತೆರೊ'ದ ದುರ್ಬಲರೂಪವೇ 'ತ್ರೊ'. ಕ್ರಿಯಾಸಾಧನವೆಂಬರ್ಥದಲ್ಲಿ ಅದರ ಬಳಕೆಯಾಗತೊಡಗಿತು. ಸಂಸ್ಕೃತದ ನೇತಾ—ನೇತ್ರ ; ಖನಿತಾ—ಖನಿತ್ರ ; ಮನ್ತಾ—ಮನ್ತ್ರ— ಇವು ಉದಾಹರಣೆಗಳು.

ತದ್ಧಿತಪ್ರತ್ಯಯಗಳಾದ 'ತರ', 'ತಮ' ಗಳಿಗೆ ಸಂವಾದಿಯಾಗಿ 'ತೆರೊ' 'ತುಮ ಸ್' ಗಳು ಗ್ರೀಕ್ ಮತ್ತು ಲ್ಯಾಟಿನ್‌ನಲ್ಲಿ ಕ್ರಮವಾಗಿ ದೊರೆಯುತ್ತವೆ. ವಾಸ್ತವವಾಗಿ ಇವೂ ಕೂಡ ಮೊದಲಿನ 'ತ' ಕ್ಕೇ 'ರ', 'ಮ' ಗಳನ್ನು ಸೇರಿಸಿ ಮಾಡಿಕೊಂಡ ಹೊಸ ಪ್ರತ್ಯಯಗಳೆನ್ನಬೇಕು. ಈ 'ರ', 'ಮ' ಗಳು ಸ್ವತಂತ್ರ ಪ್ರತ್ಯಯಗಳಾಗಿ 'ಅಪರ', 'ಪ್ರಥಮ' ಶಬ್ದಗಳಲ್ಲಿ ಕಾಣಸಿಗುತ್ತವೆ.

'ಮನ್ತ್', 'ವನ್ತ್'('ಮತುಪ್' ಪ್ರತ್ಯಯ)ರೂಪಗಳಾದರೂ ಇಂಡೋ-ಯೂರೋಪಿಯನ್ 'ವೆನ್ತ್' ದ ವಿಕಾಸವೇ ಸರಿ.

ಭಾವವಾಚಕ ಪ್ರತ್ಯಯಗಳಾದ 'ತ್ವ' ಮತ್ತು 'ತಾ' ಗಳು ಕೂಡ ಕೃದಂತ ಮೂಲ ಪ್ರತ್ಯಯವಾದ 'ತ' ದಿಂದಲೇ ಬಂದಂತಹವು. ಆದ್ದರಿಂದಲೇ 'ತಾತ', 'ತಾತಿ', 'ತ್ವನ, ಮುಂತಾದ ರೂಪಗಳೂ ಕಾಣಸಿಗುವುದು. ಉದಾ. :— ದೇವತ್ವ, ದೇವತಾ, ದೇವತಾತ್, ದೇವತಾತಿ, ದೇವತ್ವನ.

## ಸಮಾಸ ಪ್ರಕ್ರಿಯೆ

ಸಮಾಸಪದಗಳನ್ನು ಒಂದೇ ಪದವೆಂದು ಭಾವಿಸುವ ಪರಂಪರೆ ಇಂಡೋ-ಯೂರೋಪಿಯನ್ ಭಾಷಾಕುಟುಂಬದ ಲಕ್ಷಣವಾಗಿದೆ. ಋಗ್ವೇದ ಮತ್ತುಅಥರ್ವವೇದಗಳಲ್ಲಿ ಮೂರಕ್ಕಿಂತ ಹೆಚ್ಚು ಪದಗಳು ಕೂಡಿದ ಸಮಾಸವೇ ಸಿಕ್ಕುವುದಿಲ್ಲ, ಸಾಮಾನ್ಯವಾಗಿ ಒಂದೇ ಉದಾತ್ತ ಸ್ವರವಿರುತ್ತದೆ. ಇವುಗಳಲ್ಲಿ ಮೂರು ಬಗೆ :—

1. ಉಭಯಪದಾರ್ಥ ಪ್ರಧಾನ : ದ್ವಂದ್ವ ಸಮಾಸ :—

ಎರಡು ಪದಗಳೂ ವಿಶೇಷಣಗಳಾಗಿರುವುದು—ಉದಾ. :— ನೀಲಲೋಹಿತ, ಅರುಣಪಿಶಂಗ, ಇವುಗಳ ಸಂಖ್ಯೆ ವೇದದಲ್ಲಿ ಕಡಿಮೆ.

ಎರಡು ಪದಗಳೂ ನಾಮಪದಗಳಾಗಿರುವುದು—ಅಹೋರಾತ್ರಾಣಿ ; ಅಜಾವಯಃ. ಇವುಗಳಲ್ಲಿ ಕೆಲವು ನಪುಂಸಕಲಿಂಗವೂ ಆಗುವುದುಂಟು — ಇಷ್ಟಾಪೂರ್ತಮ್, ಕೇಶಶ್ಮಶ್ರು.

ದೇವತಾದ್ವಂದ್ವಗಳು ವೇದದಲ್ಲಿ ಮಾತ್ರ ಉಂಟು ; ಅದರ ಅವಶೇಷ 'ಪಿತರೌ' (ಮಾತಾಪಿತರೌ) ಎಂಬಲ್ಲಿ ಮಾತ್ರ ಸಂಸ್ಕೃತದಲ್ಲಿ ಗೋಚರವಿದೆ.

2. ಉತ್ತರಪದಾರ್ಥ ಪ್ರಧಾನವಾದ ತತ್ಪುರುಷಸಮಾಸದಲ್ಲಿ ಪೂರ್ವಪದದ ವಿಭಕ್ತಿ ಲೋಪವಾಗದ ರೂಪಗಳು ಅವೆಸ್ತಾದಲ್ಲಿಯೂ ಕಾಣಸಿಗುತ್ತವೆ :— 'ಧನಂಜಯಃ', 'ಶುನಃಶೇಫಃ', 'ಬೃಹಸ್ಪತಿಃ', 'ಸರಸಿಜಮ್' ಮೂಲ 'ದಮಸ್‌ಪತಿ' ಯಿಂದ 'ದಂಪತಿ' ಶಬ್ದ ಜನ್ಯವಾಗಿರಬೇಕೆಂದು ಕಾಣುತ್ತದೆ.



ವೇದದಲ್ಲಿ ವಿಶೇಷಣಪೂರ್ವಪದಕರ್ಮಧಾರಯಸಮಾಸದ ಪ್ರಯೋಗ ತುಂಬಾ ಕಡಿಮೆ— 'ಏಕ–ವೀರಃ', 'ಚಂದ್ರ–ಮಾಃ'. 'ಮಹಾ–ಧನಃ', ಉಪಸರ್ಗವೇ ಪೂರ್ವಪದವೆನಿಸುವುದೂ ಉಂಟು. 'ಪ್ರ—ಣಪಾತ್;'. ಧಾತುಜನ್ಯ ಅಂಶವೂ ಪೂರ್ವಪದವಿರಬಹುದು; —ತ್ರಸದಸ್ಯು, ಶಿಕ್ಷಾನರ. ಇಲ್ಲಿ ಪೂರ್ವಪದ ಲೋಟ್ ಮಧ್ಯಮಪುರುಷ ಏಕವಚನರೂಪದಿಂದ ಬಂದಿದೆ. ಸಂಸ್ಕೃತದಲ್ಲಿ ಈ ಸಮಾಸದ ಪ್ರಯೋಗ ಹೆಚ್ಚಾಗುತ್ತದೆ.

ಅನ್ಯಪದಾರ್ಥಪ್ರಧಾನವಾದ ಬಹುವ್ರೀಹಿಸಮಾಸದ ಪ್ರಯೋಗ ಕರ್ಮಧಾರಯಕ್ಕಿಂತ ವೇದದಲ್ಲಿ ಅಧಿಕ. ಇವು ಕೂಡ ಸ್ವರಭೇದವನ್ನು ಬಿಟ್ಟರೆ ಕರ್ಮಧಾರಯಗಳೇ ಎನಿಸುತ್ತವೆ. ವಾಕರ್‌ನಾಗೆಲ್ ಇವನ್ನು ವ್ಯಸ್ತರೂಪಗಳಿಂದಲೇ ವಿಕಸಿತವೆಂದು ಹೇಳುತ್ತಾನೆ. "ಇಂದ್ರ–ಜ್ಯೇಷ್ಠಾ ದೇವಾಃ," ಎಂಬುದು 'ಇಂದ್ರೋ ಜ್ಯೇಷ್ಠಃ ದೇವಾಃ' ಎಂಬುದರಿಂದಲೇ ವಿಕಸಿತವೆಂದು ಇವನ ಅಭಿಪ್ರಾಯ, ಲ್ಯಾಟಿನ್. ಫಾರಸೀ ಭಾಷೆಗಳಲ್ಲಿಯೂ ಹೀಗೆಯೇ ಬಹುವ್ರೀಹಿರೂಪಗಳಿವೆ. ಉದಾಹರಣೆ :—ಉಗ್ರಬಾಹು, ಹಿರಣ್ಯನೇಮಿ, ಅಶ್ವಪೃಷ್ಠ, ಸುಪರ್ಣ, ಇತ್ಯಾದಿ,

ಹೀಗೆಯೇ ವಿಭಕ್ತಿಪ್ರತ್ಯಯರೂಪಗಳೂ ಇಂಡೋ–ಯೂರೋಪಿಯನ್ ಭಾಷಾ ಪ್ರತ್ಯಯದ ಮೂಲದಿಂದ ವಿಕಾಸಗೊಂಡಿವೆ. ಅವನ್ನಿಲ್ಲಿ ಬಿಡಿಸಿ ತೋರಿಸಲು ಅವಕಾಶವಿಲ್ಲ.

ದ್ವಿವಚನರೂಪಗಳನ್ನು ನೋಡಿದರೆ ಎಂಟು ವಿಭಕ್ತಿಗಳಿದ್ದರೂ ಮೂರೇ ಮುಖ್ಯವಾಗಿವೆ–ಔ (ಉದಾ. : ದೇವೌ) ; ಭ್ಯಾಮ್ (ಉದಾ. : ನೇಮಾಭ್ಯಾಮ್) ಮತ್ತು ಯೋಃ (ಉದಾ. :- ದೇವಯೋಃ). ಮಿಕ್ಕ ರೂಪಗಳಿಲ್ಲದಿರುವುದು ಭಾಷೆಯಲ್ಲಿ ಅದು ಲುಪ್ತವಾಗುತ್ತಿದ್ದುದರ ಪ್ರತೀಕವಾಗಿದೆ. ಲ್ಯಾಟಿನಿನಲ್ಲಿ ದ್ವಿವಚನರೂಪಗಳಿಲ್ಲ. ಇಂಡೋ–ಯೂರೋಪಿಯನ್‌ನಲ್ಲೂ ತುಂಬಾ ಕ್ವಾಚಿತ್ಕವೇ ಇದ್ದಿರಬೇಕು.

ಸರ್ವನಾಮ ಶಬ್ದಗಳು :— 'ಅಹಮ್','ತ್ವಮ್' ಶಬ್ದಗಳಲ್ಲಿ ಬರುವ 'ಅಮ್', ಎಂಬುದು ಮೊದಲಿಗೆ ವಿಭಕ್ತಿ ಚಿಹ್ನೆಯಾಗಿದ್ದಿರಬೇಕೆಂಬುದು ಅವೆಸ್ತಾದ 'ಅಜೆಮ್' 'ತುವಮ್' ಮತ್ತು ಗ್ರೀಕ್‌ನ 'ಎಗೊ','ಸು' (—ತು)ಗಳನ್ನು ನೋಡಿದಾಗ ಕಾಣುತ್ತದೆ. 'ತ್ವಮ್'ನ ಮೂಲರೂಪವಾದ 'ತು' ವೇದದ "ಆ ತೂ ಗಹಿ", "ಪ್ರ ತು ದ್ರವ" ಮುಂತಾದ ಪ್ರಯೋಗಗಳಲ್ಲಿ ಸಿಕ್ಕುತ್ತದೆ.

ಸಂಸ್ಕೃತದ 'ಸ್ವ' ಎಂಬ ಪದ ಇದೇ ಅರ್ಥದಲ್ಲಿ ಎಲ್ಲ ಇಂಡೋ–ಯೂರೋಪಿಯನ್ ಭಾಷೆಗಳಲ್ಲೂ ದೊರೆಯುತ್ತದೆ.

ಭವಾನ್ ಶಬ್ದದ ನಿಷ್ಪತ್ತಿಯನ್ನು ವಾಕರ್‌ನಾಗೆಲ್ 'ಭಗವಾನ್' ಶಬ್ದದಿಂದ ಸಾಧಿಸಿದ್ದಾನೆ. 'ತತ್', 'ಚಿತ್' ಮುಂತಾದವುಗಳಿಗೂ ಸಂವಾದಿಶಬ್ದಗಳು ಇಂಡೋ–ಯೂರೋಪಿಯನ್ ಭಾಷಾವರ್ಗದಲ್ಲಿ ಕಾಣಬರುತ್ತವೆ.

ಸಂಖ್ಯಾವಾಚಕ ಶಬ್ದಗಳು :—ಒಂದರಿಂದ ಹತ್ತರವರೆಗಿನ ಸಂಖ್ಯಾವಾಚಕಗಳು ಭಾಷೆಗಳ ತುಲನೆಗೆ ಮೂಲಭೂತವಾದವು. ಇವು ಅತ್ಯಂತ ಸಂವಾದಿಯಾಗಿವೆ :—

| ಸಂಸ್ಕೃತ | ಲ್ಯಾಟಿನ್ | ಗ್ರೀಕ್ |
|---|---|---|
| ಏಕ | ಉನೊ | ಒಯಿಉಸ್ |
| ದ್ವಿ | ದುಏ | ದುಓ |
| ತ್ರಿ | ತ್ರೇ | ತ್ರಇಸ್ |
| ಚತುರ್ | ಕ್ವಾತ್ರೇ | ತೆತೊರೆಸ್ |
| ಪಂಚ | ಕ್ವಿಂಕ್ವೆ | ಪೆನ್ತ |
| ಷಟ್ | ಸೆಃ | ಜೆಸ್ |
| ಸಪ್ತ | ಸೆಪ್ತ | ಹೆಪ್ತ |
| ಅಷ್ಟ | ಒಕ್ತೊ | ಒಕ್ತೋ |
| ನವ | ನೊವೆಮ್ | ಎನ್—ನಿಅ |
| ದಶ | ದಿಸೆಮ್ | ದೆಕ |
| ಶತಮ್ | ಕೆಸ್ತುಮ್ | ಹೆಕತೊನ್ |

ಕ್ರಿಯಾವಾಚಕಗಳು:— ಸಂಸ್ಕೃತ ಕ್ರಿಯಾವಾಚಕಗಳು ಕೂಡ ಇಂಡೋ-ಯುರೋಪಿಯನ್ ಭಾಷಾಕುಟುಂಬದ ಇತರ ಭಾಷೆಗಳಂತೆ ಪ್ರಯೋಗ, ಲಕಾರ, ಪುರುಷ, ವಚನಗಳಿಂದ ಕೂಡಿವೆ.

ಉದಾಹರಣೆ —

| | | |
|---|---|---|
| ಸಂಸ್ಕೃತ—ಅಭರಮ್ | ಅಭರಃ | ಅಭಾರ್ಷಮ್ |
| ಗ್ರೀಕ್—ಎಫೆರೊಸ್ | ಎಫೆರೆಸ್ | ಎಫ್ರೊನ್ |

ಲಿಟ್ ಲಕಾರದಲ್ಲಿ ಬರುವ ದ್ವಿತ್ವರೂಪಗಳು ಕೂಡ ಗ್ರೀಕ್ ಭಾಷೆಯಲ್ಲಿ ಅದೇ ಲಕಾರದಲ್ಲಿ ಕಾಣಸಿಗುತ್ತವೆ :—

| ಸಂಸ್ಕೃತ | ಗ್ರೀಕ್ |
|---|---|
| ಜಜಾನ | ಗೆಗೊನ |
| ದಿದೇಶ | ದೆದೈಖ |
| ರಿರೇಚ | ಲೆಲೊಯ್ಪ |
| ಭುಭೋಜ | ಫೆಫೆಯ್ಗ |

ದ್ವಿತ್ವವಿಲ್ಲದ ರೂಪ 'ವೇದ' ಎಂಬುದಕ್ಕೆ ಸಂವಾದಿಯಾಗಿ ಗ್ರೀಕ್ 'ಒಇದ' ಎಂದಿದೆ.

ಕ್ರಿಯಾವಿಶೇಷಣಗಳು :— ಇವಕ್ಕೂ ವಿಭಕ್ತಿ ಚಿಹ್ನೆಗಳೇ ಸೇರಿರುತ್ತವೆ.



ದ್ವಿತೀಯಾ ವಿಭಕ್ತಿಪ್ರತ್ಯಯಕ್ಕೆ ಉದಾಹರಣೆಗಳು :—

1. ನಾಮಪದ ಮೂಲದಿಂದಾದವು — ಕಾಮಮ್, ಸಮಕಾಲಮ್, ಅಹರ್ನಿಶಮ್, ಸುಖಮ್ ಇತ್ಯಾದಿ.
2. ವಿಶೇಷಣಗಳಿಂದಾದವು— ಅನಂತರಮ್, ಚಿರಮ್, ನಿತ್ಯಮ್, ಸಾಂಪ್ರತಮ್, ಆಶು, ಸಾಧು.
3. ಸರ್ವನಾಮಶಬ್ದಗಳಿಂದಾದವು -ತತ್, ಯತ್, ಕಿಮ್, ಯಾವತ್, ತಾವತ್.

ತೃತೀಯಾ ವಿಭಕ್ತಿಪ್ರತ್ಯಯಕ್ಕೆ :—ಕ್ಷಣೇನ, ದಿಷ್ಟ್ಯಾ, ಸಹಸಾ, ದೂರೇಣ, ಉಚ್ಚೈಃ, ಶನೈಃ.

ಚತುರ್ಥೀ ವಿಭಕ್ತಿಪ್ರತ್ಯಯಕ್ಕೆ :—ಅರ್ಥಾಯ (ಇದು ಒಂದೇ ಉದಾಹರಣೆ).

ಪಂಚಮೀ ವಿಭಕ್ತಿಪ್ರತ್ಯಯಕ್ಕೆ :—ಬಲಾತ್, ಹಠಾತ್, ಸಂಕ್ಷೇಪಾತ್, ಅಚಿರಾತ್, ದೂರಾತ್ ಕೃಚ್ಛ್ರಾತ್, ಸಾಕ್ಷಾತ್, ಕಸ್ಮಾತ್,

ಸಪ್ತಮೀ ವಿಭಕ್ತಿಪ್ರತ್ಯಯಕ್ಕೆ :—ಅಗ್ರೇ, ಅರ್ಥೇ, ಋತೇ.

ಇದಕ್ಕೆಲ್ಲ ಇಂಡೋ-ಯುರೋಪಿಯನ್ ಭಾಷೆಗಳಲ್ಲಿ ಸಂವಾದಿರೂಪಗಳು ಸಿಕ್ಕುತ್ತವೆ.

ಇದರಂತೆಯೇ ಅತಃ, ಇತಃ ತತಃ, ಯತಃ ಮುಂತಾದವುಗಳಲ್ಲಿ ಕಾಣಬರುವ 'ತಃ' ಪ್ರತ್ಯಯವು ಇಂಡೋ-ಯುರೋಪಿಯನ್ 'ತೊಸ್' ನಿಂದ ವಿಕಸಿತವಾಗಿದ್ದು ಲ್ಯಾಟಿನ್, ಗ್ರೀಕ್‌ಗಳಲ್ಲಿಯೂ ಎಕ್ತೊಸ್ ಮುಂತಾಗಿ ಕಾಣಸಿಗುತ್ತವೆ. ಹೀಗೆಯೆ 'ಥಾ' ಪ್ರತ್ಯಯ (ಕಥಾ, ತಥಾ ಯಥಾ, ಅನ್ಯಥಾ); 'ದಾ' ಪ್ರತ್ಯಯ (ಕದಾ, ಯದಾ, ತದಾ, ಏಕದಾ, ಸದಾ); ಶಃ ಪ್ರತ್ಯಯ (ಖಂಡಶಃ, ಗಣಶಃ, ಶತಶಃ, ಭಾಗಶಃ, ನಿತ್ಯಶಃ); 'ವ' ಪ್ರತ್ಯಯ (ಇವ, ಏವ) ಮುಂತಾದುವಕ್ಕೂ ಈ ಭಾಷಾಕುಟುಂಬದಲ್ಲಿ ಸಂವಾದಿರೂಪಗಳಿವೆ.

## ಸಂಸ್ಕೃತವಾಕ್ಯರಚನೆ

ಇಂಡೋ-ಯುರೋಪಿಯನ್ ಮೂಲಭಾಷೆಯ ವಾಕ್ಯರಚನೆ ನಮಗೆ ದೃಷ್ಟವಲ್ಲ ; ಕೇವಲ ಕಲ್ಪಿತ. ಆದರೂ ಗ್ರೀಕ್, ಲ್ಯಾಟಿನ್, ಅವೆಸ್ತಾ ಮುಂತಾದ ಭಾಷೆಗಳ ವಾಕ್ಯರಚನೆಗೆ ಸಂವಾದಿಯಾದ ಅಂಶಗಳೇ ಸಂಸ್ಕೃತದಲ್ಲೂ ಎದ್ದು ಕಾಣುತ್ತವೆಂಬುದನ್ನು ಇಲ್ಲಿ ಗಮನಿಸಬೇಕು.

ಸಂಸ್ಕೃತವಾಕ್ಯರಚನೆ ಸರಳವಾಗಿದೆ. ಪ್ರತಿವಾಕ್ಯದಲ್ಲಿಯೂ ಒಂದು ಕರ್ತೃ, ಒಂದು ಕ್ರಿಯೆ, ಸಕರ್ಮಕ ಕ್ರಿಯೆಯಾದರೆ ಒಂದು ಕರ್ಮ ಇರುತ್ತವೆ. ನಾಮಗಳ ಜೊತೆಗೆ ವಿಶೇಷಣಗಳು ಬರುವಂತೆ ಕ್ರಿಯಾವಿಶೇಷಣಗಳೂ ಬರಬಹುದು. ಪ್ರತಿಯೊಂದು ಕ್ರಿಯೆಗೂ ಕರ್ತರಿ ಅಥವಾ ಕರ್ಮಣಿ ಅರ್ಥ, ಲಕಾರ, ಪುರುಷ, ವಚನಗಳಿರುತ್ತವೆ. ಕ್ರಿಯೆಗೂ ಕರ್ತೃಭಿನ್ನವಾದ ಮತ್ತೊಂದಕ್ಕೂ ಸಂಬಂಧ ಹೇಳುವ ಪದಗಳನ್ನು 'ಕರ್ಮಪ್ರವಚನೀಯ' ಗಳೆನ್ನುವರು. ಇವಲ್ಲದೆ, 'ಚ' 'ಪರಂ'. 'ತಥಾ', 'ಅಥವಾ' ಮುಂತಾದ ಅವ್ಯಯಗಳೂ ಇರುತ್ತವೆ.

ಒಂದು ವಾಕ್ಯದಲ್ಲಿರುವ ಪ್ರತ್ಯೇಕ ಪದದ ಸಂಬಂಧ ವಿಭಕ್ತಿಪ್ರತ್ಯಯಗಳಿಂದ ಬೋಧ್ಯವಿರುವುದು ಸಂಸ್ಕೃತಭಾಷೆಯ ವೈಶಿಷ್ಟ್ಯ. ಆದ್ದರಿಂದಲೇ ವಾಕ್ಯದಲ್ಲಿ ಯಾವದೇ ಪದಕ್ಕೂ ನಿಯತಸ್ಥಾನವೆಂಬುದಿಲ್ಲ, ಆಧುನಿಕ ಭಾಷೆಗಳಲ್ಲಿರುವಂತೆ. "ಸಃ ಪುರುಷಃ ತಂ ಶ್ವಾನಮತಾಡಯತ್ " ಎಂಬ ವಾಕ್ಯವನ್ನು ನಾವು " ಸ ಪುರುಷೋತಾಡಯೆತ್ತಂಶ್ವಾನಮ್ " ಎಂದಾದರೂ ಹೇಳಬಹುದು ; ಇಲ್ಲವೆ " ತಂ ಶ್ವಾನಮತಾಡಯತ್ ಸ ಪುರುಷಃ " ಎಂದಾದರೂ ಹೇಳಬಹುದು, ಹೇಗೆ ಹೇಳಿದರೂ ಅರ್ಥ ಒಂದೇ. ಇದೇ ಅನಿಯತಕ್ರಮವು ಗ್ರೀಕ್, ಲ್ಯಾಟಿನ್ ವಾಕ್ಯಗಳಲ್ಲೂ ಕಾಣಬರುತ್ತದೆ.

ಸಂಸ್ಕೃತವಾಕ್ಯದ ಕರ್ತೃವನ್ನು ಪ್ರಥಮಾ ಇಲ್ಲವೆ ತೃತೀಯಾ ವಿಭಕ್ತಿಗಳೆರಡರಿಂದಲೂ ನಿರ್ದೇಶಿಸಬಹುದು. ಕರ್ಮಣಿ ಪ್ರಯೋಗದಲ್ಲಿ ತೃತೀಯಾ ; ಕರ್ತರಿಯಲ್ಲಿ ಪ್ರಥಮಾ, ಅಸ್ತ್ಯರ್ಥವನ್ನು ಬೋಧಿಸುವ ಕ್ರಿಯೆಯನ್ನು ಲೋಪ ಮಾಡಲೂ ಅವಕಾಶವುಂಟು; "ಸಃ ಪುರುಷಃ ಶೂರಃ"= "ಶೂರಃ ಸ ಪುರುಷಃ " ಎಂಬ ವಾಕ್ಯಗಳಲ್ಲಿ ' ಅಸ್ತಿ ' ಅಥವಾ ' ಭವತಿ ' ಕ್ರಿಯೆ ಲುಪ್ತವಾದರೂ ನಡೆಯುತ್ತದೆ. ಆದರೆ ವಿಧೇಯವನ್ನು ಸರ್ವನಾಮ ಮತ್ತು ಉದ್ದೇಶ್ಯಗಳ ನಡುವೆ ಪ್ರಯೋಗಿಸುವುದಾದರೆ — " ಸಃ ಶೂರಃ ಪುರುಷಃ " ಇಲ್ಲಿ " ಅಸ್ತಿ " ಲೋಪಕ್ಕೆ ಅವಕಾಶ ಕಡಿಮೆ. ಇದೇ ವೈಶಿಷ್ಟ್ಯವೇ ಗ್ರೀಕ್ ಭಾಷೆಯಲ್ಲಿಯೂ ಇದೆ.

ಸಂಸ್ಕೃತದಲ್ಲಿ 'ದುಹ್ ', ' ಯಾಚ್', 'ಪಚ್' ಮುಂತಾದ ದ್ವಿಕರ್ಮಕ ಧಾತುಗಳಿರುವಂತೆಯೇ ಗ್ರೀಕ್‌ನಲ್ಲಿಯೂ ದ್ವಿಕರ್ಮಕಧಾತುಗಳಿವೆ.

" ದ್ಯಾಮನ್ತರಾ" ಎನ್ನುವಾಗ 'ಅನ್ತರಾ' ಶಬ್ದಯೋಗದಿಂದ ' ದ್ಯಾಮ್ ' ಎಂಬಲ್ಲಿ ದ್ವಿತೀಯಾವಿಭಕ್ತಿ ಬಂದಿದೆ. ಹೀಗೆ ಕರ್ಮಪ್ರವಚನೀಯಕೃತವಾದ ಉಪಪದವಿಭಕ್ತಿಗಳೂ ಗ್ರೀಕ್‌ಭಾಷೆಯಲ್ಲಿ ಉಂಟು. ಆದರೆ ಗ್ರೀಕ್‌ನಲ್ಲಿ ನಾಮಪದದ ಹಿಂದೆ ಬರುವ ಈ ಕರ್ಮಪ್ರವಚನೀಯಗಳು ಸಂಸ್ಕೃತದಲ್ಲಿ ನಾಮಪದದ ಮುಂದೆ ಬರುತ್ತವೆ.

ವೈದಿಕಭಾಷೆಯಲ್ಲಿ ಉಪಸರ್ಗಗಳಾಗಿದ್ದುವೇ ಮುಂದೆ ' ಪರಸರ್ಗ (post-position) ಗಳಾಗಿ ವಿಕಸಿತವಾದಂತೆ ತೋರುತ್ತದೆ. ಉದಾಹರಣೆಗೆ, 'ಅಭಿತಃ', 'ಪರಿತಃ '—ಇವು 'ಅಭಿ' ಮತ್ತು ' ಪರಿ ' ಗಳ ವಿಕಸಿತರೂಪಗಳೇ. 'ತಃ' ಪ್ರತ್ಯಯವನ್ನು ಸೇರಿಸಿ ನೂತನ ಶಬ್ದಗಳನ್ನು ಮಾಡಿಕೊಂಡಂತಿದೆ ; ಇವೇ ಕರ್ಮಪ್ರವಚನೀಯಗಳು. ' ಅನು ' ಉಪಸರ್ಗವಾಗಿದ್ದಾಗ ಕ್ರಿಯೆಯ ಸಕಾರಕ್ಕೆ ಷಕಾರಾದೇಶವಾಗುವದು—' ಅನುಷಿಂಚತಿ ' ; ಅದೇ ಕರ್ಮಪ್ರವಚನೀಯವಾದರೆ ಈ ಆದೇಶವಿಲ್ಲ— 'ಅನುಸಿಂಚತಿ.' ಇದೇ ಜಾತಿಯ ವೈಲಕ್ಷಣ್ಯ ಗ್ರೀಕ್ ಭಾಷೆಯಲ್ಲೂ ಉಳಿದಿದೆ.

ಷಷ್ಠೀವಿಭಕ್ತಿಯ ಸಂಬಂಧ ಸಾಮಾನ್ಯವಾಗಿ ನಾಮಪದದೊಂದಿಗೆ ಇರುವದೇ ಹೊರತು ಕ್ರಿಯಾಪದದೊಡನೆ ಇರುವುದಿಲ್ಲ. "ದಶರಥಸ್ಯ ಪುತ್ರಃ ಲಂಕಾಯಾಂ ಬಾಣೇನ ರಾವಣಂ ಜಘಾನ" ಎಂಬ ವಾಕ್ಯದಲ್ಲಿ 'ದಶರಥಸ್ಯ' ಎಂಬುದರ ಸಂಬಂಧ ' ಪುತ್ರಃ ' ಎಂಬ ನಾಮಪದದೊಡನೆಯೇ ಹೊರತು ' ಜಘಾನ ' ಎಂಬ ಕ್ರಿಯಾಪದದೊಡನೆಯಲ್ಲ. ಆದರೆ ಪಾಣಿನಿ " ಅಧೀಗರ್ಥದಯೇಷಾಂ ಕರ್ಮಣಿ " ಎಂಬ ಸೂತ್ರದಲ್ಲಿ ಹೇಳುವ—' ಮಾತುಃ ಸ್ಮರಣಮ್ ' ' ಸರ್ಪಿಷೋ ದಯನಮ್ ' ಗಳಲ್ಲಿ ಕರ್ಮಣಿ ಷಷ್ಠಿಯಿದೆ. ಇಂತಹ ಕರ್ಮಣಿ ಷಷ್ಠಿಗಳು ಗ್ರೀಕ್ ಭಾಷೆಯಲ್ಲಿಯೂ ದೊರೆಯುತ್ತವೆ.

ಹೀಗೆಯೇ ಸಹಾರ್ಥಕ ಶಬ್ದಗಳ ಯೋಗದಲ್ಲಿ ಬರುವ ತೃತೀಯಾವಿಭಕ್ತಿ, ಕ್ರುಧ, ದ್ರುಹ, ಈರ್ಷ್ಯಾ, ಅಸೂಯಾರ್ಥಕ ಕ್ರಿಯಾಯೋಗದಿಂದ ಬರುವ ಚತುರ್ಥೀ, ನಮಃ, ಸ್ವಸ್ತಿ, ಇತ್ಯಾದಿಗಳ ಯೋಗದಿಂದ ಬರುವ ಚತುರ್ಥಿಗಳಿಗೂ ಗ್ರೀಕ್‌ನಲ್ಲಿ ಉದಾಹರಣೆಗಳಿವೆ.

ಸಂಸ್ಕೃತದಲ್ಲೂ ಗ್ರೀಕ್‌ಭಾಷೆಯಂತೆಯೇ ಆತ್ಮನೇ ಮತ್ತು ಪರಸ್ಮೈಪದಗಳಿವೆ. ಗ್ರೀಕ್‌ನಲ್ಲಿ ಅವಕ್ಕೆ ಕ್ರಮವಾಗಿ ' ಮಿಡಲ್ ' ಮತ್ತು ' ಆಕ್ಟಿವ್ ' ವಾಯ್ಸ್ ಎನ್ನುತ್ತಾರೆ. ಕೆಲವೊಂದು ಉಪಸರ್ಗಗಳ ಯೋಗದಿಂದ ಪರಸ್ಮೈಪದ ಹೋಗಿ ಆತ್ಮನೇಪದವಾಗುವದೂ ಉಂಟು— ತಿಷ್ಠತಿ—ಸಂತಿಷ್ಠತೇ, ಅವತಿಷ್ಠತೆ, ಸಂಸ್ಕೃತದ ಕರ್ಮಣಿ ಪ್ರಯೋಗಗಳೆಲ್ಲ ಆತ್ಮನೇಪದದಲ್ಲಿಯೇ ಇರುತ್ತವೆ, ಗ್ರೀಕಿನಲ್ಲಿರುವಂತೆ. ಭಾವೇಪ್ರಯೋಗವೂ ಗ್ರೀಕಿನಲ್ಲುಂಟು.

ಸಂಸ್ಕೃತದಲ್ಲಿ ' ಯಾವತ್ಪುರಾನಿಪಾತಯೋರ್ಲಟ್ ' ಎಂದು ನಿರ್ದೇಶಿಸಿರುವ ಕಾಲಪ್ರಯೋಗವೈಶಿಷ್ಟ್ಯವೇ ಗ್ರೀಕ್‌ನಲ್ಲೂ ಇದೆ.

ಹೀಗೆಯೇ ಅನದ್ಯತನಭೂತ ' ಲಿಟ್ ' ಲಕಾರ, ಲಙ್, ಲಿಙ್ ಮುಂತಾದ ಲಕಾರಭೇದಗಳೂ ಸಂಸ್ಕೃತ ಮತ್ತು ಗ್ರೀಕ್‌ಗಳೆರಡರಲ್ಲೂ ಕಾಣಸಿಗುತ್ತವೆ.

ಈ ಎಲ್ಲ ಮೂಲಭೂತ ಸಾದೃಶ್ಯಗಳ ಮೇಲಿಂದಲೂ ಸಂಸ್ಕೃತಭಾಷೆ ಇಂಡೋ-ಯುರೋಪಿಯನ್ ಭಾಷಾಕುಟುಂಬಕ್ಕೆ ಸೇರುವುದೆಂಬ ಅಂಶವೇ ಸ್ಥಿರೀಕೃತವಾದಂತಾಗುತ್ತದೆ.

## ಸಂಸ್ಕೃತವಿಕಾಸದಲ್ಲಿ ಭಿನ್ನಭಾಷಾಕುಟುಂಬಗಳ ಪ್ರಭಾವ

ಆರ್ಯರು ಭಾರತದಲ್ಲಿ ಕಾಲಿಡುವ ಮುನ್ನ ಇಲ್ಲಿಯ ಮೂಲನಿವಾಸಿಗಳು ದ್ರಾವಿಡ ಮತ್ತು ಆಸ್ಟ್ರೋ-ಏಷ್ಯಾಟಿಕ್ ಭಾಷೆಗಳನ್ನಾಡುತ್ತಿದ್ದರೆಂದು ಕಾಣುತ್ತದೆ. ಧ್ವನಿಗಳ ಉಚ್ಚಾರಣೆ ಮತ್ತು ಪದರಚನೆಗಳಲ್ಲಿ ಈ ಅನ್ಯಭಾಷೆಗಳ ಪ್ರಭಾವ ಹೆಚ್ಚಾಗಿ ಕಾಣದಿದ್ದರೂ ಶಬ್ದಸಾಮಗ್ರಿಯ ದೃಷ್ಟಿಯಿಂದ ಅತ್ಯಧಿಕವಾದ ಪ್ರಭಾವವನ್ನು ಕಾಣಬಹುದಾಗಿದೆ. ಈ ದ್ರಾವಿಡ ಮತ್ತು ಆಸ್ಟ್ರಿಕ್ ಭಾಷಾಕುಟುಂಬದ ಭಾಷೆಗಳೆಷ್ಟೋ ಇಂದಿಗೂ ಭಾರತದಲ್ಲಿ ಪ್ರಚಾರದಲ್ಲಿದೆ. ಹಾಗೆಯೇ ' ಮುಂಡಾ ' ಭಾಷಾವರ್ಗದ ಪ್ರಭಾವವೂ ಗಣನೀಯವಾಗಿದೆ. ನಮ್ಮ ಪ್ರಾಕೃತಭಾಷಾವೈಯಾಕರಣಿಗಳು ' ದೇಶ್ಯ ' ವೆಂದ ಅನೇಕ ಶಬ್ದಗಳು ಈ ಕೋಟಿಯಲ್ಲಿ ಬರುತ್ತವೆ. ಡಾ॥ ಸುನೀತಿಕುಮಾರ ಚಟರ್ಜಿ, ಎಮೆನೋ, ಪ್ರಜಿಲೂಸ್ಕಿ ಮುಂತಾದ ಆಧುನಿಕ ವಿದ್ವಾಂಸರ ಅಭಿಪ್ರಾಯದಲ್ಲಿ ಮುಂಡಾ ಮತ್ತು ದ್ರಾವಿಡಭಾಷಾಶಬ್ದಗಳು ಹೇಗೆ ಈಗ ಸಂಸ್ಕೃತದಲ್ಲಿ ರೂಪಾಂತರಗೊಂಡಿವೆಯೆಂಬುದಕ್ಕೆ ಕೆಲವು ಉದಾಹರಣೆಗಳನ್ನಿಲ್ಲಿ ಕೊಡಲಾಗಿದೆ :—

| ಸಂಸ್ಕೃತ | ಮುಂಡಾ |
|---|---|
| 1. ಕಪೋಲ | ಕಾಪೋ |
| 2. ಭೇಕ | ತಬೇಗ, ಬುಅಕ |
| 3. ಜಂಘಾ | ಜಂಗಾ |
| 4. ಕಪೋತ | ಕಪೋತ |

'ಮ್ಬ' 'ಬು' ಧ್ವನಿಗಳಿರುವ ಶಬ್ದಗಳು :—ದಾಡಿಂಬ, ಕದಂಬ, ಶಿಂಬ, ನಿಂಬ, ರಂಭಾ, ಸ್ತಂಬ, ತಂಂಬ, ತುಂಬುರು, ಉಡುಂಬರ, ಜಂಬು, ಜಂಬೀರ, ಲಾಬು, ಅಲಾಬು—ಎಲ್ಲವೂ ಮುಂಡಾ ಭಾಷಾವರ್ಗದಿಂದ ಸಂಸ್ಕೃತಕ್ಕೆ ಬಂದುವೆಂದು ಪ್ರಜಿಲೂಸ್ಕಿ ಹೇಳುತ್ತಾನೆ. 'ನ್ದ', 'ಙ್ಗ' ಧ್ವನಿಗಳಿರುವ ದೇಶವಾಚಕಶಬ್ದಗಳೂ ಹಾಗೆಯೇ ಎಂದು ಸಿಲ್ವೇನ್ ಲೇವಿ ತಿಳಿಸುತ್ತಾನೆ—ಅಂಗ, ವಂಗ, ಕಲಿಂಗ, ತ್ರಿಲಿಂಗ, ಪುಲಿಂದ, ಕುಲಿಂದ, ಗಂಗಾ.

| ಸಂಸ್ಕೃತ | ದ್ರಾವಿಡ | |
|---|---|---|
| ಘೋಟಕ | ಗುರ್ರಮು (ತೆಲುಗು) ಕುದುರೆ | (ಕನ್ನಡ) |
| ಬಿಡಾಲ | ಪಿಲ್ಲಿ | ( ,, ) |
| ಮುಟಚೀ | ಮಿಡಿತೆ | (ಕನ್ನಡ) |
| ಮಯೂರ | ಮಯಿಲ್ | (ತಮಿಳು) |
| ಅನಲ | ಅನಲ | ( ,, ) |
| ಉಲೂಖಲ | ಉಲಕ್ಕೈ | ( ,, ) |
| ಕಟು | ಕಟು | ( ,, ) |
| ಕಾನನ | ಕಾನ್ | ( ,, ) |
| ಕುಟೀ | ಗುಡಿ | (ಕನ್ನಡ) |
| ಕುದ್ದಾಲ | ಗುದ್ದಲಿ | ( ,, ) |
| ಕುಂತಲ | ಕೂಂದಲ್ | ( ,, ) |
| ಖಲ | ಕಳ್ಳ | ( ,, ) |
| ಘುಣ | ಗೊಣ್ಣೆ (ಹುಳ) | ( ,, ) |
| ಘೂಕ | ಗೂಗೆ | ( ,, ) |
| ಚೂಡಾ | ಸೂಡು | ( ,, ) |
| ದಂಡ | ದಂಟು | ( ,, ) |
| ನೀರ | ನೀರ್ | ( ,, ) |
| ಪಂಡಿತ | ಪಂಡು (ತೆಲಗು—ಪಕ್ವ ಫಲ) | |
| ಬಿಲ್ವ | ಬಳವಲ | (ಕನ್ನಡ) |
| ಮೀನ | ಮೀನ್ | ( ,, ) |
| ಮುಕುಲ | ಮುಂಗುಳ್ | ( ,, ) |
| ಹೇರಂಬ | ಎರುಮೈ | (ತಮಿಳು) |



ಇವುಗಳಲ್ಲಿ ಎಲ್ಲವೂ ಅನ್ಯಭಾಷೆಗಳಿಂದ ಬಂದ ಎರವಲು ಶಬ್ದಗಳೆಂದೇ ಪ್ರತಿಜ್ಞೆ ಮಾಡುವಂತಿಲ್ಲ. 'ಕಾಕ', 'ಘೂಕ' ಮುಂತಾದವು ಅನುಕರಣಾತ್ಮಕ ಧ್ವನಿಪೂರ್ಣವಿದ್ದು ಸ್ವತಂತ್ರವಾಗಿಯೂ ಜನಿಸಿರಬಹುದು.

ಭಾಷಾವಿಕಾಸದಲ್ಲಿ ಸಂಸ್ಕೃತದಿಂದ ಹೋಗಿ ಪ್ರಾಕೃತರೂಪವನ್ನು ತಳೆದ ಎಷ್ಟೋ ಶಬ್ದಗಳೂ ಪುನರಪಿ ಸಂಸ್ಕೃತಭಾಷೆಯಲ್ಲಿ ಪ್ರವಿಷ್ಟಗೊಂಡು ಉದಾಹಾರಣೆಗಳು ಸಿಕ್ಕುತ್ತವೆ :–

| ಸಂಸ್ಕೃತ | ಪ್ರಾಕೃತ | ಸಂಸ್ಕೃತ |
|---|---|---|
| ವೃತ | ವಟ | ವಟ |
| ಸ್ನಾಪಿತ | ನಾಪಿತ | ನಾಪಿತ |
| ಲಕ್ಷಣ | ಲಾಂಛನ | ಲಾಂಛನ |
| ಭರ್ತಾ | ಭಟ್ಟ | ಭಟ್ಟ |
| ಭೃತ | ಭಟ | ಭಟ |
| ಮನೋಽರ್ಥ | ಮನೋರಥ | ಮನೋರಥ |

ಹೀಗೆ ಪ್ರಾಕೃತದಿಂದ ಸಂಸ್ಕೃತೀಕರಣವಾಗುವಾಗ ಧ್ವನಿಪರಿಣಾಮಗಳೂ,ಅರ್ಥಪರಿಣಾಮಗಳೂ ಆಗುವುದುಂಟು.

| ಸಂಸ್ಕೃತ | ಪ್ರಾಕೃತ | ಸಂಸ್ಕೃತ |
|---|---|---|
| ಮಾದೃಶ | ಮಾರಿಸ | ಮಾರಿಷ |
| ಅಂಗಾರ | ಇಂಗಾಲ | ಇಂಗಾಲ |
| ಮದಿರ | ಮೇರ | ಮೈರೇಯ |

ಶ್ರೀ ಹರ್ಷನು ನೈಷಧೀಯ ಚರಿತದಲ್ಲಿ (ಹದಿನಾಲ್ಕನೆಯ ಸರ್ಗ) ಪ್ರಯೋಗಿಸುವ 'ಭೂರಿತರವಾರಿ' ಎಂಬಲ್ಲಿ 'ತರವಾರಿ' ಎಂಬುದು 'ತಲವಾರ್'—ಕತ್ತಿ ಎಂಬ ಫಾರಸೀ ಶಬ್ದವಾಗಿದೆ.

## ಸಂಸ್ಕೃತದಿಂದ ಪ್ರಾಕೃತ ಭಾಷೆಗಳ ವಿಕಾಸಕ್ರಮ

ಬ್ರಾಹ್ಮಣಗಳ ಕಾಲದಲ್ಲಿಯೂ ಮೂರು ಬಗೆಯ ಉಚ್ಚಾರಣಾ ಭೇದಗಳಿದ್ದುವೆಂದು ತಿಳಿಯಬರುತ್ತದೆ—(1) ಉದೀಚ್ಯ, (2) ಮಧ್ಯದೇಶೀಯ, ಮತ್ತು (3) ಪ್ರಾಚ್ಯ. ಇವುಗಳಲ್ಲಿ ಉದೀಚ್ಯ ನುಡಿಯೇ ಸಂಸ್ಕೃತಕ್ಕೆ ಅತ್ಯಂತ ಸಮೀಪವಾಗಿದ್ದುದ್ದು. ಪಾಣಿನಿ ವ್ಯಾಕರಣ ರಚಿಸಿದ್ದು ಈ ನುಡಿಗೇ ಆಗಿದೆ. ಮುಂದೆ ಪ್ರಾಚ್ಯ ನುಡಿಯು ಮಾಗಧಿಯಾಗಿಯೂ, ಮಧ್ಯದೇಶೀಯ ನುಡಿಯು ಮಹಾರಾಷ್ಟ್ರೀ ಹಾಗು ಶೌರಸೇನಿಗಳಾಗಿಯೂ ವಿಕಾಸಗೊಂಡವು,

ಅಶೋಕನ ಶಿಲಾಲೇಖಗಳಲ್ಲಿಯೇ ಈ ಪ್ರಾದೇಶಿಕ ಭಾಷಾಭೇದಗಳು ಎದ್ದು ಕಾಣುತ್ತವೆ. 'ಲಿಖ್' ಧಾತುವಿನ ಣಿಜಂತರೂಪವೇ ಗಿರ್‌ನಾರ್ ಶಿಲಾಲೇಖದಲ್ಲಿ 'ಲೀಖಾಪಿತಾ' ಎಂದೂ, ಶಹಬಾಜಗಡೀ ಲೇಖದಲ್ಲಿ 'ಲಿಖಪಿತು' ಎಂದೂ, ಜೌಗಢವಾಲದ ಲೇಖದಲ್ಲಿ 'ಲಿಖಾಪಿತಾ' ಎಂದೂ, ಮಾನ್‌ಸೇರ್ ಲೇಖದಲ್ಲಿ 'ಲಿಖಪಿತ' ಎಂದೂ ದೊರೆಯುತ್ತದೆ.

ಈ ಉಪಭಾಷೆಗಳು ಕ್ರಿ. ಪೂ. 200ರ ವೇಳೆಗೆ ಪೈಶಾಚೀ, ಶೌರಸೇನೀ, ಮಹಾರಾಷ್ಟ್ರೀ ಮಾಗಧೀ ಎಂಬ ಸ್ವತಂತ್ರ ಪ್ರಾಕೃತಗಳ ಮೂಲರೂಪವನ್ನು ಮುಟ್ಟಿದವೆನ್ನಬಹುದು. ಸಾಹಿತ್ಯ ದೃಷ್ಟಿಯಿಂದ ಪ್ರಾಕೃತ ವ್ಯಾಕರಣಕಾರರು ಮಹಾರಾಷ್ಟ್ರಿಯನ್ನೇ ಪರಿನಿಷ್ಠಿತವೆಂದು ಭಾವಿಸುತ್ತಾರೆ.

ಪ್ರಾಕೃತಗಳು ಸಂಸ್ಕೃತಜನ್ಯವೆಂದೇ ನಮ್ಮ ವ್ಯಾಕರಣಕಾರರ ಮತ. "ಪ್ರಕೃತಿಃ ಸಂಸ್ಕೃತಮ್, ತತ್ರ ಭವಂ, ತತ ಆಗತಂ ವಾ ಪ್ರಾಕೃತಮ್ (ಹೇಮಚಂದ್ರ). ಆದರೆ ಆಧುನಿಕ ವಿದ್ವಾಂಸರು ಇದನ್ನು ಪೂರ್ಣವಾಗಿ ಒಪ್ಪುವುದಿಲ್ಲ. ಪ್ರಾಕೃತಗಳು ಸಂಸ್ಕೃತಜನ್ಯವಲ್ಲ ; ಸಂಸ್ಕೃತ ಪೂರ್ವದ ವೈದಿಕಭಾಷೆಯ ಉಪಭಾಷೆಗಳಿಂದ ಜನ್ಯವೆಂದು ಅವರು ಭಾವಿಸುತ್ತಾರೆ.

ಪ್ರಾಕೃತಗಳ ಎರಡನೆಯ ವಿಕಾಸಾವಧಿ ಕ್ರಿ. ಪೂ. 200 ರಿಂದ ಕ್ರಿ. ಶ. 600ರ ವರೆಗೆ ಈ ಅವಧಿಯಲ್ಲಿ ಶೌರಸೇನಿಗೆ ಮಹತ್ತ್ವ ಬರುತ್ತದೆ. ಮಹಾರಾಷ್ಟ್ರಿಯೂ ಇದರ ಒಂದು ಶೈಲಿಯೇ ಎನಿಸುವಂತಾಯಿತು. ಮಹಾರಾಷ್ಟ್ರಿಯಲ್ಲಿ ಸಂಸ್ಕೃತದಂತೆ ಗಾಥಾಸಪ್ತಶತಿ. ಸೇತುಬಂಧ, ಗಉಡವಹೋ ಮುಂತಾದ ಕಾವ್ಯಗಳು ಉದಯಿಸಿದುವು. ಬೌದ್ಧರ ಧಾರ್ಮಿಕ ಸಾಹಿತ್ಯವೆಲ್ಲ ಪಾಳಿಯಲ್ಲಿದೆ. ಪಾಳಿಯು ಶೌರಸೇನಿಯ ವಿಕಸಿತರೂಪವೇ ; ಇದರಲ್ಲಿ ಸ್ವಲ್ಪ ಮಾಗಧಿಯಿದ್ದರೂ ಸಹ, ಮಾಗಧಿಗೂ ಪಾಳಿಗೂ ಕೆಲವು ಭೇದಗಳೂ ಇವೆ. ಮಾಗಧಿಯಲ್ಲಿ 'ಶ', 'ಷ', 'ಸ'ಗಳ ಬದಲು ಬರಿಯ 'ಶ' ಒಂದೇ ಇದೆ ; 'ರ್' ಸ್ಥಾನದಲ್ಲಿಯೂ 'ಲ್' ಒಂದೇ ಇದೆ. ಆದರೆ ಪಾಳಿಯಲ್ಲಿ 'ಸ್' ಮತ್ತು 'ರ್'ಗಳೂ ಕಾಣಸಿಗುತ್ತವೆ. ಆದ್ದರಿಂದ ಪಾಳಿಯನ್ನು ಮಾಗಧಿಯೆಂದೇ ಹೇಳಲು ಬರುವುದಿಲ್ಲ.

ಪೈಶಾಚೀಪ್ರಾಕೃತವು ಕಾಶ್ಮೀರಿ ಮುಂತಾದ ಔತ್ತರೇಯ ದೇಶಭಾಷೆಗಳ ಮೂಲರೂಪ ವಿರಬಹುದೆಂದು ಭಾಷಾಶಾಸ್ತ್ರಜ್ಞರ ಮತ.

ಇಲ್ಲಿಂದಾಚೆಗೆ ಎಂದರೆ ಕ್ರಿ. ಶ. 6ನೆಯ ಶತಮಾನದಿಂದ 10ನೆಯ ಶತಮಾನದವರೆಗೆ ಪ್ರಾಕೃತಭಾಷೆಗಳ ರೂಪವೂ ಬದಲಾಗಿ, ವಿಕೃತವಾಗಿ "ಅಪಭ್ರಂಶ"ಗಳ ಉದಯವಾಗುತ್ತದೆ. ಇವು ಮೊದಲು ಜನಭಾಷೆಯಾಗಿದ್ದು ಕ್ರಮೇಣ ಸಾಹಿತ್ಯಭಾಷೆಗಳಾದವು. ಕ್ರಿ. ಶ. 1000 ದಿಂದ ಈಚೆಗೆ ಈ ವಿಕಾಸವು ಮುಂದೆ ಸಾಗಿ ಆಧುನಿಕ ಭಾರತೀಯ ಭಾಷೆಗಳಾದ ಬಂಗಾಳಿ. ಹಿಂದಿ, ಮರಾಠಿ, ಗುಜರಾತಿ ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿ ಪರ್ಯವಸನ್ನವಾಗುತ್ತದೆ. ಇವುಗಳಲ್ಲಿ ಧ್ವನಿವಿಕಾಸ, ಶಬ್ದರಚನಾವಿಕಾಸ, ಮುಂತಾದುವೆಲ್ಲ ಸ್ವತಂತ್ರ ಶಾಸ್ತ್ರೀಯ ಅಧ್ಯಯನಕ್ಕೆ ವಿಷಯಗಳಾಗುತ್ತವೆ.



## ಸಂಸ್ಕೃತ—ಗ್ರೀಕ್—ಲ್ಯಾಟಿನ್ ಸಮಾನಾಂತರ ಶಬ್ದ ಕೋಷ್ಟಕ

ಬಹುವಚನರೂಪ

| | ಸಂಸ್ಕೃತ | ಗ್ರೀಕ್ | ಲ್ಯಾಟಿನ್ |
|---|---|---|---|
| ಪ್ರಥಮಾ— | ಯುಗಾ (ವೈದಿಕ)<br>ಯುಗಾನಿ | ಜುಗಾ | ಜುಗ |
| ದ್ವಿತೀಯಾ— | ಯುಗಾನಿ | ಜುಗಾ | ಜುಗ |

ಏಕವಚನರೂಪ

| | ಸಂಸ್ಕೃತ | ಗ್ರೀಕ್ | ಲ್ಯಾಟಿನ್ |
|---|---|---|---|
| ಪ್ರಥಮಾ— | ಯುಗಮ್ (ನಪುಂ.) | ಜುಗೊ (ನಪುಂ.) | ಜುಗೊ. (ನಪುಂ) |
| ದ್ವಿತೀಯಾ— | ಯುಗಮ್ | ಜುಗೊನ್ | ಜುಗುಮ್ |

ಮತ್ತೂ ಕೆಲವು ಶಬ್ದಸಾಮ್ಯಗಳು

| ಸಂಸ್ಕೃತ | ಗ್ರೀಕ್ |
|---|---|
| ಮನಃ | ಮೆನೊಸ್ |
| ಮನಸಃ | ಮೆನೆಸ್ |
| ಮನಸಿ | ಮೆನೆಸಿ |
| ಮನಸೀ | ಮೆನೇ |
| ಅಹಮ್ | ಎಗೊನ್ |
| ಮಾಮ್ | ಎಮೆ, ಮೆ |
| ಮಹ್ಯಮ್ | ಎಮಿನ್ |
| ಮಯಿ | ಮೊಇ |
| ನೌ | ನೊ |
| ತ್ವಮ್ | ತು |
| ತ್ವಾಮ್ | ತೆ |
| ತ್ವಯಿ | ಸೊಯಿ |
| ಭರಾಮಿ | ಫೆರೊ |
| ದದಾಮಿ | ದಿದೋಮಿ |
| ಭರನ್ತಿ | ಫರೊನ್ತಿ |

## ಅರ್ಥವಿಜ್ಞಾನ (Semantics)

ಭಾಷೆಗೂ ಅರ್ಥಕ್ಕೂ ಅವಿಭಾಜ್ಯ ಸಂಬಂಧವಿದೆ. ಭಾಷೆಯು ಶರೀರದ ನಿರ್ಮಾಣವೇ ಅರ್ಥದ ಸಲುವಾಗಿರುವುದರಿಂದ ಅರ್ಥವೇ ಭಾಷೆಯ ಆತ್ಮ. ಶಬ್ದಾರ್ಥಗಳ ಈ ಅವಿನಾಭಾವ ಸಂಬಂಧವನ್ನೇ ಕಾಳಿದಾಸನು "ವಾಗರ್ಥಾವಿವ ಸಂಪೃಕ್ತೌ" ಎಂದು ಕಾವ್ಯಮಯವಾಗಿ ಉದ್ಗರಿಸಿದ್ದಾನೆ. ಅರ್ಥದ ಮಹತ್ತ್ವವನ್ನು ಕುರಿತು ಹೇಳುತ್ತ ಯಾಸ್ಕನು ಅರ್ಥಜ್ಞಾನವಿಲ್ಲದ ಉಚ್ಚರಿಸಿದ ಶಬ್ದಗಳಿಂದ ಯಾವ ಪ್ರಯೋಜನವೂ ಇಲ್ಲವೆಂದು ಸಾರಿದ್ದಾನೆ :—

ಯದ್ ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ।
ಅನಗ್ನಾವಿವ ಶುಷ್ಕೇಂಧೋ ನ ತಜ್ಜ್ವಲತಿ ಕರ್ಹಿಚಿತ್ ॥ ನಿರುಕ್ತ 1·18

ಅರ್ಥಶೂನ್ಯವಾಗಿ ವೇದಪಾಠ ಮಾಡುವವನು ಕೂಡ ಹೊರೆಯನ್ನು ಹೊತ್ತ ಮೋಟುಮರದಂತೆ ನಿಷ್ಪ್ರಯೋಜಕನೆಂದು ನುಡಿದಿದ್ದಾನೆ :—

ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ ।
ಯೋಽರ್ಥಜ್ಞ ಇತ್ ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ ॥
—ನಿರುಕ್ತ 1·18

ಅರ್ಥದ ಲಕ್ಷಣವೆಂದರೆ ಉಚ್ಚಾರಿತ ಶಬ್ದದಿಂದ ಪ್ರತೀತವಾಗುವ ಜ್ಞಾನವಿಷಯವೆನ್ನಬಹುದು :—

ಯಸ್ಮಿಂಸ್ತೂಚ್ಚರಿತೇ ಶಬ್ದೇ ಯದಾ ಯೋಽರ್ಥಃ ಪ್ರತೀಯತೇ ।
ತಮಾಹುರರ್ಥಂ ತಸ್ಯೈವ ನಾನ್ಯದರ್ಥಸ್ಯ ಲಕ್ಷಣಮ್ ॥
—ವಾಕ್ಯಪದೀಯ 11·330

ಅರ್ಥತತ್ತ್ವವಿಚಾರದ ಆಧುನಿಕ ಹೆಸರುಗಳು :— ಬೇರೆಬೇರೆ ವಿದ್ವಾಂಸರು ಈ ಅಧ್ಯಯನ ಶಾಖೆಯನ್ನು ಬೇರೆಬೇರೆ ಹೆಸರುಗಳಿಂದ ಕರೆದಿದ್ದಾರೆ. ಪೋಸ್ಟ್‌ಗೇಟ್ ಇದನ್ನು ರ್ಹಿಮಟಾಲಜಿ (Rhematology) ಎಂದು ಕರೆದರೆ ಬ್ರೀಲ್ ಸೆಮಾಂಟಿಕ್ (Semantique) ಎಂದು ಕರೆದಿದ್ದಾನೆ ; ಇನ್ನೊಬ್ಬನು ಸೆಮೇಸಿಯಾಲಜಿ (Semasiology) ಎನ್ನುತ್ತಾನೆ. ಇದನ್ನು ಸಾಮಾನ್ಯವಾಗಿ ಸೆಮ್ಯಾಂಟಿಕ್ಸ್ ಎನ್ನುವುದೇ ಇಂದು ರೂಢವಾಗಿರುವ ಹೆಸರು. ಇದನ್ನು ಅರ್ಥವಿಜ್ಞಾನವೆಂದೂ, ಅರ್ಥತತ್ತ್ವವಿಚಾರವೆಂದೂ ಭಾಷಾಂತರಿಸಬಹುದು.



ಅರ್ಥ ವಿಜ್ಞಾನದ ಇತಿಹಾಸ :—ಗೋಪಥಬ್ರಾಹ್ಮಣದಲ್ಲಿಯೇ [I·i·26] ಶಬ್ದಕ್ಕಿಂತ ಅರ್ಥದ ಮಹತ್ವ ಹೆಚ್ಚಿನದೆಂಬ ಮಾತು ಬಂದಿದೆ :—'ರೂಪಸಾಮಾನ್ಯಾದರ್ಥಸಾಮಾನ್ಯಂ ನೇದೀಯಃ'. ಶತಪಥಬ್ರಾಹ್ಮಣದಲ್ಲಿಯೂ ಮನಸ್ಸಿಗಿಂತ ಎಂದರೆ ಭಾವಕ್ಕಿಂತ ವಾಕ್ಕು ಕಡಿಮೆಯದೆಂದು ಹೇಳಲಾಗಿದೆ—'ವಾಗ್ವೈ ಮನಸೋ ಹ್ರಸೀಯಸಿ.' ನಿರುಕ್ತದಲ್ಲಿ ಯಾಸ್ಕನು ಈ ವಿಚಾರವಾಗಿ ಹೀಗೆ ಹೇಳಿದ್ದಾನೆ :—

ಅಥಾನನ್ವಿತೇಽರ್ಥೇಽಪ್ರಾದೇಶಿಕೇ ವಿಕಾರೇಽರ್ಥನಿತ್ಯಃ ಪರೀಕ್ಷೇತ । ಕೇನಚಿದ್ ವೃತ್ತಿಸಾಮಾನ್ಯೇನ ।
—[ನಿರುಕ್ತ II.I]

ಇದು ಶಬ್ದನಿರ್ವಚನ ಪ್ರಸಂಗದಲ್ಲಿ ಬರುವ ಮಾತು. ಇದಲ್ಲದೆ ನಮ್ಮ ವ್ಯಾಕರಣಶಾಸ್ತ್ರ, ನ್ಯಾಯಶಾಸ್ತ್ರ, ಮೀಮಾಂಸಾಶಾಸ್ತ್ರಗಳಲ್ಲಿಯೂ ಅರ್ಥಬೋಧೆಯ ವಿಷಯ ವಿಸ್ತಾರವಾಗಿ ಬರುತ್ತದೆ. ಆದರೆ ತುಲನಾತ್ಮಕ ವೈಜ್ಞಾನಿಕ ದೃಷ್ಟಿಕೋನದಿಂದ ಆಧುನಿಕರು ಹೇಳುವ ವಿಚಾರಗಳು ಅಲ್ಲಿ ಕಾಣಬರುವದಿಲ್ಲ. ಹೊಸ ದೃಷ್ಟಿಯಿಂದ ಈ ಶಾಸ್ತ್ರವನ್ನು ಆರಂಭಿಸಿದವರಲ್ಲಿ ಬ್ರೀಲ್‌ನ ಹೆಸರು ಮಹತ್ತ್ವದ್ದಾಗಿದೆ. ಟಿಕರ್, ಪಾಲ್‌ಮೋಲ್ ಮುಂತಾದವರನ್ನೂ ಇಲ್ಲಿ ಹೆಸರಿಸಬಹುದು.

ಅರ್ಥವಿಜ್ಞಾನದ ವಿಷಯ :—ಶಬ್ದಾರ್ಥಗಳಲ್ಲಿ ಅವಿಭಾಜ್ಯ ಸಂಬಂಧವಿರುವದರಿಂದಲೇ ಅನೇಕ ಸಮಸ್ಯೆಗಳು ಉತ್ಪನ್ನವಾಗುತ್ತವೆ. ಈ ಶಬ್ದಾರ್ಥ ಸಂಬಂಧ ನಿತ್ಯವೆ ? ಭಾವ ಪ್ರಕಟನೆಗೆ ಸಾಧನಗಳಾವುವು ? ಅವುಗಳ ಪರಿಮಿತಿಯೇನು ? ಪ್ರತಿಯೊಂದು ಭಾಷೆಯಲ್ಲೂ ನಾನಾರ್ಥಕ ಶಬ್ದಗಳಿರುವುದೇಕೆ ? ಆ ನಾನಾರ್ಥಗಳಲ್ಲಿ ಪರಸ್ಪರ ಸಂಬಂಧವುಂಟೆ, ಇಲ್ಲವೆ ? ಇತ್ಯಾದಿ. ಉದಾಹರಣೆಗೆ 'ಪಾದ' ಎಂದರೆ ಕಾಲು, ನಾಲ್ಕನೆ ಒಂದು ಅಂಶ, ಒಂದು ಪದ್ಯದ ಸಾಲು, ಇತ್ಯಾದಿ ನಾನಾರ್ಥಗಳಿವೆ. 'ಗೌ' ಶಬ್ದಕ್ಕೆ ಎತ್ತು, ಪೃಥ್ವೀ, ಕಿರಣ, ಇಂದ್ರಿಯ ಇತ್ಯಾದಿ ಅನೇಕಾರ್ಥಗಳಿವೆ. ಈ ಅನೇಕಾರ್ಥಗಳೆಲ್ಲ ಪೂರ್ಣವಾಗಿ ಸ್ವತಂತ್ರವಾಗಿವೆಯೇ ಎಂಬ ಪ್ರಶ್ನೆಯೇಳುತ್ತದೆ ; ಅಥವಾ ಅವುಗಳಲ್ಲೊಂದನ್ನು ಮುಖ್ಯವೆಂದು ಪರಿಗಣಿಸಿ ಮಿಕ್ಕವನ್ನು ಗೌಣವೆನ್ನಬಹುದೆ ಎಂಬುದೂ ಸಮಸ್ಯೆಯೇ. ಅಲಂಕಾರಶಾಸ್ತ್ರದ ಪ್ರಕಾರ ಮುಖ್ಯ, ಗೌಣ, ವ್ಯಂಗ್ಯ ಎಂಬ ಮೂರು ಅರ್ಥಗಳ ವಿಭಾಗಕ್ರಮವಿದೆ.

ಆದ್ದರಿಂದ ಅರ್ಥವಿಜ್ಞಾನದ ವಿಷಯವೆಂದರೆ ಶಬ್ದಾರ್ಥಗಳ ವಿಕಾಸಕ್ರಮದ ಐತಿಹಾಸಿಕ ಅಧ್ಯಯನವೆನ್ನಬಹುದು. ಹೀಗೆ ದೇಶಾಂತರ ಮತ್ತು ಕಾಲಾಂತರಗಳಲ್ಲಿ ಆಗುವ ಅರ್ಥ ವ್ಯತ್ಯಾಸಗಳೇ ಈ ಅರ್ಥವಿಜ್ಞಾನದ ಮುಖ್ಯಲಕ್ಷಣವೆಂದು ಭಾವಿಸಬೇಕಾಗುತ್ತದೆ.

### ಅರ್ಥವ್ಯತ್ಯಾಸ ಹಾಗು ಅರ್ಥಪರಿವರ್ತನೆಗೆ ಕಾರಣಗಳು

ಅರ್ಥಪರಿವರ್ತನೆಗೆ ನಾನಾ ಕಾರಣಗಳಿವೆ. ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಒಂದು ಸಂದರ್ಭದಲ್ಲಿ ಒಂದೇ ಅರ್ಥವೆಂದು ನಿರ್ಣಯಿಸಿ ಮನುಷ್ಯರು ವ್ಯವಹರಿಸುವುದನ್ನು

ನೋಡುತ್ತೇವೆ. ಉದಾಹರಣೆಗೆ ಅಡುಗೆಮನೆಯಲ್ಲಿ ಕುಳಿತು 'ಸೈಂಧವಮಾನಯ' ಎಂದರೆ ಪರಿಚಾರಕನು ಉಪ್ಪನ್ನು ತರುವನೇ ಹೊರತು ಕುದುರೆಯನ್ನಲ್ಲ. ರಾಜಾಸ್ಥಾನಕ್ಕೆ ಹೋಗುವಾಗ ಅದೇ ವಾಕ್ಯವನ್ನು ಹೇಳಿದರೆ ಕುದರೆಯನ್ನೇ ತಂದಾನು, ಉಪ್ಪನಲ್ಲ. ಮುಖ್ಯವಾಗಿ ಅರ್ಥ ನಿರ್ಣಯಕ್ಕೆ ಪ್ರಕರಣವೇ ಪ್ರಯೋಜಕ. ಅರ್ಥವ್ಯತ್ಯಾಸಗಳು ಏಕೆ ಬರುತ್ತವೆಯೆಂಬುದನ್ನೀಗ ನೋಡೋಣ.

1. ಅನ್ಯಭಾಷೆಗಳಿಂದ ಎರವು ಪಡೆದ ಶಬ್ದಗಳಲ್ಲಿ ನವೀನ ಸಾಮಾಜಿಕ ಪರಿಸ್ಥಿತಿಯ ಪ್ರಭಾವದಿಂದ ಅರ್ಥಪರಿವರ್ತನೆಯಾಗಬಹುದು. ಉದಾಹರಣೆಗೆ ಇಂಗ್ಲೀಷಿನ 'ಗ್ಲಾಸ್' ಕನ್ನಡದಲ್ಲಿ ಒಂದು ನೀರು ಕುಡಿಯುವ ಲೋಟಾ ಎಂಬರ್ಥವನ್ನು ಪಡೆದಿದೆ.

2. ಸಂಬದ್ಧ ಭಾಷೆಗಳ ಶಬ್ದಗಳಲ್ಲಿ ಬೌದ್ಧಿಕ ಮತ್ತು ಭಾವನಾತ್ಮಕ ಸ್ಮರಣೆಗಳ ಮೂಲಕ ಅರ್ಥಾಂತರಗಳುಂಟಾಗಬಹುದು. ಸಂಸ್ಕೃತದ 'ದೇವ' ಶಬ್ದವು ಅವೆಸ್ತಾದಲ್ಲಿ ದಾನವಾ ರ್ಥಕವೂ, 'ಅಸುರ' ಶಬ್ದವು (=ಅಹುರ) ದೇವಾರ್ಥಕವೂ ಆಗಿವೆ. ಇದಕ್ಕೆ ಆ ಭಾಷಿಕ ಪಂಗಡಗಳ ವಿರೋಧವೇ ಕಾರಣವಿರಬೇಕು.

3. ಪ್ರಸಂಗಭೇದದಿಂದಲೂ ಅರ್ಥಾಂತರಗಳುಂಟಾಗುತ್ತವೆ. 'ಚಾರಾ' ಎಂದರೆ ಹಿಂದಿ ಯಲ್ಲಿ ಹುಲ್ಲುಮೇವು ; ಫಾರಸಿಯಲ್ಲಿ ಉಪಾಯ.

4. ಮೂಲತಃ ಅಭಿನ್ನವಿದ್ದರೂ ವ್ಯುತ್ಪತ್ತಿಭೇದದಿಂದ ಅರ್ಥಭೇದಗಳಾಗಬಹುದು. ನಾಗ = ಸರ್ಪ ಮತ್ತು ಆನೆ ; ಪಾದ = ನಾಲ್ಕನೆ ಒಂದಂಶ, ಕಾಲು; ಅರ್ಥ = ಧನ, ಅಭಿಪ್ರಾಯ, ಪ್ರಯೋಜನ.

5. ಒಂದೇ ಭಾಷೆಯಲ್ಲಿ ಕಾಲಭೇದದಿಂದ ಶಬ್ದಗಳಲ್ಲಿ ಭಿನ್ನಾರ್ಥಗಳು ಬರುತ್ತವೆ. ಇವುಗಳಲ್ಲಿ ಅನೇಕ ಪ್ರಕಾರಗಳಿವೆ :—

(ಕ) ಮೂಲತಃ ಸಾಮಾನ್ಯಾರ್ಥಕವಿದ್ದ ಶಬ್ದವು ಕಾಲಾಂತರದಲ್ಲಿ ವಿಶೇಷಾರ್ಥಕ ವಾಗಬಹುದು—'ಮೃಗ' ಶಬ್ದವು ಮೊದಲು ಪಶುಸಾಮಾನ್ಯಕ್ಕೂ ವಾಚಕ ವಾಗಿದ್ದಿತು ; ಮುಂದೆ ಅದು ಕೇವಲ ಹರಿಣವಾಚಕವಾಯಿತು.

(ಖ) ಮೂಲತಃ ವಿಶೇಷಾರ್ಥಕ ಶಬ್ದವಿದ್ದುದು ಕಾಲಾಂತರದಲ್ಲಿ ಸಾಮಾನ್ಯಾರ್ಥಕ ವಾಗಬಹುದು— 'ಉದ್ದಂಡ' ಶಬ್ದವು ಮೊದಲು ಕೋಲೆತ್ತಿಕೊಂಡಿರುವ ಉದ್ಧತನೆಂಬರ್ಥದಲ್ಲಿದ್ದುದು ಮುಂದೆ ಸುಮ್ಮನೆ ಉದ್ಧತನೆಂಬರ್ಥವನ್ನು ಪಡೆದುದು. ಉದಾಹರಣೆ 'ಕುಶಲ' ಶಬ್ದಕ್ಕೆ ದರ್ಭೆಯನ್ನು ಬುದ್ಧಿವಂತಿಕೆ ಯಿಂದ ಕೊಯ್ಯುವವನೆಂಬ ಸಂಕುಚಿತಾರ್ಥಹೋಗಿ ಬುದ್ಧಿವಂತನೆಂಬ ಸಾಮಾನ್ಯಾರ್ಥ ಮುಂದೆ ಉಂಟಾಯಿತು.

(ಗ) ಮೂಲತಃ ಮೂರ್ತವಾಚಕವಾದ ಶಬ್ದ ಮುಂದೆ ಅಮೂರ್ತಭಾವವಾಚಕವಾಗಿ ಪರಿಣಮಿಸಬಹುದು. ಉದಾಹರಣೆ — 'ಅನುಗ್ರಹ' ; ಮೊದಲಿಗೆ



ಹೊರೆಯನ್ನೆತ್ತಲು ಕೈಯಿತ್ತು ನೆರವೀಯುವ ವಿಶಿಷ್ಟಾರ್ಥವಿದ್ದುದು ಹೋಗಿ ಕೃಪೆಯೆಂಬ ಭಾವಾರ್ಥ ಮುಂದೆ ರೂಢವಾಗಿದೆ.

(ಘ) ಮೊದಲು ಭಾವವಾಚಕವಿದ್ದುದು ಮುಂದೆ ಮೂರ್ತವಾಚಕವಾಗಬಹುದು 'ಭವನ' ಎಂದರೆ 'ಆಗುವುದು' ಎಂದಿದ್ದುದು ಮನೆಯೆಂಬರ್ಥವನ್ನೂ ಪಡೆದಿರುವುದು ಹೀಗೆ.

ಮೇಲಿನ ಉದಾಹರಣೆಗಳಿಂದ ಹಲವು ರೀತಿಯ ಅರ್ಥವಿಕ್ರಿಯೆಗಳಿರುವ ಅಂಶ ವ್ಯಕ್ತ ವಾಗುತ್ತದೆ. ಆದರೆ ಅರ್ಥವಿಜ್ಞಾನದ ವಿದ್ವಾಂಸನಾದ ಬ್ರೀಲ್‌ನ ಪ್ರಕಾರ ಅರ್ಥವಿಕಾಸದ ಪ್ರಕಾರಗಳು ಮೂರು :—

(1) ಅರ್ಥವಿಸ್ತಾರ (Expansion of meaning)
(2) ಅರ್ಥಸಂಕೋಚ (Contractiod of meaning)
(3) ಅರ್ಥಾಂತರಾರೋಪ (Transference of meaning)

ಅರ್ಥವಿಸ್ತಾರ :—

ಶಬ್ದಗಳ ಮೂಲಾರ್ಥ ಉಳಿದಿದ್ದರೂ, ಸೀಮಿತ ವ್ಯಾಪ್ತಿಯನ್ನು ಮೀರಿ ವ್ಯಾಪಕಾರ್ಥವನ್ನು ಸೂಚಿಸುವುದೇ ಅರ್ಥವಿಸ್ತಾರ, ಟಿಕರನ ಅಭಿಪ್ರಾಯದಲ್ಲಿ ನಿಜವಾದ ಅರ್ಥವಿಸ್ತಾರವೆಂಬುದೇ ಇಲ್ಲ ; ಅರ್ಥವಿಸ್ತಾರವೆನ್ನುವುದೆಲ್ಲ ಅರ್ಥಾಂತರಾರೋಪವೇ. ಆದರೆ ಟಿಕರನ ಈ ಮತ ಇಂದು ಪುರಸ್ಕೃತವಾಗಿಲ್ಲ. ಉದಾಹರಣೆಗೆ 'ತೈಲ' ಎಂದರೆ ಮೊದಲು ತಿಲ ಅಥವಾ ಎಳ್ಳಿನಿಂದ ಬಂದ ಎಣ್ಣೆಯೆಂಬ ಸಂಕುಚಿತಾರ್ಥವಿದ್ದಿರಬೇಕು ; ಈಗ ಅದನ್ನು ಎಲ್ಲಾ ಕಾಳಿನ ಎಣ್ಣೆಗಳಿಗೂ ವಿಸ್ತರಿಸಿ ಪ್ರಯೋಗಿಸಲಾಗುತ್ತದೆ ; ಎಳ್ಳೆಣ್ಣೆಗೂ ಪ್ರಯೋಗಿಸ ಲಾಗುತ್ತದೆ. ಅರ್ಥವಿಸ್ತಾರಕ್ಕೆ ಮತ್ತೆ ಕೆಲವು ಉದಾಹರಣೆಗಳಿವು :—

| ಶಬ್ದ | ಮೂಲಾರ್ಥ | ವಿಸ್ತೃತಾರ್ಥ |
|---|---|---|
| ಅಭ್ಯಾಸ | ಬಾಣ ಮುಂತಾದವುಗಳ ಪುನಃ ಪುನಃ ಪ್ರಯೋಗ | ಪ್ರಯತ್ನ |
| ಗವೇಷಣಾ | ಗೋವುಗಳನ್ನು ಹುಡುಕುವುದು | ಸಂಶೋಧನೆ |
| ಪ್ರವೀಣ | ವೀಣೆ ಬಾರಿಸುವುದರಲ್ಲಿ ಚತುರ | ಚತುರ |
| ನಿಪುಣ | ಪುಣ್ಯವಂತ | ಕುಶಲ |

ಅರ್ಥಸಂಕೋಚ :—

ಸಾಮಾನ್ಯಾರ್ಥಕ ಶಬ್ದ ವಿಶಿಷ್ಟ ಅಥವಾ ಸಂಕುಚಿತಾರ್ಥದಲ್ಲಿ ಪರಿಸೀಮಿತವಾಗುವುದೇ ಅರ್ಥಸಂಕೋಚ, ಬ್ರೀಲ್‌ನ ಅಭಿಪ್ರಾಯದಂತೆ ಒಂದು ಜನಾಂಗ ಎಷ್ಟು ಸುಸಂಸ್ಕೃತವಿರುವುದೋ ಅಷ್ಟೇ ಪ್ರಮಾಣದಲ್ಲಿ ಅರ್ಥಸಂಕೋಚವೂ ಹೆಚ್ಚಾಗಿರುತ್ತದೆ. ಸಂಸ್ಕೃತಿ ವಿಕಾಸ ಹೆಚ್ಚಿದಂತೆ ಶಬ್ದಾರ್ಥಗಳ ಸಂಕೋಚ ಮಿಗಿಲಾಗುತ್ತದೆ. ಉದಾಹರಣೆಗೆ; ಪಶುವಾಚಕವಾದ 'ಮೃಗ' ಶಬ್ದ

ಮುಂದೆ ಕೇವಲ ಜಿಂಕೆಯನ್ನು ಬೋಧಿಸುತ್ತದೆ. ಹೀಗೆಯೇ ಇತರ ಉದಾಹರಣೆಗಳೂ ದೊರೆಯುತ್ತವೆ :—

| ಶಬ್ದ | ಮೂಲಾರ್ಥ | ಸಂಕುಚಿತಾರ್ಥ |
|---|---|---|
| ವೇದ | ವಿದ್ಯೆ | ಋಗ್ವೇದಾದಿ |
| ವರ | ಬಯಸಿದ್ದು | ಮದುವೆ ಗಂಡು |
| ಧಾನ್ಯ | ಅನ್ನಸಾಮಾನ್ಯ | ಕಾಳು |
| ಅಸ್ಪೃಶ್ಯ | ಮುಟ್ಟಲಾಗದ್ದು | ಒಂದು ಜಾತಿ |
| ಪಯಃ | ಕುಡಿಯುವ ನೀರು | ಹಾಲು |
| | ಪದಾರ್ಥ | |

ಅರ್ಥಾಂತರಾರೋಪ :— ಭಾವಸಾಹಚರ್ಯದ ಪರಿಣಾಮವಾಗಿ ಒಂದು ಶಬ್ದದ ಪ್ರಧಾನಾರ್ಥದ ಜೊತೆಜೊತೆಗೆ ಒಂದು ಗೌಣಾರ್ಥವೂ ಸೇರಿಕೊಳ್ಳುವುದುಂಟು, ಕೆಲವು ಕಾಲಾನಂತರ ಪ್ರಧಾನಾರ್ಥವೇ ಲುಪ್ತವಾಗಿ ಹಿಂದೆ ಸರಿದು ಗೌಣಾರ್ಥವೇ ಮುಂದಾಗುತ್ತದೆ. ಹೀಗೆ ಒಂದು ಅರ್ಥ ಮತ್ತೊಂದರ್ಥ ಬರುವುದನ್ನೇ ಅರ್ಥಾಂತರಾರೋಪ ಅಥವಾ ಅರ್ಥಾದೇಶವೆನ್ನುತ್ತಾರೆ. ಉದಾಹರಣೆಗೆ "ಅಸುರ" ಶಬ್ದವು ಋಗ್ವೇದದಲ್ಲಿ ದೇವತಾವಾಚಿಯಾಗಿದೆ. ಇರಾನಿನ ಅವೆಸ್ತಾದಲ್ಲಿ 'ಅಹುರ' ಎಂಬ ತತ್ಸಮರೂಪವು ರಾಕ್ಷಸವಾಚಿಯಾಗುತ್ತದೆ. 'ದುಹಿತೃ' ಶಬ್ದವು ಹಾಲು ಕರೆಯುವವಳು ಎಂಬರ್ಥದಲ್ಲಿದ್ದುದು ಹೋಗಿ ಎಲ್ಲ ಕನ್ಯೆಯರಿಗೂ ವಾಚಕವಾಗುತ್ತದೆ. 'ದೇವಾನಾಂ ಪ್ರಿಯಃ' ಎಂಬುದು ಅಶೋಕನ ಬಿರುದಾಗಿ ದೇವತಾ ಭಕ್ತನೆಂಬರ್ಥದಲ್ಲಿ ಬರುತ್ತದೆ ಅವನ ಶಾಸನಗಳಲ್ಲೇ. ಆದರೆ ಇಂದು ಈ ಶಬ್ದವು 'ಮೂರ್ಖ' ನೆಂಬ ಅರ್ಥವನ್ನು ತಾಳಿದೆ, ಇದೇ ರೀತಿಯಾದ ಇನ್ನೂ ಕೆಲವು ಶಬ್ದಗಳು :—

| ಶಬ್ದ | ಮೂಲಾರ್ಥ | ಹೊಸ ಅರ್ಥ |
|---|---|---|
| ಸಪತ್ನ | ಒಂದೇ ಹೆಣ್ಣಿಗಾಗಿ ಯುದ್ಧ ಮಾಡುವವ | ಶತ್ರು |
| ಪಾಷಂಡ | ಸಾಧುಗಳ ಸಂಪ್ರದಾಯ | ಭ್ರಷ್ಟಾಚಾರ |
| ಉಪವಾಸ | ಅಗ್ನಿಯ ಬಳಿ ನಿಯಮದಿಂದಿರುವುದು | ಹಸಿದಿರುವುದು |
| ಅನುಗ್ರಹ | ಕೈಯಿತ್ತು ನೆರವು ನೀಡುವುದು | ದಯೆ |

ಮುಖ್ಯವಾಗಿ ಅರ್ಥಪರಿವರ್ತನೆಯ ಪ್ರಕಾರಗಳು ಮೇಲಿನ ಮೂರೇ ; ಆದರೂ ಬೇರೆ ಬೇರೆ ಲೇಖಕರು ಇನ್ನೂ ಕೆಲವನ್ನು ಸೂಚಿಸುತ್ತಾರೆ. ಅದನ್ನು ಕೂಡ ಈ ಮೇಲಿನ ಮೂರರಲ್ಲೇ ಅಂತರ್ಭಾವ ಮಾಡಬಹುದು. ವಿಟ್ನಿ ಹೇಳುವ (1) ಸಾಧಾರಣೀಕರಣ, (2) ಅಸಾಧಾರಣೀ ಕರಣಗಳು ಕ್ರಮವಾಗಿ ಅರ್ಥವಿಸ್ತಾರ ಹಾಗು ಅರ್ಥಸಂಕೋಚಗಳಲ್ಲಿ ಅಂತರ್ಭಾವವಾಗುತ್ತವೆ. ಇವಲ್ಲದೆ ಅರ್ಥದಲ್ಲಿ ಉತ್ಕರ್ಷ (Elevation) ಅಥವಾ ಅಪಕರ್ಷಣ (Degeneration) ಕೂಡ ಕಾಣಸಿಗುತ್ತದೆ.



ಅರ್ಥೋತ್ಕರ್ಷ :—

ಶಬ್ದದ ಪರಿವರ್ತಿತವಾದ ಅರ್ಥವು ಮೊದಲಿಗಿಂತ ಉನ್ನತ ಭಾವವನ್ನು ಸೂಚಿಸುವದೇ ಅರ್ಥೋತ್ಕರ್ಷ. 'ಸಾಹಸ' ಶಬ್ದವು ಮೊದಲಿಗೆ ವ್ಯಭಿಚಾರ, ಹತ್ಯೆಗಳನ್ನು ಬೋಧಿಸುತ್ತಿತ್ತು.

ಮನುಷ್ಯಮಾರಣಂಸ್ತೇಯಂ ಪರದಾರಾಭಿಮರ್ಷಣಮ್ ।
ಪಾರುಷ್ಯಮನೃತಂ ಚೈವ ಸಾಹಸಂ ಪಂಚಧಾ ಸ್ಮೃತಮ್ ॥—(ಮನುಸ್ಮೃತಿ)

ಆದರೆ ಆಧುನಿಕ ಭಾಷೆಯಲ್ಲಿ ಅದಕ್ಕೆ ಒಳ್ಳೆಯ 'ಧೈರ್ಯಮೂಲಕ ಪರಿಶ್ರಮ' ವೆಂಬರ್ಥ ಬಂದುಬಿಟ್ಟಿದೆ. 'ಧೃಷ್ಟ' ಎಂದರೆ ಲಜ್ಜಾಹೀನನೆಂಬ ಮೂಲಾರ್ಥಕ್ಕಿಂತ 'ದಿಟ್ಟ' ಎಂಬ ತದ್ಭವದಲ್ಲಿ ಧೈರ್ಯಶಾಲಿಯೆಂಬ ಒಳ್ಳೆಯ ಅರ್ಥವಿದೆ, 'ಕರ್ಪಟ' ವೆಂದರೆ ಚಿಂದಿಬಟ್ಟೆಯೆಂದು ಮೂಲಾರ್ಥ ; ಹಿಂದಿಯಲ್ಲಿ ಕಾಪಡ್ ಎಂದರೆ ಒಳ್ಳೆಯ ವಸ್ತ್ರವೆಂಬರ್ಥ. 'ಮುಗ್ಧ' ಎಂಬುದರ ಮೂರ್ಖಾರ್ಥ ಹೋಗಿ ಸರಳಸ್ವಭಾವದವನೆಂಬ ಒಳ್ಳೆಯ ಅರ್ಥ ಬಂದಿದೆ.

ಅರ್ಥಾಪಕರ್ಷ :—

ಅರ್ಥೋತ್ಕರ್ಷದ ವಿಲೋಮವೇ ಅರ್ಥಾಪಕರ್ಷ. ಅಲ್ಲಿ ಅರ್ಥಕ್ಕೆ ಉತ್ಕರ್ಷವಾದರೆ ಇಲ್ಲಿ ಅಪಕರ್ಷವಾಗುತ್ತದೆ. ಉದಾಹರಣೆಗೆ, 'ಜುಗುಪ್ಸಾ' ಶಬ್ದ 'ಗುಪ್' ಧಾತುವಿನಿಂದ ನಿಷ್ಪನ್ನವಿದೆ. ಅದರ ಅರ್ಥ 'ಮುಚ್ಚುವುದು'. ಆದರೆ ಜುಗುಪ್ಸಾ ಶಬ್ದವು 'ಮುಚ್ಚುವುದು', 'ಕಾಪಿಡುವುದು' ಮುಂತಾದ ಅರ್ಥಗಳಿಂದಾಚೆಗೆ ಹಾಯ್ದು ಇಂದು ಹೇಸಿಕೆಯೆಂಬರ್ಥಕ್ಕೆ ಬಂದಿದೆ. ಹೀಗೆಯೇ 'ಗುಹ್ಯ' ಶಬ್ದದ ತದ್ಭವವಾದ 'ಗೂಹ' ಎಂದು ಅಶ್ಲೀಲಾರ್ಥವನ್ನು ಹಿಂದಿಯಲ್ಲಿ ಪಡೆದಿದೆ. 'ಮಹಾರಾಜ' ಎನ್ನುವುದು ಚಕ್ರವರ್ತಿಯೆಂಬರ್ಥವನ್ನು ಬಿಟ್ಟು ಅಡಿಗೆಭಟ್ಟನೆಂಬ ಅರ್ಥಕ್ಕೆ ಹಿಂದಿಯಲ್ಲಿ ಇಳಿದಿದೆ. 'ಮಹಾಪಾತ್ರ' ಎನ್ನುವದು ವಿದ್ವಾಂಸನೆಂಬರ್ಥದಿಂದ ಮೃತ ವ್ಯಕ್ತಿಯೆಂಬರ್ಥಕ್ಕೆ ಇಳಿದಿದೆ ಹಿಂದಿಯಲ್ಲೇ.

ಒಂದು ಭಾಷೆಯ ಶಬ್ದಗಣದ ಮೇಲೆ ಈ ಅರ್ಥಾಪಕರ್ಷದ ಪ್ರಭಾವ ಮಹತ್ವದ್ದಾಗಿರುತ್ತದೆ. ಅರ್ಥಾಪಕರ್ಷಕ್ಕೆ ಗುರಿಯಾದ ಶಬ್ದಗಳು ಕ್ರಮಕ್ರಮವಾಗಿ ಅಶ್ಲೀಲಾರ್ಥಕಗಳೆಂದು ಹೊರದೂಡಲ್ಪಡುತ್ತವೆ ಮತ್ತು ಅವುಗಳ ಸ್ಥಾನದಲ್ಲಿ ಬೇರೆ ಶಬ್ದಗಳು ನಿರ್ಮಾಣಗೊಳ್ಳುತ್ತವೆ. ಉಚ್ಚಾರ್ಥಕ ಹೀನಾರ್ಥಕ ಶಬ್ದಗಳೆರಡೂ ಉಳಿದು ಪ್ರತ್ಯೇಕ ವ್ಯಾಪ್ತಿಯಲ್ಲಿ ಸೀಮಿತವಾಗುವುದೂ ಉಂಟು. ಉದಾಹರಣೆಗೆ 'ಗರ್ಭ' ಮನುಷ್ಯರಿಗೆ ಅನ್ವಯಿಸಿದರೆ, 'ಗಬ್ಬ' ಪ್ರಾಣಿಗಳಿಗೆ ಮಾತ್ರ ಸೀಮಿತವಾಗುತ್ತದೆ.

ಅರ್ಥಭೇದ :—

ಮೇಲೆ ಹೇಳಿದ ಗುಂಪುಗಳಲ್ಲಿ ಸೇರದಿದ್ದರೂ ಅರ್ಥವ್ಯತ್ಯಾಸಗಳು ಒಡೆದು ಕಾಣುವುದನ್ನು 'ಅರ್ಥಭೇದ' ದಲ್ಲಿ ತರಬಹುದು. ಉದಾಹರಣೆಗೆ 'ಘರ್ಮ' ಶಬ್ದದ ತದ್ಭವವಾದ 'ಘಾಮ್' ಹಿಂದಿಯಲ್ಲಿ ಬಿಸಿಲಿನ ಅರ್ಥ ಕೊಟ್ಟರೆ ಬಂಗಾಳಿಯಲ್ಲಿ ಬೆವರಿನ ಅರ್ಥ ಕೊಡುತ್ತದೆ.

ಅರ್ಥಾಪದೇಶ :—

ಅಪ್ರಿಯ, ಅಶುಭ, ಭಯಾನಕ, ಅಮಂಗಲ ಈ ಸೂಚನೆಗಳನ್ನೊಳಗೊಂಡ ಅರ್ಥಗಳನ್ನು ಒಳ್ಳೆಯ ಶಬ್ದಗಳಿಂದ ಹೇಳುವ ಪರ್ಯಾಯೋಕ್ತಿಯ ಪರಿಪಾಠವುಂಟು. ಅಮಂಗಳವಾದ ವಾರವನ್ನು 'ಮಂಗಳವಾರ'ವೆನ್ನುವುದು, ಸತ್ತನೆಂಬುದನ್ನು, 'ಸ್ವರ್ಗವಾಸಿ' ಯಾದನೆನ್ನುವುದೂ ಉದಾಹರಣೆ. ಈ ಅರ್ಥಾಪದೇಶವು ಅರ್ಥಭೇದ ಮತ್ತು ಅರ್ಥಾಪಕರ್ಷಣಗಳ ಮಿಶ್ರಣದಿಂದ ಆಗುತ್ತದೆ.

## ಅರ್ಥಪರಿವರ್ತನೆಗೆ ಕಾರಣಗಳು

ಪರಿವರ್ತನೆ ಅಥವಾ ವಿಕಾಸವು ಸೃಷ್ಟಿಯ ನಿಯಮವೇ ಆಗಿದೆ. ಕಾಲಗತಿಯಿಂದ ಪ್ರತಿಯೊಂದು ವಸ್ತುವೂ ಪರಿವರ್ತನೆ ಹೊಂದುತ್ತದೆ. ಮಾನವನ ಮನಸ್ಸೂ ಸದಾ ಪರಿವರ್ತನಶೀಲವೇ ಇದೆ. ಇದರ ಪರಿಣಾಮವಾಗಿ ಅವನ ವಿಚಾರಗಳು ಕೂಡ ಎಲ್ಲ ಕಾಲಕ್ಕೂ ಒಂದೇ ರೀತಿಯದಾಗಿರಲಾರವು. ವಿಚಾರಗಳ ವಾಹಕವೇ ಭಾಷೆಯಾದ್ದರಿಂದ ಅದೂ ಪರಿವರ್ತನೆ ಹೊಂದುತ್ತಲೇ ಇರಬೇಕಾಗುತ್ತದೆ. ಈ ಪರಿವರ್ತನೆ ಶಬ್ದರೂಪಗಳಲ್ಲಿಯೂ, ಅರ್ಥರೂಪದಲ್ಲಿಯೂ ಕೂಡಿಯೇ ಸಾಗುತ್ತದೆ. ಈ ಪರಿವರ್ತನಕಾರಣಗಳು ಬಹುರೂಪಿಯಾಗಿರುವುದಲ್ಲದೆ ಪರಸ್ಪರ ಸಮ್ಮಿಶ್ರವಾಗಿಯೂ ಇರುತ್ತವೆ. ನಾವಿಲ್ಲಿ ಕೆಳಗೆ ಇವುಗಳಲ್ಲಿ ಕೆಲವನ್ನು ಎತ್ತಿ ಬರೆದರೂ, ಒಂದಕ್ಕಿಂತ ಹೆಚ್ಚು ಕಾರಣಗಳು ಒಟ್ಟುಗೂಡಿ ಪರಿವರ್ತನೆಯನ್ನು ಉಂಟು ಮಾಡುತ್ತವೆಂಬುದನ್ನು ಮರೆಯಬಾರದು. ನಾವು ಮೇಲೆ ಹೇಳಿದ ಅರ್ಥಾಪಕರ್ಷ, ಅರ್ಥಾಪದೇಶ, ಅರ್ಥಸಂಕೋಚ, ಅರ್ಥವಿಸ್ತಾರಗಳನ್ನೂ ಪರಿವರ್ತನ ಕಾರಣಗಳಲ್ಲಿ ನಿರ್ದೇಶಿಸಬಹುದು. ಅವುಗಳಲ್ಲದೆ ಮಿಕ್ಕವೆಂದರೆ ಇವು :—

1. ಶಬ್ದಗಳಲ್ಲಿ ಅವಧಾರಣೆಯ ಅಪಸರಣ :— ವರ್ಣಗಳಲ್ಲಿ ಒಂದರ ಮೇಲೆ ಸ್ವರಾಘಾತವಿದ್ದರೆ ಇನ್ನುಳಿದ ವರ್ಣಗಳು ದುರ್ಬಲವಾಗುವಂತೆಯೇ ಅರ್ಥದಲ್ಲಿಯೂ ಅವಧಾರಣೆ ಬದಲಾದಂತೆ ಬದಲಾವಣೆಯಾಗುತ್ತದೆ. 'ಅರಿ' ಶಬ್ದವು ವೇದಕಾಲದಲ್ಲಿ ಶತ್ರು, ಮನೆ, ಈಶ್ವರ, ಧಾರ್ಮಿಕ ಎಂಬರ್ಥಗಳನ್ನು ಹೊಂದಿತ್ತು. ಈಗ ಇದು ಶತ್ರುವೆಂಬರ್ಥದಲ್ಲಿ ಮಾತ್ರ ರೂಢವಾಗಿದೆ.

2. ಅನುಕರಣದ ಅಪೂರ್ಣತೆ :— ಮನುಷ್ಯನು ಅನುಕರಣಪ್ರಿಯನಾದ ಪ್ರಾಣಿ. ಅಂದರೆ, ಅನುಕರಣದಲ್ಲಿ ಪೂರ್ಣ ಸಾಮಂಜಸ್ಯ ಶಕ್ಯವಲ್ಲದ್ದರಿಂದ ಕೆಲವೊಂದು ಪರಿವರ್ತನೆಗೆ ಅವಕಾಶವುಳಿದೇ ಉಳಿಯುತ್ತದೆ. 'ಪತ್ರ' ಎಂದರೆ ಪುಸ್ತಕದ ಪುಟಕ್ಕೂ ಇಂದು ಅರ್ಥವಾಗುತ್ತದೆ. ಇದಕ್ಕೆ ಕಾರಣ ಪೂರ್ವಕಾಲದಲ್ಲಿ ತಾಳೆ ಎಲೆಗಳ ಮೇಲೆ ಬರೆಯುತ್ತಿದ್ದುದೇ ಆಗಿದೆ. ಕಾಗದ ಮುಂತಾದ ಬರೆಯುವ ಸಾಮಗ್ರಿಯನ್ನೇ ಪತ್ರವೆನ್ನುವ ಪರಿಪಾಠ ಕಾಲಾಂತರದಲ್ಲಿ ಆದದ್ದು. ಹಾಗೆಯೇ ಟಪಾಲಿನ ಕಾಗದವೂ 'ಪತ್ರ'ವೇ ಆಗಿದೆ. ದಸ್ತಾವೇಜೂ 'ಪತ್ರ'ವೇ ಆಗಿದೆ.



3. ಅನ್ಯಭಾಷೆಗಳಿಂದ ಶಬ್ದಗಳನ್ನು ಎರವು ಪಡೆಯುವುದು :—

ಇಂತಹ ಶಬ್ದಗಳಲ್ಲಿ ಅರ್ಥ ಪರಿವರ್ತಿತವಾಗುವುದುಂಟು. ಫಾರಸಿಯಲ್ಲಿ 'ಮುರ್ಗ್' ಎಂದರೆ ಪಕ್ಷಿ ಸಾಮಾನ್ಯ. ಆದರೆ ಹಿಂದಿಯಲ್ಲಿ ಒಂದು ಪಕ್ಷಿ ವಿಶೇಷ.

4. ಪ್ರವಾಸ :— ಒಂದು ಭಾಷೆಯನ್ನಾಡುವವರ ದೂರಪ್ರವಾಸದ ಫಲವಾಗಿ ಭಿನ್ನ ಶಬ್ದಾರ್ಥಗಳ ಪ್ರಯೋಗ ಹೆಚ್ಚಾಗುತ್ತದೆ. 'ವಾಟಿಕಾ' ಎಂದರೆ ಸಂಸ್ಕೃತದಲ್ಲಿ ತೋಟ ; ಬಂಗಾಳಿಯಲ್ಲಿ ಮನೆ. ಸಂಸ್ಕೃತದಲ್ಲಿ 'ನೀಲ'ವೆಂದರೆ ಕರಿಯ ಬಣ್ಣ, ಗುಜರಾತಿಯಲ್ಲಿ 'ನೀಲೊ' ಎಂದರೆ ಹಸಿರು.

5. ಪರಿಸ್ಥಿತಿಯಲ್ಲಿ ಬದಲಾವಣೆ :— ಭೌಗೋಲಿಕ, ಸಾಮಾಜಿಕ, ಧಾರ್ಮಿಕ ಪರಿಸ್ಥಿತಿ ಬದಲಾದಂತೆ ಅರ್ಥದಲ್ಲೂ ಬದಲಾವಣೆ ಕಾಣುತ್ತದೆ. ವೇದದಲ್ಲಿ 'ಉಷ್ಟ್ರ'ವೆಂದರೆ ಎಮ್ಮೆ ; ಮುಂದೆ ಸಂಸ್ಕೃತದಲ್ಲಿ ಇದೇ ಒಂಟೆ.

6. ನಾಮಕರಣ :—ಮನುಷ್ಯನ ಪ್ರಯತ್ನಲಾಘವದ ಪ್ರವೃತ್ತಿಯ ದೆಸೆಯಿಂದ ಹೊಸ ಹೆಸರುಗಳೂ, ಹೊಸ ಅರ್ಥಗಳೂ. ಹುಟ್ಟುತ್ತವೆ. ಹೊಸ ವಿಚಾರಕ್ಕೂ ಹಳೆಯ ಹೆಸರನ್ನೇ ಕೊಡುವುದುಂಟು. ಉದಾಹರಣೆ :—ವಿಜ್ಞಾನ ಎಂದರೆ ಇಂದಿನ Science ಎಂಬ ಅರ್ಥ ಇಂತಹದು.

ಹೊಸ ಪದಾರ್ಥಕ್ಕೆ ಹಳೆಯ ಹೆಸರಿನ ಇನ್ನೊಂದು ಉದಾಹರಣೆ :—'ಸೋಮ', ವೇದಕಾಲದ ಸೋಮಲತೆಯೇ ಬೇರೆ ; ಇಂದು ಯಜ್ಞದಲ್ಲಿ ಬಳಸುವ ಅದರ ಪ್ರತಿನಿಧಿಯೇ ಬೇರೆ.

ಹೊಸ ಸಂಬಂಧಗಳ ಬೋಧನೆ :—'ಅಪ್ಪಾ' ಇದು ಮೂಲತಃ ತಂದೆಯ ಅಕ್ಕರೆಯ ಸಂಬೋಧನೆ ; ಈಗ ಎಲ್ಲರಿಗೂ ಅನ್ವಯಿಸುತ್ತದೆ.

ಹೊಸ ಸಂಶೋಧನೆಗಳು ಬಂದಾಗ ಕೊಡುವ ಹೆಸರುಗಳು :—ಹಿಂದೆ ಘಟೀ—ಘಡೀ ಎಂದರೆ 40 ನಿಮಿಷಗಳ ಅವಧಿ ; ಇಂದು ಸಮಯಸೂಚಕ ಯಂತ್ರ ಗಡಿಯಾರವಾಗಿದೆ.

7. ಶಿಷ್ಟಾಚಾರ :— ನೀನು, ಎನ್ನುವ ಬದಲು 'ಮಹನೀಯರು' 'ಮಹಾಶಯರು', 'ಪೂಜ್ಯರು', 'ಗುರುಗಳು' ಮುಂತಾಗಿ ಎಲ್ಲರಿಗೂ ಅನ್ವಯಿಸಿ ಹೇಳುವುದು.

8. ಅಶೋಭನ ಶಬ್ದಗಳ ಬದಲು ಶೋಭನ ಶಬ್ದಗಳ ಪ್ರಯೋಗ :—

ಉದಾ :—ಮೃತ್ಯು=ಸ್ವರ್ಗವಾಸ : ಬಳೆ ಒಡೆಯುವುದು—ವಿಧವೆಯಾಗುವುದು.

9. ಆತ್ಮಶ್ಲಾಘನೆಯ ಭಾವನೆ :—ಹೇಳುವ ಶಬ್ದ ದೊಡ್ಡದಾಗಿ ಕಂಡರೂ ಪ್ರತಿಭಾದಾರಿದ್ರ್ಯದ ಕಾರಣ ಅಪಾರ್ಥಕವಾಗುತ್ತದೆ—'ದೇವಾನಾಂ ಪ್ರಿಯ', 'ವೈಯಾಕರಣ ಖಸೂಚಿ' ಇತ್ಯಾದಿ.

10. ಅಧಿಕವರ್ಣಗಳ ಬದಲು ಕಡಿಮೆ ವರ್ಣಗಳ ಬಳಕೆ :—'ಬೈಸಿಕಲ್' ಬದಲು 'ಸೈಕಲ್' ಅಥವಾ 'ಬೈಕ್' ಎಲ್ಲಕ್ಕೂ ಅರ್ಥ ಒಂದೇ.

11. ಮಿಥ್ಯಾಸಾದೃಶ್ಯ : (analogy) :—ಇದನ್ನಾಗಲೇ ನಾವು ವಿವರಿಸಿಯಾಗಿದೆ.

12. ಪುನರಾವೃತ್ತಿ :—ಶಬ್ದಗಳ ಪುನರಾವೃತ್ತಿ ಅರ್ಥ ಪರಿವರ್ತನೆಗೆ ಪೋಷಕವಾಗುತ್ತದೆ. ಗೇಟ್-ಬಾಗಿಲು : ಹಿಮಾಚಲ ಪರ್ವತ, ಮಲಯಗಿರಿ ಪರ್ವತ ಇತ್ಯಾದಿ.

13. ಎರಡರ್ಥಗಳಲ್ಲಿ ಒಂದೇ ಶಬ್ದದ ಭಿನ್ನರೂಪಗಳ ಬಳಕೆ :—ಒಂದು ಶಬ್ದದ ಎರಡು ರೂಪಗಳಿದ್ದರೆ, ಅವುಗಳಲ್ಲಿ ವ್ಯತ್ಯಾಸ ತೋರಿಸಲು ಭಿನ್ನಾರ್ಥ ಕಲ್ಪನೆ ಮಾಡುತ್ತಾರೆ. ಉದಾಹರಣೆಗೆ 'ಗರ್ಭ ಧರಿಸಿದ ಸ್ತ್ರೀ' ಎಂಬರ್ಥದಲ್ಲಿ 'ಗರ್ಭಿಣೀ' ಶಬ್ದವಿದೆ. ಇದರ ತದ್ಭವ 'ಗಬ್ಬವಾದ' ಶಬ್ದ ಪಶುಗಳಿಗೆ ಮಾತ್ರ ಅನ್ವಯಿಸಲ್ಪಡುತ್ತದೆ.

14. ಅಜ್ಞಾತ :—ಅಜ್ಞಾತಶಬ್ದಗಳು ಬಳಕೆಯಾದಾಗ ಅಶುದ್ಧ ಪ್ರಯೋಗಗಳಲ್ಲಿ ಪರ್ಯವಸಾನವಾಗುತ್ತವೆ. 'ವಿಕಾಸ' ವೆಂಬರ್ಥದಲ್ಲಿ 'ಉತ್ಕ್ರಾಂತಿ' ಶಬ್ದದ (ಉತ್ಕ್ರಮಣ = ಮರಣ) ಪ್ರಯೋಗ : ಜ್ಞಾನಾರ್ಥದಲ್ಲಿ 'ಅಭಿಜ್ಞಾನ' (ಗುರುತು) ಶಬ್ದದ ಪ್ರಯೋಗ ಇತ್ಯಾದಿಗಳು ಉದಾಹರಣೆಗಳು.

15. ಒಂದೇ ವರ್ಗದ ಒಂದು ಶಬ್ದದ ಅರ್ಥ ಪರಿವರ್ತನೆಯಿಂದ :— ಆ ವರ್ಗದ ಮಿಕ್ಕ ಶಬ್ದಗಳಲ್ಲೂ ಪರಿವರ್ತನೆ ತಲೆದೋರುತ್ತದೆ. 'ದುಹಿತೃ' ಶಬ್ದದಲ್ಲಿ ಮೂಲಾರ್ಥ ತಪ್ಪಿ ಮಗಳು ಎಂಬ ಅರ್ಥ ಬಂದೊಡನೆ 'ದೌಹಿತ್ರ' ದೌಹಿತ್ರಾಯಣ ಮುಂತಾದ ಶಬ್ದಗಳಲ್ಲೂ ಅದೇ ಪರಿವರ್ತನೆ ಬಂದೊದಗುತ್ತದೆ.

16. ವಿಡಂಬನೆ :—ವಿಡಂಬನೆಯೂ ಅರ್ಥವ್ಯತ್ಯಯಕ್ಕೆ ಕಾರಣವಾಗುತ್ತದೆ. ಉದಾ :—ಮೂರ್ಖಾರ್ಥದಲ್ಲಿ 'ದೇವಾನಾಂ ಪ್ರಿಯ' ಎನ್ನುವ ಪ್ರಯೋಗ, ದುಷ್ಟನಿಗೆ 'ಮಹಾನುಭಾವ' ಎಂದೂ, ದಡ್ಡನಿಗೆ 'ಬೃಹಸ್ಪತಿ'ಯೆಂದೂ ಹೇಳುವ ಪ್ರಯೋಗಗಳು ಕೂಡ ಇದೇ ಜಾತಿಯವು.

17. ಭಾವಾವೇಶ :—ಭಾವಾವೇಶದ ಪರಿಣಾಮವಾಗಿ ಶಬ್ದಗಳನ್ನು ವಿಚಿತ್ರಾರ್ಥಗಳಲ್ಲಿ ಪ್ರಯೋಗಿಸಲಾಗುತ್ತದೆ ; ಮಕ್ಕಳನ್ನು ಮುದ್ದುಮಾಡುತ್ತಾ 'ಲೌಡಿಮಗ' ಮುಂತಾದ ಮಾತುಗಳನ್ನು ಹೇಳುವುದುಂಟು. ಇವಕ್ಕೆ ಒಳ್ಳೆಯ ಪ್ರೀತಿಯ ಅರ್ಥವೇ ಇರುತ್ತದೆ.

18. ಅಲಂಕಾರ :—ಅಲಂಕಾರಗಳನ್ನೂ, ಗಾದೆಗಳನ್ನೂ ಬಳಸುವಾಗ ಎಷ್ಟೋ ವೇಳೆ ಅವುಗಳಲ್ಲಿ ಸೂಚ್ಯಾರ್ಥಗಳು ತುಂಬಿರುತ್ತವೆ. 'ಕಾಳಿಂಗಸರ್ಪ', 'ರುಸ್ತುಮ' 'ಕಳ್ಳಗೊರವ' ಮುಂತಾದುವೇ ಉದಾಹರಣೆಗಳು.

ಭರ್ತೃಹರಿಯು ಅರ್ಥವ್ಯಂಜಕತೆಯ ವಿಚಾರವಾಗಿ ಕೆಳಗಿನ ಕಾರಿಕೆಗಳನ್ನು ಹೇಳಿದ್ದಾನೆ :—



ಸಂಯೋಗೋ ವಿಪ್ರಯೋಗಶ್ಚ ಸಾಹಚರ್ಯಂ ವಿರೋಧಿತಾ ।
ಅರ್ಥಃ ಪ್ರಕರಣಂ ಲಿಂಗಂ ಶಬ್ದಸ್ಯಾನ್ಯಸ್ಯ ಸನ್ನಿಧಿಃ ।
ಸಾಮರ್ಥ್ಯಮೌಚಿತೀ ದೇಶಃ ಕಾಲೋ ವ್ಯಕ್ತಿಃ ಸ್ವರಾದಯಃ ।
ಶಬ್ದಾರ್ಥಸ್ಯಾನವಚ್ಛೇದೇ ವಿಶೇಷಸ್ಮೃತಿಹೇತವಃ ॥

## ಅರ್ಥವಿಕಾಸದ ನಿಯಮಗಳು (Semantic Laws)

ಯಾವುದೇ ನಿಯತ ದೇಶ-ಕಾಲಪರಿಸ್ಥಿತಿಯನ್ನು ಮೀರಿ ಅನೇಕ ಕಡೆಗೆ ಅನ್ವಯಿಸುವಂತಿರುವ ಕಾರ್ಯವೇ ನಿಯಮ (Law) ವೆನಿಸುತ್ತದೆ. ಶಬ್ದದಂತೆ ಅರ್ಥದಲ್ಲೂ ವಿಕಾಸವಾಗುವುದೆಂದು ನೋಡಿದ್ದೇವೆ. ಈ ವಿಕಾಸ ಅಥವಾ ವಿಕಾರಗಳಿಗೆ ಬುದ್ಧಿಗತವಾದ ಕಾರಣಗಳಿದ್ದರೆ ಅವುಗಳಿಗನ್ವಯಿಸುವ ನಿಯಮವನ್ನು ಬೌದ್ಧಿಕನಿಯಮಗಳೆನ್ನಬಹುದು. ಧ್ವನಿನಿಯಮಗಳು ದೇಶಕಾಲಗಳ ಸೀಮೆಯಲ್ಲಿದ್ದುಕೊಂಡೇ ಕೆಲಸಮಾಡುತ್ತವೆ. ಆದರೆ ಬೌದ್ಧಿಕನಿಯಮಗಳಿಗೆ ಹೀಗೆ ಪರಿಮಿತಸೀಮೆಯಿಲ್ಲ. ಅವು ದೇಶಕಾಲಾತೀತವಿರಬಹುದು. ಭಾಷಾಶಾಸ್ತ್ರಜ್ಞರು ಅರ್ಥವಿಜ್ಞಾನದ ಸಂಬಂಧದಲ್ಲಿ ಹೇಳಿರುವ ಬೌದ್ಧಿಕ ನಿಯಮಗಳು ಹೀಗಿವೆ :—

### 1. ವಿಶೇಷಭಾವದ ನಿಯಮ (Law of Specialization)

ಒಂದು ಅರ್ಥವನ್ನು ಪ್ರಕಟಗೊಳಿಸಲು ಅನೇಕ ಶಬ್ದಗಳ ಪ್ರಯೋಗ ಅಗತ್ಯವಾಗಿ, ಕಾರಣಾಂತರದಿಂದ ಶಬ್ದಗಳು ಕಡಿಮೆ ಬಿದ್ದರೆ, ಅಂತಹ ಅರ್ಥವಿಕಾಸ ಕಾರಣವನ್ನು ವಿಶೇಷಭಾವವೆನ್ನುತ್ತಾರೆ. ಒಂದೇ ವ್ಯಾಕರಣಸಂಬಂಧವನ್ನು ನಿರ್ದೇಶಿಸಲು ಅನೇಕ ಪ್ರತ್ಯಯಗಳ ಪ್ರಯೋಗವಾಗಬಹುದಾಗಿದ್ದರೆ, ಕಾಲಾಂತರದಲ್ಲಿ ಒಂದೆರಡು ಮಾತ್ರ ಪ್ರಯೋಗದಲ್ಲಿ ಉಳಿಯಬಹುದು. ಸಂಸ್ಕೃತದಲ್ಲಿ ತರತಮಭಾವವನ್ನು ಹೇಳಲು ತರ–ತಮ ; ಈಯಸ್—ಇಷ್ಠ ಎಂಬ ಎರಡು ಪ್ರಕಾರಗಳಿವೆ. ಎರಡಕ್ಕೂ ಅರ್ಥದಲ್ಲಿ ಭೇದವಿಲ್ಲ. ಆದರೆ ಕಾಲಗತಿಯಲ್ಲಿ ಎರಡನೆಯವೇ ವಿಜಯಿಗಳಾದವು. ಇಂದು ನಾವು 'ಗರೀಯಸ್', 'ಮಹೀಯಸ್', 'ಶ್ರೇಯಸ್', 'ಪ್ರೇಯಸ್' ಶಬ್ದಗಳಿಗಿಂತ ಹೆಚ್ಚಾಗಿ ಗರಿಷ್ಠ, ಶ್ರೇಷ್ಠ ಮುಂತಾದ ಪ್ರಯೋಗಗಳನ್ನೇ ಮಾಡುತ್ತಿರುತ್ತೇವೆ ಹಾಗೆಯೇ ಸಂಖ್ಯಾವಾಚಕಗಳಲ್ಲಿ ಮಾತ್ರ 'ತಮ' ಪ್ರತ್ಯಯದ ಸಂಕ್ಷಿಪ್ತರೂಪವಾದ 'ಮ' ಎಂಬುದೇ ಬಳಕೆಯಲ್ಲಿ ನಿಂತಿದೆ :—ಪ್ರಥಮ, ಪಂಚಮ, ಸಪ್ತಮ, ಅಷ್ಟಮ. ನವಮ, ದಶಮ ... ಇತ್ಯಾದಿಗಳಲ್ಲಿ. 'ಈಯಸ್' ಪ್ರತ್ಯಯದಿಂದಾದ ಸಂಖ್ಯಾವಾಚಕಗಳಲ್ಲಿ ಎರಡು ಮಾತ್ರ "ದ್ವಿತೀಯ", 'ತೃತೀಯ' ಉಳಿದುಕೊಂಡಿವೆ. 'ಇಷ್ಠ'ದ 'ಥ' ಕೇವಲ 'ಚತುರ್ಥ' ದಲ್ಲಿ ಉಳಿದಿದೆ. ಹೀಗೆ ತಾರತಮ್ಯ ಬೋಧನೆಗೆ ಒಂದು ಪ್ರತ್ಯಯ, ಸಂಖ್ಯಾನಿರ್ದೇಶಕ್ಕೆ ಇನ್ನೊಂದು ಹೆಚ್ಚು ಪ್ರಯುಕ್ತವಾಗುವ ವಿಶೇಷಭಾವವನ್ನು ನೋಡುತ್ತೇವೆ.

ಪ್ರಾಚೀನಕಾಲದ ವಿಭಕ್ತಿಗಳ ಸ್ಥಾನದಲ್ಲಿ ಇಂದು ದೇಶಭಾಷೆಗಳು ಪರಸರ್ಗಗಳನ್ನು ಬಳಸುವುದೂ ವಿಶೇಷಭಾವದ ಉದಾಹರಣೆಯೇ.

## 2. ಭಿನ್ನತಾಪಾದಕನಿಯಮ (The Law of Differentiation) :

ಪರ್ಯಾಯವಾಚಿಗಳಾದ ಶಬ್ದಗಳಲ್ಲಿಯೂ ಅಡಗಿರುವ ಸೂಕ್ಷ್ಮಭೇದ ನಿರ್ದೇಶ ಯಾವುದರಿಂದ ಶಕ್ಯವಾಗುವದೋ ಅದೇ ಭಿನ್ನತಾಪಾದಕ ನಿಯಮ. ಸಮಾನಾರ್ಥಕ ಶಬ್ದಗಳೆಂದು ಕೋಶ ಹೇಳಿದರೂ ಪ್ರಯೋಗಕಾಲದಲ್ಲಿ ಅವಕ್ಕಿರುವ ಸೂಕ್ಷ್ಮಭೇದಗಳ ಗ್ರಹಣ ಈ ನಿಯಮದ ವಿಷಯ. ಈ ಸೂಕ್ಷ್ಮಭೇದದಿಂದಾಗಿ ಒಂದರ ಬದಲು ಇನ್ನೊಂದನ್ನು ಬಳಸುವಂತಿರುವದಿಲ್ಲ.

ಉದಾಹರಣೆಗೆ 'ಪಾಠಶಾಲೆ', 'ವಿದ್ಯಾಲಯ', 'ವಿಶ್ವವಿದ್ಯಾಲಯ', 'ವಿದ್ಯಾಪೀಠ' ಇತ್ಯಾದಿ ಶಬ್ದಗಳೆಲ್ಲ ಮೂಲತಃ ಸಮಾನಾರ್ಥಕ ಅಥವಾ ಪರ್ಯಾಯ ಶಬ್ದಗಳೇ ಆದರೂ ಅವು ಬೇರೆ ಬೇರೆ ಶಿಕ್ಷಣ ಸಂಸ್ಥೆಗಳ ಅರ್ಥವನ್ನೇ ಕೊಡುತ್ತವೆ. ಹಾಗೆಯೇ 'ವೈದ್ಯ' 'ಡಾಕ್ಟರ್', 'ಹಕೀಮ್' ಇತ್ಯಾದಿ ಶಬ್ದಗಳಾದರೂ, ಹೀಗೆಯೇ ಅನುಭವ—ಅನುಭಾವ, ಶ್ರದ್ಧಾ—ಶ್ರಾದ್ಧ, ಬುದ್ಧ—ಬೌದ್ಧ—ಈ ಪ್ರಯೋಗಗಳಲ್ಲಿ ಭೇದವಿದೆ.

## 3. ಉದ್ಯೋತನ ನಿಯಮ (The Law of Irradication) :

ಒಂದು ವಿಶೇಷ ಶಬ್ದಕ್ಕೆ ವಿಶೇಷರೂಪವನ್ನು ಜೋಡಿಸಿದಾಗ ಅದು ಯಾವುದಾದರೂ ಒಳ್ಳೆಯ ಅಥವಾ ಕೆಟ್ಟ ಅರ್ಥವನ್ನು ಕೊಡತೊಡಗುವುದಾದರೆ ಆ ಜಾತಿಯ ಅರ್ಥಪರಿವರ್ತನೆಗೆ ನಿಮಿತ್ತವಾದ ನಿಯಮ ಉದ್ಯೋತನ ನಿಯಮವೆನಿಸುವುದು. ಲಿಂಗಭೇದದ ನಿಯಮಗಳು ಬರುವುದೇ ಹೀಗೆ. 'ಗೋಪಾ' ಪುಲ್ಲಿಂಗ ಶಬ್ದ ; 'ಮಾಲಾ' ಸ್ತ್ರೀಲಿಂಗ ಶಬ್ದ, ಆದರೆ ಸ್ತ್ರೀಲಿಂಗವಾಚಕ ಶಬ್ದಗಳಲ್ಲಿ 'ಆ' ಕಾರಾಂತ ಹೆಚ್ಚಾಗಿರುವುದರಿಂದ ಹಿಂದಿಯಲ್ಲಿ 'ಗೋಪಾ' ಎಂಬುದನ್ನೂ ಸ್ತ್ರೀಲಿಂಗಶಬ್ದವೆಂದೇ ತಿಳಿಯಲಾಗುತ್ತದೆ. ಪ್ರಕೃತಿಯೂ ಒಮ್ಮೊಮ್ಮೆ ಉದ್ಯೋತನ ನಿಯಮದಿಂದ ಪ್ರತ್ಯಯವಾಗಿಬಿಡುವುದನ್ನು ನೋಡುತ್ತೇವೆ. 'ಪಶ್ಚಾತ್' ಎಂಬ ಪ್ರಕೃತಿಯಿಂದ 'ಪಾಶ್ಚಾತ್ಯ' ಎಂಬ ರೂಪ ಸಾಧು, ಆದರೆ ಮುಂದೆ 'ಆತ್ಯ' ಎಂಬುದೇ ಒಂದು ಪ್ರತ್ಯಯವಾಗಿ 'ದಾಕ್ಷಿಣಾತ್ಯ', 'ಪೌರ್ವಾತ್ಯ' ಮುಂತಾದ ಶಬ್ದಗಳು ಹುಟ್ಟುತ್ತವೆ.

## 4. ವಿಭಕ್ತಿಗಳ ಅವಶೇಷನಿಯಮ (Survival of Inflections)

ಒಂದು ಭಾಷೆಯಲ್ಲಿ ಕೆಲವೊಂದು ಭಾವವಿಶೇಷಗಳ ನಿರ್ದೇಶನಕ್ಕೆ ಕೆಲವೊಂದು ವಿಭಕ್ತಿಗಳಿರುವುವೆನ್ನೋಣ. ಕಾಲಾಂತರದಲ್ಲಿ ಈ ವಿಭಕ್ತಿಗಳು ಲುಪ್ತವಾಗಿ ಬಿಡುತ್ತವೆ. ಆದರೂ ಅವುಗಳ ಅವಶೇಷ ಅಲ್ಲಲ್ಲಿ ಉಳಿದೇ ಇರುತ್ತದೆ. ಇದೇ ವಿಭಕ್ತಿಗಳ ಅವಶೇಷ ನಿಯಮವೆಂದರೆ, ಉದಾಹರಣೆಗೆ ಸಂಸ್ಕೃತದಲ್ಲಿ ಮೊದಲು ಅನೇಕ ವಿಭಕ್ತಿರೂಪಗಳಿದ್ದವು ; ಆದರೆ ಹಿಂದಿಯಲ್ಲಿ ಅವು ಲುಪ್ತಪ್ರಾಯವಾಗಿವೆ. ಹಾಗಾದರೂ ಕೆಲವೊಮ್ಮೆ ಅವು ಕಾಣಬರುತ್ತಿರುತ್ತವೆ. ಪೂರ್ಣತಮಾ, ವಸ್ತುತಃ, ದೈವಾತ್, ಹಠಾತ್, ಇತ್ಯಾದಿ.



## 5. ಮಿಥ್ಯಾಪ್ರತೀತಿಯ ನಿಯಮ :

ಅಜ್ಞಾನಕಾರಣದಿಂದಾಗುವ ಅರ್ಥವ್ಯತ್ಯಯಕ್ಕೆ ಮಿಥ್ಯಾಪ್ರತೀತಿ ನಿಯಮವೇ ಪ್ರಯೋಜಕ. ಉದಾಹರಣೆಗೆ, 'ಅಸುರ' ಎಂಬಲ್ಲಿ 'ಅ' ಎಂಬುದು ನಿಷೇಧಾರ್ಥಕವೆಂದು ಭ್ರಮಿಸಿ ಸುರ = ದೇವತೆ, ಅ-ಸುರ-ರಾಕ್ಷಸ ಎಂದರ್ಥ ಮಾಡುವುದು. ನಿಜವಾಗಿ ಅಸುರ ಎಂದರೆ ಮೂಲಭಾಷೆಯಲ್ಲಿ ದೇವ. ಇಂಗ್ಲೀಷಿನ Oxen ಶಬ್ದವೂ ಹೀಗೆಯೇ ಆಗಿದೆ. ಇದರ ಮೂಲ ಸಂಸ್ಕೃತದ 'ಉಕ್ಷನ್' ಶಬ್ದದಲ್ಲಿದೆ. ಆದರೆ 'en' ಎಂಬುದು ಬಹುವಚನ ಪ್ರತ್ಯಯವೆಂದು ಭ್ರಮಿಸಿದ್ದರಿಂದ 'ox' ಎಂಬ ಏಕವಚನಶಬ್ದದ ನಿರ್ಮಾಣವಾಗಿದೆ.

## 6. ಮಿಥ್ಯಾಸಾದೃಶ್ಯದ ನಿಯಮ :

ಮಿಥ್ಯಾಸಾದೃಶ್ಯವು ಶಬ್ದಪರಿವರ್ತನೆಗೆ ಕಾರಕವಾಗುವಂತೆ ಅರ್ಥಪರಿವರ್ತನೆಗೂ ಕಾರಕವಾಗುತ್ತದೆ. ಯಾವುದೋ ಒಂದರ ಸಾಮ್ಯದ ಮೇಲಿಂದ ಅರ್ಥವನ್ನು ಬದಲಾಯಿಸಲಾಗುತ್ತದೆ. ಇದು ಭಾಷಾಪರಿವರ್ತನೆಯಲ್ಲಿ ಬಹಳ ಪ್ರಬಲಪಾತ್ರವನ್ನು ವಹಿಸುತ್ತದೆ. ಭಾವಪ್ರಕಟನೆಯಲ್ಲಿ ಅಡೆತಡೆಗಳನ್ನು ದೂರೀಕರಿಸಲು, ಅಧಿಕ ಸ್ಪಷ್ಟತೆಗಾಗಿ, ಒಂದನ್ನು ಒತ್ತಿ ಹೇಳುವ ಸಲುವಾಗಿ, ಯಾವುದೊಂದು ಹಳೆಯ ಅಥವಾ ಹೊಸ ನಿಯಮದೊಡನೆ ಸಾಮಂಜಸ್ಯ ಕಲ್ಪಿಸುವುದಕ್ಕಾಗಿ ಸಾದೃಶ್ಯವನ್ನು ಆಶ್ರಯಿಸುವುದುಂಟು.

ಉದಾಹರಣೆಗೆ, ಪ್ರಾಚೀನ ಇಂಡೋ-ಯುರೋಪಿಯನ್ ಮೂಲಭಾಷೆಯಲ್ಲಿ ಉತ್ತಮ ಪುರುಷ ವರ್ತಮಾನಕಾಲದ ಎರಡು ರೂಪಗಳಿದ್ದವು. 'ಮಿ' ಮತ್ತು 'ಓ' ; ಸಾದೃಶ್ಯದ ಪ್ರಭಾವದಿಂದ ಕ್ರಮಶಃ ಈ ಭೇದ ಮರೆಯಾಗಿಹೋಯಿತು. ಸಂಸ್ಕೃತಭಾಷೆ 'ಮಿ' ಯನ್ನು ಸ್ವೀಕರಿಸಿದರೆ ಗ್ರೀಕ್ 'ಓ' ವನ್ನು ಸ್ವೀಕರಿಸಿತು. ಆದರೆ ಸಂಸ್ಕೃತದ 'ಅಸ್ಮಿ', ಅವೆಸ್ತಾ-ಅಹಿನ್ 'ಗಳಿಗೆ ಸಂವಾದಿಯಾದ 'ಎಹಿನ್' ಶಬ್ದ ಗ್ರೀಕ್‌ನಲ್ಲಿಯೂ ಉಳಿದು ಬಿಟ್ಟಿದೆ.

* * * *

## ಭಾಗ II

# ವೇದವಾಙ್ಮಯ

## ಭಾರತೀಯರ ದೃಷ್ಟಿಯಲ್ಲಿ ವೇದ

ಭಾರತದ ಸಕಲ ಕಾವ್ಯೇತಿಹಾಸಾದಿಪರಂಪರೆಗಳಿಗೂ, ಧರ್ಮಾದಿಚತುರ್ವಿಧಪುರುಷಾರ್ಥಗಳ ವಿಚಾರಗಳಿಗೂ, ನಾಟ್ಯ, ಆಯುರ್ವೇದ ಮುಂತಾದ ನಾನಾ ವಿದ್ಯೆಗಳಿಗೂ ಮೂಲ ಉದ್ಗಮಸ್ಥಾನವೇ 'ವೇದ'ವೆಂಬ ವಾಙ್ಮಯ ಜ್ಞಾನರಾಶಿ. "ಸರ್ವಜ್ಞಾನಮಯೋ ಹಿ ಸಃ" ಎಂಬ ಉದ್ಗಾರ ಸ್ಮೃತಿಕಾರರದು. 'ವೇದವಾಕ್ಯ'ವೆಂದರೆ ಭಾರತೀಯ ಜನತೆಗೆ ಮರು ಮಾತಿಲ್ಲದೆ ನಡೆಸಬೇಕಾದುದೆಂಬ ಗೌರವಬುದ್ಧಿಯಿದೆ; ಶಾಸ್ತ್ರಕಾರರಿಗೆಲ್ಲ 'ಶ್ರುತಿ'ಪ್ರಮಾಣ ವೆಂಬ ವಿಷಯದಲ್ಲಿ ಐಕಮತ್ಯವಿದೆ. ಕರ್ಮಕಾಂಡ, ಜ್ಞಾನಕಾಂಡಗಳೆರಡೂ ಅದರ ಎರಡು ಅಂಗಗಳಾಗಿವೆ. ಇದನ್ನು ಅಪೌರುಷೇಯವೆಂದೋ ಇಲ್ಲವೆ ಈಶ್ವರ ನಿರ್ಮಿತವೆಂದೋ ಹೇಳಿ ಅದರ ಪಾವಿತ್ರ್ಯವನ್ನೂ, ನಿತ್ಯತ್ವವನ್ನೂ ಘೋಷಿಸುವುದು ಭಾರತೀಯರ ಸಂಪ್ರದಾಯವಾಗಿದೆ. 'ವಿದ ಜ್ಞಾನೇ' ಎಂಬ ಧಾತುವಿನಿಂದ ನಿಷ್ಪನ್ನವಾದ 'ವೇದ' ಶಬ್ದವು ಒಂದು ಗ್ರಂಥವೆಂಬ ವಿಶಿಷ್ಟಾರ್ಥವನ್ನೇನೂ ನೇರವಾಗಿ ಬೋಧಿಸದು. ಅದು ಪರಮಜ್ಞಾನವಾಚಿಯೆಂದೇ ಭಾವಿಸಬೇಕು. ಆದ್ದರಿಂದಲೇ ಉಪನಿಷತ್ತುಗಳಲ್ಲಿ ಋಗ್ವೇದಾದಿಗಳನ್ನು 'ಅಪರಾ ವಿದ್ಯೆ'ಯ ಪ್ರಕಾರಗಳೆಂದೂ ವ್ಯವಹರಿಸುವುದುಂಟು.

ಸಕಲ ಸೃಷ್ಟಿಗೂ ಆದಿಕಾರಣನಾದ 'ಪುರುಷ'ನಿಂದಲೇ ಋಗ್ವೇದಾದಿಗಳು ಹುಟ್ಟಿದುವೆಂದು ಪುರುಷಸೂಕ್ತ (ಋಗ್ವೇದ X 90)ಹೇಳಿದರೆ, ನಿತ್ಯವಾದ 'ಕಾಲ'ದಿಂದ ಹುಟ್ಟಿದುವೆಂದು ಅಥರ್ವವೇದ ಹೇಳುತ್ತದೆ ('ಕಾಲಾದೃಚಃ ಸಮಭವನ್ ಯಜುಃ ಕಾಲಾದಜಾಯತ— ಅಥರ್ವವೇದ XIX.54.3). ಪ್ರಜಾಪತಿಯು ತಪಸ್ಸೆಗೈದಾಗ ಅಗ್ನಿ, ವಾಯು, ಸೂರ್ಯ, ದೇವತೆಗಳೂ, ಅವರಿಂದ ತ್ರಿವೇದಗಳೂ ಜನಿಸಿದವೆಂದು ಶತಪಥಬ್ರಾಹ್ಮಣದಲ್ಲಿ ವರ್ಣಿಸಿದೆ ('ತೇಭ್ಯಸ್ತಪ್ತೇಭ್ಯಸ್ತ್ರಯೋ ವೇದಾ ಅಜಾಯನ್ತ । ಅಗ್ನೇರ್ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾಮವೇದಃ ॥ I.i.5.8); ಇವರ ಪ್ರಯೋಜನ ಯಜ್ಞಸಿದ್ಧಿಯೆಂದು ಮನುಸ್ಮೃತಿ ವಿವರಿಸಿದೆ (ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಮ್ । ದುದೋಹ ಯಜ್ಞಸಿದ್ಧ್ಯರ್ಥಮೃಗ್ಯಜುಃಸಾಮಲಕ್ಷಣಮ್ ॥ I.23). ಇದನ್ನು ಆದಿಪುರುಷನ ನಿಃಶ್ವಾಸಗಳೆಂದು ಉಪನಿಷತ್ತು ಹೊಗಳುತ್ತದೆ. (ಅರೇಽಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ—ಬೃಹದಾರಣ್ಯಕ II.IV.10). ಪ್ರಜಾಪತಿಯ ಚತುರ್ಮುಖಗಳಿಂದ ಚತುರ್ವೇದಗಳು ಬಂದುವೆಂಬುದು ಪೌರಾಣಿಕ ವಿವರಣೆ (ತೇನಾಸೌ ಚತುರೋ ವೇದಾಂಶ್ಚತುರ್ಭಿರ್ವದನೈಃಪ್ರಭುಃ—



ಭಾಗವತ XII. 6). ವಿಷ್ಣುಪುರಾಣದ ಪ್ರಕಾರ ಭೂತಗಳ ಸಕಲ ನಾಮರೂಪಗಳಿಗೂ ಕರ್ಮಗಳಿಗೂ, ದೇವತೆಗಳಿಗೂ ಸಹ ವೇದಗಳೇ ಮೂಲ (ನಾಮರೂಪಂ ಚ ಭೂತಾನಾಂ, ಕೃತ್ಯಾನಾಂ ಚ ಪ್ರವರ್ತನಮ್ । ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥ I.v.58).

ವೇದಗಳ ಮಹತ್ತ್ವವನ್ನು ಕೊಂಡಾಡಲು ಮನುಸ್ಮೃತಿ ಅನೇಕ ಶ್ಲೋಕಗಳನ್ನು ರಚಿಸಿದೆ. 'ಪಿತೃದೇವಮನುಷ್ಯರಿಗೆಲ್ಲ ವೇದವೇ ಸನಾತನ ಚಕ್ಷು; ಅದು ಅಶಕ್ಯ ಮತ್ತು ಅಪ್ರಮೇಯ' (XII. 94); 'ವೇದಜ್ಞನಿಗೆ ಸೇನಾಧಿಪತ್ಯ, ರಾಜ್ಯ, ಸರ್ವಲೋಕಾಧಿಪತ್ಯ ಎಲ್ಲಕ್ಕೂ ಅರ್ಹತೆಯುಂಟು' (XII. 100); 'ವೇದಜ್ಞನು ಯಾವ ಆಶ್ರಮದಲ್ಲಿದ್ದರೂ ಅವನು ಬ್ರಹ್ಮಜ್ಞಾನಿಯೇ ಸರಿ' (XII. 102); 'ಅವನಿಗೆ ಯಾವುದೇ ಪಾಪವೂ ತಟ್ಟಲಾರದು' (XI. 261) ಇತ್ಯಾದಿ. ವೇದವೆಂದರೆ ಕೇವಲ ಕರ್ಮಕಾಂಡವೆನ್ನುತ್ತಿದ್ದ ಸಂಕುಚಿತಮತಿಗಳನ್ನು ಕುರಿತು ಯಜ್ಞಕರ್ಮಗಳು ಅಧ್ಯಾತ್ಮಜ್ಞಾನ ವಿರಹಿತವಾದರೆ 'ಬಿರುಕುಬಿಟ್ಟ ದೋಣಿಗಳು' ('ಪ್ಲವಾ ಹ್ಯೇತೇ ಅದೃಢಾಃ' —ಮುಂಡಕೋಪನಿಷತ್. I. ii. 7) 'ತುಂಬಿಟ್ಟ ನೀರಿನ ಹೊಂಡ' ('ಯಾವಾನರ್ಥ ಉದಪಾನೇ...'— ಗೀತೆ II. 46) ಎಂದು ಮುಂತಾಗಿ ಎಚ್ಚರದ ಮಾತುಗಳೂ ಉಂಟು.

ಮಹಾವಿಷ್ಣುವೇ ದ್ವಾಪರಯುಗಾಂತ್ಯದಲ್ಲಿ ವೇದವ್ಯಾಸನ ರೂಪದಿಂದ ಅವತರಿಸಿ ಒಂದೇ ಇದ್ದ ವೇದವನ್ನು ನಾಲ್ಕಾಗಿಯೂ, ನಾನಾಶಾಖಾಯುತವಾಗಿಯೂ ವಿಭಾಗಿಸಿದನೆಂದು ವಿಷ್ಣು ಪುರಾಣ ಹೇಳುತ್ತದೆ ('ವೇದಮೇಕಂ ಚತುರ್ಭೇದಂ ಕೃತ್ವಾ ಶಾಖಾಶತೈರ್ವಿಭುಃ । ಕರೋತಿ ಬಹುಲಂ ಭೂಯೋ ವೇದವ್ಯಾಸಸ್ವರೂಪಧೃಕ್' III. 2. 56—47). ಶುಕ್ಲಯಜುರ್ವೇದದ ವಾಜಸನೇಯಿಸಂಹಿತೆಯ ವ್ಯಾಖ್ಯಾರಂಭದಲ್ಲಿ ಮಹೀಧರನು ಇದನ್ನು ಉಲ್ಲೇಖಿಸಿ ವ್ಯಾಸಮಹರ್ಷಿಯು ಚತುರ್ವೇದಗಳನ್ನು ಕ್ರಮವಾಗಿ ಪೈಲ, ವೈಶಂಪಾಯನ, ಜೈಮಿನಿ, ಸುಮಂತು ಎಂಬ ನಾಲ್ವರು ಶಿಷ್ಯರಿಗೆ ಉಪದೇಶಿಸಿದನೆಂದು ಬರೆದಿದ್ದಾನೆ.

ಹೀಗೆ ಗುರುಶಿಷ್ಯಪರಂಪರೆಯಿಂದ ಅವಿಚ್ಛಿನ್ನ ಅಧ್ಯಯನಕ್ರಮಾಗತವಾಗಿ ಬಂದಿರುವ ವೇದರಾಶಿಯನ್ನು ಅಂತರ್ದೃಷ್ಟಿಯಿಂದ ದರ್ಶನ ಪಡೆದು ಪ್ರಕಾಶಿಸುವವರೇ ಋಷಿಗಳು (ಋಷಿರ್ದರ್ಶನಾತ್—ಯಾಸ್ಕ), ವೇದದ ಪ್ರತಿಪಾದ್ಯಾಂಶವೆಲ್ಲ ಅತೀಂದ್ರಿಯಾರ್ಥವೇ ('ಅತೀಂದ್ರಿಯಾರ್ಥ ದ್ರಷ್ಟಾರೋ ಹಿ ಋಷಯಃ; ತೇಷಾಂ ವೇದದ್ರಷ್ಟೃತ್ವಂ ಸ್ಮರ್ಯತೇ—ಸಾಯಣನ ವೇದಾರ್ಥಪ್ರಕಾಶದ ಉಪೋದ್ಘಾತ—ತೈತ್ತಿರೀಯ ಸಂಹಿತೆ). ವೇದಗಳು ನಿತ್ಯ; ವೇದಶಾಖಾನಾಮಗಳ ವರ್ಣಾನುಪೂರ್ವಿ ಮಾತ್ರ ಅನಿತ್ಯವೆಂದು ಪತಂಜಲಿ ವಿವರಿಸಿದ್ದಾನೆ ('ಯದ್ಯಪ್ಯರ್ಥೋ ನಿತ್ಯಃ । ಯಾ ತ್ವಸೌ ವರ್ಣಾನುಪೂರ್ವೀ ಸಾ ತ್ವನಿತ್ಯಾ ತದಭೇದಾಚ್ಚೈತದ್ಭವತಿ ಕಾಠಕಂ ಕಾಲಾಪಕಂ ...' ಇತ್ಯಾದಿ — ಮಹಾಭಾಷ್ಯ). ವಸಿಷ್ಠವಿಶ್ವಾಮಿತ್ರಾದಿಋಷಿಗಳು ಮಂತ್ರದ್ರಷ್ಟಾರರೇ ಹೊರತು ಮಂತ್ರಸ್ರಷ್ಟಾರರಲ್ಲ. ಮತ್ತು ಯಾಸ್ಕಚಾರ್ಯರೇ ಮುಂತಾದವರು ಹೇಳುವಂತೆ ವೇದಕ್ಕೆ ಆಧಿಭೌತಿಕ, ಆಧಿಯಜ್ಞಿಕ, ಐತಿಹಾಸಿಕ ಇತ್ಯಾದಿ

ನಾನಾರ್ಥಗಳು ಶಕ್ಯ. ಅದನ್ನು ಬ್ರಹ್ಮಚರ್ಯೆಯಿಂದ ಗುರುಶುಶ್ರೂಷೆ ಮಾಡಿಯೇ ತಿಳಿಯಬೇಕು. ಇದು ಭಾರತೀಯ ದೃಷ್ಟಿಯಲ್ಲಿ ವೇದದ ಮಹತ್ತ್ವ ಮತ್ತು ವೈಶಿಷ್ಟ್ಯ.

**ಆಧುನಿಕ ಪಾಶ್ಚಾತ್ಯ ಸಂಶೋಧಕರ ದೃಷ್ಟಿಯಲ್ಲಿ ವೇದ :**

ಮಾನವನ ಪ್ರಾಚೀನತಮ ಸಂಸ್ಕೃತಿಯನ್ನು ಕೂಲಂಕಷವಾಗಿ ಸಂಶೋಧಿಸುವ ಪ್ರವೃತ್ತಿ ಹತ್ತೊಂಬತ್ತನೆಯ ಶತಮಾನದ ಪಾಶ್ಚಾತ್ಯ ವಿದ್ವಾಂಸರಲ್ಲಿ ಮೂಡಿದ್ದರ ಫಲವಾಗಿ ಭಾರತ, ಗ್ರೀಸ್, ಈಜಿಪ್ಟ್, ಇರಾನ್, ಏಷ್ಯಾಮೈನರ್, ಚೀಣ ಇತ್ಯಾದಿ ಪ್ರಾಚೀನ ಸಂಸ್ಕೃತಿಯ ಕೇಂದ್ರಗಳ ವೈಜ್ಞಾನಿಕ ಅಧ್ಯಯನವನ್ನು ಅವರು ಕೈಗೊಂಡರು. ಪ್ರಾಚೀನ ಅವಶೇಷಗಳಾದ ಶಿಲ್ಪಗಳಿರಲಿ, ಮಡಕೆಯ ಚೂರುಗಳಿರಲಿ, ಅಸ್ಥಿಪಂಜರವಿರಲಿ–ಎಲ್ಲವನ್ನೂ ಅವರು ಶಾಸ್ತ್ರೀಯವಾಗಿ ಅಧ್ಯಯನ ಮಾಡಹೊರಟು ಉತ್ಖನನಸಮೀಕ್ಷಾಶಾಸ್ತ್ರ (Archaeology), ಪ್ರಾಗಿತಿಹಾಸಶಾಸ್ತ್ರ (Ancient History). ಮಾನವತಾವಿಕಾಸಶಾಸ್ತ್ರ (Anthropology) ಮುಂತಾದ ಹೊಸ ವಿಜ್ಞಾನಕ್ಷೇತ್ರಗಳನ್ನೇ ಸೃಷ್ಟಿಸಿಕೊಂಡರು. ಇವುಗಳಲ್ಲಿ ಭಾಷಾಶಾಸ್ತ್ರ (Linguistics)ವೂ ಒಂದೆಂದು ನೋಡಿದ್ದೇವೆ. ಅದರಂತೆ ತುಲನಾತ್ಮಕ ದೈವತಕಥಾಶಾಸ್ತ್ರ (Comparative Mythology) ಮತ್ತು ತುಲನಾತ್ಮಕ ಮತಧರ್ಮಶಾಸ್ತ್ರ (Comparative religion) ಗಳನ್ನು ಮ್ಯಾಕ್ಸ್‌ಮ್ಯೂಲರ್ ಮುಂತಾದ ವಿಶ್ವದ್ವರೇಣ್ಯರು ಅಸ್ತಿತ್ವದಲ್ಲಿ ತಂದರು. ಅದಕ್ಕೆಲ್ಲ ಮೂಲಭೂತ ಅಧ್ಯಯನ ಸಾಮಗ್ರಿಯನ್ನು ಒದಗಿಸಿದ್ದೇ ಋಗ್ವೇದಸಂಹಿತೆಯಾದ್ದರಿಂದ ಅದರ ಬಗೆಗೆ ಅವರಿಗೆಲ್ಲ ಅಭೂತಪೂರ್ವವಾದ ಗೌರವವಿದೆ. ಜಗತ್ತಿನ ಸಂಸ್ಕೃತಿಯ ಇತಿಹಾಸದಲ್ಲಿ ಮತ್ತೆಲ್ಲೂ ವೇದದಷ್ಟು ಪ್ರಾಚೀನವಾದ ವಿಶಾಲ ಸಾಹಿತ್ಯರಾಶಿ ನಿಸ್ಸಂದಿಗ್ಧ ರೂಪದಲ್ಲಿ ಉಪಲಬ್ಧವಿಲ್ಲ. ಮಾನವನ ಮನೋವಿಕಾಸದ ಮಂಗಲಪ್ರಭಾತಗೀತೆಯೇ ಋಗ್ವೇದ ಸಂಹಿತೆಯೆಂದು ಅವರು ಅದನ್ನು ಹಾಡಿ ಹೊಗಳುವರೇನೋ ನಿಜ: ಆದರೆ ಅವರಿಗೆ ಭಾರತೀಯರ ಧರ್ಮದೃಷ್ಟಿಯ ಬದಲು ಧರ್ಮಾತೀತವಾದ ಐತಿಹಾಸಿಕ ದೃಷ್ಟಿಯಿರುವುದರಿಂದ ಅದನ್ನು ಅಪೌರುಷೇಯವೆಂದಾಗಲಿ ನಿತ್ಯವೆಂದಾಗಲಿ ಅವರು ಅಂಗೀಕರಿಸುವುದಿಲ್ಲ. ಮಧ್ಯ ಏಷ್ಯಾದ ಮೂಲವಸತಿಯೊಂದರಿಂದ ಆರ್ಯನ್ ಜನವರ್ಗ ನಾಲ್ಕೂ ದಿಕ್ಕಿಗೆ ವಲಸೆಹೊರಟು, ಪರಿಭ್ರಮಣಶೀಲವಾದ ತಮ್ಮ ಪ್ರವೃತ್ತಿಯ ಪ್ರಭಾವವನ್ನು ಎಲ್ಲೆಡೆ ಬೀರುತ್ತ, ಅತ್ತ ಏಷ್ಯಾಮೈನರ್ ಮುಖಾಂತರ ಗ್ರೀಸ್, ರೋಮ್, ಜರ್ಮನಿ ಮುಂತಾದ ಯೂರೋಪಿನ ಪ್ರದೇಶಗಳಿಗೂ, ಇತ್ತ ಇರಾನ್, ಅಫ್ಘಾನಿಸ್ಥಾನ್ ಮುಖಾಂತರ ಭಾರತಕ್ಕೂ ವಲಸೆ ಬಂದು ಅಲ್ಲಲ್ಲಿಯ ಸಂಸ್ಕೃತಿಗಳನ್ನು ನಿರ್ಮಿಸಲು ಮೂಲಪುರುಷರಾದರೆಂದು ಐರೋಪ್ಯ ವಿದ್ವಾಂಸರು ಈ ನೂತನ ಶಾಸ್ತ್ರಗಳ ಮೇಲಿಂದ ತೀರ್ಮಾನಿಸುತ್ತಾರೆ. ನಗರನಿರ್ಮಾಣ, ಕೃಷಿ, ಇವುಗಳಲ್ಲಿ ಇನ್ನೂ ಮುಂದುವರಿಯದಿದ್ದ ಕಾಲದ ಆರ್ಯನ್ ಬುಡಕಟ್ಟಿನ ವೇದಕಾಲೀನ ಜನವರ್ಗದವರು ಭಾರತದ ಪೂರ್ವನಿವಾಸಿಗಳಾಗಿದ್ದ ದ್ರಾವಿಡ ಮತ್ತು ಆಸ್ಟ್ರೋ-ಏಷ್ಯಾಟಿಕ್ ಜನವರ್ಗದವರೊಡನೆ ಕಲೆತು ಭಾರತದಲ್ಲೆಲ್ಲ ಹೊಸ ಸಂಸ್ಕೃತಿಯ ಉದಯಪ್ರಸಾರಗಳಿಗೆ ಕಾರಣೀಭೂತರಾದವರು.



ಹೀಗೆ ಭಾರತದ ಹೊರಗಿನಿಂದ ಬಂದ ಒಂದು ಜನ ಸಿಂಧೂನದಿ ಮತ್ತು ಉಪನದಿಗಳ ಪ್ರದೇಶದಲ್ಲಿ ನೆಲಸಿ ತಮ್ಮದೇ ಆದ ಒಂದು ಯಜ್ಞಸಂಸ್ಕೃತಿಯನ್ನೂ, ಸಾಹಿತ್ಯವನ್ನೂ ನಿರ್ಮಿಸಿಕೊಂಡರೆಂದೂ, ಅದೇ ವೇದಗಳಲ್ಲಿ ಪ್ರತಿಫಲಿಸುತ್ತಿದೆಯೆಂದೂ ಯೂರೋಪಿಯನ್ ವಿದ್ವಾಂಸರ ದೃಢನಿಶ್ಚಯ. ಇದನ್ನು ಒಪ್ಪದಿದ್ದರೆ ಪ್ರಾಚೀನ ಇರಾನಿನ ರೆಘಿಂಡ್, ಅವೆಸ್ತಾ, ಗ್ರೀಸಿನ ದೇವತಾಕಥೆಗಳು ಹಾಗು ರೋಮನರ ಧಾರ್ಮಿಕ ಆಚರಣೆಗಳಲ್ಲಿ ಮತ್ತು ಭಾಷಾವಿಷಯದಲ್ಲಿರುವ ಮೂಲಭೂತ ಸಾಮ್ಯಗಳನ್ನು ತೃಪ್ತಿಕರವಾಗಿ ವಿವರಿಸಿದಂತಾಗದೆಂದು ಅವರ ಸಿದ್ಧಾಂತ. ಅವರ ಈ ಅಧ್ಯಯನಗಳ ಸಂಖ್ಯೆ ಎಷ್ಟೆಂಬುದನ್ನು ಗಾತ್ರದಿಂದ ನಿರ್ಣಯಿಸುವುದಾದರೆ ಅವುಗಳ ಪಟ್ಟಿಯೇ ಒಂದೊಂದೂ ಐನೂರು ಪುಟಗಳಷ್ಟಿರುವ ಆರೇಳು ಸಂಪುಟಗಳಿವೆ ("Vedic Bibliography"). ಸುಮಾರು ಒಂದೂವರೆ ಶತಮಾನದ ಅವಧಿಯಲ್ಲಿ, ಜರ್ಮನ್, ಫ್ರೆಂಚ್, ಇಂಗ್ಲೀಷ್, ಅಮೆರಿಕನ್ ಮುಂತಾದ ವಿದ್ವಾಂಸರು ಸಂಪಾದಿಸಿ ಪ್ರಕಟಿಸಿರುವ ವೇದಗ್ರಂಥಗಳು, ಅವುಗಳ ಭಾಷಾಂತರ ಹಾಗೂ ಅಧ್ಯಯನಗಳ ಮತ್ತು ಲೇಖನಗಳ ಸಂಖ್ಯೆ ಭಾರತೀಯರ ಕೃತಿಗಳಿಗಿಂತ ಹತ್ತಾರು ಪಟ್ಟು ಹೆಚ್ಚಿನವಾಗಿವೆ:

ನಾಲ್ಕೂ ವೇದಗಳ ಸಂಹಿತೆ, ಬ್ರಾಹ್ಮಣ, ಆರಣ್ಯಕ ಇತ್ಯಾದಿ ಗ್ರಂಥಗಳನ್ನೆಲ್ಲ ಶಾಸ್ತ್ರೀಯವಾಗಿ ಹಸ್ತಪ್ರತಿಗಳಿಂದ ಸಂಶೋಧಿಸಿ, ಮೂಲಪಾಠವನ್ನು ನಿರ್ಣಯಿಸಿ, ಅವುಗಳನ್ನು ಪ್ರಪ್ರಥಮವಾಗಿ ಮುದ್ರಿಸಿದ ಕೀರ್ತಿ ಜರ್ಮನರದೇ ಆಗಿದೆ. ಋಗ್ವೇದ ಸಂಹಿತೆಯನ್ನು ಸಂಪೂರ್ಣವಾಗಿ ಮೊತ್ತಮೊದಲು ಸಾಯಣ ಭಾಷ್ಯಸಮೇತ ಪ್ರಕಟಿಸಿದವನೆಂದರೆ ಮ್ಯಾಕ್ಸ್ ಮ್ಯೂಲರ್ ; ಅದನ್ನು ಪ್ರಕಟಿಸಿದ ಸಂಸ್ಥೆ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ. ಭಾರತದಲ್ಲಿ ವೇದಗಳ ಅಧ್ಯಯನಕ್ಕೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಮುಂತಾದ ವೇದಾಂಗಗಳ ಪರಂಪರೆಯಿದ್ದರೂ ಅದೆಲ್ಲ ಉತ್ತರಕಾಲಿನ ಧಾರ್ಮಿಕ ಕಲ್ಪನೆಗಳಿಂದ ಹಾಗೂ ಅವೈಜ್ಞಾನಿಕ ಊಹೆಗಳಿಂದ ಮೂಲಾರ್ಥಗ್ರಹಣೆಗೆ ಸಾಧಕವಾಗಲಾರದೆಂದು ಭಾವಿಸಿದ ಐರೋಪ್ಯ ವಿದ್ವಾಂಸರು ಸ್ವಪ್ರತಿಭೆಯಿಂದ ಹಾಗೂ ಸತತ ಪರಿಶ್ರಮದಿಂದ ನೂತನವಾದ ವೇದಾಂಗಗಳನ್ನು ರಚಿಸಿಕೊಂಡರು, ತಮ್ಮ ಭಾಷೆಗಳಲ್ಲಿ. ವೇದಗಳಲ್ಲಿ ಬರುವ ಪ್ರತಿ ಶಬ್ದವನ್ನೂ ಅದರ ಸಂದರ್ಭಸೂಚನೆಯೊಂದಿಗೆ ಪಟ್ಟಿಮಾಡಿ ಭಿನ್ನಭಿನ್ನ ಪ್ರಯೋಗಗಳಲ್ಲಿ ಉಚಿತವೆನಿಸುವ ಅರ್ಥವನ್ನು ಕ್ರಮಬದ್ಧವಾಗಿ ಲೆಕ್ಕಮಾಡಿ ಅತ್ಯಾಧುನಿಕ ಶಾಸ್ತ್ರೀಯ ಕ್ರಮದಿಂದ ಬೃಹತ್ಕೋಶವನ್ನು ಜರ್ಮನ್ ಭಾಷೆಯಲ್ಲಿ ರಚಿಸಲಾಗಿದೆ. ಇದು ರೋಟ್ ಎಂಬ ವಿದ್ವಾಂಸನಿಂದ ಆಗಿರುವ ಮಹಾಕಾರ್ಯ. "ವೋರ್ಟರ್‌ಬುಕ್" ಎಂದು ಇದರ ಹೆಸರು ; ಇದರಲ್ಲಿ ಏಳು ಬೃಹತ್ಸಂಪುಟಗಳಿವೆ. ಹಾಗೆಯೇ ವೇದಗಳ ಪ್ರತಿಯೊಂದು ಶಬ್ದಪ್ರಯೋಗದ ನಿರ್ದೇಶ ಮತ್ತು ತತ್ಸಮಾನ ಪ್ರಯೋಗಗಳ ಉಲ್ಲೇಖಗಳನ್ನೊಳಗೊಂಡ ಮತ್ತೊಂದು ಸೂಚಿ—"ವೇದಿಕ್ ಕನ್‌ಕಾರ್ಡೆನ್ಸ್" ಬ್ಲೂಮ್ ಫೀಲ್ಡ್ ಎಂಬಾತನಿಂದ ನಿರ್ಮಿತವಾಗಿದೆ. ಮೆಕ್ಡಾನೆಲ್, ವಿಟ್ನಿ, ಮುಂತಾದವರು ವೇದಭಾಷೆಗೆ ತಮ್ಮದೇ ಆದ ವ್ಯಾಕರಣಗಳನ್ನು ಬರೆದಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ, ಯಜ್ಞಪರವಾದ ವೇದಾರ್ಥನಿರ್ಣಯ ಸಾಯಣಭಾಷ್ಯದ

ರೀತಿಯಲ್ಲಿ ಅವರಿಗೆ ಅಗ್ರಾಹ್ಯ; ತುಲನಾತ್ಮಕ ಭಾಷಾಶಾಸ್ತ್ರೀಯ ವಿಧಾನದಿಂದ ತಾವೇ ಸ್ವತಂತ್ರವಾಗಿ ಅವರು ಶಬ್ದನಿರುಕ್ತಿಯನ್ನೂ ಶಬ್ದನಿಷ್ಪತ್ತಿಯನ್ನೂ ಸಾಧಿಸುತ್ತಾರೆ. ವೇದಾರ್ಥ, ಛಂದಸ್ಸು, ದೈವತಕಥಾ ವಿಚಾರ, ದೇವತಾಸ್ವರೂಪ, ಸಾಹಿತ್ಯಲಕ್ಷಣ–ಎಲ್ಲ ವಿಷಯಗಳಲ್ಲಿಯೂ ತಮ್ಮದೇ ಆದ ನೂತನ ವಿಚಾರಸರಣಿ ಅವರದಾಗಿದೆ. ಇದನ್ನೇ ಆಧುನಿಕ ಸಂಶೋಧನ ದೃಷ್ಟಿಯೆನ್ನಬಹುದು.

ಈ ದೃಷ್ಟಿಯಿಂದ ವೇದಮಂತ್ರಗಳನ್ನು ರಚಿಸಿದ ಕವಿಗಳೇ ಋಷಿಗಳಾಗುತ್ತಾರೆ. ಇವರ ದೃಷ್ಟಿಯೆಲ್ಲಾ ದೇವತೆಗಳನ್ನು ಹೋಮಾದಿಗಳಿಂದ ತೃಪ್ತಿಪಡಿಸಿ ತಮ್ಮ ಅಭ್ಯುದಯವನ್ನು ಸಾಧಿಸುವ ಕಡೆಗೆ ಕೇಂದ್ರೀಕೃತವಾಗಿರುತ್ತದೆ. ಪುರೋಹಿತವರ್ಗದವರ ಕೈವಾಡ ಬಹಳವಾಗಿ ಎದ್ದು ಕಾಣುತ್ತದೆ. ಧನವಂತರಿಂದೆಲ್ಲ ಯಜ್ಞ ಮಾಡಿಸಿ ಹೆಚ್ಚಿನ ದಾನ ದಕ್ಷಿಣೆಗಳನ್ನು ಸೆಳೆಯುವ ಪ್ರಬಲ ಮನೋವೃತ್ತಿ ಇವರದು. ದೇವತೆಗಳು ಕೂಡ ಅನೇಕರಿದ್ದು, ನಿಸರ್ಗದ ಮಹಾವಿಭೂತಿಗಳಿಗೆ ಮನುಷ್ಯಾಕಾರ ಕೊಟ್ಟು ಅವರನ್ನು ಈ ಪುರೋಹಿತರು ಆರಾಧಿಸುವಂತೆ ಕಾಣುತ್ತದೆ. ಸಾಹಿತ್ಯಗುಣ ಉಷಸ್ಸೂಕ್ತಾದಿಗಳಲ್ಲಿ ಎದ್ದು ಕಾಣುವಂತಿದ್ದರೂ, ಒಟ್ಟಿನ ಮೇಲೆ ಕಡಿಮೆ ಮಟ್ಟದ್ದು. ಭಯಭಕ್ತಿಗಳಿಂದ ಮಾನವನು ವಿಶ್ವಸಂಸ್ಕೃತಿಯ ಉಷಃಕಾಲದಲ್ಲಿ ಹೇಗೆ ಧರ್ಮಕರ್ಮಗಳಿಗೆ ಮಣಿದನೆಂಬುದರ ಪ್ರತೀಕ ಮಾತ್ರ ವೇದವಾಗಿ ಇವರಿಗೆ ತೋರುತ್ತದೆ. ಎಲ್ಲ ಪ್ರಾಚೀನ ಸಂಸ್ಕೃತಿಗಳಂತೆ ಇದೂ ಒಂದಾಗುತ್ತದೆಯೇ ಹೊರತು ವಿಶ್ವ ಸಂಸ್ಕೃತಿಗೆಲ್ಲ ಇದೇ ಮೂಲವೆನಿಸದು.

ಆಧುನಿಕ ಭಾರತೀಯರಲ್ಲಿ ಅನೇಕ ವಿದ್ವಾಂಸರು ಈ ಸಂಶೋಧಕ ದೃಷ್ಟಿಯನ್ನು ಪೂರ್ಣವಾಗಿ ಒಪ್ಪಿದರೂ, ಅದನ್ನು ಒಪ್ಪದೆ ವೇದದಲ್ಲಿ ನಿಗೂಢಾರ್ಥವನ್ನೂ, ಮಹತ್ತ್ವವನ್ನೂ ಎತ್ತಿ ತೋರಿಸಲು ಮುಂದಾದ ಲೇಖಕರಲ್ಲಿ ಮಹರ್ಷಿ ದಯಾನಂದ ಸರಸ್ವತಿ, ಶ್ರೀ ಅರೋಬಿಂದೋ, ಮಧುಸೂದನ ಓಝಾ, ಕಪಾಲಿ ಶಾಸ್ತ್ರೀ ಮುಂತಾದವರ ಹೆಸರನ್ನಿಲ್ಲಿ ಉಲ್ಲೇಖಿಸಬಹುದು. ಇಲ್ಲಿ ಅವರ ವಿಚಾರಗಳನ್ನೆಲ್ಲ ನಿರ್ದೇಶಿಸಲು ಎಡೆಯಿಲ್ಲ. ಏನೇ ಆದರೂ, ಭಾರತೀಯ ಸಾಹಿತ್ಯದಲ್ಲಿ ಮತ್ತು ವಿಶ್ವಸಾಹಿತ್ಯದಲ್ಲಿ ವಿಭಿನ್ನ ದೃಷ್ಟಿಗಳಿಂದ ಋಗ್ವೇದಕ್ಕೆ ಅಗ್ರಸ್ಥಾನವಿದೆ ಯೆಂಬ ಮಾತಂತೂ ನಿರ್ವಿವಾದ. ಇಂದು ವೇದಗಳ ಸ್ವರೂಪಜ್ಞಾನಕ್ಕೆ ಮತ್ತಾವ ಸಾಹಿತ್ಯದ ಅಧ್ಯಯನಕ್ಕೂ ಇಲ್ಲದಂತಹ ವಿಶಾಲ ಅಧ್ಯಯನಸಾಮಗ್ರಿ ದೊರೆಯುತ್ತದೆಂಬುದೂ ಗಮನಾರ್ಹ.

### ಆಧುನಿಕರ ವೇದಕಾಲ ವಿಚಾರ :

ಈ ವಿಚಾರಕ್ಕೆ ನಾಂದಿಯನ್ನು ಹಾಡಿದವನೆಂದರೆ ಮ್ಯಾಕ್ಸ್ ಮ್ಯೂಲರ್. ಭಾರತದಲ್ಲಿ ಖಚಿತವಾದ ಕಾಲನಿರ್ದೇಶಗಳ ಅಭಾವವನ್ನು ಗಮನಿಸಿದ ಆತನು ಬುದ್ಧನ ನಿರ್ವಾಣ ಕ್ರಿ.ಪೂ. 477ರಲ್ಲಿ ಆದುದು ನಿರ್ವಿವಾದವೆಂದು ಹಿಡಿದು ಅಲ್ಲಿಂದ ತನ್ನ ಸಂಶೋಧನೆಯನ್ನು ಆರಂಭಿಸಿದನು. ಬೌದ್ಧಧರ್ಮದ ಹಿನ್ನೆಲೆ ಸುಮಾರು ಕ್ರಿ. ಪೂ. 600 ಎಂದಾಯಿತು.



ಅದಕ್ಕೆ ಮುಂಚೆಯೇ ಸಕಲ ವೇದಗ್ರಂಥಗಳ ರಚನೆಯೂ ಮುಗಿದಾಗಿದಿರಬೇಕು; ಆ ಗ್ರಂಥಗಳನ್ನೆಲ್ಲ ಭಾಷಾದೃಷ್ಟಿಯಿಂದ ವಿಭಾಗಿಸಿದರೆ ಛಂದಃಕಾಲ, ಮಂತ್ರಕಾಲ, ಬ್ರಾಹ್ಮಣಕಾಲ, ಸೂತ್ರಕಾಲ ಎಂಬ ನಾಲ್ಕು ಅವಧಿಗಳಾಗುತ್ತವೆ, ಉತ್ತರೋತ್ತರವಾಗಿ. ಒಂದೊಂದೂ ಅವಧಿಯಲ್ಲಿರುವ ಗ್ರಂಥವೈಪುಲ್ಯವನ್ನೂ ಗಮನಿಸಿದರೆ ಕನಿಷ್ಠಪಕ್ಷ ಒಂದೊಂದೂ 200 ವರ್ಷಗಳದ್ದಾಗಿರಬೇಕೆನಿಸುತ್ತದೆ. ಕಡೆಯದಾದ ಸೂತ್ರಕಾಲವು ಕ್ರಿ. ಪೂ 600 ರಿಂದ ಕ್ರಿ. ಪೂ. 200 ಇರಬೇಕೆಂದು ನಿರ್ಣಯಿಸಿಕೊಂಡು ಅದಕ್ಕೆ ಹಿಂದಿನವಕ್ಕೆಲ್ಲ ಇನ್ನೂರು ವರ್ಷಗಳನ್ನು ಕಲ್ಪಿಸಿ ಬ್ರಾಹ್ಮಣಗಳ ಕಾಲ ಕ್ರಿ. ಪೂ. 800 ರಿಂದ 600. ಮಂತ್ರಭಾಗದ ಕಾಲ ಕ್ರಿ. ಪೂ. 1000 ದಿಂದ 800, ಛಂದಃಕಾಲ ಕ್ರಿ. ಪೂ. 1200 ರಿಂದ 1000 ಎಂದು ಊಹಿಸಿದ್ದಾನೆ. ಮುಂದೆ ಮೆಕ್ಡಾನೆಲ್, ಕೀತ್ ಮೊದಲಾದ ವಿದ್ವಾಂಸರೂ ಈ ಮತವನ್ನು ಪುರಸ್ಕರಿಸಿ ಅದಕ್ಕೆ ಪೋಷಕವಾದ ಬೇರೆ ಪ್ರಮಾಣಗಳನ್ನೂ ಒದಗಿಸಿದ್ದಾರೆ. ಎಲ್ಲಕ್ಕಿಂತ ಹೆಚ್ಚಿನ ಪ್ರಮಾಣ ಭಾಷಾಶಾಸ್ತ್ರದ್ದು. ಇರಾನಿನ ಅವೆಸ್ತಾ ಸಾಹಿತ್ಯದ ಭಾಷೆ ವೇದಭಾಷೆಗೆ ಮತ್ತು ಛಂದಸ್ಸಿಗೆ ಎಷ್ಟು ನಿಕಟವಾಗಿದೆಯೆಂದರೆ ಒಂದನ್ನೊಂದಕ್ಕೆ ಕೆಲವೊಂದು ಧ್ವನಿರೂಪಗಳ ಪರಿವರ್ತನೆಯಿಂದಲೇ (ಉದಾ : 'ಸೋಮ'. (ವೇದ) > 'ಹಓಮ್' (ಅವೆಸ್ತಾ); 'ಅಸುರ' (ವೇದ) > 'ಅಹುರ' (ಅವೆಸ್ತಾ) ಪರಿವರ್ತಿಸಿಬಿಡಬಹುದು. ಅವೆಸ್ತಾದ ಕಾಲದ ಪರ್ಷಿಯನ್ ದೊರೆಗಳ ಶಿಲಾಶಾಸನಗಳು ಸಿಕ್ಕಿದ್ದು, ಅವು ಕ್ರಿ. ಪೂ. 6ನೆಯ ಶತಮಾನದವಾಗಿವೆ. ಆ ಶಾಸನಗಳ ಪರ್ಷಿಯನ್ ಭಾಷೆ ಕೂಡ ವೇದಭಾಷೆಗೆ ತುಂಬಾ ಸಮೀಪವರ್ತಿಯಾಗಿದೆ. ಆದ್ದರಿಂದ ಭಾರತಕ್ಕೆ ಬರುವ ಮುನ್ನ ಇರಾನ್ ಪೂರ್ವಜರೊಡನೆ ಆರ್ಯರಿದ್ದ ಕಾಲ ಕ್ರಿ. ಪೂ. 1500 ಕ್ಕಿಂತ ಹೇಗೂ ಹಿಂದಿನದಾಗಿರಲಾರದು, ಎಂದು ಇವರ ತರ್ಕ. ಇದಕ್ಕೆ ಪೋಷಕವಾದ ಮತ್ತೊಂದು ಪ್ರಮಾಣವೆಂದರೆ ಹಿಟ್ಟೈಟ್ ದೊರೆಗಳ ಒಪ್ಪಂದದ ದಾಖಲೆಗಳಲ್ಲಿ (ಇವು 'ಬೋಘಸ್—ಕೋಯ' ಎಂಬಲ್ಲಿ ದೊರೆತಿವೆ. ಏಪ್ಯಾಮೈನರ್.) ಇಂದ್ರ, ಮಿತ್ರ ಮುಂತಾದ ವೈದಿಕ ದೇವತೆಗಳ ಉಲ್ಲೇಖವಿದೆ. ಇವು 'ಮಿಟಾನಿ' ಎಂಬ ಜನವರ್ಗದವು; ಇವುಗಳ ಕಾಲ ಕ್ರಿ. ಪೂ. 1400. ಈ ಕಾಲದಲ್ಲಿ ಕೆಲವು ಆರ್ಯ ಜನವರ್ಗಗಳಾದರೂ ಇನ್ನೂ ಭಾರತದ ಹೊರಗೆ 'ಮಿಟಾನಿ' ಗಳೊಡನೆ ನೆಲಸಿದ್ದುದನ್ನು ನಿರ್ದೇಶಿಸುತ್ತವೆ.

ಆದರೆ ಪಾಶ್ಚಾತ್ಯರಲ್ಲಿಯೇ ಎಲ್ಲರೂ ಈ ವಾದವನ್ನು ಒಪ್ಪುವುದಿಲ್ಲ. ಅವೆಸ್ತಾ ಗ್ರಂಥದ ಕಾಲನಿರ್ಣಯ ಅನಿಶ್ಚಿತವೆಂದು ವಿಂಟರ್ನಿಟ್ಸ್, ಲೂಯಿರೇನು ಮುಂತಾದವರು ಭಾವಿಸುತ್ತಾರೆ. ಮಿಟಾನಿ ಜನರೊಡನೆ ಸೇರಿಕೊಂಡವರು ಭಾರತದಿಂದ ಹೊರಗೆ ಹೋದವರೇಕಾಗಬಾರದೆಂದು ಇವರ ಊಹೆ. ಗ್ರಂಥವಿಕಾಸಕ್ಕೆ ಮ್ಯಾಕ್ಸ್ ಮ್ಯೂಲರ್ ಹೇಳುವ 200 ವರ್ಷಗಳ ಅವಧಿ ಬಹಳ ಕಡಿಮೆಯೆಂದು ಇವರ ಅಭಿಪ್ರಾಯ. ಆದ್ದರಿಂದ ಇವರು ಋಗ್ವೇದದ ರಚನಾಕಾಲ ಕ್ರಿ. ಪೂ. 2000 ಅಥವಾ 2500 ಇರಬಹುದೆಂದು ಊಹಿಸುತ್ತಾರೆ.

ಅದೂ ಅಲ್ಲದೆ ಖಗೋಲಶಾಸ್ತ್ರದ ಅಧ್ಯಯನ ಮಾಡಿದ ಜರ್ಮನಿಯ ಯಾಕೊಬಿ ಮತ್ತು ಭಾರತದ ಬಾಳಗಂಗಾಧರ ಟಿಳಕ ಇವರುಗಳು ವಸಂತಸಂಪಾತಬಿಂದು

(Vermal Equinox) ಬ್ರಾಹ್ಮಣಗಳ ಕಾಲದಲ್ಲಿ ಈಗಿನಂತೆ ಇರದೆ ಕೃತ್ತಿಕಾನಕ್ಷತ್ರದೊಡನೆ ಇದ್ದ ಮತ್ತು ಮೃಗಶೀರ್ಷನಕ್ಷತ್ರದೊಡನೆ ಇದ್ದ ಉಲ್ಲೇಖಗಳನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ, ಅಯನಗಳ ಹಿಂಜರಿತವೆಂಬ ಸಿದ್ಧಾಂತದ ಪ್ರಕಾರ ಕೃತ್ತಿಕಾದಲ್ಲಿ ವಸಂತಸಂಪಾತ ಬಿಂದುವಿದ್ದ ಕಾಲ ಕ್ರಿ. ಪೂ. 2500 ಎಂದೂ, ಮೃಗಶೀರ್ಷದಲ್ಲಿದ್ದ ಕಾಲ ಕ್ರಿ. ಪೂ. 4500 ಎಂದೂ ಸಿದ್ಧಾಂತಕ್ಕೆ ಬಂದಿದ್ದಾರೆ. ಆದರೆ ಯುರೋಪಿಯನ್ ವಿದ್ವಾಂಸರು ಈ ಸಿದ್ಧಾಂತವನ್ನು ಸ್ವೀಕರಿಸಲು ಮುಂದಾಗಿಲ್ಲ. ಟಿಳಕರ ಪ್ರಕಾರ ಪ್ರಾಚೀನತಮ ಋಕ್ಕುಗಳ ರಚನಾಕಾಲ ಇನ್ನೂ ಹಿಂದೆ ಕ್ರಿ. ಪೂ. 6000ದ ವರೆಗೂ ಇರಬಹುದು. ವ್ಯಾಸರಿಂದ ಸಂಹಿತಾರಚನೆ ಕಲಿಯುಗಾರಂಭದಲ್ಲಿ ಆಯಿತೆಂದು ಗ್ರಹಿಸುವ ಭಾರತೀಯ ಪರಂಪರೆಯ ಪ್ರಕಾರ ಸಂಹಿತಕಾಲ ಸುಮಾರು ಕ್ರಿ.ಪೂ. 3000 ವಾಗುತ್ತದೆ. ಅಂತೂ ಈ ವಿಷಯದಲ್ಲಿ ಕಡೆಯ ನಿರ್ಣಯ ಶಕ್ಯವಿಲ್ಲ.

**ವೇದವಾಙ್ಮಯ ಪ್ರಕಾರಗಳು :**

ವೇದವಾಙ್ಮಯವನ್ನು ಋಕ್, ಸಾಮ, ಯಜುಸ್ ಎಂದು ಮೂರು ಬಗೆಯಾಗಿಯೂ, ಅಥರ್ವಣವನ್ನು ಸೇರಿಸಿ ನಾಲ್ಕು ಬಗೆಯಾಗಿಯೂ ವಿಂಗಡಿಸುವ ಪರಂಪರೆಯಿದೆ. 'ಋಕ್' ಎಂದರೆ ಪ್ರಾರ್ಥನಾರೂಪವಾದ ಛಂದೋಬದ್ಧ ರಚನೆ ; 'ಮಂತ್ರ'ವೆಂಬುದು ಇದರ ನಾಮಾಂತರ ಯಜುಸ್ ಎಂದರೆ ಯಜ್ಞವಿಧಾನಕ್ಕೆ ಸಾಧಕವಾದುದು ; ಇದು ಕೇವಲ ಗದ್ಯಾತ್ಮಕವಾಗಿರುತ್ತದೆ. ಇವೆರಡೂ ಅಲ್ಲದೆ ಗೀತೆಯೆಂಬ ಸಾಮಯುಕ್ತವಾದ ಮಂತ್ರಗಳೇ 'ಸಾಮ'; ವಿಘ್ನಶಾಂತಿ ಮತ್ತು ದೇವತಾತುಷ್ಟಿ ಇವುಗಳ ಪ್ರಯೋಜನ. ಇವು ಮೂರರಲ್ಲೂ ಸೇರದೆ, ಮಾರಣ, ಮೋಹನ, ಉಚ್ಚಾಟನ ಮುಂತಾದ ಅಭಿಚಾರ ಕರ್ಮಗಳಿಗೂ, ಶಾಂತಿ ಕರ್ಮಗಳಿಗೂ ಸಾಧಕವಾದುದೇ ಅಥರ್ವಣ ಮಂತ್ರಗಳು. 'ತ್ರಯೀ' ಅಥವಾ 'ತ್ರಿವೇದ' ವೆಂದರೆ ಮೊದಲ ಮೂರೂ, 'ಚತುರ್ವೇದ' ವೆಂದರೆ ಈ ನಾಲ್ಕು ವಿವಕ್ಷಿತವಾಗುತ್ತವೆ. ಈ ವೇದಗಳೆಲ್ಲ ಮತ್ತೆ "ಸಂಹಿತೆ", "ಬ್ರಾಹ್ಮಣ", "ಅರಣ್ಯಕ", "ಉಪನಿಷತ್" ಎಂಬ ನಾಲ್ಕು ಒಳಭೇದಗಳನ್ನು ಒಳಗೊಂಡಿರುತ್ತವೆ. ಸಂಹಿತೆಗಳು ಅನೇಕ ಮಂತ್ರಗಳನ್ನು ಒಂದೆಡೆ ಸೇರಿಸಿದ ಸಂಕಲನಗಳಾದರೆ, ಬ್ರಾಹ್ಮಣಗಳು ಹೆಚ್ಚಾಗಿ ಗದ್ಯದಲ್ಲಿದ್ದು ಯಜ್ಞೋಪವಾಗಿ ವಿವರಗಳನ್ನು ಕೊಡುವವು. ಬ್ರಾಹ್ಮಣಗಳಿಗೇ ಸೇರಿದಂತೆ ವಾನಪ್ರಸ್ಥರೂ, ಸನ್ಯಾಸಿಗಳೂ ಅನುಸಂಧಾನ ಮಾಡಲು ಯೋಗ್ಯವಾದ ಬ್ರಹ್ಮವಿಚಾರವನ್ನು ಒಳಗೊಳ್ಳುವ ಭಾಗಗಳೇ ಅರಣ್ಯಕ ಹಾಗು ಉಪನಿಷತ್ತುಗಳು.

## ಸಂಹಿತೆಗಳು

### (1) ಋಗ್ವೇದ

ಋಗ್ವೇದ ಸಂಹಿತೆ ವೇದವಾಙ್ಮಯದಲ್ಲೆಲ್ಲ ಪ್ರಾಚೀನತಮವಾದುದು. ಅದರಲ್ಲಿ 1,028 ಸೂಕ್ತಗಳಿವೆ. ಇವನ್ನು ಹತ್ತು 'ಮಂಡಲ'ಗಳಲ್ಲಿ' ಅಳವಡಿಸಲಾಗಿದೆ. ಒಂದೊಂದು ಸೂಕ್ತದಲ್ಲಿಯೂ 3 ರಿಂದ 58 ಋಕ್ಕುಗಳಿರುತ್ತವೆ. ಒಟ್ಟು ಋಗ್ವೇದದಲ್ಲಿರುವ ಋಕ್ಕುಗಳ ಸಂಖ್ಯೆ 10,462 ; ಸರಾಸರಿ ಒಂದು ಸೂಕ್ತಕ್ಕೆ ಹತ್ತೆನ್ನಬಹುದು. ಇನ್ನೊಂದು ಯಾಂತ್ರಿಕ ವಿಭಾಗಕ್ರಮವೂ ಉಂಟು ; ಋಗ್ವೇದವನ್ನೆಲ್ಲ 'ಅಷ್ಟಕ', 'ಅಧ್ಯಾಯ',



"ವರ್ಗ"ವೆಂದು ವಿಭಾಗಿಸುವದು. ಪ್ರತಿವರ್ಗದಲ್ಲಿ ಸಾಮಾನ್ಯವಾಗಿ ಐದೇ ಋಕ್ಕುಗಳಿರುತ್ತವೆ. ಅಷ್ಟಕದಲ್ಲಿ ಎಂಟೇ ಅಧ್ಯಾಯಗಳು ಮತ್ತು ಅಷ್ಟಕಗಳು. ಅಲ್ಲದೆ ಅಧ್ಯಯನಕ್ಕೆ ಉಪಯೋಗಿಯಾಗುವಂತೆ 'ಅನುವಾಕ' ಎಂಬ ವಿಭಾಗಕ್ರಮವೂ ಇದೆ.

ಋಗ್ವೇದದಲ್ಲಿರುವ ಸೂಕ್ತ ಹಾಗು ಋಕ್ಕುಗಳ ಸಂಯೋಜನೆಯಲ್ಲಿ ಒಂದು ವ್ಯವಸ್ಥಿತ ಕ್ರಮವನ್ನು ನೋಡಬಹುದು. ಎರಡನೆಯ ಮಂಡಲದಿಂದ ಏಳನೆಯ ಮಂಡಲವೂ ಸೇರಿದಂತೆ ಬರುವ ಭಾಗದಲ್ಲಿ ದೇವತಾದೃಷ್ಟಿಯಿಂದ ಸಂಯೋಜನೆ ಕಾಣುತ್ತದೆ. ಅಗ್ನಿದೇವತಾ ಸೂಕ್ತಗಳು ಮೊದಲಿಗೆ, ಇಂದ್ರಸೂಕ್ತಗಳು ಆಮೇಲೆ ಇತ್ಯಾದಿ. ಒಂಬತ್ತನೆಯ ಮಂಡಲದಲ್ಲಿ ಛಂದಸ್ಸುಗಳ ಕ್ರಮಾನುಸಾರ ಸಂಯೋಜನೆಯಿದೆ. ಈ ಎರಡು ವ್ಯವಸ್ಥೆಗಳಲ್ಲಿ ಮತ್ತೆ ಸೂಕ್ತಗಳ ಋಕ್ಸಂಖ್ಯೆಯು ಇಳಿಕೆಯ ಕ್ರಮಾನುಸಾರವಾಗಿರುತ್ತದೆ (58, 50, 42, 34, 28, 16, 10, 5, 3, ಇತ್ಯಾದಿ) : ಸಮಾನ ಋಕ್ಸಂಖ್ಯೆಯುಳ್ಳ ಸೂಕ್ತಗಳಾದರೆ ಆಗ ಛಂದಸ್ಸಿನ ಅಕ್ಷರಸಂಖ್ಯೆಯ ಇಳಿಕೆಯ ಕ್ರಮದಲ್ಲಿ ಅವನ್ನು ಸಂಯೋಜಿಸಲಾಗುತ್ತದೆ. ಮಂಡಲಗಳ ಸೂಕ್ತಸಂಖ್ಯೆಯ ಸಂಯೋಜನೆಯಲ್ಲಿಯೂ ಈ ಇಳಿಕೆಯ ಕ್ರಮವೇ ಕಾಣಬರುತ್ತದೆ. ಇದರಂತೆ ಬೇರೆ ರೀತಿಯ ಸಂಯೋಜನಕ್ರಮಗಳು ಒಂದು, ಎಂಟು ಮತ್ತು ಒಂಬತ್ತನೆಯ ಮಂಡಲಗಳಲ್ಲಿವೆ. ಒಂಬತ್ತನೆಯ ಮಂಡಲದ ಸೂಕ್ತಗಳೆಲ್ಲ ಕೇವಲ ಸೋಮದೇವತಾಕವಾದವು. ಎಂಟನೆಯ ಮಂಡಲದಲ್ಲಿ 'ಪ್ರಗಾಥ' ಹಾಗು 'ಕಾಣ್ವ'ವಂಶೀಯರ ಸೂಕ್ತಗಳೇ ಹೆಚ್ಚು. ಆದರೆ ಎರಡರಿಂದ ಏಳನೆಯ ಮಂಡಲಗಳೆಲ್ಲ ಕ್ರಮವಾಗಿ ಗೃತ್ಸಮದ, ವಿಶ್ವಾಮಿತ್ರ ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ ಈ ಋಷಿವಂಶೀಯರಿಂದಲೇ ದೃಷ್ಟವಾದವು, ಮೊದಲ ಮತ್ತು ಹತ್ತನೆಯ ಮಂಡಲಗಳಲ್ಲಿ ಸೂಕ್ತಸಂಖ್ಯೆ ಒಂದೇ — 191 ; ನಾನಾ ಋಷಿವಂಶೀಯರ ಸೂಕ್ತಗಳಿರುತ್ತವೆ. ಭಾಷಾಸ್ವರೂಪ, ವಿಷಯನಿರೂಪಣೆಯ ವಿಕಸಿತ ಸ್ವರೂಪ ಇತ್ಯಾದಿಗಳ ಮೇಲಿಂದ ಇವೆರಡು ಮಂಡಲಗಳೂ ಮೊದಲು ಎರಡರಿಂದ ಒಂಬತ್ತು ಮಂಡಲಗಳ ಸಂಹಿತೆಯಾದ ಮೇಲೆ ಹಿಂದೆ ಮತ್ತು ಮುಂದೆ ಸೇರಿಸಲ್ಪಟ್ಟಿರಬೇಕೆಂದು ಮೆಕ್ಡಾನೆಲ್ ಊಹಿಸುತ್ತಾರೆ.

ಅಧ್ಯಯನಕ್ರಮದಲ್ಲಿ ಪ್ರತಿಯೊಂದು ಸೂಕ್ತಕ್ಕೂ ಋಷಿ, ದೇವತೆ ಮತ್ತು ಛಂದಸ್ಸುಗಳನ್ನು ತಿಳಿಯಲೇಬೇಕೆಂಬ ನಿಯಮವಿದೆ. ಕಾತ್ಯಾಯನರು ತಮ್ಮ 'ಸರ್ವಾನುಕ್ರಮಣಿ'ಯಲ್ಲಿ "ಯಸ್ಯ ವಾಕ್ಯಂ ಸ ಋಷಿಃ ; ಯಾ ತೇನೋಚ್ಯತೇ ಸಾ ದೇವತಾ, ಯದಕ್ಷರಪರಿಮಾಣಂ ತಚ್ಛಂದಃ । ಅರ್ಥೇಪ್ಸವಃ ಋಷಯಃ ದೇವತಾಃ ಛಂದೋಭಿಃ ಉಪಾಧಾವನ್" ಎಂದು ಸ್ಪಷ್ಟಪಡಿಸಿದ್ದಾರೆ. ಉದಾಹರಣೆಗೆ ಪ್ರಸಿದ್ಧವಾದ ಗಾಯತ್ರೀಮಂತ್ರಕ್ಕೆ ಋಷಿ ವಿಶ್ವಾಮಿತ್ರ ; ದೇವತೆ ಸವಿತೃ ; ಛಂದಸ್ಸು ಎಂಟಕ್ಷರಗಳ ಮೂರು ಪಾದಗಳಿರುವ 'ಗಾಯತ್ರೀ'.

ಸಂಹಿತಾಪಾಠವೆಂದರೆ ಪದಗಳಿಗೆ ಸಂಧಿ ಮಾಡಿದ ರೂಪದಲ್ಲಿರುವ ಪಾಠವೇ, ಒಮ್ಮೊಮ್ಮೆ ಪದವಿಭಾಗವು ಸುಲಭವಿರುವುದಿಲ್ಲ. ಅಲ್ಲದೆ ಪ್ರಗೃಹ್ಯಗಳೂ 'ಉ' ಮುಂತಾದ ಅವ್ಯಯಗಳೂ

ಸಂಧಿಯಲ್ಲಿ ಬೇಗ ಕಾಣುವಂತಿರುವುದಿಲ್ಲ; ಸಮಾಸಗಳಲ್ಲಿ ಭಿನ್ನಪದಗಳಾವುವೆಂಬ ನಿರ್ದೇಶನವಿರುವುದಿಲ್ಲ. ಇವನ್ನೆಲ್ಲ ಸ್ಪಷ್ಟವಾಗಿ ಮಾಡಿಕೊಡಲೆಂದು ಶಾಕಲ್ಯನು ರಚಿಸಿರುವ. ಸಂಧಿ ಬಿಡಿಸಿ, ಇತಿಕರಣ ಮಾಡಿ. ಸಮಾಸಗಳನ್ನು ಪ್ರತ್ಯೇಕಿಸಿರುವ ಪಾಠಕ್ಕೆ "ಪದಪಾಠ"ವೆನ್ನುವರು. ಸಂಹಿತೆಯ ಸ್ವರಗಳಿಗೂ, ಪದಪಾಠದ ಸ್ವರಗಳಿಗೂ ನಿಯಮಾನುಸಾರ ಅಲ್ಲಲ್ಲಿ ವ್ಯತ್ಯಾಸಗಳಿರುತ್ತವೆ. ಆದ್ದರಿಂದ ವೇದಾಧ್ಯಯನ ಮಾಡುವಾಗ ಸಂಹಿತಾ ಪಾಠದಂತೆ ಪದಪಾಠವನ್ನೂ ಪ್ರತ್ಯೇಕವಾಗಿ ಅಧ್ಯಯನ ಮಾಡುವ ರೂಢಿಯಿದೆ. ಅಲ್ಲದೆ ಪೂರ್ವಪದ ಉತ್ತರಪದಗಳ ಅಕ್ಷರಗಳನ್ನು ಶೃಂಖಲಾಕ್ರಮದಿಂದ ನಿಯತವಾಗಿ ಅನುವೃತ್ತಿಮಾಡುವ ಕ್ರಮಪಾಠ, ಜಟಾಪಾಠ, ಘನಪಾಠ ಮುಂತಾದ ಬಹು ಜಟಿಲ ವ್ಯವಸ್ಥೆಗಳು ಸಂಹಿತೆಯ ಮೂಲಸ್ವರೂಪ ಎಷ್ಟು ಸಾವಿರ ವರ್ಷ ಕಳೆದರೂ ಅಚ್ಚಳಿಯದಂತೆ ಉಳಿಸಿಕೊಂಡು ಬರಲು ಸಹಕಾರಿಗಳಾಗಿವೆ. ವೇದಪಾಠ ನಿರ್ಣಯದ ವಿಷಯದಲ್ಲಿ ಹಸ್ತಪ್ರತಿಗಳ ಪ್ರಾಮಾಣ್ಯಕ್ಕಿಂತಲೂ ಹೆಚ್ಚು ಪ್ರಾಮಾಣ್ಯ ಮುಖೋಚ್ಚಾರಣೆಗಿರುವುದು ಯೋಗ್ಯವಾಗಿಯೇ ಇದೆ. ಜಗತ್ತಿನ ಮತ್ತಾವ ಸಾಹಿತ್ಯದಲ್ಲೂ ಈ ಅದ್ಭುತ ಕಾಣಸಿಗದು.

## ಋಗ್ವೇದಸೂಕ್ತಗಳ ವೈವಿಧ್ಯ :

(1) ದೇವತಾಸೂಕ್ತಗಳು :—ಭಾರತದ ಐತಿಹಾಸಿಕಕಾಲದ ಭಕ್ತಿಸ್ವರೂಪಕ್ಕೂ. ಋಷಿಗಳ ಉಪಾಸನಾಸ್ವರೂಪಕ್ಕೂ ಸ್ವಲ್ಪ ವೈಲಕ್ಷಣ್ಯವಿದೆ; ದೇವತೆಗಳ ಬಗೆಗೆ ಋಷಿಗಳಿಗೆ ಭಯಭಕ್ತಿಗಳಿಗಿಂತ ಹೆಚ್ಚಾಗಿ, ಕೊಟ್ಟು-ತೆಗೆದುಕೊಳ್ಳುವ ವ್ಯವಹಾರಬುದ್ಧಿಯೂ ಇರುವಂತೆ ಒಮ್ಮೊಮ್ಮೆ ತೋರುತ್ತದೆ. ಮುಂದಿನ ಸ್ತೋತ್ರಗಳಲ್ಲಿ "ದೀನ ನಾನು ಸಮಸ್ತಲೋಕಕೆ ದಾನಿ ನೀನು" ಎಂಬ ಆರ್ತಭಾವವಿದ್ದರೆ ಅದು ಋಗ್ವೇದ ಸಂಹಿತೆಯಲ್ಲಿ ಅಷ್ಟು ಪ್ರಧಾನವಲ್ಲ. ಗೋಧನ, ವೀರಪುತ್ರರು ಇತ್ಯಾದಿಗಳ ಸಲುವಾಗಿ ಅವರು ದೇವತೆಗಳನ್ನು ಸ್ತೋತ್ರಮಾಡಿ ಯಜ್ಞಗೈಯುತ್ತಾರೆ. ಯಜ್ಞಗೈದ ಮೇಲ ಅದರ ಫಲವನ್ನು ದೇವತೆಗಳು ಕೊಟ್ಟೇತೀರಬೇಕೆಂಬ ಭರವಸೆ ಕಾಣುತ್ತದೆ. ಸಾಮಾನ್ಯವಾಗಿ ಹೀಗಿದ್ದರೂ ವರುಣಸೂಕ್ತಗಳಲ್ಲಿ ಪಾಪಭೀರುತ್ವ ಎದ್ದು ಕಾಣುವಂತಿದೆ. ಋಷಿಗಳು ತಮ್ಮ ಪಾಪಗಳ ಬಗೆಗೆ ಅವನ ಕ್ಷಮಾಯಾಚನೆ ಮಾಡುತ್ತಾರೆ. ಇದಕ್ಕೆ ಪ್ರತಿಯಾಗಿ, ವೈದಿಕ ಆರ್ಯರ ಶೌರ್ಯೋತ್ಸಾಹಗಳ ಪ್ರತೀಕವಾಗಿ ಕಾಣುತ್ತವೆ. ಇಂದ್ರಸೂಕ್ತಗಳು. ಇಂದ್ರನೇ ವೈದಿಕ ಆರ್ಯರ ಯುದ್ಧದೇವತೆಯಂತೆ ಕಂಗೊಳಿಸುತ್ತಾನೆ, ವಜ್ರಾಯುಧಪಾಣಿಯಾಗಿ ವೃತ್ರಾದಿ ಅಸುರರನ್ನು ಅವನು ಸದೆಬಡಿಯುವ ವರ್ಣನೆಗಳು ಆಕರ್ಷಕವಾಗಿವೆ. ಆದರೆ ಅಗ್ನಿ ಹೆಚ್ಚಾಗಿ ಗೃಹದ ಅಧಿದೇವತೆ ಅಗ್ನಿಯು ಮನುಷ್ಯನ ಪರಮ ಮಿತ್ರನಂತೆ ವರ್ಣಿತನಾಗಿದ್ದಾನೆ. ಪರಮಪ್ರೇಮದಿಂದ ತಮ್ಮ ಮನೆ ಮಕ್ಕಳನ್ನು ಆಶೀರ್ವದಿಸುವಂತೆ ಋಷಿಗಳು ಅಗ್ನಿಸ್ತೋತ್ರ ಮಾಡುತ್ತಾರೆ. ಯಜ್ಞಪ್ರಧಾನವಾದ ಅಂದಿನ ಯುಗದಲ್ಲಿ ಅಗ್ನಿಗೆ ಅಗ್ರಸ್ಥಾನ ದೊರೆತುದರಲ್ಲಿ ಸೋಜಿಗವೇನೂ ಇಲ್ಲ. ಹಾಗೆಯೇ ಉಷಸ್ಸೂಕ್ತಗಳಲ್ಲಿ ಋಷಿಗಳ ಸೌಂದರ್ಯ ಪ್ರಜ್ಞೆ "ಪುನಃ ಪುನರ್ಜಾಯಮಾನಾ ಪುರಾಣೀ" ಎನ್ನುವಂತೆ ನಿಚ್ಚಳವಾಗಿ ಕಾವ್ಯಮಯವಾಗಿ ಹೊರಹೊಮ್ಮಿದೆ. ಸವಿತೃದೇವನಿಂದ ವಿಕಸಿತಪ್ರಜ್ಞೆಯನ್ನೂ, ರುದ್ರನ



ಕೋಪದಿಂದ ಮುಕ್ತಿಯನ್ನೂ, ಅಶ್ವಿನೀದೇವತೆಗಳಿಂದ ರೋಗಾದಿನಿವೃತ್ತಿಯನ್ನೂ, ವಿಷ್ಣುವಿನಿಂದ ಪರಮಪದದ ಆನಂದವನ್ನೂ ಬಯಸಿದ ಋಷಿಗಳು ಸ್ತೋತ್ರ ಮಾಡಿದ್ದಾರೆ. ಎಲ್ಲ ದೇವತೆಗಳನ್ನೂ ಕೂಡಿಸಿ ವಿಶ್ವೇದೇವತೆಗಳೆಂದು ಸ್ತೋತ್ರ ಮಾಡಿರುವದೂ ಉಂಟು.

(2) ಆಪ್ರೀಸೂಕ್ತಗಳು :— ಯಜ್ಞವಿಧಿಗೆ ಅಂಗವಾಗಿ ಮಾತ್ರ ಸ್ಥಾನವಿರುವ ಕೆಲವೊಂದು ಸೂಕ್ತಗಳು ಪ್ರತಿಯೊಂದು ಋಗ್ವೇದಮಂಡಲದಲ್ಲೂ ಅಂತರ್ಗತವಾಗಿ ಬರುತ್ತವೆ. ಇದಕ್ಕೆ ಆಪ್ರೀ ಸೂಕ್ತಗಳೆನ್ನುವರು. ಇಂತಹವು ಇಲ್ಲಿ ಹತ್ತಿವೆ. ಪ್ರತಿಯೊಂದರಲ್ಲೂ ಹನ್ನೊಂದು ಇಲ್ಲವೆ ಹನ್ನೆರಡು ಋಕ್ಕುಗಳಿರುತ್ತವೆ; ನಿರ್ದಿಷ್ಟನಾಮಗಳಿಂದ ಅಗ್ನಿ ಸ್ತುತನಾಗುತ್ತಾನೆ, 'ತನೂನಪಾತ್' ಇತ್ಯಾದಿ ದ್ವಾರಗಳು, ದರ್ಭೆಗಳು ಮುಂತಾದ ದೇವತಾ ಸ್ತುತಿಗಳೂ ಒಂದು ಕ್ರಮಾನುಸಾರ ಇಲ್ಲಿ ಬರುತ್ತವೆ. ಒಂದೊಂದು ಋಷಿವಂಶದವರೂ ತಮ್ಮ ತಮ್ಮ ಪ್ರತ್ಯೇಕ ಆಪ್ರೀಸೂಕ್ತಗಳನ್ನು ಬಳಸುತ್ತಿದ್ದಿರಬಹುದೆಂದು ತೋರುತ್ತದೆ. ಹಾಗೆಯೇ ಸೋಮಪವಮಾನನನ್ನು ಕುರಿತ ಒಂಬತ್ತನೆಯ ಮಂಡಲವೆಲ್ಲ ಯಜ್ಞೋಪಯೋಗಿಯೇ ಎನ್ನಬಹುದಾಗಿದೆ.

(3) ಸಂಸ್ಕಾರಸೂಕ್ತಗಳು :— ಮರಣೋತ್ತರ ಅಪರಕ್ರಿಯೆಗಳು ಹೀಗೆಯೆ ನಡೆಯಬೇಕೆಂದು ಸೂಚಿಸಿ ಧಾರ್ಮಿಕ ಆಚರಣೆಗಳಲ್ಲಿ ಬಳಕೆಯಾಗುವ ಪಿತೃಕರ್ಮಪರ ಸೂಕ್ತಗಳು ಹತ್ತನೆಯ ಮಂಡಲದಲ್ಲಿ ಹೇರಾಗಿವೆ. ಇವುಗಳಲ್ಲಿ ಪ್ರೇತಸಂಸ್ಕಾರದ ವಿಷಯದಂತೆ ಜೀವಾತ್ಮಕ ದೇವಯಾನ ಪಿತೃಯಾನಾದಿ ಗತಿಗಳ ವಿಷಯವೂ ಬರುತ್ತದೆ.

(4) ಆಧ್ಯಾತ್ಮಿಕಸೂಕ್ತಗಳು :— ವಿಶ್ವೋತ್ಪತ್ತಿಯ ವಿಷಯ, ವಿಶ್ವವ್ಯಾಪಿಯಾದ ಒಬ್ಬನೇ ಪರಮಾತ್ಮನ ವಿಷಯ, ಮುಂತಾದ ಆಧ್ಯಾತ್ಮಿಕ ವಿಚಾರಗಳನ್ನು ಮಾರ್ಮಿಕವಾಗಿ ಒಳಗೊಂಡಿರುವ ಪುರುಷಸೂಕ್ತ, ನಾಸದೀಯಸೂಕ್ತ ಮುಂತಾದುವನ್ನು ಆಧ್ಯಾತ್ಮಿಕ ಸೂಕ್ತಗಳೆನ್ನಬಹುದು; ಇವೇ ಮುಂದಿನ ಉಪನಿಷದ್ವೇದಾಂತದ ಮೂಲಸ್ತೋತ್ರಗಳು.

(5) ಆಖ್ಯಾನಸೂಕ್ತಗಳು :— ಆರ್ಷ ಕಾವ್ಯಧಾರೆಯ ಮತ್ತು ನಾಟಕ ಪರಂಪರೆಯ ಮೂಲಸ್ತೋತ್ರಗಳನ್ನು ಒಳಗೊಳ್ಳುವ ಆಖ್ಯಾನ-ಸೂಕ್ತಗಳಿಗೆ ಸಾಹಿತ್ಯೇತಿಹಾಸದಲ್ಲಿ ತುಂಬಾ ಮಹತ್ತ್ವವಿದೆ. ಇವನ್ನು ಸಂವಾದ-ಸೂಕ್ತಗಳೆಂದೂ ಹೇಳಬಹುದು. ಪುರೂರವಸ್ ಮತ್ತು ಉರ್ವಶೀ, ಯಮ-ಯಮೀ, ವಿಶ್ವಾಮಿತ್ರ-ನದಿಗಳು —ಇವನ್ನು ಉದಾಹರಣೆಯಾಗಿ ಹೇಳಬಹುದು. ಮೊದಲನೆಯದರಿಂದ ಪ್ರಭಾವಿತನಾಗಿ ಕಾಳಿದಾಸನು ತನ್ನ 'ವಿಕ್ರಮೋರ್ವಶೀಯ'ವೆಂಬ ರೂಪಕವನ್ನು ರಚಿಸಿದ್ದಾನೆ.

(6) ಮಾಂತ್ರಿಕಸೂಕ್ತಗಳು :— ಗರ್ಭರಕ್ಷಣೆ, ಆರೋಗ್ಯರಕ್ಷಣೆ, ರೋಗಪರಿಹಾರ, ದುಸ್ಸ್ವಪ್ನನಾಶ, ಶತ್ರುನಾಶ, ವಿರೋಧಿಮಂತ್ರವಾದಿಗಳನಾಶ, ಮುಂತಾದ ವಿನಿಯೋಗಗಳಿರುವ ಕೆಲವು ಋಗ್ವೇದಸೂಕ್ತಗಳು ಈ ಶೀರ್ಷಿಕೆಯಲ್ಲಿ ಬರುತ್ತದೆ. ಪರ್ಜನ್ಯನಿಂದ ಬೇಗ ವೃಷ್ಟಿ ಸುರಿಯುವಂತೆ ಮಾಡಲು ವಿಪ್ರರು ಅನುಸರಿಸಿದ ಮಾಂತ್ರಿಕ ವಿಧಾನವನ್ನೇ ಹಾಸ್ಯ

ನಿರ್ಭರವಾದ ಮಂಡೂಕಸೂಕ್ತ ಪ್ರತಿನಿಧಿಸುವುದೆಂದು ಬ್ಲೂಮ್ ಫೀಲ್ಡ್ ಮುಂತಾದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

(7) ಲೌಕಿಕಸೂಕ್ತಗಳು ;— ಯಜ್ಞವಿಧ್ಯಂಗವಾದ ಸೂಕ್ತಗಳ ನಡುನಡುವೆಯೇ ಒಮ್ಮೊಮ್ಮೆ ಕೇವಲ ಲೌಕಿಕವಸ್ತುಗಳ ಬಗೆಗೂ ಸೂಕ್ತಗಳು ಋಗ್ವೇದದಲ್ಲಿ ಬರುವುದು ವಿಶೇಷ ಗಮನಾರ್ಹವಿದೆ. ಉದಾಹರಣೆಗೆ IX. 111 ರಲ್ಲಿ ಸೋಮಸೂಕ್ತದ ನಡುವೆ ಮನುಷ್ಯನ ನಾನಾ ದುಷ್ಪ್ರವೃತ್ತಿಗಳ ನಿಂದಾಸೂಕ್ತವಿದೆ. ದ್ಯೂತದ ವ್ಯಾಮೋಹದಲ್ಲಿ ಬಿದ್ದು ಸರ್ವಸ್ವವನ್ನೂ ಕಳೆದುಕೊಂಡು ಹೆಂಡತಿ ಮಕ್ಕಳಿಗೂ ಬೇಡವಾದವನಾಗಿ ಹಳಹಳಿಸುವ ಜೂಜುಗಾರನ ಚಿತ್ರ X. 34 ನೆಯ ಸೂಕ್ತದಲ್ಲಿ ಸುಂದರವಾಗಿ ಬಂದಿದೆ.

(8) ದಾನಸ್ತುತಿಗಳು :— ಸುಮಾರು 40 ದಾನಸ್ತುತಿಪರವಾದ ಸೂಕ್ತಗಳಿವೆ. ವಿಜಯಿಗಳಾದ ಬೇರೆ ಬೇರೆ ರಾಜರು ಯಜ್ಞಕಾಲದಲ್ಲಿ ಮಾಡಿದ ದಾನಗಳ ಪ್ರಶಸ್ತಿ ಇವುಗಳಲ್ಲಿ ಬರುತ್ತದೆ. ಇಲ್ಲಿ ಐಹಾಸಿಕವಾದ ಅಂಕಿತನಾಮಗಳು ಬರುವಂತೆ ನೀತಿಪರವಾದ ಆದರ್ಶಗಳ ಉಲ್ಲೇಖವೂ ಬರುತ್ತದೆ.

(9) ಕೂಟರಚನೆಗಳು :— ಒಗಟಿನಂತಿರುವ ಎಷ್ಟೋ ಋಕ್ಕುಗಳನ್ನೊಳಗೊಂಡ ಕೆಲವೊಂದು ಸೂಕ್ತಗಳೂ ಋಗ್ವೇದದಲ್ಲಿವೆ. I. 164ರಲ್ಲಿ ಇಂತಹ ಅನೇಕ ಒಗಟುಗಳನ್ನು ಕಾಣಬಹುದು ; ಸೂರ್ಯ, ಯಜ್ಞ ಇತ್ಯಾದಿಗಳನ್ನು ಕುರಿತು.

ಹೀಗೆ ಋಗ್ವೇದಸಂಹಿತೆಯ ಸೂಕ್ತಗಳ ಸಿಂಹಾವಲೋಕನದಿಂದ ಧರ್ಮನಿಷ್ಠೆಯ ಜೊತೆಜೊತೆಗೇ ಕಾವ್ಯನಿಷ್ಠೆಯೂ ಋಷಿಗಳಲ್ಲಿ ಮಿಂಚುತ್ತಿರುವ ವಿಷಯ ವ್ಯಕ್ತವಾಗುತ್ತದೆ. ಸಂಸ್ಕೃತ ಸಾಹಿತ್ಯದ ಮೂಲಸ್ರೋತವನ್ನು ಅನ್ವೇಷಿಸುವವರಿಗೆ ಋಗ್ವೇದಸಂಹಿತೆಯ ಅಧ್ಯಯನ ಅತ್ಯಂತ ಆಕರ್ಷಕವಾಗಿ ಪರಿಣಮಿಸುವುದರಲ್ಲಿ ಸಂಶಯವಿಲ್ಲ. ರಾಮಾಯಣ–ಮಹಾಭಾರತಾದಿಗಳ ಛಂದೋಬಂಧಗಳ ವಿಕಸಿತರೂಪವನ್ನು ಅರಿಯಲು ಋಗ್ವೇದದ ಛಂದಸ್ಸುಗಳು ಅತ್ಯಂತ ಹೆಚ್ಚಿನ ಸಹಾಯವನ್ನೊದಗಿಸುತ್ತವೆ. ಹಾಗೆಯೇ ಆರ್ಷಪ್ರಯೋಗಗಳ ಸೂಕ್ಷ್ಮವನ್ನರಿಯಬೇಕಾದರೂ ಋಗ್ವೇದದ ಶಬ್ದಪ್ರಯೋಗಗಳ ಪರಿಜ್ಞಾನ ಅಗತ್ಯವಾಗುತ್ತದೆ. ಉಷಸ್ಸೂಕ್ತಾದಿಗಳಲ್ಲಿ ಕಾವ್ಯಾಲಂಕಾರಗಳ ಚಮತ್ಕಾರವನ್ನೂ ಗುರುತಿಸಲು ಶಕ್ಯವಾಗುತ್ತದೆ.

## ವೇದಸ್ತುತ ದೇವತೆಗಳು

ವೇದದಲ್ಲಿ ಸ್ತುತರಾದ ದೇವತೆಗಳು ಮನುಷ್ಯಜೀವನದಲ್ಲಿ ಪ್ರಭಾವ ಬೀರುವ ಮಹಾ ವಿಭೂತಿಗಳು ಮತ್ತು ಮಹಾಸತ್ತ್ವರು. ಮೊದಮೊದಲು ಅವರ ಸ್ವಭಾವ ಭಯಭೀತಿಗಳನ್ನು ತರುವಂತಹದಾದರೂ, ಸ್ತೋತ್ರದಿಂದ ಅವರು ಪ್ರಸನ್ನರಾಗುವರು, ಮನುಷ್ಯನ ಮಿತ್ರರಾಗುವರು ಮತ್ತು ಪರಸ್ಪರವಾಗಿಯೂ ಅವರಲ್ಲಿ ಸಖ್ಯವುಂಟು ; ಅವರೆಲ್ಲರೂ ಶತ್ರುಗಳಾದ ದಾನವರನ್ನು ನಾಶಗೈಯುವಲ್ಲಿ ಸಹಕರಿಸುವರು. ಮನುಷ್ಯನು ಅವರ



ದಾಸನೆಂಬ ಭಾವಕ್ಕಿಂತ ಸ್ತೋತ್ರದ ಫಲವಾಗಿ ಅವರನ್ನು ನಿಯಂತ್ರಿಸುವ ಸಾಮರ್ಥ್ಯವುಳ್ಳವನಾಗುವನೆಂಬ ಭರವಸೆಯಿದೆ ; ಇದು ಮಂತ್ರಶಕ್ತಿ ಅಥವಾ ಸೂಕ್ತಶಕ್ತಿ. ಒಂದೊಂದು ವೈದಿಕ ದೇವತೆಯಲ್ಲಿ ಅನೇಕ ದಿವ್ಯಶಕ್ತಿಗಳ ಸಂಗಮವನ್ನು ಕಾಣುತ್ತೇವೆ.

ವೇದದೇವತೆಗಳ ಸಂಖ್ಯೆ 33 ; ಈ ಸಂಖ್ಯೆ ಇರಾನಿನಲ್ಲೂ ಪ್ರಸಿದ್ಧವಿದೆ ; ಬ್ರಾಹ್ಮಣ ಗ್ರಂಥಗಳಲ್ಲಿ ಅದನ್ನು ಅಷ್ಟವಸುಗಳು, ಏಕಾದಶ ರುದ್ರರು, ದ್ವಾದಶಾದಿತ್ಯರು ಮತ್ತು ಇನ್ನಿಬ್ಬರು (ಅನಿರ್ದಿಷ್ಟರು) ಎಂದು ವಿಭಾಗಿಸಲಾಗಿದೆ ; ಆದರೆ ಯಾಸ್ಕನ ನಿರುಕ್ತದಲ್ಲಿ ಪೃಥ್ವೀಸ್ಥಾನದವರು, ಅಂತರಿಕ್ಷಸ್ಥಾನದವರು, ದ್ಯುಸ್ಥಾನದವರು ಎಂದು ಮೂರು ಗುಂಪಾಗಿ ದೇವತೆಗಳನ್ನು ವಿಂಗಡಿಸಲಾಗಿದೆ. ಇಲ್ಲಿ ಅವರ ಕೃತಿವೈಷ್ಟ್ಯವನ್ನು ಗಮನಿಸಿ ಬೇರೊಂದು ವಿಭಾಗಕ್ರಮದಿಂದ ಮುಖ್ಯಲಕ್ಷಣಗಳನ್ನು ವಿವೇಚಿಸಲಾಗುತ್ತದೆ : —ಅಧಿರಾಜದೇವತೆಗಳು : ವರುಣ ಮತ್ತು ಮಿತ್ರ ಇತ್ಯಾದಿ ; ಯುದ್ಧವೀರದೇವತೆಗಳು : ಇಂದ್ರ, ಮರುದ್ಗಣಗಳು, ರುದ್ರ ಇತ್ಯಾದಿ ; ಪ್ರಕಾಶದೇವತೆಗಳು : ವಿಷ್ಣು, ಅಶ್ವಿನೀಕುಮಾರರು ಇತ್ಯಾದಿ ; ಯಜ್ಞದೇವತೆಗಳು : ಅಗ್ನಿ, ಸೋಮ ಇತ್ಯಾದಿ ; ಮತ್ತು ಅಪ್ರಧಾನದೇವತೆಗಳು : ಶ್ರದ್ಧಾ, ಇಳಾ ಇತ್ಯಾದಿ.

ವರುಣ : ಏಕದೇವತಾವಾದದ ಛಾಯೆ ಸ್ಪಷ್ಟವಾಗಿ ಕಾಣಿಸುವ ವೇದದೇವತೆಯೆಂದರೆ ವರುಣನೇ ಸರಿ ; ಇವನನ್ನು ಎಲ್ಲರಿಗಿಂತ ಪ್ರಧಾನದೇವತೆಯೆಂದರೂ ಸಲ್ಲುತ್ತದೆ ; ಮಾನವಾಕೃತಿಯ ಕುರುಹುಗಳು ಅವನಿಗೆ ಅಷ್ಟು ಹೆಚ್ಚಾಗಿ ಆರೋಪಿತವಿಲ್ಲ ; ಸ್ವತಂತ್ರವಾಗಿ ಇಲ್ಲವೆ ಮಿತ್ರನ ಸಂಗಡ ಇವನ ಸ್ತುತಿಗಳು ಬರುತ್ತವೆ.

ವರುಣನೇ ಸರ್ವದೇವಾಧಿಪನಾದ 'ಸಮ್ರಾಟ್'. ಜಗತ್ತಿನ ಸೃಷ್ಟಿ ಮತ್ತು ಪಾಲನೆ ದ್ಯುದೇವನಂತೆಯೇ ಅವನ ಕೆಲಸವಾಗಿದೆ. ಕ್ಷತ್ರಿಯನಿಗೆ ಪ್ರಭುತ್ವವುಂಟಾಗುವುದು ವರುಣನ ಕೃಪೆಯಿಂದಲೇ. ಅವನು 'ಅಸುರ' ಅಥವಾ ಮಹಾಪ್ರಭು ; ಅವನ 'ಮಾಯೆ' ಯಿಂದಲೇ ವಿಶ್ವದ ಋತನಿಯಮವು ಕರಾರುವಾಕ್ಕಾಗಿ ನಡೆಯುತ್ತಿರುವುದು ; ನೀತಿ ಉಳಿದಿರುವುದು, ನೀತಿಬಾಹಿರರನ್ನು ಶಿಕ್ಷಿಸುವುದೂ ವರುಣನ ಕಾರ್ಯವೇ. ಅವನು ತನ್ನ ಪಾಶಗಳಿಂದ ಪಾಪಿಗಳನ್ನು ಹಿಡಿದು ದಂಡಿಸುವನು. ಅವನು ಎಲ್ಲವನ್ನೂ ಕಾಣುವ ಕಣ್ಣುಳ್ಳವನು ; ಅವನ ಗೂಢಚಾರರು ಎಲ್ಲೆಡೆಯೂ ಅವನ ಪರವಾಗಿ ನೋಡುತ್ತಲೇ ಇರುವರು ; ಮತ್ತು ಮಳೆಯನ್ನು ತರಿಸುವವನೂ ವರುಣನಾಗಿರುವುದರಿಂದ ಅವನಿಗೆ ಜಲಸಂಬಂಧವೂ ಇದೆ ; ಜಲೋದರ ರೋಗವನ್ನು ಉಂಟುಮಾಡುವವನೂ ವರುಣನೇ. ಅವನಿಗೆ ಸೋಮದ ಯಾಜಮಾನ್ಯವುಂಟು.

ಹೀಗೆ ಋಗ್ವೇದಕಾಲದಲ್ಲಿ ಪೌರಾಣಿಕ ಕಥಾಸಂಬಂಧ ಹೆಚ್ಚಾಗಿಲ್ಲದ ವರುಣ ಕಾಲಾಂತರದಲ್ಲಿ ಮಿತ್ರನಿಗೆ ಪ್ರತಿದ್ವಂದ್ವಿಯಂತಾಗಿ ಮಾರ್ಪಡುತ್ತಾನೆ. ಮಿತ್ರನು ಹಗಲಿನ ಪ್ರತೀಕವಾದರೆ ವರುಣನು ರಾತ್ರಿಯ ಪ್ರತೀಕನಾಗುತ್ತಾನೆ ; ಮಿತ್ರ ಸೂರ್ಯನಾದರೆ, ವರುಣ ಚಂದ್ರ.

ಜಲಸಂಬಂಧ ಮತ್ತಷ್ಟು ಗಾಢವಾಗುತ್ತದೆ. ಬರುಬರುತ್ತ ಯಜ್ಞದಲ್ಲಿ ಅವನ ಭಾಗ ಕಡಿಮೆಯಾಗುತ್ತದೆ. ರಾಜಸೂಯವೇ ಮುಂತಾದ ಕರ್ಮಗಳಲ್ಲಿ ಅವನ ಸ್ಥಾನ ಇಂದ್ರನದಾಗುತ್ತದೆ. ವರುಣ-ಇಂದ್ರರಿಗೆ ಸ್ಪರ್ಧೆಯಾಗಿ ವರುಣನು ಹಿಂದೆಬಿದ್ದಂತೆ ತೋರುತ್ತದೆ.

ಈ ದೇವತಾಸ್ವರೂಪದ ಬಗೆಗೆ ಆಧುನಿಕರಲ್ಲಿ ತುಂಬಾ ಜಿಜ್ಞಾಸೆ ನಡೆದಿದೆ. ಆಕಾಶ ದೇವತೆಯೆಂಬುದು ಕೀತ್ ಮೊದಲಾದವರ ವಾದವಾದರೆ, ಚಂದ್ರದೇವನೆಂದು ಹಿಲ್‌ಬ್ರಾಂಟ್, ಓಲ್ಡೆನ್ ಬರ್ಗ್ ವಾದಿಸಿದರೆ, ರೋಗ ಮರಣಗಳನ್ನುಂಟುಮಾಡುವ ದೇವತೆಯೆಂದು ಓಟ್ರೋ ಹೇಳಿದರೆ ಪೃಥ್ವೀದೇವತೆಯೆಂದು ಮೇಯರ್ ಹೇಳುತ್ತಾನೆ. ಸಮುದ್ರದೇವನೆಂದೂ, ಜಲದೇವನೆಂದೂ ಮತ್ತೆ ಕೆಲವರ ಹೇಳಿಕೆ. ಅತಿ ಪ್ರಾಚೀನವಾದ ಅಧಿರಾಜ ದೇವತೆಯೆಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ.

ಮಿತ್ರ :— ಮಿತ್ರನ ಸ್ಥಾನ ಋಗ್ವೇದದಲ್ಲಿ ಕಡಿಮೆಯದು. ಒಂದೇ ಸೂಕ್ತ ಅವನಿಗೆ ಮೀಸಲಾಗಿದೆ. ಆದರೆ ಅದಕ್ಕೂ ಪೂರ್ವದಲ್ಲಿ ಅವನಿಗೆ ಹೆಚ್ಚಿನ ಸ್ಥಾನವಿದ್ದಂತೆಯೂ, ಅವನ ಕರ್ಮಗಳಲ್ಲಿ ಹಲವನ್ನು ಮುಂದೆ ವರುಣನು ಸ್ವೀಕರಿಸುವಂತೆಯೂ ಭಾಸವಾಗುತ್ತದೆ. ವಿಶ್ವಸೃಷ್ಟಿ, ಋತ–ಸತ್ಯ, ನ್ಯಾಯನಿರ್ಣಯಾದಿ ಕರ್ಮಗಳನ್ನು ಅವನು ವರುಣನೊಡನೆ ಸೇರಿ ನಿರ್ವಹಿಸುತ್ತಾನೆ. ಜನರು ತಮ್ಮ ತಮ್ಮ ಒಪ್ಪಂದಗಳಿಗೆ ಅನುಸಾರ ನಡೆಯುವಂತೆ ನೋಡುವುದು ಮಿತ್ರದೇವನ ಅಸಾಧಾರಣ ಕರ್ಮವೆನ್ನಬಹುದು. ತತ್ಸಮದೇವನ ಹೆಸರು ಇರಾನಿನಲ್ಲಿ 'ಮಿಥ್ರ' ಎಂದಿದ್ದು ಅವನೂ ಸೂರ್ಯಾಂಶದಿಂದ ಕೂಡಿದ್ದಾನೆ. ವರುಣನಲ್ಲಿ ಭೀತಿಕಾರಕ ಉಗ್ರಾಂಶ ಹೆಚ್ಚಾದರೆ ಸೌಮ್ಯಾಂಶವೇ ಮಿತ್ರನೆನ್ನಬಹುದು.

ಆದಿತ್ಯರು :— ವರುಣ ಮತ್ತು ಮಿತ್ರರೂ 'ಅದಿತಿಯ ಪುತ್ರ'ರೆಂಬರ್ಥದಲ್ಲಿ ಆದಿತ್ಯರೇ. ಆದಿತ್ಯರ ಸಂಖ್ಯೆ ಋಗ್ವೇದದಲ್ಲಿ ಏಳು ಅಥವಾ ಎಂಟು ಎಂದು ಕಾಣುತ್ತದೆ ; ಬ್ರಾಹ್ಮಣಗಳ ಕಾಲದಂತೆ 12 ಅಲ್ಲ ; ಅಲ್ಲದೆ ಅವರ ಹೆಸರುಗಳೂ ಬದಲಾಗುತ್ತಿರುತ್ತವೆ. ವರುಣನು ಅವರಲ್ಲಿ ಪ್ರಮುಖನಾದರೆ, ಮಿತ್ರ ಅರ್ಯಮರು ವರುಣನಾದ ಮೇಲೆ ಬರುತ್ತಾರೆ. ಇರಾನಿನಲ್ಲಿ 'ಐರ್ಯಮನ್' ದೇವತೆಯಿದೆ ; ಈ ದೇವತೆಯಲ್ಲಿಯೂ ಸೂರ್ಯಾಂಶವುಂಟು ; ವಿವಾಹ ಆತಿಥ್ಯ ಮುಂತಾದ ಸಾಮಾಜಿಕ ವ್ಯವಸ್ಥೆಗಳ ದೇವತೆ ಅರ್ಯಮ. ಭಗ(ಇರಾನಿಯನ್ 'ಬಗ') ಅದೃಷ್ಟದೇವತೆ ; 'ಅಂಶ' ಮತ್ತು 'ದಕ್ಷ'ರೊಡಗೂಡಿ ಈ ಮೂವರು ನೈತಿಕ ನಿಯಮಗಳ ಹಾಗೂ ಲೋಕಶಾಸನದ ವಿವಿಧಾಂಗಗಳ ದೇವತೆಗಳೆನಿಸುತ್ತಾರೆ. ಈ ಸಪ್ತ ಆದಿತ್ಯರೆಂದರೆ ಸಪ್ತಗ್ರಹಗಳೇ ಎಂಬ ಓಲ್ಡೆನ್ ಬರ್ಗ್ ವಾದ ಇಂದು ಸ್ವೀಕೃತವಾಗುತ್ತಿಲ್ಲ. 'ಅದಿತಿ'ಯೆಂದರೆ 'ಬಂಧವಿಲ್ಲದ ಸ್ಥಿತಿ'ಯೆಂದು ಸಾಮಾನ್ಯಾರ್ಥ ; ದೇವಮಾತೆಯ ಪ್ರತೀಕ ಅಥವಾ ನೈತಿಕ ಶಕ್ತಿಯ ಪ್ರಕಾಶಮಯ ಮೂರ್ತಿಯೆಂದು 'ಅದಿತಿ' ದೇವತೆಯನ್ನು ವಿವರಿಸಿದ್ದಾರೆ. ಆದಿತ್ಯ ಶಬ್ದದಿಂದಲೇ ಆದಿತಿ ಶಬ್ದ ಜನಿಸಿರಬಹುದೆಂದು (ಮುಂದೆ 'ದಿತಿ' ಶಬ್ದದಿಂದ 'ದೈತ್ಯ' ಜನಿಸಿದಂತೆ) ಮೆಕ್ಡಾನೆಲ್ ಮತವಿದೆ.



ಇಂದ್ರ :—ವೇದದಲ್ಲೆಲ್ಲ ಅತ್ಯಂತ ಮಹತ್ತ್ವದ ದೇವತೆಯೆಂದರೆ ಇಂದ್ರನೇ. ಅವನ ಸ್ತುತಿಪರವಾದ ಸೂಕ್ತಗಳ ಸಂಖ್ಯೆ ಹಾಗೂ ಅವನ ಬಗೆಗೆ ಉಕ್ತವಾಗಿರುವ ಕಥೆಗಳು—ಎರಡೂ ಅತ್ಯಧಿಕವಾಗಿದೆ. ಅವನ ಪ್ರಚಂಡ ವ್ಯಕ್ತಿತ್ವ ಹಾಗೂ ಪ್ರಬಲ ಸ್ವಭಾವಗಳು ಮೇಲಿಂದ ಮೇಲೆ ವರ್ಣಿತವಾಗಿದೆ. ಅವನ ಶರೀರ, ತೋಳುಗಳು, ಕೈಗಳು, ಹೊಟ್ಟೆ, ತುಟಿಗಳು, ದವಡೆ, ಗಡ್ಡ, ಗುಡಾಣಗಟ್ಟಲೆ ಸೋಮರಸದ ಪಾನಪ್ರೇಮ ಮುಂತಾದುವೆಲ್ಲ ವಿವರವಾಗಿ ಹೇಳಲ್ಪಟ್ಟಿವೆ. ಅವನ ಆಕೃತಿ ಮಹತ್ತಾದುದು. ಅವನ ಬಣ್ಣ ರಥಾಶ್ವಗಳಂತೆ ಕೆಂದು. ಅವನ ಮುಖ್ಯ ಆಯುಧ ತ್ವಷ್ಟೃ ನಿರ್ಮಿಸಿದ ವಜ್ರಾಯುಧ. ಅವನು ವಜ್ರಪಾಣಿ, ವಜ್ರಹಸ್ತ. ವಜ್ರ ಸಿಡಿಲಿನ ಪ್ರತೀಕ. ಸೋಮಪಾನದಿಂದ ಸೊಕ್ಕಿ ಅವನು ಅದ್ವಿತೀಯ ಯುದ್ಧ–ಸಾಹಸಗಳನ್ನು ಸಾಧಿಸುವನು ; ಹುಟ್ಟಿದೊಡನೆ ಅವನ ಯುದ್ಧಪ್ರೇಮ ಆರಂಭವಾಗುತ್ತದೆ ; ಅವನು ತಾಯ್ತಂದೆಗಳನ್ನೂ ಕೊಂದು ಅವರ ಸೋಮವನ್ನೂ ತಾನೇ ಪಡೆದನಂತೆ ; ಅವನ ಪತ್ನಿ ಇಂದ್ರಾಣೀ. (ಶಚಿಯೆಂದು ಋಗ್ವೇದದಲ್ಲಿ ಹೇಳಿಲ್ಲ ; ಋಗ್ವೇದದಲ್ಲಿ 'ಶಚಿ'ಯೆಂದರೆ 'ಶಕ್ತಿ'ಯೆಂಬ ಸಾಮಾನ್ಯಾರ್ಥವಷ್ಟೇ ಇದೆ). ಇಂದ್ರದೇವನಲ್ಲಿ ಸೋಮಪಾನಾದಿ ದೋಷಗಳುಂಟು ; ಮುಂದಿನ ಸಾಹಿತ್ಯದಲ್ಲಿ 'ಅಹಲ್ಯಾಯೈ ಜಾರ' ಎಂದೂ ಹೇಳಲಾಗಿದೆ.

ಇಂದ್ರನ ಜೊತೆಗಾರರೆಂದರೆ ಮುಖ್ಯವಾಗಿ ಮರುದ್ಗಣಗಳು, ಮತ್ತು ಅಶ್ವಿನೀದೇವತೆಗಳು. ಅವನ ಅತುಲಬಲಪರಾಕ್ರಮಗಳನ್ನು ಅನೇಕ ವಿಧವಾಗಿ ವರ್ಣಿಸಲಾಗಿದೆ. ಎಲ್ಲ ದೇವತೆಗಳಿಗಿಂತಲೂ ಅವನು ಪ್ರಬಲ ; ಅವನು ಸ್ವರಾಟ್ ; ನಿತ್ಯತರುಣ ; ಅವನು 'ಶತಕ್ರತು' ಅಥವಾ ನೂರು ಶಕ್ತಿಗಳ ಧೀರ. 'ವೃತ್ರಹಾ' ಎಂಬುದು ಅವನ ಅಸಾಧಾರಣ ಬಿರುದು. ವೃತ್ರನನ್ನು ಸಂಹರಿಸಿದನೆಂದು. 'ಮಘವನ' ಅಥವಾ ದಾನಶೀಲನೆಂದರೂ ಅವನೇ.

ಅವನ ಯುದ್ಧಸಾಹಸಗಳಲ್ಲೆಲ್ಲ ವೃತ್ರಾಸುರಸಂಹಾರ ಮಿಗಿಲಾದುದು. ನೀರು ಹರಿಯದಂತೆ ಬೆಟ್ಟಗಳಿಂದ ಅಡ್ಡಹಾಕಿದ್ದ ವೃತ್ರನನ್ನು ತನ್ನ ವಜ್ರಾಯುಧದಿಂದ ಕೊಂದು ನೀರನ್ನು ಹರಿಸುವ ಸಾಧನೆ ಇಂದ್ರನದೇ. ಋಗ್ವೇದಕಾಲದಲ್ಲಿ ವೃತ್ರನೆಂದರೆ ಶತ್ರುವೆಂಬ ಸಾಮಾನ್ಯಾರ್ಥವೂ ಇದೆ. ಮುಂದೆ ವೃತ್ರನ ಕಥೆ ಬೇರೆ ರೀತಿ ಬೆಳೆಯುತ್ತದೆ. ಅರ್ಬುದ, ವಿಶ್ವರೂಪ, ನಮುಚಿ, ವಲ, ಶಂಬರ, ಶುಷ್ಣ ಮುಂತಾದ ದೈತ್ಯರನ್ನೂ ಇಂದ್ರನು ಕೊಲ್ಲುತ್ತಾನೆ. ನೀರೆಂದರೆ ಅಂತರಿಕ್ಷದ ಪ್ರಕಾಶವೆಂದೂ ಅರ್ಥಮಾಡಿ ಸೂರ್ಯೋದಯದ ತಾತ್ಪರ್ಯವನ್ನು ಕೆಲವರು ಹೇಳಿದರೆ ಇವು ಐತಿಹಾಸಿಕ ಸಂಗತಿಗಳ ಪ್ರತೀಕಗಳೆಂದು ಮತ್ತೆ ಕೆಲವರು ತಿಳಿಯುತ್ತಾರೆ. ಕ್ಷತ್ರಿಯರ ದೇವತೆಯೇ ಇಂದ್ರ. ಅವರಿಗೆಲ್ಲ ಸಕಾಲದಲ್ಲಿ ಸಹಾಯವೊದಗಿಸುವವನೇ ಆತನು. ದಾಸರ ವಿರುದ್ಧ ಆರ್ಯರು ಮಾಡುತ್ತಿದ್ದ ಯುದ್ಧಗಳಲ್ಲಿ ಇಂದ್ರನೇ ಆರ್ಯರ ಯುದ್ಧ ದೇವತೆಯಾಗಿದ್ದನು. ದಾಶರಾಜ್ಞಯುದ್ಧ ವರ್ಣನೆ ಈ ಮಾತನ್ನು ಪುಷ್ಟೀಕರಿಸುತ್ತದೆ. 'ವೃಷ' ಅಥವಾ ಗೂಳಿ ಅವನ ಪ್ರಬಲ ಶಾರೀರಿಕ ಶಕ್ತಿಯ ಪ್ರತೀಕವಾದ ಬಿರುದು.

ಮರುದ್ಗಣಗಳು :—ಇವರು ತರುಣರು ('ಮರ್ಯ'), ರುದ್ರನ ಮತ್ತು ಪೃಥ್ವಿಯ ಪುತ್ರರು. ಕಂದು ಕುದುರೆಗಳಿರುವ ಚಿನ್ನದ ರಥಗಳಲ್ಲಿವರು ಬರುವರು. ಮಳೆಯನ್ನು

ಸುರಿಸುವರು ; ಬಿರುಗಾಳಿಯನ್ನು ಬರಿಸುವರು ; ಅವರು ಹಾಡುತ್ತ ಬರುವರು ; ಮಿಂಚು ಅವರದೇ ; ಅವರ ಆಭರಣಗಳು ಮಿಂಚಿನಂತೆ ಹೊಳೆಯುವುವು. ಅವರು ಉಗ್ರರಾಗಿರುವುದೂ ಉಂಟು. ಇಂದ್ರನ ನಾಯಕತ್ವವನ್ನೊಪ್ಪಿ ಅವನ ಸಾಹಸಗಳಲ್ಲಿ ಅವನಿಗೆ ಸಹಾಯ ಮಾಡುವರು.

**ರುದ್ರ** :—ಋಗ್ವೇದದಲ್ಲಿ ಗೌಣಸ್ಥಾನದ ದೇವತೆ ; ರುದ್ರನ ಬಿಲ್ಲು ಬಾಣಗಳ ವರ್ಣನೆ ಮೇಲಿಂದಮೇಲೆ ಬರುತ್ತದೆ. ಅವನ ಉಗ್ರರೂಪ ಸ್ಪಷ್ಟವಿದೆ. ಕಾಡುಗಳಲ್ಲಿ ಅವನ ವಾಸ ಮತ್ತು ಅವನು ಪಶುಪತಿ ; ನಿಷೇಧಗಳನ್ನು ನಿಯಂತ್ರಿಸುವ ದೇವನವನು. ಶಿವ, ಮಹಾದೇವ, ಮುಂತಾದವು ಈತನಿಗೆ (ಮುಂದೆ) ಯಜುರ್ವೇದದ ಹೊತ್ತಿಗೆ ಪ್ರಚಾರದಲ್ಲಿ ಬಂದ ಹೆಸರುಗಳು ಆದರೆ ಇವನು ರೋಗನಿವಾರಕನೂ ಹೌದು, ದೊಡ್ಡ ವೈದ್ಯ ; ಅನ್ಯಾಯಗಳನ್ನು ಸರಿಪಡಿಸುವವನು. ಯಜ್ಞದಲ್ಲಿ ಅವನದೇ ಬೇರೆ ಹವಿರ್ಭಾಗ.

**ಅಶ್ವಿನೀದೇವತೆಗಳು** :—ಇವರು ಅವಳಿಜವಳಿಗಳು ; ದ್ವಿವಚನದಲ್ಲಿಯೇ ಇವರ ಪ್ರಶಂಸೆಯೆಲ್ಲ; ದ್ಯುದೇವನ ಪುತ್ರರು ; ಪಕ್ಷಿಗಳು ಎಳೆಯುವ ರಥದಲ್ಲಿ ಇವರು ಆಕಾಶದಲ್ಲಿ ಸಂಚರಿಸುವರು; ಅರುಣೋದಯದಲ್ಲಿ ಇವರ ದರ್ಶನ ; ಸುಂದರರೂ, ಶೀಘ್ರಗಾಮಿಗಳೂ ಆದ ಇವರ ಅದ್ವಿತೀಯ ವಿಶೇಷಣ 'ದಸ್ರಾ' ಅಥವಾ ಅದ್ಭುತರೆಂಬುದು. 'ನಾಸತ್ಯಾ' ಎಂದು ಇವರ ನಾಮಾಂತರ. ಇವರು ರಕ್ಷಣೆ ಮತ್ತು ಚಿಕಿತ್ಸೆ ಮಾಡುವ ದೇವತೆಗಳು. ಚ್ಯವನನ ಮುಪ್ಪನ್ನು ಪರಿಹರಿಸಿ ತರುಣನನ್ನಾಗಿ ಮಾಡಿದವರು ಇವರೇ. ಸಮುದ್ರದಲ್ಲಿ ಭುಜ್ಯುವನ್ನು ಮುಳುಗದಂತೆ ತೇಲಿಸುತ್ತ ಬದುಕಿಸಿದವರೂ ಇವರೇ; ದಧ್ಯಂಚನ ಸಹಾಯದಿಂದ ದೇವತೆಗಳಿಗಾಗಿ ಇವರು ಮಧುವನ್ನು ಸೃಷ್ಟಿಸಿದರು. ಇವರು ಜನಪ್ರಿಯ ದೇವತೆಗಳಾಗಿದ್ದಂತೆ ಕಾಣುತ್ತದೆ.

**ವಿಷ್ಣು** :—ಮೂಜಗವನ್ನೂ ಮೂರು 'ಕ್ರಮ'ಗಳಿಂದ ಅಳೆಯುವ ಇವನ ಸಾಹಸ ಋಗ್ವೇದದಲ್ಲಿ ಹೆಚ್ಚಾಗಿ ಉಕ್ತವಾಗಿದೆ. ಇವುಗಳಲ್ಲಿ ಎರಡು ಕ್ರಮಗಳು ಕಾಣುತ್ತವೆ ; ಮೂರನೆಯದು ಪಕ್ಷಿಗಳು ಹಾರುವ ದೂರಕ್ಕಿಂತ ಆಚೆಗಿದೆ. ಆದ್ದರಿಂದ ಅವನಿಗೆ 'ಉರುಕ್ರಮ' 'ಉರುಗಾಯ' ಎಂಬ ಬಿರುದುಗಳಿವೆ. ವಿಷ್ಣು ಇಂದ್ರನ ಮಿತ್ರ ; ಇಂದ್ರನಿಗಾಗಿ ಸೋಮವನ್ನು ಹಿಂಡುವನು. ಅವನ ಪರಮಪದದಲ್ಲಿ ಮಧುವಿನ 'ಉತ್ಸ'ವೇ (ಬುಗ್ಗೆ) ಇದೆ.

**ಪೂಷನ್** :—ಎಲ್ಲ ಮಾರ್ಗಗಳನ್ನೂ ಬಲ್ಲವನು. ದಾರಿತಪ್ಪಿದ ಪ್ರಾಣಿಗಳಿಗೂ ಜನರಿಗೂ ಮಾರ್ಗದರ್ಶನ ಮಾಡುವವನು. ಸಮೃದ್ಧಿಯನ್ನು ಎಲ್ಲರಿಗೂ ಕರುಣಿಸುವವನು.

**ಸೂರ್ಯಾಂಶದ ದೇವತೆಗಳು ; ಸೂರ್ಯ** :—ಇವನನ್ನು ಒಮ್ಮೆ ಹಕ್ಕಿಯೆಂದೂ, ಒಮ್ಮೆ ಜಡನೆಂದೂ ವರ್ಣಿಸಿದರೂ ಸೂರ್ಯದೇವನೆಂಬ ಭಾವನೆ ಮಾಸುವದಿಲ್ಲ.

**ಸವಿತೃ** :—ಸುವರ್ಣಪಾಣಿಯಾದ ಈತನು ಸಕಲ ಪ್ರಾಣಿಗಳಿಗೂ ಕಾರ್ಯಪ್ರವೃತ್ತವಾಗುವಂತೆ ಚೈತನ್ಯ ಸ್ಫೂರ್ತಿಯನ್ನೀಯುವನು. ಹಾಗೆಯೇ 'ಅಜ ಏಕಪಾದ್', 'ರೋಹಿತ', 'ವಿವಸ್ವಾನ್' ಇವರೂ ಸೂರ್ಯಾಂಶದ ದೇವತೆಗಳು.



**ಉಷಸ್** :—ಈ ಸ್ತ್ರೀದೇವತೆ ಸೂರ್ಯನೊಂದಿಗೆ ಚೆಲುವಿನ ಮೂರ್ತಿಯಾಗಿ ವರ್ಣಿತಳಾಗಿದ್ದಾಳೆ. ರಾತ್ರಿದೇವಿಯ ಸೋದರಿಯಿವಳು ; ದ್ಯುದೇವನ ಮಗಳು.

**ದ್ಯಾವಾಪೃಥಿವೀ** :—ದೇವತಾಕುಟುಂಬಕ್ಕೆಲ್ಲ ದ್ಯುದೇವನು ಪಿತೃಸ್ಥಾನದಲ್ಲಿರುವನು. ಪೃಥಿವಿಯೊಡನೆಯೇ ವೇದದಲ್ಲಿ ಹೆಚ್ಚಾಗಿ ಹೊಗಳಲ್ಪಟ್ಟಿರುವನು. ದ್ಯಾವಾಪೃಥಿವಿಗಳಿಗೆ 'ರೋದಸೀ' ಎಂಬ ನಾಮಾಂತರವುಂಟು. ಪೃಥಿವಿಯು ಎಲ್ಲರನ್ನೂ ಸಾಕಿ ಬೆಳೆಸುವ ಮಾತೆ.

**ವಾಯು** :—ಗಾಳಿಯ ದೇವತಾಸ್ವರೂಪ ; ಮನುಷ್ಯನ ಲಕ್ಷಣಗಳನ್ನು ಹೇಳಲಾಗಿದೆ ; ಹೆಚ್ಚಾಗಿ ಇಂದ್ರನ ಮಿತ್ರ.

**ಪರ್ಜನ್ಯ** :—ಮಳೆ, ಮೋಡ, ಬಿರುಗಾಳಿಗಳ ದೇವತೆ ; ಪ್ರಬಲಶಕ್ತಿ ಆತನದು. ಎಲ್ಲ ಸಸ್ಯವರ್ಗಗಳ ಜನಕ, ಜೀವದ ಉತ್ಪಾದಕ.

**ಅಗ್ನಿ** :—ಇವನಲ್ಲಿ ನೈಸರ್ಗಿಕ ಹಾಗು ಯಾಜ್ಞಿಕ ಲಕ್ಷಣಗಳೆರಡೂ ದೇವತ್ವದ ಮಟ್ಟಕ್ಕೆ ಏರಿಸಲ್ಪಟ್ಟಿವೆ. ತೇಜಸ್ಸಿನ ನಾನಾ ಪ್ರಕಾರಗಳೆಲ್ಲ 'ಅಗ್ನಿ'ಯಲ್ಲಿ ಸಮಾವೇಶವಾಗುತ್ತವೆ. ಅವನ ಪೃಥ್ವೀಸ್ಥಾನದ ರೂಪ ಮನುಷ್ಯಾಕೃತಿಯಲ್ಲಿ ವಿಶೇಷವಾಗಿ ಕೀರ್ತಿತವಾಗಿದೆ. ಅವನ ದಂತಗಳೂ, ದವಡೆಗಳೂ ಚಿನ್ನದವು ; ಉರಿಗಳೇ ಜಡೆ ; ನಾಲಿಗೆಗಳು ಏಳು ; ಪ್ರಕಾಶ ಅವನ ಅಸಾಧಾರಣ ವೈಶಿಷ್ಟ್ಯ ; ಅವನು ಧೂಮಕೇತುವೂ ಅಹೆಂದು ; ದಾವಾಗ್ನಿಯ ರೂಪದಲ್ಲಿ ಅವನ ಆರ್ಭಟ ಅಸಾಮಾನ್ಯ. ಅಗ್ನಿಯನ್ನು ಕರುವಿಗೂ, ಕುದುರೆಗೂ ಹೋಲಿಸಲಾಗಿದೆ. ಅವನ ಮೆಚ್ಚಿನ ಆಹಾರ ತುಪ್ಪ ; ಆಕಾಶದಲ್ಲಿ ಅವನೂ ರಥದಲ್ಲಿ ಕುಳಿತು ಯಜ್ಞಕ್ಕೆ ಬರುತ್ತಾನೆ. ಅವನ ಜನನ ಅರಣಿಗಳಲ್ಲಿ, ಕಾಡಿನ ಗಿಡಗಳಲ್ಲಿ ಆಗುತ್ತದೆ. 'ಅಪಾಂ ನಪಾತ್' ಎಂಬ ರೂಪದಲ್ಲಿ ಅವನು ನೀರಿನ ಗರ್ಭದಲ್ಲಿಯೂ ಇರುತ್ತಾನೆ. ಆಕಾಶದಲ್ಲಿ ಮಿಂಚಿನ ರೂಪವೂ ಅಗ್ನಿಯದೇ. ಅಂತರಿಕ್ಷದ ಸೂರ್ಯನೂ ಅಗ್ನಿಯಿಂದ ಅಭಿನ್ನನೇ. ಅವನ ತ್ರಿರೂಪದಿಂದ "ತ್ರಯೋ ಅಗ್ನಯಃ" ಎಂಬ ಯಜ್ಞಸೂತ್ರ ಅನ್ವರ್ಥಕವಾಗುತ್ತದೆ. ಅಪರಕರ್ಮದಲ್ಲಿ ದೇಹವನ್ನು ದಹನಮಾಡುವವನೂ ಅಗ್ನಿಯೇ.

ಅಗ್ನಿಗೆ ಮಾನವನ ಬಾಳಿನೊಡನೆ ನಿಕಟಸಂಬಂಧವಿದೆ ; ಅವನು ಗೃಹಪತಿ ಮತ್ತು ಪುರೋಹಿತ. ಅವನೇ ಎಲ್ಲ ದೇವತೆಗಳಿಗೂ ಅವರವರ ಹವಿರ್ಭಾಗವನ್ನು ಮುಟ್ಟಿಸುವವನು ; ಅವನೇ ದೇವತೆಗಳನ್ನೆಲ್ಲ ಯಜ್ಞಕ್ಕೆ ಕರೆದುಕೊಂಡು ಬರುವವನು. ಹೀಗೆ ಅವನು ಭೂಮಿಗೂ ದ್ಯುಲೋಕಕ್ಕೂ ಹೋಗಿಬರುವ ರಾಯಭಾರಿ. ಅವನೇ ಎಲ್ಲ ಪುರೋಹಿತರಿಗೂ ಆದರ್ಶ. ಎಲ್ಲ ಬಲ್ಲವ ಅಥವಾ 'ಜಾತವೇದಸ್' ಎಂಬುದು ಅಗ್ನಿಯ ಬಿರುದು ; ಹಾಗೆಯೇ ಎಲ್ಲರಿಗೂ ಬೇಕಾದವನು ಅಥವಾ 'ವೈಶ್ವಾನರ' ; ಮತ್ತು ಸ್ವಯಂಜಾತ ಅಥವಾ ತನೂನಪಾತ್; ವಿಶ್ವಸ್ತುತ ಅಥವಾ 'ನರಶಂಸ'. ಮಂತ್ರಮಹಿಮೆಯನ್ನೇ 'ಬೃಹಸ್ಪತಿ'ಯೆಂಬ ನಾಮಾಂತರದಿಂದ ಸ್ವತಂತ್ರ ದೇವತೆಯೆಂದರೂ ಅಗ್ನಿಯನ್ನು ಕೂಡ ಬೃಹಸ್ಪತಿಯೆಂದು ಸಂಬೋಧಿಸಲಾಗಿದೆ.

**ಸೋಮ :**— ಅಗ್ನಿಯಂತೆಯೇ ಸೋಮನೂ ಋಗ್ವೇದದಲ್ಲಿ ಪ್ರಧಾನ ದೇವತೆ. ಎಲ್ಲ ದೇವತೆಗಳಂತೆ ಸೋಮನೂ ಪ್ರಕಾಶ ನೀಡುವ, ರಥದಲ್ಲಿ ವೀರನಂತೆ ಬರುವ, ಇಂದ್ರಾದಿಗಳೊಡನೆ ಸಹಕರಿಸುವ ಲಕ್ಷಣಗಳುಳ್ಳವನಾದರೂ ಅವನಲ್ಲಿ ಮನುಷ್ಯತ್ವಾರೋಪ ಅಷ್ಟಾಗಿ ಕಾಣುವುದಿಲ್ಲ. ಹೆಚ್ಚಾಗಿ ದೇವತ್ವಕ್ಕೇರಿಸಿದ ಯಜ್ಞೋಪಯೋಗಿ ಸೋಮವನಸ್ಪತಿಯೇ ಸೋಮ ; ಸೋಮರಸದ ಸವನ, ಮತ್ತು ಒಂದು ಉಣ್ಣೆಯ ಬಟ್ಟೆಯಿಂದ ಶುದ್ಧೀಕರಣಗಳು ಮೇಲಿಂದ ಮೇಲೆ ವರ್ಣಿತವಾಗುತ್ತವೆ. 'ಪವಮಾನ' ಅಥವಾ ಶುದ್ಧೀಕೃತನೆಂಬುದು ಸೋಮನ ಅಸಾಧಾರಣ ನಾಮ. ಋಗ್ವೇದದ ಒಂಬತ್ತನೆಯ ಮಂಡಲವೆಲ್ಲ ಇವನ ಸ್ತುತಿಗೇ ಮೀಸಲು. ಜಲಗಳ ರಸವನ್ನೂ ಸೋಮನೆಂದೇ ವರ್ಣಿಸಲಾಗಿದೆ. ಸೋಮರಸವು ಹಿಂಡಿದಾಗ ಮಾಡುವ ಗುಳುಗುಳು ಶಬ್ದವನ್ನು ಗೂಳಿಯ ಗುಟುರೆಯೆಂದು ವರ್ಣಿಸಿದೆ. ಅದರ ಪ್ರಭಾವದಿಂದ ಅಮೃತತ್ವ ಸಿದ್ಧಿಸುವುದೆನ್ನಲಾಗಿದೆ. ಅಗ್ನಿಯಂತೆ ಸೋಮನನ್ನೂ ಪುರೋಹಿತನೆಂದು ಹೇಳಲಾಗಿದೆ. ಭೂಲೋಕದ ಸೋಮ ಪರ್ವತದಲ್ಲಿ ಹುಟ್ಟಿದರೂ ನಿಜವಾಗಿ ಅದು ಸ್ವರ್ಗೀಯ ; ಒಂದು ದೊಡ್ಡ ಪಕ್ಷಿ ಅಥವಾ ಗರುಡನು ಅದನ್ನು ಸ್ವರ್ಗದಿಂದ ತಂದನೆಂಬ ಕಥೆಗಳಿವೆ. ಸೋಮವೇ ವನಸ್ಪತಿಗಳ ರಾಜ ; ಆದ್ದರಿಂದ ಯಜ್ಞವರ್ಣನೆಗಳಲ್ಲಿ ಸೋಮನನ್ನೇ ರಾಜನೆಂದು ವರ್ಣಿಸಲಾಗುತ್ತದೆ. ಬ್ರಾಹ್ಮಣಗಳಲ್ಲಿ ಸೋಮನೆಂದರೆ ಚಂದ್ರನೂ ಆಗುತ್ತಾನೆ.

**ಸ್ತ್ರೀದೇವತೆಗಳು :**—ಉಷಸ್ ಮತ್ತು ಅದಿತಿಗಳಲ್ಲದೆ, ಶ್ರೀ, ಪುರಂಧಿ, ವಾಕ್, ಧಿಷಣಾ, ಇಳಾ, ಮುಂತಾದ ಸ್ತ್ರೀದೇವತೆಗಳೂ ಇಂದ್ರಾಣೀ ಇತ್ಯಾದಿ ದೇವಪತ್ನಿಯರಂತೆ ಋಗ್ವೇದದಲ್ಲಿ ಸ್ತುತರಾಗಿದ್ದಾರೆ.

**ದ್ವಂದ್ವದೇವತೆಗಳು :**— ಮಿತ್ರಾವರುಣಾ, ದ್ಯಾವಾಪೃಥಿವೀ, ಇಂದ್ರಾವಿಷ್ಣೂ, ಇಂದ್ರಾಗ್ನೀ ಇತ್ಯಾದಿಗಳು.

**ದೇವತಾಗಣಗಳು :**—ಆದಿತ್ಯರು, ಮರುದ್ಗಣಗಳು, ರುದ್ರಗಣಗಳು, ಇತ್ಯಾದಿ. ಇವರಲ್ಲಿ ವಿಶ್ವೇದೇವತೆಗಳ ಗಣ ಅತ್ಯಂತ ವಿಶಾಲವಾದದು. ಎಲ್ಲ ದೇವತೆಗಳನ್ನೂ ಸೇರಿಸಿ ಒಂದು ಗಣವನ್ನಾಗಿ ಸ್ತೋತ್ರಮಾಡುವ ವೈಶಿಷ್ಟ್ಯ ವೇದದ್ದಾಗಿದೆ. ಋಗ್ವೇದದಲ್ಲಿ ಅನೇಕ ವಿಶ್ವೇದೇವತಾ ಸೂಕ್ತಗಳಿವೆ.

**ಋಭುಗಳು :**— ಇವರೇ ದೇವತೆಗಳ ಮೂವರು ರಥಕಾರರು.

**ಅಪ್ಸರೆಯರು :**— ಉರ್ವಶೀ ಇತ್ಯಾದಿ. ಇವರು ಗಂಧರ್ವರ ಪತ್ನಿಯರು.

**ಗಂಧರ್ವರು :**—ಜಲಗಳ ಮತ್ತು ಮೇಘಗಳ ಅಧಿಷ್ಠಾತೃಗಳು ; ಅವರು ಜಲಾದಿಗಳನ್ನು ರಕ್ಷಿಸುವಂತೆ ಸೋಮವನ್ನು ಕದ್ದೊಯ್ಯುವುದೂ ಉಂಟು.

ಅಮೂರ್ತ ಭಾವಗಳನ್ನೂ ದೇವತೆಗಳೆನ್ನುವುದು ಋಗ್ವೇದದಲ್ಲಿ ರೂಢಿಯಾಗಿದೆ. 'ಋತ' ಅಥವಾ ವಿಶ್ವಧಾರಣ ತತ್ತ್ವ, 'ವ್ರತ' ಅಥವಾ ಯಜ್ಞನಿಯಮ, 'ಧರ್ಮ', 'ಶ್ರದ್ಧಾ' ಇತ್ಯಾದಿಗಳು ಉದಾಹರಣೆಗಳು ; ಹಾಗೆಯೇ ಕೆಲವೊಂದು ಕ್ರಿಯೆಗಳನ್ನು ಮಾಡುವವರಿಗೂ ದೇವತ್ವ ಹೇಳಲಾಗಿದೆ:—ತ್ವಷ್ಟೃ—ಸಂಯೋಜಕ ; ವಿಶ್ವಕರ್ಮ—ವಿಶ್ವವನ್ನೇ ಮಾಡುವವ.



**ಋಗ್ವೇದಧರ್ಮಸ್ವರೂಪ :**—ಋಗ್ವೇದದೇವತೆಗಳ ಸಂಖ್ಯೆ ಅನೇಕ ; ಯಜ್ಞೋಪಕರಣಗಳು, ಇಂದ್ರಾದಿ ದೇವತೆಗಳ ಆಯುಧಗಳು, ವಾಹನಪ್ರಾಣಿಗಳು, ಅಮೂರ್ತ ಭಾವಗಳು ಎಲ್ಲಕ್ಕೂ ದೈವತ್ವವನ್ನು ಸ್ತೋತ್ರಗಳ ಮೂಲಕ ತರಿಸಲವಕಾಶವಿತ್ತು ; ಏಂದರೆ ವಿಶ್ವವೇ ದಿವ್ಯವಲ್ಲವಾದರೂ ದಿವ್ಯವು ವಿಶ್ವರೂಪಿಯಾಗಬಹುದು ; ವಿಶ್ವವು ದಿವ್ಯಶಕ್ತಿಯ ಒಂದು ಆವಿಷ್ಕಾರ ಮಾತ್ರ ; ಆ ಶಕ್ತಿ ಇನ್ನೂ ಹೆಚ್ಚಿನದನ್ನು ಒಳಗೊಳ್ಳಬಹುದು. ಪವಿತ್ರವಾದುದರ ಸಂಬಂಧದಿಂದ ಯಾವದಕ್ಕೆ ಬೇಕಾದರೂ ದೈವತ್ವವುಂಟಾಗಬಹುದು. ಮನುಷ್ಯನು ಕೂಡ ದಿವ್ಯತ್ವಕ್ಕೇರಬಹುದು. ಮಾನವರು ದೇವರ್ಷಿಗಳಾಗಬಹುದು. ಅಲ್ಲದೆ ಸ್ತೋತ್ರಕಾಲದಲ್ಲಿ ಯಾವುದೇ ವಿಶಿಷ್ಟದೇವತೆಯಿರಲಿ, ಅವನೇ ಸರ್ವಾಧಿಕನೆಂಬ ಭಾವನೆ ವ್ಯಕ್ತವಾಗುತ್ತದೆ. ಮಿಕ್ಕ ದೇವತೆಗಳ ಮಹಿಮೆಯನ್ನೆಲ್ಲ ಪ್ರಸ್ತುತದೇವತೆಗೇ ಆರೋಪಿಸಲಾಗುತ್ತದೆ. ಇದನ್ನು ಭಾರತೀಯ ಸೂಕ್ತಕಾರರ ವರ್ಣನಾತಂತ್ರವೆನ್ನಬಹುದು ; ಇದರ ಹಿಂದೆ ಏಕದೇವತಾವಾದದ ಸೂಚನೆಯನ್ನು ಕಾಣಬೇಕೇ ಹೊರತು ಭ್ರಾಮಕವಾದ ಬಹುದೇವತಾವಾದವನ್ನಲ್ಲ.

ಋಗ್ವೇದಧರ್ಮದಲ್ಲಿ ದೇವತಾತಾರತಮ್ಯದ ಪ್ರಸ್ತಾಪವಿಲ್ಲದಿರುವುದು ಇನ್ನೊಂದು ವೈಶಿಷ್ಟ್ಯ ; ಒಬ್ಬ ದೇವತೆ ಇನ್ನೊಬ್ಬ ದೇವತೆಗಿಂತ ಹೆಚ್ಚಿನವನೆಂದು ನಿರ್ಣಯಿಸುವಂತಿಲ್ಲ. ಈ ದೇವತಾಶಕ್ತಿಗಳ ವಿರುದ್ಧವಾಗಿ ಅನಿಷ್ಟಶಕ್ತಿಗಳಾದ ದಾನವರಿದ್ದರೂ ಅವರ ಸಂಖ್ಯೆ ಮತ್ತು ಪ್ರಾಬಲ್ಯ ಅತಿರಂಜಿತವಾಗಿ ಉಕ್ತವಾಗಿಲ್ಲ.

ಈ ದೇವತೆಗಳ ಪೈಕಿ ವರುಣದೇವತೆ ಇಂಡೋ-ಯೂರೋಪಿಯನ್ ಯುಗದಿಂದ ಬಂದ ಬಳುವಳಿಯೆಂದೂ, ಸಾರ್ವಭೌಮತ್ವ ಅಥವಾ 'ಅಸುರ'ತ್ವದ ಕಲ್ಪನೆ ಇಂಡೋ-ಇರಾನಿಯನ್ ಯುಗಕ್ಕೆ ಸೇರಿದ್ದೆಂದೂ, ರುದ್ರನು ಶಿವನಾಗಿ ಪರಿವರ್ತನೆ ಹೊಂದುವುದು ದ್ರಾವಿಡಸಂಸ್ಕೃತಿಯ ಪ್ರಭಾವವೆಂದೂ ಯೂರೋಪಿಯನ್ ವಿದ್ವಾಂಸರು ಭಾವಿಸುತ್ತಾರೆ.

ನಿಸರ್ಗಶಕ್ತಿಗಳಿಗೂ, ಮಾನವನಿಗೂ ಈ ದೇವತಾಭಾವದ ಸಂಬಂಧ ಅತ್ಯಂತ ಪರಿಣಾಮಕಾರಿಯಾಗಿ ಲಭಿಸಿದುದರಿಂದ ಮಾನವನ ಇತಿಹಾಸದಲ್ಲಿ ನಾವು ಮತ್ತೆಲ್ಲೂ ಅಷ್ಟು ಪ್ರಾಚೀನ ಕಾಲದಲ್ಲಿ ಕಾಣಲು ಸಿಕ್ಕದಂತಹ ಮಧುರ ಆತ್ಮೀಯತೆಯನ್ನು ಕಾಣುತ್ತೇವೆ ; ಇಂದಿಗೂ ಆಕರ್ಷಕವಾಗಿರುವ ಋಗ್ವೇದದ ಕಾವ್ಯಸೌಂದರ್ಯಕ್ಕೆ ಈ ಆತ್ಮೀಯತೆಯೇ ಮೂಲಕಾರಣ. ಇಹದಲ್ಲಿಯೇ ಅಮೃತತ್ವವನ್ನು ಸಾಧಿಸುವ ಹೆಬ್ಬಯಕೆ ಅಂದಿನ ಋಷಿಗಳದು. ಇದರಲ್ಲಿ ಉತ್ತರಕಾಲೀನ ಸಂನ್ಯಾಸಪ್ರವೃತ್ತಿಗೆ ಪ್ರವೇಶವಿಲ್ಲ ; ಪರಕ್ಕಾಗಿ ಇಹವನ್ನು ಕಳೆದುಕೊಳ್ಳಬೇಕೆಂಬ ಅಭಿಸಂಧಿಯಿಲ್ಲ. ಐಹಿಕ ಜೀವನಮೌಲ್ಯಗಳಲ್ಲಿ ಈ ಶ್ರದ್ಧೆ ಇಷ್ಟೊಂದು ಪ್ರಬಲವಾಗಿ ಮೂಡಬೇಕಾದರೆ, ನಿಜವಾಗಿಯೂ ಕವಿಸ್ಫೂರ್ತಿಯೇ ಕಾರಣವೆನ್ನಬೇಕೇ ಹೊರತು ಕೇವಲ ಯಾಜ್ಞಿಕಪುರೋಹಿತರ ಕೈವಾಡವೆಂದರೆ ಸರಿಯಾಗದು.

**ವೇದಶಾಖೆಗಳು :** ಗುರು–ಶಿಷ್ಯರ ಅಧ್ಯಯನ ಸಂಪ್ರದಾಯದಲ್ಲಿ ಒಂದೊಂದು ವೇದಸಂಹಿತೆ ಹಾಗು ಬ್ರಾಹ್ಮಣಾದಿಗಳು ಅಷ್ಟಿಷ್ಟು ಪಾಠಾಂತರಗಳನ್ನು ಒಳಗೊಳ್ಳುತ್ತ ಬೆಳೆದ

ಪರಿಣಾಮವಾಗಿ ಒಂದೊಂದು ವೇದದಲ್ಲೂ ಅನೇಕ ಶಾಖೆಗಳು ಪ್ರಚಾರದಲ್ಲಿ ಬಂದಿವೆ. ಮೊದಲಮೊದಲು ಒಂದೊಂದು ವೇದಕ್ಕೂ ಒಂಬತ್ತರಿಂದ 101 ಶಾಖೆಗಳಿದ್ದುವೆಂದೂ, ಸಾಮವೇದಕ್ಕೆ ಒಂದು ಸಾವಿರ ಶಾಖೆಗಳಿದ್ದುವೆಂದೂ ಉಲ್ಲೇಖಗಳನ್ನು ನಾವು ಕಾಣುವೆವಾದರೂ ಈಗ ಉಪಲಬ್ಧವಿರುವ ಶಾಖಾಪಾಠಗಳು ಕೆಲವೇ ಇವೆ. ಉದಾಹರಣೆಗೆ ಋಗ್ವೇದದಲ್ಲಿ ಶಾಕಲಶಾಖೆಯ ಪಾಠ ಮಾತ್ರ ಸಂಹಿತೆಗೆ ಇಂದು ಪೂರ್ಣವಾಗಿ ಉಪಲಬ್ಧವಿದೆ. ಈ ಉಪಲಬ್ಧ ಶಾಖಾಭೇದಗಳ ಕೋಷ್ಟಕವನ್ನು ಕೆಳಗೆ ಕೊಡಲಾಗಿದೆ.

## (2) ಯಜುರ್ವೇದ

1. ಸಂಹಿತೆಗಳು :— ಕೇವಲ ಯಜ್ಞದೃಷ್ಟಿಯಿಂದ ಅಧ್ವರ್ಯುವಿನ ಉಪಯೋಗಕ್ಕಾಗಿರುವ ನಿಯಮಗಳ ಸಂಗ್ರಹವೇ ಯಜುರ್ವೇದ ಸಂಹಿತೆಯೆನಿಸುತ್ತದೆ. ಛಂದೋರೂಪವಾದ ಮಂತ್ರಕ್ಕೆ 'ಋಕ್' ಎಂಬ ಹೆಸರು ಹೇಗೋ ಹಾಗೆಯೇ ಗದ್ಯರೂಪವಾದ ವಚನಕ್ಕೆ 'ಯಜುಸ್' ಅಥವಾ 'ಬ್ರಾಹ್ಮಣ' ಎಂಬ ಸಂಜ್ಞೆಯಿದೆ. 'ಅನಿಯತಾಕ್ಷರಾವಸಾನೋ ಯಜುಃ', 'ಗದ್ಯಾತ್ಮಕೋ ಯಜುಃ' ಎಂಬ ವಿವರಣೆಗಳು ಇದನ್ನೇ ಸೂಚಿಸುತ್ತವೆ. ಮುಂದೆ ಗೃಹ್ಯ ಮತ್ತು ಶ್ರೌತಸೂತ್ರಗಳು ವಿವರವಾಗಿ ಹೇಳುವ ಕರ್ಮಗಳ ಮೂಲರೂಪಗಳು ಅತಿಪ್ರಾಚೀನವಾದ ಯಜುರ್ವೇದದಲ್ಲೇ ಕಾಣಸಿಗುತ್ತವೆ. ಉಪನಯನಾದಿ ಗೃಹ್ಯಸಂಸ್ಕಾರಗಳನ್ನೂ, ಶ್ರಾದ್ಧಾದಿ ಅಪರಕರ್ಮಗಳನ್ನೂ ಆಚರಿಸಲು ಒಬ್ಬ ಪುರೋಹಿತನ ನೆರವು ಸಾಕು; ಆದರೆ ಸೋಮಯಾಗಗಳನ್ನೂ, ರಾಜ್ಯಸೂಯಾದಿ ಮಹಾಯಜ್ಞಗಳನ್ನೂ ನಡೆಸಲು ಅನೇಕ ಪುರೋಹಿತರ ಅಗತ್ಯ ಬೀಳುತ್ತದೆ; ಇವೇ ಶ್ರೌತಕರ್ಮಗಳು. ಈ ಎರಡು ಬಗೆಯ ಕರ್ಮಾಚರಣೆಗೂ ಮುಖ್ಯವಾದ ಗದ್ಯಪದ್ಯಾತ್ಮಕ ಮಂತ್ರಗಳ ಮೊದಲ ಸಂಕಲನವೇ ಯಜುರ್ವೇದವೆಂದು ತಿಳಿಯಬಹುದಾಗಿದೆ. ಯಜ್ಞದ ಮುಖ್ಯ ನಾಲ್ವರು ಪುರೋಹಿತರಲ್ಲಿ ಹೋತೃವಿಗೆ ಋಗ್ವೇದ ಸಂಬಂಧಿಸುವಂತೆ, ಯಜುರ್ವೇದ ಅಧ್ವರ್ಯುವಿಗೂ, ಸಾಮವೇದ ಉದ್ಗಾತೃವಿಗೂ ಸಂಬಂಧಿಸುತ್ತವೆ. ಕರ್ಮಾಚರಣೆಗೆ ಅಗ್ರಪ್ರಾಶಸ್ತ್ಯವನ್ನಿತ್ತ ಭಾರತೀಯರು ಯಜುರ್ವೇದವನ್ನು ಹೆಚ್ಚಾಗಿ ಅಧ್ಯಯನ ಮಾಡುವ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದು ಸಹಜವಾಗಿದೆ. ಆದ್ದರಿಂದಲೇ ಇದರಲ್ಲಿ ಶಾಖೆಗಳು ಬಹಳವಿವೆ. ಮೊದಲಿಗೆ ನೂರೊಂದು ಶಾಖೆಗಳಿದ್ದವೆಂದು ಪತಂಜಲಿ ಹೇಳಿದ್ದಾನೆ (ಮಹಾಭಾಷ್ಯ—ಪ್ರಸ್ತಾವನೆಯಲ್ಲಿ). ಆದರೆ ಈಗ ಆರೇ ಉಪಲಬ್ಧವಿದೆ: (1) ಕಾಠಕಸಂಹಿತೆ, (2) ಕಪಿಷ್ಠಲಕಠಸಂಹಿತೆ, (3) ಮೈತ್ರಾಯಣೀಸಂಹಿತೆ, (4) ತೈತ್ತಿರೀಯಸಂಹಿತೆ ಮತ್ತು (5) ವಾಜಸನೇಯಿ ಸಂಹಿತೆಯ ಕಾಣ್ವಶಾಖೆ, (6) ವಾಜಸನೇಯಿ ಸಂಹಿತೆಯ ಮಾಧ್ಯಂದಿನಶಾಖೆ. ಇದರಲ್ಲಿ ಮೊದಲ ನಾಲ್ಕಕ್ಕೆ 'ಕೃಷ್ಣಯಜುರ್ವೇದ'ವೆಂದೂ, ಕಡೆಯ ಎರಡಕ್ಕೆ 'ಶುಕ್ಲಯಜುರ್ವೇದ'ವೆಂದೂ ಹೇಳುವರು. ಮೊದಲನೆಯದರಲ್ಲಿ ಗದ್ಯಪದ್ಯಗಳೆರಡೂ ಸಂಮಿಶ್ರವಾಗಿರುವುದರಿಂದ 'ಕೃಷ್ಣ'ವೆಂದೂ, ಗದ್ಯಮಿಶ್ರಣವಿಲ್ಲದ್ದರಿಂದ 'ಶುಕ್ಲ'ವೆಂದೂ ಈ ಹೆಸರುಗಳು ಬಂದಿರಬಹುದು.



ಋಗ್ವೇದಕ್ಕೆ ಸಾಯಣಭಾಷ್ಯವಿರುವಂತೆಯೇ ಕೃಷ್ಣಯಜುರ್ವೇದದ ತೈತ್ತಿರೀಯಸಂಹಿತೆಗೂ ಸಾಯಣಭಾಷ್ಯವಿದೆ. ಇದರಲ್ಲಿ ಸಾಯಣಾಚಾರ್ಯರು ಯಜುರ್ವೇದದ 'ಅನುಬಂಧಚತುಷ್ಟಯ'ವನ್ನು ಚೆನ್ನಾಗಿ ವಿವರಿಸಿದ್ದಾರೆ. "ಇಷ್ಟಪ್ರಾಪ್ತ್ಯನಿಷ್ಟ ಪರಿಹಾರಯೋರಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ" ಎಂದರೆ ಯಾವ ಗ್ರಂಥವು ಇಷ್ಟಪ್ರಾಪ್ತಿ ಮತ್ತು ಅನಿಷ್ಟ ನಿವೃತ್ತಿಗಳಿಗೆ ಅಲೌಕಿಕ ಉಪಾಯವನ್ನು ಬೋಧಿಸುವದೋ ಅದೇ ವೇದವೆಂಬ ಲಕ್ಷಣವನ್ನು ಹೇಳಿದ್ದಾರೆ. ಪ್ರತ್ಯಕ್ಷ, ಅನುಮಾನಗಳಿಗೆ ಗೋಚರವಲ್ಲದ ಉಪಾಯವನ್ನು ಬೋಧಿಸುವದೇ ಶ್ರುತಿಯೆಂದು ಸ್ಪಷ್ಟಪಡಿಸುವುದಕ್ಕಾಗಿ 'ಅಲೌಕಿಕ' ಎನ್ನಲಾಗಿದೆ :—

"ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿಂದತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥"

ಈ ವೇದಾಧಿಕಾರ ಉಪನಯನಸಂಸ್ಕಾರವಾದವರಿಗೆ ಮಾತ್ರವೆಂದ ಪರಂಪರೆಯ ಕಾರಣ, ಸ್ತ್ರೀಶೂದ್ರಾದಿಗಳಿಗೆ ಉಪದೇಶಿಸುವ ಪರಿಪಾಠವಿರಲಿಲ್ಲ. ವೇದ ನಿತ್ಯವಾದುದರಿಂದ ಅದು ಸ್ವಯಂಪ್ರಮಾಣ. "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಿಧಿವಾಕ್ಯಕ್ಕೆ ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡಬೇಕೆಂದೇ ತಾತ್ಪರ್ಯ.

ಯಜುರ್ವೇದಸಂಹಿತೆಗಳಲ್ಲಿ ಸ್ವರಾಂಕನಪದ್ಧತಿಯೂ ಋಗ್ವೇದಕ್ಕಿಂತ ಭಿನ್ನವಾಗಿದೆ; ಉಚ್ಚಾರಣೆಯಲ್ಲಿಯೂ ಭೇದವಿದೆ. ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ನಿಷಿದ್ಧ ಕರ್ಮಗಳ ಪರಿಜ್ಞಾನಕ್ಕೆ ವೇದವೊಂದೇ ಆಶ್ರಯ. ವೇದೋಕ್ತ ಕರ್ಮಾನುಷ್ಠಾನವೇ ಧರ್ಮ. ಮಾವಿನಕಾಯಿ ಪಕ್ವವಾದಾಗ ಸುಗಂಧ ತಾನೇ ಪಸರಿಸುವಂತೆ :— "ತದ್ಯಥಾಮ್ರೇ ಫಲಾರ್ಥೇ ನಿರ್ಮಿತೇ ಛಾಯಾಗಂಧಾವನೂತ್ಪದ್ಯೇತೇ ಏವಂ ಧರ್ಮಂ ಚರ್ಯಮಾಣಮರ್ಥಾ ಅನೂತ್ಪದ್ಯಂತೇ." ಅದರಿಂದ ಅರ್ಥಾದಿ ಪುರುಷಾರ್ಥಗಳು ತಾವೇ ಸಿದ್ಧಿಸುವವೆಂಬ ತೀರ್ಮಾನ ಭಾರತೀಯರದು.

ದಕ್ಷಿಣಭಾರತದಲ್ಲಿ ತುಂಬಾ ಪ್ರಚಲಿತವಿರುವ ಯಜುರ್ವೇದಶಾಖೆಯೆಂದರೆ ತೈತ್ತಿರೀಯ ಶಾಖೆ. ಇದರ ವಿಷಯವಿಭಾಗಕ್ರಮ ಹೀಗಿದೆ :—

| | ಕಾಂಡ | ಕಾಂಡಋಷಿ | ಅಧ್ಯಾಯ ಅಥವಾ ಪ್ರಪಾಠಕ ಸಂಖ್ಯೆ | ಅನುವಾಕ ಸಂಖ್ಯೆ |
|---|---|---|---|---|
| ಸಂಹಿತೆ | I | ಪ್ರಜಾಪತಿ | 8 | 146 |
| | II | ಸೋಮ | 6 | 75 |
| | III | ಅಗ್ನಿ | 5 | 55 |
| | IV | ವಿಶ್ವೇದೇವತೆಗಳು | 7 | 82 |
| | V | ಸ್ವಯಂಭು | 7 | 120 |
| | VI | ಆರುಣೀ ದೇವತಾ | 6 | 66 |
| | VII | ಸಾಂಹಿತೀ ದೇವತಾ | 5 | 107 |
| ಬ್ರಾಹ್ಮಣ | VIII | ವಾರುಣೀ ದೇವತಾ | | |
| | IX | ಯಾಜ್ಞಿಕೀ ದೇವತಾ | | |

ಹೀಗೆ ಒಟ್ಟು 7 ಕಾಂಡಗಳೂ, 44 ಪ್ರಪಾಠಕಗಳೂ, 651 ಅನುವಾಕಗಳೂ ಇದರಲ್ಲಿವೆ. ಇಲ್ಲಿ ಕರ್ಮಾನುಗುಣ ಯಜುಸ್ಸುಗಳಿರುವುದೇ ಹೊರತು ಋಷಿದೇವತಾದಿ ಕ್ರಮಾನುಸಾರದ ಸೂಕ್ತಗಳಿಲ್ಲದ್ದರಿಂದ ಈ ಸಂಹಿತೆಗೆ ಅನುಕ್ರಮಣಿಗಳೂ ಇಲ್ಲ. ಒಂದೊಂದು ಅನುವಾಕದಲ್ಲೂ ಇಂತಿಷ್ಟೇ ಪದಗಳೆಂದು ಇಲ್ಲಿ ಲೆಕ್ಕ ಮಾಡಿ ಹೇಳುವ ರೂಢಿಯಿದೆ. ತೈತ್ತಿರೀಯಸಂಹಿತೆಯಂತೆ ಮೈತ್ರಾಯಣೀಯ ಹಾಗು ಕಠಸಂಹಿತೆಗಳೂ ಗದ್ಯಪದ್ಯಾತ್ಮಕವಾಗಿವೆ. ಮೈತ್ರಾಯಣೀಯದಲ್ಲಿ ಕಾಂಡಸಂಖ್ಯೆ 4. ಕಠದಲ್ಲಿ 5. ಕಪಿಷ್ಠಲಕಠಸಂಹಿತೆ ಅಂಶಿಕವಾಗಿ ಮಾತ್ರ ದೊರತಿದೆ. ಕೃಷ್ಣಯಜುರ್ವೇದದ ನಾಲ್ಕು ಸಂಹಿತೆಗಳಲ್ಲಿಯೂ ಋಗ್ವೇದದಿಂದಲೇ ಅಳವಡಿಸಿಕೊಂಡಿರುವ ಮಂತ್ರಪಾಠಗಳು ಹೆಚ್ಚಾಗಿವೆ. ಆದ್ದರಿಂದ ಪ್ರತ್ಯೇಕವಾಗಿ ಅವುಗಳ ವಿವೇಚನೆಯು ಅಗತ್ಯವಿಲ್ಲ.

ಅಗ್ನ್ಯಾಧಾನ, ಪುನರಾಧಾನ, ಅಗ್ನಿಹೋತ್ರಹೋಮ, ದರ್ಶಪೂರ್ಣಮಾಸ, ಪಿಂಡಪಿತೃಯಜ್ಞ, ಸಾಕಂಪ್ರಸ್ಥಾಯೀ, ದಾಕ್ಷಾಯಣ, ಚಾತುರ್ಮಾಸ್ಯ, ಹೌತ್ರ, ಅಗ್ನಿಷ್ಟೋಮ, ಸವಿಷ್ಟಯಜು, ಅವಭೃಥ, ಪ್ರವರ್ಗ್ಯ, ಸೋಮಯಾಗದ ಪ್ರಕಾರಗಳಾದ ಅಗ್ನಿಷ್ಟೋಮ, ಉಕ್ಥ್ಯ, ಅಪ್ತೋರ್ಯಾಮ, ವಾಜಪೇಯ, ರಾಜಸೂಯ, ಅಶ್ವಮೇಧ, ಮಹಾವ್ರತ, ಸೌತ್ರಾಮಣಿ, ಪುರುಷಮೇಧ, ಅಗ್ನಿಷ್ಟುತ್, ಪಂಚಶಾರದೀಯ, ಪಿತೃಮೇಧ, ಸವಗಳು, ಸತ್ರಗಳು, ಹೋಮಗಳು, ಇಷ್ಟಿಗಳು—ಇವು ತೈತ್ತಿರೀಯಸಂಹಿತೆಯ ವಿಷಯಗಳಾಗಿವೆ. ಇದಕ್ಕೆ ಸಂಬಂಧಿಸಿದಂತೆ ಅಗ್ನಿಮಂಥನ, ಕೃಷಿ, ಪಶುಯಾಗಪ್ರಕ್ರಿಯೆ, ಆಯುಷ್ಕರ್ಮ, ಕಟ್ಟಿಗೆಯನ್ನು ತಯಾರಿಸುವದು, ಸ್ವಯಂಪಾಕ, ಗೃಹವಸ್ತುಗಳು, ಕುಂಬಾರನ ಕೆಲಸ, ನೇಯ್ಗೆಯವನ ಕೆಲಸ, ಲೋಹಕಾರ ಕೆಲಸ, ಹೊಲಿಗೆಯ ಕೆಲಸ, ಪಶುಪಾಲನೆ, ರಥನಿರ್ಮಾಣ, ಸಂಗೀತ ವಾದ್ಯಗಳು—ಇತ್ಯಾದಿ ಲೌಕಿಕವಿಷಯಗಳೂ ಬರುತ್ತವೆ.

ವಾಜಸನೇಯಿಸಂಹಿತೆಯಲ್ಲಿಯೂ ವಿಷಯಗಳು ಇವೇ ಆಗಿವೆ. ಆದರೆ ಇಲ್ಲಿ ಗದ್ಯವಿಲ್ಲ. ಕೇವಲ ಮಂತ್ರಭಾಗವೂ ಕೃಷ್ಣಯಜುರ್ವೇದಕ್ಕಿಂತ ಕಡಿಮೆಯಿದೆ, ಒಟ್ಟು ಅಧ್ಯಾಯ ಸಂಖ್ಯೆ 40. ಕಡೆಯ 15 ಅಧ್ಯಾಯಗಳು ಪಶ್ಚಾತ್ಕಾಲೀನ ಪ್ರಕ್ಷೇಪಗಳೆಂದು ಹೇಳುವದುಂಟು. 'ವಾಜಸನೇಯ' ಎಂಬುದು ಶಾಖಾಪ್ರವರ್ತಕ ಋಷಿಯಾದ ಯಾಜ್ಞವಲ್ಕ್ಯನ ನಾಮಾಂತರ. ಇದು ಕೃಷ್ಣಯಜುರ್ವೇದವಾದ ಮೇಲೆ ಸಂಕಲಿತವಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಈ ಸಂಹಿತೆಗಳ ಪದಪಾಠಗಳೂ ಉಪಲಬ್ಧವಿವೆ. ಈ ಮಂತ್ರಗಳಲ್ಲಿಯೂ ಪ್ರಾರ್ಥನೆಗಳ, ಅಭಿಚಾರಾದಿ ಕರ್ಮಗಳ, ಶಾಂತಿಕರ್ಮಗಳ ಮತ್ತು ಮಾಂತ್ರಿಕ ಪ್ರಯೋಗಗಳ ಅಭಿವ್ಯಕ್ತಿಯಿರುವುದುಂಟು.

ಸಾಹಿತ್ಯದೃಷ್ಟಿಯಿಂದ ಓದುವವರಿಗೆ ಕೃಷ್ಣಯಜುರ್ವೇದ ಕುತೂಹಲಕಾರಿಯಾಗಿರುವುದು. ಏಕೆಂದರೆ ಅದೇ ಭಾರತೀಯ ಗದ್ಯದ ಪ್ರಥಮ ಪ್ರಕಟನೆಯಾಗಿದೆ.

### (3) ಸಾಮವೇದ

ಸಾಮವೇದಶಾಖೆಗಳು ಒಂದು ಸಹಸ್ರವೆಂದು 'ಚರಣವ್ಯೂಹ'ದಲ್ಲಿ ಉಕ್ತವಾಗಿದ್ದರೂ ಪೂರ್ಣವಾಗಿ ಉಪಲಬ್ಧವಿರುವವು ಕೆಲವೇ; ರಾಣಾಯಣೀಯ, ಕೌಥುಮ ಮತ್ತು ಜೈಮಿನೀಯ



ಎಂಬವು ಪ್ರಚಾರದಲ್ಲಿರುವ ಮೂರು ಸಾಮಶಾಖೆಗಳು. ಸಾಮವೇದಸಂಹಿತೆಯಲ್ಲಿ ಎರಡು ಭಾಗಗಳಿವೆ :— (1) ಪೂರ್ವ ಆರ್ಚಿಕ, (2) ಉತ್ತರಾರ್ಚಿಕ. ಇವೆರಡರಲ್ಲೂ ಹೆಚ್ಚಾಗಿ ಋಗ್ವೇದೀಯ ಮಂತ್ರಗಳನ್ನೇ ಗಾನೋಪಯೋಗಿದೃಷ್ಟಿಯಿಂದ ಬೇರೆ ಸ್ವರ ಕ್ರಮಾನುಗುಣವಾಗಿ ಉದ್ಧರಿಸಿರುವದನ್ನು ನೋಡುತ್ತೇವೆ. ಅವೂ ಋಗ್ವೇದದ ಎಂಟು, ಒಂಬತ್ತನೆಯ ಮಂಡಲಗಳಿಂದಲೇ ಆಯ್ದವು ಹೆಚ್ಚು. ಇವುಗಳಲ್ಲಿ ಹೆಚ್ಚಿನವು ಗಾಯತ್ರೀ ಮತ್ತು ಗಾಯತ್ರೀ-ಪಂಕ್ತೀ, ಜಗತೀ–ಪಂಕ್ತೀ ಛಂದಸ್ಸುಗಳ ಮಿಶ್ರಣವಾದ "ಪ್ರಗಾಥ" ಛಂದಸ್ಸುಗಳಲ್ಲಿವೆ. ಋಕ್ಕು ಗಾನಕ್ಕೆ ಯೋನಿಯೆಂದು ಭಾವಿಸಲಾಗಿತ್ತು. ಸಾಮವೆಂದರೆ ಗಾನವೇ. ಆರ್ಚಿಕವೆಂದರೆ 585 ಯೋನಿಗಳ ಸಂಗ್ರಹ ; ಉತ್ತರಾರ್ಚಿಕದಲ್ಲಿ ಅಗ್ನಿ, ಇಂದ್ರ, ಸೋಮ ಈ ಮುಖ್ಯ ದೇವತಾಕ್ರಮಾನುಸಾರ ಗಾನಕ್ರಮವನ್ನು ಸೂಚಿಸುವ ಋಕ್ಸಂಗ್ರಹವಿದೆ. ಯಜ್ಞದಲ್ಲಿ ಉದ್ಗಾತೃವಿನ ಹಾಡುಗಾರಿಕೆಯ ಕೈಪಿಡಿಗಳಾವೆ ಇವು. ಯೋನಿಗಳ ಅಕ್ಷರಗಳನ್ನು ರಾಗಾನುಸಾರ ಎಳೆಯುವುದು, ಪುನರಾವೃತ್ತಿ ಮಾಡುವದು, 'ಹೋಯಿ', 'ಹೋಈ,' 'ಹುವಾ', ಇತ್ಯಾದಿ ಪ್ರಕ್ಷೇಪಗಳನ್ನು ಅಥವಾ ಸ್ತೋಭಗಳನ್ನು ಸೇರಿಸುವುದು; ಸಪ್ತಸ್ವರಗಳನ್ನು ಬೇರೆ ಬೇರೆಯಾಗಿ ಗುರುತಿಸುವುದು ಇವು ಸಾಮವೇದದ ಗಾನಪ್ರಕಾರದಲ್ಲಿ ಅಂತರ್ಗತವಾಗಿವೆ. 'ಬೃಹತ್' 'ರಥಂತರ' ಮುಂತಾದ ಸಾಮಗಾನಪ್ರಭೇದಗಳು ಋಗ್ವೇದದಷ್ಟೇ ಪ್ರಾಚೀನವಾದವು. ಸಾಮಗಾನದಲ್ಲಿ ಅದ್ಭುತ ಶಕ್ತಿಯಿದೆಯೆಂದು ನಂಬಲಾಗುತ್ತಿತ್ತು. ಇಲ್ಲಿಯ ಮಂತ್ರಗಳಲ್ಲಿಯೂ ಸ್ತೋತ್ರಗಳಂತೆ ಅಭಿಚಾರಕರ್ಮಪರ ಋಕ್ಕುಗಳನ್ನೂ ಕಾಣಬಹುದು. ಭಾರತೀಯ ಸಂಗೀತದಲ್ಲಿ ಮೂಲಸ್ರೋತ ಸಾಮವೇದದಲ್ಲಿಯೆಂಬುದು ಅದರ ವೈಶಿಷ್ಟ್ಯ. ಸಾಹಿತ್ಯದೃಷ್ಟಿಯಿಂದ ಅದರ ಮಹತ್ತ್ವ ಬೇರೆ ಏನೂ ಇಲ್ಲ.

ಸಾಮಗಾನಗಳಲ್ಲಿ ಮುಖ್ಯವಾಗಿ ನಾಲ್ಕು ಭಾಗಗಳನ್ನು ಮಾಡಿದ್ದಾರೆ : (1) ಗ್ರಾಮಗೇಯ ಗಾನ, ಅಥವಾ ವೇಯಗಾನ, (2) ಆರಣ್ಯಕ ಗಾನ, (3) ಊಹಗಾನ, ಮತ್ತು (4) ಊಹ ಗಾನ, ಮೊದಲ ಎರಡು ಪ್ರಕೃತಿಗಾನಗಳಾದರೆ ಕಡೆಯ ಎರಡು ವಿಕೃತಿಗಳು.

### (4) ಅಥರ್ವವೇದಸಂಹಿತೆ

ಅಥರ್ವವೇದದಲ್ಲಿ ಹೆಚ್ಚಾಗಿ ಅಭಿಚಾರ, ಮೋಹನ ಮುಂತಾದ ಮಂತ್ರಗಳಿರುವುದರಿಂದ ಅದನ್ನು ಜನತೆಯ ವೇದವೆನ್ನಬಹುದು. "ಅಥರ್ವನ್" ಶಬ್ದ ಪುರೋಹಿತ ಎಂಬರ್ಥದಲ್ಲಿ ಇರಾನಿನ ಅವೆಸ್ತಾದಲ್ಲಿಯೂ ಕಾಣಬರುತ್ತದೆ. ಅಗ್ನಿಪೂಜಕ ಮಂತ್ರವಾದಿಗಳೇ ಅಥರ್ವಾಂಗಿರಸರಾಗಿದ್ದಿರಬೇಕು. ಇಲ್ಲಿಯೂ ಋಗ್ವೇದದ್ದೇ ಭಾಷೆ ಮತ್ತು ಛಂದಸ್ಸು. ಆದರೆ ಅಥರ್ವಣಮಂತ್ರಗಳು ಶಾಂತಿಪುಷ್ಟಿಮಂತ್ರಗಳು ಮತ್ತು ಆಂಗಿರಸಮಂತ್ರಗಳು ಅಭಿಚಾರ, ಮಾರಣ, ವಶೀಕರಣಾದಿ ಮಂತ್ರಗಳು. ಅಥರ್ವಣಮಂತ್ರಗಳಲ್ಲಿ ರೋಗಪರಿಹಾರಕ್ಕಾಗಿರುವ ಮಂತ್ರಗಳು ಸೇರುತ್ತವೆ; ಆಂಗಿರಸಮಂತ್ರಗಳಲ್ಲಿ ಶತ್ರುಗಳ ಹಾಗು ದುಷ್ಟರ, ಪ್ರೇತಪಿಶಾಚಾದಿಗಳ ಉಚ್ಚಾಟನೆಗೆ ಹಾಗೂ ನಾಶಕ್ಕೆ ಬಳಸುವ ಮಂತ್ರ

ಗಳಿರುತ್ತವೆ. ಅವೆರಡನ್ನೂ ಕೂಡಿಸಿ ಅಥರ್ವಾಂಗಿರಸವೇದವೆಂದೂ ಇದನ್ನು ಕರೆಯುವುದುಂಟು. ಅಥರ್ವವೇದವೆಂಬುದು ಅಥರ್ವಾಂಗಿರಸವೇದವೆಂಬುದರ ಸಂಕ್ಷಿಪ್ತರೂಪ. ಇದರಲ್ಲಿ 760 ಸೂಕ್ತಗಳೂ, ಸುಮಾರು 6.000 ಋಕ್ಕುಗಳೂ ಇವೆ. ಇವುಗಳಲ್ಲಿ ಏಳನೆಯ ಒಂದರಷ್ಟು ಸೂಕ್ತಗಳು ಋಗ್ವೇದದಿಂದ ತೆಗೆದುಕೊಂಡವೇ ಆಗಿವೆ. ಇದರಲ್ಲಿ ಒಟ್ಟು 20 ಕಾಂಡಗಳು, 48 ಪ್ರಪಾಠಕಗಳು. ಉಪಲಬ್ಧವಿರುವ ಅಥರ್ವಶಾಖೆಗಳು ಎರಡು—ಶೌನಕ ಮತ್ತು ಪೈಪ್ಪಲಾದ.

## ಅಥರ್ವಸಂಹಿತಾಕಾಲ

ಋಗ್ವೇದಸಂಹಿತೆಯಾದ ನಂತರವೇ ಅಥರ್ವಸಂಹಿತೆಯಾಯಿತೆಂದು ಸಿದ್ಧಮಾಡುವ ಅನೇಕ ಅಂಶಗಳಿವೆ : (1) ಮೊದಲುಮೊದಲು ವೇದವೆಂದರೆ 'ತ್ರಯೀ' ಎಂದೇ ಪರಿಗಣನೆಯಿದ್ದಿತು ; ಅಥರ್ವವನ್ನು ವೇದವೆಂದು ಪರಿಗಣಿಸುತ್ತಿರಲಿಲ್ಲ ; (2) ಋಗ್ವೇದ ಮತ್ತು ಅಥರ್ವವೇದಗಳ ಭೂಗೋಲಜ್ಞಾನ ಹಾಗೂ ಸಂಸ್ಕೃತಿಯಲ್ಲಿ ಅಂತರ ಸ್ಪಷ್ಟವಾಗಿದೆ. ಋಗ್ವೇದೀಯ ಸಿಂಧು ನದೀತೀರದ ಆರ್ಯರು ಆಗ್ನೇಯ ದಿಕ್ಕಿನಲ್ಲಿ ಮುಂದೆಮುಂದೆ ನಡೆದು ಗಂಗಾನದಿಯನ್ನು ಅಥರ್ವವೇದಕಾಲಕ್ಕೆ ತಲಪಿದ್ದರು ; ಬಂಗಾಳದ ಹುಲಿ ಅಥರ್ವವೇದದಲ್ಲಿ ಉಕ್ತವಾಗಿದೆ ; ಋಗ್ವೇದದಲ್ಲಿ ಉಕ್ತವಾಗಿಲ್ಲ ; (3) ಬ್ರಾಹ್ಮಣರು ಅಥರ್ವವೇದಕಾಲಕ್ಕೆ ಭೂಸುರರೆಂದು ಹೆಚ್ಚಿನ ಮನ್ನಣೆ ಗಳಿಸಿದ್ದರು ; (4) ಆಭಿಚಾರಾದಿ ಜನಪ್ರಿಯವಿಷಯಗಳು ಬಹು ಪ್ರಾಚೀನವಾದರೂ ಅವಕ್ಕೆ ಯಜ್ಞಮಂತ್ರಗಳೊಡನೆ ಸಮಾನಸ್ಥಾನ ದೊರಕಿಸುವ ಯತ್ನ ಈ ಸಂಹಿತೆಯಲ್ಲಾಗಿರುವದರಿಂದ ಸಂಹಿತಾಕಾಲ ಋಗ್ವೇದಕ್ಕಿಂತ ಅರ್ವಾಚೀನವಿರಬೇಕು ; (5) ಅಥರ್ವವೇದದಲ್ಲಿ ಬರುವ ಜಗದುತ್ಪತ್ತಿವಾದಗಳೂ, ವೇದಾಂತಪರ ಬ್ರಹ್ಮವಿಚಾರಗಳೂ ಉತ್ತರಕಾಲೀನ ವಿಷಯಗಳೇ ಎಂದು ತೋರುತ್ತವೆ. ಆದರೆ ಇಲ್ಲಿರುವ ಪ್ರತಿಯೊಂದು ಸೂಕ್ತವೂ ಋಗ್ವೇದದ ಅನಂತರವೇ ರಚಿತವಾದುದೆಂದು ಏನೂ ಹೇಳುವಂತಿಲ್ಲ. ಕೆಲವೊಂದು ಋಗ್ವೇದಕ್ಕಿಂತ ಪ್ರಾಚೀನ ಸೂಕ್ತಗಳೂ ಇಲ್ಲಿ ಸೇರಿರಬಹುದು. ಅಥರ್ವವೇದದ ಪ್ರಚಾರ ಬಹಳಷ್ಟು ನಷ್ಟವಾಗಿಹೋಗಿದೆ. ಇದಕ್ಕೆ ಅದರ ವಿಷಯದ ಸ್ವರೂಪವೇ ಕಾರಣವಿರಬಹುದು. ಇದನ್ನು ಮುಂದೆ ಬ್ರಹ್ಮವೇದವೆಂದು ಹೇಳಿ ಯಜ್ಞಾಂಗವಾಗುವಂತೆ ಮಾಡಿರಬಹುದು. ಕಾವ್ಯರಸಗಳಿಗೆಲ್ಲ ಅಥರ್ವವೇ ಮೂಲಸ್ರೋತವೆಂದು ಭರತನಾಟ್ಯ ಶಾಸ್ತ್ರದಲ್ಲಿ ಹೇಳಲಾಗಿದೆ ಆಯುರ್ವೇದಕ್ಕೂ, ಧನುರ್ವೇದಕ್ಕೂ ಇದೇ ಮೂಲ.

ಇಲ್ಲಿರುವ ಲೋಕೋಪಯುಕ್ತ ವಿಷಯಗಳನ್ನೆಲ್ಲ ಭೈಷಜ್ಯ, ಆಯುಷ್ಯಕರ. ಪೌಷ್ಟಿಕ, ಆಭಿಚಾರಿಕ, ಪ್ರಾಯಶ್ಚಿತ್ತ, ಸ್ತ್ರೀಕರ್ಮ, ರಾಜಕರ್ಮ, ಸೌಮನಸ್ಯ, ಪಾಪನಿರ್ಹರಣ, ಬ್ರಹ್ಮಣ್ಯ ಎಂಬ ವರ್ಗಗಳಲ್ಲಿ ತರಬಹುದು. ಇವಲ್ಲದೆ ತಾಯ್ನಾಡನ್ನು ದೇವತೆಯೆಂದು ವಿಸ್ತಾರವಾಗಿ ಕಾವ್ಯಮಯವಾಗಿ ಬಣ್ಣಿಸುವ ಪೃಥ್ವೀಸೂಕ್ತ, ಸ್ಕಂಭವೆಂದು ಪರಮತತ್ತ್ವವನ್ನು ಪ್ರತಿಪಾದಿಸುವ ಸ್ಕಂಭಸೂಕ್ತ ಮುಂತಾದವೂ ಇದ್ದು ಇಂದಿನ ಸಾಹಿತ್ಯದೃಷ್ಟಿಯಿಂದ ಅಮೂಲ್ಯ ಮಹತ್ತ್ವವನ್ನು ಪಡೆದಿವೆ.



# ಬ್ರಾಹ್ಮಣರು

'ಬ್ರಾಹ್ಮಣಮ್' ಎಂಬ ನಪುಂಸಕಲಿಂಗಶಬ್ದ ಜಾತಿವಾಚಿಯಲ್ಲ; ಗ್ರಂಥವಾಚಿ. ಸಂಹಿತಾ ಮಂತ್ರಗಳ ಯಜ್ಞೋಪಯೋಗಿ ವಿವರಣೆಗಳನ್ನು ಗದ್ಯವಚನಗಳಿಂದ ಮಾಡಿಕೊಡುವ ವೇದಭಾಗಗಳೇ ಬ್ರಾಹ್ಮಣಗಳು. ನಾಲ್ಕು ವೇದಗಳಿಗೂ ಸೇರಿದಂತೆ ಅನೇಕ ಶಾಖಾಪರಂಪರೆಗಳಲ್ಲಿ ಬಂದಿರುವ ಬ್ರಾಹ್ಮಣಗಳೂ ಅನೇಕವಾಗಿವೆ.

ಇವುಗಳಲ್ಲಿ ವಿಧಿ, ಅರ್ಥವಾದ, ಉಪನಿಷದ್ ಮತ್ತು ಆಖ್ಯಾನವೇ ಮೊದಲಾದ ಅಂಶಗಳಿರುತ್ತವೆ. ಇಂತಿಂತಹ ಯಜ್ಞವನ್ನು ಹೀಗೆಹೀಗೆಯೇ ಆಚರಿಸಬೇಕೆಂಬ ನಿಯಮಗಳನ್ನು ಹೇಳತಕ್ಕವೇ ವಿಧಿವಾಕ್ಯಗಳು. ಹೀಗೆ ಮಾಡಿದ್ದರಿಂದ ಇಂತಿಂತಹ ಮಹಾಫಲಗಳು ಬರುತ್ತವೆಂದು ಅತಿಶಯೋಕ್ತಿಯಿಂದ ರಂಜಿತವಾಗಿರುವ ಫಲಶ್ರುತಿಗಳೇ ಅರ್ಥವಾದಗಳು. ಮೀಮಾಂಸಕರು ಅರ್ಥವಾದದಲ್ಲಿ ಗುಣವಾದ, ಅನುವಾದ ಮತ್ತು ಭೂತಾರ್ಥಾನುವಾದಗಳೆಂಬ ಪ್ರಕಾರಗಳನ್ನು ಹೇಳುತ್ತಾರೆ. ಭೂತಾರ್ಥಾನುವಾದದಲ್ಲಿ ಮತ್ತೆ ಸ್ತುತ್ಯರ್ಥವಾದ, ಫಲಾರ್ಥವಾದ, ಸಿದ್ಧಾರ್ಥವಾದ, ನಿರರ್ಥವಾದ, ಪರಕೃತಿ, ಪುರಾಕಲ್ಪಗಳೆಂಬ ಪ್ರಭೇದಗಳನ್ನು ಮಾಡಲಾಗಿದೆ. ವೇದಾಂತವೆನಿಸುವ ಬ್ರಹ್ಮವಿದ್ಯಾವಿಚಾರವೇ ಉಪನಿಷತ್ತೆನಿಸುತ್ತದೆ. ಆದರೆ ಯಜ್ಞಾಂಗವಾಗಿ ಅನೇಕ ಕಥೆ, ಉಪಾಖ್ಯಾನಗಳು ಕೂಡ — ಶುನಶ್ಶೇಪೋಪಾಖ್ಯಾನ ಇತ್ಯಾದಿ—ಬ್ರಾಹ್ಮಣಗಳಲ್ಲಿ ಸುಂದರ ಸಾಹಿತ್ಯಾಂಶದಿಂದ ಬಂಧುರವಾಗಿ ಬರುತ್ತವೆ. ಇಲ್ಲಿ ವೇದಮಂತ್ರಗಳ ಅರ್ಥಗ್ರಹಣೆಗೆ ಅಗತ್ಯಬೀಳುವ ಎಷ್ಟೋ ಪದನಿರ್ವಚನಗಳೂ ಕಾಣಬರುತ್ತವೆ. ವೇದಾರ್ಥಜ್ಞಾನಕ್ಕೆ ಬ್ರಾಹ್ಮಣಗ್ರಂಥಗಳ ಅಧ್ಯಯನ ಅತ್ಯವಶ್ಯ. ಭಾರತೀಯರ ಕರ್ಮಕಾಂಡದ ವಿಸ್ತಾರ-ವೈಶಿಷ್ಟ್ಯಗಳನ್ನು ಅರಿಯಲು ಬ್ರಾಹ್ಮಣಗ್ರಂಥಗಳೇ ಮುಖ್ಯವಾಗಿ ಸಹಾಯಕವಾಗುವ ಗ್ರಂಥಗಳು. ಯಜ್ಞದಿಂದಲೇ ಸರ್ವಪುರುಷಾರ್ಥಗಳೂ ಸಿದ್ಧಿಯಾಗುವವೆಂಬ ಮೂಲತತ್ತ್ವ ಇಲ್ಲಿ ಮೂಡಿಬರುತ್ತದೆ. ಆದರೆ ಸಾಹಿತ್ಯದೃಷ್ಟಿಯಿಂದ ಅಧ್ಯಯನ ಮಾಡುವವರಿಗೆ ಇಲ್ಲಿ ಆಸಕ್ತಿಯನ್ನು ಕೆರಳಿಸುವ ಅಂಶಗಳು ಕಡಿಮೆ ; ಅಸಮಾಸ ಅಥವಾ ಅಲ್ಪಸಮಾಸದ ಇಲ್ಲಿಯ ಗದ್ಯರಚನೆ ಕ್ರಿಯಾಪದ ಭೂಯಿಷ್ಠವೂ ಸರಲವೂ ಆಗಿದ್ದು ಭಾಷಾಧ್ಯಾಯಿಗಳ ಗಮನವನ್ನು ಸೆಳೆಯುತ್ತದೆ.

ಆಧುನಿಕ ವಿದ್ವಾಂಸರ ದೃಷ್ಟಿಯಲ್ಲಿ ಎಲ್ಲ ಬ್ರಾಹ್ಮಣಗಳೂ ಒಂದೇ ಕಾಲದವಲ್ಲ. ಅಥರ್ವವೇದದ "ಗೋಪಥಬ್ರಾಹ್ಮಣ" ಎಲ್ಲಕ್ಕಿಂತ ಈಚೀನದೆನ್ನುತ್ತಾರೆ ; ಪ್ರಾಚೀನ ಬ್ರಾಹ್ಮಣ ಗ್ರಂಥಗಳಲ್ಲಿ ಮುಖ್ಯವಾದುವೆಂದರೆ ಕೆಳಗಿನವು :—

## ಐತರೇಯ ಬ್ರಾಹ್ಮಣ :

ಇದು ಋಗ್ವೇದದ್ದು. ಇದರಲ್ಲಿ ಎಂಟು ಪಂಚಿಕೆಗಳು. ಒಂದೊಂದು ಪಂಚಿಕೆಯಲ್ಲಿ ಐದು ಅಧ್ಯಾಯಗಳೂ ಇವೆ. ಮಹಿದಾಸ ಐತರೇಯನು ಇದನ್ನು ಸಂಗ್ರಹಿಸಿರಬೇಕು. ಇದರಲ್ಲಿ ಮುಖ್ಯವಾಗಿ ಸೋಮಯಾಗ (ಅಗ್ನಿಷ್ಟೋಮ). ಅಗ್ನಿಹೋತ್ರ, ರಾಜಸೂಯಯಾಗಗಳ ವರ್ಣನೆಯಿದೆ. ಶುನಶ್ಶೇಪೋಪಾಖ್ಯಾನ ಬರುವುದು ಇಲ್ಲಿಯೇ.

ಕೌಷೀತಕೀಬ್ರಾಹ್ಮಣ :

ಶಾಂಖಾಯನ ಬ್ರಾಹ್ಮಣವೆಂದೂ ಇದಕ್ಕೆ ಹೆಸರು. ಅಧ್ಯಾಯ ಸಂಖ್ಯೆ 30. ಮೊದಲನೆಯ ಆರು ಅಧ್ಯಾಯಗಳಲ್ಲಿ ಆಗ್ನ್ಯಾಧಾನ, ಅಗ್ನಿಹೋತ್ರ, ದರ್ಶಪೂರ್ಣಮಾಸೇಷ್ಟಿ, ಋತುಯಾಗ ಇತ್ಯಾದಿಗಳ ವಿಧಿಗಳಿವೆ ; ಮಿಕ್ಕವುಗಳಲ್ಲಿ ಸೋಮಯಾಗದ ವಿವರಣೆ ಬರುತ್ತದೆ.

ಪಂಚವಿಂಶ ಅಥವಾ ತಾಂಡ್ಯ ಮಹಾಬ್ರಾಹ್ಮಣ :

ಇಪ್ಪತ್ತೈದು ಅಧ್ಯಾಯಗಳಿರುವ ಸಾಮವೇದಬ್ರಾಹ್ಮಣವಿದು. ಅತಿಪ್ರಾಚೀನ ಬ್ರಾಹ್ಮಣಗಳಲ್ಲಿ ಇದು ಒಂದು. ಇಲ್ಲಿಯೂ ಅನೇಕ ಕಥೆಗಳು ಬರುತ್ತವೆ. ವ್ರಾತ್ಯರನ್ನು ಸಂಸ್ಕಾರಗಳ ಮೂಲಕ ಬ್ರಾಹ್ಮಣವರ್ಣದಲ್ಲಿ ಸೇರಿಸಿಕೊಳ್ಳುವ ವಿಧಿಗಳು ಇಲ್ಲಿ ಬರುವುದು ಕುತೂಹಲಕಾರಿಯಾಗಿದೆ.

ಷಡ್ವಿಂಶಬ್ರಾಹ್ಮಣ :

ಇದು ಪಂಚವಿಂಶಬ್ರಾಹ್ಮಣದ ಪರಿಶಿಷ್ಟ ; ಇದು 26ನೆಯ ಅಧ್ಯಾಯವೇ ಆಗಿದೆ. ಇದರ ಕಡೆಯ ಅಧ್ಯಾಯಕ್ಕೆ "ಅದ್ಭುತಬ್ರಾಹ್ಮಣ" ವೆನ್ನುವರು. ಇದರಲ್ಲಿ ವೇದಾಂಗಗ್ರಂಥಗಳಲ್ಲಿರುವಂತೆ ಶಕುನ, ಅಪಶಕುನ, ಅರಿಷ್ಟಾದಿಗಳ ವಿಚಾರ ಬರುತ್ತದೆ.

ಜೈಮಿನೀಯಬ್ರಾಹ್ಮಣ :

ಇದೂ ಸಾಮವೇದದ ಬ್ರಾಹ್ಮಣವೇ.

ಶತಪಥಬ್ರಾಹ್ಮಣ :

ಇದು ಶುಕ್ಲಯಜುರ್ವೇದದ ಪ್ರಮುಖ ಬ್ರಾಹ್ಮಣಗ್ರಂಥ. ಇದರಲ್ಲಿ 100 ಅಧ್ಯಾಯಗಳಿವೆ. ಶತಪಥವೆಂಬ ಹೆಸರು ಬರಲು ಅದೇ ಕಾರಣ. ಬ್ರಾಹ್ಮಣಸಾಹಿತ್ಯದಲ್ಲಿಯೇ ಇದು ಅತ್ಯಂತ ವಿಸ್ತೃತವಾಗಿದ್ದು ಮಹತ್ತ್ವದ್ದಾಗಿದೆ. ಶುಕ್ಲಯಜುರ್ವೇದದ ಕಾಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಪಾಠಗಳಲ್ಲಿಯೂ ಇದು ಉಪಲಬ್ಧವಿದೆ. ಇದರ ಮೊದಲ ಐದು ಕಾಂಡಗಳು ಯಾಜ್ಞವಲ್ಕ್ಯಕಾಂಡವಾಗಿವೆ ; ಮುಂದಿನ ಐದು ಕಾಂಡಗಳಲ್ಲಿ ಯಾಜ್ಞವಲ್ಕ್ಯನ ಹೆಸರೇ ಬರುವುದಿಲ್ಲ, ಶಾಂಡಿಲ್ಯನ ಹೆಸರು ಮತ್ತೆ ಮತ್ತೆ ಬರುತ್ತದೆ. ಈ ಬ್ರಾಹ್ಮಣದ ಮೊದಲ ಒಂಬತ್ತು ಕಾಂಡಗಳು ವಾಜಸನೇಯಿಸಂಹಿತೆಯ ವ್ಯಾಖ್ಯಾರೂಪವಾಗಿವೆ. ಇವುಗಳಲ್ಲಿ ಮೊದಲ ಹತ್ತು ಕಾಂಡಗಳಷ್ಟೇ ಪ್ರಾಚೀನವೆಂದೂ, ಮಿಕ್ಕವು ಕಾಲಾಂತರಗಳಲ್ಲಿ ಸಂಕಲಿತವಾದ ವಿರಬಹುದೆಂದೂ ವಿದ್ವಾಂಸರ ಊಹೆ.

ಇಲ್ಲಿ ಯಜ್ಞವಿಧಿಗಳ ವಿವರಗಳು ಬರುವವಷ್ಟೇ ಅಲ್ಲದೆ ಅವಕ್ಕೆ ಸಾಂಕೇತಿಕವಾದ ಆಧ್ಯಾತ್ಮಿಕ ವಿಚಾರಸರಣಿಯೂ ಕಾಣುತ್ತದೆ. ಇವರಲ್ಲಿ ಮಿಥಿಲೆಯ ರಾಜನಾದ ಜನಕ, ಪ್ರಾಚೀನ ಐತಿಹಾಸಿಕ ಚಕ್ರವರ್ತಿಗಳಾದ ದುಷ್ಯಂತ, ಭರತ, ಜನಮೇಜಯ, ಮನು ಮುಂತಾದವರನ್ನು



ಕುರಿತ ಉಪಾಖ್ಯಾನಗಳೂ ಬಂದಿದ್ದು, ಅವು ಇಂದಿಗೂ ಪ್ರಾಚೀನ ಕಥಾಸಾಹಿತ್ಯದ ಅಭ್ಯಾಸಕ್ಕೆ ಸಾಮಗ್ರಿಯನ್ನೊದಗಿಸುತ್ತವೆ.

ತೈತ್ತಿರೀಯಬ್ರಾಹ್ಮಣ :

ಇದು ಕೃಷ್ಣಯಜುರ್ವೇದಕ್ಕೆ ಸೇರಿದ ಬ್ರಾಹ್ಮಣ. ಇದು ಸ್ವರಸಹಿತವಾಗಿ ಉಪಲಬ್ಧವಿದ್ದು ಪ್ರಾಚೀನತರ ಬ್ರಾಹ್ಮಣಗಳಲ್ಲಿ ಒಂದಾಗಿದೆ. ಸಂಹಿತಾಭಾಗದಲ್ಲಿ ಬರುವ ಬ್ರಾಹ್ಮಣದ ವಿಸ್ತರಣೆಯೇ ಇದೆಂದರೂ ಸಲ್ಲುತ್ತದೆ. ಇದರಲ್ಲಿಯೂ ಮೂರನೇ ಕಾಂಡಕ್ಕಿಂತ ಉಳಿದೆರಡು ಕಾಂಡಗಳ ಭಾಗಗಳು ಅರ್ವಾಚೀನವೆಂದು ವಿದ್ವಾಂಸರು ಭಾವಿಸುತ್ತಾರೆ. " ಈ ಬ್ರಾಹ್ಮಣದಲ್ಲಿ ಪ್ರಸ್ತುತವಾಗಿರುವ ಅಸಂಖ್ಯಾವಾದ ಯಾಗಗಳ ವೈವಿಧ್ಯ ಹಾಗೂ ಮಂತ್ರಗಳ ಸಮೃದ್ಧಿ ನಮ್ಮನ್ನು ಬೆರಗುಗೊಳಿಸುವುದು ". ಆ ಕಾಲದಲ್ಲಿ ಅಸಂಖ್ಯ ಯಾಗಗಳ ಅನುಷ್ಠಾನ ಪ್ರಚಲಿತ ವಿದ್ದಿತು. ಆಹಿತಾಗ್ನಿಯನ್ನಿಟ್ಟುಕೊಳ್ಳದವರೇ ಇರಲಿಲ್ಲವೋ ಎನಿಸುತ್ತದೆ. ಗೋವುಗಳು ಮತ್ತು ಸುವರ್ಣವನ್ನು ಯಜ್ಞದಕ್ಷಿಣೆಯಾಗಿ ಕೊಡುತ್ತಿದ್ದರು.

ಈ ಬ್ರಾಹ್ಮಣದಲ್ಲಿ ಸಂವತ್ಸರ, ಪರಿವತ್ಸರ, ಇದಾವತ್ಸರ ಇತ್ಯಾದಿ ಜ್ಯೋತಿಷ ಶಾಸ್ತ್ರೀಯ ವಿಷಯಗಳು ವಿವರಿಸಲ್ಪಟ್ಟಿವೆ. ನಕ್ಷತ್ರೇಷ್ಟಿಯ ಸಂದರ್ಭದಲ್ಲಿ ಕೃತ್ತಿಕೆಯಿಂದಾರಂಭ ವಾಗುವ 14 ದೇವನಕ್ಷತ್ರಗಳನ್ನೂ, ಅನುರಾಧಾದಿಂದ ಆರಂಭವಾಗುವ 14 ಯಮನಕ್ಷತ್ರ ಗಳನ್ನೂ ಹೇಳಲಾಗಿದೆ. ಇದರಲ್ಲಿ ವೇದಾಧ್ಯಯನದ ಮಹತ್ತ್ವವನ್ನೂ ಚೆನ್ನಾಗಿ ವಿವರಿಸಲಾಗಿದೆ. ಇದು ಉದ್ಧರಿಸುವ ಮಂತ್ರಗಳಲ್ಲಿ ಋಗ್ವೇದಮಂತ್ರಗಳೂ ಹಲವಾರಿವೆ. ಇಡಿಯ ನಾಸದೀಯ ಸೂಕ್ತವೇ ಇಲ್ಲಿ ಉದ್ಧೃತವಾಗಿದೆ. ಉಪನಿಷತ್ತುಗಳ ಬ್ರಹ್ಮವಾದದ ಪರಿಚಯವೂ ಈ ಬ್ರಾಹ್ಮಣಕ್ಕಿರುವದು ಗೊತ್ತಾಗುತ್ತದೆ. ತೈತ್ತಿರೀಯಬ್ರಾಹ್ಮಣದ ಸಣ್ಣ ಸಣ್ಣ ವಾಕ್ಯಗಳ ಗದ್ಯಶೈಲಿಗೆ ಒಂದು ಉದಾಹರಣೆ ಕೊಡಬಹುದು : ತ್ರಯೀವಿದ್ಯೆಯ ಮಹತ್ತ್ವವನ್ನು ಪ್ರತಿಪಾದಿಸುವ ವಾಕ್ಯಾವಲಿಯಿದು :

"ಭರದ್ವಾಜೋ ಹ ತ್ರಿಭಿರಾಯುರ್ಭಿಃ ಬ್ರಹ್ಮಚರ್ಯಮುವಾಸ । ತಗ್ಂ ಹವಿ
ಜೀರ್ಣಗ್ಗ್ಂ ಸ್ಥವಿರಗ್ಂ ಶಯಾನಂ। ಇಂದ್ರ ಉಪವ್ರಜ್ಯೋವಾಚ । ಭರದ್ವಾಜ ।
ಯತ್ತೇ ಚತುರ್ಥಮಾಯುರ್ದದ್ಯಾಂ । ಕಿಮೇನೇನ ಕುರ್ಯಾ ಇತಿ ।
ಬ್ರಹ್ಮಚರ್ಯಮೇವೈನೇನ ಚರೇಯಮಿತಿ ಹೋವಾಚ । ತಗ್ಂ ಹತ್ರೀನ್
ಗಿರಿರೂಪಾನವಿಜ್ಞಾತಾನಿವ ದರ್ಶಯಾಂಚಕಾರ । ತೇಷಾಗ್ಂ ಹೈಕೈಕಸ್ಮಾನ್ಮುಷ್ಟಿ
ನಾದದೇ । ಸ ಹೋವಾಚ । ಭರದ್ವಾಜೇತ್ಯಾಮಂತ್ರ್ಯ । ವೇದಾ ವಾ ಏತೇ ।
ಅನಂತಾ ವೈ ವೇದಾಃ । ಏತದ್ವಾ ಏತೈಸ್ತ್ರಿಭಿರಾಯುರ್ಭಿರನ್ವವೋಚಥಾಃ ।
ಅಥತ ಇತರದನನೂಕ್ತಮೇವ । ಏಹೀಮಂ ವಿದ್ಧಿ ।
ಅಯಂ ವೈ ಸರ್ವವಿದ್ಯೇತಿ ।......ಏಷೋ ಏವ ತ್ರಯೀ ವಿದ್ಯಾ ।

(ತೈತ್ತಿರೀಯಬ್ರಾಹ್ಮಣ, 3—10—46. 47)

ಈ ಕಾಲಕ್ಕಾಗಲೇ ಚಾತುರ್ವರ್ಣ್ಯವ್ಯವಸ್ಥೆ ರೂಪಾಂತರಗೊಂಡು ಅನೇಕ ಸಂಕರಜಾತಿಗಳು ಉತ್ಪನ್ನವಾಗಿದ್ದಂತೆ ಕಾಣುತ್ತದೆ. ಯಾಗಕಾಲದಲ್ಲಿ ಋಷಿಗಳು ಬ್ರಹ್ಮವಿಚಾರಗಳನ್ನು ಮಾಡುತ್ತಿದ್ದರು. ಮುಂದಿನ ಪುರಾಣಗಳ ವರಾಹಾವತಾರ ಇತ್ಯಾದಿ ಕಲ್ಪನೆಗಳ ಮೂಲ ಸಾಮಗ್ರಿಯನ್ನೂ ಈ ಬ್ರಾಹ್ಮಣದಲ್ಲಿ ಕಾಣಬಹುದಾಗಿದೆ.

### ಗೋಪಥಬ್ರಾಹ್ಮಣ:

ಇದು ಅಥರ್ವವೇದದ ಬ್ರಾಹ್ಮಣ. ಬ್ರಾಹ್ಮಣಗಳಲ್ಲೆಲ್ಲ ಅತ್ಯಂತ ಅರ್ವಾಚೀನವೆಂದ ವಿದ್ವಾಂಸರಿಂದ ಪರಿಗಣಿಸಲ್ಪಟ್ಟಿದೆ. ಈ ಬ್ರಾಹ್ಮಣವೇ 'ವೈತಾನಸೂತ್ರ' ವೆಂಬ ವೇದಾಂಗ ಗ್ರಂಥವನ್ನು ಅನುಸರಿಸುವುದೂ ಹೀಗೆ ಹೇಳಲು ಒಂದು ಕಾರಣ. ಇಲ್ಲಿಯ ಭಾಷೆಯಲ್ಲಿಯೂ ಅರ್ವಾಚೀನರೂಪಗಳು ಕಾಣಿಸುತ್ತವೆ. ಅನೇಕ ವೇಳೆ ಉಪನಿಷತ್ತುಗಳಿಂದಲೂ ವಾಕ್ಯಗಳನ್ನು ಉದ್ಧರಿಸಲಾಗಿದೆ. ಇದರಲ್ಲಿ ಅಥರ್ವವೇದದ ಮಹಿಮೆ. ಓಮ್ಮ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ಅಥರ್ವವೇದದಿಂದಲೇ ಮಿಕ್ಕ ಎಲ್ಲ ವೇದಗಳೂ, ಓಂಕಾರವೂ ಹುಟ್ಟಿದುವೆಂದು ಇದರ ಹೇಳಿಕೆ. ಇದರಲ್ಲಿ ಕುರು–ಪಾಂಚಾಲ, ಅಂಗ–ಮಗಧ, ಕಾಶಿ–ಕೌಶಲ ಮುಂತಾದ ಪ್ರಾದೇಶಿಕ ಹೆಸರುಗಳೂ ಬರುತ್ತವೆ.

ಒಟ್ಟಿನ ಮೇಲೆ ಬ್ರಾಹ್ಮಣಗ್ರಂಥಗಳಲ್ಲಿ ಉದಾಹೃತವಾದ ಲೌಕಿಕ ಗಾಥೆಗಳನ್ನು ನೋಡಿದರೆ ಆಗಲೇ ಪ್ರಾಚೀನ ಲೌಕಿಕ ಜಾನಪದ ಕಾವ್ಯರಚನೆಯೂ ಆರಂಭವಾಗಿದ್ದ ಅಂಶ ವ್ಯಕ್ತವಾಗುತ್ತದೆ. ಗದ್ಯಸಾಹಿತ್ಯಕ್ಕಂತೂ ಬ್ರಾಹ್ಮಣಗಳೇ ಬುನಾದಿ. ಮುಂದಿನ ಆರು ವೇದಾಂಗಗಳ ವಿಚಾರಸರಣಿಯೂ ಆಗಲೇ ಬೀಜರೂಪದಲ್ಲಿ ಬ್ರಾಹ್ಮಣಗಳಲ್ಲಿ ಕಾಣಿಸುತ್ತದೆ. ಆಧ್ಯಾತ್ಮವಿಚಾರಗಳ ಆರಂಭದೆಸೆಯನ್ನೂ ಇಲ್ಲೇ ನೋಡಬಹುದು. ಆದ್ದರಿಂದ ಇವನ್ನು ಕೇವಲ ಅಪ್ರಬುದ್ಧ ಪುರೋಹಿತರ ಕಗ್ಗಗಳೆಂದು ಕಡೆಗಣಿಸುವುದು ಸರಿಯಲ್ಲ.

## ಆರಣ್ಯಕಗಳು ಮತ್ತು ಉಪನಿಷತ್ತುಗಳು

ನಗರಜೀವನದ ಕೋಲಾಹಲದಿಂದ ದೂರವಿದ್ದು ತಪೋವನಗಳಲ್ಲಿ ಬ್ರಹ್ಮಚರ್ಯನಿಷ್ಠೆಯಿಂದ ತಪಸ್ಗೈಯುತ್ತ ಋಷಿಗಳು ಸಾಕ್ಷಾತ್ಕರಿಸಿದ ಅಧ್ಯಾತ್ಮತತ್ತ್ವಗಳೇ 'ಆರಣ್ಯಕ' ಗಳೆಂದು ಹೇಳಲಾಗಿದೆ; 'ಅರಣ್ಯ ಏವ ಪಾಠ್ಯತ್ವಾದಾರಣ್ಯಕಮಿತೀರ್ಯತೇ' ಎಂದು ಸಾಯಣಾಚಾರ್ಯರ ಭಾಷ್ಯ; ಅರಣ್ಯಗಳಲ್ಲಿಯೇ ಎಂದರೆ ವಾನಪ್ರಸ್ಥರಾದವರು ಮಾತ್ರ ಅಧ್ಯಯನ ಮಾಡಲು ವಿಹಿತವಾದ ಗ್ರಂಥಗಳೆಂದು ತಾತ್ಪರ್ಯ. ಬ್ರಾಹ್ಮಣಗ್ರಂಥಗಳಲ್ಲಿ ಗೃಹಸ್ಥಾಶ್ರಮಕ್ಕೆ ಉಚಿತವಾದ ಕರ್ಮಕಾಂಡವಿದ್ದರೆ, ಅದೇ ಕರ್ಮಗಳ ಪ್ರತೀಕೋಪಾಸನೆ ವಾನಪ್ರಸ್ಥಾಶ್ರಮಿಗಳಿಗೆ ವಿಹಿತವಾಗಿದೆ. ಹೀಗೆ ಉಪನಿಷತ್ತುಗಳ ಆಧ್ಯಾತ್ಮಚಿಂತನೆಗೂ, ಬ್ರಾಹ್ಮಣಗಳ ಕರ್ಮವಿಧಿಗೂ ಸೇತುವೆಯಂತಿರುವ ಕರ್ಮಚಿಂತನೆ ಆರಣ್ಯಕಗಳ ವೈಶಿಷ್ಟ್ಯ. ಇವನ್ನು ಒಮ್ಮೊಮ್ಮೆ ಬ್ರಾಹ್ಮಣವೆಂದೂ, ಒಮ್ಮೊಮ್ಮೆ ಉಪನಿಷತ್ತುಗಳೆಂದೂ ವ್ಯವಹರಿಸಿರುವುದೂ ಉಂಟು. ಮುಂದೆ ಅಕ್ಷಯವಟದಂತೆ ಶಾಖೋಪಶಾಖೆಯಾಗಿ ಬೆಳೆದ ವೇದಾಂತಶಾಸ್ತ್ರಕ್ಕೆಲ್ಲ ಬೀಜಸಾಮಗ್ರಿ ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿಯೇ ಅಡಗಿದೆಯೆನ್ನಬಹುದು.



ಉಪಲಬ್ಧವಿರುವ ಆರಣ್ಯಕಗಳು ಎಂಟೇ :—

(1) ಐತರೇಯ ಆರಣ್ಯಕ.
(2) ಶಾಂಖಾಯನ ಆರಣ್ಯಕ.
(3) ತೈತ್ತಿರೀಯ ಆರಣ್ಯಕ.
(4) ಬೃಹದಾರಣ್ಯಕ,
(5) ಮಾಧ್ಯಂದಿನ ಆರಣ್ಯಕ.
(6) ಕಾಣ್ವಬೃಹದಾರಣ್ಯಕ,
(7) ಜೈಮಿನೀಯೋಪನಿಷದಾರಣ್ಯಕ. ಮತ್ತು
(8) ಛಾಂದೋಗ್ಯಾರಣ್ಯಕ.

ಇವುಗಳಲ್ಲೆಲ್ಲ ಐತರೇಯ ಆರಣ್ಯಕ ಅತ್ಯಂತ ಮಹತ್ತ್ವಪೂರ್ಣವಾದುದು. ಇದು ಋಗ್ವೇದಸಂಹಿತೆಯೊಡನೆ ಸಂಬದ್ಧವಾಗಿದೆ. ಇದರಲ್ಲಿರುವ ಐದು ಭಾಗಗಳಿಗೂ ಆರಣ್ಯಕಗಳೆಂದೇ ಹೆಸರು. ಮೊದಲ ಮೂರರ ಋಷಿ ಐತರೇಯ, ನಾಲ್ಕನೆಯದರ ಋಷಿ ಆಶ್ವಲಾಯನ, ಐದನೆಯದರ ಋಷಿ ಶೌನಕ. ಮೊದಲನೆಯದರಲ್ಲಿ 'ಮಹಾವ್ರತದ ಮೂರು ಸವನಗಳ ವಿಚಾರ ಬರುತ್ತದೆ: ಎರಡನೆಯದರಲ್ಲಿ 4 ರಿಂದ 6 ಅಧ್ಯಾಯಗಳಿಗೇ ಐತರೇಯೋಪನಿಷತ್ತೆಂಬ ಹೆಸರು. ಮುಂದೆ ಮತ್ತೆ ಸ್ವರಾದಿವಿಚಾರಗಳೂ, 'ಶಾಸ್ತ್ರ'ಗಳೂ ಇವೆ. ಇದಕ್ಕೂ ಸಾಯಣಭಾಷ್ಯವುಂಟು.

ಶಾಂಖಾಯನ ಆರಣ್ಯಕಕ್ಕೆ ಕೌಷೀತಕೀ–ಆರಣ್ಯಕವೆಂದೂ ಹೆಸರು. ಇದರಲ್ಲಿ ಕೂಡ ಬ್ರಾಹ್ಮಣ ಹಾಗು ಉಪನಿಷದ್ಭಾಗಗಳುಂಟು. ಮೂರರಿಂದ ಆರು ಅಧ್ಯಾಯಗಳವರೆಗಿನ ಭಾಗವೇ ಕೌಷೀತಕೀ ಉಪನಿಷತ್ತು.

ತೈತ್ತಿರೀಯ ಬ್ರಾಹ್ಮಣದ ಶೇಷಾಂಶವೇ 'ತೈತ್ತಿರೀಯಾರಣ್ಯಕ'. ಇದರಲ್ಲಿ ದ್ರಾವಿಡ ಪಾಠ. ಆಂಧ್ರಪಾಠ. ಕರ್ನಾಟಕ ಪಾಠಗಳೆಂಬ ಪಾಠಾಂತರಗಳುಂಟು. ಇದರ 7ರಿಂದ 9ನೆಯ ಅನುವಾಕಗಳಿಗೇ 'ತೈತ್ತಿರೀಯೋಪನಿಷತ್' ಎಂದು ಹೆಸರು. ಇದರಲ್ಲಿ ವ್ಯಾಸಪಾರಾಶರ್ಯನ ಉಲ್ಲೇಖ ಬಂದಿರುವುದು ಮಹತ್ತ್ವಪೂರ್ಣವಾಗಿದೆ. ಇದರಲ್ಲಿ ನರಕ. ಸತೀಪದ್ಧತಿ. ಯಜ್ಞೋಪವೀತ ಇತ್ಯಾದಿಗಳ ಉಲ್ಲೇಖ ಬರುತ್ತದೆ.

'ಬೃಹದಾರಣ್ಯಕ'ಕ್ಕೇ 'ಮೈತ್ರಾಯಣೀ ಆರಣ್ಯಕ'ವೆಂದೂ ಹೆಸರು. 'ಮೈತ್ರೀ ಉಪನಿಷತ್' ಇದರಲ್ಲೇ ಅಂತರ್ಗತವಾದದ್ದು. ಇದರಲ್ಲಿ ಸುದ್ಯುಮ್ನ, ಭೂರಿದ್ಯುಮ್ನ, ಇಂದ್ರದ್ಯುಮ್ನ, ಕುವಲಯಾಶ್ವ, ಯೌವನಾಶ್ವ, ವಧ್ರ್ಯಶ್ವ, ಅಶ್ವಪತಿ, ಶಶಬಿಂದು, ಹರಿಶ್ಚಂದ್ರ, ಅಂಬರೀಷ, ನನಕ್ತು, ಶರ್ಯಾತಿ, ಯಯಾತಿ, ಅನರಣ್ಯ, ಅಕ್ಷಸೇನ ಮುಂತಾದ ಅನೇಕ ರಾಜರ ಉಲ್ಲೇಖಗಳು ಇವೆ. ಐತಿಹಾಸಿಕ ದೃಷ್ಟಿಯಿಂದ ಇದಕ್ಕೆ ಹೆಚ್ಚಿನ ಮಹತ್ತ್ವವಿದೆ.

ಶುಕ್ಲಯಜುರ್ವೇದದ ಎರಡು ಶಾಖೆಗಳಲ್ಲೂ ಉಪಲಬ್ಧವಿರುವ ಶತಪಥಬ್ರಾಹ್ಮಣದ ಭಾಗವೇ 'ಬೃಹದಾರಣ್ಯಕೋಪನಿಷತ್' ಎನಿಸುತ್ತದೆ. ಇದರಲ್ಲಿ ಸಂನ್ಯಾಸದ ಸಾತ್ತ್ವಿಕ ವಿವೇಚನೆಯಿದೆ; ಜನಕ–ಯಾಜ್ಞವಲ್ಕ್ಯರ ಸಂವಾದಗಳಿವೆ; ಗಾರ್ಗಿ, ಮೈತ್ರೇಯಿ ಮುಂತಾದ ಬ್ರಹ್ಮವಾದಿನಿಯರ ಐತಿಹ್ಯಗಳಿವೆ.

'ಛಾಂದೋಗ್ಯೋಪನಿಷತ್ 'ನಲ್ಲಿಯೂ ಬ್ರಾಹ್ಮಣ, ಆರಣ್ಯಕ, ಉಪನಿಷತ್ ಭಾಗಗಳು ಕೂಡಿಯೇ ಇವೆ.

ಇದನ್ನೆಲ್ಲ ನೋಡಿದರೆ ಸಂಹಿತೆಯ ಪೂರಕಭಾಗಗಳೇ ಬ್ರಾಹ್ಮಣಗಳು; ಬ್ರಾಹ್ಮಣಗಳ ಪೂರಕಾಂಶಗಳೇ ಆರಣ್ಯಕಗಳು; ಆರಣ್ಯಕಗಳ ಪೂರಕಾಂಶಗಳೇ ಉಪನಿಷತ್ತುಗಳು; ಎಲ್ಲವೂ ಕೂಡಿಯೇ ಒಂದು 'ಶ್ರುತಿ'ಯೆಂಬ ತತ್ತ್ವಗೋಚರವಾಗುತ್ತದೆ. ಯಜ್ಞಗಳ ದಾರ್ಶನಿಕ ವ್ಯಾಖ್ಯೆಗೆ ಮತ್ತು ಸಮಾಜ ಶಾಸ್ತ್ರೀಯ ವಿಷಯಗಳ ಮೇಲೆ ವಿವೇಚನೆಗೆ ಇವುಗಳಲ್ಲಿ ಸಾಕಷ್ಟು ಸಾಮಗ್ರಿ ಸಂಶೋಧಕರಿಗೆ ಲಭಿಸುತ್ತದೆ; ವೇದಾಂತವಿಚಾರವಂತೂ ಇವುಗಳ ಪರಮತತ್ತ್ವ ವೆಂಬುದು ನಿರ್ವಿವಾದ.

ಈಗ ಉಪನಿಷತ್ತುಗಳತ್ತ ತಿರುಗೋಣ. ವೈದಿಕವಿಚಾರಧಾರೆಯಲ್ಲಿ 'ಜ್ಞಾನ' ಮತ್ತು 'ಕರ್ಮ' ಈ ಎರಡು ಪ್ರಧಾನತತ್ತ್ವಗಳು ಆವಿಷ್ಕೃತವಾಗಿದ್ದವು. ಅವುಗಳಲ್ಲಿ ಕರ್ಮತತ್ತ್ವದ ವಿಸ್ತೃತವಿಕಾಸ ಬ್ರಾಹ್ಮಣ ಮತ್ತು ಆರಣ್ಯಕಭಾಗಗಳಲ್ಲಿ ಸಾಗಿದರೆ, ಜ್ಞಾನತತ್ತ್ವದ ಪರಿಷ್ಕೃತ ವಿಕಾಸ ಉಪನಿಷತ್ತುಗಳಲ್ಲಿ ಕಾಣಬರುತ್ತದೆ. ಉಪನಿಷತ್ತುಗಳಲ್ಲಿ ಪ್ರಸ್ತುತವಾದ ಬ್ರಹ್ಮವಿದ್ಯೆ ಭಾರತೀಯರ ದೃಷ್ಟಿಕೋನವನ್ನೇ ಆಮೂಲಚೂಲವಾಗಿ ಪರಿವರ್ತನೆ ಮಾಡಿತೆನ್ನಬಹುದು. ಚಿಂತನಯುಗದ ಭಾರತೀಯರ ವಿಚಾರಸರಣಿಯ ಪರಾಕಾಷ್ಠೆಯನ್ನೇ ನಾವಲ್ಲಿ ಸಂದರ್ಶಿಸುತ್ತೇವೆ. ಸೃಷ್ಟಿ, ಜೀವಾತ್ಮ. ಪರಮಾತ್ಮ ಇವುಗಳಿಗೆ ಸಂಬಂಧಿಸಿದ ನೂರಾರು ಜಟಿಲ ಪ್ರಶ್ನೆಗಳಿಗೆ ಇಲ್ಲಿ ಸಮಾಧಾನ ಹೇಳುವುದನ್ನು ಕಾಣುತ್ತೇವೆ. ಜಗತ್ತಿನ ಸಾಹಿತ್ಯ ಚರಿತ್ರೆಯಲ್ಲಿಯೇ ಇದು ಅದ್ವಿತೀಯವಾದ ಅಧ್ಯಾತ್ಮವಿದ್ಯೆಯಾಗಿದೆ.

'ಉಪನಿಷತ್' ಶಬ್ದದ 'ಉಪ' ಮತ್ತು 'ನಿ' ಎಂಬ ಉಪಸರ್ಗಗಳು 'ಸದ್' ಧಾತು ವಿಗೆ ಸೇರಿ 'ಕ್ವಿಪ್' ಪ್ರತ್ಯಯ ಬಂದಾಗ ಆಗುವ ಶಬ್ದರೂಪ. 'ಸದ್' ಧಾತುವಿಗೆ 'ವಿಶರಣ'. 'ಗತಿ'' 'ಅವಸಾದನ' ಇತ್ಯಾದಿ ಅರ್ಥಗಳುಂಟು. ಅವನ್ನೆಲ್ಲ ಕೂಡಿಸಿಕೊಂಡರೆ 'ಸರ್ವ ಅನರ್ಥಮೂಲ ಸಂಸಾರಕಲಾಪವನ್ನೂ ನಾಶಮಾಡಿ, ಸಂಸಾರಕಾರಣವಾದ ಅವಿದ್ಯೆ ಯನ್ನು ಸಡಿಲಿಸಿ, ಬ್ರಹ್ಮಪ್ರಾಪ್ತಿಯನ್ನು ಮಾಡಬಲ್ಲ ವಿದ್ಯೆ'ಯೆಂದು ತಾತ್ಪರ್ಯ ಹೇಳ ಬಹುದು; ಶಂಕರಭಾಷ್ಯಾನುಸಾರವಾಗಿ, ಸದ್ ಧಾತುವಿಗೆ ಕುಳಿತುಕೊಳ್ಳುವ ಅರ್ಥ ಮಾಡಿದರೆ ಗುರುವಿನ ಸಮೀಪದಲ್ಲಿ ಕುಳಿತು' ಕಲಿಯಬೇಕಾದ ರಹಸ್ಯವಿದ್ಯೆಯೆಂದಾಗುತ್ತದೆ.

ಉಪನಿಷತ್ತುಗಳಿಗೆ 'ವೇದಾಂತ'ವೆಂಬ ಇದೊಂದು ಹೆಸರೂ ಇದೆ. ವೇದಸಾಹಿತ್ಯದ 'ಅಂತ' ಭಾಗದಲ್ಲಿ ಬರತಕ್ಕವೆಂದೋ ಇಲ್ಲವೇ ವೇದದ ಪರಮಾರ್ಥವೆಂದೋ ಈ ಶಬ್ದಕ್ಕೆ ತಾತ್ಪರ್ಯ ಹೇಳಬಹುದು. ಉಪನಿಷತ್ತುಗಳಲ್ಲಿ ಪ್ರಸಿದ್ಧವಾದವೆಲ್ಲ ಕ್ರಿ. ಪೂ. 600ಕ್ಕೆ ಮೊದಲೇ ರಚಿತವಾದಂಥವೆಂದು ಪಾಶ್ಚಾತ್ಯರು ಹೇಳುತ್ತಾರೆ. ಉಪನಿಷತ್ತುಗಳ ಸಂಖ್ಯೆ 108 ಎಂದು 'ಮುಕ್ತಿಕೋಪನಿಷತ್' ತಿಳಿಸುತ್ತದೆ. ಆದರೆ ಆ ಹೆಸರಿನ 221 ಗ್ರಂಥಗಳು ದೊರೆತಿವೆ. ಮೂಲತಃ ಇದ್ದ ಉಪನಿಷತ್ತುಗಳ ಸಂಖ್ಯಾನಿರ್ಣಯ ಸುಲಭವಲ್ಲ. ಪ್ರಮುಖ ವೇದಾಂತಿಗಳಾದ ಶಂಕರಾಚಾರ್ಯ, ಭಾಮತೀಕಾರ ವಾಚಸ್ಪತಿಮಿಶ್ರ, ರಾಮಾನುಜಾಚಾರ್ಯರ



ಕಾಲದಲ್ಲಿ ಅವುಗಳ ಸಂಖ್ಯೆ 30 ಇದ್ದುದನ್ನು ನೆನೆದರೆ–ಪಶ್ಚಾತ್ಕಾಲದಲ್ಲಿ ಎಷ್ಟೊಂದು ಹೊಸದಾಗಿ ರಚಿತವಾಗಿರಬೇಕೆಂಬ ಕಲ್ಪನೆ ಬರುತ್ತದೆ; ಶಂಕರಾನಂದರೆಂಬ ವ್ಯಾಖ್ಯಾಕಾರರ ಕಾಲಕ್ಕೆ (14ನೆಯ ಶತಮಾನ) ಇವುಗಳ ಸಂಖ್ಯೆ 60ಆಗುತ್ತದೆ. ಹೀಗೆಯೇ ವೃದ್ಧಿಯಾಗುತ್ತ ಹೋಗಿದೆ ಉಪನಿಷತ್ತುಗಳ ಸಂಖ್ಯೆ. ಆದರೆ ಸಾಮಾನ್ಯವಾಗಿ ಪಂಡಿತರ ಮಾನ್ಯತೆಗೆ ಪಾತ್ರ ವಾಗಿರುವ ಉಪನಿಷತ್ತುಗಳ ಸಂಖ್ಯೆ 12 ಎನ್ನಬಹುದು. ಅವು ಯಾವವೆಂದರೆ :—1 ಈಶಾವಾಸ್ಯೋಪನಿಷತ್, 2. ಕೇನೋಪನಿಷತ್, 3. ಕಠೋಪನಿಷತ್, 4, ಪ್ರಶ್ನೋಪನಿಷತ್, 5. ಮುಂಡಕೋಪನಿಷತ್, 6. ಮಾಂಡೂಕ್ಯೋಪನಿಷತ್, 7. ತೈತ್ತಿರೀಯೋಪನಿಷತ್, 8. ಐತರೇಯೋಪನಿಷತ್, 9. ಛಾಂದೋಗ್ಯೋಪನಿಷತ್, 19. ಬೃಹದಾರಣ್ಯಕೋಪನಿಷತ್, 11. ಕೌಷೀತಕೀ ಉಪನಿಷತ್, 12. ಶ್ವೇತಾಶ್ವತರ ಉಪನಿಷತ್.

ಇವುಗಳಲ್ಲಿಯೂ ಕಡೆಯ ಎರಡು ದಶೋಪನಿಷತ್ತುಗಳಿಗಿಂತ ಅರ್ವಾಚೀನವೆಂದು. ಸಾಮಾನ ವಾಗಿ ಭಾವಿಸಲಾಗುತ್ತದೆ. ಭಾಷೆ ಮತ್ತು ವಿಚಾರಗಳಲ್ಲಿರುವ ವಿಕಸಿತ ಅಂಶಗಳ ಮೇಲಿನಿಂದ.

ಸಾಮಾನ್ಯವಾಗಿ ವೇದಾಂತಾಚಾರ್ಯರೆಲ್ಲ ಉಪನಿಷತ್ತುಗಳಿಗೆ ಭಾಷ್ಯ ಬರೆದಿದ್ದಾರೆ. ಭಾಷ್ಯಗಳಿಗೆ ಅನೇಕ ಪಂಡಿತರಿಂದ ಟೀಕೆಗಳೂ ವಿರಚಿತವಾಗಿವೆ; ಕೆಲವಕ್ಕೆ ಸಾಯಣಭಾಷ್ಯವೂ ಇದೆ. ಉಪನಿಷತ್ತುಗಳಲ್ಲಿ ಅಥರ್ವವೇದಕ್ಕೆ ಸೇರುವವುಗಳ ಸಂಖ್ಯೆಯೇ ಹೆಚ್ಚು; ಇವುಗಳಲ್ಲಿ ಮುಂಡಕ, ಪ್ರಶ್ನ, ಮಾಂಡೂಕ್ಯಗಳು ಸೇರುತ್ತವೆ. ಬ್ರಹ್ಮಸೂತ್ರಕಾರರಾದ ಬಾದರಾಯಣರೂ ಇವನ್ನು ಹೆಚ್ಚಾಗಿ ಅನುವಾದಿಸಿದ್ದಾರೆ. ವೇದಾಂತಶಾಸ್ತ್ರದ ಪ್ರಸ್ಥಾನಕ್ರಮದಲ್ಲಿ ಉಪನಿಷತ್ತು ಗಳಿಗೇ ಅಗ್ರಸ್ಥಾನ ಮೀಸಲು.

ಫಾರಸೀ ಭಾಷೆಗೆ ದಾರಾ–ಶಿಕೋ ಇವನ್ನು ಮೊಗಲರ ಕಾಲದಲ್ಲಿಯೇ, ಭಾಷಾಂತರಿಸಿದರೆ, ಕಳೆದ ಶತಮಾನಾವಧಿಯಲ್ಲಿ ಇವು ವಿಶ್ವದ ಭಾಷೆಗಳಿಗೆಲ್ಲ ಅನುವಾದ ಮಾಡಲ್ಪಟ್ಟಿವೆ—ಜರ್ಮನ್, ಫ್ರೆಂಚ್, ಇಂಗ್ಲಿಷ್ ಇತ್ಯಾದಿ. ವಿಶ್ವದ ತತ್ತ್ವಚಿಂತಕರ ಗಮನವನ್ನೆಲ್ಲ ಸೆಳೆದು ಭಾರತೀಯರ ಆಧ್ಯಾತ್ಮಿಕವಿಚಾರ. ಇಂದಿಗೂ ಜ್ಯೋತಿಃಸ್ತಂಭವಾಗಿದೆಯೆಂಬಂತೆ ಬೆಳಗುತ್ತಿದೆ. ಶೋಪೆನ್‌ಹಾವೆರ್, ಡಾಯ್ಸನ್. ಮ್ಯಾಕ್ಸ್ ಮ್ಯೂಲೆರ್, ಸ್ವಾಮೀ ವಿವೇಕಾನಂದ, ಶ್ರೀ ಅರೊಬಿಂದೋ, ಟಾಗೋರ್, ರಾಧಾಕೃಷ್ಣನ್—ಇತ್ಯಾದಿ ಮೇಧಾವಿಗಳು ಆಧುನಿಕ ಕಾಲ ದಲ್ಲಿಯೂ ಉಪನಿಷತ್ತತ್ತ್ವದಿಂದ ಪ್ರಭಾವಿತರಾಗಿ ವಿಶ್ವಸ್ಫೂರ್ತಿಯನ್ನೀಯುವಂತಹ ಗ್ರಂಥಗಳನ್ನು ರಚಿಸಿದ್ದಾರೆ.

ಉಪನಿಷತ್ತುಗಳ ತತ್ತ್ವಜ್ಞಾನ ಯಾವ ಒಂದು ಜಾತಿಪಂಥಕ್ಕಾಗಲಿ ಸೀಮಿತವಾದುದಾಗಿರದೆ ಇಡಿಯ ಮಾನವತೆಗೆ ಚೈತನ್ಯಸ್ಫೂರ್ತಿಯನ್ನೀಯುವ ವಿಶ್ವವ್ಯಾಪಕ ತತ್ತ್ವಜ್ಞಾನವಾಗಿದೆ. ಅದು ಯಾವ ಒಬ್ಬ ಚಿಂತಕನ ವಿಚಾರಧಾರೆಯಾಗಿರದೆ ಎಲ್ಲ ಋಷಿಗಳ ಅನುಭವಸಿದ್ಧ ಜ್ಞಾನದ ಪ್ರಕಾಶಮಯರೂಪದಲ್ಲಿದೆ. ಉಪನಿಷತ್ತಿನ ಸಂವಾದಗಳಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ಸ್ತ್ರೀಯರು, ಅಜ್ಞಾತಗೋತ್ರದ ಸಾಮಾನ್ಯವ್ಯಕ್ತಿಗಳು ಕೂಡ ಭಾಗವಹಿಸುವುದನ್ನು ಕಾಣುತ್ತೇವೆ. ನಾನಾ ಪ್ರದೇಶಗಳ, ನಾನಾ ಆಚಾರಶೀಲರಿಗೂ ಇದರಲ್ಲಿ ಸಮಾನಪ್ರವೇಶವಿದೆ. ಇವುಗಳ ಮುಖ್ಯವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು :—

ಬ್ರಹ್ಮ ಮತ್ತು ಆತ್ಮ :— ಉಪನಿಷತ್ತಿನ ವಿಚಾರವೆಲ್ಲ ಈ ಎರಡು ತತ್ತ್ವಗಳಲ್ಲೇ ಅಡಕವಾಗುತ್ತವೆ. ಪ್ರಾಚೀನ ಸಂಹಿತೆಗಳಲ್ಲಿ 'ಬ್ರಹ್ಮನ್' ಶಬ್ದಕ್ಕೆ ಯಜ್ಞಾದಿ ಕರ್ಮಗಳಿಂದ ಬರುವ ದೈವೀಶಕ್ತಿಯೆಂಬರ್ಥ ಕಾಣುತ್ತದೆ. ಈ ಅರ್ಥದಲ್ಲಿ ಕರ್ಮಕಾಂಡವೂ ಬ್ರಹ್ಮವಿದ್ಯೆಯಾಗಬಹುದು. 'ಆತ್ಮನ್' ಶಬ್ದಕ್ಕೆ ಯೌಗಿಕಾರ್ಥ 'ಈ ನಾನು' ಎಂದು. ಆದರೆ ಉಪನಿಷತ್ತುಗಳ ಕಲ್ಪನೆಯಲ್ಲಿ ಸಕಲ ವಿಶ್ವವ್ಯಾಪಿಯೂ, ವಿಶ್ವೋತ್ತೀರ್ಣವೂ ಆದ ಪರಮತತ್ತ್ವವೇ ಬ್ರಹ್ಮ ಮತ್ತು ಆತ್ಮಶಬ್ದಗಳಿಂದ ವಾಚ್ಯವಾಗುತ್ತದೆ. ಬ್ರಹ್ಮ-ಆತ್ಮಗಳ ಅಭೇದ ಪ್ರತಿಪಾದ್ಯವಾಗುತ್ತದೆ. ಆ ಬ್ರಹ್ಮತತ್ತ್ವ ಅಣೋರಣೀಯವೂ ಅಹುದು ; ಮಹತೋ ಮಹೀಯವೂ ಅಹುದು. ದಿವ್ಯ ರೂಪದಲ್ಲಿ ಯಾವುದು ಬ್ರಹ್ಮವೋ, ಅದೇ ಮಾನವನಲ್ಲಿಯೂ ಆತ್ಮರೂಪವಾಗಿ ಅಡಗಿದೆ. 'ಸರ್ವಂ ಖಲ್ವಿದಂ ಬ್ರಹ್ಮ', 'ಅಯಮಾತ್ಮಾ ಬ್ರಹ್ಮ', 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ' ಮುಂತಾದವು ಉಪನಿಷತ್ತಿನ ಮಹಾವಾಕ್ಯಗಳು. ಇವುಗಳ ಅರ್ಥದ ಪೂರ್ಣ ಕಲ್ಪನೆಯಾಗಬೇಕಾದರೆ ವೇದಾಂತಶಾಸ್ತ್ರವನ್ನು ನೋಡಬೇಕು. ಜ್ಞಾನ—ಕರ್ಮ—ಭಕ್ತಿ ಅಥವಾ ಉಪಾಸನೆಗಳ ರಹಸ್ಯ ಸ್ಪಷ್ಟವಾಗಲು ಉಪನಿಷತ್ತುಗಳನ್ನು ಅಧ್ಯಯನ ಮಾಡಬೇಕು. ವೇದಾಂತ ವಾಕ್ಯಶ್ರವಣದಿಂದ, ಮನನನಿದಿಧ್ಯಾಸನಗಳಿಂದ ಮುಕ್ತಿಯೆಂಬ ಪರಮಪುರುಷಾರ್ಥ ಮನುಷ್ಯನಿಗೆ ಸಿದ್ಧಿಸುವುದೆಂದು ಭಾರತೀಯರ ದೃಢವಿಶ್ವಾಸ. ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದಿ ನಾನಾ ಸಂಪ್ರದಾಯಗಳಿಗೂ ಉಪನಿಷತ್ತುಗಳೇ ಮೂಲ.

ಈ ಅಧ್ಯಾತ್ಮಾನುಭವದ ಸಿದ್ಧಿಗಾಗಿಯೇ ಮಾನವನು ಸತ್ಯಧರ್ಮಗಳನ್ನಾಶ್ರಯಿಸಬೇಕಾಗುವುದೆಂಬ ನೀತಿಶಾಸ್ತ್ರವೂ, ಚಿತ್ತಶುದ್ಧಿಯಿಲ್ಲದೆ ಮೋಕ್ಷವಾಗದೆಂಬ ಕಲ್ಪನೆಯೂ ಉಪನಿಷತ್ತುಗಳಲ್ಲಿ ಕಾಣಿಸುತ್ತದೆ. ಮನುಷ್ಯನ ಆಚಾರವ್ಯವಹಾರಗಳ ಮೇಲೆ ನೀತಿಯ ಪ್ರಭಾವ ಗಾಢವಾಗಲು ಜೀವನದ ಧ್ಯೇಯ ಹಾಗು ಬೆಲೆಗಳು ಮನದಟ್ಟಾಗಲು, ಉಪನಿಷತ್ತುಗಳ ಪ್ರಚೋದನೆ ಇಂದಿಗೂ ಉಜ್ವಲವಾಗಿದೆ. ನಿತ್ಯನೂ, ಅಜರಾಮರನೂ ಆದ ಶಾಶ್ವತ ಔಪನಿಷದ ಪುರುಷನ ತತ್ತ್ವ ಎಂದೆಂದೂ ಮಾನವನ ಉತ್ಕ್ರಾಂತಿಯ ಆಶಾವಾದವನ್ನು ಪ್ರತಿಬಿಂಬಿಸುತ್ತದೆ.

ಸಾಹಿತ್ಯ ದೃಷ್ಟಿಯಿಂದ ನೋಡುವಾಗ ಉಪನಿಷತ್ತುಗಳಲ್ಲಿ ಉತ್ತಮ ಪದ್ಯ ಹಾಗು ಗದ್ಯ ಕಾವ್ಯಲಕ್ಷಣಗಳನ್ನೂ ಅಲ್ಲಲ್ಲಿ ನಾವು ಕಾಣುತ್ತೇವೆ. ಈಶಾವಾಸ್ಯ ಮತ್ತು ಕಠೋಪನಿಷತ್ತುಗಳು ಕೇವಲ ಪದ್ಯರೂಪದಲ್ಲಿವೆ ಮತ್ತು ಉಪಮಾ, ರೂಪಕ, ಸಾರ, ಉತ್ಪ್ರೇಕ್ಷೆ ಮುಂತಾದ ನಾನಾಲಂಕಾರಗಳೂ, ಭಕ್ತಿಭಾವನಿರ್ಭರತೆಯೂ ಅಲ್ಲಿ ಸಹಜಾವಿಷ್ಕಾರವನ್ನು ಪಡೆದಿವೆ. ಜೀವನವನ್ನು ಆಳವಾಗಿ ನೋಡಿ ತಮ್ಮ ತೀವ್ರ ಅನುಭವಕ್ಕೆ ಕನ್ನಡಿ ಹಿಡಿಯುವಂತೆ ಎಲ್ಲ ಅನುಭಾವಿಗಳೂ ಶ್ರಮಿಸಿದ ಒಂದು ಸತ್ತ್ವಪೂರ್ಣ ಹಾಗು ಸ್ಫೂರ್ತಿದಾಯಕ ಸಾಹಿತ್ಯವೇ ಉಪನಿಷತ್ಸಾಹಿತ್ಯವೆನ್ನಬಹುದು. ಉಪನಿಷತ್ತುಗಳ ಅಧ್ಯಯನ ಇಂದಿಗೂ ವಿಶ್ವದಲ್ಲೆಲ್ಲ ವಿಚಾರಶೀಲಜನರಿಗೆ ಪ್ರಿಯವಾಗಿರುವುದಕ್ಕೆ ಇದೇ ಮುಖ್ಯ ಕಾರಣವೆನ್ನಬಹುದು. ಉಪನಿಷತ್ತುಗಳಲ್ಲಿ ಬರುವ ಜ್ಞಾನಿಗಳೆಲ್ಲ ಕೇವಲ ನೀರಸ ಸನ್ಯಾಸಿಗಳಲ್ಲ ; ಅವರು ಇಹಜೀವನದಲ್ಲಿಯೂ





ಆಳವಾದ ಅನುಭವ ಪಡೆದವರೇ ಎಂಬುದು ನಮಗೆ ಉಪನಿಷತ್ತುಗಳನ್ನೋದುವಾಗ ಗೊತ್ತಾಗುತ್ತದೆ.

## ವೇದಾಂಗಗಳು

ವೇದಯುಗದ ಅಂತ್ಯಭಾಗಕ್ಕೆ ವೇದಾಂಗಗಳ ಯುಗ ಆರಂಭವಾಗುತ್ತದೆ. (ಸುಮಾರು ಕ್ರಿ. ಪೂ. 800 ರಿಂದ 200). ವೇದಗಳು ಅಪೌರುಷೇಯವಾದರೆ ವೇದಾಧ್ಯಯನಕ್ಕೆ ಉಪಕಾರಕಗಳಾದ ವೇದಾಂಗಗಳು ಋಷಿಗಳಿಂದಲೇ ರಚಿತವಾಗಿರುತ್ತವೆ. ಇವೆಲ್ಲ ಸಾಮಾನ್ಯವಾಗಿ " ಸೂತ್ರ " ಶೈಲಿಯಲ್ಲಿರುತ್ತವೆ. " ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥ " ಎಂಬುದು ಸೂತ್ರಲಕ್ಷಣ. " ಶಿಕ್ಷಾ ವ್ಯಾಕರಣಂ ಛಂದಃ ನಿರುಕ್ತಂ ಜ್ಯೋತಿಷಂ ತಥಾ । ಕಲ್ಪಶ್ಚೇತಿ ಷಡಂಗಾನಿ " ಎಂದಂತೆ ಈ ಆರೂ ವೇದಾಂಗಗಳೆನಿಸುತ್ತವೆ. ಇವಕ್ಕೆಲ್ಲ ವೇದಾಸಾಹಿತ್ಯದ ಸಂಬಂಧ ನೇರವಾಗಿಯೇ ಇರುತ್ತದೆ. ಬ್ರಾಹ್ಮಣ ಗ್ರಂಥಗಳಲ್ಲಿ ಅಂಕುರರೂಪದಿಂದ ಕಾಣುವ ಉಚ್ಚಾರಣೆ, ನಿರುಕ್ತಿ, ವ್ಯಾಕರಣ, ಛಂದಸ್ಸು, ಜ್ಯೋತಿಷ, ಕರ್ಮಕಾಂಡ ಈ ಕುರಿತು ವಿಚಾರಗಳೇ ವ್ಯವಸ್ಥಿತರೀತಿಯಲ್ಲಿ ಸ್ವತಂತ್ರ ವೇದಾಂಗಗಳಾಗಿ ಉತ್ತರಕಾಲದಲ್ಲಿ ಜನಿಸಿದಂತೆ ತೋರುತ್ತದೆ.

1. ಶಿಕ್ಷಾ : ವೇದಪಾಠವು ಉಚ್ಚಾರಣ ಶುದ್ಧಿಯನ್ನೂ, ಸ್ವರಶುದ್ಧಿಯನ್ನೂ ಅಪೇಕ್ಷಿಸುತ್ತದೆ. ' ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ಸ ವಾಗ್ವಜ್ರೋ ಯಜಮಾನಂ ಹಿನಸ್ತಿ' ಎಂದಂತೆ ಅಶುದ್ಧಿಯಿಂದ ಪಾಪವೂ, ಕ್ಲೇಶವೂ ಉಂಟಾಗಬಹುದೆಂಬ ಭೀತಿಯು ಕಾರಣ, ಶುದ್ಧವರ್ಣೋಚ್ಚಾರಣೆ ಹಾಗೂ ಸ್ವರಪ್ರಕ್ರಿಯೆಯನ್ನು ಕಲಿಸುವ ಸೂತ್ರಗ್ರಂಥಗಳು ಹುಟ್ಟಿದವು. ಮೊದಮೊದಲು ಒಂದೊಂದು ವೇದ ಶಾಖೆಯಲ್ಲಿಯೂ ಈ ಬಗೆಗೆ ಕೃತಿರಚನೆಯ ಪ್ರಯತ್ನಗಳು ನಡೆದುದರ ಫಲವಾಗಿ " ಪ್ರಾತಿಶಾಖ್ಯ " ಗ್ರಂಥಗಳು ಬಂದವು. ಈಗ ಋಗ್ವೇದಕ್ಕೆ ಶೌನಕನ ಶ್ಲೋಕಬದ್ಧ ಪ್ರಾತಿಶಾಖ್ಯ ಒಂದು ; ' ತೈತ್ತಿರೀಯಪ್ರಾತಿಶಾಖ್ಯಸೂತ್ರ' ; ಕಾತ್ಯಾಯನನು ಬರೆದನೆನ್ನುವ ' ವಾಜಸನೇಯಿ ಪ್ರಾತಿಶಾಖ್ಯಸೂತ್ರ' ; ಶೌನಕನದೆನ್ನಲಾಗುವ 'ಅಥರ್ವವೇದಪ್ರಾತಿಶಾಖ್ಯಸೂತ್ರ'ಗಳು ಉಪಲಬ್ಧವಿವೆ. ಯಜ್ಞದಲ್ಲಿ ಹೇಗೆ ಸಾಮಗಾನ ಮಾಡಬೇಕೆಂಬುದನ್ನು ' ಪಂಚವಿಧಸೂತ್ರ ' ವಿವರಿಸುತ್ತದೆ ; ಸಾಮದ ಉತ್ತರಗಾನದ ಬಗೆಗೆ ' ಪುಷ್ಪಸೂತ್ರ 'ವು ತಿಳಿವಳಿಕೆ ಕೊಡುತ್ತದೆ. ವೈದಿಕ ಧ್ವನಿಶಾಸ್ತ್ರದಲ್ಲಿ ಉಚ್ಚಾರ, ಸ್ವರ, ಸಂಧಿರೂಪಗಳು ಇತ್ಯಾದಿಗಳನ್ನು ಇವೆಲ್ಲ ನಿರೂಪಿಸುತ್ತವೆ. ಭಾಷಾಶಾಸ್ತ್ರದ ಆದ್ಯ ರಚನೆಗಳೇ ಇವೆನ್ನಬಹುದು. ಸಂಹಿತಾಪಾಠಗಳು ಅಚ್ಚಳಿಯದಂತೆ ಇಂದಿಗೂ ಉಳಿಯಲು ಇವುಗಳಿಂದ ಹೆಚ್ಚಿನ ಸಹಾಯವಾಗಿದೆ.

ಇವಕ್ಕಿಂತ ಸ್ವಲ್ಪ ಮುಂದಿನ ಕಾಲದ ರಚನೆಗಳೇ " ಶಿಕ್ಷಾ " ಎಂಬ ಹೆಸರಿನವು. ಭರಧ್ವಾಜ" ವ್ಯಾಸ, ವಸಿಷ್ಠ, ಯಾಜ್ಞವಲ್ಕ್ಯ ಮುಂತಾದವರ ರಚನೆಗಳೆನ್ನುವ ಶಿಕ್ಷಾಗ್ರಂಥಗಳು ಉಪಲಬ್ಧವಿವೆ. ಅವುಗಳಲ್ಲೆಲ್ಲ ತೈತ್ತಿರೀಯ ಪ್ರಾತಿಶಾಖ್ಯಕ್ಕೆ ಸಂಬಂಧಿಸಿರುವ ' ವ್ಯಾಸಶಿಕ್ಷಾ' ಗ್ರಂಥವೇ

ಪ್ರಾಚೀನವಾದುದು, 'ಪಾಣಿನೀಯ ಶಿಕ್ಷಾ' ದಲ್ಲಿ ಪ್ರಾಚೀನ ವಿಷಯಸಂಗ್ರಹವಿರಬಹುದಾದರೂ ಅದರ ರಚನೆ ಅರ್ವಾಚೀನವೆನಿಸುತ್ತದೆ.

ವೇದಾಂಗಕ್ಕೆ ಸಂಬಂಧಪಟ್ಟ ಇನ್ನೊಂದು ಜಾತಿಯ ರಚನೆಗಳೇ "ಅನುಕ್ರಮಣಿ" ಗಳು. ಋಗ್ವೇದಾನುಕ್ರಮಣಿಯನ್ನು ಶೌನಕನು ಬರೆದನೆನ್ನಲಾಗಿದೆ. ಮಂತ್ರ, ಋಷಿ, ದೇವತಾ, ಛಂದಸ್ಸು—ಇವುಗಳ ಪಟ್ಟಿಗಳನ್ನು ಅಲ್ಲಿ ಕಾಣುತ್ತೇವೆ. ಕಾತ್ಯಾಯನನ 'ಸರ್ವಾನುಕ್ರಮಣಿ' ಸೂತ್ರಬದ್ಧವಿದೆ ಮತ್ತು ಋಗ್ವೇದದ ಪ್ರತಿಸೂಕ್ತದ ಆದಿಪದಗಳು, ಮಂತ್ರಸಂಖ್ಯೆ, ಋಷಿಯ ನಾಮ ಹಾಗು ವಂಶ, ದೇವತೆ, ಛಂದಸ್ಸುಗಳ ಪಟ್ಟಿಯನ್ನು ಒದಗಿಸುತ್ತದೆ. ಶೌನಕನೇ ಬರೆದನೆನ್ನಲಾಗುವ 'ಬೃಹದ್ದೇವತಾ' ಶ್ಲೋಕರೂಪದಲ್ಲಿ ಋಗ್ವೇದಸ್ತುತ ದೇವತೆಗಳ ಪಟ್ಟಿಯನ್ನೂ, ಅವರಿಗೆ ಸಂಬಂಧಿಸಿದ ಕಥಾನಕಗಳನ್ನೂ ಒಳಗೊಂಡಿದೆ. ಭಾರತೀಯ ಕಥಾಸಾಹಿತ್ಯದ ಇತಿಹಾಸವನ್ನು ಅರಿಯಬೇಕೆನ್ನುವವರಿಗೆ ಇದು ಅಧ್ಯಯನೀಯ ಗ್ರಂಥವಾಗಿದೆ. ಋಗ್ವೇದ ಮಂತ್ರಪಾರಾಯಣದಿಂದ ಬರುವ ಫಲಗಳನ್ನು ಶೌನಕನೇ ಬರೆದನೆನ್ನುವ 'ಋಗ್ವಿಧಾನ' ವಿವರವಾಗಿ ಹೇಳುತ್ತದೆ.

2. ಕಲ್ಪ :—ಬ್ರಾಹ್ಮಣ-ಆರಣ್ಯಕಗಳಿಗೆ ನೇರವಾಗಿ ಸಂಬಂಧಿಸುವ ಕಲ್ಪಸೂತ್ರಗಳು ಸೂತ್ರ ಕೃತಿಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದವು. ಅವುಗಳ ವಿಷಯಾನುಸಾರ ಅವನ್ನು ಶ್ರೌತಸೂತ್ರ ಮತ್ತು ಗೃಹ್ಯಸೂತ್ರಗಳೆಂದು ವಿಂಗಡಿಸಲಾಗಿದೆ. ಮೊದಲನೆಯವು ಬ್ರಾಹ್ಮಣೋಕ್ತ ಮತ್ತು ಅನೇಕ ಪುರೋಹಿತರ ಅಗತ್ಯವಿರುವ ಯಜ್ಞವಿಧಿಗಳನ್ನು ಕುರಿತಿದ್ದರೆ, ಎರಡನೆಯವು ಗೃಹ್ಯ ಯಜ್ಞಗಳನ್ನೂ ಕರ್ಮಗಳನ್ನೂ ಪ್ರತಿಪಾದಿಸುತ್ತವೆ. ಮೊದಲನೆಯವು 'ಶ್ರೌತ' ಸೂತ್ರಗಳಾದರೆ, ಎರಡನೆಯವನ್ನು 'ಸ್ಮಾರ್ತ' ಸೂತ್ರಗಳೆನ್ನುವುದೂ ಉಂಟು. ಶ್ರೌತಸೂತ್ರಗಳಲ್ಲಿ ಮೂರು ಅಗ್ನಿಗಳ ಆಧಾನ, ದರ್ಶಪೂರ್ಣಮಾಸಯಾಗಗಳು. ಪಶುಯಜ್ಞಗಳು ಸೋಮಯಾಗ ಮತ್ತು ಅದರ ವಿಕೃತಿಗಳು ಪ್ರತಿಪಾದ್ಯ ವಿಷಯಗಳು. ಧರ್ಮದ ಇತಿಹಾಸವನ್ನರಿಯಲು ಮತ್ತು ಯಜ್ಞದ ಸ್ವರೂಪವನ್ನರಿಯಲು ಶ್ರೌತಸೂತ್ರಗಳು ಅವಶ್ಯವಾಗುತ್ತವೆ.

ಗೃಹ್ಯಸೂತ್ರಗಳ ಕ್ಷೇತ್ರ ಇನ್ನೂ ವಿಶಾಲವಾದುದು. ಆದರ್ಶಗೃಹಸ್ಥನ ಜೀವನದಲ್ಲಿ ಬೇಕಾಗುವ ಷೋಡಶ ಸಂಸ್ಕಾರಗಳಿಗೂ ಇಲ್ಲಿ ನಿರೂಪಣೆ ದೊರೆಯುತ್ತದೆ; ವಿವಾಹ, ಉಪನಯನ, ಚೂಡಾಕರ್ಮ ಇತ್ಯಾದಿ. ಅಪರಕರ್ಮಗಳ ವಿವೇಚನೆಯೂ ಇವುಗಳಲ್ಲಿರುತ್ತದೆ. ಜನರ ಆಚಾರ ವ್ಯವಹಾರಗಳ ಪರಿಜ್ಞಾನಕ್ಕೂ ಇವು ಉಪಯೋಗ ಬೀಳುತ್ತವೆ.

ಇದಲ್ಲದೆ 'ಪಂಚಮಹಾಯಜ್ಞಗಳು'ಗಳು, ಗೃಹನಿರ್ಮಾಣ, ಗೃಹಪ್ರವೇಶ, ಕೃಷಿ, ತಟಾಕ ನಿರ್ಮಾಣ, ಶಕುನಗಳು, ಮುಂತಾದ ಲೌಕಿಕ ವಿಷಯಗಳಿಗೂ ಇಲ್ಲಿ ಪ್ರವೇಶವುಂಟು. ಅಪರ ಕರ್ಮಗಳನ್ನು ಕುರಿತು ಪ್ರತ್ಯೇಕ ಪ್ರಕರಣಗಳು ಮುಂದೆ "ಶ್ರಾದ್ಧಕಲ್ಪ"ಗಳೆಂಬ ಹೆಸರಿನಿಂದ ರಚಿತವಾದವು. ಪ್ರತಿಯೊಂದು ಐಹಿಕ ಜೀವನಾಂಶವನ್ನೂ ದೇವತಾಕರ್ಮದೊಂದಿಗೆ ಸಂಯೋಜಿಸಿರುವದೇ ಗೃಹ್ಯಸೂತ್ರಗಳ ವೈಶಿಷ್ಟ್ಯ.



ಮೂರನೆಯ ಜಾತಿಯ ಕಲ್ಪಸೂತ್ರಗಳಿಗೆ ಧರ್ಮಸೂತ್ರಗಳೆಂದು ಹೆಸರು. ಇವು ಸಾಮಾಜಿಕ ಆಚಾರವನ್ನು ಹೆಚ್ಚಾಗಿ ಕುರಿತವು. ವರ್ಣಾಶ್ರಮಧರ್ಮಗಳ ಮೀಮಾಂಸೆ ವಿವರವಾಗಿ ಬರುವದೇ ಇಲ್ಲಿ. ಸಿವಿಲ್ ಮತ್ತು ಕ್ರಿಮಿನಲ್ ಕಾಯದೆಯ ಆರಂಭವನ್ನೂ ಇಲ್ಲಿಯೇ ನೋಡ ಬಹುದು. ಸಿವಿಲ್ ಕಾಯಿದೆಗೆ ಸಂಬಂಧಪಟ್ಟಂತೆ ಕಂದಾಯ, ಆಸ್ತಿಯ ವಿಭಾಗ, ಸ್ತ್ರೀಯರ ಸ್ಥಾನ ಇತ್ಯಾದಿಗಳು ಬಂದರೆ, ಕ್ರಿಮಿನಲ್ ಕಾಯಿದೆಗೆ ಸಂಬಂಧಿಸಿದಂತೆ ವ್ಯಭಿಚಾರ, ವಾಕ್ಪಾರುಷ್ಯ, ದಂಡಪಾರುಷ್ಯ, ಕಳ್ಳತನ ಇತ್ಯಾದಿಗಳ ವಿಷಯ ಬರುತ್ತದೆ. ಈ ವಿಷಯಗಳ ವಿವರಗಳಲ್ಲಿ ಒಬ್ಬ ಧರ್ಮಸೂತ್ರಕಾರನಿಗೂ, ಇನ್ನೊಬ್ಬ ಧರ್ಮಸೂತ್ರಕಾರನಿಗೂ ಅಭಿಪ್ರಾಯ ಭೇದವಿರುವುದೂ ಉಂಟು.



ನಾಲ್ಕನೆಯ ಜಾತಿಯ ಕಲ್ಪಸೂತ್ರಗಳೆಂದರೆ 'ಶುಲ್ಬಸೂತ್ರ'ಗಳು. ಇವು ಸಾಮಾನ್ಯವಾಗಿ ಶ್ರೌತಸೂತ್ರಗಳಿಗೇ ಅನುಬಂಧವಾಗಿರುತ್ತವೆ. 'ಶುಲ್ಬ'ವೆಂದರೆ ಅಳೆಯುವ ದಾರ. ಅಗ್ನಿಯ ವೇದಿಗಳ ರಚನೆ ಹಾಗು ಯಜ್ಞಪ್ರದೇಶಗಳ ಆಕಾರಾದಿಗಳ ಬಗ್ಗೆ ಇವು ವಿವರಗಳನ್ನು ಕೊಡುತ್ತವೆ. ಇವೆಲ್ಲ ವೇದಮಂತ್ರಗಳಿಗೆ ಕರ್ಮವಿನಿಯೋಗವನ್ನೂ ಸೂಚಿಸುವುದರಿಂದ ಧರ್ಮಾಚರಣೆಗೆ ತುಂಬಾ ಉಪಯುಕ್ತವಾಗಿವೆ.

ವೇದಶಾಖೆಗಳಲ್ಲಿ ಬೋಧಾಯನ ಮತ್ತು ಆಪಸ್ತಂಬ ಯಜುಶ್ಶಾಖೆಗಳಿಗೆ ಮಾತ್ರ ಈ ನಾಲ್ಕು ವರ್ಗದ ಕಲ್ಪಸೂತ್ರಗಳಿವೆ. ಇವಕ್ಕೆ ತುಂಬಾ ಸಮೀಪವರ್ತಿಯಾಗಿವೆ ಭಾರದ್ವಾಜ ಮತ್ತು ಹಿರಣ್ಯಕೇಶಿಗಳ ಸೂತ್ರಗಳು. ಮಾನವಶಾಖೆಯ ಸೂತ್ರಗಳೂ, ಕಾಠಕಗೃಹ್ಯಸೂತ್ರವೂ ಮೈತ್ರಾಯಣೀ ಸಂಹಿತೆಗೆ ಸೇರಿದವು. ಶುಕ್ಲಯಜುರ್ವೇದಕ್ಕೆ ಸೇರಿದಂತೆ ಕಾತ್ಯಾಯನ ಶ್ರೌತ ಹಾಗು ಶುಲ್ಬಸೂತ್ರಗಳೂ, ಪಾರಸ್ಕರ ಗೃಹ್ಯಸೂತ್ರವೂ; ಋಗ್ವೇದಕ್ಕೆ ಸೇರಿದಂತೆ ಆಶ್ವಲಾಯನ ಮತ್ತು ಶಾಂಖಾಯನ ಶ್ರೌತ ಹಾಗು ಗೃಹ್ಯಸೂತ್ರಗಳೂ ; ಸಾಮವೇದಕ್ಕೆ ಸೇರಿದಂತೆ ಲಾಟ್ಯಾಯನ, ದ್ರಾಹ್ಯಾಯಣ ಮತ್ತು ಜೈಮಿನೀಯ ಶ್ರೌತಾದಿ ಸೂತ್ರಗಳೂ, ಗೋಭಿಲ ಮತ್ತು ಖಾದಿರರ ಗೃಹ್ಯಸೂತ್ರಗಳೂ ; ಅಥರ್ವವೇದಕ್ಕೆ ಸೇರಿದಂತೆ ವೈತಾನ ಶ್ರೌತಸೂತ್ರ ಮತ್ತು ಕೌಶಿಕಸೂತ್ರಗಳೂ ದೊರೆಯುತ್ತವೆ. ವೈತಾನಸೂತ್ರವು ಬಹಳ ಅರ್ವಾಚೀನವೆನ್ನುತ್ತಾರೆ. ಮಾನವ, ಶೌನಕ, ಪೈಪ್ಪಲಾದ, ಕಾತ್ಯಾಯನ, ಗೌತಮರ ಶ್ರಾದ್ಧಕಲ್ಪಗಳೂ, ಬೋಧಾಯನ, ಹಿರಣ್ಯಕೇಶಿ, ಗೌತಮರ ಪಿತೃಮೇಧ ಸೂತ್ರಗಳೂ ದೊರೆಯುತ್ತವೆ.

ವೇದೋತ್ತರ ಹಾಗು ಸೂಕ್ತೋತ್ತರ ಕಾಲೀನ ಅನುಬಂಧ ಗ್ರಂಥಗಳನ್ನು "ಪರಿಶಿಷ್ಟ" ಗಳೆನ್ನುವರು. ಇವುಗಳಲ್ಲಿ 'ಗೃಹ್ಯಸಂಗ್ರಹ-ಪರಿಶಿಷ್ಟ' ಮತ್ತು ಗೋಭಿಲ ಗೃಹ್ಯಸೂತ್ರಕ್ಕೆ ಅನುಬಂಧವಾದ 'ಕರ್ಮಪ್ರದೀಪ' ಗಮನಾರ್ಹ. ಹಾಗೆಯೇ ಅಥರ್ವವೇದ ಪರಿಶಿಷ್ಟಗಳೂ ಮಂತ್ರಕರ್ಮಾದಿಗಳ ಬಗೆಗೆ ಬೆಳಕು ಬೀರುವದರಿಂದ ಗಮನಾರ್ಹವಿವೆ. 'ಪ್ರಾಯಶ್ಚಿತ್ತ ಸೂತ್ರ'ವೆಂಬುದು ಒಂದು ಪ್ರಾಚೀನ 'ಪರಿಶಿಷ್ಟ' ವಾಗಿದೆ.

'ಪ್ರಯೋಗ', 'ಪದ್ಧತಿ', 'ಕಾರಿಕಾ' ಎಂಬ ಹೆಸರಿನ ಕರ್ಮಾಂಗಗ್ರಂಥಗಳು ಇನ್ನೂ ಈಚಿನ ಕಾಲದವು.

3. ವ್ಯಾಕರಣ :—ಈ ವೇದಾಂಗವನ್ನು ಪ್ರತಿನಿಧಿಸಲು ನಮಗೆ ದೊರೆತಿರುವ ಒಂದೇ ಗ್ರಂಥವೆಂದರೆ ಪಾಣಿನಿಯ ಅಷ್ಟಾಧ್ಯಾಯೀ. ಇದು ಪ್ರಾಚೀನ ಸೂತ್ರಕಾಲಕ್ಕಿಂತ ಸ್ವಲ್ಪ ಈಚಿನದು. ಪಾಣಿನಿಯ ಮುಖ್ಯಪ್ರತಿಪಾದನೆ ಲೌಕಿಕ ಸಂಸ್ಕೃತಭಾಷೆಯಾದ್ದರಿಂದ ಅಲ್ಲಿ ಆರ್ಷ ವೇದಭಾಷೆಯ ಪ್ರತಿಪಾದನೆ ಆಂಶಿಕವಾಗಿ ಮಾತ್ರ ಬಂದಿದೆ. ಇದಕ್ಕಿಂತ ಪ್ರಾಚೀನವಾದ ವ್ಯಾಕರಣಗ್ರಂಥಗಳು ಈಗ ಉಪಲಬ್ಧವಿಲ್ಲ. ಆದರೆ ಕ್ರಿಯಾಪದಗಳಿಂದ ನಾಮಪದಗಳನ್ನು ನಿಷ್ಪಾದಿಸುವ 'ಉಣಾದಿಸೂತ್ರ'ಗಳೂ, ಸ್ವರವಿವೇಚನೆಯನ್ನು ಒಳಗೊಳ್ಳುವ 'ಫಿಟ್ ಸೂತ್ರ'ಗಳೂ ಪಾಣಿನಿಪೂರ್ವದ ವ್ಯಾಕರಣಗಳ ವಿಷಯವನ್ನು ಪ್ರತಿನಿಧಿಸುತ್ತವೆ. 'ಉಣಾದಿ ಸೂತ್ರ'ಗಳಲ್ಲಿ ನಿಷ್ಪಾದಿಸಿರುವ ಶಬ್ದಗಳಲ್ಲಿ ಹೆಚ್ಚಿನವು ವೈದಿಕವಾಗಿವೆ. ಆದ್ದರಿಂದ ಮೊದಲು ಕೇವಲ ವೈದಿಕ ಶಬ್ದಗಳ ವಿವರಣೆಗೆಂದೇ ಉಣಾದಿಸೂತ್ರಗಳನ್ನು ರಚಿಸಲಾಯಿತೆಂದೂ, ಕಡೆಕಡೆಗೆ ಲೌಕಿಕ ಭಾಷಾಶಬ್ದಗಳನ್ನೂ ಒಳಗೊಳ್ಳುವಂತೆ ಅವನ್ನು ವಿಸ್ತರಿಸಲಾಯಿತೆಂದೂ ಮ್ಯಾಕ್ಸ್ ಮ್ಯೂಲರ್ ಅಭಿಪ್ರಾಯಪಡುತ್ತಾನೆ.

4. ನಿರುಕ್ತ :—ಈ ವೇದಾಂಗದಲ್ಲಿ ನಮಗೆ ಸಿಕ್ಕಿರುವ ಒಂದೇ ಗ್ರಂಥ ಯಾಸ್ಕನ ನಿರುಕ್ತ. ಸಂಹಿತೆಗಳ ರಚನಾಕಾಲಾನಂತರ ಅರ್ಥಜ್ಞಾನ ಕಷ್ಟತರವೆನಿಸಿದಾಗ ಕಠಿನ ವೇದಶಬ್ದಗಳ ಪಟ್ಟಿಗಳನ್ನು ಮಾಡಿಕೊಂಡಂತೆ ಕಾಣುತ್ತದೆ. ಇವಕ್ಕೆ 'ನಿಘಂಟು' ಗಳೆಂದು ಹೆಸರು. ಈ ನಿಘಂಟುಗಳ ವಿವರಣೆಯೇ ಯಾಸ್ಕನ ನಿರುಕ್ತವಾಗಿದೆ; ನಿಘಂಟುಗಳು ಯಾಸ್ಕನಿಗೆ ಪೂರ್ವದವರ ಕೃತಿಗಳು ; ಇಂತಹ ವಿವರಣೆಗಳೂ ಕೆಲವು ಯಾಸ್ಕನಿಗಿಂತ ಮೊದಲೂ ಇದ್ದಿರಬಹುದು. ಆದರೆ ಅವು ಸಿಕ್ಕಿಲ್ಲ.

"ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ ।
ಧಾತೋಸ್ತದರ್ಥಾತಿಶಯೇನ ಯೋಗಃ ಯದುಚ್ಯತೇ ಪಂಚವಿಧಂ ನಿರುಕ್ತಮ್ ॥"

ಎಂದಂತೆ ಶಬ್ದವ್ಯುತ್ಪತ್ತಿಯನ್ನಾಧರಿಸಿ ಶಬ್ದರೂಪಗಳನ್ನು ವಿವರಿಸಿ ಅರ್ಥ ಹೇಳುವುದನ್ನಿಲ್ಲಿ ನೋಡಬಹುದು. ನಿರುಕ್ತದಲ್ಲಿ ನೈಘಂಟುಕ, ನೈಗಮ ಮತ್ತು ದೈವತ ಎಂಬ ಮೂರು ಕಾಂಡಗಳಿವೆ. "ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಮ್" ಎಂದಂತೆ ಇದು ವ್ಯಾಕರಣಾಂಶವನ್ನೂ ಒಳಗೊಳ್ಳುತ್ತದೆ. ನಾಮಗಳೆಲ್ಲ ಧಾತುಜನ್ಯಗಳೆಂದು ಯಾಸ್ಕನ ಸಿದ್ಧಾಂತ.

ಔದುಂಬರಾಯಣ, ಔಪಮನ್ಯವ, ವಾರ್ಷ್ಯಾಯಣಿ, ಗಾರ್ಗ್ಯ, ಶಾಕಪೂಣಿ, ಗಾಲವ ಮುಂತಾದ ಪ್ರಾಚೀನಾಚಾರ್ಯರನ್ನು ಯಾಸ್ಕನು ಉಲ್ಲೇಖಿಸಿದ್ದಾನೆ. ನಿರುಕ್ತಕ್ಕೆ ದುರ್ಗ ಮತ್ತು ಸ್ಕಂದಸ್ವಾಮಿಗಳ ಭಾಷ್ಯವಿದೆ. ಯಾಸ್ಕನು ಪಾಣಿನಿಗಿಂತ ಪ್ರಾಚೀನನೆಂದೂ ಸುಮಾರು ಕ್ರಿ. ಪೂ 700 ಇವನ ಕಾಲವೆಂದೂ ವಿದ್ವಾಂಸರು ಭಾವಿಸುತ್ತಾರೆ.

5. ಛಂದಸ್ಸು :—ಈ ವೇದಾಂಗದಲ್ಲೂ ಉಪಲಬ್ಧ ಕೃತಿಗಳು ಅಲ್ಪವೇ. ಹತ್ತು ಪ್ರಪಾಠಕಗಳಲ್ಲಿರುವ 'ನಿದಾನಸೂತ್ರ' ಸಾಮವೇದಕ್ಕೆ ಸೇರಿದುದು ; ಅದು ಛಂದಸ್ಸು ಮತ್ತು



ಸಾಮವೇದಕ್ಕೆ ಸಂಬಂಧಿಸಿದ ಇತರ ವಿಚಾರಗಳನ್ನು ನಿರೂಪಿಸುತ್ತದೆ ; ಸಂಪ್ರದಾಯಪ್ರಕಾರ ಪಿಂಗಲನ ಛಂದಸ್ಸೂತ್ರವನ್ನು ಋಗ್ಯಜುರ್ವೇದಗಳ ವೇದಾಂಗವೆನ್ನಲಾಗುತ್ತದೆ. ಆದರೆ ಅದು ವೇದೋತ್ತರಕಾಲದ ಕೃತಿಯಾಗಿದೆ ; ವೈದಿಕ ಹಾಗು ವೇದೋತ್ತರಕಾಲಿನ ಛಂದಸ್ಸುಗಳನ್ನು ಪ್ರತಿಪಾದಿಸುವುದರಿಂದ. ಮುಖ್ಯಛಂದಸ್ಸುಗಳ ಅಕ್ಷರಪ್ರಮಾಣ ಹೀಗಿದೆ :—ಗಾಯತ್ರೀ—24, ಉಷ್ಣಿಕ್—28, ಅನುಷ್ಟುಪ್—32, ಬೃಹತೀ—36, ಪಂಕ್ತಿ—40, ತ್ರಿಷ್ಟುಪ್—44, ಜಗತೀ—48, ಅತಿಜಗತೀ—52, ಶಕ್ವರೀ—56, ಅತಿಶಕ್ವರೀ—76, ಕೃತಿ—80, ಪ್ರಕೃತಿ—84, ಆಕೃತಿ—88, ವಿಕೃತಿ—92, ಸಂಸ್ಕೃತಿ—96, ಅಭಿಕೃತಿ—100, ಉತ್ಕೃತಿ—104. ಸಾಮಾನ್ಯವಾಗಿ ಇವು ನಾಲ್ಕು ಪಾದಗಳನ್ನು ಹೊಂದಿರುತ್ತವೆ.

ಪಿಂಗಲನು ಯಾಸ್ಕ, ತಾಂಡಿ, ಸೈತವ, ಕಾಶ್ಯಪ, ರಾತ, ಮಾಂಡವ್ಯ ಮುಂತಾದ ಪೂರ್ವಾಚಾರ್ಯರನ್ನು ಸ್ಮರಿಸಿದ್ದಾನೆ. ಕೆಲವರು ಪಿಂಗಲನನ್ನು ಪಾಣಿನಿಯ ಸಹೋದರನೆಂದು ಹೇಳುತ್ತಾರೆ. ಇವನ ಕಾಲ ಕ್ರಿ.ಪೂ. 5ನೆಯ ಶತಮಾನವೆಂದು ಡಾ॥ ಮನಮೋಹನ ಘೋಷರ ಅಭಿಪ್ರಾಯ.

6. ಜ್ಯೋತಿಷ :—ಯಜ್ಞಗಳ ಅನುಷ್ಠಾನಕ್ಕೆ ಉಚಿತ ಕಾಲನಿರ್ಣಯ ಮಾಡುವ ಅಗತ್ಯ ಮೊದಲಿನಿಂದಲೂ ಕಂಡುಬಂದಿರಬೇಕು. ಅದರ ಫಲವಾಗಿ ಖಗೋಲಶಾಸ್ತ್ರೀಯ ವೀಕ್ಷಣೆಗಳನ್ನು ಋಷಿಗಳು ಕೈಗೊಳ್ಳಬೇಕಾಯಿತು. ಇವುಗಳ ಒಂದು ವೈಜ್ಞಾನಿಕಸಂಗ್ರಹವೇ ಲಗಧನು ಬರೆದನೆನ್ನಲಾಗಿರುವ 'ಜ್ಯೋತಿಷ ವೇದಾಂಗ'ವಾಗಿದೆ. ಇದರ ಯಜುರ್ವೇದ ಪಾಠದಲ್ಲಿ 43 ಶ್ಲೋಕಗಳೂ, ಋಗ್ವೇದ ಪಾಠದಲ್ಲಿ 36 ಶ್ಲೋಕಗಳೂ ಇವೆ. ಈ ಜ್ಯೋತಿಷವು ವಿಷುವ ಸಂಪಾತಗಳಲ್ಲಿ ಸೂರ್ಯಚಂದ್ರರ ಸ್ಥಿತಿಗಳನ್ನೂ, 27 ನಕ್ಷತ್ರರಾಶಿಗಳಿಗೆ ಸಂಬಂಧಿಸಿದಂತೆ ಪೂರ್ಣಿಮೆ, ಅಮಾವಾಸ್ಯೆಗಳ ಲೆಕ್ಕಾಚಾರವನ್ನೂ ತಿಳಿಸುತ್ತದೆ. ಅಥರ್ವವೇದಕ್ಕೆ ಸೇರಿದ ಒಂದು 'ಆತ್ಮಜ್ಯೋತಿಷ' ವೆಂಬ ಗ್ರಂಥವೂ ಸಿಕ್ಕಿದೆ. ಆದರೆ ಇದು ಫಲಜ್ಯೋತಿಷವನ್ನೂ ಸ್ವಲ್ಪ ಒಳಗೊಳ್ಳುವ ಉತ್ತರಕಾಲೀನ ಕೃತಿ.

ವೇದಾಂಗಜ್ಯೋತಿಷದ ಕಾಲ ಟಿಳಕ ಮೊದಲಾದ ಭಾರತೀಯ ವಿದ್ವಾಂಸರ ಪ್ರಕಾರ ಕ್ರಿ.ಪೂ. 1200; ಆದರೆ ಪಾಶ್ಚಾತ್ಯರು ಇದು ಇಷ್ಟು ಪ್ರಾಚೀನವಿರಲಾರದೆನ್ನುತ್ತಾರೆ. ವೇದಾಂಗಗಳಲ್ಲೆಲ್ಲ ಜ್ಯೋತಿಷವೇ ಮುಕುಟಪ್ರಾಯವೆಂದು ಇದರಲ್ಲಿ ಹೇಳಲಾಗಿದೆ :

"ಯಥಾ ಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ ।
ತದ್ವದ್ವೇದಾಂಗಶಾಸ್ತ್ರಾಣಾಂ ಗಣಿತಂ ಮೂರ್ಧ್ನಿ ಸಂಸ್ಥಿತಮ್ ॥"

## ವೈದಿಕಸಂಸ್ಕೃತಿ

ವೈದಿಕ ಸಂಸ್ಕೃತಿಯಲ್ಲಿ ಪೂರ್ವಕಾಲದ ಋಗ್ವೇದೀಯ ಸಂಸ್ಕೃತಿ, ಉತ್ತರಕಾಲದ ಸಂಸ್ಕೃತಿ ಎಂದು ಸ್ಥೂಲವಾಗಿ ಎರಡು ವಿಭಾಗಗಳನ್ನು ಐತಿಹಾಸಿಕವಾಗಿ ಮಾಡಿಕೊಳ್ಳಬಹುದು. 19ನೆಯ ಶತಮಾನದ ಪಾಶ್ಚಾತ್ಯ ವಿದ್ವಾಂಸರು ಪೂರ್ವಸಂಸ್ಕೃತಿಯ ಅಪ್ರಬುದ್ಧತೆಯನ್ನು

ಎತ್ತಿ ಹೇಳುತ್ತಿದ್ದರು. ಆದರೆ ಋಗ್ವೇದಮಂತ್ರನಿರ್ಮಾಣ ಕಾಲದಲ್ಲಿ ಕೂಡ ಆರ್ಯರು ಅನಾಗರಿಕ ಕಾಡುಜನಗಳಾಗಿರದೆ ನಾಗರಿಕತೆಯ ಹೊಸ್ತಿಲನ್ನು ದಾಟಿದ್ದರೆಂದು ಈಚಿನ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಅವರ ಧಾರ್ಮಿಕರು ಸಾಮೂಹಿಕಯಜ್ಞವನ್ನೊಂದು ಕುಶಲ ಕಲೆಯಂತೆ ಬೆಳೆಸಿದ್ದರು. ಆದರೆ ಋಗ್ವೇದದಲ್ಲಿ ಬರೆಹ ಗೊತ್ತಿದ್ದ ಬಗೆಗೆ ಯಾವ ಉಲ್ಲೇಖವೂ ಇಲ್ಲ. ಅವರು ಪಶುಪಾಲನೆ ಮಾಡುತ್ತ, ವ್ಯವಸ್ಥಿತ ವರ್ಗಜೀವನವನ್ನು ನಡೆಸುತ್ತಿದ್ದರು.

ಈ ಜನವರ್ಗಗಳ ಒಡೆಯನೇ ರಾಜ ; ಇವನಿನ್ನೂ ನಿರಂಕುಶಪ್ರಭುವಾಗಿರಲಿಲ್ಲ ; ಜನವರ್ಗದ ಆಳಿಕೆ ಇವನಂತೆ ಜನವರ್ಗದ 'ಸಭಾ' ಹಾಗೂ 'ಸಮಿತಿ'ಗಳ ಜವಾಬ್ದಾರಿಯೂ ಆಗಿರುತ್ತಿದ್ದಿತು. ಅವನ ಅಭಿಷೇಕಕ್ಕೂ ಇವರ ಒಪ್ಪಿಗೆ ಬೇಕಾಗುತ್ತಿತ್ತು. ಸಾಮಾನ್ಯವಾಗಿ ರಾಜತ್ವವು ಅನುವಂಶೀಯವಿತ್ತು; ಅವನಿಗೆ 'ಸಭಾಸದ'ರಿರುವ ಒಂದು ರಾಜಾಸ್ಥಾನವೂ ಇರುತ್ತಿತ್ತು ; ಅವನಿಗೊಬ್ಬ 'ಗ್ರಾಮಣೀ' ಮತ್ತು ಒಬ್ಬ 'ಸೇನಾನಿ'ಯಿರುತ್ತಿದ್ದರು ; ಒಬ್ಬ 'ಪುರೋಹಿತ' ನಂತೂ ಮುಖ್ಯವಾಗಿ ಇದ್ದೇತೀರಬೇಕಾಗಿತ್ತು ; ವಿಜಯಾಭ್ಯುದಯಗಳಿಗೆಲ್ಲ ಪುರೋಹಿತನ ಮಂತ್ರವೇ ಪ್ರಯೋಜಕವೆಂಬ ಭಾವನೆಯಿದ್ದುದರಿಂದ. ಇನ್ನೂ ರಾಜನಲ್ಲಿ ದೇವತ್ವ ಆರೋಪಿತವಾಗಿರಲಿಲ್ಲ ; ಅವನು ತಾನೇ ಪುರೋಹಿತನ ಸ್ಥಾನವನ್ನು ಆಕ್ರಮಿಸುತ್ತಿರಲಿಲ್ಲ. ಜನವರ್ಗದ ಉನ್ನತಿಗೆ ಯುದ್ಧದಲ್ಲಿ ಬಂದ ಲೂಟಿಯನ್ನು ಬಳಸುವುದೇ ಹೆಚ್ಚಾಗಿತ್ತು. ತೆರಿಗೆಯ ವಸೂಲಿ ಮತ್ತು ನ್ಯಾಯದಾನದ ವ್ಯವಸ್ಥೆ ಸ್ಪಷ್ಟವಾಗಿ ಕಾಣುವದಿಲ್ಲ. ಕೊಲೆಪಾತಕರಿಗೆ ಮರಣದಂಡನೆ ಕೊಡುತ್ತಿದ್ದಿರಬಹುದು. ಋಗ್ವೇದದಲ್ಲಿ ಬರುವ ರಾಜರಲ್ಲೆಲ್ಲ ನಿಸ್ಸಂಶಯವಾಗಿ ಐತಿಹಾಸಿಕ ವ್ಯಕ್ತಿಯೆಂದರೆ ಸುದಾಸ. ಸರಸ್ವತಿಯ ಮೇಲ್ದಂಡೆಯಲ್ಲಿದ್ದ ಭರತರೆಂಬ ಜನವರ್ಗದ ನಾಯಕನೀತ. ಪರುಷ್ಣೀ ಅಥವಾ ಇಂದಿನ ರಾವಿ ನದಿಯ ತೀರದಲ್ಲಿ ಅವನು ದಶರಾಜರ ಒಕ್ಕೂಟವನ್ನು ಯುದ್ಧಮಾಡಿ ಸೋಲಿಸಿದ ವರ್ಣನೆಗಳು ಬರುತ್ತವೆ. ಇವರಲ್ಲೆಲ್ಲ ಪ್ರಬಲರಾಗಿದ್ದವರೇ 'ಪೂರು'ಗಳು. ಸರಸ್ವತಿಯ ಕೆಳದಂಡೆಯಲ್ಲಿದ್ದವರು ; ಅವರ ರಾಜ ಪುರುಕುತ್ಸ ಯುದ್ಧದಲ್ಲಿ ಮಡಿದನು. ಮುಂದೆ ಮಹಾಭಾರತದ ಕಾಲಕ್ಕೆ ಭರತ ಮತ್ತು ಪುರುವಂಶಗಳು ಕಲೆತು 'ಕುರು' ವಂಶವಾಗುವುದನ್ನು ನೋಡುತ್ತೇವೆ. ಹೀಗೆ ಸಾಮಾನ್ಯವಾಗಿ ಯುದ್ಧದ ಪರಿಣಾಮವಾಗಿ ಮಿಕ್ಕ ಜನವರ್ಗಗಳೂ ಕಲೆತು ಒಂದಾಗುತ್ತಿದ್ದಿರಬಹುದು.

ಪ್ರಾಚೀನಕಾಲದಲ್ಲಿಯೇ 'ಬ್ರಹ್ಮ', 'ಕ್ಷತ್ರ', 'ವಿಟ್'ಮುಂತಾದ ಸಾಮಾಜಿಕ ವರ್ಗಗಳಿದ್ದವು. ಭಾರತದ ಮೂಲನಿವಾಸಿಗಳಾದ 'ದಾಸ' ರೊಡನೆ ರಕ್ತಸಂಬಂಧದಿಂದ ಜನಿಸಿದವರನ್ನು ಕೀಳೆಂದು ಭಾವಿಸುವ ಸಂಪ್ರದಾಯ ಮುಂದೆ ಮುಂದೆ ಬೆಳೆಯುತ್ತ ಹೋದಂತೆ ಕಾಣುತ್ತದೆ. ಇತ್ತ ಪುರೋಹಿತವರ್ಗದವರು ತಾವು ಮೇಲೆಂಬ ಭಾವನೆಯನ್ನೂ ಬೆಳೆಸಿ ಕೊಂಡಂತಿದೆ. ಇದರ ಫಲವಾಗಿ ಋಗ್ವೇದದ ಕಡೆಯ ಹೊತ್ತಿಗೆ ನಾಲ್ಕು ವರ್ಗಗಳ ಸಂಪ್ರದಾಯ ಸ್ಪಷ್ಟವಾಗಿ ಕಾಣುತ್ತದೆ. 'ವರ್ಣ'ವೆಂದರೆ ಜಾತಿಯಲ್ಲ ; ಗುಣಕರ್ಮಮೂಲವಾದ ಆರ್ಯರ ಸಾಮಾಜಿಕವಿಭಾಗ ಮಾತ್ರ.

ಕುಟುಂಬವೇ ಆರ್ಯರ ಸಮಾಜದ ಮೂಲಸಂಸ್ಥೆಯಾಗಿತ್ತು. ಸಂಬಂಧಿಕರ ಕುಟುಂಬಗಳು ಸೇರಿ 'ಗ್ರಾಮ' ವೆನಿಸುತ್ತಿದ್ದವು ; ಋಗ್ವೇದದಲ್ಲಿ 'ಗ್ರಾಮ' ವೆಂದರೆ ಹಳ್ಳಿಯೆಂದರ್ಥವಲ್ಲ ; ಸಂಬಂಧಿಕರ ಕುಟುಂಬಗಳ ಸಮೂಹವೆಂದು ಮಾತ್ರ ಅರ್ಥವಿದೆ. ಕುಟುಂಬವು ಪಿತೃವಂಶೀಯವೂ, ಪಿತೃಪ್ರಧಾನವೂ ಆಗಿರುತ್ತಿತು. ಪತ್ನಿಗೆ ಗೌರವದ ಸ್ಥಾನವಿದ್ದರೂ, ಪತಿಗೆ ಅಧೀನಳಾಗಿರುತ್ತಿದ್ದಳು. ಮದುವೆ ಸಾಮಾನ್ಯವಾಗಿ ಏಕಪತ್ನೀವಿಷಯಕವೂ, ಬಿಡಿಸಿಕೊಳ್ಳಲಾರದ ಧರ್ಮಬಂಧನವೂ ಆಗಿರುತ್ತಿತ್ತು. ಪತ್ನೀಪರಿತ್ಯಾಗ ಅಥವಾ ವಿಧವೆಯರ ಪುನರ್ವಿವಾಹಕ್ಕೆ ಅವಕಾಶವಿರಲಿಲ್ಲ.



ಪಶುಪಾಲನೆ ಮತ್ತು ಕೃಷಿಯ ಸಂಯುಕ್ತ ಆರ್ಥಿಕ ವ್ಯವಸ್ಥೆ ಆರ್ಯರದಾಗಿತ್ತು. ಇದರಲ್ಲಿ ಗೋಧನಕ್ಕೇ ಹೆಚ್ಚಿನ ಮಹತ್ತ್ವ ; ಕೃಷೀವಲನು ಗೋಧನವನ್ನು ಬಯಸುತ್ತಾನೆ ; ಕ್ಷತ್ರಿಯನು ಯುದ್ಧದಲ್ಲಿ ಗೋಗ್ರಹಣವನ್ನು ಹಾರೈಸುತ್ತಾನೆ ; ಪುರೋಹಿತನಿಗೆ ಗೋದಾನ ಲಭಿಸುತ್ತದೆ. ಹಣದಂತೆ ಗೋವೃಂದಗಳನ್ನೇ ಬಳಸುತ್ತಿದ್ದಂತೆ ಕಾಣುತ್ತದೆ. ಗೋವಿಗೆ 'ಅಘ್ನ್ಯಾ' ಎಂಬ ನಾಮಾಂತರವಿದ್ದರೂ ಮಾಂಸಕ್ಕಾಗಿ ಕೂಡ ಗೋವಧೆ ನಡೆಯುತ್ತಿದ್ದಂತೆ ತೋರುತ್ತದೆ.

ಗೋವಿನಷ್ಟೇ ಪ್ರಾಧಾನ್ಯವಿದ್ದ ಇನ್ನೊಂದು ಪ್ರಾಣಿ ಕುದುರೆ. ಇದನ್ನು ಯುದ್ಧದಲ್ಲಿ ರಥಗಳನ್ನೆಳೆಯಲು ಬಳಸುತ್ತಿದ್ದರು. ರಥಕ್ಕೆ ಎರಡು ಗಾಲಿಗಳು ; ಎರಡು ಕುದುರೆಗಳು ; ಇಬ್ಬರು ಯೋಧರು ಕುಳಿತುಕೊಳ್ಳುತ್ತಿದ್ದರು. ವಾಹನಕ್ಕೆ ಕುದುರೆಯನ್ನು ಹೆಚ್ಚಾಗಿ ಬಳಸುತ್ತಿರಲಿಲ್ಲ. ಮಿಕ್ಕ ಸಾಕುಪ್ರಾಣಿಗಳಲ್ಲಿ ಉಣ್ಣೆಯನ್ನೀಯುವ ಕುರಿ ಮತ್ತು ಆಡುಗಳು ಬರುತ್ತವೆ. ಬಟ್ಟೆಗೆ ಉಣ್ಣೆಯನ್ನು ಬಳಸುತ್ತಿದರು. ಆನೆಯ ಬಳಕೆ ಇನ್ನೂ ಬಂದಿರಲಿಲ್ಲ. ನಾಯಿಯ ಉಲ್ಲೇಖಗಳು ಬರುತ್ತವೆಯಾದರೂ ಇರಾನಿಯನರಂತೆ ಅದನ್ನು ದಿವ್ಯಪ್ರಾಣಿಯೆಂದು ಬಗೆದಂತಿಲ್ಲ. ಪಶುಪಾಲನೆಗಿಂತ ಸ್ವಲ್ಪ ಕೆಳದರ್ಜೆಯ ವೃತ್ತಿ ಕೃಷಿಯೆಂಬ ಭಾವನೆಯಿದ್ದುದರಿಂದಲೋ ಏನೋ, ಕೃಷಿಕರ್ಮಕ್ಕೆ ಹೆಚ್ಚಿನ ಉಲ್ಲೇಖಗಳಿಲ್ಲ. ಅವರ ಬೆಳೆಯೆಂದರೆ ಯವಧಾನ್ಯವೊಂದೇ. ಉಳುವುದು, ಕೊಯ್ಲು ಮುಂತಾದುವಕ್ಕೆ ಅಲ್ಲಲ್ಲಿ ಉಲ್ಲೇಖಗಳಿವೆ.

ಆರ್ಯರು ಸಂಗೀತಪ್ರಿಯರೂ ಆಗಿದ್ದರು. ವೇಣು, ವೀಣೆ ಮತ್ತು ತಂಬೂರಿಯ ವಾದ್ಯಗಳೂ, ತಾಳ-ಮದ್ದಲೆಗಳೂ ಅವರ ಬಳಕೆಯಲ್ಲಿದ್ದವು. ಗಾನ-ನೃತ್ಯಗಳ, ನರ್ತಕಿಯರ ಉಲ್ಲೇಖಗಳು ಬರುತ್ತವೆ.

ಆರ್ಯರ ವಿನೋದಗಳಲ್ಲಿ ಜೂಜಾಟವೂ ಒಂದು. ಅಕ್ಷಕ್ರೀಡೆಯ ವರ್ಣನೆಗೆ ಮೀಸಲಾದ ಒಂದು ಇಡಿಯ ಸೂಕ್ತವೇ ಋಗ್ವೇದದಲ್ಲಿದೆ.

ಆರ್ಯರಿಗೆ ನಗರ ಜೀವನವಿರದಿದ್ದರೂ, ಅವರು ಕಲ್ಲು-ಇಟ್ಟಿಗೆಗಳ ಕಟ್ಟಡಗಳನ್ನು ನಿರ್ಮಿಸದಿದ್ದರೂ, ಅವರ ಉಪಕರಣಗಳು ತುಂಬಾ ನಾಗರಿಕವಾಗಿದ್ದವು. ಲೋಹಕಾರರು ಉತ್ತಮ ಯುದ್ಧೋಪಕರಣಗಳನ್ನು ಮಾಡುತ್ತಿದ್ದರು. ರಥಕಾರರೂ, ಬಡಗಿಗಳೂ ಇರುತ್ತಿದ್ದರು ; ಕಬ್ಬಿಣವಿನ್ನೂ ಬಳಕೆಗೆ ಬಂದಿರಲಿಲ್ಲ. 'ಅಯಸ್' ಶಬ್ದಕ್ಕೆ ಋಗ್ವೇದದಲ್ಲಿ ತಾಮ್ರ ಅಥವಾ ಕಂಚೆಂದೇ ಅರ್ಥ. ಮುಂದೆ ಕಬ್ಬಿಣವೆಂಬ ಅರ್ಥ ಬರುತ್ತದೆ. ಋಗ್ವೇದದಲ್ಲಿ ಇನ್ನೂ ನಾಣ್ಯಗಳ ಬಳಕೆ ಮತ್ತು ಬಡ್ಡಿಯಿಂದ ಜೀವಿಸುವವರ ವೃತ್ತಿ ಹೆಚ್ಚಾಗಿರಲಿಲ್ಲ.

ಋಗ್ವೇದೋತ್ತರ ಕಾಲದ ವೈದಿಕಸಂಸ್ಕೃತಿಯು ವೇಳೆಗೆ ಗಂಗಾನದಿಯವರೆಗೆ ಅದು ಹರಡಿರುವುದನ್ನು ನೋಡುತ್ತೇವೆ. ' ಆರ್ಯಾವರ್ತ ' ವೆಂಬ ಹೆಸರು ವಿಂಧ್ಯ-ಹಿಮಾಚಲಗಳ ನಡುವಣ ಹೆಚ್ಚಿನ ಭಾಗಕ್ಕೆ ಅನ್ವಯಿಸುತ್ತದೆ. ಈ ಸಂಸ್ಕೃತಿಗೆ ಮುಖ್ಯ ಲೌಕಿಕ ಸಾಹಿತ್ಯಾಧಾರಗಳೆಂದರೆ ಇತಿಹಾಸ, ಪುರಾಣಗಳೇ ಸರಿ. ಇವುಗಳ ವಿವರಣೆ ಮುಂದೆ ಬರುತ್ತದೆ. ಸಣ್ಣ ರಾಜರ ಸ್ಥಾನದಲ್ಲಿ ಮಹಾಚಕ್ರವರ್ತಿ ಸಾರ್ವಭೌಮರನ್ನು ನೋಡುತ್ತೇವೆ. ಆಡಳಿತಕ್ಕೆ ಅನೇಕ ಅಧಿಕಾರಿಗಳ ವ್ಯವಸ್ಥೆಯೂ, ನ್ಯಾಯನಿರ್ಣಯಕ್ಕೆ ಯೋಗ್ಯ ಕಾಯದೆಗಳೂ ಬೆಳೆದಿರುವುದನ್ನು ಕಾಣುತ್ತೇವೆ. ವಿವಾಹದಲ್ಲಿ ' ಬ್ರಾಹ್ಮ,' 'ದೈವ', ' ಪ್ರಾಜಾಪತ್ಯ', ' ಗಾಂಧರ್ವ', ' ರಾಕ್ಷಸ ' ಇತ್ಯಾದಿ ನಾನಾ ಪದ್ಧತಿಗಳು ಬಳಕೆಗೆ ಬರುತ್ತವೆ. ವೇಷಭೂಷಣಗಳಲ್ಲೂ ನೀವೀವಾಸ, ಅಧಿವಾಸ, ಉಷ್ಣೀಷ ಇತ್ಯಾದಿಗಳ ವಿಕಸಿತಸ್ವರೂಪವನ್ನು ಕಾಣುತ್ತೇವೆ. ಉಣ್ಣೆಯಂತೆ ಹತ್ತಿ ಮತ್ತು ರೇಷ್ಮೆಯನ್ನೂ ಬಟ್ಟೆ ಮಾಡಲು ಬಳಸುತ್ತಾರೆ. ಸ್ತ್ರೀಯರು ನಾನಾಸ್ವರ್ಣಾಲಂಕಾರಗಳನ್ನು ಧರಿಸುವ ಉಲ್ಲೇಖಗಳು ಬರುತ್ತವೆ. ಈ ಕಾಲದಲ್ಲಿ ಪ್ರಾಚೀನ ವರ್ಣವಿಭಾಗವು ಘನೀಭೂತವಾಗಿ ಜಾತಿ ಸಂಸ್ಥೆಯಲ್ಲಿ ಪರ್ಯವಸಾನಗೊಳ್ಳುತ್ತದೆ. ಕೃಷಿ, ವಾಣಿಜ್ಯಗಳಲ್ಲೂ ತುಂಬಾ ಅಭಿವೃದ್ಧಿಯಾಗಿರುತ್ತದೆ.

ಹೀಗೆ ಐತಿಹಾಸಿಕ ದೃಷ್ಟಿಯಿಂದ ನಾವು ಇದುವರೆಗೆ ಅವಲೋಕಿಸಿದ ಅಂಶಗಳೆಲ್ಲಕ್ಕಿಂತಲೂ ಮೂರು ಸಾವಿರ ವರ್ಷಗಳಷ್ಟು ಕಾಲ ಇಂದಿನವರೆಗೂ ಭಾರತದ ಜನಜೀವನದಲ್ಲಿ ಜೀವಂತವಾಗಿ ಉಳಿದುಬಂದಿರುವ ವೇದಸಂಸ್ಕೃತಿಯು ತಿರುಳಾದ ' ಸನಾತನ ಧರ್ಮ'ವೇ ಅತ್ಯಂತ ಮಹತ್ತ್ವದ್ದೆಂದು ಮತ್ತೆ ಹೇಳಬೇಕಾಗಿದೆ. ಇಹದಲ್ಲಿ ಶ್ರೇಯಸ್ಸನ್ನೂ ಪರದಲ್ಲಿ ಪ್ರೇಯಸ್ಸನ್ನೂ, ಮಾನವನಿಗೆ ಲಭಿಸುವಂತೆ ಮಾಡಲು ವೇದವಾಙ್ಮಯ ನಿರೂಪಿಸುವ ಏಕೈಕ ಸಾಧನವೇ ವರ್ಣಾಶ್ರಮ ಧರ್ಮವೆಂದರೂ ಸಲ್ಲುತ್ತದೆ. ಭಗವತ್ ಪ್ರಾಪ್ತಿಯು ಪರಮಲಕ್ಷ್ಯ, ವೈದಿಕ ವಾಙ್ಮಯದಿಂದ ಎಂದೂ ಮರೆಯಾಗದು. ಒಮ್ಮೆ ಯಜ್ಞವಿಚಾರವಾಗಿ ಸ್ಫುರಿಸಲಿ, ಇನ್ನೊಮ್ಮೆ ಜ್ಞಾನದೀಪ್ತಿಯಾಗಿ ಪಸರಿಸಲಿ, ಮತ್ತೊಮ್ಮೆ ಭಗವದ್ವಿಭೂತಿಯ ಅನಂತಮುಖಗಳ ಆರಾಧನೆಯಾಗಿ ಅವತರಿಸಲಿ, ವೇದಋಷಿಗಳ ಅಮರವಾಣಿ ಮುಂದಿನ ಸಾಹಿತ್ಯರಾಶಿಗೆಲ್ಲ ಪ್ರೇರಕವಾಗಿದೆ ; ಮುಂದಿನ ಶಾಸ್ತ್ರರಾಶಿಗೆಲ್ಲ ಪರಮಪ್ರಮಾಣವಾಗಿದೆ; ಸಾವಿರಾರು ವರ್ಷಗಳ ಅಖಂಡ ಇತಿಹಾಸದಲ್ಲಿ ಭಾರತೀಯರೆಲ್ಲರ ಜೀವನ ಧ್ಯೇಯಗಳನ್ನು, ಕರ್ಮಗಳನ್ನು ನಿರ್ದೇಶಿಸಿರುವ ಅಕ್ಷಯದೀಪವಾಗಿದೆ. ಇಂದಿಗೂ ವೇದಪ್ರಕಾಶ ನಮಗೆ ಮಾರ್ಗದರ್ಶನ ಮಾಡಬಲ್ಲದೆನ್ನಲು ಅದರ ಬಗೆಗೆ ಬಂದಿರುವ ಹತ್ತಾರುಸಾವಿರ ಪುಟಗಳ ವಿದ್ವತ್ಸಂಶೋಧನೆಯೇ ಸಾಕ್ಷಿ.

* * * *



# ಭಾಗ—III

# ಲೌಕಿಕಸಾಹಿತ್ಯ

## ಪುರಾಣ, ಆಗಮ ಹಾಗು ತಂತ್ರ ಸಾಹಿತ್ಯ

ಸಂಸ್ಕೃತದಲ್ಲಿ ಕಾವ್ಯಧರ್ಮಕ್ಕೆ ಹೆಚ್ಚಿನ ಪುರಸ್ಕಾರ ನೀಡುವ ಲೌಕಿಕಸಾಹಿತ್ಯವನ್ನು ಆಸ್ಥಾನ ಕವಿಗಳು ಹೆಚ್ಚಾಗಿ ಪ್ರಚಾರಕ್ಕೆ ತಂದರೆಂಬುದು ನಿಜವಾದರೂ, ಅದರ ಹಿನ್ನೆಲೆಯಲ್ಲಿ ಧರ್ಮ ನೀತಿಗಳ ಬೋಧೆಯನ್ನೇ ಮುಖ್ಯಗುರಿಯಾಗಿಸಿಕೊಂಡು, ಜನಸಾಮಾನ್ಯಕ್ಕೂ ದೇವತಾಭಕ್ತಿ ಪೂಜೆ, ಸದಾಚಾರ ನಿಷ್ಠೆ, ಕ್ಷೇತ್ರತೀರ್ಥಾದಿಗಳ ಮಾಹಾತ್ಮ್ಯ, ಸೃಷ್ಟಿವಿಚಾರ, ಪರಂಪರಾಗತ ಪ್ರಾಚೀನ ಸೂರ್ಯಚಂದ್ರಾದಿ ವಂಶಗಳ ರಾಜರ ಮತ್ತು ಋಷಿಗಳ ಇತಿಹಾಸ, ವೈದಿಕ ಧರ್ಮದ ತಿರುಳಿನ ಪ್ರಚಾರ—ಇವುಗಳನ್ನು ಬಿಂಬಿಸುವುದಕ್ಕೆಂದೇ ಬರೆದ ಇನ್ನೊಂದು ವಿಶಾಲ ಸಾಹಿತ್ಯವಿದೆ. ಇಂದಿನ ಪ್ರಚಲಿತ ಹಿಂದೂಧರ್ಮದ ನಾನಾ ಪ್ರಕಾರಗಳಿಗೂ ಇವೇ ಮೂಲ ಗ್ರಂಥಗಳೆಂದರೂ ಸಲ್ಲುತ್ತದೆ. ಇದರಲ್ಲಿ ಅಷ್ಟಾದಶ ಪುರಾಣಗಳು, ಅಷ್ಟೇ ಉಪಪುರಾಣಗಳು, ಸಂಹಿತೆಗಳು, ಆಗಮಗಳು, ತಂತ್ರಗಳು, ಮುಂತಾದ ಅನೇಕ ರೀತಿಯ ಬೃಹದ್ರಚನೆಗಳು ಸಮಾವಿಷ್ಟವಾಗುತ್ತವೆ. ವೇದದ ನಿಗೂಢ ತತ್ತ್ವಜ್ಞಾನವನ್ನು ಸರಲವಾಗಿ ಆಖ್ಯಾನಗಳ ಮುಖಾಂತರ ತಿಳಿಸಿಕೊಡುವ ರಚನೆಗಳೇ ಪುರಾಣಗಳೆಂದು ಹೇಳುವ ಪ್ರತೀತಿಯಿದೆ :—

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರಿಷ್ಯತಿ ॥

ಪುರಾಣಕ್ಕೆ ಐದು ಮುಖ್ಯ ಲಕ್ಷಣಗಳೆನ್ನುವರು :—

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಮ್ ॥

ಈ ಪಂಚಲಕ್ಷಣಗಳಲ್ಲಿ ಕೆಲವೊಂದು ಊನವಾದುವನ್ನೇ ಉಪಪುರಾಣವೆನ್ನುವರು.

ಹದಿನೆಂಟು ಮಹಾಪುರಾಣಗಳ ಹೆಸರುಗಳನ್ನು ಸುಲಭವಾಗಿ ನೆನಪಿನಲ್ಲಿಡಲು ಕೆಳಗಿನ ಶ್ಲೋಕ ಸಹಾಯಕವಾಗುತ್ತದೆ :—

ಮ-ದ್ವಯಂ ಭ-ದ್ವಯಂ ಚೈವ ಬ್ರ-ತ್ರಯಂ ವ-ಚತುಷ್ಟಯಮ್ ।
ಅ-ನಾ-ಪ-ಲಿಂ-ಗ-ಕೂ-ಸ್ಕಾನಿ ಪುರಾಣಾನಿ ಪ್ರಚಕ್ಷತೇ ॥

ಮತ್ಸ್ಯ, ಮಾರ್ಕಂಡೇಯ, ಭಾಗವತ, ಭವಿಷ್ಯ, ಬ್ರಹ್ಮಾಂಡ, ಬ್ರಹ್ಮವೈವರ್ತ, ಬ್ರಹ್ಮ, ವಾಮನ, **ವರಾಹ,** ವಿಷ್ಣು, ವಾಯು, ಅಗ್ನಿ, ನಾರದ, ಪದ್ಮ, ಲಿಂಗ, ಗರುಡ, ಕೂರ್ಮ ಮತ್ತು ಸ್ಕಾಂದ ಎಂಬಿವೇ ಸಾಂಪ್ರದಾಯಿಕವಾದ ಅಷ್ಟಾದಶ ಮಹಾಪುರಾಣಗಳು.

ಉಪಪುರಾಣಗಳ ಹೆಸರುಗಳನ್ನು ತಿಳಿಸುವ ಶ್ಲೋಕಗಳನ್ನು ಕೆಳಗೆ ಬರದಿದೆ :—

ಸನತ್ಕುಮಾರಂ ಪ್ರಥಮಂ ನಾರಸಿಂಹಂ ತತಃ ಪರಮ್ ।
ನಾರದೀಯಂ ಶಿವಂ ಚೈವ ದೌರ್ವಾಸಸಮನುತ್ತಮಮ್ ॥
ಕಾಪಿಲಂ ಮಾನವಂ ಚೈವ ತಥಾ ಚೌಶನಸಂ ಸ್ಮೃತಮ್ ।
ವಾರುಣಂ ಕಾಲಿಕಾಖ್ಯಂ ಚ ಸಾಂಬಂ ನಂದಿಕೃತಂ ಶುಭಮ್ ॥
ಸೌರಂ ಪಾರಾಶರಪ್ರೋಕ್ತಮಾದಿತ್ಯಂ ಚೇತಿ ವಿಸ್ತರಮ್ ।
ಮಾಹೇಶ್ವರಂ ಭಾಗವತಂ ವಾಸಿಷ್ಠಂ ಚ ಸವಿಸ್ತರಮ್ ॥

ಪುರಾಣಗಳ ಮೂಲಸಾಮಗ್ರಿ, ವೇದದಷ್ಟೇ ಪ್ರಾಚೀನವೆನ್ನಲು ಆಧಾರಗಳಿವೆ :

ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾ ಸಹ ।
ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾಃ ದಿವಿ ಶ್ರಿತಾಃ ॥

ಎಂದು ಅಥರ್ವವೇದ (XI· vii· 24) ದಲ್ಲಿ ಉಲ್ಲೇಖವಿರುವಂತೆ "ಸೋಽಯಮಿತಿ ಕಿಂಚಿತ್ಪುರಾಣಮಾಚಕ್ಷೀತ " ಎಂದು ' ಶತಪಥಬ್ರಾಹ್ಮಣ ' (XIII. iv· 3· 13)ದಲ್ಲಿ ಉಕ್ತವಾಗಿದೆ. " ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ" ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿಯೂ (II·iv.11), " ಇತಿಹಾಸಪುರಾಣಂ, ಪಂಚಮಂ ವೇದಾನಾಂ ವೇದ " ಎಂದು ಛಾಂದೋಗ್ಯೋಪನಿಷತ್ತಿನಲ್ಲಿಯೂ (VII· i· 1)ಪುರಾಣಗಳಿಗೆ ಉಲ್ಲೇಖವಿದೆ. ಆಪಸ್ತಂಬ ಧರ್ಮಸೂತ್ರದಲ್ಲಿ (II· xxii. 35) "ಅಥಪುರಾಣೇ ಶ್ಲೋಕಾನುದಾಹರನ್ತಿ—..ಅಷ್ಟಾಶೀತಿ ಸಹಸ್ರಾಣೀತಿ" ಎಂಬ ವಾಕ್ಯವಿದೆ. ಆದರೆ ಈಗ ಉಪಲಬ್ಧವಿರುವ ಬೃಹತ್ಪುರಾಣದ ಪುರಾಣೋಪಪುರಾಣಗಳು ಅಷ್ಟೊಂದು ಪ್ರಾಚೀನಕಾಲದವಲ್ಲವೆಂಬುದೇ ಆಧುನಿಕ ವಿದ್ವಾಂಸರ ತೀರ್ಮಾನ. ವೇದಕಾಲೀನ ಮೂಲಸಾಮಗ್ರಿಯು ಸತ್ತ್ವ ಅತಿ ವಿಸ್ತಾರವಾಗಿ ಹೆಣೆದುಕೊಂಡ ಉತ್ತರಕಾಲೀನ ಆಖ್ಯಾನಗಳು ಗುಪ್ತಚಕ್ರವರ್ತಿಗಳ ಕಾಲದಲ್ಲಿ ಈಗಿನ ರೂಪವನ್ನು ಪಡೆಯುತೊಡಗಿದವೆಂದು ಅವರ ಊಹೆಯಿಂದೆ. ಪುರಾಣಗಳಲ್ಲಿ ಪ್ರಾಚೀನವಾದವು ಮಾತ್ರ ಗುಪ್ತಕಾಲೀನ (ಕಿ. ಶ. 300–550) ವೆಂದರೂ, ಕ್ರಿ ಶ. ಹತ್ತನೆಯ ಶತಮಾನದವರೆಗೆ ಅವು ಬೆಳೆಯುತ್ತ, ಹೊಸಹೊಸದಾಗಿ ರಚಿತವಾಗುತ್ತ ಹೋದವೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಪುರಾಣಗಳ ಗಾತ್ರ ಎಷ್ಟು ದೊಡ್ಡದೆಂಬುದನ್ನು ಮುಂದಿನ ಶ್ಲೋಕಸಂಖ್ಯೆ ಸ್ಪಷ್ಟಪಡಿಸುತ್ತದೆ :—



| ಪುರಾಣ | ಶ್ಲೋಕ ಸಂಖ್ಯೆ |
|---|---|
| ಮತ್ಸ್ಯ | 14,000 |
| ಮಾರ್ಕಂಡೇಯ | 9,000 |
| ಭಾಗವತ | 18,000 |
| ಭವಿಷ್ಯ | 24,500 |
| ಬ್ರಾಹ್ಮ | 13,000 |
| ಬ್ರಹ್ಮವೈವರ್ತ | 18,000 |
| ಬ್ರಹ್ಮಾಂಡ | 12,200 |
| ವಾಮನ | 10,000 |
| ವರಾಹ | 24,000 |
| ವಿಷ್ಣು | 23,000 |
| ವಾಯು | 24,000 |
| ಅಗ್ನಿ | 16,000 |
| ನಾರದೀಯ | 25,000 |
| ಪದ್ಮ | 55,000 |
| ಲಿಂಗ | 11,000 |
| ಗರುಡ | 18,000 |
| ಕೂರ್ಮ | 18,000 |
| ಸ್ಕಾಂದ | 81,000 |

ಪುರಾಣಗಳ ವಿಷಯದಲ್ಲಿ ತುಂಬಾ ಸಂಶೋಧನೆ ನಡೆಸಿರುವ ಡಾ॥ ಹಾಜ್ರಾ, ಅವರ ಅಭಿಪ್ರಾಯದಂತೆ ಪ್ರಾಚೀನತಮ ಪುರಾಣಗಳೆಂದರೆ ವಿಷ್ಣು—ಕ್ರಿ.ಶ. 400, ವಾಯು ಕ್ರಿ.ಶ. 500, ಭಾಗವತ—ಕ್ರಿ. ಶ. 600–700, ಮತ್ತು ಕೂರ್ಮ ಕ್ರಿ.ಶ. 700. ಬಾಣನ ಹರ್ಷಚರಿತ್ರೆಯಲ್ಲಿ (ಕಿ.ಶ. 600) ವಾಯುಪುರಾಣದ ನಿತ್ಯಪಠನದ ಉಲ್ಲೇಖ ಇಲ್ಲಿ ಗಮನಾರ್ಹ ಸಾಕ್ಷ್ಯವನ್ನೊದಗಿಸುತ್ತದೆ. " ಅಗ್ನಿಪುರಾಣ " ಅವರ ಅಭಿಪ್ರಾಯದಲ್ಲಿ ಕ್ರಿ.ಶ. 900ಕ್ಕಿಂತ ಪ್ರಾಚೀನವಲ್ಲ. ಅದರಲ್ಲಿ ಆನಂದವರ್ಧನ, ಭೋಜಾದಿಗಳ ಸಿದ್ಧಾಂತಗಳು ಅನುಸೃತವಾಗಿರುವುದರಿಂದ, ನಾರದೀಯ, ಬ್ರಹ್ಮ, ಗರುಡ, ಸ್ಕಾಂದ ಮುಂತಾದ ಪುರಾಣಗಳ ಕೆಲವು ಅಂಶಗಳು ಕ್ರಿ.ಶ. 700ರಷ್ಟು ಪ್ರಾಚೀನವಾದರೂ ಬಹಳಷ್ಟು ಅಂಶಗಳು ಹತ್ತರಿಂದ ಹದಿನಾಲ್ಕನೆಯ ಶತಮಾನದವರೆಗೆ ಬರೆದು ಸೇರಿಸಿದಂತಹವೂ ಇವೆ ಎನ್ನುತ್ತಾರೆ. ಹೀಗೆ ಪುರಾಣಗಳ ಸಾಹಿತ್ಯ ಕೂಡ ಲೌಕಿಕ ಸಂಸ್ಕೃತ ಸಾಹಿತ್ಯದ ಜೊತೆ ಜೊತೆಗೇ ವಿಕಸಿತವಾಗುತ್ತ ನಡೆದುದು ಗೋಚರವಾಗುತ್ತದೆ.

ಪ್ರತಿಪಾದ್ಯ ವಿಷಯ : ಮೊದಲೇ ಹೇಳಿದ ಪಂಚಲಕ್ಷಣಗಳ ವಿಷಯಕ್ಕೆ ಹೊರತಾಗಿ ಸಂಗೀತ, ಶಿಲ್ಪ, ಜ್ಯೋತಿಷ್ಯ, ವೈದ್ಯ, ವ್ಯಾಕರಣ, ಧನುರ್ವೇದ, ಚಿತ್ರ, ಅಲಂಕಾರ, ಧರ್ಮಶಾಸ್ತ್ರ, ವೇದಾಂತ, ಯೋಗ, ಸಾಂಖ್ಯ ಮುಂತಾದ ವಿವಿಧ ಶಾಸ್ತ್ರಸಂಗ್ರಹಗಳಿಗೂ ಕೆಲವೊಂದು ಪುರಾಣಗಳಲ್ಲಿ ಎಡೆಯಿದೆ. ಅಲ್ಲದೆ ಮತೀಯ ದೃಷ್ಟಿಯಿಂದ ಈ ದೇವತೆ ಪರಮಶ್ರೇಷ್ಠ, ಇನ್ನೊಂದು ದೇವತೆಯು ಕಡಿಮೆ ದರ್ಜೆಯೆನ್ನುವಂತಹ ಮತಾಂಧ ಶ್ಲೋಕಗಳಿಗೂ ಎಡೆಯುಂಟು. ವೈಷ್ಣವ-ಶೈವ ಮತಗಳ ಸ್ಪರ್ಧೆ ಇಲ್ಲಿ ಗೋಚರವಾಗುತ್ತದೆ. ಒಟ್ಟಿನ ಮೇಲೆ ಸಕಲ ಲೌಕಿಕ, ಧಾರ್ಮಿಕ, ದಾರ್ಶನಿಕ ನಂಬುಗೆಗಳಿಗೂ, ಲೋಕ–ಲೋಕಾಂತರಗಳ ಮತ್ತು ಪುಣ್ಯ-ಪಾಪಾದಿಗಳ ವಿವೇಚನೆಗೂ ಆಗರಗಳಾದ ಜ್ಞಾನಕೋಶಗಳೇ ಈ ಪುರಾಣಗಳೆನ್ನಬಹುದು. ಇವುಗಳ ಮುಖ್ಯ ಉದ್ದೇಶ ಸುಹೃತ್‌ಸಮ್ಮಿತವಾದ ಉಪದೇಶ, ಎಂದರೆ ಸ್ನೇಹಿತನ ಸಲಹೆಯಂತೆ ನೇರವಾಗಿ ಹಿಂದಿನ ಐತಿಹ್ಯಗಳಿಂದಲೂ, ಧಾರ್ಮಿಕ ಭಾವನೆಗಳ ಹಿನ್ನೆಲೆಯಿಂದಲೂ ಜನರಿಗೆ ಧರ್ಮ ಮತ್ತು ಸದಾಚಾರಗಳನ್ನು ಬೋಧಿಸುವುದು.

ಪುರಾಣಗಳ ಸಂಖ್ಯೆಯ ಬಗೆಗೆ ಒಂದು ಸಂಪ್ರದಾಯವನ್ನು ಮೇಲೆ ಬರೆದರೂ, ಆ ಸಾಂಪ್ರದಾಯಿಕ ನಿರ್ದೇಶನದಲ್ಲಿ ಸೇರದ ಅನೇಕ ಪುರಾಣಗಳು ಇಂದು ಹಸ್ತಪ್ರತಿಯಲ್ಲಿ ದೊರೆಯುತ್ತವೆ—ವಾಸಿಷ್ಠ, ನರಸಿಂಹ, ಬೃಹನ್ನಾರದೀಯ, ನಂದಿಕೇಶ್ವರ, ಆದಿತ್ಯ ಕಲ್ಕಿ, ದೇವೀ, ಶಿವಧರ್ಮ—ಇತ್ಯಾದಿ. ಇವೆಲ್ಲ ಹೆಚ್ಚಾಗಿ ಹತ್ತನೆಯ ಶತಮಾನಕ್ಕೀಚೆ ಉತ್ತರ ಕಾಲದ ರಚನೆಗಳು. ಇಷ್ಟೊಂದು ಪುರಾಣಗಳ ರಚನೆ ಒಂದು ಮಾತನ್ನು ಸ್ಥಿರಪಡಿಸುತ್ತದೆ—ಭಾರತೀಯ ಜನಜೀವನದಲ್ಲಿ ಅವಕ್ಕೆ ಅತ್ಯಂತ ಹೆಚ್ಚಿನ ಪುರಸ್ಕಾರವಿತ್ತೆಂಬುದನ್ನು. ಇವುಗಳಿಂದ ಪ್ರಭಾವಿತವಾಗದ ಭಾರತೀಯ ಭಾಷೆಯೇ ಒಂದೂ ಇಲ್ಲವೆನ್ನಬಹುದು. ಪುರಾಣಗಳ ಭಾಷ ಸುವಾಸಗಳು ಪುಣ್ಯದಾಯಕವೆಂಬ ಭಾವನೆ ಭಾರತದಲ್ಲೆಲ್ಲ ಬೇರೂರಿದ್ದಿತು. ದೇವಾಲಯಗಳಲ್ಲಿ ಇವುಗಳ ಪಠನಕ್ಕೆ ಏರ್ಪಾಡಿರುತ್ತಿತ್ತು. ಆದ್ದರಿಂದ ಇವು ಕಾಲಕಾಲಕ್ಕೆ ಬೆಳೆಯುತ್ತ, ರೂಪಾಂತರ ಪಡೆಯುತ್ತ, ಹೊಸಹೊಸದಾಗಿ ಹುಟ್ಟುತ್ತ ಹೋದವೆಂದು ತೋರುತ್ತದೆ. ವಿಷ್ಣುಪುರಾಣದಲ್ಲಿಯೇ (VI, iii 16) ಬರುವ ಒಂದು ಐತಿಹ್ಯದಂತೆ ವೇದಪಾರಗರಾದ ವ್ಯಾಸರೇ ಆಖ್ಯಾನ, ಉಪಾಖ್ಯಾನ, ಗಾಥಾ, ಕಲ್ಪಶುದ್ಧಿಗಳೆಂಬ ನಾಲ್ಕಂಗಗಳಿಂದ ಕೂಡಿದ ಒಂದು ಪುರಾಣಸಂಹಿತೆಯನ್ನಷ್ಟೇ ಮೊದಲು ರಚಿಸಿದರಂತೆ. ವ್ಯಾಖ್ಯಾನಕಾರರು ಹೇಳುವಂತೆ ಕಣ್ಣಿಂದ ಕಂಡ ಸಂಗತಿಯ ವರ್ಣನೆ, ಆಖ್ಯಾನ; ಇತರರಿಂದ ಕೇಳಿ ತಿಳಿದದ್ದು ಉಪಾಖ್ಯಾನ, ಪೂರ್ವಜರ ಪ್ರಶಂಸೆ ಗಾಥೆ ಮತ್ತು ಶ್ರಾದ್ಧಕಲ್ಪವೇ ಕಲ್ಪಶುದ್ಧಿ. ವ್ಯಾಸರ ಸಾಕ್ಷಾತ್ ಶಿಷ್ಯ ರೋಮಹರ್ಷಣನೆಂಬ ಸೂತ—ಪೌರಾಣಿಕ, ಅವನ ಶಿಷ್ಯರಾದ ಸುಮತಿ, ಅಗ್ನಿವರ್ಚಸ್, ಮೈತ್ರೇಯ, ಅಕೃತವ್ರತ ಮತ್ತು ಸಾವರ್ಣಿ, ಇವರೆಲ್ಲರೂ ತಮ್ಮ ತಮ್ಮ 'ಸಂಹಿತೆ'ಗಳನ್ನು ರಚಿಸಿದರಂತೆ. ಈ ಕಥೆಯು ಹಿಂದೆಯೂ ವಸ್ತುಸತ್ಯದ ಒಂದು ಸೂಚನೆಯಿದೆ. ಒಬ್ಬರೇ ವ್ಯಾಸರು ಇಷ್ಟನ್ನೂ ತಮ್ಮ ಕೈಯಿಂದ ಬರೆದರೆಂಬುದು ಇಂದಿನವರ ಕಲ್ಪನೆಗೆ ಮೀರುವ ಒಂದು ಪವಾಡ ; ಆದರೆ ಪ್ರತೀತಿ ಮಾತ್ರ



ಹಾಗೆಯೇ ಇದೆ. ಪುರಾಣಗಳಲ್ಲಿ ಪುನರುಕ್ತಿ, ಪರಸ್ಪರ ಉಲ್ಲೇಖ, ಕಡೆಗೆ ಕಾಳಿದಾಸಾದಿ ಕವಿಗಳ ಅನುಸರಣ—ಎಲ್ಲವನ್ನೂ ವಿದ್ವಾಂಸರು ಎತ್ತಿತೋರಿಸಿದ್ದಾರೆ. ಹೀಗೆ ಅವುಗಳಲ್ಲಿ ನೂರೆಂಟು ನ್ಯೂನಾತಿರೇಕಗಳಿದ್ದರೂ ಹಿಂದಿನ ಭಾರತೀಯ ಜನಸಂಸ್ಕೃತಿಯ ಹಾಗೂ ರೂಢಮೂಲ ಭಾವನೆಗಳ ಸ್ಪಷ್ಟ ಪರಿಚಯಕ್ಕೆ ಪುರಾಣಗಳೇ ಏಕಮಾತ್ರ ಸಾಧನವಾಗಿವೆ ಯೆಂಬುದನ್ನು ಮರೆಯುವಂತಿಲ್ಲ. ಸಹಸ್ರಮುಖದ ಪೌರಾಣಿಕ ಸಂಸ್ಕೃತಿಯನ್ನೇ ಇಂದು ಸಾಮಾನ್ಯವಾಗಿ ಹಿಂದೂಸಂಸ್ಕೃತಿಯೆಂದು ವ್ಯವಹರಿಸಲಾಗುತ್ತದೆ.

'ತಂತ್ರ', 'ಆಗಮ' ಅಥವಾ 'ಸಂಹಿತಾ' ಎಂಬ ಶಬ್ದಗಳಿಂದ ವ್ಯವಹೃತವಾಗುವ ಇನ್ನೊಂದು ಸಾಹಿತ್ಯರಾಶಿಯೂ ಇಲ್ಲಿ ಪ್ರಸ್ತುತವಾಗುತ್ತದೆ. ಇವುಗಳಲ್ಲಿ ವಿವಿಧ ಗೂಢ ಹಾಗೂ ಆಧ್ಯಾತ್ಮಿಕ ಸಂಪ್ರದಾಯಗಳವರ ರಹಸ್ಯವಿಚಾರಗಳಲ್ಲದೆ ನಾನಾರೀತಿಯ ಅನುಶಾಸನ ಮತ್ತು ಉಪಾಸನೆಗಳ ವಿವೇಚನೆಯೂ ಬರುತ್ತದೆ. ಪ್ರತಿಪಾದ್ಯವಾದ ವಿಷಯದೃಷ್ಟಿಯಿಂದ ಇವುಗಳಲ್ಲಿ ನಾಲ್ಕು ಭಾಗಗಳಿರುತ್ತವೆ—ಜ್ಞಾನ, ಯೋಗ, ಕ್ರಿಯಾ ಮತ್ತು ಚರ್ಯಾ ಎಂಬುದಾಗಿ ಜ್ಞಾನಪಾದದಲ್ಲಿ ದಾರ್ಶನಿಕ ಸಿದ್ಧಾಂತಗಳೆಲ್ಲ ಬರುತ್ತವೆ. ಇದರಲ್ಲಿ ಒಮ್ಮೆ ಏಕೇಶ್ವರವಾದದಲ್ಲಿ ಪಕ್ಷಪಾತ ಕಂಡರೆ ಇನ್ನೊಮ್ಮೆ ಅದ್ವೈತವಾದ ಎದ್ದುಕಾಣುತ್ತದೆ ; ಗುಹ್ಯವಾದ ಪ್ರಕ್ರಿಯೆಗಳೂ ಗೋಚರಿಸುತ್ತವೆ, ವರ್ಣ, ಅಕ್ಷರ, ಮಂತ್ರ, ಯಂತ್ರ ಶಾಸ್ತ್ರಗಳ ರಹಸ್ಯಶಕ್ತಿಗಳ ಉಲ್ಲೇಖವಿರುತ್ತದೆ. ಯೋಗಪಾದದಲ್ಲಿ ಮಾಯಾವಿಷ್ಟ ಮನಶ್ಶಕ್ತಿಗಳ ಸಂಯಮನವಿದ್ಯೆಯಿರುತ್ತದೆ. ಕ್ರಿಯಾಪಾದದಲ್ಲಿ ದೇವತಾಮೂರ್ತಿನಿರ್ಮಾಣ, ದೇವಾಲಯಗಳ ರಚನೆ, ದೇವತಾಪ್ರತಿಷ್ಠೆಯ ವಿಧಿಗಳು ಮುಂತಾದವು ಬರುತ್ತವೆ. ಚರ್ಯಾಪಾದದಲ್ಲಿ ಆಚಾರಗಳು, ಉತ್ಸವಗಳು ಮುಂತಾದ ಸಾಂಘಿಕ ಜೀವನದ ವಿವರಗಳು ಕಾಣಿಸುತ್ತವೆ. ಹೀಗೆ ತಂತ್ರ ಅಥವಾ ಆಗಮ ಗ್ರಂಥಗಳಲ್ಲಿ ದರ್ಶನ, ಗುಹ್ಯಸಾಧನೆ, ಕರ್ಮಕಾಂಡ, ನೀತಿಬೋಧೆಗಳೆಲ್ಲವೂ ಒಂದು ರೀತಿಯಲ್ಲಿ ಸಂಕಲಿತವಾಗಿರುತ್ತವೆ. ಶಿವನು ಪಾರ್ವತಿಗೆ ಹೇಳಿದ ನೆನ್ನುವ ತಂತ್ರಗಳನ್ನು ಆಗಮಗಳೆಂದೂ, ಪಾರ್ವತಿ ಶಿವನಿಗೆ ಹೇಳಿದಳೆನ್ನುವವನ್ನು ನಿಗಮಗಳೆಂದೂ ವ್ಯತ್ಯಾಸ ತೋರಿಸುವುದುಂಟು. ಹೆಚ್ಚಾಗಿ ಶಾಕ್ತರ ಗ್ರಂಥಗಳನ್ನು ತಂತ್ರಗಳೆಂದೂ, ಶೈವರವನ್ನು ಆಗಮಗಳೆಂದೂ, ವೈಷ್ಣವರವನ್ನು ಸಂಹಿತೆಗಳೆಂದೂ ವ್ಯವಹರಿಸುವುದನ್ನು ಕಾಣುತ್ತೇವೆ. ಆದರೆ ಈ ಶಬ್ದಗಳೆಲ್ಲ ಸಮಾನಾರ್ಥಕಗಳಾಗಿಯೂ ಪ್ರಯುಕ್ತವಾಗಿವೆ. ಈ ಮೂರೂ ವೈದಿಕತಂತ್ರಗಳ ಕೋಟಿಯಲ್ಲಿ ಸೇರುತ್ತವೆ. ವೇದ ಪ್ರಾಮಾಣ್ಯವನ್ನು ಸ್ವೀಕರಿಸುವುದರಿಂದ. ಆದರೆ ಬೌದ್ಧ ಮತ್ತು ಜೈನರಲ್ಲಿಯೂ ಬೆಳೆದು ಬಂದ ವಿಶಾಲ ತಾಂತ್ರಿಕ ಸಾಹಿತ್ಯವಿದೆ. ಇವನ್ನೆಲ್ಲ ಅವೈದಿಕವೆನ್ನುವರು.

ತಂತ್ರಗ್ರಂಥಗಳ ಅತಿ ಪ್ರಾಚೀನ ಹಸ್ತಲಿಪಿಗಳು ಕ್ರಿ.ಶ. 7ನೆಯ ಶತಮಾನದವು. ಆದ್ದರಿಂದ ಪುರಾಣಕಾಲದಲ್ಲಿಯೇ ತಂತ್ರಗಳೂ ವಿಕಸಿತವಾದವೆಂದು ಹೇಳಬಹುದು. ಮಹಾಭಾರತದಲ್ಲಿ ತಂತ್ರಗಳ ಉಲ್ಲೇಖವಿಲ್ಲ ; ಚೀನೀ ಬೌದ್ಧ ಯಾತ್ರಿಕರು ಕೂಡ (ಕ್ರಿ. ಶ. 600 ರಲ್ಲಿ ಭಾರತಕ್ಕೆ ಬಂದವರು) ಇವನ್ನು ಉಲ್ಲೇಖಿಸುವುದಿಲ್ಲ. ಆದ್ದರಿಂದ ಇವು ಕ್ರಿ. ಶ. 7ನೆಯ ಶತಮಾನದಿಂದ

ಈಚೆಗೆ ಮಾತ್ರ ಪ್ರಚಾರದಲ್ಲಿ ಬಂದಿರಬೇಕೆನಿಸುತ್ತದೆ. ಮಾತೃ-ದೇವತೆಯ ಪೂಜೆ ವೇದ ಪೂರ್ವಕಾಲೀನ ಜನತೆಯಲ್ಲೂ ಇದ್ದಿರಬಹುದಾದರೂ ಉಪಲಬ್ಧ ತಂತ್ರಗ್ರಂಥಗಳು ಮಾತ್ರ ಅರ್ವಾಚೀನ. ಹೆಚ್ಚಾಗಿ ತಂತ್ರಗ್ರಂಥಗಳು ಮೊದಲು ಕಾಶ್ಮೀರದಲ್ಲಿ, ಅನಂತರ ಬಂಗಾಲದಲ್ಲಿ ಆವಿರ್ಭವಿಸಿ ಬಳಿಕ ಭಾರತದಲ್ಲೆಲ್ಲ ಪ್ರಚಾರಗೊಂಡವೆಂದು ವಿದ್ವಾಂಸರು ಭಾವಿಸುತ್ತಾರೆ.

### ಆಗಮಸಾಹಿತ್ಯ

ಇದರಲ್ಲಿ ಮುಖ್ಯವಾದವೆಂದರೆ—ಮಾಲಿನೀವಿಜಯ, ಸ್ವಚ್ಛಂದ, ವಿಜ್ಞಾನಭೈರವ, ಆನಂದ ಭೈರವ, ಮೃಗೇಂದ್ರ, ಮತಂಗ, ನೇತ್ರ, ನೈಶ್ವಾಸ, ಸ್ವಾಯಂಭುವ, ರುದ್ರಯಾಮಲ, ಕಾಶ್ಮೀರ ಶೈವಾಗಮಗಳಲ್ಲಿ ಬರುವ ದರ್ಶನಕ್ಕೆ ಪತ್ರಭಿಜ್ಞಾಶಾಸ್ತ್ರವೆನ್ನುವರು. ಸೋಮಾನಂದ, ಅಭಿನವಗುಪ್ತ ಮುಂತಾದವರು ಶೈವಾಗಮಗಳಿಗೆ ಭಾಷ್ಯಗಳನ್ನು ಬರೆದು ತಮ್ಮ ರೀತಿಯ ಅದ್ವೈತವನ್ನು ಸಾಧಿಸಿರುವರು.

### ಸಂಹಿತಾಸಾಹಿತ್ಯ

ಇದರಲ್ಲಿ ಸರ್ವಪ್ರಮುಖವಾದ ಸಂಹಿತೆಯೆಂದರೆ—'ಅಹಿರ್ಬುಧ್ನ್ಯಸಂಹಿತಾ.' ಇದನ್ನು ಕಾಶ್ಮೀರದಲ್ಲಿ ಕ್ರಿ. ಶ. 500ರ ವೇಳೆಗೆ ಬರೆಯಲಾಯಿತೆನ್ನುತ್ತಾರೆ. 'ಈಶ್ವರ-ಸಂಹಿತಾ' 'ಪುಷ್ಕರ-ಸಂಹಿತಾ', 'ಪರಮ-ಸಂಹಿತಾ', 'ಸಾತ್ವತ-ಸಂಹಿತಾ' ಮುಂತಾದ ಗ್ರಂಥಗಳಿವೆ. ಪಾಂಚರಾತ್ರ, ವೈಖಾನಸ ಸಂಹಿತಾಗ್ರಂಥಗಳನ್ನು ವೈಷ್ಣವರು ಆಗಮಗಳೆಂದೇ ವ್ಯವಹರಿಸುವರು.

ಶಾಕ್ತತಂತ್ರಗಳಲ್ಲಿ 'ಮಹಾನಿರ್ವಾಣ', 'ಕುಲಾರ್ಣವ', 'ಕುಲಚೂಡಾಮಣಿ' 'ಪ್ರಪಂಚಸಾರ', 'ತಂತ್ರರಾಜ', 'ಜ್ಞಾನಾರ್ಣವ', 'ಶಾರದಾತಿಲಕ' ಮುಂತಾದ ಮುಖ್ಯ ಗ್ರಂಥಗಳು ಮುದ್ರಿತವಾಗಿ ಉಪಲಬ್ಧವಾಗಿವೆ. ಶಾಕ್ತತಂತ್ರಗಳಲ್ಲಿ ಕೆಲವು ವಾಮಾಚಾರಕ್ಕೆ ಅವಕಾಶ ಕೊಟ್ಟು, ಬಹುಜನರ ಮಾನ್ಯತೆಯನ್ನು ಕಳೆದುಕೊಂಡು ಗುಪ್ತಸಾಧನೆಗಳಲ್ಲಿ ನಿರತವಾದವು. ಮದ್ಯ-ಮಾಂಸ-ಮತ್ಸ್ಯ-ಮುದ್ರಾ-ಮೈಥುನಗಳೆಂಬ ಪಂಚ ಮಕಾರಗಳಲ್ಲಿ ರಹಸ್ಯವಾದ ಆಧ್ಯಾತ್ಮಿಕ ಪಂಚತತ್ತ್ವಗಳ ಅರ್ಥಗಳಿದ್ದಿರಬಹುದಾದರೂ, ಅವುಗಳ ಬಾಹ್ಯ ಉಪಾಸನೆ ಜನರಲ್ಲಿ ಅನಾದರವನ್ನೇ ಹುಟ್ಟಿಸಿದವು. ಹೀಗಾಗಿ ಅವುಗಳ ಪ್ರಚಾರ ಪುರಾಣಗಳಂತೆ ಸಾರ್ವತ್ರಿಕವಾಗಲಿಲ್ಲ.

ವಾರಾಹೀತಂತ್ರದಲ್ಲಿ ಆಗಮಲಕ್ಷಣವನ್ನು ಹೀಗೆ ಹೇಳಲಾಗಿದೆ :—

> ಸೃಷ್ಟಿಶ್ಚ ಪ್ರಲಯಶ್ಚೈವ ದೇವತಾನಾಂ ಯಥಾರ್ಚನಮ್ ।
> ಸಾಧನಂ ಚೈವ ಸರ್ವೇಷಾಂ ಪುರಶ್ಚರಣಮೇವ ಚ ॥
> ಷಟ್ಕರ್ಮಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ ।
> ಸಪ್ತಭಿರ್ಲಕ್ಷಣೈರ್ಯುಕ್ತಮಾಗಮಂ ತದ್ವಿದುರ್ಬುಧಾಃ ॥



ಬೌದ್ಧತಂತ್ರಗಳು ಭಾರತದಲ್ಲಿ ಲುಪ್ತಪ್ರಾಯವಾಗಿ ಟಿಬೆಟ್, ನೇಪಾಳಗಳಲ್ಲಿ ಮಾತ್ರ ಅವುಗಳ ಹಸ್ತಪ್ರತಿಗಳು ಉಪಲಬ್ಧವಾಗಿದ್ದು, ಈಗೀಗ 'ಹೇವಜ್ರತಂತ್ರ', "ಗುಹ್ಯಸಮಾಜ ತಂತ್ರ" ಮುಂತಾದ ಗ್ರಂಥಗಳನ್ನು ಐರೋಪ್ಯ ವಿದ್ವಾಂಸರು ಪ್ರಕಟಿಸಿದ್ದಾರೆ. ಜ್ವಾಲಾಮಾಲಿನಿ ಕಾತಂತ್ರ ಮುಂತಾದ ಜೈನತಂತ್ರಗಳೂ ವಿರಳವಾಗಿ ಪ್ರಕಟವಾಗಿವೆ. ಇವುಗಳಲ್ಲಿ ಯಕ್ಷಯಕ್ಷಿಣಿಯರ, ಶಾಕಿನಿ-ಡಾಕಿನಿಯರ ಸಾಧನಾದಿ ವಿಚಾರಗಳಿವೆ.

### ಸಂಸ್ಕೃತಕಾವ್ಯಪರಂಪರೆಯ ಹಿನ್ನೆಲೆ—ಸಾಮಾನ್ಯ ವಿವೇಚನೆ

ಸಂಸ್ಕೃತಕಾವ್ಯದ ಪ್ರಥಮ ಇತಿಹಾಸಕಾರರಲ್ಲಿ ಮ್ಯಾಕ್ಸ್ ಮ್ಯೂಲರ್‌ನದು ಗಣ್ಯವಾದ ಹೆಸರು. ಕಳೆದ ಶತಮಾನದಲ್ಲಿ ಇನ್ನೂ ಅನೇಕ ಸಂಸ್ಕೃತಗ್ರಂಥಗಳು ಮುದ್ರಿತವಾಗದೆ ಹಸ್ತಪ್ರತಿಗಳಲ್ಲೇ ಅಡಗಿದ್ದಾಗ, ಎಷ್ಟೋ ಸಂಸ್ಕೃತಶಿಲಾಶಾಸನಗಳು ಅನುಪಲಬ್ಧವಾಗಿದ್ದಾಗ, ಸಂಸ್ಕೃತದ ರಾಜಕೀಯ ಇತಿಹಾಸದ ಸ್ಪಷ್ಟರೇಖೆಗಳೇ ಇನ್ನೂ ಮೂಡದಿದ್ದಾಗ, ಆತನು, ತನ್ನ India. what can it teach us ಎಂಬ ಗ್ರಂಥದಲ್ಲಿ 'ಸಂಸ್ಕೃತಕಾವ್ಯಪರಂಪರೆ ರಾಮಾಯಣ, ಮಹಾಭಾರತಗಳಲ್ಲಿ ಜನಿಸಿದ್ದು ಸುಮಾರು ಐದುನೂರು ವರ್ಷಗಳವರೆಗೆ ವಿಚ್ಛಿನ್ನವಾಗಿ ಹೋಗಿತ್ತು. ಯೂರೋಪಿನಲ್ಲಿ ಅಂಧಕಾರಯುಗವೆನ್ನುವ ಮಧ್ಯಯುಗದಂತೆ ಭಾರತದಲ್ಲಿಯೂ ವಿದೇಶೀಯರ ಆಕ್ರಮಣ, ಬೌದ್ಧ-ಜೈನಧರ್ಮಗಳ ಉದಯ, ಮುಂತಾದ ಕಾರಣಗಳಿಂದ ಸಾಹಿತ್ಯರಚನಾಕಾರ್ಯ ಸ್ಥಗಿತಗೊಂಡು ಒಂದು ಅಂಧಕಾರಯುಗವೇ ಪ್ರಾಪ್ತವಾಗಿತ್ತು. ಕ್ರಿ.ಶ. ಆರನೆಯ ಶತಮಾನದ ಆದಿಯಲ್ಲಿ ಉಜ್ಜಯಿನಿಯ ವಿಕ್ರಮಾದಿತ್ಯನ ಪ್ರೋತ್ಸಾಹದಿಂದ ಭಾರತದಲ್ಲಿ ಸಾಹಿತ್ಯಕೃಷಿ ಮತ್ತೆ ಚೇತನಗೊಂಡು ಕಾಳಿದಾಸಾದಿ ನವಮಣಿಗಳ ಪ್ರಭಾವದಿಂದ ಪುನರುತ್ಥಾನವನ್ನು ಪಡೆಯಿತು, ಎಂಬ ಒಂದು ವಾದವನ್ನು ಮುಂದಿಟ್ಟನು. ಶಕಾರಿ ವಿಕ್ರಮಾದಿತ್ಯನು ಶಕರನ್ನು ಗೆದ್ದುದು ಕ್ರಿ. ಶ. 544ರಲ್ಲಿಯೇ ಆದರೂ 600 ವರ್ಷಗಳ ಹಿಂದಕ್ಕೆ ಆ ಘಟನೆಯನ್ನು ಸರಿಸಿ, ಕ್ರಿ. ಪೂ. 56ಕ್ಕೆ ಸಲ್ಲುವಂತೆ ವಿಕ್ರಮಶಕೆಯನ್ನು ಆರಂಭಿಸಿದ ನೆಂಬ ಫರ್ಗುಸನ್‌ನ ಸಲಹೆಯೇ ಮ್ಯಾಕ್ಸ್ ಮ್ಯೂಲರ್‌ನ ಸಾಹಿತ್ಯಪುನರುತ್ಥಾನವಾದಕ್ಕೆ (Renaissance Theory) ಆಧಾರಶಿಲೆಯಾಗಿತ್ತು.

ಮುಂದೆ ಅದೇ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಬಂದ ಎ. ಎ. ಮ್ಯಾಕ್‌ಡೊನೆಲ್ ಮತ್ತು ಎ. ಬಿ. ಕೀತ್ ಎಂಬ ವಿದ್ವಾಂಸರು ಅಂಧಕಾರಯುಗವೆನ್ನುವ ಕ್ರಿ. ಶ. 100–500 ರ ಕಾಲದಲ್ಲಿಯೇ, ಪರಿಷ್ಕೃತ ಸಮಾಸಭೂಯಿಷ್ಠಶೈಲಿಯಲ್ಲಿದ್ದ ಅನೇಕ ಸಾಹಿತ್ಯರಚನೆಗಳ ಅವಶೇಷಗಳನ್ನು ಗಣನೆಗೆ ತೆಗೆದುಕೊಂಡು, ಪುನರುತ್ಥಾನವಾದವು ನಿಸ್ಸಾರವೂ, ನಿರಾಧಾರವೂ ಆದುದೆಂದು ಆ ವಾದವನ್ನು ಆಮೂಲಾಗ್ರವಾಗಿ ಖಂಡಿಸಿದರು. ಆ ವಾದದ ನಿರಾಕರಣೆಗೆ ಪ್ರಾಚ್ಯವಿದ್ಯಾಪಾರಂಗತರಾದ ಅನೇಕ ಭಾರತೀಯ ವಿದ್ವಾಂಸರೂ, ಡಾ॥ ಡಿ ಆರ್. ಭಾಂಡಾರಕರ್ ಮುಂತಾದವರು ಸಹಕರಿಸಿದರು. ಈ ಖಂಡನೆಗೆ ಆಧಾರವಾದ ಕೆಲವೊಂದು ಮುಖ್ಯಾಂಶಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

(1) ವಿಕ್ರಮಶಕೆಯ ಆರಂಭವು ಕ್ರಿ. ಶ. 544 ರಲ್ಲಿ ಆದುದು ನಿಜವಲ್ಲ ; ಅದಕ್ಕೂ ಒಂದು ಶತಮಾನಕ್ಕೂ ಮುಂಚೆಯೇ ಮಾಲವಶಕೆಯೆಂಬ ನಾಮಾಂತರದಿಂದ ಅದು ಅಸ್ತಿತ್ವದಲ್ಲಿದ್ದುದನ್ನು ಡಾ|| ಫ್ಲೀಟ್ ಸಂಶೋಧಿಸಿ ಪ್ರಕಟಿಸಿರುವ ಅನೇಕ ಶಾಸನಗಳು ತೋರಿಸುತ್ತವೆ.

(2) ಶಕರನ್ನು ವಿಕ್ರಮಾದಿತ್ಯನು 6ನೆಯ ಶತಮಾನದ ಮಧ್ಯದಲ್ಲಿ ಹೊಡೆದೋಡಿಸಿದನೆನ್ನುವುದು ತಪ್ಪು ; ಅವಕ್ಕೂ ನೂರಾರು ವರ್ಷ ಮುಂಚೆ ಗುಪ್ತರಾಜರೇ ಶಕರನ್ನು ಹೊಡೆದಟ್ಟಿಯಾಗಿತ್ತು.

(3) ಫ್ಲೀಟ್ ಪ್ರಕಟಪಡಿಸಿರುವ ಹತ್ತಾರು ಶಾಸನಗಳು—ಕ್ರಿ. ಶ. 350–550 ರ ಅವಧಿಯವು–ಅಲಂಕಾರನಿಬಿಡವಾದ ಸಮಸ್ತಪದಭೂಯಿಷ್ಠವಾದ ಕಾವ್ಯಶೈಲಿಯಲ್ಲಿಯೇ ಇರುವುದರಿಂದ ಈ ಶೈಲಿ ಕ್ರಿ. ಶ. 6 ನೆಯ ಶತಮಾನದಿಂದಾಚೆಗೆ ಪ್ರಚಲಿತವಾಯಿತೆನ್ನುವುದು ನಿರಾಧಾರವಾಗುತ್ತದೆ.

(4) ಕ್ರಿ. ಶ. 150 ರಲ್ಲಿ ರಚಿತವಾದ ಮಹಾಕ್ಷತ್ರಪ ರುದ್ರದಾಮನ ಗಿರ್ನಾರ್ ಪ್ರಶಸ್ತಿ ಗದ್ಯಕಾವ್ಯದ ಎಲ್ಲ ಗುಣಗಳನ್ನೂ ಹೊಂದಿದೆ ; ವ್ಯಾಕರಣಬದ್ಧವಾದ ಭಾಷೆಯಿದೆ ; ಒಮ್ಮೊಮ್ಮೆ 'ಪತ್ಯಾ' ಎಂಬ ರೂಪದ ಬದಲು 'ಪತಿನಾ' ಎಂಬಂತೆ ಆರ್ಷರೂಪಗಳೂ ಬರುತ್ತವೆ. ಒಂಬತ್ತು ಶಬ್ದಗಳ 23 ವರ್ಣಗಳಿರುವ ಒಂದೇ ದೀರ್ಘಸಮಾಸವೂ ಇದೆ. 'ಅಭ್ಯಸ್ತನಾಮ್ನೋ ರುದ್ರದಾಮ್ನೋ' ಎಂಬಂತೆ ಅನುಪ್ರಾಸಾದಿ ಶಬ್ದಾಲಂಕಾರಗಳಿವೆ. 'ಪರ್ವತಪ್ರತಿಸ್ಪರ್ಧಿ' ಮುಂತಾಗಿ ಉಪಮಾದಿ ಅರ್ಥಾಲಂಕಾರಗಳೂ ಇವೆ. ಆ ರಾಜನೇ ಗುಣಾಲಂಕಾರಭೂಯಿಷ್ಠವಾದ ಗದ್ಯಪದ್ಯರಚನೆಯಲ್ಲಿ ಪ್ರಾಪ್ತಪ್ರಾವೀಣ್ಯನೆಂಬುದನ್ನಂತೂ ತುಂಬಾ ಸುಂದರವಾಗಿ ಹೇಳಲಾಗಿದೆ : 'ಸ್ಫುಟಲಘುಮಧುರಚಿತ್ರಕಾಂತಶಬ್ದ ಸಮಯೋದಾರಾಲಂಕೃತಗದ್ಯಪದ್ಯ...' ಎಂಬ ಪದದಲ್ಲಿ. ಇದರಿಂದ ಶಾಸನಲೇಖಕನಿಗಿದ್ದ ಅಲಂಕಾರಶಾಸ್ತ್ರಪರಿಜ್ಞಾನವೂ ವೇದ್ಯವಾಗುತ್ತದೆ. ಇದೇ ಕಾಲದಲ್ಲಿ ರಚಿತವಾದ, ಪ್ರಾಕೃತಭಾಷೆಯಲ್ಲಿರುವ, ಪುಲುಮಾಯಿಯ ನಾಸಿಕ ಶಾಸನದಲ್ಲೂ ಇವೇ ಲಕ್ಷಣಗಳಿವೆ. ಆದ್ದರಿಂದ ಕ್ರಿ. ಶ. 2 ನೆಯ ಶತಮಾನದ ವೇಳೆಗೆ ಪರಿಷ್ಕೃತ ಕಾವ್ಯಶೈಲಿಯೂ, ಅಲಂಕಾರಶಾಸ್ತ್ರವೂ ಅಸ್ತಿತ್ವದಲ್ಲಿದ್ದುದು ನಿಸ್ಸಂಶಯವೆನ್ನಬಹುದು. ಶಾಸನಗಳಲ್ಲಿ ಹೀಗಿರಬೇಕಾದರೆ, ಮಹಾಕವಿಗಳ ಸ್ವತಂತ್ರರಚನೆಗಳೂ ಹೆಚ್ಚಾಗಿ ಇದ್ದಿರಲೇಬೇಕು. ಅವೆಲ್ಲ ಕಾಲಮಹಿಮೆಯಿಂದ ಲುಪ್ತವಾಗಿರುವುದು ನಮ್ಮ ದುರ್ದೈವವೆನ್ನಬೇಕೇ ಹೊರತು ಸಾಹಿತ್ಯರಚನೆಯೇ ನಡೆದಿರಲಿಲ್ಲವೆಂದು ಹೇಳಬರುವುದಿಲ್ಲ. ಅಶ್ವಘೋಷನ ರಚನೆಗಳು ಉಳಿದಿರುವುದೂ ಒಂದು ಆಕಸ್ಮಿಕ ಘಟನೆಯೇ ಸರಿ.

(5) ಪತಂಜಲಿಯ ಮಹಾಭಾಷ್ಯದಲ್ಲಿ (ಕ್ರಿ. ಪೂ. 2 ನೆಯ ಶತಮಾನ), ಅದು ಮುಖ್ಯವಾಗಿ ವ್ಯಾಕರಣಗ್ರಂಥವಾದರೂ, ಪ್ರಾಸಂಗಿಕವಾಗಿ ಕೆಲವೊಂದು ಕಾವ್ಯಗ್ರಂಥಗಳ ಉಲ್ಲೇಖಗಳು ಬಂದಿವೆ. ' ವಾರರುಚ-ಕಾವ್ಯ ' ; 'ವಾಸವದತ್ತಾ' 'ಸುಮನೋತ್ತರಾ', 'ಭೈಮರಥೀ'



ಎಂಬ ಮೂರು ಆಖ್ಯಾಯಿಕೆಗಳು ; ' ಕಂಸವಧ ', ಬಲಿಬಂಧ ' ಎಂಬ ರೂಪಕಗಳು—ಇವನ್ನು ಪತಂಜಲಿ ನಿರ್ದೇಶಿಸಿರುವುದಲ್ಲದೆ, ' ವರತನು ಸಂಪ್ರವದನ್ತಿ ಕುಕ್ಕುಟಾಃ ', ' ಸಾ ಹಿ ತಸ್ಯ ಧನಕ್ರೀತಾ ಪ್ರಾಣೇಭ್ಯೋಽಪಿ ಗರೀಯಸೀ ', ' ಪ್ರಿಯಾಂ ಮಯೂರಃ ಪ್ರತಿನನೃತೀತಿ ', ' ಪ್ರಥತೇ ತ್ವಯಾ ಪತಿಮತೀ ಪೃಥಿವೀ', ' ಅಸಿದ್ವಿತೀಯೋಽನುಸಸಾರ ಪಾಂಡವಮ್ ' ಇವೇ ಮುಂತಾದ ಖಂಡಕಾವ್ಯದ ವಿವಿಧ ಛಂದೋಬದ್ಧ ಪದ್ಯಚರಣಗಳನ್ನೂ ಉದಾಹರಿಸಿದ್ದಾನೆ. ಅಷ್ಟೇ ಅಲ್ಲದೆ,

ಸಾಮೃತೈಃ ಪಾಣಿಭಿರ್ಘ್ನನ್ತಿ ಗುರವೋ ನ ವಿಷೋಕ್ಷಿತೈಃ ।
ಲಾಲನಾಶ್ರಯಿಣೋ ದೋಷಾಸ್ತಾಡನಾಶ್ರಯಿಣೋ ಗುಣಾಃ ॥
ತಪಃ ಶ್ರುತಂ ಚ ಯೋನಿಶ್ಚೇತ್ಯೇತದ ಬ್ರಾಹ್ಮಣಕಾರಕಮ್ ।
ತಪಃ ಶ್ರುತಾಭ್ಯಾಂ ಯೋ ಹೀನೋ ಜಾತಿಬ್ರಾಹ್ಮಣ ಏವ ಸಃ ॥

ಮುಂತಾದ ನೀತಿವಾಕ್ಯಗಳನ್ನೂ, ಸುಭಾಷಿತಗಳನ್ನೂ ಹೇರಳವಾಗಿ ಉದಾಹರಿಸಿದ್ದಾನೆ. ಅವನ ಉದಾಹೃತ ಪದ್ಯಚರಣಗಳಲ್ಲಿ ಮಾಲತೀ, ಪ್ರಹರ್ಷಿಣೀ, ಪ್ರಮಿತಾಕ್ಷರಾ, ವಸಂತತಿಲಕಾದಿ ವೃತ್ತಗಳೂ ಇವೆ.

(6) ಜಾನಪದ ಕಥಾಸಾಹಿತ್ಯವೂ ಪ್ರಚಲಿತವಿದ್ದುದನ್ನು ಸೂಚಿಸುವಂತಹ ಕೆಲವೊಂದು "ನ್ಯಾಯ"ಗಳ ಉಲ್ಲೇಖವೂ ಪತಂಜಲಿಯಲ್ಲಿ ಬಂದಿದೆ. ಉದಾಹರಣೆಗೆ "ಅಜಾಕೃಪಾಣೀಯ", "ಕಾಕತಾಲೀಯ"ಗಳನ್ನು ಹೇಳಬಹುದು. ಇವೇ ಮುಂದಿನ "ಪಂಚತಂತ್ರ"ದ ಕಥೆಗಳ ಮೂಲಸಾಮಗ್ರಿಯನ್ನು ಕೈಮಾಡಿ ತೋರಿಸುತ್ತವೆ.

(7) ಇಷ್ಟೇ ಪ್ರಾಚೀನವಾದ ಪಿಂಗಳನ ಛಂದಸ್ಸೂತ್ರದಲ್ಲಿ ಬರುವ ಅನೇಕ ವೃತ್ತಗಳ ಹೆಸರುಗಳು—"ಚಾರುಹಾಸಿನೀ". "ಕಾಂತೋತ್ಪೀಡಾ", "ಚಂಚಲಾಕ್ಷಿಕಾ", "ತನುಮಧ್ಯಾ", "ವಸಂತತಿಲಕಾ" ಮುಂತಾದವು—ಶೃಂಗಾರನಾಯಿಕೆಯರ ಹೆಸರುಗಳಾಗಿದ್ದು ಭಾವಗೀತೆಗಳ ಕವಿಗಳು ಹೊಸ ಹೊಸ ವೃತ್ತಪ್ರಯೋಗ ಮಾಡುತ್ತ, ಅವುಗಳಲ್ಲಿ ಕಾಂತೆಯರ ಹೆಸರನ್ನು ಕೂಡಿಸುತ್ತಿದ್ದ ಕಾಲವನ್ನು ಸ್ಮರಣೆಗೆ ತರುತ್ತವೆ. ಇದೇ ಕಾಲದಲ್ಲಿ ಪ್ರಾಕೃತಭಾಷೆಯಲ್ಲಿ ಏಳುನೂರು ಶೃಂಗಾರ ಮುಕ್ತಕಗಳ ಕೋಶ ರಚಿತವಾದುದೂ ಶೃಂಗಾರಕಾವ್ಯದ ವಿಸ್ತೃತ ಜನಪ್ರಿಯತೆಗೇ ಸಾಕ್ಷಿಯಾಗಿದೆ.

(8) ಚಂಪೂಕಾವ್ಯ ಶೈಲಿಯ ಸುಂದರ ಉದಾಹರಣೆಯಾಗಿದೆ, ಹರಿಷೇಣನ ಸಮುದ್ರಗುಪ್ತ ಪ್ರಶಸ್ತಿ. ಇದರ ಒಂದು ಸಾಲು ಹೀಗಿದೆ : –

ನಿಶಿತವಿದಗ್ಧಮತಿಗಾಂಧರ್ವಲಲಿತೈರ್ವ್ರೀಡಿತತ್ರಿದಶಪತಿಗುರುತುಂಬುರುನಾರದಾ
ದೇರ್ವಿದ್ವಜ್ಜನೋಪಜೀವ್ಯಾನೇಕಕಾವ್ಯಕ್ರಿಯಾಭಿಃ ಪ್ರತಿಷ್ಠಿತಕವಿರಾಜಶಬ್ದಸ,

(9) ಅಶ್ವಘೋಷನ ಕಾವ್ಯಗಳಿಗೆ ಮೂಲಸಾಮಗ್ರಿಯನ್ನೊದಗಿಸಿದ ಬೌದ್ಧ ಕೃತಿಯೇ "ಲಲಿತವಿಸ್ತರ". ಅದು ಗದ್ಯಪದ್ಯಾತ್ಮಕವಾಗಿದೆ. ಗದ್ಯವು ಸಂಸ್ಕೃತದಲ್ಲೂ, ಪದ್ಯವು ಪ್ರಾಕೃತಗಾಥಾರೂಪವಾಗಿಯೂ ಇದೆ. ಇದು ಕ್ರಿಸ್ತಪೂರ್ವದ ಸಾಹಿತ್ಯ ರಚನೆಯ ಒಂದು ಅವಶೇಷವಾಗಿದೆ.

(10) ಅಶ್ವಘೋಷನ ಅನಂತರವೂ ಬೌದ್ಧ ಮಾತೃಚೇಟನು ಬರೆದ "ಶತಪಂಚಾಶತಿಕಾ ಸ್ತೋತ್ರ" ಮುಂತಾದ ಧಾರ್ಮಿಕ ಸ್ತೋತ್ರಗಳೂ, ಕ್ರಿ.ಶ. 3ನೆಯ ಶತಮಾನದಲ್ಲಿಯೇ ಚೀಣೀ ಭಾಷೆಗೆ ಅನುವಾದ ಮಾಡಲಾದ "ಅವದಾನಶತಕ" ಮುಂತಾದ ಧಾರ್ಮಿಕ ಕಥಾಗ್ರಂಥಗಳೂ ದೊರೆಯುತ್ತವೆ. ಆರ್ಯಸೂರನ "ಜಾತಕಮಾಲಾ" ಗ್ರಂಥವನ್ನು ಕಾವ್ಯದರ್ಶವ್ಯಾಖ್ಯಾಕಾರನಾದ ಬೌದ್ಧ ರತ್ನಶ್ರೀಜ್ಞಾನನು ಚಂಪೂಕಾವ್ಯಕ್ಕೆ ಉದಾಹರಣೆಯೆಂದಿದ್ದಾನೆ. ಹಾಗೆಯೇ ಬೋಧಿಸತ್ತ್ವಸ್ತುತಿಗಳನ್ನೊಳಗೊಳ್ಳುವ 'ಮಹಾಯಾನ ಸೂತ್ರ' ಅಥವಾ 'ಸದ್ಧರ್ಮ ಪುಂಡರೀಕ'. 'ಕಾರಂಡವಾಹ', 'ಸುಖಾವತೀವ್ಯೂಹ' ಮುಂತಾದ ಬೌದ್ಧರಚನೆಗಳೂ, ದಾರ್ಶನಿಕ ಗ್ರಂಥಗಳಾಗಿದ್ದರೂ ಕಾರಿಕಾರೂಪವಾಗಿರುವ ನಾಗಾರ್ಜುನನ 'ಮೂಲಮಾಧ್ಯಮ ಕಾರಿಕಾ' ಮುಂತಾದವೂ ಎಲ್ಲವೂ ಕ್ರಿ.ಶ. 100–350ರೊಳಗಿನ ರಚನೆಗಳೇ ಆಗಿವೆಯೆಂಬುದು ನಿಸ್ಸಂಶಯ ; ಇವೆಲ್ಲವೂ ಚೀಣೀಭಾಷೆಗೆ ಅಷ್ಟರ ಅವಧಿಯಲ್ಲೇ ಪರಿವರ್ತಿತವಾಗಿದ್ದು ದೊರೆಯುತ್ತಿರುದರಿಂದ.

ಬೌದ್ಧರ ಅವದಾನ ಸಾಹಿತ್ಯದಲೆಲ್ಲ ಕಾವ್ಯಗುಣಭರಿತವಾದುದೆಂದರೆ "ದಿವ್ಯಾವದಾನ". ಇದರ ಒಂದೆರಡು ಪದ್ಯಗಳನ್ನು ನೋಡಬಹುದು:—

ಒಬ್ಬ ವಿರಹಿಯ ಆರ್ತ ವಿಲಾಪವಿದು :—

ಭೋಃ ಪೂರ್ಣಚಂದ್ರ ರಜನೀಕರ ತಾರರಾಜ
ತ್ವಂ ರೋಹಿಣೀನಯನಕಾಂತ ಸುಸಾರ್ಥವಾಹ॥
ಕಚ್ಚಿತ್ ಪ್ರಿಯಾ ಮಮ ಮನೋಹರಣೈಕದಕ್ಷಾ
ದೃಷ್ಟಾ ತ್ವಯಾ ಭುವಿ ಮನೋಹರನಾಮಧೇಯಾ॥
ಭೋಃ ಕೃಷ್ಣಸರ್ಪ ತನುಪಲ್ಲವಲೋಲಜಿಹ್ವ
ವಕ್ತ್ರಾಂತರೋತ್ಪತಿತಧೂಮಕಲಾಪವಕ್ತ್ರ॥
ರಾಗಾಗ್ನಿನಾ ತವ ಸಮೋ ನ ವಿಷಾಗ್ನಿರುಗ್ರೋ
ದೃಷ್ಟಾ ತ್ವಯಾ ಮಮ ಮನೋಹರನಾಮಧೇಯಾ॥
ಭೋಃ ಕೋಕಿಲೋತ್ತಮ ವನಾಂತರವೃಕ್ಷವಾಸಿನ್
ನಾರೀಮನೋಹರಪತತ್ರಿಗಣಸ್ಯ ರಾಜನ್॥
ನೀಲೋತ್ಪಲಾಗತಸಮಾಯತಚಾರುನೇತ್ರಾ
ದೃಷ್ಟಾ ತ್ವಯಾ ಮಮ ಮನೋಹರನಾಮಧೇಯಾ ॥



ಇವುಗಳನ್ನು ಪರಾಮರ್ಶಿಸಿದರೆ ಸಂಸ್ಕೃತದಲ್ಲಿ ಶೃಂಗಾರಸಾಹಿತ್ಯವೂ ಭಕ್ತಿಸಾಹಿತ್ಯದಂತೆಯೇ ಹಿಂದಿನಿಂದಲೂ ವಿಪುಲವಾಗಿ ಬೆಳೆದಿರಬೇಕೆಂಬುದು ವೇದ್ಯವಾಗುತ್ತದೆ.

(11) ಪ್ರಾಚೀನರ ಜೈನಸಾಹಿತ್ಯವಾದರೂ ಇದೇ ಮಾತನ್ನೇ ಸ್ಪಷ್ಟಪಡಿಸುತ್ತದೆ. ಸಂಸ್ಕೃತ ಭಕ್ತಿಕಾವ್ಯದ ಅರುಣೋದಯ ಕ್ರಿ.ಶ. 200ಕ್ಕೂ ಹಿಂದೆಯೇ ಎಂಬುದನ್ನು ಜೈನರಲ್ಲಿ ಪ್ರಥಮ ಕವಿಯಾದ ಸಮಂತಭದ್ರನ "ಸ್ವಯಂಭೂಸ್ತೋತ್ರ" (143 ಪದ್ಯಗಳು) "ಜಿನಶತಕ" ಮತ್ತು "ದೇವಾಗಮಸ್ತೋತ್ರ" ಅಥವಾ "ಆಪ್ತಮೀಮಾಂಸಾ", "ಯುಕ್ತ್ಯನುಶಾಸನ" ಗ್ರಂಥಗಳು ಬಹು ಸೊಗಸಾಗಿ ನಿರ್ದೇಶಿಸುತ್ತವೆ. ಜಿನಶತಕದಲ್ಲಿ ಒಂದು ಚಿತ್ರಾಲಂಕಾರದ ಏಕಾಕ್ಷರೀ ಪಾದಗಳಿರುವ ಶ್ಲೋಕವಿದು :—

ಯೋ ಮಾಯಾಯಾಯಯೋಯಾಯ ನಾನಾನೂನಾನನಾನನಾ ।
ಮಮಾಮಮಾಮಮಾಮಾಮಿತಾತತೀತಿ ತತೀತಿತಃ ॥ (ಪದ್ಯ 14).

ಕಾವ್ಯಶೋಭೆಯೊಂದಿಗೆ ದಾರ್ಶನಿಕಾರ್ಥವೂ ಸಂಶ್ಲಿಷ್ಟವಾಗಿರುವ ಸ್ವಯಂಭೂಸ್ತೋತ್ರದ ಒಂದು ಉದಾಹರಣೆಯಿದು :—

ಶರೀರರಶ್ಮಿಪ್ರಸರಃ ಪ್ರಭೋಸ್ತೇ ಬಾಲಾರ್ಕರಶ್ಮಿಚ್ಛವಿರಾಲಿಲೇಪ ।
ನರಾಮರಾಕೀರ್ಣಸಭಾಂ ಪ್ರಭಾ ವಾ ಶೈಲಸ್ಯ ಪದ್ಮಾಭಮಣೇಃ ಸ್ವಸಾನುಮ್ ॥
(VI. 3)

ಹೀಗೆ ಮೇಲಿನ ನಾನಾ ಅಂಶಗಳ ಪರಾಮರ್ಶೆಯಿಂದ ಸಂಸ್ಕೃತ ಸಾಹಿತ್ಯದಲ್ಲಿ ಪುನರುತ್ಥಾನ ಕಾಲವೆಂಬ ಮ್ಯಾಕ್ಸ್ ಮ್ಯೂಲರ್ ಅವರ ವಾದ ನಿಸ್ಸಾರವೆಂಬುದು ಖಚಿತವಾಗುತ್ತದೆ.

## ವಾಲ್ಮೀಕಿ ರಾಮಾಯಣ

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಂ ॥

ವಾಲ್ಮೀಕಿರಾಮಾಯಣವು ಶ್ರೀಮದ್ರಾಮಾಯಣವೆಂಬುದಾಗಿಯೂ, ಆದಿಕಾವ್ಯವೆಂಬುದಾಗಿಯೂ ಪ್ರಸಿದ್ಧವಾಗಿದೆ. ಆದಿಕಾವ್ಯ ಎಂಬ ಹೆಸರಿಗೆ ಅನುಗುಣವಾಗಿ ಶ್ರೀಮದ್ರಾಮಾಯಣದ ಆರಂಭದಲ್ಲಿಯೇ ಒಂದು ಪ್ರಸಂಗ ಚಿತ್ರಿತವಾಗಿದೆ : ಮಹರ್ಷಿ ವಾಲ್ಮೀಕಿಗಳು ಸ್ನಾನಾರ್ಥವಾಗಿ ಶಿಷ್ಯನೊಡನೆ ತಮಸಾ ನದಿಗೆ ಹೋಗಿದ್ದಾರೆ. ಸಮೀಪದಲ್ಲಿ ಎರಡು ಕ್ರೌಂಚ ಪಕ್ಷಿಗಳು ನಲಿಯುತ್ತಿರುವಾಗ, ಅವುಗಳಲ್ಲೊಂದಾದ ಗಂಡು ಹಕ್ಕಿಯನ್ನು ಒಬ್ಬ ವ್ಯಾಧನು ಹೊಡೆದು ಕೊಲ್ಲುತ್ತಾನೆ. ಹೆಣ್ಣುಹಕ್ಕಿ ಗೋಳಾಡುತ್ತದೆ. ಅದನ್ನು ಕಂಡು ಮರುಕಗೊಂಡ ವಾಲ್ಮೀಕಿ ಮುನಿಗಳ ಬಾಯಿಯಿಂದ ಈ ಮಾತು ಥಟ್ಟನೆ ಹೊಮ್ಮುತ್ತದೆ :—

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ॥ (I-2-15)

ಅನಂತರ ವಾಲ್ಮೀಕಿಗಳು ತಮ್ಮ ನುಡಿಗೆ ತಾವೇ ವಿಸ್ಮಿತರಾಗಿ ಶಿಷ್ಯನನ್ನು ಕುರಿತು :

ಪಾದಬದ್ಧೋಽಕ್ಷರಸಮಸ್ತಂತ್ರೀಲಯಸಮನ್ವಿತಃ ।
ಶೋಕಾರ್ತಸ್ಯ ಪ್ರವೃತ್ತೋ ಮೇ ಶ್ಲೋಕೋ ಭವತು ನಾನ್ಯಥಾ ॥ (I–2–18)

ಎನ್ನುತ್ತಾರೆ. ಆಮೇಲೆ ಬ್ರಹ್ಮನೇ ಅವರ ಆಶ್ರಮಕ್ಕೆ ಆಗಮಿಸಿ,

ಶ್ಲೋಕ ಏವಾಸ್ತ್ವಯಂ ಬದ್ಧೋ ನಾತ್ರ ಕಾರ್ಯಾ ವಿಚಾರಣಾ ।
ಮಚ್ಛಂದಾದೇವ ತೇ ಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ ॥ (I–2–31)

ಎಂದು ಹೇಳಿ, ರಾಮಾಯಣವನ್ನು ಬರೆಯುವಂತೆ ಪ್ರೇರಿಸುತ್ತಾನೆ. ಯುದ್ಧಕಾಂಡದ ಕಡೆಯಲ್ಲಿ :

'ಆದಿಕಾವ್ಯಮಿದಂ ತ್ವಾರ್ಷಂ' ಎಂದು ಹೇಳಿದೆ. ಛಂದೋಬದ್ಧವಾದ ಶ್ಲೋಕರಚನೆಗೆ ಇದೇ ಆದಿಯೆಂದು ಹೇಳುವಂತಿಲ್ಲ. ಏಕೆಂದರೆ, ವೇದಮಂತ್ರಗಳಲ್ಲಿಯೇ ಅನುಷ್ಟುಪ್ ಮುಂತಾದ ವಿವಿಧ ಛಂದಸ್ಸುಗಳು ಕಂಡುಬರುತ್ತವೆ. ವಿವಿಧರಸಸಮನ್ವಿತವಾದ ಚೇತೋಹಾರಿ ಶಬ್ದ ಸಂದರ್ಭವಿರುವ, ಕಥಾಪ್ರಬಂಧರೂಪವಾದ ಕಾವ್ಯಗಳಲ್ಲಿ ಈ ಕಾವ್ಯವೇ ಮೊದಲನೆಯದೂ, ಶ್ರೇಷ್ಠವೂ ಆಗಿದೆ. ಆದುದರಿಂದ ವಾಲ್ಮೀಕಿರಾಮಾಯಣವು ಆದಿಕಾವ್ಯವೆಂದು ಪ್ರಖ್ಯಾತವಾಗಿರಬೇಕು.

ಕಾಲ :—ವಾಲ್ಮೀಕಿ ರಾಮಾಯಣದ ಕಾಲದ ವಿಷಯವಾಗಿ ಸಾಂಪ್ರದಾಯಿಕವಾದ ಭಾರತೀಯದೃಷ್ಟಿ ಹೀಗಿದೆ : ಶ್ರೀರಾಮನು ಜೀವಿಸಿದ್ದ ಕಾಲದಲ್ಲಿಯೇ ರಾಮಾಯಣದ ರಚನೆಯಾಯಿತು. ಶ್ರೀರಾಮನು ಜನಿಸಿದ ಕಾಲ—

| | | |
|---|---|---|
| ತ್ರೇತಾಯುಗದ ಅವಶಿಷ್ಟ | ... | 30,000 ವರ್ಷ |
| ದ್ವಾಪರಯುಗ | ... | 8,64,000 ವರ್ಷ |
| ಕ್ರಿ. ಶ. 1975 ಕ್ಕೆ ಕಲಿಯುಗದಲ್ಲಿ ಗತ | ... | 5076 ವರ್ಷ |
| | | 8,99,076 ವರ್ಷ |

ಇಷ್ಟು ಪ್ರಾಚೀನವೆಂಬುದನ್ನು ಆಧುನಿಕ ವಿದ್ವಾಂಸರು ಒಪ್ಪುವುದಿಲ್ಲ. ವಾಲ್ಮೀಕಿಗಳ ರಾಮಾಯಣಕ್ಕೆ ನಾನಾ ಪ್ರಕ್ಷೇಪಗಳು ಸೇರಿ ಈಗಿನ ಪ್ರಚಲಿತರಾಮಾಯಣ ರೂಪುಗೊಂಡಿದೆ. ಬೌದ್ಧಧರ್ಮಕ್ಕಿಂತ ಪೂರ್ವದಲ್ಲಿ ಮೂಲರಾಮಾಯಣ ಹುಟ್ಟಿತೆಂದೂ, ಕ್ರಿ. ಪೂ. 6–8 ಶತಕಗಳ ಕಾಲಾವಧಿಯಲ್ಲಿ ಅದರ ನಿರ್ಮಾಣವಾಗಿರಬೇಕೆಂದೂ ಡಾ ॥ ಯಾಕೋಬಿ ಮತ್ತು ಮೆಕ್ಡಾನಲ್ ಅವರು ಅಭಿಪ್ರಾಯಪಟ್ಟಿದ್ದಾರೆ. ಕೀತ್‌ರವರು ಕ್ರಿ. ಪೂ. 4ನೇ ಶತಕವೆನ್ನುತ್ತಾರೆ. ವಿಂಟರ್ ನಿಟ್ಸ್‌ರವರು ರಾಮಾಯಣದ ಈಗಿನ ವಿಸ್ತಾರ ಮತ್ತು ವಿಷಯಗಳು ಕ್ರಿ. ಶ. 2ನೇ ಶತಮಾನದ ಅಂತ್ಯದೊಳಗೆ ಅದರಲ್ಲಿ ಸಮಾವೇಶಗೊಂಡಿರಬಹುದು. ವಾಲ್ಮೀಕಿಯು ಪ್ರಾಚೀನ ಗಾಥೆಗಳ ಆಧಾರದಿಂದ ಕ್ರಿ. ಪೂ. 3ನೇ ಶತಮಾನದಲ್ಲಿ ಮೂಲರಾಮಾಯಣವನ್ನು ರಚಿಸಿರಬಹುದು.



"It is probable that the Ramayana had its present extent and contents as early as towards the close of the second century A.D......It is probable that the original Ramayana was composed in the third century B.C. by Valmiki on the basis of ancient-ballads" ಎನ್ನುತ್ತಾರೆ. ಕ್ರಿ.ಪೂ. 8ನೆಯ ಶತಕದಿಂದ ಕ್ರಿ.ಪೂ. 1ನೆಯ ಶತಕದವರೆಗೆ ರಾಮಾಯಣದ ಪೂರ್ವೋತ್ತರ ಕಾಲಾವಧಿಯನ್ನು ಸಂಶೋಧಕರು ತಿಳಿಸಿದಂತಾಗಿದೆ. ಈ ಸಂದರ್ಭದಲ್ಲಿ ಸಂಶೋಧಕರಿಗೆ ಉಪಯುಕ್ತವಾಗುವ ಈ ಅಂಶಗಳನ್ನೂ ಸಹ ಗಮನಿಸ ಬಹುದಾಗಿದೆ :

ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ (ಸುಮಾರು ಕ್ರಿ.ಪೂ.450) ಕೌಸಲ್ಯಾ ಮತ್ತು ಕೈಕೇಯೀ ಶಬ್ದಗಳ ರೂಪನಿಷ್ಪತ್ತಿ ಇದೆ. (4–1–171, 7–3–2). ಸುಮಿತ್ರಾಶಬ್ದವು ಬಾಹ್ವಾದಿ* ಯಲ್ಲಿಯೂ ಸೌಮಿತ್ರಿ, ವಾಲ್ಮೀಕಿ ಶಬ್ದಗಳು ಗಹಾದಿಯಲ್ಲಿಯೂ ಇವೆ. ಶಿವಾದಿಯಲ್ಲಿ ರಾವಣ ಶಬ್ದದ ನಿಷ್ಪತ್ತಿ ಇದೆ. ಸೀತಾನ್ವೇಷಣಶಬ್ದವು ಇಂದ್ರಜನನಾದಿಯಲ್ಲಿ (4–3–88) ಪಠಿತವಾಗಿದೆ. ಯುದ್ಧಕಾಂಡದಲ್ಲಿ ಭರತನು ಹೇಳುವ 'ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ' (129–2) ಎಂಬ ವಾಕ್ಯವು ಸಾರ್ವಧಾತುಕೇ ಯಕ್, ಅನುದಾತ್ತಙಿತಃ ......(3–1–67, 1–3–2) ಎಂಬ ಎರಡು ಸೂತ್ರಗಳ ಮಹಾಭಾಷ್ಯದಲ್ಲಿ ಉದಾಹೃತವಾಗಿದೆ.

ರಾಮಾಯಣದ ಪಾಠಭೇದಗಳು: ಈಗ ಮೂರು ವಿಭಿನ್ನ ಪಾಠಗಳು ಪ್ರಚಲಿತವಾಗಿವೆ : 1. ದಾಕ್ಷಿಣಾತ್ಯಪಾಠ. 2. ಉದೀಚ್ಯ(ಗೌಡೀಯ)ಪಾಠ, 3. ಪಶ್ಚಿಮೋತ್ತರೀಯ (ಕಾಶ್ಮೀರೀಯ)ಪಾಠ. ಇವುಗಳಲ್ಲಿ ಕೆಲವು ವೃತ್ತಾಂತಗಳೂ, ಕಥೆಗಳೂ ವಿಭಿನ್ನವಾಗಿ ಬರುತ್ತವೆ. ಸಂವಾದಿಯಾದ ಶ್ಲೋಕಗಳಲ್ಲಿಯೂ ಶಬ್ದಭೇದಗಳುಂಟು. ಇದಕ್ಕೆ ಕಾರಣ ಹೀಗಿರಬಹುದು. ವಿಶಾಲವಾದ ಭರತಖಂಡದ ಎಲ್ಲೆಡೆಯಲ್ಲಿಯೂ ರಾಮಾಯಣದ ಪ್ರವಚನವು ವ್ಯಾಪಿಸಿತ್ತು. ಪೌರಾಣಿಕರು, ಹರಿಕಥೆ ಮಾಡುವವರು ಇದನ್ನು ಕಂಠಪಾಠಮಾಡಿ ಹೇಳುವ ಪದ್ಧತಿಯೇ ಹೆಚ್ಚು. ಲವಕುಶರು ರಾಮಾಯಣವನ್ನು ಋಷಿವಾಟಗಳಲ್ಲಿ, ಬೀದಿಬೀದಿಗಳಲ್ಲಿಯೂ, ಹಾಡುತ್ತಿದ್ದರೆಂದು ರಾಮಾಯಣದಲ್ಲಿಯೇ ಹೇಳಿದೆ. ಸರಳವಾದ ಈ ಶ್ಲೋಕಗಳಲ್ಲಿ ಶಬ್ದಭೇದವು ಅಲ್ಲಲ್ಲಿ ಬರುವುದು ಸಹಜ. ಪ್ರವಚನಕರ್ತರು ಜನರಂಜನೆಗಾಗಿ ಕೆಲವು ಕಥೆಗಳನ್ನು ಕಟ್ಟಿ ಸೇರಿಸುವುದು ಅಸಂಭವವೇನಲ್ಲ. ಹೀಗಾಗಿ ಮೂಲರಾಮಾಯಣದ ಸ್ವರೂಪ ಹೇಗಿತ್ತೆಂದು ನಿರ್ಣಯಿಸುವುದು ಕಠಿಣವಾಗಿದೆ. ಬರೋಡೆಯ ವಿಶ್ವವಿದ್ಯಾಲಯದವರು ವಿವಿಧ ಹಸ್ತಪ್ರತಿಗಳನ್ನು ಪರಿಶೀಲಿಸಿ ಪರಿಶುದ್ಧವೆನ್ನಬಹುದಾದ ಸಂಸ್ಕರಣವನ್ನು ಈಗ ಪ್ರಕಟಿಸಿದ್ದಾರೆ.

---

* ಗಣಪಾಠವು ಪಾಣಿನಿರಚಿತವೆಂಬ ವಿಷಯದಲ್ಲಿ ಆಧುನಿಕ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ವಿವರಗಳಿಗೆ ಡಾ ॥ P.V. Kane History, Dharmashastra I—Two epics ಎಂಬ ಪ್ರಕರಣ ನೋಡಿ.

ಗ್ರಂಥಪರಿಮಾಣ :— ರಾಮಾಯಣದಲ್ಲಿಯೇ :

ಚತುರ್ವಿಂಶಸಹಸ್ರಾಣಿ ಶ್ಲೋಕಾನಾಮುಕ್ತವಾನ್ ಋಷಿಃ ।

ತಥಾ ಸರ್ಗಶತಾನ್ ಪಂಚ ಷಟ್ ಕಾಂಡಾನಿ ತಥೋತ್ತರಂ ॥ (I–4–2)

ಎಂದು ಹೇಳಿದೆ. ಒಟ್ಟು 24,000 ಶ್ಲೋಕಗಳು, 500 ಸರ್ಗಗಳು, 7 ಕಾಂಡಗಳು. ಆದರೆ ದಾಕ್ಷಿಣಾತ್ಯ ಪಾಠದಲ್ಲಿ ಈ ಸಂಖ್ಯೆ ವ್ಯತ್ಯಸ್ತವಾಗಿದೆ. ವ್ಯಾಖ್ಯಾನಕಾರರಾದ ಗೋವಿಂದ ರಾಜರು ಈಗ ಒಟ್ಟು 647 ಸರ್ಗಗಳೂ, 24,253 ಶ್ಲೋಕಗಳೂ ಇವೆಯೆಂದು ಹೇಳಿದ್ದಾರೆ. ಅಧಿಕವಾದ 253 ಶ್ಲೋಕಗಳನ್ನು ಪ್ರಕ್ಷಿಪ್ತವೆಂದೋ ಅಥವಾ ಅವುಗಳನ್ನು ಗಣನೆಗೆ ತೆಗೆದು ಕೊಳ್ಳದೆ ದೊಡ್ಡ ಮೊತ್ತವನ್ನು ಮಾತ್ರ ಹೇಳಿದೆಯೆಂದೋ ಸಮಾಧಾನವನ್ನು ಹೇಳಬಹುದು. ಆದರೆ ಸರ್ಗಗಳ ಸಂಖ್ಯೆ ಕೊಡುವುದಿಲ್ಲ. 147 ಸರ್ಗಗಳೇ ಅಧಿಕವಾಗುತ್ತವೆ. ಇದಕ್ಕೆ ವ್ಯಾಖ್ಯಾನಕಾರರು ಹೇಳುವ ಸಮಾಧಾನಗಳಿವು :—

1. ರಾಮಾಯಣದ ರಚನೆಯಾಗಿ ದೀರ್ಘಕಾಲ ಕಳೆದುಹೋಗಿರುವುದರಿಂದ ಅವಾಪೋದ್ವಾಪಗಳು ಸಂಭವಿಸಿ ಸಂಖ್ಯಾಪ್ರಮಾಣವು ವ್ಯತ್ಯಸ್ತವಾಗಿಬಹುದು.

2. ಇಷ್ಟು ಸರ್ಗ, ಇಷ್ಟು ಶ್ಲೋಕಗಳನ್ನು ರಚಿಸಬೇಕೆಂಬುದು ವಾಲ್ಮೀಕಿಮುನಿಗಳ ಸಂಕಲ್ಪವಾಗಿತ್ತು, ಮುಂದೆ ಗ್ರಂಥರಚನೆಯಾದಾಗ ಸಂಖ್ಯೆಯು ಹೆಚ್ಚು ಕಡಿಮೆಯಾಗಿರ ಬಹುದು.

3. 500 ಸರ್ಗಗಳಿಗೂ, 24,000 ಶ್ಲೋಕಗಳಿಗೂ ನ್ಯೂನವಾಗಿರುವುದಿಲ್ಲವೆಂದು ಮೇಲ್ಕಂಡ ಶ್ಲೋಕದ ತಾತ್ಪರ್ಯ. ಮುಂದೆ ಸರ್ಗಗಳೂ, ಶ್ಲೋಕಗಳೂ ಹೆಚ್ಚಿದರೂ ದೋಷವಿಲ್ಲ.

4. ಸಂಖ್ಯಾಪ್ರಮಾಣವು ಸರಿಹೋಗುವುದಿಲ್ಲವಾದುದರಿಂದ ಮೇಲ್ಕಂಡ ಶ್ಲೋಕವೇ ಪ್ರಕ್ಷಿಪ್ತ.

ಶ್ಲೋಕವು ಪ್ರಕ್ಷಿಪ್ತವಾದರೂ ಪ್ರಕ್ಷೇಪಕಾರನು ಯಾವ ಆಶಯದಿಂದ ಸಂಖ್ಯಾಪರಿಮಾಣವನ್ನು ಹೇಳಿದ್ದಾನೆ? ಆತನ ಮತದಂತೆ ಸರ್ಗಸಂಖ್ಯೆ, ಶ್ಲೋಕಸಂಖ್ಯೆಗಳ ಗಣನೆ ಹೇಗೆ ? ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಮೊದಲನೆಯ ಮೂರು ಕಾರಣಗಳು ತಕ್ಕಮಟ್ಟಿಗೆ ಒಪ್ಪುವಂತಿವೆ, ಸರ್ಗವಿಭಾಗದಲ್ಲಿ ಮತಭೇದವಿದೆಯೆಂದು ಕತಕವ್ಯಾಖ್ಯಾನದಿಂದ ತಿಳಿದುಬರುತ್ತದೆ ಲೇಖಕ ಪ್ರಮಾದದಿಂದ ಸರ್ಗವಿಭಜನೆಯಲ್ಲಿ ವ್ಯತ್ಯಾಸವಾಗುವುದು ಸಾಧ್ಯ.

### ಉತ್ತರಕಾಂಡವು ಪ್ರಕ್ಷಿಪ್ತವೇ ?

ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡಗಳು ಮೊದಲನೆಯ ಆರು ಕಾಂಡಗಳು. ಉತ್ತರಕಾಂಡ ಏಳನೆಯದು.



ಇದು ಪ್ರಕ್ಷಿಪ್ತವೆಂದು ಕೆಲವು ವಿದ್ವಾಂಸರ ಮತ. ಪಾಶ್ಚಾತ್ಯ ವಿದ್ವಾಂಸರು ಬಾಲಕಾಂಡದ ಬಹ್ವಂಶವನ್ನು ಪ್ರಕ್ಷಿಪ್ತವೆನ್ನುವುದುಂಟು. ಅವರು ಹೇಳುವ ಕಾರಣಗಳು ಇವು :

1. ನಾರದರು ವಾಲ್ಮೀಕಿಗೆ ಹೇಳಿದ ರಾಮಕಥೆಯಲ್ಲಿ ಉತ್ತರಕಾಂಡದ ಕಥಾಭಾಗವಿಲ್ಲ

2. ಯುದ್ಧಕಾಂಡದ ಕಡೆಯಲ್ಲಿ ಫಲಶ್ರುತಿ ಬಂದಿದೆ. ಇದು ಗ್ರಂಥಸಮಾಪ್ತಿಯ ದ್ಯೋತಕ.

3. ಉತ್ತರಕಾಂಡದಲ್ಲಿ ರಾಮಾಯಣಕ್ಕೆ ಸಂಬಂಧಿಸದ ಅನೇಕ ಉಪಾಖ್ಯಾನಗಳು ತುಂಬಿಕೊಂಡಿವೆ. ಅವುಗಳಲ್ಲಿ ಪಾಠಭೇದವೂ ಇದೆ. ವ್ಯಾಖ್ಯಾನಕಾರರೂ ಅನೇಕ ಕಥೆಗಳನ್ನು ಪ್ರಕ್ಷಿಪ್ತವೆಂಬುದಾಗಿ ಒಪ್ಪಿಕೊಂಡಿದ್ದಾರೆ.

4. ಉತ್ತರಕಾಂಡದ ಶೈಲಿ ಇತರ ಕಾಂಡಗಳಿಗಿಂತ ಭಿನ್ನವಾಗಿದೆ, ನೀರಸವಾದ ವಸ್ತು ಕಥನವೇ ಅಧಿಕ.

ಉತ್ತರಕಾಂಡವು ಪ್ರಕ್ಷಿಪ್ತವಲ್ಲವೆಂದೂ, ಅದನ್ನು ವಾಲ್ಮೀಕಿಗಳೇ ರಚಿಸಿದ್ದಾರೆಂದೂ ಹೇಳ ತಕ್ಕವರು ಈ ಕಾರಣಗಳನ್ನು ಕೊಡುತ್ತಾರೆ :—

1. ನಾರದರು ರಾಮಕಥೆಯನ್ನು ಹೇಳಿದ ಮೇಲೆ ಕಡೆಯಲ್ಲಿ :

‘ ಅಶ್ವಮೇಧಶತೈರಿಷ್ಟ್ವಾ ತಥಾ ಬಹುಸುವರ್ಣಕೈಃ ।
ರಾಜವಂಶಾನ್ ಶತಗುಣಾನ್ ಸ್ಥಾಪಯಿಷ್ಯತಿ ರಾಘವಃ ॥
ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಪ್ರಯಾಸ್ಯತಿ ॥

ಎಂದು ಹೇಳಿ ಉತ್ತರಕಾಂಡದ ಕಥೆಯನ್ನು ಸೂಚಿಸಿದ್ದಾರೆ ಆ ಸಮಯದಲ್ಲಿ ಉತ್ತರ ಕಾಂಡದ ಕಥೆ ನಡೆದಿರಲಿಲ್ಲವಾದುದರಿಂದ ಅದನ್ನು ವಿಶದವಾಗಿ ಹೇಳಲಿಲ್ಲ.

2. ಸ್ವರಾಷ್ಟ್ರರಂಜನಂ ಚೈವ ವೈದೇಹ್ಯಾಶ್ಚ ವಿಸರ್ಜನಂ ।
ಅನಾಗತಂ ಚ ಯತ್ಕಿಂಚಿತ್ ರಾಮಸ್ಯ ವಸುಧಾತಲೇ ॥
ತಚ್ಚಕಾರೋತ್ತರೇ ಕಾವ್ಯೇ ವಾಲ್ಮೀಕಿರ್ಭಗವಾನೃಷಿಃ ।

ಎಂಬುದಾಗಿ ಬಾಲಕಾಂಡದ 3 ನೆಯ ಸರ್ಗದ ಕಡೆಯಲ್ಲಿ ಉತ್ತರಕಾಂಡದ ಸ್ಪಷ್ಟನಿರ್ದೇಶ ಇದೆ.

3. ಲವಕುಶರು ರಾಮಸಭೆಯಲ್ಲಿ ರಾಮಾಯಣ ಕಥೆಯನ್ನು ಹಾಡಿದರೆಂದು ಬಾಲಕಾಂಡ ದಲ್ಲಿ ಹೇಳಿದೆ. ಉತ್ತರಕಾಂಡವು ರಾಮಾಯಣದ ಭಾಗವಾಗದಿದ್ದರೆ, ಕಥೆಯು ಕೊಂಡಿಯೇ ಕಳಚಿಹೋಗುತ್ತದೆ.

4. ಉತ್ತರಕಾಂಡದಲ್ಲಿ ಕೆಲವು ಪ್ರಕ್ಷಿಪ್ತಗಳಾಗಿರಬಹುದು. ಉಳಿದ ಕಾಂಡಗಳಲ್ಲಿಯೂ ಪ್ರಕ್ಷಿಪ್ತಭಾಗಗಳಿರುವುದು ಅಸಂಭವವಲ್ಲ.

5. ವಿಸ್ತಾರವಾದ ಗ್ರಂಥದಲ್ಲಿ ವಸ್ತುಕಥನಕ್ಕೆ ಮಾತ್ರ ಕೆಲವನ್ನು ಕವಿಯು ಸೀಮಿತಗೊಳಿಸಿರುವುದರಿಂದ ಸುಂದರವರ್ಣನೆಗಳು ಪರಿಮಿತವಾಗಿವೆ. ಶೈಲಿಯು ಭಿನ್ನವೆಂಬುದು ಒಪ್ಪತಕ್ಕದಲ್ಲ.

6. ಪ್ರಾಚೀನರಾದ ಕಾಳಿದಾಸ, ಭವಭೂತಿಗಳು ರಘುವಂಶ, ಉತ್ತರ ರಾಮಚರಿತೆಗಳಲ್ಲಿ ಉತ್ತರಕಾಂಡದ ಕಥೆಯನ್ನು ವರ್ಣಿಸಿದ್ದಾರೆ.

7. ಹನುಮಂತನ ಸ್ವಸಾಮರ್ಥ್ಯದ ಮರೆವು, ಇಂದ್ರಜಿತ್ತಿನ ಪರಾಕ್ರಮ, ಕುಂಭಕರ್ಣನ ನಿದ್ರೆ, ರಾವಣಖರಾದಿಗಳ ಬಾಂಧವ್ಯ—ಮುಂತಾದವು ವಿವರಣಸಾಪೇಕ್ಷವಾಗಿವೆ. ಈ ವಿವರಣೆ ಉತ್ತರಕಾಂಡದಲ್ಲಿ ದೊರೆಯುತ್ತದೆ. ಪ್ರಪ್ರಥಮವಾಗಿ ರಾಮಾಯಣವನ್ನು ಹೇಳಿದ ಕವಿ ಈ ವಿವರಣೆಯನ್ನು ಕೊಡದಿದ್ದರೆ ಗ್ರಂಥಕ್ಕೆ ನ್ಯೂನತೆಯೇ ಬರುತ್ತಿತ್ತು.

8. ಪಟ್ಟಾಭಿಷೇಕದ ಕಡೆಯಲ್ಲಿರುವ ಫಲಶ್ರುತಿ ಮಂಗಳಾಂತವಾದ ಒಂದು ಪ್ರಕರಣವನ್ನು ಸೂಚಿಸುತ್ತದೆ. ಗ್ರಂಥದ ಮೊದಲನೆಯ ಸರ್ಗದಲ್ಲಿಯೂ ಫಲಶ್ರುತಿ ಇದೆ. ವಸ್ತುತಃ ಯುದ್ಧಕಾಂಡದ ಕಡೆಯಲ್ಲಿ ಕತಕವ್ಯಾಖ್ಯಾನದ ಪ್ರಕಾರ ಫಲಶ್ರುತಿಯೇ ಇಲ್ಲ. ಆದುದರಿಂದ ಉತ್ತರಕಾಂಡವೂ ಸಹ ವಾಲ್ಮೀಕಿ ಮುನಿವಿರಚಿತವೇ ಸರಿ.

## ವಾಲ್ಮೀಕಿಮುನಿಗಳ ಜೀವನವೃತ್ತಾಂತ

ವಾಲ್ಮೀಕಿಗಳು ಬೇಡರ ಕುಲದವರೆಂಬ ಕಥೆಯೊಂದು ಪ್ರಚಲಿತವಾಗಿದೆ. ಆಧ್ಯಾತ್ಮ ರಾಮಾಯಣದಲ್ಲಿ ರಾಮನನ್ನು ಕುರಿತು ವಾಲ್ಮೀಕಿಗಳೇ ಹೇಳುತ್ತಾರೆ :—

ಅಹಂ ಪುರಾ ಕಿರಾತೇಷು ಕಿರಾತೈಃ ಸಹ ವರ್ಧಿತಃ ।
ಜನ್ಮಮಾತ್ರದ್ವಿಜತ್ವಂ ಮೇ ಶೂದ್ರಾಚಾರರತಃ ಸದಾ ॥ (I-6-65)

ಹೀಗಿರುವಾಗ ಸಪ್ತರ್ಷಿಗಳೊಮ್ಮೆ 'ಮರಾ' ಎಂಬ ಮಂತ್ರವನ್ನು ಅವರಿಗೆ ಉಪದೇಶಿಸಿದರೆಂದೂ, ಅದನ್ನೇ ಬಹುಕಾಲದವರೆಗೆ ಜಪಿಸುತ್ತಿರಲು ಮೈಮೇಲೆ ಹುತ್ತವು ಬೆಳೆದುಕೊಂಡಿತೆಂದೂ, ಸಾವಿರಯುಗಗಳು ಕಳೆದ ಮೇಲೆ ಆ ಋಷಿಗಳು ಮತ್ತೆ ಬಂದು 'ನಿಷ್ಕ್ರಮಸ್ವ' ಎನ್ನಲು 'ವಲ್ಮೀಕಾನ್ನಿರ್ಗತಶ್ಚಾಹಂ ನೀಹಾರಾದಿವ ಭಾಸ್ಕರಃ' ಎಂಬಂತೆ ಹುತ್ತದಿಂದ ಹೊರಬಂದಂತೆಯೂ ಹೇಳಿದೆ. ಈ ಕಥೆ ಆನಂದರಾಮಾಯಣದಲ್ಲಿಯೂ ಇದೆ (ರಾಜ್ಯಕಾಂಡ XIV). ಮಹಾಭಾರತದಲ್ಲಿಯೂ ವಾಲ್ಮೀಕಿಗಳು ಯುಧಿಷ್ಠಿರನನ್ನು ಕುರಿತು "ಅಗ್ನಿಹೋತ್ರಸಹಿತರಾಗಿದ್ದ ಮುನಿಗಳೊಡನೆ ನಾನು ವಾದಮಾಡಲಾಗಿ 'ನೀನು ಬ್ರಹ್ಮಘ್ನ' ಎಂದು ಅವರು ಹೇಳಿಬಿಟ್ಟರು. ಒಡನೆಯೇ ಅಧರ್ಮವು ನನ್ನನ್ನು ಆಕ್ರಮಿಸಿತು. ನಾನು ಈಶ್ವರನಿಗೆ ಶರಣು ಹೋಗಿ ಪಾಪದಿಂದ ವಿಮುಕ್ತನಾದೆನು" (ಅನು. ಅಧ್ಯಾಯ 49) ಎಂದಿದ್ದಾರೆ. ಇವರು ಜನ್ಮತಃ ಬ್ರಾಹ್ಮಣರೆಂದೂ, ಕೆಲವು ಕಾಲ ಶೂದ್ರಾಚಾರರತರಾಗಿದ್ದರೆಂದೂ ಹೇಳಬಹುದು. ವಲ್ಮೀಕ(ಹುತ್ತ)ದಿಂದ ಎದ್ದು ಬಂದುದರಿಂದ ವಾಲ್ಮೀಕಿ ಎಂಬ ಹೆಸರು



ಬಂದಿತೆಂದು ಅಧ್ಯಾತ್ಮರಾಮಾಯಣದ ಮೇಲಿನ ಕಥೆಯಿಂದ ತಿಳಿದುಬರುತ್ತದೆ. 'ವಲ್ಮೀಕ' ಎಂಬುದು ಒಬ್ಬ ಋಷಿಯ ಹೆಸರೆಂದೂ ಹೇಳುತ್ತಾರೆ. ಪ್ರಚೇತಸ್ ಎಂಬ ಋಷಿಯ ವಂಶಜರಾದುದರಿಂದ 'ಪ್ರಾಚೇತಸ' ಎಂದೂ, ಭೃಗುವಂಶೀಯರಾದುದರಿಂದ 'ಭಾರ್ಗವ' ಎಂದೂ ಸಹ ವ್ಯವಹಾರ ಉಂಟು.

ಕ್ರೌಂಚಮಿಥುನಪ್ರಸಂಗದಿಂದ ವಾಲ್ಮೀಕಿಗಳ ಆಶ್ರಮ ತಮಸಾನದಿಯ ತೀರದಲ್ಲಿದ್ದಿತೆಂದು ಗೊತ್ತಾಗುತ್ತದೆ. ವನವಾಸದ ಕಾಲದಲ್ಲಿ ರಾಮಾದಿಗಳು ಚಿತ್ರಕೂಟದ ಸಮೀಪದಲ್ಲಿ ವಾಲ್ಮೀಕಿಗಳನ್ನು ಸಂದರ್ಶಿಸಿದರೆಂದು ಹೇಳಿದೆ. (II, 56-16-17-18).

ಉತ್ತರಕಾಂಡದಲ್ಲಿ ಸೀತಾವಿಸರ್ಜನಪ್ರಸಂಗದಲ್ಲಿ ಅವರ ಆಶ್ರಮ ಗಂಗಾನದಿಯ ಸಮೀಪದಲ್ಲಿ ಇತ್ತೆಂದು ತಿಳಿದುಬರುತ್ತದೆ.

ಅವರು ರಾಮಾಯಣವನ್ನು ರಚಿಸಿದ್ದು ಮಾತ್ರವಲ್ಲದೆ ಉತ್ತರಕಾಂಡದಲ್ಲಿ ಪರಿತ್ಯಕ್ತಳಾದ ಸೀತೆಗೆ ಆಶ್ರಯವಿತ್ತು, ಲವಕುಶರನ್ನು ಸಾಕಿ, ಸಲಹಿ, ಅವರಿಗೆ ರಾಮಾಯಣವನ್ನು ಕಲಿಸುತ್ತಾರೆ. ಮತ್ತೆ ಯಜ್ಞಮಂಟಪದಲ್ಲಿ ಶ್ರೀರಾಮನಿಗೆ ಸೀತಾಸಂದರ್ಶನವನ್ನು ಮಾಡಿಸುತ್ತಾರೆ.

## ಇತರ ರಾಮಾಯಣಗಳು

ವಾಲ್ಮೀಕಿರಾಮಾಯಣವೇ ಆಧಾರವಾಗಿದ್ದು ಹಲವಾರು ರಾಮಾಯಣಗಳು ಸನಾತನ ಸಂಪ್ರದಾಯದಲ್ಲಿಯೇ ಉದ್ಭವಿಸಿವೆ. ಅಧ್ಯಾತ್ಮರಾಮಾಯಣ, ಆನಂದರಾಮಾಯಣ, ವಾಸಿಷ್ಠ ರಾಮಾಯಣ, ಅದ್ಭುತರಾಮಾಯಣಗಳು ಇವುಗಳಲ್ಲಿ ಮುಖ್ಯವಾಗಿ ಪ್ರಚುರವಾದವು. "ತಿಲಕ" ವ್ಯಾಖ್ಯಾನದಲ್ಲಿ 'ಆಗ್ನಿವೇಶ್ಯರಾಮಾಯಣ' ಎಂಬುದನ್ನು ಪ್ರಮುಖವಾಗಿ ಉದಾಹರಿಸಲಾಗಿದೆ. ಮಹಾಭಾರತದಲ್ಲಿ ಒಂದು ರಾಮೋಪಾಖ್ಯಾನ ಉಂಟು. ಸ್ಕಾಂದ, ಪಾದ್ಮ, ಭಾಗವತ, ಕೂರ್ಮ ಮುಂತಾದ ಪುರಾಣಗಳಲ್ಲಿಯೂ ರಾಮಚರಿತ್ರೆಯು ವರ್ಣಿತವಾಗಿದೆ. ಬೌದ್ಧ ಜಾತಕಗಳಲ್ಲಿಯೂ, ಜೈನಪುರಾಣಗಳಲ್ಲಿಯೂ ರಾಮಚರಿತೆ ಇದೆ. ಅದು ರಾಮಾಯಣದ ವಿಕೃತರೂಪ.

## ಉತ್ತರಕಾಲದ ಸಾಹಿತ್ಯದ ಮೇಲೆ ರಾಮಾಯಣದ ಪ್ರಭಾವ

ಶ್ರೀಮದ್ರಾಮಾಯಣವು "ಪರಂ ಕವೀನಾಮಾಧಾರಂ" ಎಂಬುದಾಗಿ ಹೇಳಿರುವುದು ಅಕ್ಷರಶಃ ಸತ್ಯವಾಗಿದೆ. ರಾಮಾಯಣವನ್ನವಲಂಬಿಸಿ ಸಂಸ್ಕೃತವಾಙ್ಮಯದಲ್ಲಿ ದೊರೆಯುವ ಕಾವ್ಯ, ಚಂಪೂ, ನಾಟಕಗಳಿಗೆ ಲೆಕ್ಕವಿಲ್ಲ. ರಾಮಾಯಣಮಂಜರೀ, ಭಟ್ಟಿಕಾವ್ಯ, ಜಾನಕೀಹರಣ, ಚಂಪೂರಾಮಾಯಣ, ಅನರ್ಘರಾಘವ, ಉತ್ತರರಾಮಚರಿತೆ, ಅಭಿಷೇಕನಾಟಕ, ಪ್ರತಿಮಾನಾಟಕ—ಮುಂತಾದವು ಇವುಗಳಲ್ಲಿ ಪ್ರಖ್ಯಾತವಾದವು. ಪ್ರಾಕೃತದ ಸೇತುಬಂಧ, ಕನ್ನಡ, ತೆಲುಗು, ತಮಿಳು, ಹಿಂದಿ—ಮೊದಲಾದ ಸಕಲ ಭಾರತೀಯ ಭಾಷೆಗಳಲ್ಲಿಯೂ ರಾಮಾಯಣವನ್ನಾಶ್ರಯಿಸಿ ಬರೆದ ಸಾಹಿತ್ಯ ವಿಪುಲವಾಗಿದೆ.

'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ'-ಎಂಬ ಗದುಗಿನ ನಾರಣಪ್ಪನ ವಾಕ್ಯವನ್ನು ರಾಮಾಯಣದ ಪ್ರಶಂಸೆಯಾಗಿ ಗ್ರಹಿಸಬೇಕು. ಕ್ಷೇಮೇಂದ್ರನು 'ನಮಃ ಸರ್ವೋಪಜೀವ್ಯಂ ತಂ ಕವೀನಾಂ ಚಕ್ರವರ್ತಿನಮ್ 'ಎಂಬುದಾಗಿ ಹೇಳಿ ರಾಮಾಯಣವು ಸರ್ವಕವಿಗಳಿಗೂ ಉಪಜೀವ್ಯವೆಂದಿದ್ದಾನೆ. ಮುರಾರಿಯು ಅನರ್ಘರಾಘವದಲ್ಲಿ :

'ಸಕಲಕವಿಸಾರ್ಥಸಾಧಾರಣೀ ಖಲ್ವಿಯಂ ವಾಲ್ಮೀಕೀಯಾ ಸುಭಾಷಿತನೀವೀ' ಎಂದು ಹೊಗಳಿ, ಬಹುಜನರು ವರ್ಣಿಸಿರುವ ಕಥಾವಸ್ತುವನ್ನೇ ಮತ್ತೆ ತಾನು ವರ್ಣಿಸಿದುದನ್ನು—

ಯದಿ ಕ್ಷುಣ್ಣಂ ಪೂರ್ವೈರಿತಿ ಜಹತಿ ರಾಮಸ್ಯ ಚರಿತಂ
ಗುಣೈರೇತಾವದ್ಭಿರ್ಜಗತಿ ಪುನರನ್ಯೋ ಜಯತಿ ಕಃ॥

ಎಂದು ಸಮರ್ಥಿಸಿಕೊಂಡಿದ್ದಾನೆ.

## ದೇಶಾಂತರಗಳಲ್ಲಿ ರಾಮಾಯಣದ ಪ್ರಸಾರ

ಏಷ್ಯಾಖಂಡದ ಆಗ್ನೇಯ ರಾಷ್ಟ್ರಗಳಲ್ಲಿ ರಾಮಾಯಣವು ಪ್ರಚುರವಾಗಿದೆ. ಥೈಲ್ಯಾಂಡಿನಲ್ಲಿ "ನಾಂಗ್" ಎಂಬ ಬೊಂಬೆಯಾಟದ ಮೂಲಕ ರಾಮಕಥೆಯನ್ನು ಪ್ರದರ್ಶಿಸುತ್ತಾರೆ. ಈ ಆಟವನ್ನು ಮೊದಲು ದಶರಥನಿಗೂ, ಶ್ರೀರಾಮನಿಗೂ ವಂದನೆಯನ್ನು ಅರ್ಪಿಸುತ್ತಾರೆ. ಅಲ್ಲಿಯೂ ದಶರಥನ ರಾಜಧಾನಿ ಅಯೋಧ್ಯೆ. ಅಲ್ಲದೆ ರಾಮಾಯಣಕ್ಕೆ ಸಂಬಂಧಿಸಿದ ಹಾಡುಗಳನ್ನು ಹೇಳುತ್ತ "ಕೊನ್" (Khon) ಎಂಬ ಶಾಸ್ತ್ರೀಯ ನೃತ್ಯವನ್ನು ನಡೆಸುತ್ತಾರೆ, ಈ ಹಾಡುಗಳು "ರಾಮಕೀನ್" ಎಂಬ ನಾಟಕಕ್ಕಾಗಿ "ರಾಮ" ಎಂಬ ಹೆಸರಿನ ದೊರೆ ಬರೆದವು, ರಾವಣನಿಗೆ "ಥೊಸಕನತ್" ಎಂದು ಹೆಸರು ಅದು "ದಶಕಂಠ" ಎಂಬುದರ ರೂಪಾಂತರ,

ಜಾವಾದಲ್ಲಿ ಒಂದು ಶಿವಾಲಯವಿದೆ. ಅದರ ಶಿಲಾಫಲಕಗಳ ಮೇಲೆ ಸಮಗ್ರ ರಾಮಾಯಣ ಕಥೆಯನ್ನು ಚಿತ್ರಿಸಲಾಗಿದೆ, ಕ್ರಿ ಶ. 929 ರಲ್ಲಿ ಪಟ್ಟಕ್ಕೆ ಬಂದ "ಸಿಂಡಕ್" ಎಂಬ ರಾಜನ ಕಾಲದಲ್ಲಿ ರಾಮಾಯಣವು ಜಾವಾಭಾಷೆಯಲ್ಲಿ ರಚಿತವಾಯಿತು.

"ವಜುಂಗ್ ವಾಂಗ್. ವಜಂಗ್ ಕುಲಿತ್" ಎಂಬ ನೃತ್ಯನಾಟಕಗಳಲ್ಲಿ ಬಹುಭಾಗ ರಾಮಾಯಣದ ದೃಶ್ಯಗಳನ್ನು ಒಳಗೊಂಡಿವೆ. ಬಾಲಿದ್ವೀಪದಲ್ಲಿ ರಾಮಾಯಣದ ಕಥೆ ಆಬಾಲ ವೃದ್ಧರಿಗೂ ಗೊತ್ತಿದೆ. ಅಲ್ಲಿ "ಕೆಟ್‌ಜಕ್" ಎಂಬ ನೃತ್ಯಕಥೆ ನಡೆಯುತ್ತದೆ, ಹಿನ್ನೆಲೆಯಲ್ಲಿ ಒಬ್ಬನು ರಾಮಾಯಣವನ್ನು ಹಾಡುತ್ತಾನೆ,. ನರ್ತಕರು ವರ್ತುಲಾಕಾರವಾಗಿ ಕುಳಿತು ಸರದಿಯಂತೆ ತಮ್ಮ ಪಾತ್ರಗಳನ್ನು ಅಭಿನಯಿಸುತ್ತ ನರ್ತಿಸುತ್ತಾರೆ, ಇಂಡೋನೇಷಿಯಾದಲ್ಲಿ ಮುಹಮ್ಮದೀಯರೂ ಸಹ ರಾಮಾಯಣವನ್ನು ಆಸಕ್ತಿಯಿಂದ ಓದುತ್ತಾರೆ. ಆದರೆ ಈ ರಾಮಾಯಣದ ರೂಪಾಂತರಗಳು ಕಥಾವಸ್ತು ಇತ್ಯಾದಿಗಳಲ್ಲಿ ವಾಲ್ಮೀಕಿರಾಮಾಯಣಕ್ಕಿಂತ ಎಷ್ಟೋ ಭಿನ್ನವಾಗಿವೆ.



ರಾಮಾಯಣವು ಇತಿಹಾಸವೆಂದು ಪ್ರಸಿದ್ಧವಾಗಿದೆ. ಈ ಪ್ರಸಂಗವು ಐತಿಹಾಸಿಕವಾಗಿ ನಡೆದಿರಬೇಕು. ಜನಪ್ರಿಯವಾದ ಈ ಕಥೆಯನ್ನು ಕುರಿತು ವೀರಗಾಥಾರೂಪವಾಗಿ ಜನಪದಗೀತೆಗಳನ್ನು ರಚಿಸಿ ಜನರು ಹಾಡುತ್ತಿದ್ದರು ಆ ಕಥಾವಸ್ತುವನ್ನು ಆಧರಿಸಿ ವಾಲ್ಮೀಕಿಯೆಂಬ ಕವಿ ರಾಮಾಯಣವನ್ನು ಬರೆದನು. ಕಲ್ಪಿತವಾದ ಅನೇಕ ಅಂಶಗಳನ್ನು ಅದರಲ್ಲಿ ಸೇರಿಸಿದನು. ಕಾಲಕ್ರಮದಲ್ಲಿ ಇನ್ನೂ ಕೆಲವು ವರ್ಣನೆಗಳನ್ನೂ, ಉಪಾಖ್ಯಾನಗಳನ್ನೂ ಇತರರು ಸೇರಿಸುತ್ತಾ ಬಂದರು. ಹೀಗೆ ಸಿದ್ಧವಾಯಿತು ರಾಮಾಯಣಕಾವ್ಯ ರಾಮನು ಮನುಷ್ಯನೇ. ತನ್ನ ಉದಾತ್ತ ಗುಣಗಳಿಂದ ದೇವರೆಂದು ಪ್ರಸಿದ್ಧಿಗೆ ಬಂದನು. ಇದು ಪಾಶ್ಚಾತ್ಯ ದೃಷ್ಟಿ,

ವಾಲ್ಮೀಕಿ ಮುನಿಗಳು ತಪಸ್ವಿಗಳು ; ಜ್ಞಾನಿಗಳು ದೈವಪ್ರೇರಣೆಯಿಂದ ಲೋಕೋಪಕಾರಕ್ಕಾಗಿ ಈ ಗ್ರಂಥವನ್ನು ರಚಿಸಿದರು. ರಾಮನು ವಿಷ್ಣುವಿನ ಅವತಾರ, ಆತನ ಕಾಲದಲ್ಲಿಯೇ ವಾಲ್ಮೀಕಿಗಳು ಇದ್ದರು.

ಉಪಸ್ಪೃಶ್ಯೋದಕಂ ಸಮ್ಯಙ್ಮುನಿಃ ಸ್ಥಿತ್ವಾ ಕೃತಾಂಜಲಿಃ ।
ಪ್ರಾಚೀನಾಗ್ರೇಷು ದರ್ಭೇಷು ಧರ್ಮೇಣಾನ್ವೇಕ್ಷತೇ ಗತಿಂ ॥
ರಾಮಲಕ್ಷ್ಮಣಸೀತಾಭೀ ರಾಜ್ಞಾ ದಶರಥೇನ ಚ ।
ಸಭಾರ್ಯೇಣ ಸರಾಷ್ಟ್ರೇಣ ಯತ್ಪ್ರಾಪ್ತಂ ತತ್ರ ತತ್ತ್ವತಃ ॥
ಹಸಿತಂ ಭಾಷಿತಂ ಚೈವ ಗತಿರ್ಯಾ ಯಚ್ಚ ಚೇಷ್ಟಿತಂ ।
ತತ್ ಸರ್ವಂ ಧರ್ಮವೀರ್ಯೇಣ ಯಥಾವತ್ ಸಂಪ್ರಪಶ್ಯತಿ (I-3—2, 3, 4,)

ಆದ್ದರಿಂದ ಕಥಾವಸ್ತುವಿನಲ್ಲಿ ವಾಲ್ಮೀಕಿಗಳು ಕಲ್ಪಿಸಿದ್ದು ಏನು ಇಲ್ಲ. ವರ್ಣನೆಯು ಮಾತ್ರ ಅವರ ಪ್ರತಿಭಾವಿಲಾಸ, ರಾಮಾಯಣವು ಪವಿತ್ರವಾದ ಕಾವ್ಯ, ಇದು ಶ್ರದ್ಧಾಳುಗಳಾದ ಭಾರತೀಯರ ದೃಷ್ಟಿ,

<u>ಮಹಾಕಾವ್ಯ</u> :—ಮಹಾಕಾವ್ಯವು ನಗರಾರ್ಣವಶೈಲಾದಿ ಅಷ್ಟಾದಶವರ್ಣನೆಗಳಿಂದ ಯುಕ್ತವಾಗಿರಬೇಕೆಂದೂ, ಚತುರ್ವರ್ಗಫಲಾಯತ್ತವಾಗಿರಬೇಕೆಂದೂ, ಚತುರೋದಾತ್ತನಾಯಕವಾಗಿರಬೇಕೆಂದೂ ರಸಭಾವನಿರಂತರವಾಗಿರಬೇಕೆಂದೂ, ಅಸಂಕ್ಷಿಪ್ತವಾಗಿರಬೇಕೆಂದೂ, ಅಂಥ ಕಾವ್ಯವು ಕಲ್ಪಾಂತರಸ್ಥಾಯಿಯಾಗುವುದೆಂದೂ ದಂಡಿಯೇ ಮೊದಲಾದ ಕಾವ್ಯಮೀಮಾಂಸಕರು ಹೇಳಿದ್ದಾರೆ. ರಾಮಾಯಣವು ಕಾವ್ಯವೆಂದು ಅದರಲ್ಲಿಯೇ ಹೇಳಿದೆ.

"ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ।"
"ಕೃತ್ಸ್ನಂ ರಾಮಾಯಣಂ ಕಾವ್ಯಮೀದೃಶೈಃ ಕರವಾಣ್ಯಹಂ ॥"
"ಯಶಸ್ಕರಂ ಕಾವ್ಯಮುದಾರಧೀರ್ಮುನಿಃ ॥"
"ಕಾವ್ಯಮೇತದಗಾಯತಾಂ ॥"

ಮಹಾಕಾವ್ಯದ ಎಲ್ಲಾ ಲಕ್ಷಣಗಳೂ ಸಂಪೂರ್ಣವಾಗಿ ಔಚಿತ್ಯದಿಂದ ರಾಮಾಯಣದಲ್ಲಿ ಕೂಡಿಬರುತ್ತವೆ. ಶಿಶುಪಾಲವಧಾದಿ ಕಾವ್ಯಗಳಲ್ಲಿ ಮಹಾಕಾವ್ಯದ ಲಕ್ಷಣದ ಪೂರ್ತಿಗಾಗಿಯೋ ಅಥವಾ ವರ್ಣನಾಚಾಪಲ್ಯದಿಂದಲೋ ಯತ್ನಪೂರ್ವಕವಾಗಿ ಕೆಲವು ವರ್ಣನೆಗಳನ್ನು ಕವಿಗಳು ಸೇರಿಸಿದ್ದಾರೆ. ರಾಮಾಯಣದಲ್ಲಾದರೋ ಈ ವರ್ಣನೆಗಳು ಕಥಾಸನ್ನಿವೇಶಕ್ಕೆ ಹೊಂದಿಕೊಂಡು ಅನಿವಾರ್ಯವಾಗಿ ಬರುತ್ತವೆ. ಉದಾಹರಣೆಗೆ ವಾನರಸೇನೆ ಸಮುದ್ರತೀರಕ್ಕೆ ಬಂದಿಳಿದಾಗ ಶ್ರೀರಾಮನ ಪ್ರಾಯೋಪವೇಶ, ಸೇತುಬಂಧಗಳಿಗೆ ನಿಮಿತ್ತವಾಗಿ ಸಮುದ್ರದ ವಿಸ್ತಾರಭೀಷಣತೆಗಳನ್ನು ತೋರಿಸಲು ಸಮುದ್ರದ ವರ್ಣನೆಯು ಅವಶ್ಯಕವಾಗುತ್ತದೆ. ಶ್ರೀರಾಮನು ಸಮಯ ಪ್ರತೀಕ್ಷೆಯಿಂದ ಋಷ್ಯಮೂಕದಲ್ಲಿ ನೆಲಸಿದಾಗ ಕಳೆದುಹೋಗುತ್ತಿದ್ದ ವರ್ಷರ್ತುವನ್ನೂ, ಆಗಮಿಸಿದ ಶರದೃತುವನ್ನೂ ವರ್ಣಿಸಿರುವುದು ಔಚಿತ್ಯಪೂರ್ಣವಾಗಿದೆ. ಹನುಮಂತನು ಲಂಕೆಯಲ್ಲಿ ಸೀತೆಯನ್ನು ಹುಡುಕುತ್ತಿದ್ದಾಗ ಕತ್ತಲೆಯಲ್ಲಿ ಸಂಚರಿಸುವುದು ಹೇಗೆಂಬ ಶಂಕೆಯನ್ನು ದೂರಮಾಡುವುದಕ್ಕಾಗಿ ಚಂದ್ರೋದಯದ ವರ್ಣನೆ ಬಂದಿದೆ. ಹೀಗೆಯೇ ಅರಣ್ಯ ಚಿತ್ರಕೂಟಪರ್ವತ ಮುಂತಾದ ವಸ್ತುಗಳ ವರ್ಣನೆ ಎಷ್ಟು ಔಚಿತ್ಯಪೂರ್ಣವಾಗಿ ಬಂದಿದೆ ಯೆಂಬುದನ್ನು ಗಮನಿಸಬಹುದು.

ರಸಭಾವನಿರಂತರವಾಗಿರಬೇಕೆಂಬ ಲಕ್ಷಣವು ರಾಮಾಯಣಕ್ಕೆ ಮೀಸಲಾದದ್ದು.

ರಸೈಃ ಶೃಂಗಾರಕರುಣಹಾಸ್ಯರೌದ್ರಭಯಾನಕೈಃ ॥
ವೀರಾಧಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಂ ॥ (ಬಾಲ. 4—9)

ಶ್ರೀರಾಮಸೀತೆಯರಲ್ಲಿ ಲಲಿತಶೃಂಗಾರವನ್ನೂ, ವಿಪ್ರಲಂಭದ ಪರಾಕಾಷ್ಠೆಯನ್ನೂ ಕಾಣಬಹುದು. ರಾವಣಶೂರ್ಪಣಖೆಯರ ನುಡಿಗಳಲ್ಲಿ ಶೃಂಗಾರಾಭಾಸವು ವ್ಯಕ್ತವಾಗಿದೆ. ಅಯೋಧ್ಯಾಕಾಂಡದಲ್ಲಿಯೂ, ತಾರಾಮಂಡೋದರೀವಿಲಾಪಗಳಲ್ಲಿಯೂ ಕರುಣದ ಹೊಳೆಯೇ ಹರಿದಿದೆ. ಮಂಥರೆಯನ್ನು ಕುರಿತು ಕೈಕೇಯಿಯು ಮೆಚ್ಚುಗೆಯ ಮಾತು, ಕಪಿಚೇಷ್ಟಾ ಪ್ರಸಂಗಗಳಲ್ಲಿಯೂ, ಇನ್ನೂ ಅನೇಕ ಸ್ಥಳಗಳಲ್ಲಿ ಹಾಸ್ಯವು ಅಭಿವ್ಯಕ್ತವಾಗಿದೆ. ಸಮುದ್ರ ಲಂಘನದಲ್ಲಿ ಅದ್ಭುತವನ್ನೂ, ಲಂಕಾದಹನ, ಯುದ್ಧಕಾಂಡಗಳಲ್ಲಿ ರೌದ್ರ, ಭಯಾನಕ, ಬೀಭತ್ಸಗಳನ್ನೂ, ಖರಸಂಹಾರಾದಿ ಸಂದರ್ಭಗಳಲ್ಲಿ ಶ್ರೀರಾಮನ ವೀರರಸವನ್ನೂ, ಅಗಸ್ತ್ಯ ಸಂದರ್ಶನಾದಿ ಸ್ಥಳಗಳಲ್ಲಿ ಶಾಂತವನ್ನೂ ವಾಲ್ಮೀಕಿಮುನಿಗಳು ಅಭಿವ್ಯಂಜಿಸಿದ್ದಾರೆ.

'ನಿರ್ವೇದ ಗ್ಲಾನಿ ಶಂಕಾ . . . .' ಎಂದು ಲಾಕ್ಷಣಿಕರು ಎಣಿಸಿದ 33 ಭಾವಗಳಿಗೆ ಮಾತ್ರವಲ್ಲ, ವಾತ್ಸಲ್ಯ, ಸ್ನೇಹ ಮೊದಲಾದ ಅಗಣಿತ ಭಾವಗಳಿಗೂ ಭಾವೋದಯ, ಭಾವಸಂಧಿ ಮುಂತಾದ ವಿವಿಧ ಪ್ರಭೇದಗಳಿಗೂ ರಾಮಾಯಣವು ಆಕರವಾಗಿದೆ. ರಾಮಾಯಣವು ಚತುರ್ವರ್ಗ ಫಲಾಯತ್ತವಾದುದೆಂದೇ ಇಂದಿಗೂ ನಿತ್ಯಪಾರಾಯಣ ನಡೆಯುತ್ತಿದೆ. ಇದು ಕಲ್ಪಾಂತರ ಸ್ಥಾಯಿಯೆಂಬುದರಲ್ಲಿ ಆಚ್ಚರಿಯಿಲ್ಲ.

ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ।
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ॥



## ವಾಲ್ಮೀಕಿಮುನಿಗಳ ಶೈಲಿ

ಅತ್ಯಂತ ಲಲಿತವಾದ ಶೈಲಿಗೆ ರಾಮಾಯಣವು ಪ್ರಥಮೋದಾಹರಣೆ. ಸಂಸ್ಕೃತವನ್ನು ಅದಕ್ಕಿಂತ ಸುಲಭವಾಗಿ ಬಳಸಲು ಶಕ್ಯವಾಗದು. ಇದರಲ್ಲಿ ಅನುಷ್ಟುಪ್ ವೃತ್ತಗಳೇ ಅಧಿಕ. ಎಲ್ಲ ರಸಭಾವಸನ್ನಿವೇಶಗಳಿಗೂ ಹೊಂದಿಕೊಳ್ಳುವ ಛಂದಸ್ಸು ಇದು. ಉಪಜಾತಿ, ಮಾಲಿನೀ ಮೊದಲಾದವು ವಿರಳವಾಗಿ ಬಂದಿವೆ. ಅವುಗಳಲ್ಲಿ ಕೆಲವಾದರೂ ಪ್ರಕ್ಷಿಪ್ತವಿರ ಬಹುದು. ಶಬ್ದಾಲಂಕಾರಗಳಲ್ಲಿ ಯಮಕಾನುಪ್ರಾಸಗಳು ಕೆಲವೆಡೆ ಗೋಚರಿಸುತ್ತವೆ. ಅವೂ ಅಯತ್ನಸಿದ್ಧವಾಗಿ ಬಂದವು. ಅರ್ಥಾಲಂಕಾರಗಳಲ್ಲಿ ಉಪಮೆಯೇ ಅಧಿಕ. ಎರಡನೆಯ ಸ್ಥಾನ ರೂಪಕಾಲಂಕಾರಕ್ಕೆ. ಉತ್ಪ್ರೇಕ್ಷೆ, ಅತಿಶಯೋಕ್ತಿಗಳು ಪರಿಮಿತ. ಶ್ಲೇಷೆಯು ಇಲ್ಲವೆಂದರೂ ಸಲ್ಲುವುದು.

ರಾಮಾಯಣವು ಶ್ರೇಷ್ಠವಾದ ಧ್ವನಿಕಾವ್ಯ. ಗ್ರಂಥದ ಯಾವ ಪುಟವನ್ನು ತೆಗೆದರೂ ಓದುಗರ ಹೃದಯವನ್ನು ಸೆರೆಹಿಡಿದು ತನ್ಮಯಗೊಳಿಸುವ ಶಕ್ತಿ ಈ ಕಾವ್ಯಕ್ಕುಂಟು ವಿಸ್ತೃತವಾದ ಈ ಮಹಾಕಾವ್ಯವನ್ನು ಎಲ್ಲೆಡೆಯೂ ರಸಭಾವನಿರಂತರವಾಗಿ ರಚಿಸಿದ ವಾಲ್ಮೀಕಿಗಳ ಪ್ರತಿಭೆ ಅಸಾಧಾರಣವಾದುದು.

ಯಾವುದು ವಿವಿಧಾರ್ಥಗಳ ಸ್ಫೋರಕವಾಗಿ ಅರ್ಥಭೂಯಿಷ್ಠವಾಗಿದೆಯೋ, ಬೇರೆ ಮಾತಿನಲ್ಲಿ ಹೇಳಲು ಶಕ್ಯವಿಲ್ಲದ್ದಾಗಿ ಅಪ್ರಕಂಪ್ಯವಾಗಿದೆಯೋ ಅದು ವೀರ್ಯವತ್ತಾದ ಶೈಲಿ. ಕುಂತಕನ ಮತದಂತೆ ಅದೊಂದು ವಕ್ರೋಕ್ತಿಯ ಪ್ರಕಾರ. ವಾಲ್ಮೀಕಿಮುನಿಗಳ ಕೆಲವು ಅಂತಹ ವಾಗ್ವಿಜೃಂಭಣೆಗಳನ್ನು ಇಲ್ಲಿ ಉದಾಹರಿಸಬಹುದು.

1. ಶ್ರೀರಾಮನು ಬಾಲಕನೆಂದೂ ರಾಕ್ಷಸರನ್ನೆದುರಿಸಿ ಯಜ್ಞದ ಸಂರಕ್ಷಣೆಯನ್ನು ಮಾಡಲಾರನೆಂದೂ ದಶರಥನು ಹೇಳಿದಾಗ ವಿಶ್ವಾಮಿತ್ರರು ಹೇಳುವ ಮಾತಿದು :—

ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ।
ವಸಿಷ್ಠೋಽಪಿ ಮಹಾತೇಜಾಃ ಯೇ ಚೇಮೇ ತಪಸಿ ಸ್ಥಿತಾಃ॥ (1-19-14)

ಶ್ರೀರಾಮನ ಯೋಗ್ಯತೆ ಏನೆಂಬುದು ದಶರಥನಿಗೇನು ಗೊತ್ತು !

2. ತ್ರಿಶಂಕುವಿಗೆ ಸ್ವರ್ಗದಲ್ಲಿ ಎಡೆಯಿಲ್ಲವೆಂದು ಇಂದ್ರನು ಅವನನ್ನು ತಿರಸ್ಕರಿಸಿದಾಗ ವಿಶ್ವಾಮಿತ್ರರ ರೋಷೋಕ್ತಿ ಇದು :—

ಅನ್ಯಮಿಂದ್ರಂ ಕರಿಷ್ಯಾಮಿ ಲೋಕೋ ವಾ ಸ್ಯಾದನಿಂದ್ರಕಃ॥ (1-59-23)

3. ವರ್ಷಾಕಾಲವು ಕಳೆದರೂ ಸುಗ್ರೀವನು ಸೀತಾನ್ವೇಷಣೆಗೆ ಬರಲಿಲ್ಲವೆಂದು ಕ್ರುದ್ಧನಾದ ಶ್ರೀರಾಮನು ಅವನಿಗೆ ಈ ಮಾತನ್ನು ಹೇಳುವಂತೆ ಲಕ್ಷ್ಮಣನಿಗೆ ಹೇಳುತ್ತಾನೆ :–

ನ ಚ ಸಂಕುಚಿತಃ ಪಂಥಾಃ ಯೇನ ವಾಲೀ ಹತೋ ಗತಃ ॥
ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ॥ (IV-29-81)

ವಾಲಿ ಹೋದ ದಾರಿ ಅಷ್ಟು ಇಕ್ಕಟ್ಟಾಗಿಲ್ಲ. ಸುಗ್ರೀವನೂ ಹೋಗಬಹುದು !

4. ಲಕ್ಷ್ಮಣನು ರಾವಣನ ಶಕ್ತ್ಯಾಯುಧದಿಂದ ಮೂರ್ಛಿತನಾದಾಗ ಶ್ರೀರಾಮನ ವೀರವಾಣಿ ಇದು :—

ಅರಾವಣಮರಾಮಂ ವಾ ಜಗದ್ದ್ರಕ್ಷ್ಯಥ ವಾನರಾಃ ।
ಅಸ್ಯ ರಾಮಸ್ಯ ರಾಮತ್ವಂ ಪಶ್ಯಂತು ಮಮ ಸಂಯುಗೇ ॥ (VI-101-49, 55)

5. ರಾಮರಾವಣರ ಯುದ್ಧದ ಭೀಷಣತೆಯನ್ನು ಹೋಲಿಸಲು ಇನ್ನೊಂದು ಉಪಮಾನವೇ ಇಲ್ಲ.

ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ।
ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ । (VI-110-23,24)

## ಉಪಮಾಲಂಕಾರ

ಅಲಂಕಾರಗಳಲ್ಲಿ ಉಪಮೆಯು ಸಹಜವಾದದ್ದು, ಪರಿಣಾಮಕಾರಿಯಾದದ್ದು. ಉಪಮಾನ, ಉಪಮೇಯಗಳೆರಡರ ಸಾದೃಶ್ಯದ ಔಚಿತ್ಯ ಸೌಂದರ್ಯಪೂರ್ಣವಾಗಿ ಗೋಚರಿಸಿ ಉಭಯವೂ ಆಸ್ವಾದ್ಯವಾಗುತ್ತದೆ. ವಾಲ್ಮೀಕಿಗಳ ಉಪಮೆ ಅನ್ಯತ್ರ ದುರ್ಲಭ.

1. ತಮಸಾನದಿಯ ನೀರು ತಿಳಿಯಾಗಿತ್ತು.
ರಮಣೀಯಂ ಪ್ರಸನ್ನಾಂಬು ಸನ್ಮನುಷ್ಯಮನೋ ಯಥಾ । (I-2-5)

2. ಸೀತೆಯು ಸದಾ ರಾಮನನ್ನು ಅನುಸರಿಸಿರುವಳು.
ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ । (I-73-28)

3. ಒರಟಾದ ನಾರಿನ ಸೀರೆ ಸೀತೆಗೆ, ಹೆಣ್ಣು ಜಿಂಕೆಗೆ ಬೇಡನೊಡ್ಡಿದ ಬಲೆಯಂತೆ ಕಾಣಿಸಿತು..
ಸಂಪ್ರೇಕ್ಷ್ಯ ಚೀರಂ ಸಂತ್ರಸ್ತಾ ಪೃಷತೀ ವಾಗುರಾಮಿವ । (II-37-10)
ಅದು ಕೈಕೇಯಿ ಒಡ್ಡಿದ ಬಲೆಯೆಂದೂ ಅವಳ ಮನಸ್ಸಿಗೆ ಗೋಚರಿಸಿರಬೇಕು !

4. ಮಧ್ಯಾಹ್ನವಾದಂತೆ ಸೂರ್ಯನು ಜನರನ್ನು ತಾಪಗೊಳಿಸುತ್ತಾನೆ, ಅನ್ಯಾಯದಿಂದ ಹಣವನ್ನು ಸಂಪಾದಿಸಿದ ದುರುಳಿನ ಹಾಗೆ.
ಅವಿಷಹ್ಯಾತಪೋ ಯಾವತ್ ಸೂರ್ಯೋ ನಾತಿವಿರಾಜತೇ ।
ಅಮಾರ್ಗೇಣಾಗತಾಂ ಲಕ್ಷ್ಮೀಂ ಪ್ರಾಪ್ಯೇವಾನ್ವಯವರ್ಜಿತಃ ॥ (III-8-8)

5. ಶುಭ್ರವಾದ ಗಗನದಲ್ಲಿ ಸಂಚರಿಸುತ್ತಿದ್ದ ಚಂದ್ರನು ಕೊಳದಲ್ಲಿ ಈಜುವ ಹಂಸದಂತೆ ಕಾಣಿಸಿದನು.
ದದರ್ಶ ಚಂದ್ರಂ ಸ ಕಪಿಪ್ರವೀರಃ ಪೋಪ್ಲೂಯಮಾನಂ ಸರಸೀವ ಹಂಸಂ ॥
(V-2-58)

6. ಸುಪ್ಪತ್ತಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದ ಕಪ್ಪುಬಣ್ಣದ ಭೀಮಕಾಯನಾದ ರಾವಣನು ಹೀಗಿದ್ದನು :—
ಮಾಷರಾಶಿಪ್ರತೀಕಾಶಂ ನಿಶ್ವಸಂತಂ ಭುಜಂಗವತ್ ।
ಗಾಂಗೇ ಮಹತಿ ತೋಯಾಂತೇ ಪ್ರಸುಪ್ತಮಿವ ಕುಂಜರಂ ॥ (V-10-28)
ಪೇರಿಸಿದ ಉದ್ದಿನ ರಾಶಿಯಂತೆ ಇದ್ದನಂತೆ ರಾವಣ !

## ಪ್ರಕೃತಿ ವರ್ಣನೆ

ವಾಲ್ಮೀಕಿಗಳು ಅರಣ್ಯದಲ್ಲಿ ನೆಲಸಿದ್ದ ಋಷಿಗಳು. ಪ್ರಕೃತಿಯ ರೌದ್ರತೆ, ರಮಣೀಯತೆಗಳನ್ನು ಕಣ್ಣಾರೆ ಕಂಡವರು. ಸೂರ್ಯೋದಯ, ಚಂದ್ರೋದಯ, ಋತುಚಕ್ರಪರಿವರ್ತನೆಗಳನ್ನು ಸೂಕ್ಷ್ಮವಾಗಿ ಗಮನಿಸಿದವರು. ನದಿಗಳ ಪ್ರಸನ್ನತೆಯನ್ನೂ, ಅವು ಮಳೆಗಾಲದಲ್ಲಿ ಉಕ್ಕಿ



ಹರಿಯುವ ರೀತಿಯನ್ನೂ ಸಹ ನೋಡಿದವರು. ವನಗಿರಿಗಳ ಭವ್ಯಗಂಭೀರತೆಯನ್ನು ವೀಕ್ಷಿಸಿದವರು. ಮೃಗಪಕ್ಷಿಗಳ ಒಡನಾಡಿಯಾಗಿ ಅವುಗಳ ಸ್ವಭಾವವನ್ನರಿತವರು. ಇವುಗಳ ಚಿತ್ರಣ ರಾಮಾಯಣದಲ್ಲಿ ಮನೋಹರವಾಗಿ ಬಂದಿದೆ. ಚಂದ್ರೋದಯದ ಸಮಯದಲ್ಲಿ ಸುಗ್ರೀವನ ವಾನರಸೇನೆ ಸಮುದ್ರತೀರಕ್ಕೆ ಬಂದಿಳಿಯಿತು. ಸಮುದ್ರವು ನಗುತ್ತ ಕುಣಿಯುತ್ತಿರುವಂತೆ ಕಾಣಿಸಿತಂತೆ :—

ಹಸಂತಮಿವ ಫೇನೌಘೈಃ ನೃತ್ಯಂತಮಿವ ಚೋರ್ಮಿಭಿಃ ॥ (IV.4-114)
ಸಮುದ್ರನು ಚಂದನವನ್ನು ತೇಯುತ್ತಿದ್ದನು. ಚಂದ್ರನು ಅದನ್ನು ದಿಗಂಗನೆಯರಿಗೆ ಲೇಪಿಸುತ್ತಿದ್ದನು.

ಪಿನಷ್ಟೀವ ತರಂಗಾಗ್ರೈಃ ಸಮುದ್ರಃ ಫೇನಚಂದನಂ ।
ತದಾದಾಯ ಕರೈರಿಂದುರ್ಲಿಂಪತೀವ ದಿಗಂಗನಾಃ ॥ (VI. 4-115)
ಆಕಾಶಸಮುದ್ರಗಳಿಗೆ ಭೇದವೇ ಗೋಚರಿಸಲಿಲ್ಲ.
ಸಾಗರಂ ಚಾಂಬರಪ್ರಖ್ಯಮಂಬರಂ ಸಾಗರೋಪಮಂ ।
ಸಾಗರಂ ಚಾಂಬರಂ ಚೇತಿ ನಿರ್ವಿಶೇಷಮದೃಶ್ಯತ ॥ (VI. 4-120)
ಇದು ಹೇಮಂತಋತುವಿನಲ್ಲಿ ಚಂದ್ರನ ವರ್ಣನೆ :
ರವಿಸಂಕ್ರಾಂತಸೌಭಾಗ್ಯಸ್ತುಷಾರಾವೃತ್ತಮಂಡಲಃ ।
ನಿಶ್ವಾಸಾಂಧ ಇವಾದರ್ಶಶ್ಚಂದ್ರಮಾ ನ ಪ್ರಕಾಶತೇ ॥ (III. 16-13)
ಇಲ್ಲಿ 'ನಿಶ್ವಾಸಾಂಧ' ಎಂಬ ವಿಶೇಷಣವನ್ನು ಕಂಡು ಆನಂದವರ್ಧನನು ಮುಗ್ಧನಾಗಿದ್ದಾನೆ.

## ಭಾವಾಭಿವ್ಯಂಜನೆ

ವಾಲ್ಮೀಕಿಗಳು ಕುಟುಂಬಿಗಳಾಗಿ ಬಾಳಿದರೆಂಬುದಕ್ಕೆ ನಮಗೆ ಸರಿಯಾದ ಸಾಕ್ಷ್ಯವೇನೂ ಇಲ್ಲ. ಆದರೂ ತಂದೆತಾಯಿಗಳಿಗೆ, ಗಂಡಹೆಂಡಿರಿಗೆ, ಅಣ್ಣತಮ್ಮಂದಿರಿಗೆ, ಅತ್ತೆಸೊಸೆಯರಿಗೆ ಇರುವ ಸ್ನೇಹಸಂಬಂಧ ನಡವಳಿಕೆಗಳೆಲ್ಲವನ್ನೂ ಅವರು ಸ್ಪಷ್ಟ ರೇಖೆಗಳಿಂದ ಚಿತ್ರಿಸಿದ್ದಾರೆ. ಕುಟುಂಬದ ಅಂತಶ್ಛಿದ್ರಗಳು, ಕೋಪತಾಪಗಳು, ಎಲ್ಲವೂ ಅವರಿಗೆ ಗೊತ್ತಿದೆ. ಅರಮನೆಯ ವ್ಯವಹಾರ, ರಾಜಪ್ರಜಾಸಂಬಂಧ ಮತ್ತು ರಾಜನೀತಿಗಳನ್ನವರು ವರ್ಣಿಸಿದ್ದಾರೆ. ಮನುಷ್ಯರ ಆಸೆನಿರಾಸೆಗಳು, ಸುಖದುಃಖಗಳು, ರಾಗದ್ವೇಷಗಳು ಅವರಿಗೆ ಕರತಲಾಮಲಕ. ನಾನಾ ಸನ್ನಿವೇಶಗಳಲ್ಲಿ ವಿವಿಧ ಭಾವಗಳನ್ನು ವಾಲ್ಮೀಕಿಗಳು ಹೇಗೆ ಅಭಿವ್ಯಂಜಿಸಿದ್ದಾರೆಂಬುದಕ್ಕೆ ಕೆಲವೇ ನಿದರ್ಶನಗಳನ್ನು ಕೊಡಬಹುದು.

1. ರಾಮಲಕ್ಷ್ಮಣರ ಕೊಡಬಹುದು.
ನ ಚ ತೇನ ವಿನಾ ನಿದ್ರಾಂ ಲಭತೇ ಪುರುಷೋತ್ತಮಃ ।
ಮೃಷ್ಟಮನ್ನಮುಪಾನೀತಂ ಅಶ್ನಾತಿ ನ ಹಿ ತಂ ವಿನಾ ॥ (I. 18-30)

2. ದಶರಥನಿಗೆ ನಾಲ್ವರು ಮಕ್ಕಳಲ್ಲಿಯೂ ಅತಿಶಯವಾದ ವಾತ್ಸಲ್ಯ. ತಾನು ಚತುರ್ಭುಜನಾದೆನೆಂದು ಆತನಿಗೆ ಹೆಮ್ಮೆ.

ಸರ್ವ ಏವ ತು ತಸ್ಯೇಷ್ಟಾಶ್ಚತ್ವಾರಃ ಪುರುಷರ್ಷಭಾಃ ।
ಸ್ವಶರೀರಾದ್ವಿನಿಷ್ಕ್ರಾಂತಾಶ್ಚತ್ವಾರ ಇವ ಬಾಹವಃ ॥ (II—1-5)

3 ಶ್ರೀರಾಮನನ್ನು ಎಷ್ಟು ನೋಡಿದರೂ ದಶರಥನಿಗೆ ತೃಪ್ತಿಯಾಗದು.

ಚಂದ್ರಕಾಂತಾನನಂ ರಾಮಮತೀವ ಪ್ರಿಯದರ್ಶನಂ ।
ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಂ ॥
ಘರ್ಮಾಭಿತಪ್ತಾಃ ಪರ್ಜನ್ಯಂ ಹ್ಲಾದಯಂತಮಿವ ಪ್ರಜಾಃ ।
ನ ತತರ್ಪ ಸಮಾಯಾಂತಂ ಪಶ್ಯಮಾನೋ ನರಾಧಿಪಃ ॥ (II—3-29-30)

'ಪುಂಸಾಂ ದೃಷ್ಟಿಚಿತ್ತಾಪಹಾರಿಣಂ' ಎಂಬ ಒಂದೇ ಮಾತಿನಲ್ಲಿ ಶ್ರೀರಾಮನ ಸೌಂದರ್ಯ ಹೇಗೆ ಅಭಿವ್ಯಕ್ತವಾಗಿದೆ !

4. ಪ್ರಜೆಗಳಿಗೆ ಶ್ರೀರಾಮನಲ್ಲಿರುವ ಅನುರಾಗ ಹೀಗಿದೆ :

ಯಶ್ಚ ರಾಮಂ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ ।
ನಿಂದಿತಃ ಸ ಭವೇಲ್ಲೋಕೇ ಸ್ವಾತ್ಮಾಪ್ಯೇನಂ ವಿಗರ್ಹತೇ ॥ (II-17-14-15)

5. ವನದ ಭಯ ಸೀತೆಗೆ ಸ್ವಲ್ಪವೂ ಇಲ್ಲ. ಅವಳು ಶ್ರೀರಾಮನಿಗೂ ಮುಂದೆ ಹೋಗಬಲ್ಲಳು. ಆಗಲೂ ಸೇವೆ ಮಾಡಬಲ್ಲಳು.

ಅಗ್ರತಸ್ತೇ ಗಮಿಷ್ಯಾಮಿ ಮೃದ್ನಂತೀ ಕುಶಕಂಟಕಾನ್ । (II-27-6)

6. ಅಣ್ಣನನ್ನು ಹಿಂಬಾಲಿಸಿ ಕಾಡಿಗೆ ಹೊರಟ ಲಕ್ಷ್ಮಣನಿಗೆ ಅನುಮತಿಯನ್ನೀಯುವ ಸುಮಿತ್ರೆಯ ನುಡಿಯಲ್ಲಿ ಅವಳ ಔದಾರ್ಯ-ಸೌಜನ್ಯಗಳ ಪರಮಾವಧಿಯನ್ನು ಕಾಣಬಹುದು.

ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಂ ॥ (II-40-9)

7. ಶ್ರೀರಾಮನು ಸುಮಂತ್ರ-ಗುಹರನ್ನು ಬೀಳ್ಕೊಟ್ಟು ಗಂಗೆಯನ್ನು ದಾಟಿ ಅರಣ್ಯವನ್ನು ಪ್ರವೇಶಿಸಿದ್ದಾನೆ, ಸೀತಾಲಕ್ಷ್ಮಣರೊಡನೆ ಒಂದು ಮರದ ಕೆಳಗೆ ಕುಳಿತಿದ್ದಾನೆ. ರಾತ್ರಿಯಾಗಿದೆ. ಮನಸ್ಸು ಸುಕ್ಷುಬ್ಧವಾಗಿದೆ. ಬಗೆಹರಿಸಲಾಗದ ಚಿಂತೆ ಒಂದರ ಮೇಲೊಂದು ಬರುತ್ತಿದೆ. ಸಹಜವಾದ ಭಾವಶಬಲತೆಯು ಈ ತುಮುಲವನ್ನು ಶ್ರೀರಾಮನು ಲಕ್ಷ್ಮಣನಿಗೆ ಹೇಳುವ ಕೆಳಗಿನ ಶ್ಲೋಕಗಳಲ್ಲಿ ಕಾಣಬಹುದು :—

ಧ್ರುವಮದ್ಯ ಮಹಾರಾಜೋ ದುಃಖಂ ಸ್ವಪಿತಿ ಲಕ್ಷ್ಮಣ ।
ಕೃತಕಾಮಾ ತು ಕೈಕೇಯೀ ತುಷ್ಟಾ ಭವಿತುಮರ್ಹತಿ ॥



ದಶರಥನು ಕಾಮವಶನಾಗಿ ಆ ದುಃಖವನ್ನು ತಾನಾಗಿಯೇ ತಂದುಕೊಂಡಿದ್ದಾನೆ.

ಅರ್ಥಧರ್ಮೌ ಪರಿತ್ಯಜ್ಯ ಯಃ ಕಾಮಮನುವರ್ತತೇ ।
ಏವಮಾಪದ್ಯತೇ ಕ್ಷಿಪ್ರಂ ರಾಜಾ ದಶರಥೋ ಯಥಾ ॥

ಕೈಕೇಯಿ ಇನ್ನುಮೇಲೆ ಕೌಸಲ್ಯೆಗೆ ಮತ್ತು ಸುಮಿತ್ರೆಗೆ ಕಿರುಕುಳವನ್ನು ಹೆಚ್ಚಿಸಬಹುದು. ಆದುದರಿಂದ,

ಮಾ ಸ್ಮ ಮತ್ಕಾರಣಾದ್ದೇವೀ ಸುಮಿತ್ರಾ ದುಃಖಮಾವಸೇತ್ ।
ಅಯೋಧ್ಯಾಮಿತ ಏವ ತ್ವಂ ಕಾಲ್ಯೇ ಪ್ರವಿಶ ಲಕ್ಷ್ಮಣ ॥

ನನ್ನ ತಾಯಿ ಕೌಸಲ್ಯೆ ಇಷ್ಟು ವರ್ಷ ನನ್ನನ್ನು ಸಾಕಿ ಬೆಳೆಸಿದಳು. ಯಾವ ಸುಖದ ದಿನವನ್ನೂ ಅವಳು ಕಾಣಲಿಲ್ಲ. ಅವಳ ಅನಂತಶೋಕಕ್ಕೆ ನಾನೇ ನಿಮಿತ್ತವಾದೆನು.

.................................ಧಿಗಸ್ತು ಮಾಂ !
ಮಾ ಸ್ಮ ಸೀಮಂತಿನೀ ಕಾಚಿಜ್ಜನಯೇತ್ ಪುತ್ರಮೀದೃಶಂ ।
ಸೌಮಿತ್ರೇ ಯೋಽಹಮಂಬಾಯಾ ದದ್ಮಿ ಶೋಕಮನಂತಕಂ ॥

ತಾಯಿಯನ್ನು ಹೀಗೆ ದುಃಖದಲ್ಲಿ ಮುಳುಗಿಸುವುದಕ್ಕಿಂತ ಬಲಾತ್ಕಾರದಿಂದ ಅಯೋಧ್ಯೆಯನ್ನೇಕೆ ವಶಪಡಿಸಿಕೊಂಡು ರಾಜನಾಗಬಾರದು ?

ಏಕೋ ಹ್ಯಹಮಯೋಧ್ಯಾಂ ಚ ಪೃಥಿವೀಂ ಚಾಪಿ ಲಕ್ಷ್ಮಣ ।
ತರೇಯಮಿಷುಭಿಃ ಕ್ರುದ್ಧಃ.............................

ಆದರೆ ? ಇದು ಪರಾಕ್ರಮವನ್ನು ಮೆರೆಸುವ ಸಂದರ್ಭವಲ್ಲ.

................................ನನು ವೀರ್ಯಮಕಾರಣಂ ॥ (II. 53)

8. ಇದೊಂದು ಹೃದಯವನ್ನು ಕರಗಿಸುವ ಸನ್ನಿವೇಶ. ಭರತನು ಅಣ್ಣನನ್ನು ಹುಡುಕುತ್ತ ಚಿತ್ರಕೂಟಕ್ಕೆ ಬಂದಿದ್ದಾನೆ. ಶ್ರೀರಾಮನು ಜಟಾವಲ್ಕಲಧಾರಿಯಾಗಿ ಆಶ್ರಮದಲ್ಲಿ ಕುಳಿತಿರುವುದು ಕಾಣಿಸಿತು.

ತಂ ದೃಷ್ಟ್ವಾ ಭರತಃ ಶ್ರೀಮಾನ್ ದುಃಖಮೋಹಪರಿಪ್ಲುತಃ ।
ಅಭ್ಯಧಾವತ ಧರ್ಮಾತ್ಮಾ ಭರತಃ ಕೈಕಯೀಸುತಃ ॥
...................................
ಮನ್ನಿಮಿತ್ತಮಿದಂ ದುಃಖಂ ಪ್ರಾಪ್ತೋ ರಾಮಃ ಸುಖೋಚಿತಃ ।
ಧಿಗ್ ಜೀವಿತಂ ನೃಶಂಸಸ್ಯ ಮಮ ಲೋಕ ವಿಗರ್ಹಿತಂ ॥
ಇತ್ಯೇವಂ ವಿಲಪನ್ ದೀನಂ ಪ್ರಸ್ವಿನ್ನಮುಖಪಂಕಜಃ ।
ಪಾದಾವಪ್ರಾಪ್ಯ ರಾಮಸ್ಯ ಪಪಾತ ಭರತೋ ರುದನ್ ॥ (II-99)

9. ಧೀರೋದಾತ್ತನಾದ ರಾಮನು ಪತ್ನಿಗಾಗಿ ಇಷ್ಟು ಪರಿತಪಿಸುವನಲ್ಲ, ಇದೇನಿರಬಹುದು, ಎಂಬ ಶಂಕೆ ಆಂಜನೇಯನ ಹೃದಯಾಂತರಾಳದಲ್ಲಿ ಇದ್ದಿರಬೇಕು. ಅವನು ಅಶೋಕವನದಲ್ಲಿ ಸೀತೆಯನ್ನು ಕಂಡಾಗ ಶಂಕೆ ನಿರ್ಮೂಲವಾಯಿತು.

ಯದಿ ರಾಮಃ ಸಮುದ್ರಾಂತಾಂ ಮೇದಿನೀಂ ಪರಿವರ್ತಯೇತ್ ।
ಅಸ್ಯಾಃ ಕೃತೇ ಜಗಚ್ಚಾಪಿ ಯುಕ್ತಮಿತ್ಯೇವ ಮೇ ಮತಿಃ ॥
ತ್ರೈಲೋಕ್ಯರಾಜ್ಯಂ ಸಕಲಂ ಸೀತಾಯಾ ನಾಪ್ನುಯಾತ್ ಕಲಾಂ ॥
(V. 16-13, 14)

ಅಷ್ಟೇ ಅಲ್ಲ,

ದುಷ್ಕರಂ ಕುರುತೇ ರಾಮೋ ಹೀನೋ ಯದನಯಾ ಪ್ರಭುಃ ।
ಧಾರಯತ್ಯಾತ್ಮನೋ ದೇಹಂ ನ ದುಃಖೇನಾವಸೀದತಿ ॥ (V. 16-27)

ಎನ್ನಿಸಿತು ಆಂಜನೇಯನಿಗೆ. ಸೀತೆಯ ಸೌಂದರ್ಯಸೌಭಾಗ್ಯಗಳ ಅಭಿವ್ಯಕ್ತಿ ಎಷ್ಟು ಸೊಗಸಾಗಿ ಬಂದಿದೆ !

10. ಸೀತೆಯ ಧೀರತೆ, ಆತ್ಮಾಭಿಮಾನ, ಕುಲಾಭಿಮಾನ, ಪಾತಿವ್ರತ್ಯದ ತೇಜಸ್ಸು— ಕೆಳಗಿನ ನುಡಿಗಳಲ್ಲಿ ಹೇಗೆ ಪ್ರಕಟವಾಗಿವೆಯೆಂಬುದನ್ನು ಗಮನಿಸಬೇಕು. ರಾವಣನಿಗೆ ಅವಳು ಹೇಳುತ್ತಾಳೆ :—

ಇಮೇ ತೇ ನಯನೇ ಕ್ರೂರೇ ವಿರೂಪೇ ಕೃಷ್ಣಪಿಂಗಲೇ ।
ಕ್ಷಿತೌ ನ ಪತಿತೇ ಕಸ್ಮಾನ್ಮಾಮನಾರ್ಯ ನಿರೀಕ್ಷತಃ ॥
ತಸ್ಯ ಧರ್ಮಾತ್ಮನಃ ಪತ್ನೀಂ ಸ್ನುಷಾಂ ದಶರಥಸ್ಯ ಚ ।
ಕಥಂ ವ್ಯಾಹರತೋ ಮಾಂ ತೇ ನ ಜಿಹ್ವಾ ವ್ಯವಶೀರ್ಯತೇ ॥
ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ ।
ನ ತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾ ॥ (V. 22-18, 19, 20)

11. ಶ್ರೀರಾಮನು ಸಮುದ್ರತೀರಕ್ಕೆ ಬಂದಿದ್ದಾನೆ. ಸಮುದ್ರದ ಆಚೆಯ ದಡದಲ್ಲಿ ಸೀತೆಯು ಇದ್ದಾಳೆ ! ವಿರಹತಾಪ ಉಲ್ಬಣಿಸುತ್ತದೆ.

ವಾಹಿ ವಾತ ಯತಃ ಕಾಂತಾ ತಾಂ ಸ್ಪೃಷ್ಟ್ವಾ ಮಾಮಪಿ ಸ್ಪೃಶ ।
ತ್ವಯಿ ಮೇ ಗಾತ್ರಸಂಸ್ಪರ್ಶಃ ಚಂದ್ರೇ ದೃಷ್ಟಿಸಮಾಗಮಃ ॥
ಅವಗಾಹ್ಯಾರ್ಣವಂ ಸ್ವಪ್ಸ್ಯೇ ಸೌಮಿತ್ರೇ ಭವತಾ ವಿನಾ ।
ಕಥಂಚಿತ್ ಪ್ರಜ್ವಲನ್ ಕಾಮಃ ನ ಮಾಂ ಸುಪ್ತಂ ಜಲೇ ದಹೇತ್ ॥ (V. 5. 9)

ಎಂದು ವಿಲಪಿಸುತ್ತಾನೆ. ರಸಸ್ಯಂದಿಯಾದ ಈ ವಚೋಲಹರಿ ಪರಕವಿಯಿಂದ ಮಾತ್ರ ಹರಿಯಬಲ್ಲದು.

12. ಪ್ರಭುಸಮ್ಮಿತವಾದ ಹಿತೋಪದೇಶವು ಕಾಂತಾಸಮ್ಮಿತವಾಗಿ ಪರಿವರ್ತನೆಗೊಂಡು ಹೇಗೆ ಹೃದಯವನ್ನು ಮಿಡಿಯುವುದೆಂಬುದಕ್ಕೆ ಒಂದು ನಿದರ್ಶನ. ರಾವಣನು ಹತನಾಗಿ ಬಿದ್ದಾಗ ಗೋಳಾಡುತ್ತಿದ್ದ ಮಂಡೋದರಿ ನುಡಿಯುತ್ತಾಳೆ :

ಇಂದ್ರಿಯಾಣಿ ಪುರಾ ಜಿತ್ವಾ ಜಿತಂ ತ್ರಿಭುವನಂ ತ್ವಯಾ ।
ಸ್ಮರದ್ಭಿರಿವ ತದ್ವೈರಮಿಂದ್ರಿಯೈರೇವ ನಿರ್ಜಿತಃ ॥ (VI. 114-18)



ರಾಮಾಯಣದಲ್ಲಿ ಸುಂದರ ಸನ್ನಿವೇಶಗಳನ್ನೆತ್ತಿ ತೋರಿಸುವುದೆಂದರೆ ಸಂಪೂರ್ಣ ರಾಮಾಯಣವನ್ನೇ ಎದುರಿಗಿಡುವುದು ಲೇಸಾದೀತು. ಶ್ರೀರಾಮನ ಧರ್ಮನಿಷ್ಠೆ, ಸೀತೆಯ ಸೌಶೀಲ್ಯ, ಭರತನ ಭ್ರಾತೃವಾತ್ಸಲ್ಯ, ಲಕ್ಷ್ಮಣನ ಕರ್ತವ್ಯನಿಷ್ಠೆ, ಆಂಜನೇಯನ ಕಾರ್ಯದಕ್ಷತೆ, ಸುಗ್ರೀವನ ಸೌಹಾರ್ದಗಳನ್ನು ಪ್ರಕಟಿಸುವ ಮಧುರ ಸನ್ನಿವೇಶಗಳು ಹಲವಾರು. ಹಾಗೆಯೇ ಪ್ರತಿಪಕ್ಷದಲ್ಲಿ ರಾವಣ, ವಿಭೀಷಣ, ಇಂದ್ರಜಿತ್ತು, ಕುಂಭಕರ್ಣ, ಮಾರೀಚ—ಮೊದಲಾದ ಪಾತ್ರಗಳು ಅಚ್ಚಳಿಯದೆ ಮನದಲ್ಲಿ ಮುದ್ರಿತವಾಗುವಂತೆ ವಾಲ್ಮೀಕಿಗಳು ಚಿತ್ರಿಸಿದ್ದಾರೆ. ಯಾವ ಪಕ್ಷಪಾತವೂ ಇಲ್ಲದೆ ಪಾತ್ರಗಳ ನೈಜಸ್ವರೂಪವನ್ನು ವರ್ಣಿಸಿದ್ದಾರೆ. ರಾವಣನನ್ನು 'ಮಹಾತ್ಮಾ' ಎಂದು ವಿಶೇಷಿಸಿದ್ದಾರೆ. ಸಿಂಹಾಸನದಲ್ಲಿ ಕುಳಿತಿದ್ದ ರಾವಣನ ತೇಜಸ್ಸನ್ನು ಕಂಡು ಆಂಜನೇಯನು—

ಅಹೋ ರೂಪಮಹೋ ಧೈರ್ಯಮಹೋ ಸತ್ತ್ವಮಹೋ ದ್ಯುತಿಃ ।
ಅಹೋ ರಾಕ್ಷಸರಾಜಸ್ಯ ಸರ್ವಲಕ್ಷಣಯುಕ್ತತಾ ॥
ಯದ್ಯಧರ್ಮೋ ನ ಬಲವಾನ್ ಸ್ಯಾದಯಂ ರಾಕ್ಷಸೇಶ್ವರಃ ।
ಸ್ಯಾದಯಂ ಸುರಲೋಕಸ್ಯ ಸಶಕ್ರಸ್ಯಾಪಿ ರಕ್ಷಿತಾ ॥ (V. 49-17, 18)

ಎಂದುಕೊಳ್ಳುತ್ತಾನೆ. ವಿಭೀಷಣನಾಡುವ ಈ ಚರಮಗೀತೆ ರಾವಣನ ವಿಷಯದಲ್ಲಿ ಸತ್ಯವಾದುದು :

ಅನೇನ ದತ್ತಾನಿ ಸುಪೂಜಿತಾನಿ ಭುಕ್ತಾಶ್ಚ ಭೋಗಾ ನಿಭೃತಾಶ್ಚ ಭೃತ್ಯಾಃ ।
ಧನಾನಿ ಮಿತ್ರೇಷು ಸಮರ್ಪಿತಾನಿ ವೈರಾಣ್ಯಮಿತ್ರೇಷು ಚ ಯಾಪಿತಾನಿ ॥
ಏಷೋಽಹಿತಾಗ್ನಿಶ್ಚ ಮಹಾತಪಾಶ್ಚ ವೇದಾಂತಗಃ ಕರ್ಮಸು ಚಾಗ್ರ್ಯ ವೀರ್ಯಃ
(VI. 112-23, 24)

ಸಂಸ್ಕೃತಸಾಹಿತ್ಯನಿರ್ಮಾಣದಲ್ಲಿ ವಾಲ್ಮೀಕಿಮುನಿಗಳು ಶಕಪುರುಷರು. 'ಮಧುಮಯಭಣಿತೀನಾಂ ಮಾರ್ಗದರ್ಶೀ ಮಹರ್ಷಿಃ' ಎಂದು ಹೇಳಿರುವ ಭೋಜರಾಜನ ನುಡಿ ಯಥಾರ್ಥವಾದದ್ದು. 'ಕೌಸಲಾನಂದವರ್ಧನಃ', 'ಸತ್ಯಪರಾಕ್ರಮಃ', 'ಅಕ್ಲಿಷ್ಟಕಾರೀ', 'ರಣಪಂಡಿತಃ', 'ಭೀಮವಿಕ್ರಮಃ', 'ಧರ್ಮಾತ್ಮಾ' —ಮುಂತಾದ ಅರ್ಥಪೂರ್ಣವಾದ ಶಬ್ದಗಳು ಇದಂಪ್ರಥಮವಾಗಿ ಅಪೂರ್ವಕಾಂತಿಯಿಂದ ಬೆಳಗುತ್ತವೆ. ಇವು ವಾಲ್ಮೀಕಿಗಳ ಕೊಡುಗೆ. 'ಕೌಸಲ್ಯಾ ಸುಪ್ರಜಾ ರಾಮ, ಸ್ಮರಯೇ ತ್ವಾಂ ನ ಶಿಕ್ಷಯೇ, ವಾಚಾ ಧರ್ಮಮವಾಪ್ನುಹಿ' ಎಂಬೀ ಬಗೆಯ ವಾಕ್ಯವಿನ್ಯಾಸಗಳು ಅನ್ಯತ್ರ ದುರ್ಲಭ.

ಸಹಜವಾದ ಲೋಕದ ನಡತೆಯನ್ನೂ, ಮಾನವೀಯ ಸೂಕ್ಷ್ಮಸಂವೇದನೆಯನ್ನೂ ವಾಲ್ಮೀಕಿಗಳು ಬಲ್ಲರು. ಭರತನು ದಶರಥನ ಮರಣವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸಿದಾಗ ಬಳಿಯಲ್ಲಿದ್ದ ಸೀತಾಲಕ್ಷ್ಮಣರಿಗೆ ಅದು ಗೊತ್ತಾಗಿದೆ. ಆದರೂ ಶ್ರೀರಾಮನು ದುಃಖದ ಸುದ್ದಿಯನ್ನು ಅವರಿಗೆ ತಿಳಿಸುತ್ತ ಶೋಕಿಸುತ್ತಾನೆ :—

ಸೀತೇ ಮೃತಸ್ತೇ ಶ್ವಶುರಃ ಪಿತ್ರಾ ಹೀನೋಽಸಿ ಲಕ್ಷ್ಮಣ ।
ಭರತೋ ದುಃಖಮಾಚಷ್ಟೇ ಸ್ವರ್ಗತಂ ಪೃಥಿವೀಪತಿಂ ॥ (II. 102-15)

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಅತ್ರಿಮುನಿಗಳ ದರ್ಶನಕ್ಕೆ ಬಂದಿದ್ದಾನೆ. ಅತ್ರಿ ಮುನಿಗಳು ಅವನನ್ನು ಸ್ವಾಗತಿಸಿ ಸೀತೆಯನ್ನು ಶ್ಲಾಘಿಸುತ್ತಾರೆ. ಅನಂತರ ಆಶ್ರಮದ ಒಳಗೆ ವೃದ್ಧೆಯಾದ ಅನಸೂಯೆ ಇದ್ದಾಳೆಂದೂ, ಸೀತೆಯು ಅವಳನ್ನು ಕಾಣಲೆಂದೂ ತಿಳಿಸುತ್ತಾರೆ. ಸೀತೆ ಒಳಗೆ ಹೋಗಿ ಆ ತಪಸ್ವಿನಿಯನ್ನು ಕಾಣುತ್ತಾಳೆ. ಆ ವೃದ್ಧೆ ಸೀತೆಯನ್ನು ಹರಸಿ ಮಾತಾಡಲು ಪ್ರಾರಂಭಿಸುತ್ತಾಳೆ. ಸೀತೆಯ ಮದುವೆಯ ವೃತ್ತಾಂತವನ್ನು ಅವಳ ಬಾಯಿಂದಲೇ ಕೇಳಬೇಕೆಂದು ಆ ಮುದುಕಿಯ ಆಸೆ. ಸೀತೆ ಅದೆಲ್ಲವನ್ನೂ ಹೇಳುತ್ತಾಳೆ. ಅನಸೂಯೆಗೆ ಸಂತೋಷವಾಗಿ ತನ್ನಲ್ಲಿದ್ದ ದಿವ್ಯವಸ್ತ್ರಾಭರಣಗಳೆಲ್ಲವನ್ನೂ ಸೀತೆಗೆ ಕೊಟ್ಟು ಬಿಡುತ್ತಾಳೆ. ಅವೆಲ್ಲವನ್ನೂ ಸೀತೆಯು ಧರಿಸಿರುವುದನ್ನು ತಾನು ಕಣ್ತುಂಬ ನೋಡಬೇಕೆಂದು ಆ ವೃದ್ಧೆಯ ಚಾಪಲ್ಯ. ಅವಳು ಹೇಳುತ್ತಾಳೆ :—

ಅಲಂಕುರು ಚ ತಾವತ್ತ್ವಂ ಪ್ರತ್ಯಕ್ಷಂ ಮಮ ಮೈಥಿಲಿ ।
ಪ್ರೀತಿಂ ಜನಯ ಮೇ ವತ್ಸೇ ದಿವ್ಯಾಲಂಕಾರಶೋಭಿತಾ ॥ (II. 119-11)

ಹನುಮಂತನು ಅಶೋಕವನದಲ್ಲಿದ್ದ ಸೀತೆಯನ್ನು ಕಂಡು ಸಂತೈಸಿ ಬೀಳ್ಕೊಡುವ ಸಮಯ ಅವನು ಶ್ರೀರಾಮನ ಸುದ್ದಿಯನ್ನು ಹೇಳುತ್ತಿದ್ದಾಗ ಮನಸ್ಸಿಗೆ ಎಷ್ಟೋ ನೆಮ್ಮದಿಯೆನಿಸಿತ್ತು. ಅವನು ಹೊರಟು ಹೋದೊಡನೆ ತಾನು ಒಂಟಿಯಾಗಿ ದುಃಖವು ಉಮ್ಮಳಿಸುತ್ತದೆ. ಇನ್ನೊಂದು ದಿನ ಅಲ್ಲಿಯೇ ಇರಬೇಕೆಂದು ಅವಳು ಆತನಿಗೆ ಹೇಳುತ್ತಾಳೆ.

ಯದಿ ವಾ ಮನ್ಯಸೇ ವೀರ ವಸೈಕಾಹಮರಿಂದಮ ।
ಕಸ್ಮಿಂಶ್ಚಿತ್ ಸಂವೃತೇ ದೇಶೇ ವಿಶ್ರಾಂತಃ ಶ್ವೋ ಗಮಿಷ್ಯಸಿ ॥
ಮಮ ಚೈವಾಲ್ಪಭಾಗ್ಯಾಯಾಃ ಸಾನ್ನಿಧ್ಯಾತ್ತವ ವಾನರ ।
ಅಸ್ಯ ಶೋಕಸ್ಯ ಮಹತೋ ಮುಹೂರ್ತಂ ಮೋಕ್ಷಣಂ ಭವೇತ್ ॥ (V. 39.21,-22

## ರಾಮಾಯಣಕಾಲದ ರಾಜನೀತಿ

ವಂಶಪರಂಪರೆಯಿಂದ ಬಂದ ರಾಜನು ರಾಷ್ಟ್ರದ ಅಧಿಪತಿಯಾಗಿರುತ್ತಿದ್ದನು. ಹಿರಿಯ ಮಗನಿಗೆ ಪಟ್ಟಾಭಿಷೇಕ ಮಾಡುವ ಪದ್ಧತಿ ರೂಢಿಯಲ್ಲಿತ್ತು. ದಶರಥನು ಶ್ರೀರಾಮನಿಗೆ ರಾಜ್ಯಾಧಿಕಾರವನ್ನು ವಹಿಸಿಕೊಡಬೇಕೆಂದು ಬಯಸಿದಾಗ ಪ್ರಜೆಗಳನ್ನು ಕರೆಸಿ ಅವರ ಅಭಿಪ್ರಾಯವನ್ನು ಕೇಳಿದ್ದಾನೆ. ಪ್ರಜಾಭಿಪ್ರಾಯವನ್ನು ಕೇಳಿ ಅದರಂತೆ ರಾಜ್ಯವಾಳುವ ಒಂದು ಬಗೆಯ ಪ್ರಜಾಪ್ರಭುತ್ವಪದ್ಧತಿ ಇತ್ತೆಂದು ಹೇಳಬಹುದು. ಪರಮಾಧಿಕಾರವು ರಾಜನದೇ ಆದರೂ ಅವನು ಧರ್ಮವನ್ನು ಮೀರಿ ನಡೆಯುತ್ತಿರಲಿಲ್ಲ. ಪ್ರಜಾರಂಜನೆಯೇ ರಾಜನ ಪರಮ ಧ್ಯೇಯವಾಗಿತ್ತು. ಅವನು ಸಕಲರಿಗೂ ಮಾರ್ಗದರ್ಶಿಯಾಗಿ ಆದರ್ಶಪ್ರಾಯನಾಗಿರುವುದು



ಅವಶ್ಯಕವಾಗಿತ್ತು. ವೈಯಕ್ತಿಕವಾದ ವ್ಯವಹಾರ, ರಾಜಕೀಯವಾದ ವ್ಯವಹಾರ ಎಂದು ಎರಡು ಬಗೆಯ ವ್ಯವಹಾರಗಳಿರಲಿಲ್ಲ. ವೈಯಕ್ತಿಕಜೀವನವು ರಾಜಕೀಯದ ಮೇಲೆ ಪ್ರಬಲವಾದ ಪರಿಣಾಮವನ್ನು ಬೀರುವುದೆಂದೂ, ಆದ್ದರಿಂದ ರಾಜನ ಕೌಟುಂಬಿಕ ಜೀವನವೂ ಸಹ ಅತ್ಯಂತ ಪರಿಶುದ್ಧವಾಗಿರಬೇಕೆಂದೂ ನಂಬಿಕೆ ಇತ್ತು. ಪ್ರಜೆಗಳನ್ನು ಧರ್ಮಮಾರ್ಗದಲ್ಲಿ ನಡೆಸಿ ಪ್ರಜಾರಂಜನೆ ಮಾಡುವುದೇ ರಾಜನ ಪರಮಧ್ಯೇಯವಾದುದರಿಂದ, ಕೌಟುಂಬಿಕಜೀವನದಲ್ಲಿ ಸಂಭವಿಸುವ ಎಂತಹ ಕಷ್ಟಕ್ಕೂ, ತ್ಯಾಗಕ್ಕೂ ರಾಜನು ಸಿದ್ಧನಾಗಿರುತ್ತಿದ್ದನು.

ದಶರಥನಿಗೆ ಎಂಟು ಜನ ಮಂತ್ರಿಗಳು ಇದ್ದರೆಂದು ಹೇಳಿದೆ. ರಾಜಧಾನಿಗೆ ಕೋಟೆಕಂದಕಗಳ ರಕ್ಷಣೆ ಇತ್ತು. ಲಂಕೆಯ ರಕ್ಷಣಾವ್ಯವಸ್ಥೆಯಲ್ಲಿ ಅನೇಕ ಬಗೆಯ ಯಂತ್ರಗಳಿದ್ದವೆಂದು ಆಂಜನೇಯನು ಹೇಳಿದ್ದಾನೆ. ಯುದ್ಧಕ್ಕೆ ಮೊದಲು ರಾಜದೂತನ ಮೂಲಕ ರಾಯಭಾರ ನಡೆಯುತ್ತಿತ್ತು. ಯುದ್ಧದಲ್ಲಿ ವಿವಿಧಾಕೃತಿಯ ಶಸ್ತ್ರಾಸ್ತ್ರಗಳನ್ನೂ, ಮಂತ್ರಾಸ್ತ್ರಗಳನ್ನೂ ಬಳಸುತ್ತಿದ್ದರು. ಧನುರ್ವಿದ್ಯೆಗೆ ಅಗ್ರಸ್ಥಾನವಿತ್ತು. ಶ್ರೀರಾಮನು ಕಿಷ್ಕಿಂಧೆಯನ್ನು, ಸುಗ್ರೀವನಿಗೂ ಲಂಕೆಯನ್ನು, ವಿಭೀಷಣನಿಗೂ ವಹಿಸಿಕೊಟ್ಟಿದ್ದಾನೆ—ಪರಕೀಯ ರಾಜ್ಯವನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಳ್ಳುವ ಪದ್ಧತಿ ಇರಲಿಲ್ಲ.

## ಸಂಸ್ಕೃತಿ

ರಾಮಾಯಣಕಾಲದಲ್ಲಿ ಚಾತುರ್ವರ್ಣ್ಯ ಪದ್ಧತಿ ಇತ್ತು, ಜನರು ಧರ್ಮಭೀರುಗಳಾಗಿದ್ದರು ದ್ವಿಜರಿಗೆ ವೇದಾಧ್ಯಯನವು ನಿಯತವಾಗಿದ್ದಿತು. ಚಿಕ್ಕವಯಸ್ಸಿನ ರಾಮಲಕ್ಷ್ಮಣರಿಗೆ ಅರಣ್ಯದಲ್ಲಿಯೂ ವಿಶ್ವಾಮಿತ್ರರು 'ಕರ್ತವ್ಯಂ ದೈವಮಾಹ್ನಿಕಂ' ಎಂದು ಬೆಳಗಿನ ಜಾವದಲ್ಲಿ ಎಚ್ಚರಿಸಿದ್ದಾರೆ.

ಯದಿ ವಾಚಂ ಪ್ರದಾಸ್ಯಾಮಿ ದ್ವಿಜಾತಿರಿವ ಸಂಸ್ಕೃತಾಂ ।
ರಾವಣಂ ಮನ್ಯಮಾನಾ ಸಾ ಸೀತಾ ಭೀತಾ ಭವಿಷ್ಯತಿ ॥

ಎಂಬುದಾಗಿ ಹನುಮಂತನು ಚಿಂತಿಸುವುದನ್ನು ಪರಿಶೀಲಿಸಿದರೆ ದ್ವಿಜರೆಲ್ಲರೂ ಸಂಸ್ಕೃತದಲ್ಲಿ ಮಾತಾಡುತ್ತಿದ್ದರೆಂದು ಹೇಳಬಹುದಾಗಿದೆ. ಸಂಸ್ಕೃತಭಾಷೆ ಜನಸಾಮಾನ್ಯರಿಗೂ ಅರ್ಥವಾಗುತ್ತಿತ್ತು. ಮೇಲಿನ ಶ್ಲೋಕದಿಂದಲೇ ರಾವಣನು ಆಡುತ್ತಿದ್ದ ಭಾಷೆ ಸಂಸ್ಕೃತವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಹನುಮಂತನು ಲಂಕೆಯಲ್ಲಿ ಸಂಚರಿಸುವಾಗ ರಾಕ್ಷಸರು ವೇದಮಂತ್ರಗಳನ್ನು ಜಪಿಸುತ್ತಿದ್ದರಂತೆ.

ಶುಶ್ರಾವ ಜಪತಾಂ ತತ್ರ ಮಂತ್ರಾನ್ ರಕ್ಷೋಗೃಹೇಷು ವೈ ॥
ಸ್ವಾಧ್ಯಾಯನಿರತಾಂಶ್ಚೈವ ಯಾತುಧಾನಾನ್ ದದರ್ಶ ಸಃ ॥ (V. 4—13)

ಯಜ್ಞಯಾಗಗಳು ನಡೆಯುತ್ತಿದ್ದವು. ತಪಸ್ವಿಗಳಿಗೆ ತುಂಬ ಗೌರವ ಸಲ್ಲುತ್ತಿತ್ತು. ಮಂಗಳ ಕಾರ್ಯಗಳಿಗೆ ಶುಭಮುಹೂರ್ತವನ್ನು ನೋಡುವುದೂ, ಶಕುನಗಳನ್ನು ನಂಬುವುದೂ ಆ ಕಾಲದಲ್ಲಿತ್ತು.

ಕುಟುಂಬದ ಯಜಮಾನ ತಂದೆ. ತಂದೆಯ ಮಾತನ್ನು ನಡೆಸುವುದು ಮಗನ ಧರ್ಮ. ಕುಲಧರ್ಮದ ಪಾಲನೆ ಆವಶ್ಯವಾದ ಕರ್ತವ್ಯ. ಅಣ್ಣನಿಗೆ ವಿಧೇಯರಾಗಿ ನಡೆಯುವುದು ಸೋದರರ ಧರ್ಮ.

ಬಹುಪತ್ನೀತ್ವವು ಆಗ ಬಳಕೆಯಲ್ಲಿತ್ತು. ಸ್ತ್ರೀಗೆ ಪಾತಿವ್ರತ್ಯವೇ ಶ್ರೇಷ್ಠವಾದ ಧರ್ಮ. ಸಹಗಮನ ಪದ್ಧತಿ ಇದ್ದಂತೆ ಕಾಣುವುದಿಲ್ಲ.

## ಮನನೀಯ ಶ್ಲೋಕಗಳು

1. ಕಾಮೀ ವಾ ನ ಕದರ್ಯೋ ವಾ ನೃಶಂಸಃ ಪುರುಷಃ ಕ್ವಚಿತ್ ।
ದ್ರಷ್ಟುಂ ಶಕ್ಯಮಯೋಧ್ಯಾಯಾಂ ನಾವಿದ್ವಾನ್ನ ಚ ನಾಸ್ತಿಕಃ ॥ (I 6–8)

2. ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ ।
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥ (I 56–23)

3. ಬುದ್ಧಿಮಾನ್ ಮಧುರಾಭಾಷೀ ಪೂರ್ವಭಾಷೀ ಪ್ರಿಯಂವದಃ ।
ವೀರ್ಯವಾನ್ ನ ಚ ವೀರ್ಯೇಣ ಮಹತಾ ಸ್ವೇನ ವಿಸ್ಮಿತಃ ॥ (II 1–13)

4. ಸತ್ಯಂ ದಾನಂ ತಪಸ್ತ್ಯಾಗೋ ಮಿತ್ರತಾ ಶೌಚಮಾರ್ಜವಂ ।
ವಿದ್ಯಾ ಚ ಗುರುಶುಶ್ರೂಷಾ ಧ್ರುವಾಣ್ಯೇತಾನಿ ರಾಘವೇ ॥ (II 12–30)

5. ನ ವನಂ ಗಂತುಕಾಮಸ್ಯ ತ್ಯಜತಶ್ಚ ವಸುಂಧರಾಂ ।
ಸರ್ವಲೋಕಾತಿಗಸ್ಯೇವ ಲಕ್ಷ್ಯತೇ ಚಿತ್ತವಿಕ್ರಿಯಾ ॥ (II 19–33)

6. ನ ಪಿತಾ ನಾತ್ಮಜೋ ನಾತ್ಮಾ ನ ಮಾತಾ ನ ಸಖೀಜನಃ ।
ಇಹ ಪ್ರೇತ್ಯ ಚ ನಾರೀಣಾಂ ಪತಿರೇಕೋ ಗತಿಃ ಸದಾ ॥ (II 27–5)

7. ಸ್ವಾಧೀನಂ ಸಮತಿಕ್ರಮ್ಯ ಮಾತರಂ ಪಿತರಂ ಗುರುಂ ।
ಅಸ್ವಾಧೀನಂ ಕಥಂ ದೈವಂ ಪ್ರಕಾರೈರಭಿರಾಧ್ಯತೇ ॥ (II 30–33)

8. ನಾತಂತ್ರೀ ವಾದ್ಯತೇ ವೀಣಾ ನಾಚಕ್ರೋ ವರ್ತತೇ ರಥಃ !
ನಾಪತಿಃ ಸುಖಮೇಧೇತ ಯಾ ಸ್ಯಾದಪಿ ಶತಾತ್ಮಜಾ ॥ (II 39–29)

9. ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾಃ ಮರಣಾಂತಂ ಚ ಜೀವಿತಂ ॥ (II 105–12)

10. ಸತ್ಯಮೇವೇಶ್ವರೋ ಲೋಕೇ ಸತ್ಯೇ ಪದ್ಮಾ ಪ್ರತಿಷ್ಠಿತಾ ।
ಸತ್ಯಮೂಲಾನಿ ಸರ್ವಾಣಿ ಸತ್ಯಾನ್ನಾಸ್ತಿ ಪರಂ ಪದಂ ॥ (II 109–13)



11. ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ ।
ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥ (III. 37–2)

12. ನ ಹಿ ಧರ್ಮಾರ್ಥಸಿದ್ಧ್ಯರ್ಥಂ ಪಾನಮೇವಂ ಪ್ರಶಸ್ಯತೇ ।
ಪಾನಾದರ್ಥಶ್ಚ ಧರ್ಮಶ್ಚ ಕಾಮಶ್ಚ ಪರಿಹೀಯತೇ ॥ (IV.33–46)

13. ಅನಿರ್ವೇದಃ ಶ್ರಿಯೋ ಮೂಲಮನಿರ್ವೇದಃ ಪರಂ ಸುಖಂ ।
ಅನಿರ್ವೇದೋ ಹಿ ಸತತಂ ಸರ್ವಾರ್ಥೇಷು ಪ್ರವರ್ತಕಃ ॥ (V. 12–10)

14. ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।
ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ (V. 34–6)

15. ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥ (V.18–33.)

16. ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ।
ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ॥ (V. 112–26)

17. ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ ।
ರಾಮಭೂತಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥ (V. 131–102)

18. ಏವಂ ಬಲಿಭ್ಯೋ ಬಲಿನಃ ಸಂತಿ ರಾಘವನಂದನ ।
ನಾವಜ್ಞಾ ಹಿ ಪರೇ ಕಾರ್ಯಾಯಂ ಇಚ್ಛೇತ್ ಪ್ರಿಯಮಾತ್ಮನಃ ॥ (VI. 34–22)

## ಕವಿಪ್ರಶಂಸೆ

1. ನುಮಃ ಸರ್ವೋಪಜೀವ್ಯಂ ತಂ ಕವೀನಾಂ ಚಕ್ರವರ್ತಿನಂ ।
ಯಸ್ಯೇಂದುಧವಲೈಃ ॥ ಶ್ಲೋಕೈಃ ಭೂಷಿತಾ ಭುವನತ್ರಯೀ ॥—ಕ್ಷೇಮೇಂದ್ರ

2. ಕವೀಂದುಂ ನೌಮಿ ವಾಲ್ಮೀಕಿಂ ಯಸ್ಯ ರಾಮಾಯಣೀಂ ಕಥಾಂ ।
ಚಂದ್ರಿಕಾಮಿವ ಚಿನ್ವಂತಿ ಚಕೋರಾ ಇವ ಸಾಧವಃ ॥ —ಶಾರ್ಙ್ಗಧರ

3. ತಮೃಷಿಂ ಮನುಷ್ಯಲೋಕಪ್ರವೇಶವಿಶ್ರಾಮಶಾಖಿನಂ ವಾಚಾಂ ।
ಸುರಲೋಕಾದವತಾರಪ್ರಾಂತರಖೇದಚ್ಛಿದಂ ವಂದೇ ॥ —ಮುರಾರಿ

4. ಸೀತಾರಾಮಗುಣಗ್ರಾಮಪುಣ್ಯಾರಣ್ಯವಿಹಾರಿಣೌ ।
ವಂದೇ ವಿಶುದ್ಧ ವಿಜ್ಞಾನೌ ಕವೀಶ್ವರಕಪೀಶ್ವರೌ ॥ —ತುಲಸೀದಾಸ.

# ವ್ಯಾಸ ಮಹಾಭಾರತ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಓಂ ನಮೋ ಭಗವತೇ ವಾಸುದೇವಾಯ ॥

ವ್ಯಾಸಮುನಿಗಳ ಮಹಾಭಾರತವು ರಾಮಾಯಣದಂತೆ ಭಾರತೀಯರಿಗೆ ಅತ್ಯಂತ ಪ್ರಿಯವೂ, ಪೂಜ್ಯವೂ ಆದ ಗ್ರಂಥ. 'ಭಾರತಃ ಪಂಚಮೋ ವೇದಃ' ಎಂದು ಹಿಂದೂ ಜನರು ನಂಬಿದ್ದಾರೆ. ಇದು 'ಶತಸಾಹಸ್ರೀ ಸಂಹಿತಾ' ಎಂದು ವಿಶ್ವಾಸ ಉಂಟು. ಇಷ್ಟು ವಿಸ್ತೃತವಾದ ಇನ್ನೊಂದು ಗ್ರಂಥ ಜಗತ್ತಿನ ಇತಿಹಾಸದಲ್ಲಿ ದೊರಕಿಲ್ಲ. ಇದರಲ್ಲಿರುವುದು ಸುಪ್ರಸಿದ್ಧವಾದ ಕುರುಪಾಂಡವರ ಕಥೆ. ಈ ಕಥೆಯೊಡನೆ ವಿವಿಧ ಉಪಾಖ್ಯಾನಗಳೂ, ಧರ್ಮೋಪನ್ಯಾಸಗಳೂ, ತತ್ತ್ವವಿಚಾರಗಳೂ, ನೀತಿಬೋಧೆಗಳೂ ಹಾಸುಹೊಕ್ಕಾಗಿ ಸೇರಿಕೊಂಡು ಗ್ರಂಥವಿಸ್ತರಕ್ಕೆ ಕಾರಣವಾಗಿವೆ. ಕಾವ್ಯದೃಷ್ಟಿಯಿಂದ ರಸವತ್ತಾದ ಸನ್ನಿವೇಶಗಳೂ ಅಮಿತಸಂಖ್ಯೆಯಲ್ಲಿವೆ. ಮಹಾಭಾರತವು ಕಾವ್ಯಶಾಸ್ತ್ರಗಳ ಸಮುದಾಯ.

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ॥

ಎಂಬುದು ಅತಿಶಯೋಕ್ತಿ ಏನಲ್ಲ. ವಿಶ್ವಸಂಸ್ತುತವಾದ ಭಗವದ್ಗೀತೆ ಇರುವುದು ಮಹಾಭಾರತದ ಭೀಷ್ಮಪರ್ವದಲ್ಲಿ. ಇದು ಇತಿಹಾಸವೂ ಹೌದು.

ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಂ ।
ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ ॥ (ಆದಿ. 1–54)

ರಾಮಾಯಣದಲ್ಲಿರುವಂತೆ ಇಲ್ಲಿಯೂ ಬ್ರಹ್ಮನು ಬಂದು ವ್ಯಾಸರನ್ನು ಪ್ರೋತ್ಸಾಹಿಸುತ್ತಾನೆ. ವ್ಯಾಸರು ತಮಗೆ ತಕ್ಕ ಲೇಖಕನು ದೊರಕಲಿಲ್ಲವೆಂದು ಹೇಳಿದರು. ಬ್ರಹ್ಮನು 'ಕಾವ್ಯಸ್ಯ ಲೇಖನಾರ್ಥಾಯ ಗಣೇಶಃ ಸ್ಮರ್ಯತಾಂ ಮುನೇ' ಎಂದು ತಿಳಿಸಿದನು. ಅನಂತರ ವ್ಯಾಸರ ಪ್ರಾರ್ಥನೆಯಂತೆ ಗಣೇಶನು ಪ್ರತ್ಯಕ್ಷನಾಗಿ ತಾನು ಲೇಖಕನಾಗಲು ಒಂದು ನಿಯಮವನ್ನು ಮುಂದಿಟ್ಟನು. "ನಾನು ಬರೆಯುವಾಗ ಲೇಖನಿಗೆ ಸ್ವಲ್ಪ ವಿರಾಮವನ್ನೂ ಕೊಡಬಾರದು. ಅವಿಚ್ಛಿನ್ನವಾಗಿ ಹೇಳುತ್ತ ಹೋಗಬೇಕು!" ಎಂದು. ವ್ಯಾಸರು "ಆಗಬಹುದು, ಆದರೆ ನನ್ನ ಮಾತನ್ನು ಅರ್ಥಮಾಡಿಕೊಳ್ಳದೆ ಬರೆಯಬಾರದು!" ಎಂದು ತಮ್ಮ ನಿಯಮವನ್ನು ಮುಂದಿಟ್ಟರು. ಗಣಪತಿ ಒಪ್ಪಿದ.

ವ್ಯಾಸರು ನಡುನಡುವೆ ಗ್ರಂಥಗ್ರಂಥಿಗಳನ್ನಿಟ್ಟು ಕೂಟಶ್ಲೋಕವನ್ನು ರಚಿಸಿ ಹೇಳುತ್ತಿದ್ದರು. ಅವರ ಅರ್ಥವೇನೆಂದು ಗಣೇಶನು ಆಲೋಚಿಸುತ್ತಿರುವಾಗ, ವ್ಯಾಸರು ಮುಂದಿನ ಎಷ್ಟೋ



ಶ್ಲೋಕಗಳನ್ನು ಗಣಿಸಿ ಸಿದ್ಧಪಡಿಸಿಕೊಳ್ಳುತ್ತಿದ್ದರು. ಹೀಗೆ ಮಹಾಭಾರತದ ಲೇಖನಕಾರ್ಯ ಮುಗಿಯಿತು. ಭಾರತದಲ್ಲಿ 8,800 ಕೂಟಶ್ಲೋಕಗಳಿವೆಯಂತೆ.

ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।
ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿ ವಾ ನ ವಾ ॥ (ಆದಿ. 1–87)

ಮಾದರಿಗಾಗಿ ಒಂದು ಶ್ಲೋಕವನ್ನಿಲ್ಲಿ ಬರೆದಿದೆ :

ನದೀಜ ಲಂಕೇಶವನಾರಿಕೇತು–
ರ್ನಗಾಹ್ವಯೋ ನಾಮ ನಗಾರಿಸೂನುಃ ।
ಏಷೋಂಗನಾವೇಷಧರಃ ಕಿರೀಟೀ
ಜಿತ್ವಾಽವ ಯಂ ನೇಷ್ಯತಿ ಚಾದ್ಯ ಗಾವಃ ॥ (ವಿರಾಟ. 39–10)

ನದೀಜ = ಎಲೈ ಭೀಷ್ಮನೆ, ಲಂಕೇಶವನಾರಿಕೇತುಃ = ಲಂಕೇಶನ ವನಕ್ಕೆ ವೈರಿಯಾದ ಹನುಮಂತನೇ ಧ್ವಜವಾಗಿ ಉಳ್ಳ, ನಗಾರಿಸೂನುಃ = ಇಂದ್ರತನಯನಾದ, ನಗಾಹ್ವಯೋ ನಾಮ = ಒಂದು ಮರದ (ಅರ್ಜುನ = ಮತ್ತಿಮರ) ಹೆಸರುಳ್ಳ, ಅಂಗನಾವೇಷಧರಃ = ಹೆಂಗಸಿನ ವೇಷವನ್ನು ಧರಿಸಿರುವ, ಏಷಃ ಕಿರೀಟೀ = ಈ ಅರ್ಜುನನು. ಯಂ = ಯಾವ ದುರ್ಯೋಧನನನ್ನು, ಜಿತ್ವಾ = ಗೆದ್ದು, ವಃ = ನಿಮ್ಮ ಗಾಃ = ಹಸುಗಳನ್ನು, ನೇಷ್ಯತಿ = ಒಯ್ಯುವನೋ, ಆ ದುರ್ಯೋಧನನನ್ನು, ಅದ್ಯ = ಈಗ, ಅವ = ಕಾಪಾಡು.

ಇಲ್ಲಿ ನದೀಜಲ, ಕೇಶವ—ಇತ್ಯಾದಿ ಶಬ್ದಭ್ರಮೆಯುಂಟಾಗುವುದರಿಂದ ಅರ್ಥವು ಕ್ಲಿಷ್ಟವಾಗಿದೆ.

---

*ಮೇಲ್ಕಂಡ ಕಥೆಯನ್ನನುಸರಿಸಿ ರಾಜಶೇಖರನು ತನ್ನ 'ಪ್ರಚಂಡಪಾಂಡವ'ದಲ್ಲಿ ಒಂದು ಪ್ರಸ್ತಾವವನ್ನು ತಂದಿದ್ದಾನೆ, ವಾಲ್ಮೀಕಿಗಳು ವ್ಯಾಸರನ್ನು ಕುರಿತು "ಕಿಂತು ಶ್ರುತಮಸ್ಮಾಭಿಃ ಯದುತ ಅತಿವಿರಸೇ ಕಾವ್ಯಕಷ್ಟೇ ಅಭಿನಿವಿಷ್ಟೋಽಸಿ" ಎನ್ನುತ್ತಾರೆ, ವ್ಯಾಸರು ಇದಮುಪಾಧ್ಯಾಯಪಾದೇಭ್ಯೋ ವಿಜ್ಞಾಪ್ಯತೇ—

ವಿನಾಯಕೋ ಯಃ ಶಿವಯೋರಪತ್ಯಂ ಅರ್ಥಂ ಪುಮಾನರ್ಥಮಿಭಶ್ಚ ದೇವಃ ।
ಸ ವರ್ತತೇ ಭಾರತಸಂಹಿತಾಯಾಂ ವೃತಸ್ತಪೋಭಿರ್ಮಮ ಲೇಖಕೋಽತ್ರ ॥

ಎನ್ನುತ್ತಾರೆ.

ಭಾರತದಲ್ಲಿ ಈ ಕೂಟಶ್ಲೋಕಗಳು ಪ್ರಕ್ಷಿಪ್ತಗಳೆಂದು ಭೋಜರಾಜನು ಅಭಿಪ್ರಾಯಪಡುತ್ತಾನೆ:—

'ಗಲಿತಕಾನಿ ತು ವ್ಯಾಸಕಷ್ಟವತ್ ಕೈರಪಿ ವಿದಗ್ಧಮಾನಿಭಿಃ ಉಪಕ್ಷಿಪ್ತಾನೀತಿ ತದ್ವಿದೋ ಭಾಷಂತೇ'—ಶೃಂಗಾರಪ್ರಕಾಶ

ಗಲಿತಕಾನಿ = ಯಮಕಭೇದವಿರುವ ಅಥವಾ ಸರ್ಗಾಂತದಲ್ಲಿ ಬರುವ ಭಿನ್ನವೃತ್ತದ ಶ್ಲೋಕಗಳು.

ವ್ಯಾಸರು ಭಾರತವನ್ನು ತಮ್ಮ ಮಗನಾದ ಶುಕನಿಗೂ ಶಿಷ್ಯರಾದ ಸುಮಂತು, ಜೈಮಿನಿ, ಪೈಲ ಮತ್ತು ವೈಶಂಪಾಯನರಿಗೆ ಉಪದೇಶಿಸಿದರು. ವೈಶಂಪಾಯನನು ಜನಮೇಜಯನಿಗೆ ಭಾರತ ಕಥೆಯನ್ನು ಹೇಳಿದನು. ಲೋಮಹರ್ಷಣ ಮೊದಲಾದವರು ಅದನ್ನು ಕಲಿತರು. ಲೋಮಹರ್ಷಣನ ಮಗನಾದ ಉಗ್ರಶ್ರವನೆಂಬ ಸೌತಿಯು ಅದನ್ನು ಶೌನಕಾದಿಗಳಿಗೆ ಹೇಳಿದನು. ಹೀಗೆ ಈಗ ಉಪಲಬ್ಧವಾಗಿರುವ ಮಹಾಭಾರತ ವೈಶಂಪಾಯನ ಪ್ರೋಕ್ತವಾದದ್ದು. ಸುಮಂತು ಮೊದಲಾದವರೂ ಮಹಾಭಾರತವನ್ನು ರಚಿಸಿದರೆಂದು ಕಥೆಯಿದೆ, ಜೈಮಿನಿಯ ಅಶ್ವಮೇಧಪರ್ವವು ದೊರೆಯುತ್ತದೆ. ಉಳಿದವು ಉಪಲಬ್ಧವಿಲ್ಲ.

## ಗ್ರಂಥಪರಿಮಾಣ

ಹರಿವಂಶವೂ ಸೇರಿ ಮಹಾಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿವೆ. ಇದಕ್ಕೆ ಶತಸಾಹಸ್ರೀ ಸಂಹಿತಾ ಎಂದು ವ್ಯವಹಾರ. ಅನುಷ್ಟುಪ್ ಶ್ಲೋಕಗಳಲ್ಲದೆ ಕೆಲವೆಡೆ ಗದ್ಯ ಮತ್ತು ಬೃಹತ್ತರ ಛಂದಸ್ಸುಗಳಿವೆ. 32 ಅಕ್ಷರಗಳಿಗೆ ಒಂದು ಶ್ಲೋಕವೆಂದು ಸಾಂಪ್ರದಾಯಿಕವಾದ ಎಣಿಕೆ. ಈ ಎಣಿಕೆಯಲ್ಲಿ 'ಜನಮೇಜಯ ಉವಾಚ' ಮುಂತಾದ ಉಪಷ್ಟಂಭಕ ವಾಕ್ಯಗಳೂ ಸೇರುತ್ತವೆಯೋ ಎಂಬ ಒಂದು ಪ್ರಶ್ನೆಯುಂಟು. ಈ 'ಉವಾಚ'ಗಳೇ ಸುಮಾರು 7.033 ಇವೆ. ಕೇವಲ ಕುರುಪಾಂಡವರ ಕಥೆ ಇರುವ 'ಆದ್ಯ ಭಾರತ'ದಲ್ಲಿ 24,000 ಶ್ಲೋಕಗಳಿವೆಯೆಂದೂ, ಉಪಾಖ್ಯಾನಗಳೂ ಸೇರಿ ಒಂದು ಲಕ್ಷ ಶ್ಲೋಕಗಳೆಂದೂ ಭಾರತದಲ್ಲಿಯೇ ಹೇಳಿದೆ :

ಇದಂ ಶತಸಹಸ್ರಂ ತು ಲೋಕಾನಾಂ ಪುಣ್ಯಕರ್ಮಣಾಂ ।
ಉಪಾಖ್ಯಾನೈಃ ಸಹ ಜ್ಞೇಯಂ, ಆದ್ಯಂ ಭಾರತಮುತ್ತಮಂ ॥
ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತಸಂಹಿತಾಂ ।
ಉಪಾಖ್ಯಾನೈರ್ವಿನಾ ತಾವದ್ ಭಾರತಂ ಪ್ರೋಚ್ಯತೇ ಬುಧೈಃ ॥
(ಆದಿ. 102—103.)

ಭಾರತದ ಆರಂಭವು ಮೂರು ಘಟ್ಟಗಳಲ್ಲಿ ಪರಿಗಣಿತವಾಗುತ್ತಿತ್ತೆಂದು ಈ ಶ್ಲೋಕ ತಿಳಿಸುತ್ತದೆ :

ಮನ್ವಾದಿ ಭಾರತಂ ಕೇಚಿದಾಸ್ತೀಕಾದಿ ತಥಾ ಪರೇ ।
ತಥೋಪರಿಚರಾದ್ಯನ್ಯೇ ವಿಪ್ರಾಃ ಸಮ್ಯಗಧೀಯತೇ ॥ (ಆದಿ. 52)

ಮನು ಎಂದರೆ 'ನಾರಾಯಣಂ ನಮಸ್ಕೃತ್ಯ . .' ಎಂಬ ಶ್ಲೋಕ ಅಥವಾ 'ಓಂ ನಮೋ ಭಗವತೇ ವಾಸುದೇವಾಯ' ಎಂಬುದು. ಆಸ್ತೀಕಪರ್ವ ಆದಿಪರ್ವದ 32ನೇ ಅಧ್ಯಾಯ, ಉಪರಿಚರನ ಕಥೆ 63ನೆಯ ಅಧ್ಯಾಯದಲ್ಲಿದೆ. ಸೌತಿ ಹೇಳಿದ್ದು, ವೈಶಂಪಾಯನ ಹೇಳಿದ್ದು, ವ್ಯಾಸರು ಹೇಳಿದ್ದು—ಇವು ಕ್ರಮವಾಗಿ ಮೇಲ್ಕಂಡ ಮೂರು ಘಟ್ಟಗಳಿಗೆ ಕಾರಣವೆಂದು ವಿದ್ವಾಂಸರು ಊಹಿಸಿದ್ದಾರೆ. ವ್ಯಾಸರ ಭಾರತ ವೈಶಂಪಾಯನ. ಸೌತಿಗಳಿಂದ ಮಹಾಭಾರತ



ವಾಯಿತೆಂದು ತರ್ಕಿಸಲು ಅವಕಾಶವಿದೆ. ಆಶ್ವಲಾಯನ ಗೃಹ್ಯಸೂತ್ರದಲ್ಲಿ 'ಸುಮಂತು ಜೈಮಿನಿ-ವೈಶಂಪಾಯನ-ಪೈಲ-ಸೂತ್ರ-ಭಾಷ್ಯ-ಭಾರತ-ಮಹಾಭಾರತ ಧರ್ಮಾಚಾರ್ಯಾಃ' (3-4-4) ಎಂದು ಉಲ್ಲೇಖವಿದೆ. ಮಹಾಭಾರತ ಎಂಬ ಹೆಸರೇ 'ಚಿಕ್ಕ ಭಾರತ' ಒಂದನ್ನು ಸೂಚಿಸುತ್ತದೆ. ಹಿಂದೆ ಉದಾಹರಿಸಿದ 'ಇದಂ ಶತಸಹಸ್ರಂತು . . .' ಎಂಬ ಶ್ಲೋಕದಲ್ಲಿ 'ಆದ್ಯಂ ಭಾರತಂ' ಎಂದು ಹೇಳಿರುವುದು ಈ ಪ್ರಸಂಗದಲ್ಲಿ ಗಮನಾರ್ಹ. ಈಗ ದೊರಕುವ ಮಹಾಭಾರತದಲ್ಲಿ ಒಂದು ಲಕ್ಷಕ್ಕಿಂತ ಅಧಿಕವಾಗಿ ಸಾವಿರಾರು ಶ್ಲೋಕಗಳು ದೊರೆಯುತ್ತವೆ.

## ಸಂಶೋಧನೆ

ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಪುರಾತನ ಗ್ರಂಥಗಳನ್ನು ವಿವರವಾಗಿ ಪರಿಶೀಲಿಸಿ ಭಾರತದ ಶಾಸ್ತ್ರೀಯ ಅಧ್ಯಯನವನ್ನು ನಡೆಸಿದ್ದಾರೆ. ಅವರಲ್ಲಿ ಶ್ರೀಯುತರಾದ ಸಿ. ಲಾಸೆನ್, ಎ. ವೆಬರ್, ಎ. ಲುಡ್‌ವಿಗ್, ಹೋಲ್ಟ್ಸ್‌ಮಾನ್, ಡಾ॥ ಸೂರೆನ್‌ಸನ್, ಜಿ. ಬ್ಯೂಲರ್, ಎಂ. ವಿಂಟರ್‌ನಿಟ್ಸ್, ಮಾನಿಯರ್ ವಿಲಿಯಂಸ್, ಮೆಗ್ಡೊನಲ್, ಹಾಪ್‌ಕಿನ್ಸ್—ಮುಂತಾದವರ ಶೋಧನೆ ಗಣನೀಯವಾದದ್ದು. ಇವರೆಲ್ಲರ ವಿಭಿನ್ನ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು.

1. ಸೌತಿಯು ಹೇಳಿದ ಮಹಾಭಾರತವು ಪುರಾತನಭಾರತದ ಸಂಸ್ಕರಣ. ಭಾರತ, ಮಹಾಭಾರತಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಿರುವ ಆಶ್ವಲಾಯನ ಗೃಹ್ಯಸೂತ್ರದ ಕಾಲ ಕ್ರಿ. ಪೂ. 350. ಆದ್ದರಿಂದ ಮಹಾಭಾರತದ ನಿರ್ಮಾಣ ಕ್ರಿ. ಪೂ. 450 ಇರಬಹುದು.

2. ಋಗ್ವೇದದಲ್ಲಿ ನಾರಾಶಂಸೀ ಗಾಥೆಗಳು, ದಾನಸ್ತುತಿಗಳು ಮುಂತಾದ ಲೌಕಿಕ ವಿಷಯಗಳಿವೆ. ಇವು ಕ್ಷತ್ರಿಯ ರಾಜರ ಯಶೋಗಾನಗಳು. ಇವೇ ಮಹಾಭಾರತದ ಮೂಲ.

3. ಪಾಂಡವರು ಐತಿಹಾಸಿಕ ವ್ಯಕ್ತಿಗಳಲ್ಲ; ಭಾರತದ ಕಥೆ ವಾಸ್ತವವಾಗಿ ದೇವದೇವತೆಯರಿಗೆ ಸಂಬಂಧಿಸಿದ್ದು. ಮಹಾಭಾರತವು ಋತುಪರಿವರ್ತನದ ಒಂದು ರೂಪಕ ಪಾಂಡುವೆಂದರೆ ಮಾಸಿದ ಸೂರ್ಯ. ಧೃತರಾಷ್ಟ್ರನು ನಿಷ್ಪ್ರಭನಾದ ಮಳೆಗಾಲದ ಸೂರ್ಯ. ದ್ರೌಪದಿಗೆ ಕೃಷ್ಣೆಯೆಂಬ ಹೆಸರಿರುವುದು ಪೃಥ್ವಿಯ ಸೂಚನೆ. ಕೃಷ್ಣನು ಯಜ್ಞಧೂಮಾವೃತನಾದ ಸೂರ್ಯ—ಇತ್ಯಾದಿ ಸಾಂಕೇತಿಕ ಕಲ್ಪನೆ.

4. ಕೌರವರೇ ಧರ್ಮಭೀರುಗಳು, ನ್ಯಾಯಪ್ರಿಯರು, ಅವರು ಶೈವರು. ಪಾಂಡವರು ವೈಷ್ಣವರು, ಯುದ್ಧದಲ್ಲಿ ನಡೆದ ಮೋಸವೆಲ್ಲಾ ಪಾಂಡವರದೇ. ಕೌರವರ ಹೆಸರು ವೇದ ಬ್ರಾಹ್ಮಣಗಳಲ್ಲಿ ಬರುತ್ತದೆ. ಅವರು ಬೌದ್ಧ ಮತವನ್ನು ಪುರಸ್ಕರಿಸಿಬಹುದು. ಅವರ ಪ್ರಶಂಸೆಯನ್ನು ಬೌದ್ಧಕವಿಯೊಬ್ಬನು ಬರೆದಿರಬೇಕು. ಮುಂದೆ ಬ್ರಾಹ್ಮಣರು ಬೌದ್ಧಧರ್ಮವನ್ನು ಓಡಿಸಿದಾಗ ಈ ಕೌರವರ ಕಥೆಯನ್ನು ಪೂರ್ಣವಾಗಿ ಬದಲಾಯಿಸಿ, ಪಾಂಡವರನ್ನು ಹೊಗಳಿದ್ದಾರೆ. ಮಹಾಭಾರತವು ಕ್ರಿ.ಶ. 13ನೆಯ ಶತಮಾನದವರೆಗೂ ಬದಲಾವಣೆ ಹೊಂದುತ್ತ ಬಂದಿದೆ.

5. ಮಹಾಭಾರತದ ಮೂಲವು ಪ್ರಾಚೀನ ಪೌರಾಣಿಕ ಕಥೆಗಳೇ. ಪುನರುಕ್ತ, ಅಪ್ರಾಸಂಗಿಕ ವಸ್ತುಗಳೆಲ್ಲವೂ ಪ್ರಕ್ಷಿಪ್ತ. ಮೂಲಗ್ರಂಥದಲ್ಲಿ 8000 ಶ್ಲೋಕಗಳು ಇದ್ದಿರಬಹುದು.

6. ಭಾರತಯುದ್ಧವು ಕೇವಲ ಕವಿಕಲ್ಪಿತ. ಇದರಲ್ಲಿ ಐತಿಹಾಸಿಕ ಪ್ರಮಾಣವಿಲ್ಲ. ಧರ್ಮ ಮತ್ತು ಅಧರ್ಮಗಳಿಗೆ ಎಂದೆಂದೂ ನಡೆಯುವ ಯುದ್ಧವೇ ಇದು. ಪಾಂಡವರು ಧರ್ಮವನ್ನೂ, ಕೌರವರು ಅಧರ್ಮವನ್ನೂ ಪ್ರತಿನಿಧಿಸುವ ಸಂಕೇತಗಳು. ಮಹಾಭಾರತವು ಒಂದು ಧರ್ಮಶಾಸ್ತ್ರ. ಇದು ಇತಿಹಾಸವೂ ಅಲ್ಲ. ಪುರಾಣವೂ ಅಲ್ಲ.

7. ಭಾರತಯುದ್ಧದ ಐತಿಹಾಸಿಕ ಮೂಲವನ್ನು ಒಪ್ಪಬೇಕಾಗುತ್ತದೆ. ಅದರ ಸುತ್ತಲೂ ವಿಭಿನ್ನ ವಿಷಯಗಳನ್ನು ತುಂಬಲಾಗಿದೆ. ಋಷಿಗಳ ಅದ್ಭುತ ಪವಾಡಗಳನ್ನೂ, ಶಾಪದ ಪ್ರಭಾವಗಳನ್ನೂ ತೋರಿಸುವ ನೂರಾರು ಕಥೆಗಳನ್ನು ವೇದಜ್ಞಾನ ಕಡಿಮೆಯಾದ ಪುರೋಹಿತಜನರು ಸೇರಿಸಿದ್ದಾರೆ. ಒಬ್ಬ ವ್ಯಕ್ತಿಯೇ ಈ ಗ್ರಂಥವನ್ನು ರಚಿಸಿರಲಾರ. ಮಹಾಭಾರತವು ಅತಿವಿಕಟವಾದ ಒಂದು ಸಾಹಿತ್ಯಭೂತ. ಹುಲ್ಲುಪೊದರುಗಳಿಂದ ತುಂಬಿರುವ ಒಂದು ಗೊಂಡಾರಣ್ಯ. ಅಲ್ಲಲ್ಲಿ ಉತ್ತಮ ಕಾವ್ಯವೆನಿಸುವ ಸುಂದರ ಪುಷ್ಪಗಳನ್ನು ಕಾಣಬಹುದು.

8. ಬ್ರಾಹ್ಮಣಸಂಪ್ರದಾಯದ ಕೇಂದ್ರ ಅಯೋಧ್ಯೆಯಾಗಿತ್ತು. ಕುರುಪಾಂಚಾಲ ದೇಶಗಳಲ್ಲಿ ಅವರ ಪ್ರಭಾವ ಹೆಚ್ಚಾಗಿರಲಿಲ್ಲ. ಆದ್ದರಿಂದಲೇ ಭಾರತದಲ್ಲಿ ನಾಸ್ತಿಕವಾದ ಸೇರಿಕೊಂಡಿದೆ. ಭಾರತದ ಸಮಾಜವು ರಾಮಾಯಣದ ಸಮಾಜಕ್ಕಿಂತ ಸಭ್ಯತೆಯಲ್ಲಿ ಹೀನ. ಇದರಲ್ಲಿರುವ ವೃತ್ತಾಂತಗಳು ಪರಸ್ಪರ ವಿರುದ್ಧ. ಒಮ್ಮೆ ಶಿವನಿಗೆ ಶ್ರೇಷ್ಠತೆ—ಇನ್ನೊಮ್ಮೆ ವಿಷ್ಣುವಿಗೆ, ದ್ವೈತ-ಅದ್ವೈತ, ಅಧ್ಯಾತ್ಮವಾದ-ಭೌತಿಕವಾದ, ಧರ್ಮನಿಯಮಗಳ ಕಾಠಿಣ್ಯ-ಶೈಥಿಲ್ಯ, ಬ್ರಾಹ್ಮಣರ ನಿಂದೆ-ಪ್ರಶಂಸೆ, ವರ್ಣಭೇದಗಳ ಅಸಮಾನತೆ-ಸಹಿಷ್ಣುತೆ, ಭಕ್ತಿವಾದ, ಯುಕ್ತಿವಾದ—ಈ ವೈಪರೀತ್ಯಗಳ ವಿಚಿತ್ರ ಸಮ್ಮಿಶ್ರಣ ಇದರಲ್ಲಿದೆ.

ಡಾ|| ಎ. ಎಸ್. ಸುಕಠಣಕರ ಅವರು ಕೂಲಂಕಷವಾದ ಸಂಶೋಧನೆಯನ್ನು ನಡೆಸಿ ಭಾರತವು ಮಹಾಭಾರತವಾದುದಕ್ಕೆ ಭೃಗುವಂಶೀಯರೇ ಕಾರಣರೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಉತ್ತಂಕ, ಶುಕ್ರ, ಶೌನಕ, ಮಾರ್ಕಂಡೇಯ, ಚ್ಯವನ, ಜಮದಗ್ನಿ—ಮುಂತಾದ ಉಪಾಖ್ಯಾನಕಾರರು ಭೃಗುವಂಶದವರು. ಪರಶುರಾಮನನ್ನು ವಿಷ್ಣುವಿನ ದಶಾವತಾರಗಳಲ್ಲಿ ಸೇರಿಸಿದ ಕೆಲಸ ಈ ಭೃಗುವಂಶೀಯರಿಂದಲೇ ನಡೆಯಿತೆಂದು ಅವರ ವಾದವಿದೆ. ಈ ಭೃಗುವಂಶೀಯರು ಧರ್ಮಶಾಸ್ತ್ರದಲ್ಲಿ ಪಾರಂಗತರಾಗಿದ್ದರೆಂದೂ, ಅಥರ್ವವೇದದಲ್ಲಿ ಇವರೇ ಪ್ರಧಾನರೆಂದೂ ಉಪಪಾದಿಸಿದ್ದಾರೆ.

## ಪುಣೆಯ ಭಂಡಾರಕರ್ ಸಂಶೋಧನ ಸಂಸ್ಥೆಯ ಮಹಾಭಾರತ ಸಂಸ್ಕರಣ

ಮಹಾಭಾರತದಲ್ಲಿ ಮುಖ್ಯವಾಗಿ ದಾಕ್ಷಿಣಾತ್ಯ ಮತ್ತು ಔತ್ತರೇಯಗಳೆಂಬ ಪಾಠಭೇದಗಳುಂಟು. ಇವುಗಳಲ್ಲಿಯೂ ಕಾಶ್ಮೀರಿ, ಬಂಗಾಲಿ, ನೇಪಾಲಿ, ದೇವನಾಗರಿ, ತೆಲುಗು,



ಗ್ರಂಥ, ಮಲಯಾಳ ಲಿಪಿಗಳ ಪ್ರತಿಗಳಲ್ಲಿ ವಿಭಿನ್ನ ಪಾಠಗಳಿವೆ. ನೀಲಕಂಠ, ಅರ್ಜುನಮಿಶ್ರ, ಮೊದಲಾದ ವ್ಯಾಖ್ಯಾನಕಾರರು ಮತ್ತೆ ಪಾಠಭೇದಗಳನ್ನು ನಿರ್ದೇಶಿಸಿದ್ದಾರೆ. ಇವೆಲ್ಲವನ್ನೂ ಪರಿಶೋಧಿಸಿ ಸಾಧ್ಯವಾದಮಟ್ಟಿಗೆ ಮೂಲಪಾಠವನ್ನು ಗೊತ್ತುಹಚ್ಚಬೇಕೆಂದು ಸಂಶೋಧಕ ವಿದ್ವಾಂಸರು ಪ್ರಯತ್ನ ನಡೆಸಿದ್ದರು. ಇದನ್ನು ಸಾಧಿಸಿದ ಕೀರ್ತಿ ಮೇಲ್ಕಂಡ ಸಂಸ್ಥೆಗೆ ಸಲ್ಲುತ್ತದೆ. ಸಂಶೋಧನಾಶಾಸ್ತ್ರ ಪರಿಣತರಾದ ಡಾ|| ಎ.ಎಸ್.ಸುಕಠಣಕರರ ನೇತೃತ್ವದಲ್ಲಿ ವಿಖ್ಯಾತ ವಿದ್ವಾಂಸರ ನೆರವನ್ನು ಪಡೆದು ಭಂಡಾರಕರ ಸಂಶೋಧನ ಸಂಸ್ಥೆಯು ಈ ಕಾರ್ಯಭಾರವನ್ನು ವಹಿಸಿಕೊಂಡಿತು. ದೀರ್ಘಕಾಲದ 45 ವರ್ಷಗಳ ಸತತಪ್ರಯತ್ನದಿಂದ ಈ ಸಂಸ್ಥೆ ತನ್ನ ಧ್ಯೇಯವನ್ನು ಸಾಧಿಸಿ ಮಹಾಭಾರತವನ್ನು ಪೂರ್ತಿಯಾಗಿ ಪ್ರಕಟಿಸಿದೆ. ಶಾಸ್ತ್ರೀಯವಾದ ಪರಿಷ್ಕರಣ ಸೂತ್ರಗಳನ್ನವಲಂಬಿಸಿ ಇದನ್ನು ಶೋಧಿಸಲಾಗಿದೆ. ಉಪಲಬ್ಧವಿರುವ ಎಲ್ಲ ಬಗೆಯ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಒಂದೊಂದನ್ನೂ ವರ್ಗೀಕರಿಸಿ, ಪ್ರತಿಶ್ಲೋಕವನ್ನೂ, ಪದವನ್ನೂ ಹೋಲಿಸಿ, ಪರೀಕ್ಷಿಸಿ ಈ ವಿದ್ವನ್ಮಂಡಲಿ ಒಂದು ನಿರ್ಣಯಕ್ಕೆ ಬಂದಿದೆ. ಮೂಲಪಾಠವನ್ನು ಗೊತ್ತುಹಚ್ಚಲು ಮನುಷ್ಯ ಸಾಧ್ಯವಾದ ಪ್ರಯತ್ನವೆಲ್ಲವನ್ನೂ ನಡೆಸಿದೆ. ಈ ಪರಿಷ್ಕರಣದ ಸಂಪಾದಕರು ಮಹಾಭಾರತದಲ್ಲಿ ಪ್ರಕ್ಷೇಪಗಳೆಂದು ನಿರ್ಧರಿಸಿದ ಮುಖ್ಯಭಾಗಗಳು ಇವು :—

1. ನಾರಾಯಣಂ ನಮಸ್ಕೃತ್ಯ......ಎಂಬ ಮಂಗಳ ಶ್ಲೋಕ.
2. ಗಣಪತಿಯು ವ್ಯಾಸರಿಗೆ ಲಿಪಿಕಾರನಾದ ಕಥೆ.
3. ಆದಿಪರ್ವದಲ್ಲಿ ಬರುವ ಕಣಿಕ ನೀತಿ.
4. ವಿರಾಟ — ಭೀಷ್ಮ ಪರ್ವಗಳಲ್ಲಿರುವ ದುರ್ಗಾಸ್ತೋತ್ರ.
5. ದ್ರೌಪದೀವಸ್ತ್ರಾಪಹರಣ ಪ್ರಸಂಗದಲ್ಲಿ ಅವಳು ಕೃಷ್ಣನನ್ನು ಸ್ತುತಿಸುವುದು ಮತ್ತು ಕೃಷ್ಣನು ಅವಳ ಸೀರೆಯನ್ನು ಅಕ್ಷಯಗೊಳಿಸುವುದು.
6. ವನವಾಸದಲ್ಲಿದ್ದ ಪಾಂಡವರನ್ನು ಪರೀಕ್ಷಿಸಲು ದುರ್ವಾಸರು ಬರುವುದು. ದ್ರೌಪದಿಗೆ ಕೃಷ್ಣಾನುಗ್ರಹದಿಂದ ಅಕ್ಷಯ ಪಾತ್ರೆಯ ಪ್ರಾಪ್ತಿ.
7. ಅರಣ್ಯಪರ್ವದಲ್ಲಿ ಊರ್ವಶಿ ಅರ್ಜುನನನ್ನು ಕಾಮಿಸಿ ವಿಫಲಳಾಗಿ ಅವನನ್ನು ಶಪಿಸುವುದು.
8. ಉದ್ಯೋಗಪರ್ವದಲ್ಲಿ ಶಂಕರಾಚಾರ್ಯರ ಭಾಷ್ಯವಿಲ್ಲದ ಸನತ್ಸುಜಾತೀಯದ ಒಂದು ಅಧ್ಯಾಯ.
9. ಭೀಷ್ಮಪರ್ವದಲ್ಲಿ ಬರುವ ವಿಶ್ವೋಪಾಖ್ಯಾನ. ಮೂರನೆಯ ದಿನದ ಯುದ್ಧದಲ್ಲಿ ಕೃಷ್ಣನು ಭೀಷ್ಮನ ಮೇಲೆ ಕುಪಿತನಾಗಿ ಚಕ್ರವನ್ನು ಹಿಡಿದ ಕಥೆಯು ಪುನರುಕ್ತವಾಗಿ ಒಂಬತ್ತನೆಯ ದಿನವೂ ಚಕ್ರವನ್ನು ಹಿಡಿದನೆಂಬ ವರ್ಣನೆ.
10. ಅನೇಕ ಕ್ಷೇತ್ರ ಮಾಹಾತ್ಮ್ಯಗಳು.

## ಮಹಾಭಾರತದ ಕಾಲ

ಕಾಲದ ವಿಷಯವಾಗಿ ಪರಿಶೋಧಕ ವಿದ್ವಾಂಸರು ವಿಪುಲವಾದ ಚರ್ಚೆಯನ್ನು ನಡೆಸಿದ್ದಾರೆ. ಭಾರತಯುದ್ಧವು ಯಾವಾಗ ನಡೆಯಿತೆಂಬುದನ್ನು ಗೊತ್ತುಮಾಡಿದ್ದರೆ ಗ್ರಂಥದ ಪೂರ್ವಾವಧಿಯನ್ನು ಹೇಳಬಹುದು.

ಅಂತರೇ ಚೈವ ಸಂಪ್ರಾಪ್ತೇ ಕಲಿದ್ವಾಪರಯೋರಭೂತ್ ।
ಸಮಂತಪಂಚಕೇ ಯುದ್ಧಂ ಕುರುಪಾಂಡವಸೇನಯೋಃ ॥ —ಆದಿ. 2—13

ಎಂದಿರುವುದರಿಂದ ದ್ವಾಪರಯುಗವು ಮುಗಿದು ಕಲಿಯುಗವು ಆರಂಭಿಸುವ ಸಮಯದಲ್ಲಿ ಭಾರತಯುದ್ಧ ನಡೆಯಿತು. ಈ ವಿಷಯದಲ್ಲಿ ವಿದ್ವಾಂಸರ ವಿಭಿನ್ನ ಅಭಿಪ್ರಾಯಗಳು ಹೀಗಿವೆ :

(1) ಆರ್ಯಭಟನು ಕ್ರಿ. ಪೂ. 3101 ರಲ್ಲಿ ಕಲಿಯುಗದ ಆರಂಭವೆಂದು ನಿರ್ಣಯಿಸಿದ್ದಾನೆ. ಭಾರತದ ಸಂಪ್ರದಾಯವಾದಿಗಳೆಲ್ಲರೂ ಇದನ್ನು ಒಪ್ಪಿದ್ದಾರೆ. ಕಲಿಯುಗವು ಆರಂಭವಾದ ದಿನವೇ ಶ್ರೀಕೃಷ್ಣನು ಪರಂಧಾಮವನ್ನೈದಿದನು. ಇದಕ್ಕೆ 37 ವರ್ಷಗಳ ಹಿಂದೆ ಎಂದರೆ ಕ್ರಿ. ಪೂ. 3138 ರಲ್ಲಿ ಭಾರತಯುದ್ಧ ನಡೆಯಿತು.

(2) ರಾಜತರಂಗಿಣೀಕಾರನಾದ ಕಲ್ಹಣನು ಕಲಿಯುಗದ 653 ರಲ್ಲಿ ಗೋವರ್ಧನ ಎಂಬ ರಾಜನು ಕಾಶ್ಮೀರದಲ್ಲಿ ಆಳಿದನೆಂದೂ, ಅವನು ಯುಧಿಷ್ಠಿರನ ಸಮಕಾಲವರ್ತಿಯೆಂದೂ ಹೇಳಿದ್ದಾನೆ. ಕಲ್ಹಣನ ಪ್ರಕಾರ ಕ್ರಿ. ಪೂ. ಸುಮಾರು 2500 ರಲ್ಲಿ ಭಾರತಯುದ್ಧ.

ಇನ್ನು ಸ್ವತಂತ್ರವಾಗಿ ವಿಚಾರಮಾಡಿರುವ ವಿದ್ವಾಂಸರಲ್ಲಿ ಮತಭೇದಗಳುಂಟು. ಭಾರತವು ಅನೇಕ ಸ್ತರಗಳಲ್ಲಿ ಬೆಳೆದು ಮಹಾಭಾರತವಾಗಲು ದೀರ್ಘಕಾಲವೇ ಸಂದಿರಬೇಕೆಂದೂ, ನಿರ್ದಿಷ್ಟವಾಗಿ ಕಾಲವನ್ನು ಹೇಳಲಾಗದಿದ್ದರೂ ಉಪಲಬ್ಧಪ್ರಮಾಣಗಳಿಂದ ಒಂದು ಸಾಮಾನ್ಯವಾಗಿ ಕಾಲವನ್ನು ನಿರ್ಧರಿಸಬಹುದೆಂದೂ ಹೇಳುತ್ತಾರೆ. ಅವರ ನಿರ್ಧಾರದ ಫಲಿತಾಂಶ ಹೀಗಿದೆ :—

1. ಆರ್. ರೋತ್ — ಮೂಲಭಾರತವೂ ಸಹ ಬುದ್ಧನ ಕಾಲಕ್ಕಿಂತ ಈಚಿನದು. ಬುದ್ಧನ ಕಾಲ ಕ್ರಿ. ಪೂ. 6ನೇ ಶತಮಾನ.
2. ಎಂ. ವಿಂಟರ್‌ನಿಟ್ಸ್ — ಕ್ರಿ. ಪೂ. 4ನೆಯ ಶತಮಾನದಿಂದ ಕ್ರಿ. ಶ. 4 ನೆಯ ಶತಕದ ಕಾಲಾವಧಿ.
3. ಮೆಗ್ಡೋನಲ್ — ಕ್ರಿ. ಪೂ. 450 ರಿಂದ 350.
4. ಹಾಪ್‌ಕಿನ್ಸ್ — ಕ್ರಿ. ಪೂ. 400 ಕ್ಕಿಂತ ಹಿಂದೆ ಭಾರತವು ಇತ್ತೆಂಬುದಕ್ಕೆ ಆಧಾರವಿಲ್ಲ. ಅದರ ಬೆಳವಣಿಗೆ ಕ್ರಿ. ಶ. 400 ರವರೆಗೆ.
5. ಸಿ. ವಿ. ವೈದ್ಯ — ಕ್ರಿ. ಪೂ. 250.
6. ವೆಬರ್ — ಮೂಲಭಾರತದಲ್ಲಿದ್ದುದು 8,800 ಶ್ಲೋಕಗಳು ಮಾತ್ರ. ಈಗಿನ ರೂಪ ಬಂದದ್ದು ಕ್ರಿ. ಶ. ಕೆಲವು ಶತಕಗಳಾದ ಮೇಲೆ.





7. ಆರ್. ಶಾಮಶಾಸ್ತ್ರಿ—ಕ್ರಿ. ಪೂ. 13ನೆಯ ಶತಕದಲ್ಲಿ ಭಾರತಯುದ್ಧ.
8. ಬಂಕಿಂಚಂದ್ರ—ಕ್ರಿ. ಪೂ. 1430ರಲ್ಲಿ ಭಾರತದ ಯುದ್ಧ.

ಭಾರತಯುದ್ಧವು ಆದ್ಯ ಭಾರತನಿರ್ಮಾಣದ ಪೂರ್ವಾವಧಿ. ಭಾರತಯುದ್ಧವಾದ ಎಷ್ಟೋ ಕಾಲದ ಮೇಲೆ ಗ್ರಂಥ ರಚನೆಯಾಗಿರಬಹುದು.

ಅಷ್ಟಾಧ್ಯಾಯಿಯನ್ನು ರಚಿಸಿದ ಪಾಣಿನಿ ಕ್ರಿ.ಪೂ. 6ನೆಯ ಶತಮಾನಕ್ಕಿಂತ ಅರ್ವಾಚೀನನಲ್ಲವೆಂಬುದು ನಿಶ್ಚಿತ. ಗೋಲ್ಡ್ ಸ್ಟುಕರ್ ಪಂಡಿತನು ಪಾಣಿನಿಯ ಕಾಲವನ್ನು ಕ್ರಿ. ಪೂ. 12ನೆಯ ಶತಕವೆಂದು ಸ್ಥಾಪಿಸಿದ್ದನು. ಪಾಣಿನಿಗೆ ಮಹಾಭಾರತದ ಪರಿಚಯವಿತ್ತೆಂಬುದು ಕೆಳಗಿನ ಪ್ರಮಾಣಗಳಿಂದ ಸಿದ್ಧವಾಗುತ್ತದೆ:—

1. ಮಹಾನ್ ವ್ರೀಹ್ಯಪರಾಹ್ಣ . . . . ಭಾರಭಾರತ . . . ಪ್ರವೃದ್ಧೇಷು (6-2-38). ಮಹಾಭಾರತ ಶಬ್ದದಲ್ಲಿ ಮಹಚ್ಛಬ್ದವು ಪ್ರಕೃತಿ ಸ್ವರವನ್ನು ಪಡೆಯುತ್ತದೆ.
2. ಗವಿಯುಧಿಭ್ಯಾಂ ಸ್ಥಿರಃ (8—3—95). ಯುಧಿಷ್ಠಿರ ಶಬ್ದವು ಸಿದ್ಧವಾಗುತ್ತದೆ.
3. ವಾಸುದೇವಾರ್ಜುನಾಭ್ಯಾಂ ವುನ್ (4—3—98). ವಾಸುದೇವನ ಪಕ್ಷದವರು ವಾಸುದೇವಕರು. ಅರ್ಜುನನ ಪಕ್ಷದವರು ಅರ್ಜುನಕರು.
4. ಬಾಹ್ವಾದಿಭ್ಯಶ್ಚ (4—1—96). ಈ ಗಣದಲ್ಲಿ ಕೃಷ್ಣ, ಯುಧಿಷ್ಠಿರ, ಅರ್ಜುನ, ಸಾಂಬ, ಗದ, ಪ್ರದ್ಯುಮ್ನ ಶಬ್ದಗಳಿವೆ.

ಪೃಥಾಶಬ್ದವು ಶಿವಾದಿಯಲ್ಲಿದೆ. ಹೀಗೆಯೇ ಕುಂತಿ, ಕುರು, ಮದ್ರ, ವೃಷ್ಣಿ, ಅಂಧಕ, ಗಾಂಡೀವ ನಕುಲ, ಭೀಮ, ಅಶ್ವತ್ಥಾಮ, ದ್ರೋಣ, ಧನಂಜಯ ಮುಂತಾದ ಶಬ್ದಗಳು ಪಾಣಿನಿಯ ಸೂತ್ರಗಳಲ್ಲಿಯೂ, ಗಣಪಾಠದಲ್ಲಿಯೂ ದೊರೆಯುತ್ತವೆ. ಆದ್ದರಿಂದ ಕ್ರಿ. ಪೂ. 6 ನೆಯ ಶತಕಕ್ಕಿಂತ ಹಿಂದೆಯೇ ಮಹಾಭಾರತವು ಪ್ರಸಿದ್ಧವಾಗಿತ್ತು. ಅನಂತರ ಕೆಲವು ಭಾಗಗಳು ಸೇರಿಸಲ್ಪಟ್ಟಿರಬಹುದು. ಬೋಧಾಯನ ಗೃಹ್ಯಶೇಷಸೂತ್ರದಲ್ಲಿ 'ತದಾಹ ಭಗವಾನ್' ಎಂದು ಹೇಳಿ 'ಪತ್ರಂ ಪುಷ್ಪಂ ಫಲಂ ತೋಯಂ . . .' ಎಂಬ ಭಗವದ್ಗೀತೆಯ ಶ್ಲೋಕವನ್ನು ತೆಗೆದುಕೊಳ್ಳಲಾಗಿದೆಯೆಂಬುದು ಗಮನಾರ್ಹ. ಬೋಧಾಯನನ ಕಾಲ ಕ್ರಿ. ಪೂ. 400 ಕ್ಕಿಂತ ಹಿಂದೆ.

### ಗ್ರಂಥಸ್ವರೂಪ

ಭಾರತವನ್ನು ಹದಿನೆಂಟು ಪರ್ವಗಳಾಗಿ ವಿಭಜಿಸಲಾಗಿದೆ. ಒಂದೊಂದು ಪರ್ವದಲ್ಲಿಯೂ ಆಸ್ತೀಕಪರ್ವ, ಪೌಲೋಮಪರ್ವ— ಮುಂತಾದ ಒಂದು ನೂರು ಉಪಪರ್ವಗಳಿವೆ. ಉಪಪರ್ವಗಳು ಕೆಲವು ಅಧ್ಯಾಯಗಳ ಸಮೂಹ. ಅನುಷ್ಟುಪ್ ಶ್ಲೋಕಗಳೇ ಅಧಿಕ. ವೈದಿಕ

ಛಂದಸ್ಸುಗಳೂ ಅಧಿಕ ಸಂಖ್ಯೆಯಲ್ಲಿವೆ. ವಸಂತತಿಲಕಾದಿ ವೃತ್ತಗಳು ವಿರಳ. ಪೌಷ್ಯ ಪರ್ವದಲ್ಲಿ ಗದ್ಯವೇ ಅಧಿಕ. ಮುಂದೆ ಅತ್ಯಂತ ವಿರಳವಾಗಿ ಗದ್ಯವು ಕಾಣಿಸುವುದುಂಟು.

'ಜಯೋ ನಾಮೇತಿಹಾಸೋಽಯಮ್' ಭಾರತವು ಜಯವೆಂಬ ಹೆಸರಿನ ಇತಿಹಾಸ, 'ಯತೋ ಧರ್ಮಸ್ತತೋ ಜಯಃ' ಎಂಬ ನೀತಿಯಂತೆ ಪಾಂಡವರ ಜಯವನ್ನು ಪ್ರತಿಪಾದಿಸಿದ್ದರಿಂದ ಈ ಹೆಸರು ಬಂದಿರಬೇಕು. ಕಟಪಯಾದಿ ಸೂತ್ರದ ಲೆಕ್ಕದಂತೆ ಜಯ ಎಂಬ ಪದವು ಹದಿನೆಂಟು ಸಂಖ್ಯೆಯನ್ನು ಸೂಚಿಸುತ್ತದೆ. 18 ಪರ್ವಗಳಿರುವದರಿಂದಲೂ ಭಾರತ ಯುದ್ಧವು 18 ದಿನ ನಡೆದಿದ್ದರಿಂದಲೂ ಈ ಹೆಸರು ಬಂದಿರಬಹುದು. ಭಗವದ್ಗೀತೆಯಲ್ಲಿಯೂ 18 ಅಧ್ಯಾಯಗಳಿರುವುದೂ. 18 ದಿನದ ಯುದ್ಧ. 18 ಅಕ್ಷೋಹಿಣೀ ಸೈನ್ಯಗಳೆಂಬುದೂ ಗಮನಾರ್ಹ.

ಧರ್ಮ, ಅರ್ಥ, ಕಾಮ, ಮೋಕ್ಷ—ಎಂಬ ಪುರುಷಾರ್ಥಗಳಿಗೆ ಸಂಬಂಧಿಸಿದ ವಿಚಾರ ಪರಂಪರೆಗಳು ಭಾರತದಲ್ಲಿ ತುಂಬಿವೆ. ವೀರರಸವು ಪ್ರಧಾನವಾಗಿದ್ದರೂ. ಶಾಂತಿರಸದ ಸಂದರ್ಭಗಳೂ ವಿಶೇಷವಾಗಿವೆ, ಭೀಷ್ಮಪರ್ವದಲ್ಲಿರುವ ಭಗವದ್ಗೀತೆ ವಿಶ್ವವಿಖ್ಯಾತವಾದದ್ದು. ಹೀಗೆಯೇ ಮಂಕಿಗೀತೆ, ಹಂಸಗೀತೆ, ಪಿಂಗಲಗೀತೆ, ಹಾರೀತಗೀತೆ ಮುಂತಾದ ಕೆಲವು ಬಿಡಿ ಪ್ರಕರಣಗಳು ಶಾಂತಿಪರ್ವಾಂತರ್ಗತ ಮೋಕ್ಷಪರ್ವದಲ್ಲಿವೆ. ಅಶ್ವಮೇಧಪರ್ವದಲ್ಲಿ ಅನುಗೀತೆ ಇದೆ. ಶೃಂಗಾರವು ಭಾರತಕಥೆಯಲ್ಲಿ ಸ್ವಲ್ಪ ಕಾಣಿಸಿದರೂ ಉಪಾಖ್ಯಾನಗಳಲ್ಲಿ ಪುಷ್ಟವಾಗಿದೆ. ಸಾಮಾನ್ಯನೀತಿ, ರಾಜನೀತಿ ಧರ್ಮೋಪದೇಶಗಳು ಬೇರೆ ಬೇರೆ ಪ್ರಕರಣಗಳಾಗಿಯೂ, ಕಥಾಪ್ರಸಂಗಗಳಲ್ಲಿ ಬಿಡಿಯಾಗಿಯೂ ಬಂದಿವೆ. ಅಧ್ಯಾತ್ಮವಿಚಾರವು ವಿಶದವಾಗಿದೆ. ವಿಶಾಲವಾದ ಮೂಲಕಥೆಯೊಡನೆ ಪ್ರಾಸಂಗಿಕವಾದ ಕಥೆಗಳೂ. ಉಪಕಥೆಗಳೂ ಸೇರಿಕೊಂಡಿರುವ ಮಹಾಭಾರತವನ್ನು ಕೈಯಲ್ಲಿ ಹಿಡಿದರೆ, ಒಂದು ಮಹಾಸಾಗರದ ಮಧ್ಯದಲ್ಲಿ ತೇಲುವ ಅನುಭವವಾಗುತ್ತದೆ. ವ್ಯಾಸಮಹರ್ಷಿಗಳಿಗೆ ಈ ಗ್ರಂಥವನ್ನು ರಚಿಸಲು ಮೂರುವರ್ಷ ಬೇಕಾಯಿತು.

ತ್ರಿಭಿರ್ವರ್ಷೈರಿದಂ ಪೂರ್ಣಂ ಕೃಷ್ಣದ್ವೈಪಾಯನಃ ಪ್ರಭುಃ ।
ಅಖಿಲಂ ಭಾರತಂ ಚೇದಂ ಚಕಾರ ಭಗವಾನ್ ಮುನಿಃ ॥
—ಸ್ವರ್ಗಾ. (5—48)

## ವ್ಯಾಖ್ಯಾನಗಳು

ಮಹಾಭಾರತದ ಮೇಲೆ ಸರ್ವಜ್ಞನಾರಾಯಣ, ದೇವಬೋಧ, ಅರ್ಜುನಮಿಶ್ರ, ನೀಲಕಂಠ, ವಾದಿರಾಜ, ಚತುರ್ಭುಜ, ಯಜ್ಞನಾರಾಯಣ—ಮೊದಲಾದವರು ಬರೆದ ಸುಮಾರು 22 ವ್ಯಾಖ್ಯಾನಗಳಿವೆ. ವಾದಿರಾಜನು ಮಾಧ್ವಯತಿ. ಈತನ ವ್ಯಾಖ್ಯಾನದ ಹೆಸರು ಲಕ್ಷಾಲಂಕಾರ. ಈತನ ಕಾಲ 15ನೆಯ ಶತಕದ ಉತ್ತರಾರ್ಧ. ನೀಲಕಂಠನ ವ್ಯಾಖ್ಯಾನ ಪ್ರಸಿದ್ಧವಾದದ್ದು. ಈತನು ಸುಮಾರು 16ನೆಯ ಶತಕದಲ್ಲಿ ಮಹಾರಾಷ್ಟ್ರದ ಕೂರ್ಪರ ಎಂಬ ಗ್ರಾಮದವನಾಗಿದ್ದನೆಂದು ತಿಳಿದುಬರುತ್ತದೆ. ಈತನ ವ್ಯಾಖ್ಯಾನದ ಹೆಸರು ಭಾರತಭಾವದೀಪ.



ಬಹೂನ್ ಸಮಾಹೃತ್ಯ ವಿಭಿನ್ನದೇಶ್ಯಾನ್
ಕೋಶಾನ್ ವಿನಿಶ್ಚಿತ್ಯ ಚ ಕೋಶಮಗ್ರ್ಯಂ ।
ಪ್ರಾಚಾಂ ಗುರೂಣಾಮನುಸೃತ್ಯ ವಾಚಂ
ಆರಭ್ಯತೇ ಭಾರತಭಾವದೀಪಃ ॥

ಎಂದಿದ್ದಾನೆ. ಇವನು ಚತುರ್ಧರವಂಶದವನು. ತಂದೆ ಗೋವಿಂದಸೂರಿ.

## ಮಹಾಭಾರತಕ್ಕೆ ಸಂಬಂಧಿಸಿದ ಉತ್ತರಕಾಲದ ಸಾಹಿತ್ಯ

ಮಧ್ವಾಚಾರ್ಯ, ಅಪ್ಪಯ್ಯದೀಕ್ಷಿತ, ವರದರಾಜರು ಭಾರತತಾತ್ಪರ್ಯನಿರ್ಣಯ ಎಂಬ ಹೆಸರಿನ ಮೂರು ಗ್ರಂಥಗಳನ್ನು ಸ್ವತಂತ್ರವಾಗಿ ಬರೆದಿದ್ದಾರೆ. ಪುರಾಣಂ ಹಯಗ್ರೀವಶಾಸ್ತ್ರಿಗಳ ಭಾರತತತ್ತ್ವವಾಚನವು ಅದ್ವೈತಸಿದ್ಧಾಂತವನ್ನು ವಿವರಿಸುವ ಗ್ರಂಥ. ಕ್ಷೇಮೇಂದ್ರನ ಭಾರತಮಂಜರಿ, ಅನಂತಭಟ್ಟನ ಭಾರತಚಂಪೂ—ಇವೆರಡೂ ಸಮಗ್ರ ಭಾರತಕಥೆಯನ್ನವಲಂಬಿಸಿವೆ. ಭಾಸನ ಮಧ್ಯಮವ್ಯಾಯೋಗ, ಪಂಚರಾತ್ರ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ ಮತ್ತು ಊರುಭಂಗ ಒಂದೊಂದು ಪ್ರಕರಣವನ್ನವಲಂಬಿಸಿದ ನಾಟಕಗಳು. ಹೀಗೆಯೇ ವೇಣೀಸಂಹಾರ, ಬಾಲಭಾರತ, ಪಾಂಡವಾಭ್ಯುದಯ ಮುಂತಾದ ಹಲವು ರೂಪಕಗಳಿವೆ. ಭಾರತದ ನಳೋಪಾಖ್ಯಾನವನ್ನು ಆಶ್ರಯಿಸಿ ನೈಷಧ ಮುಂತಾದ ಕಾವ್ಯಗಳೂ, ನಾಟಕಗಳೂ ರಚಿತವಾಗಿವೆ. ಕಾಳಿದಾಸನ ಶಾಕುಂತಲದ ಕಥಾವಸ್ತು ಕೂಡ ಭಾರತದ್ದೇ.

ಕ್ರಿ. ಶ. 4ನೆಯ ಶತಮಾನದಲ್ಲಿದ್ದ ವಿಮಲಸೂರಿ ಹರಿವಂಶಚರಿತವನ್ನೂ, ಕ್ರಿ. ಶ. 8ನೆಯ ಶತಮಾನದಲ್ಲಿದ್ದ ಜಿನಸೇನನು 'ಹರಿವಂಶ'ವನ್ನೂ ಜೈನಮತಾನುಗುಣವಾಗಿ ರಚಿಸಿದ್ದಾರೆ. ಈ ಜೈನಗ್ರಂಥಗಳಲ್ಲಿ ಕಥಾಪ್ರಸಂಗವೂ, ಪಾತ್ರರಚನೆಯೂ ಅಲ್ಲಲ್ಲಿ ವಿಭಿನ್ನವಾಗಿವೆ. ಜೈನಮತಾನುಗುಣವಾದ ಭಾರತವನ್ನು ಜೈನವಿದ್ವಾಂಸರು ಬರೆದಿದ್ದಾರೆ. 16ನೆಯ ಶತಕದಲ್ಲಿ ಶ್ರೀಸಂಭದ್ರಚಂದ್ರನು 25 ಪರ್ವಗಳಿರುವ ಬೃಹತ್ ಪಾಂಡವಪುರಾಣವನ್ನು ಬರೆದಿದ್ದಾನೆ. ವಾದಿಚಂದ್ರನ ಪಾಂಡವಪುರಾಣವು 18 ಸರ್ಗಗಳ ಗ್ರಂಥ. ದೇವಪ್ರಭಸೂರಿಯು ಪಾಂಡವಚರಿತ್ರೆಯನ್ನು ರಚಿಸಿದ್ದಾನೆ. ವೈದಿಕರಂತೆ ಜೈನರೂ ಹರಿವಂಶವನ್ನು ಭಾರತದ ಅಂಗವೆಂದು ಗಣಿಸಿದ್ದರು.

## ವಿದೇಶಗಳಲ್ಲಿ ಮಹಾಭಾರತ

ಹರಿವಂಶಸಹಿತವಾದ ಮಹಾಭಾರತವು ಕ್ರಿ. ಶ. 4–5ನೆಯ ಶತಕಗಳಲ್ಲಿ ಜಾವಾ ಮತ್ತು ಬಾಲೀ ದ್ವೀಪಗಳಿಗೆ ಹೋದಂತೆ ತಿಳಿದುಬರುತ್ತದೆ. ಅಲ್ಲಿಯ ಪ್ರಾಚೀನ ಭಾಷೆಯಾದ ಕವಿಭಾಷೆಗೆ ಇದು ಪರಿವರ್ತಿತವಾಗಿದೆ. ಆದಿ, ವಿರಾಟ, ಉದ್ಯೋಗ, ಭೀಷ್ಮ, ಆಶ್ರಮವಾಸ, ಮುಸಲ ಪ್ರಾಸ್ಥಾನಿಕ ಮತ್ತು ಸ್ವರ್ಗಾರೋಹಣ–ಈ ಎಂಟು ಪರ್ವಗಳು ಮುದ್ರಿತವಾಗಿವೆ. ಅಲ್ಲಲ್ಲಿ ಮೂಲ ಸಂಸ್ಕೃತಶ್ಲೋಕಗಳೂ ಈ ಭಾಷಾಂತರದಲ್ಲಿ ಉಪಲಬ್ಧವಾಗುತ್ತವೆ. ಅಲ್ಲದೆ ಟಿಬೆಟ್ಟಿನಲ್ಲಿ ಟಿಬೆಟ್ ಭಾಷೆಗೆ ಪರಿವರ್ತಿತವಾದ ಭಾರತವು ದೊರೆಕಿದೆ. ಕ್ರಿ. ಪೂ. 320ರಲ್ಲಿ

ಚಂದ್ರಗುಪ್ತನ ಆಸ್ಥಾನದಲ್ಲಿ ಮೆಗಾಸ್ತನೀಸ್ ಎಂಬ ಗ್ರೀಕ್ ರಾಯಭಾರಿ ಇದ್ದನು. ಅವನ ಬರವಣಿಗೆಯಲ್ಲಿ ಮಹಾಭಾರತದ ವಿಷಯ ಬಂದಿದೆ. ಹೆರಕ್ಲಿಜನೆಂಬುವವನನ್ನು ಶೌರಸೇನೀ ಜನರು ಪೂಜಿಸುತ್ತಿದ್ದರೆಂದೂ, ಅವರು ಮಥುರೆಯಲ್ಲಿ ವಾಸಿಸುತ್ತಿದ್ದರೆಂದೂ ಅವನು ಹೇಳಿದ್ದಾನೆ. ಹೆರಕ್ಲಿಜನೆಂದರೆ ಹರಿಕೃಷ್ಣನೇ ಎಂದು ಶೋಧಕರು ನಿರ್ಣಯಿಸಿದ್ದಾರೆ. ಕಾಂಬೋಡಿಯಾದಲ್ಲಿ 7ನೆಯ ಶತಕದ ಒಂದು ಶಿಲಾಶಾಸನ ದೊರಕಿದೆ. ಅದರ ಪ್ರಕಾರ ಲಾವೋಸಿನಲ್ಲಿ ಭಾರತವು ಪವಿತ್ರ ಗ್ರಂಥವೆನಿಸಿತು. ಅಲ್ಲದೆ ಸೋಮಶರ್ಮನೆಂಬ ಅಲ್ಲಿಯ ರಾಜನು ದೇವಸ್ಥಾನವನ್ನು ಕಟ್ಟಿಸಿ ರಾಮಾಯಣ, ಭಾರತ, ಮತ್ತಿತರ ಪುರಾಣಗಳ ಪುಸ್ತಕಗಳನ್ನು ದಾನಮಾಡಿ ಪ್ರತಿ ದಿನ ಅವುಗಳ ಪಾರಾಯಣವನ್ನೇರ್ಪಡಿಸಿದ್ದನು.

ವಿಮರ್ಶೆ

ಮಹಾಭಾರತವು ವೈದಿಕಸಂಸ್ಕೃತಿಯ ಉಪಬೃಂಹಣ. ಆಧುನಿಕ ಇತಿಹಾಸಕ್ಕೆ ಅಸ್ಫುಟವಾಗಿರುವ ಲೌಕಿಕಪರಿಸ್ಥಿತಿಯನ್ನೂ, ದಾರ್ಶನಿಕ ವಿಚಾರಸರಣಿಯನ್ನೂ ನಿರೂಪಿಸುವ ದಾಖಲೆ ಇದೊಂದೆ. ಅನಂತರದ ಧಾರ್ಮಿಕಜೀವನದ ಮೇಲೆ ಪ್ರಭಾವನ್ನು ಬೀರಿ ಅದನ್ನು ರೂಪಿಸಿದ್ದು ಈ ಗ್ರಂಥವೇ. ಭಾರತಕಥೆಯ ಪರಿಚಯವಿಲ್ಲದ ಭಾರತೀಯರಿಲ್ಲವೆನ್ನಬಹುದು. ಇದನ್ನು ದೇವಸ್ಥಾನ ಮುಂತಾದ ಸಾರ್ವಜನಿಕ ಸ್ಥಳದಲ್ಲಿ ಪ್ರವಚನ ಮಾಡುವ ಪದ್ಧತಿ ಹಿಂದಿನಿಂದ ನಡೆಯುತ್ತಿದೆ. ಬಾಣನು ಕಾದಂಬರಿಯಲ್ಲಿ—

'ಅದ್ಯ ತು ಚತುರ್ದಶೀತಿ ಭಗವಂತಂ ಮಹಾಕಾಲಂ ಅರ್ಚಿತುಮಿತೋ ಗತಯಾ ತತ್ರ ಮಹಾಭಾರತೇ ವಾಚ್ಯಮಾನೇ ಶ್ರುತಮಪುತ್ರಾಣಾಂ ಕಿಲನಸಂತಿ ಲೋಕಾಃ ಶುಭಾಃ । ಪುನ್ನಾಮ್ನೋ ನರಕಾತ್ ತ್ರಾಯಂತೆ ಇತಿ ಪುತ್ರ ಇತಿ' —ಎಂದು ಭಾರತವಾಚನವನ್ನು ಸ್ತುತಿಸಿದ್ದಾನೆ.

ರಾಮಾಯಣ-ಮಹಾಭಾರತಗಳು ವಿಶೇಷವಾಗಿ ಭಾರತೀಯರ ಗೌರವಾದರಗಳಿಗೆ ಪಾತ್ರವಾದ್ದರಿಂದಲೇ ಭಾಸಕಾಳಿದಾಸಾದಿ ಕವಿಗಳು ಇವೆರಡರ ಕಥಾವಸ್ತುವನ್ನವಲಂಬಿಸಿ ಸಾಹಿತ್ಯಸಂಪತ್ತನ್ನು ಬೆಳೆಸಿದರು. ರಾಮಾಯಣದೊಡನೆ ಹೋಲಿಸಿದರೆ ಭಾರತದ ವೈಶಿಷ್ಟ್ಯವು ಗೋಚರಿಸುತ್ತದೆ. ರಾಮಾಯಣವು ಕವಿಪ್ರತಿಭಾನಿರ್ಮಿತ, ವರ್ಣನಾಪ್ರಧಾನ. ಉಪದೇಶವು ಗೌಣ. ಭಾರತವು ನಿಶಿತಪ್ರಜ್ಞಾವಿಲಾಸ, ಕಥಾಪ್ರಧಾನ, ಉಪದೇಶವು ಮುಖ್ಯ. ರಾಮಾಯಣದ ವ್ಯಕ್ತಿಗಳು ಪರಿಮಿತ. ಪರಂಪರಾಸಿದ್ಧವಾದ ಧರ್ಮದ ಎಲ್ಲೆಕಟ್ಟನ್ನು ಬಲ್ಲವರು. ಶ್ರದ್ಧೆಯಿಂದ ಅದನ್ನು ಪಾಲಿಸಲು ಯತ್ನಿಸುತ್ತಾರೆ. ಭಾರತದ ವ್ಯಕ್ತಿಗಳು ಅಪರಿಮಿತ. ಧರ್ಮವನ್ನು ಸ್ವಬುದ್ಧಿಯಿಂದ ವಿವೇಚಿಸುತ್ತಾರೆ. ಧರ್ಮ, ಅಧರ್ಮಗಳ ಉಯ್ಯಾಲೆಯಲ್ಲಿ ತೂಗುತ್ತಾರೆ. ರಾಮಾಯಣವು ಪುಲಿನರಂಜಿತವಾದ ಶರತ್ಕಾಲದ ನದಿ. ಭಾರತವು ಅಲೆಯಲೆಯಾಗಿ ನುಗ್ಗುತ್ತ ಭೋರ್ಗರೆಯುವ ವರ್ಷಾಕಾಲದ ಮಹಾನದಿ. ಒಂದು ಪಂಪಾ ಸರಸ್ಸಾದರೆ ಇನ್ನೊಂದು ಅಟ್ಲಾಂಟಿಕ್ ಸಾಗರ. ರಾಮಾಯಣವು ಹೃದಯಕ್ಕೆ ಅಪ್ಯಾಯಮಾನ, ಅಲ್ಲಿ ಚಿತ್ತದ್ರುತಿ ಭಾರತವು ಬುದ್ಧಿಗೆ ತೇಜೋವಿಧಾನ, ಇಲ್ಲಿ ಚಿತ್ತವಿಸ್ತಾರ.



ಭಾರತದಲ್ಲಿರುವುದು ಕುರುಪಾಂಡವರ ಯುದ್ಧಕಥೆಯಾದರೂ ಪ್ರಮುಖನಾಗಿ ಕಾಣಿಸಿಕೊಳ್ಳತಕ್ಕವನು ಶ್ರೀಕೃಷ್ಣ, ಅವನೇ ಭಾರತದ ಕರ್ಣಧಾರ. ದ್ರೌಪದೀಸ್ವಯಂವರ ಪ್ರಸಂಗದ ವರೆಗೆ ಅವನ ಪ್ರವೇಶವಿಲ್ಲ. ಕುರುಕುಲದ ಹಿರಿಯರಾದ ಧೃತರಾಷ್ಟ್ರ-ಭೀಷ್ಮರಿದ್ದರೂ, ಗುರುಗಳಾದ ದ್ರೋಣಾಚಾರ್ಯ-ಕೃಪಾಚಾರ್ಯರಿದ್ದರೂ ಪಾಂಡವರಿಗೆ ಅನ್ಯಾಯವಾಗುತ್ತಿದೆಯೆಂಬುದು ಅವನಿಗೆ ಗೋಚರಿಸಿತು. ಪಾಂಡವರು ಧರ್ಮಭೀರುಗಳೆಂದೂ, ಮಹಾಶೂರರೆಂದೂ ಶ್ರೀಕೃಷ್ಣನು ತಿಳಿದಿದ್ದನು. ಅವರ ಕೈಹಿಡಿದೆತ್ತುವುದು ತನ್ನ ಕರ್ತವ್ಯವೆಂದು ಆ ಕರ್ಮಯೋಗಿ ನಿಶ್ಚಯಿಸಿದನು. ಧರ್ಮರಾಜ್ಯಸ್ಥಾಪನೆ ಅವನ ಧ್ಯೇಯವಾಗಿತ್ತು. ಪಾಂಡವರಲ್ಲಿದ್ದ ಧರ್ಮನಿಷ್ಠೆಯೂ, ಕಾರ್ಯವೂ ವ್ಯರ್ಥವಾಗುವುದನ್ನು ಅವನು ಸಹಿಸಲಿಲ್ಲ. ಸಾಮೋಪಾಯದಿಂದಲೇ ಕೌರವರನ್ನು ದಾರಿಗೆ ತರಲು ಸಾಕಷ್ಟು ಪ್ರಯತ್ನ ಮಾಡಿದರೂ ಫಲಿಸಲಿಲ್ಲ. ದಾನಭೇದೋಪಾಯಗಳೂ ಕೈಗೂಡಲಿಲ್ಲ. ಆಗ ದಂಡೋಪಾಯವನ್ನವಲಂಬಿಸಬೇಕಾಯಿತು.

ಶ್ರೀಕೃಷ್ಣನು ಮಹಾದಾರ್ಶನಿಕ. ಅವನ ಉಪದೇಶಸಾರವಾದ ಭಗವದ್ಗೀತೆ ಲೋಕವಿಶ್ರುತವಾದದ್ದು ; ಪಾಂಡವರ ರಾಯಭಾರಿಯಾಗಿ ಕೌರವಸಭೆಯಲ್ಲಿ ಮಾಡಿದ, ಪ್ರಭಾವಶಾಲಿಯಾದ ಉಜ್ವಲಭಾಷಣ ಅವನ ವಾಗ್ಮಿತೆಗೆ ಸಾಕ್ಷಿ. ಅವನು ಅಸಹಾಯಶೂರನೂ, ರಾಜಕೀಯಪಟುವೂ, ಗುಣಪಕ್ಷಪಾತಿಯೂ ಆಗಿದ್ದನಲ್ಲದೆ, ಆ ಯುಗದಲ್ಲಿ ಗೌರವಾನ್ವಿತನಾದ ಆದರ್ಶವ್ಯಕ್ತಿಯಾಗಿದ್ದನು.

ಕನ್ನಡದ ಪಂಪಮಹಾಕವಿಯು ತನ್ನ ವಿಕ್ರಮಾರ್ಜುನವಿಜಯದಲ್ಲಿ ಹೇಳಿದ ಈ ಪದ್ಯವು ಭಾರತದ ಇತರ ಮುಖ್ಯಪಾತ್ರಗಳನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ.

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ ।
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
ರ್ಮಲಚಿತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ ॥

ರಾಮಾಯಣದಲ್ಲಿ ಮೊದಲು ಕೈಕೇಯಿಯ, ಆ ಮೇಲೆ ರಾವಣನ ಛಲಗಳೇ ರಾಮಾಯಣದ ವಿಸ್ತರಕ್ಕೆ ಕಾರಣವಾದರೆ, ಭಾರತದಲ್ಲಿ ದುರ್ಯೋಧನನ ಛಲ ಒಂದೇ ಮೂಲವಾಗಿದೆ. ಭೀಷ್ಮ, ವಿದುರಾದಿಗಳ ಯಾವ ಉಪದೇಶಕ್ಕೂ ಅವನು ಜಗ್ಗಲಿಲ್ಲ. ಭೀಮನ ಗದಾಘಾತದಿಂದ ತೊಡೆ ಮುರಿದು ಬಿದ್ದಾಗಲೂ ತನ್ನ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ಆಗಲೂ ಆತ್ಮಪ್ರಶಂಸೆ—

ಅಧೀತಂ ವಿಧಿವದ್ದತ್ತಂ ಭೂಃ ಪ್ರಶಾಸ್ತಾ ಸಸಾಗರಾ ।
ಮೂರ್ಧ್ನಿ ಸ್ಥಿತಮಮಿತ್ರಾಣಾಂ ಕೋ ನು ಸ್ವಂತತರೋ ಮಯಾ ॥
ದೇವಾರ್ಹಾ ಮಾನುಷಾ ಭೋಗಾಃ ಪ್ರಾಪ್ತಾ ಅಸುಲಭಾ ನೃಪೈಃ ।
ಐಶ್ವರ್ಯಂ ಚೋತ್ತಮಂ ಪ್ರಾಪ್ತಂ ಕೋ ನು ಸ್ವಂತತರೋ ಮಯಾ ॥

ಸಸಂಹೃತ್ ಸಾನುಗಶ್ಚೈವ ಸ್ವರ್ಗಂ ಗಂತಾಹಮಚ್ಯುತ ।
ಯೂಯಂ ನಿಹತಸಂಕಲ್ಪಾಃ ಶೋಚಂತೋ ವರ್ತಯಿಷ್ಯಥ ॥ ಶಲ್ಯ 16

ಕರ್ಣನು ಸತ್ಯಸಂಧನೂ, ಶೂರನೂ, ದಾನಿಯೂ ಹೌದು. ಕೆಲವು ಧೀರೋದಾತ್ತ ಗುಣಗಳು ಅವನಲ್ಲಿದ್ದವು. ಬಾಲ್ಯದ ಸಂಸ್ಕಾರದೋಷದಿಂದಲೂ, ಶಕುನಿ ಮುಂತಾದ ಕುಟಿಲ ಜನರ ಸಹವಾಸದಿಂದಲೂ ಕೆಲವು ದುರ್ಗುಣಗಳೂ ಸೇರಿಕೊಂಡಿದ್ದವು. ತಾನು ಕುಂತಿಯ ಮಗನೆಂದು ತಿಳಿದಾಗ ಅವನು ಧರ್ಮಸಂಕಟಕ್ಕೆ ಈಡಾದನು. ತನ್ನನ್ನು ಪೋಷಿಸಿ ಅಂಗರಾಜ ಪದವಿಯನ್ನಿತ್ತ ದುರ್ಯೋಧನನ ಪಕ್ಷವನ್ನು ವಹಿಸುವುದೇ ಯುಕ್ತವೆಂದು ನಿಶ್ಚಯಿಸಿಕೊಂಡನು. ಪಾಂಡವರ ಕಡೆಗೆ ಬಾ ಎಂದು ಹೇಳಿದ ಶ್ರೀಕೃಷ್ಣನಿಗೆ ಅವನು ಕೊಟ್ಟ ಉತ್ತರ ಮಾರ್ಮಿಕವಾಗಿದೆ,

ಜಾನನ್ ಕಿಂ ಮಹಾಬಾಹೋ ಸಂಮೋಹಯಿತುಮಿಚ್ಛಸಿ ।
ಯೋಽಯಂ ಪೃಥಿವ್ಯಾಃ ಕಾರ್ತ್ಸ್ನ್ಯೇನ ವಿನಾಶಃ ಸಮುಪಸ್ಥಿತಃ ॥
ನಿಮಿತ್ತಂ ತತ್ರ ಶಕುನಿರಹಂ ದುಃಶಾಸನಸ್ತಥಾ ।
ದುರ್ಯೋಧನಶ್ಚ ನೃಪತಿಃ ಧೃತರಾಷ್ಟ್ರಸುತೋಽಭವತ್ ॥

ಅಧರ್ಮಮಾರ್ಗದಲ್ಲಿ ಹೋಗುವ ತಮಗೆ ಜಯವಾಗದೆಂದು ಅವನಿಗೆ ಅನ್ನಿಸಿತ್ತು—

ಅಹಂ ಚಾನ್ಯೇ ಚ ರಾಜಾನೋ ಯಚ್ಚ ತತ್ ಕ್ಷತ್ರಮಂಡಲಂ ।
ಗಾಂಡೀವಾಗ್ನಿಂ ಪ್ರವೇಕ್ಷ್ಯಾಮ ಇತಿ ಮೇ ನಾಸ್ತಿ ಸಂಶಯಃ ॥ —ಉದ್ಯೋ. 143

ಆಮೇಲೆ ಕುಂತಿ ಕರ್ಣನನ್ನು ನೋಡಲು ಬರುತ್ತಾಳೆ. ಕರ್ಣನಿಗೆ ತಾನು ಕುಂತೀಪುತ್ರ ಸೂರ್ಯಾಂಶಜಾತನೆಂದು ನಿಶ್ಚಿತವಾಗಿತ್ತು. ತಾಯಿಗೆ ವಂದಿಸುತ್ತ ಅವನಾಡುವ ಮಾತು ವ್ಯಂಗ್ಯ ಗರ್ಭವಾದ್ದು

'ರಾಧೇಯೋಽಯಮಾಧಿರಥಿಃ ಕರ್ಣಸ್ತ್ವಾಮಭಿವಾದಯೇ ।'

ಕರ್ಣನು ಕುಂತಿಯ ಬೇಡಿಕೆಯನ್ನು ನಿರಾಕರಿಸುತ್ತ "ಅಮ್ಮ, ನನಗೆ ಕ್ಷತ್ರಿಯೋಚಿತವಾದ ಸಂಸ್ಕಾರವು ನಡೆಯಲಿಲ್ಲ. ಶತ್ರುವೂ ಮಾಡದ ಕೇಡನ್ನು ನನಗೆ ಮಾಡಿದ್ದೀಯೆ. ತಾಯಿಯಂತೆ ನೀನು ನಡೆಯಲಿಲ್ಲ ಕೌರವರಿಗೆ ಕಷ್ಟ ಬಂದಾಗ ಅವರನ್ನು ತ್ಯಜಿಸಲೆ ? ಜನರು ನನ್ನನ್ನು ಹೇಟಿ ಎಂದಾರು, ಕೃತಘ್ನನೆಂದಾರು. ಒಳ್ಳೆಯದು, ನಿನ್ನ ಮಕ್ಕಳಲ್ಲಿ ಅರ್ಜುನನೊಬ್ಬನನ್ನು ಬಿಟ್ಟು ಉಳಿದವರನ್ನು ನಾನು ಕೊಲ್ಲುವುದಿಲ್ಲ ! ಏಕೆಂದರೆ,

ಅರ್ಜುನಂ ಹಿ ನಿಹತ್ಯಾಜೌ ಸಂಪ್ರಾಪ್ತಂ ಸ್ಯಾತ್ ಫಲಂ ಮಯಾ ।
ಯಶಸಾ ಚಾಪಿ ಯುಜ್ಯೇಯಂ ನಿಹತಃ ಸವ್ಯಸಾಚಿನಾ ॥

ಹೇಗಿದ್ದರೂ ನಿನಗೆ ಐವರು ಪುತ್ರರು ಉಳಿಯುತ್ತಾರೆ.

ನ ತೇ ಜಾತು ನ ಶಿಷ್ಯಂತಿ ಪುತ್ರಾಃ ಪಂಚ ಯಶಸ್ವಿನಿ ।
ನಿರರ್ಜುನಾಃ ಸಕರ್ಣಾ ವಾ ಸಾರ್ಜುನಾ ವಾ ಹತೇ ಮಯಿ ॥ —ಉದ್ಯೋ. 146



ಯುದ್ಧಾಂತ್ಯದಲ್ಲಿ ಧರ್ಮರಾಜನು ಹತರಾದ ದುರ್ಯೋಧನಾದಿಗಳ ದಹನಕ್ರಿಯೆಯನ್ನು ನಡೆಸಿ, ಮೃತರಿಗೆ ತರ್ಪಣವನ್ನೀಯಲು ತಮ್ಮಂದಿರೊಡನೆ ಗಂಗಾನದಿಯಲ್ಲಿ ಇಳಿದಿದ್ದಾನೆ. ಎಲ್ಲರ ಹೆಸರು ಹೇಳಿ ತರ್ಪಣವನ್ನು ಕೊಟ್ಟಿದ್ದಾನೆ. ಕುಂತಿಗೆ ಶೋಕ ಉಕ್ಕಿತು. ರಹಸ್ಯವನ್ನು ಮುಚ್ಚಲು ಸಾಧ್ಯವಾಗಲಿಲ್ಲ ಅವಳು—

ಯಂ ಸೂತಪುತ್ರಂ ಮನ್ಯಧ್ವಂ ರಾಧೇಯಮಿತಿ ಪಾಂಡವಾಃ ।
ಯೋ ವ್ಯರಾಜಚ್ಚ ಭೂಮಧ್ಯೇ ದಿವಾಕರ ಇವ ಪ್ರಭುಃ ॥
ಕರ್ಣಸ್ಯ ಸತ್ಯಸಂಧಸ್ಯ ಸಂಗ್ರಾಮೇಷ್ವಪಲಾಯಿನಃ ।
ಕುರುಧ್ವಮುದಕಂ ತಸ್ಯ ಭ್ರಾತುರಕ್ಲಿಷ್ಟಕರ್ಮಣಃ ॥
ಸ ಹಿ ವಃ ಪೂರ್ವಜೋ ಭ್ರಾತಾ ಭಾಸ್ಕರಾನ್ಮಯ್ಯಜಾಯತ ॥

ಎಂದು ಅಳುತ್ತ ಹೇಳಿದಳು. ಪಾಂಡವರಿಗೆ ದಿಗ್ಭ್ರಮೆಯಾಯಿತು. ಧರ್ಮರಾಜನು ಶೋಕದಿಂದ ಕುಸಿದುಹೋದನು.

ತತಃ ಶತಗುಣಂ ದುಃಖಮಿದಂ ಮಾಮಸ್ಪೃಶದ್ ಭೃಶಂ ॥
ಏವಂ ವಿಲಪ್ಯ ಬಹುಲಂ ಧರ್ಮರಾಜೋ ಯುಧಿಷ್ಠಿರಃ ।
ವ್ಯರುದಚ್ಛನಕೈ ರಾಜನ್ ಚಕಾರಾಸ್ಯೋದಕಂ ಪ್ರಭುಃ ॥

ಅನಂತರ "ಪಾಪಿಯಾದ ನಾನು ಅಣ್ಣನನ್ನು ಕೊಲ್ಲಿಸಿದೆನು. ಇನ್ನು ಮೇಲೆ ಸ್ತ್ರೀಯರಿಗೆ ಗುಟ್ಟನ್ನು ಮನಸ್ಸಿನಲ್ಲಿಯೇ ಇರಿಸಿಕೊಳ್ಳುವ ಶಕ್ತಿ ಇಲ್ಲದೆ ಹೋಗಲಿ " ಎಂದನು.

ಇತ್ಯುಕ್ತ್ವಾ ಸ ತು ಗಂಗಾಯಾ ಉತ್ತತಾರಾಕುಲೇಂದ್ರಿಯಃ ॥
—ಸ್ತ್ರೀಪರ್ವ 27

ಯುಧಿಷ್ಠಿರನು ನಿರ್ಮಲಚಿತ್ತನಾದ ಧರ್ಮಪುತ್ರನೇ. ಅವನಲ್ಲಿದ್ದ ಒಂದು ದೊಡ್ಡ ದೋಷ ದ್ಯೂತವ್ಯಸನ. ಇದರ ಅತಿರೇಕವೇ ಪಾಂಡವರಿಗೂ,ದ್ರೌಪದಿಗೂ ಇನ್ನಿಲ್ಲದ ಕಷ್ಟವನ್ನು ತಂದೊಡ್ಡಿತು. ತಮ್ಮಂದಿರನ್ನೂ, ಮಡದಿಯನ್ನೂ ಪಣವಾಗಿ ಒಡ್ಡಿದನೆಂದರೆ, ಅದು ದ್ಯೂತೋನ್ಮಾದವೇ. ದ್ರೌಪದಿಯನ್ನು ಸೋತಾಗ ದುರ್ಯೋಧನನು ಅವಳನ್ನು ಸಭಾಮಧ್ಯದಲ್ಲಿ ಅವಮಾನಗೊಳಿಸುತ್ತಾನೆ. ಭೀಮನ ಕೋಪ ಧರ್ಮರಾಜನ ಮೇಲೆ ತಿರುಗುತ್ತದೆ. ಭೀಮನ ರೋಷೋಕ್ತಿ ಇದು :—

ಭವಂತಿ ಗೇಹೇ ಬಂಧಕ್ಯಃ ಕಿತವಾನಾಂ ಯುಧಿಷ್ಠಿರ ।
ನ ತಾಭಿರಪಿ ದೀವ್ಯಂತಿ ದಯಾ ಚಾಪ್ಯಸ್ತಿ ತಾಸ್ವಪಿ ॥
ರಾಜ್ಯಮಾತ್ಮಾ ವಯಂ ಚೈವ ಕೈತವೇನ ಹೃತಂ ಪರೈಃ ।
ನ ಚ ಮೇ ತತ್ರ ಕೋಪೋಽಭೂತ್ ಸರ್ವಸ್ಯೇಶೋ ಹಿ ನೋ ಭವಾನ್ ॥
ಇಮಂ ತ್ವತಿಕ್ರಮಂ ಮನ್ಯೇ ದ್ರೌಪದೀ ಯತ್ರ ಪಣ್ಯತೇ ।
ಅಸ್ಯಾಃ ಕೃತೇ ಮನ್ಯುರಯಂ ತ್ವಯಿ ರಾಜನ್ನಿಪಾತ್ಯತೇ ॥
ಬಾಹೂ ತೇ ಸಂಪ್ರಧಕ್ಷ್ಯಾಮಿ ಸಹದೇವಾಗ್ನಿಮಾನಯ ॥
— ಸಭಾ. 68

ಯಕ್ಷಪ್ರಶ್ನೆಯ ಸಂದರ್ಭದಲ್ಲಿ ತಮ್ಮಂದಿರನ್ನು ಬದುಕಿಸಿಕೊಂಡವನು ಧರ್ಮರಾಜನೇ; ನಹುಷನು ಅಜಗರನಾಗಿ ಭೀಮನನ್ನು ಹಿಡಿದಾಗ ಅವನನ್ನು ಉಳಿಸಿಕೊಂಡದ್ದು ಧರ್ಮರಾಜನ ಧರ್ಮನಿಷ್ಠೆಯೇ.

ಭಾರತದಲ್ಲಿ ಧೀರೋದಾತ್ತನಾಯಕನೆಂದರೆ ಅರ್ಜುನ. ಅವನು ಸಾಹಸಿ ; ಶೂರ ; ಅಂತೆಯೇ ಧರ್ಮಭೀರು ; ವಿವೇಕಿ ; ದುಡುಕತಕ್ಕವನಲ್ಲ. ಆದ್ದರಿಂದಲೇ ಶ್ರೀಕೃಷ್ಣನಿಗೆ ಅರ್ಜುನನಲ್ಲಿ ಅತಿಶಯವಾದ ಪ್ರೀತಿ.

ಭೀಷ್ಮ, ದ್ರೋಣ, ಶಲ್ಯ, ವಿದುರ, ಅಶ್ವತ್ಥಾಮ, ಸಾತ್ಯಕಿ ಮೊದಲಾದ ಮಹಾವ್ಯಕ್ತಿಗಳು ಮರೆಯಲಾರದ ಮುದ್ರೆಯನ್ನು ಮನಸ್ಸಿನ ಮೇಲೆ ಒತ್ತುತ್ತಾರೆ. ಕುಂತಿ, ದ್ರೌಪದಿ, ಸುಭದ್ರೆ ಮೊದಲಾದ ಸ್ತ್ರೀಪಾತ್ರಗಳಲ್ಲಿ ದ್ರೌಪದಿಯ ಪಾತ್ರ ಹಿರಿದಾದುದು. ಪಾಂಡವರ ಸಹಧರ್ಮಿಣಿಯಾಗಿ ಪಡಬಾರದ ಕಷ್ಟಗಳಿಗೀಡಾದರೂ ಪಾತಿವ್ರತ್ಯದ ಆದರ್ಶವನ್ನು ಪಾಲಿಸಿಕೊಂಡು ಬಾದಳು. ಅವಳು ಪಾಂಡವರ ಶಕ್ತಿದೇವತೆ.

## ಉಪಸಂಹಾರ

ಮಹಾಭಾರತವು ಒಬ್ಬ ವ್ಯಕ್ತಿಯ ರಚನೆಯೇ ಆಗಿದ್ದಲ್ಲಿ ಆತನ ಮೇದಾಶಕ್ತಿ. ಕರ್ತೃತ್ವ ಶಕ್ತಿಗಳಿಗೆ ಯಾರಾದರೂ ' ನಮೋ ನಮಃ ' ಎಂದು ತಲೆಬಾಗಬೇಕು. ಪಾಶ್ಚಾತ್ಯವಾಙ್ಮಯದಲ್ಲಿ ಇಲಿಯಡ್ ಮತ್ತು ಒಡಿಸ್ಸಿ ಎಂಬುವು ಬೃಹತ್ಕಾವ್ಯಗಳಂತೆ. ಅವೆರಡನ್ನೂ ಸೇರಿಸಿದರೆ ಮಹಾಭಾರತದ ಎಂಟರಲ್ಲೊಂದು ಭಾಗವಾಗುತ್ತದೆ. ಭಾರತದ ಮೂಲಕಥೆಯೇ ಅದ್ಭುತವಾದ ರಚನೆ. ಅದರ ಆರಂಭ, ವಿಸ್ತಾರ, ಮುಕ್ತಾಯಗಳ ಕಲ್ಪನೆಯೇ ವಿಸ್ಮಯಕಾರಿ. ಒಂದೊಂದು ಪ್ರಕರಣವೂ ಚೇತೋಹಾರಿಗಳಾದ ವಿವಿಧ ಭಾವಗಳ ಸಂಗಮಸ್ಥಾನ. ಶಂತನುವಿನ ಶೃಂಗಾರದಲ್ಲಿ ಆರಂಭವಾದುದ್ದು ಧರ್ಮರಾಜನ ಶಾಂತಿಯಲ್ಲಿ ಮುಕ್ತಾಯಗೊಳ್ಳುತ್ತದೆ. ನಡುವೆ ವೀರ-ಕರುಣಾದಿಗಳ ಪ್ರವಾಹ. ಹಿಡಿಂಬವಧೆ, ದ್ರೌಪದೀಸ್ವಯಂವರ, ಉತ್ತರಕುಮಾರ, ಬೃಹನ್ನಳಾಪ್ರಸಂಗ, ಕರ್ಣಭೀಮರ ಸಂವಾದ, ಕರ್ಣಶಲ್ಯರ ಸಂವಾದ, ಋಷ್ಯಶೃಂಗೋಪಾಖ್ಯಾನ ಮುಂತಾದ ಸಂದರ್ಭಗಳಲ್ಲಿ ಹಾಸ್ಯವು ಮಿನುಗಿದೆ. ಉಪಾಖ್ಯಾನಗಳಲ್ಲಿ ನಳಚರಿತ್ರೆ, ರಾಮೋಪಾಖ್ಯಾನ, ಸಾವಿತ್ರೀಕಥೆ, ತಪತೀಸಂವರಣಗಳೇ ಸ್ವತಂತ್ರವಾದ ಕಾವ್ಯಗಳೆನಿಸುತ್ತವೆ. ಅವುಗಳಲ್ಲಿ ನಳಚರಿತ್ರೆ ಪುರಾಣಚ್ಛಾಯೆಯಿಲ್ಲದ ಉತ್ತಮಕಾವ್ಯವರ್ಗಕ್ಕೆ ಸೇರುತ್ತದೆ. ಚ್ಯವನವೃತ್ತಾಂತ, ಧರ್ಮವ್ಯಾಧಪ್ರಸಂಗ. ಅಷ್ಟಾವಕ್ರ-ಬಂದಿಸಂವಾದ, ಗೃಧ್ರ-ಗೋಮಾಯುಸಂವಾದ ಮುಂತಾದ ಕಾವ್ಯಚ್ಛಾಯೆಯಿರುವ ಪ್ರಸಂಗಗಳು ನೂರಾರು.

## ಸುಭಾಷಿತಗಳು

ಮಹಾಭಾರತವೇ ಒಂದು ಸುಭಾಷಿತಭಾಂಡಾಗಾರ. ಹತ್ತು ಶ್ಲೋಕಗಳನ್ನು ಮಾತ್ರ ಇಲ್ಲಿ ಬರೆದಿದೆ,



1. ದ್ವಾವಂಭಸಿ ನಿಯೋಕ್ತವ್ಯೌ ಗಲೇ ಬದ್ಧ್ವಾ ದೃಢಾಂ ಶಿಲಾಂ
ಧನವಂತಮದಾತಾರಂ ದರಿದ್ರಂ ಚಾತಪಸ್ವಿನಂ ॥

ಉದ್ಯೋ. 33–59.

2. ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿಕಃ ।
ಉಭಾವಪಿ ಶಠಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ॥

ಅರಣ್ಯ. 32–13.

3. ದಂಡಸ್ಯೈವ ಭಯಾದೇತೇ ನ ಖಾದಂತಿ ಪರಸ್ಪರಂ ।
ಅಂಧೇ ತಮಸಿ ಮಜ್ಜೇಯುರ್ಯದಿ ದಂಡೋ ನ ಪಾಲಯೇತ್ ॥

ಶಾಂತಿ. 15–7.

4. ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂಗತಾಃ ।
ತೇ ನರಾಃ ಸುಖಮೇಧಂತೇ ಕ್ಲಿಶ್ಯತ್ಯಂತರಿತೋ ಜನಃ ॥

ಮೌದ್ಗಲ. 1–33.

5. ಪುಷ್ಪಂ ಪುಷ್ಪಂ ವಿಚಿನ್ವೀತ ಮೂಲಚ್ಛೇದಂ ನ ಕಾರಯೇತ್ ।
ಮಾಲಾಕಾರ ಇವಾರಾಮೇ ನ ಯಥಾಂಗಾರಕಾರಕಃ ॥

ಉದ್ಯೋ. 34–18.

6. ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥

ಸ್ವರ್ಗಾ. 5-62.

7. ನ ಜಾತು ಕಾಮಾನ್ನ ಭಯಾನ್ನ ಲೋಭಾತ್
ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ ।
ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ
ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥

ಸ್ವರ್ಗಾ. 5–63.

8. ಯತ್ ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ।
ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಂ ॥

ಕರ್ಣ. 69–57.

9. ಕಾಲಃ ಸೃಜತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ ।
ಸಂಹರಂತಂ ಪ್ರಜಾಃ ಕಾಲಂ ಕಾಲಃ ಶಮಯತೇ ಪುನಃ ॥

ಆದಿ. 1–248.

10. ಧನ್ಯಾನಾಮುತ್ತಮಂ ದಾಕ್ಷ್ಯಂ ಧನಾನಾಮುತ್ತಮಂ ಶ್ರುತಂ ।
ಲಾಭಾನಾಂ ಶ್ರೇಯ ಆರೋಗ್ಯಂ ಸುಖಾನಾಂ ತುಷ್ಟಿರುತ್ತಮಾ ॥

ಅರಣ್ಯ. 314–74.

1. ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥

2. ನಮೋ ವಿದ್ಯಾಘದೀಪೂರ್ಣಶಾಸ್ತ್ರಾಬ್ಧಿಸಕಲೇಂದವೇ ।
ಪೀಯೂಷರಸಸಾರಾಯ ಕವಿವ್ಯಾಪಾರವೇಧಸೇ ॥ —ಕ್ಷೇಮೇಂದ್ರ

3. ನಮಃ ಸರ್ವವಿದೇ ತಸ್ಮೈ ವ್ಯಾಸಾಯ ಕವಿವೇಧಸೇ ।
ಚಕ್ರೇ ಪುಣ್ಯಂ ಸರಸ್ವತ್ಯಾ ಯೋ ವರ್ಷಮಿವ ಭಾರತಂ ॥ —ಬಾಣ

4. ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತದ್ರುಮಃ ॥ —ಆದಿಪರ್ವ 1-92.

5. ಶ್ರವಣಾಂಜಲಿಪುಟಪೇಯಂ ವಿರಚಿತವಾನ್ ಭಾರತಾಖ್ಯಮಮೃತಂ ಯಃ ।
ತಮಹಮರಾಗಮಕೃಷ್ಣಂ ಕೃಷ್ಣದ್ವೈಪಾಯನಂ ವಂದೇ ॥ —ಭಟ್ಟನಾರಾಯಣ.

---



# ಸಂಸ್ಕೃತ ಕಾವ್ಯದ ವಿವಿಧ ಪ್ರಕಾರಗಳು, ಅವುಗಳ ಸ್ವರೂಪ ಮತ್ತು ವಿಕಾಸ

ಸಂಸ್ಕೃತಲಕ್ಷಣಕಾರರೆಲ್ಲ ಕಾವ್ಯದ ಸಾಮಾನ್ಯ ಲಕ್ಷಣಗಳನ್ನು ಹೇಳುವುದರಲ್ಲಿಯೇ ಹೆಚ್ಚು ಆಸಕ್ತಿ ತೋರಿಸಿದ್ದಾರೆ ; ವಿಶಿಷ್ಟಪ್ರಕಾರಗಳಾದ 'ಮಹಾಕಾವ್ಯ', ಗದ್ಯ, ಚಂಪೂ, ಖಂಡಕಾವ್ಯ, ರೂಪಕಾದಿಗಳ ವಿಸ್ತೃತವಿವೇಚನೆಗೆ ಅಷ್ಟಾಗಿ ಹೋಗುವುದಿಲ್ಲ. ಕಾವ್ಯವು ಗದ್ಯಶೈಲಿಯಲ್ಲಿರಲಿ, ಪದ್ಯಶೈಲಿಯಲ್ಲಿರಲಿ, ಮಿಶ್ರಶೈಲಿಯಲ್ಲಿರಲಿ, ಅದಕ್ಕೆಲ್ಲ ಒಂದೇ ಲಕ್ಷಣ ಅನುಸತವಾಗುತ್ತದೆ. ಪ್ರಾಕೃತ, ಅಪಭ್ರಂಶಾದಿಭಾಷೆಗಳಲ್ಲಿ ರಚಿತವಾದರೂ ಸರಿಯೆನಿಸಿ ಅದೇ ಸಾಮಾನ್ಯ ಲಕ್ಷಣವೆನ್ನುತ್ತಾರೆ. ಆದ್ದರಿಂದ ಈ ವಿಭಾಗಗಳು ನಾವು ನಮ್ಮ ಸೌಕರ್ಯಕ್ಕಾಗಿ ಮಾಡಿಕೊಳ್ಳುವ ಕಲ್ಪನೆಗಳೇ ಹೊರತು, ಮೂಲತಃ ಎಲ್ಲವೂ ಕಾವ್ಯವೇ. ಅವಕ್ಕೆಲ್ಲ ಸಾಮಾನ್ಯವಾದ ಲಕ್ಷಣಗಳನ್ನು ಮೊದಲು ಅರಿತರೆ, ಅನಂತರ ಸುಲಭವಾಗಿ ಅವುಗಳ ವಿಶಿಷ್ಟ ಲಕ್ಷಣಗಳನ್ನು ಸ್ವಲ್ಪದರಲ್ಲಿ ಕಂಡುಕೊಳ್ಳಬಹುದೆಂಬುದು ನಮ್ಮ ಲಾಕ್ಷಣಿಕರ ಮನೋಧರ್ಮ. ಪಾಶ್ಚಾತ್ಯರಲ್ಲಿ ಹೀಗಿಲ್ಲ. ಅವರು ವಿಶಿಷ್ಟ ಲಕ್ಷಣಗಳಿಗೇ ಸಾಮಾನ್ಯ ಲಕ್ಷಣಕ್ಕಿಂತ ಹೆಚು ಪ್ರಾಶಸ್ತ್ಯ ನೀಡುತ್ತಾರೆ.

ಕಾವ್ಯವು ಒಂದು ಕಲೆ. ಅದು ಶಾಸ್ತ್ರಕ್ಕಿಂತ ಭಿನ್ನ. ಶಾಸ್ತ್ರದಲ್ಲಿ ಬುದ್ಧಿಗ್ರಾಹ್ಯ ವಿಚಾರ ಪ್ರತಿಪಾದನೆ ಪ್ರಧಾನ ; ಕಾವ್ಯದಲ್ಲಿ ನವೋನ್ಮೇಷದಿಂದ ಹೊಮ್ಮುವ ರಸಕ್ಕೇ ಪ್ರಾಶಸ್ತ್ಯ ; ಪ್ರತಿಭಾಶಾಲಿಯಾದವನೇ ಕವಿ. ಅವನ ಕರ್ಮವೇ ಕಾವ್ಯ :—

ದ್ವೇ ವರ್ತ್ಮನೀ ಗಿರಾಂ ದೇವ್ಯಾಃ ಶಾಸ್ತ್ರಂ ಚ ಕವಿಕರ್ಮ ಚ ।
ಪ್ರಜ್ಞೋಪಜ್ಞಂ ತಯೋರಾದ್ಯಂ ಪ್ರತಿಭೋದ್ಭವಮಂತಿಮಮ್ ॥
ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ ಮತಾ ।
ತದನುಪ್ರಾಣನಾಜ್ಜೀವದ್ವರ್ಣನಾನಿಪುಣಃ ಕವಿಃ ॥
ತಸ್ಯ ಕರ್ಮ ಸ್ಮೃತಂ ಕಾವ್ಯಂ . . . ॥ —ಭಟ್ಟತೌತ.

ಹೀಗೆ ಕಾವ್ಯದ ಜೀವಾಳವೆಂದರೆ ರಸಸ್ಯಂದಿಯಾದ ವರ್ಣನಾಂಶವೇ ಸರಿ. ಶಾಸ್ತ್ರವನ್ನು ವಿದ್ಯಾವಂತರೆಲ್ಲರೂ ಅರಿಯಲು ಶಕ್ಯವಿದೆ ; ಆದರೆ ಕಾವ್ಯದ ಸೌಂದರ್ಯವನ್ನು ಸಹೃದಯರಾದ ರಸಿಕರು ಮಾತ್ರ ಸವಿಯಬಲ್ಲರು ; ಉಪದೇಶದಿಂದ ಶಾಸ್ತ್ರಜ್ಞಾನ ಶಕ್ಯ ; ಕಾವ್ಯಪ್ರತಿಭೆ ಅಶಕ್ಯ. ಅದಕ್ಕೆ ಸರಸ್ವತಿಯ ವರಪ್ರಸಾದವೇ ಬೇಕು.

'ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಽಪ್ಯಲಮ್ ।
ಕಾವ್ಯಂ ತು ಜಾಯತೇ ಜಾತು ಕಸ್ಯಚಿತ್ ಪ್ರತಿಭಾವತಃ ॥ —ಭಾಮಹ.

ಹೀಗೆ ಕಾವ್ಯ-ಶಾಸ್ತ್ರಗಳಿಗೆ ಉಪಾಯದಲ್ಲಿ ಭೇದವಿದ್ದರೂ ಮುಖ್ಯ ಗುರಿಯಲ್ಲಿ ಭೇದವಿಲ್ಲ. ಧರ್ಮ, ಕಾಮ, ಅರ್ಥ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಪರಿಚಯವನ್ನೂ ಜನರಿಗೆ ಉಪದೇಶಮಾಡಿಸುವ ಗುರಿ ಎರಡಕ್ಕೂ ಸಮಾನವೇ. ಆದರೆ ಶಾಸ್ತ್ರ ಕಹಿ ಗುಳಿಗೆಯಂತಿದ್ದರೆ ಕಾವ್ಯ ಅದಕ್ಕೆ ಲೇಪಿಸಿದ ಸಿಹಿಪದಾರ್ಥದಂತೆ. ಕುಂತಕನೆಂಬ ಲಕ್ಷಣಕಾರನು ಹೇಳುವಂತೆ ಶಾಸ್ತ್ರದಲ್ಲಿ ಕಾರ್ಕಶ್ಯಾದಿ ದೋಷಗಳಿಂದ ಜನರಿಗೆ ಸಹಜಪ್ರವೃತ್ತಿಯೇ ದುಷ್ಕರ; ಆದರೆ ಕಾವ್ಯ ರೋಚಕವಾಗಿದ್ದು ಎಂತಹವರನ್ನಾದರೂ ಆಕರ್ಷಿಸಿಕೊಳ್ಳುತ್ತದೆ. ತತ್ತ್ವದರ್ಶನವಿದ್ದವನು ಶಾಸ್ತ್ರಕಾರನಾಗಬಹುದು; ಆದರೆ ಕವಿಯೆನಿಸಬೇಕಾದರೆ ಅವನಿಗೆ ವರ್ಣನಾಕೌಶಲವೂ ಇರಬೇಕಾಗುತ್ತದೆ. ಕಾವ್ಯಜಗತ್ತಿನಲ್ಲಿ ಕವಿಗೇ ಚಕ್ರವರ್ತಿತ್ವ ಪದವಿ; ಅವನು ತನ್ನ ಪ್ರತಿಭಾನುಸಾರ ಸ್ವತಂತ್ರನಾಗಿ ಹೇಗೆ ಬೇಕಾದರೂ ಸೃಷ್ಟಿಮಾಡಬಹುದು :—

ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ ।
ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ ॥ —ಆನಂದವರ್ಧನ.

ಹೀಗೆ ಕಾವ್ಯಸಾಮಗ್ರಿಯಲ್ಲಿ ಪ್ರತಿಭೆಗೆ ಅಗ್ರಸ್ಥಾನವಾದರೂ, ಅದು ನಿರ್ದುಷ್ಟವೂ ಬಹುಮುಖವೂ ಆದ ಶಾಸ್ತ್ರವ್ಯುತ್ಪತ್ತಿ, ನಿರಂತರಾಭ್ಯಾಸಗಳಿಂದ ಒಡಗೂಡಿದಾಗ ಮಾತ್ರ ಚಿರಸ್ಥಾಯಿಯಾದ ಮಹಾಕವಿತ್ವವನ್ನು ನೀಡಬಲ್ಲುದು : ಕವಿಗೆ ಆಚಂದ್ರಾರ್ಕವಾದ ಕೀರ್ತಿಯೇ ಮುಖ್ಯ ಲಕ್ಷಣವಾಗಿರಬೇಕು. ರಾಜರಿಂದ, ಜನರಿಂದ ಬರಬಹುದಾದ ಬಹುಮಾನಾದಿಗಳು ಲೌಕಿಕ ಫಲ; ಕೀರ್ತಿ ಸ್ವರ್ಗಫಲ. ಕೀರ್ತಿ ಬರಲು ಜನರ ಮೆಚ್ಚುಗೆ ಹೃತ್ಪೂರ್ವಕವಾಗಬೇಕಾಗುತ್ತದೆ. ಇದು ರಸಸಿದ್ಧಿಯಿಂದ ಮಾತ್ರ ಶಕ್ಯ.

ಕಾವ್ಯದಲ್ಲಿ ದೋಷಗಳೊಂದೂ ಇರಬಾರದು. ದೋಷಗಳಲ್ಲಿ ವ್ಯಾಕರಣದೋಷ, ಛಂದೋದೋಷ, ತರ್ಕದೋಷ ಮುಂತಾದುವೆಲ್ಲ ಸೇರುವಂತೆ, ರಸದೃಷ್ಟಿಯಿಂದ ಅನೌಚಿತ ದೋಷವೂ ಪ್ರಧಾನವಾಗುತ್ತದೆ.

ಕಾವ್ಯಶರೀರ ಮತ್ತು ಕಾವ್ಯದ ಆತ್ಮ ಎಂದು ಕಾವ್ಯವನ್ನು ವಿಭಾಗಿಸಿಕೊಂಡರೆ ಈ ಎರಡು ಅಂಶಗಳಲ್ಲಿಯೂ ಶಬ್ದಾರ್ಥಗಳು ಗುಣಭರಿತವಾಗಿರಬೇಕು; ಬಾಹ್ಯಶರೀರದ ಸೌಂದರ್ಯವನ್ನು ಹೆಚ್ಚಿಸಲು ಶಬ್ದಾರ್ಥಾಲಂಕಾರಗಳೂ, ಆತ್ಮರೂಪೀ ರಸಸೌಂದರ್ಯದ ಧರ್ಮಗಳಾದ ಕಾವ್ಯಗುಣಗಳೂ ಸ್ಪಷ್ಟವಾಗಿರಬೇಕು. ಇವೆಲ್ಲ ಸಾಮಾನ್ಯವಾಗಿ ಲಕ್ಷಣಕಾರರೆಲ್ಲ ಮೂಲಭೂತವಾಗಿ ಒಪ್ಪುವ ಮಾತುಗಳು. ಅವರಲ್ಲಿ ಭಿನ್ನಪ್ರಸ್ಥಾನಗಳು ಬಂದಂತೆಲ್ಲ ಕೆಲವರು ಅಲಂಕಾರಾಂಶವನ್ನೋ, ಇಲ್ಲವೇ ಗುಣಾಂಶವನ್ನೋ, ಇಲ್ಲವೇ ರಸಾಂಶವನ್ನೋ ಹೆಚ್ಚು ಅವಧಾರಣೆಯಿಂದ ಒತ್ತಿ ಹೇಳುವ ಭರದಲ್ಲಿ, ಇತರರಿಗಿಂತ ತಮ್ಮ ವಾದವೇ ಯುಕ್ತತರವೆಂದು ನಿದರ್ಶಿಸುವ ಉತ್ಸಾಹದಲ್ಲಿ ವಕ್ರೋಕ್ತಿ, ಧ್ವನಿ, ಔಚಿತ್ಯ ಮುಂತಾದ ಭಿನ್ನವಾದಗಳನ್ನು ಮುಂದೆ ಮಾಡಿದ್ದಾರೆ ಕವಿವ್ಯಾಪಾರಕ್ಕೇ ಪರಮಪ್ರಾಶಸ್ತ್ಯವನ್ನೀಯುತ್ತ ಅಲಂಕಾರ್ಯ-ಅಲಂಕಾರಗಳ ಸಾಹಿತ್ಯವನ್ನು ಎತ್ತಿ ತೋರಿಸುವ ಹವಣಿಕೆ ವಕ್ರೋಕ್ತಿಪ್ರಸ್ಥಾನದ್ದು; ಗುಣಗಳಲ್ಲಿಯೇ



ರಸಗಳನ್ನೂ ಅಂತರ್ಭಾವ ಮಾಡಿ, ಅದರ ಆತ್ಮತತ್ತ್ವ ರೀತಿಯೆನ್ನುವ ಒಂದು ಪ್ರಸ್ಥಾನವೂ ಉಂಟು; ರಸವೆಂದೂ ವಾಚ್ಯವಲ್ಲ, ಅದರ ಆಸ್ವಾದ ಧ್ವನಿಮಾರ್ಗದಿಂದ ಮಾತ್ರವೆಂದು ತೋರಿಸಿ, ಕಾವ್ಯದ ಪರಮಾರ್ಥವೇ ಧ್ವನಿಯೆಂಬುದು ಆನಂದವರ್ಧನನ ಬಹುಜನಸಮ್ಮತವಾದ ತತ್ತ್ವ. ರಸ ರಸವೆನಿಸುವುದೇ ಔಚಿತ್ಯದಿಂದಾದ ಕಾರಣ ಮುಖ್ಯಸ್ಥಾನ ಔಚಿತ್ಯಕ್ಕೇ ಸಲ್ಲಬೇಕೆನ್ನುವುದು ಇನ್ನೊಂದು ವಾದ. ಆದರೆ ಇಷ್ಟು ಪ್ರಸ್ಥಾನಭೇದಗಳಿದ್ದರೂ ಕೂಡ ಕಾವ್ಯದಲ್ಲಿ ಶೋಭೆಯಿರಲೇಬೇಕು; ಬಾಹ್ಯಶೋಭೆಗಾಗಿ ಗುಣಾಲಂಕಾರಾದಿಗಳೂ, ಆಂತರ ಶೋಭೆಗಾಗಿ ರಸ, ವಸ್ತುಸ್ವಭಾವಾದಿಗಳೂ ಔಚಿತ್ಯಪೂರ್ಣವಾಗಿ ಸಮಾವಿಷ್ಟವಾಗಿರಲೇಬೇಕೆಂಬುದು ಸರ್ವಸಂಪ್ರತಿಪನ್ನ.

ಅಲಂಕಾರ, ಗುಣ, ದೋಷ, ರಸಭಾವಾದಿಗಳ ವಿಸ್ತೃತವಿವೇಚನೆಯೇ ಅಲಂಕಾರಶಾಸ್ತ್ರ. ಕಾಲದಿಂದ ಕಾಲಕ್ಕೆ ಇವುಗಳ ಸಂಖ್ಯೆ ಮತ್ತು ಲಕ್ಷ್ಯ-ಲಕ್ಷಣಗಳಲ್ಲಿ ವಿಕಾರವಾಗುವುದನ್ನು ನೋಡುತ್ತೇವೆ. ಸಂಸ್ಕೃತ ಕವಿಗಳು ಸಕಲಶಾಸ್ತ್ರಗಳಲ್ಲೂ ಬಹುಶ್ರುತರಾಗಿರಬೇಕೆಂದು ಸಾಮಾನ್ಯವಾಗಿ ಹೇಳಲಾಗುತ್ತಿದ್ದರೂ, ನೇರವಾಗಿ ಅವರ ವ್ಯುತ್ಪತ್ತಿಗೆ ವ್ಯಾಕರಣ, ಅಲಂಕಾರ, ಛಂದಸ್ಸು, ಕಾಮ, ಅರ್ಥ—ಈ ಐದು ಶಾಸ್ತ್ರಗಳು ತುಂಬಾ ಪ್ರಯೋಜಕವಾಗಿದ್ದವು. ಇವನ್ನು ಕವಿಗಳ ಶಿಕ್ಷೆಯಲ್ಲಿ ಮುಖ್ಯಾಂಗಗಳೆಂದು ಭಾವಿಸುತ್ತಿದ್ದರು. ಈ ನಾಲ್ವರಲ್ಲಿ ಪ್ರಾವೀಣ್ಯವಿಲ್ಲದೆ ಕವಿಗೆ ದೋಷಾಭಾವವೇ ಸಿದ್ಧಿಸುವಂತಿರಲಿಲ್ಲ. ಆದ್ದರಿಂದ ಸಂಸ್ಕೃತದಲ್ಲಿ ಕಾವ್ಯರಚನೆ ಮಾಡಿ ಹೆಸರು ಗಳಿಸಿದವರೆಲ್ಲ ಈ ಐದು ಶಾಸ್ತ್ರಗಳ ಸೂಕ್ಷ್ಮ ಪ್ರಮೇಯಗಳನ್ನು ಬಲ್ಲವರಾಗಿರುತ್ತಿದ್ದರು. ಒಮ್ಮೊಮ್ಮೆ ಪ್ರತಿಭೆಯು ರಸದೃಷ್ಟಿಯನ್ನೂ ಈ ಪಾಂಡಿತ್ಯ ಪ್ರದರ್ಶನವಿವಕ್ಷೆ ಮೀರುವಂತಹ ಪ್ರಸಂಗಗಳು ಬರುತ್ತಿದ್ದವು. ಇವನ್ನು ಪಂಡಿತರು ಮೆಚ್ಚಿದರೂ ರಸಿಕ ಲಾಕ್ಷಣಿಕರು ಇವನ್ನು ಅನುಚಿತವೆಂದೇ ಕಡೆಗಣಿಸುತ್ತಿದ್ದರು. ರಸದೃಷ್ಟಿಯು ಏಕೈಕ ಪ್ರತಿನಿಧಿಯಾಗಿ ಮಹಾಕವಿ ಕಾಳಿದಾಸ ಮೆರೆಯುವಂತಾದುದೇ ಭಾರತೀಯರ ಉತ್ತಮ ಅಭಿರುಚಿಗೆ ಉತ್ತಮ ದ್ಯೋತಕವಾಗಿದೆ.

ಹೀಗೆ ಕವಿಜೀವನದಲ್ಲಿ ರಸಿಕತೆಗೆ ಆದ್ಯಪ್ರಾಶಸ್ತ್ಯವನ್ನು ನೀಡುತ್ತಿದ್ದುದರಿಂದಲೇ ಕವಿಯು, ವಾತ್ಸ್ಯಾಯನ ಕಾಮಶಾಸ್ತ್ರದಲ್ಲಿ ಹೇಳಿರುವ ಆದರ್ಶ ನಾಗರಕನ ಜೀವನವನ್ನು ನಡೆಸುತ್ತಿದ್ದನೆಂಬುದು ರಾಜಶೇಖರನ ಕಾವ್ಯಮೀಮಾಂಸೆಯಿಂದಲೂ ಸ್ಪಷ್ಟವಾಗುತ್ತದೆ. ಬಾಣನು ಯೌವನದಲ್ಲಿ ದೇಶಪರ್ಯಟನಕ್ಕಾಗಿ ಹೊರಟರೆ ಅವನ ಪರಿವಾರದಲ್ಲಿ ಹಲವು ಹದಿನೆಂಟು ಜಾತಿಯವರೂ, ಕಸುಬಿನವರೂ ಇದ್ದುದನ್ನು ಅವನೇ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ, ಭಾಷಾಕವಿಗಳೂ, ಜೂಜುಗಾರರು, ಹಾಸ್ಯಗಾರರು, ನಾಟ್ಯಗೀತರಸಿಕರು, ವಿಲಾಸಿನಿಯರು. ವೈದ್ಯರು, ಜೋಯಿಸರು, ಶಕುನದವರು ಇತ್ಯಾದಿ. ಸುಂದರವಾದ ಭವನ, ನಿರ್ಮಲವಾದ ವಾತಾವರಣ, ಮನೆಯ ಹೊರಗೆ ರಮ್ಯವಾದ ತೋಟ, ಗಿಳಿ-ನವಿಲು ಮೊದಲಾದ ಮುದ್ದಿನ ಪಕ್ಷಿಗಳು, ಪ್ರಾಣಿಗಳು, ಹೂಗಿಡಗಳು, ಜಲಯಂತ್ರ, ರುಚಿರವಾದ ವೇಷಭೂಷಣ, ಪರಿಚಾರಕ-ಪರಿಚಾರಿಕೆಯರು, ಬರೆದುಕೊಳ್ಳುವ ಲೇಖಕರು—ಇವೆ ಮುಂತಾದ ಸಕಲ ಸೌಕರ್ಯಗಳಿಂದ

ಕೂಡಿದ ಸುಖಜೀವನವನ್ನು ಉಲ್ಲಾಸದಿಂದ ಕವಿಗಳು ನಡೆಸಲು ಸಾಧ್ಯವಾಗುವಂತೆ ಅವರನ್ನು ಆಸ್ಥಾನಿಕರನ್ನಾಗಿ ಘೋಷಿಸುತ್ತಿದ್ದ ರಾಜರೂ ಕೂಡ ಅಷ್ಟೇ-ಕೊಡುಗೈ ದೊರೆಗಳೂ, ಸ್ವಯಂ ಕವಿಗಳೂ ಆಗಿರುತ್ತಿದ್ದರು. ಆದ್ದರಿಂದ ಸಂಸ್ಕೃತಕಾವ್ಯದಲ್ಲಿ ಚಿರಂತನವಾದ ತ್ಯಾಗಮೂಲ ಧರ್ಮಪ್ರವೃತ್ತಿಯ ಜೊತೆಗೇ ಭೋಗಜೀವನದ ವಿಲಾಸವೈಭವನ್ನು ವರ್ಣಮಯವಾಗಿ ಬಣ್ಣಿಸುವ ಪರಿಪಾಠವೂ ಸ್ಪಷ್ಟವಾಗಿಯೇ ಕಾಣಿಸುತ್ತದೆ. ಮೊದಲನೆಯ ದೃಷ್ಟಿಗೆ ಬಾಧೆ ಬಾರದಂತೆ, ಆದರೆ ಎರಡನೆ ದೃಷ್ಟಿಗೆ ಅವಕಾಶ ದೊರೆಯುವಂತೆ ಇರುವ ಪುರಾಣೇತಿಹಾಸಗಳ ಮೂಲಕಥೆಗಳನ್ನೇ ಸಾಮಾನ್ಯವಾಗಿ ಕವಿಗಳೆಲ್ಲ ಆಯ್ದುಕೊಳ್ಳುತ್ತಿದ್ದರು. ತಮ್ಮ ಅಲಂಕಾರ ಶಾಸ್ತ್ರಾದಿ ಪ್ರಾವೀಣ್ಯವನ್ನು ಮೆರೆಯಲೆಂದೇ ವರ್ಣನಾಭಾಗವನ್ನು ವಿಸ್ತಾರವಾಗಿ, ಕಲ್ಪನಾಮಯವಾಗಿ ಲಂಬಿಸುತ್ತಿದ್ದರು. ಹೀಗೆ ರಸಗಳಲ್ಲಿ ಶೃಂಗಾರ-ವೀರಗಳಿಗೆ ಪ್ರಾಧಾನ್ಯವೂ, ಮಿಕ್ಕ ರಸಗಳಿಗೆ ಗೌಣತ್ವವೂ ಬಂದವು. ಉತ್ಪ್ರೇಕ್ಷೆ, ಅತಿಶಯೋಕ್ತಿ, ರೂಪಕಾದಿ ಅರ್ಥಾಲಂಕಾರಗಳಿಗೆ ಸೀಮಿತವಾಗದೆ, ಅವರ ಕಲಾಪ್ರೌಢಿಮೆ ಶಬ್ದಶ್ಲೇಷಾದಿ ಶಬ್ದಚಮತ್ಕಾರಗಳಿಗೂ ಪಸರಿಸಿತು. ಇದರಿಂದ ವಿಶ್ವದ ಮತ್ತಾವ ಸಾಹಿತ್ಯದಲ್ಲೂ ಕಾಣಸಿಗದಂತಹ ಕುಸುರಿಕೆಲಸದ ಕಲೆಯನ್ನು ಸಂಸ್ಕೃತ ಕಾವ್ಯದಲ್ಲಿ ನಾವು ಸಂದರ್ಶಿಸುವಂತಾಗಿದೆ.

ವಾಸ್ತವ ಜೀವನದ ಯಥಾವತ್ತಾದ ಅನುಕರಣದಿಂದ ಉತ್ತಮ ಸಾಹಿತ್ಯವಾಗುವದೆಂಬುದು ಪಾಶ್ಚಾತ್ಯರ ನವೀನ ಕಲ್ಪನೆ; ಆದರ್ಶವಾದ, ಉದಾತ್ತವಾದ ಜೀವನದ ಒಂದು ಚಮತ್ಕಾರ ಹಾಗು ರಸಪೂರ್ಣ ವರ್ಣನೆಯೇ ಉತ್ತಮ ಕಾವ್ಯವೆಂಬುದು ಪ್ರಾಚೀನ ಕವಿ-ವಿಮರ್ಶಕರ ಸಿದ್ಧಾಂತ. ಆದ್ದರಿಂದ ಅಂದಿನ ಅವರ ಕಾವ್ಯವನ್ನಳೆಯಲು ಅವರ ಮಾನದಂಡಗಳನ್ನೇ ನಾವು ಮರೆಯಬಾರದು.

ಕಾವ್ಯದ ವಸ್ತು ಅಥವಾ ಕಥಾಶರೀರ ಪ್ರಸಿದ್ಧವೇ ಆಗಿರಬೇಕೆಂದು ಅವರು ಕಡ್ಡಾಯದಾಗಿ ಮಾಡಿಕೊಂಡರು. ಆದ್ದರಿಂದ ಹರ್ಷ, ಆರನೆಯ ವಿಕ್ರಮಾದಿತ್ಯ ಮುಂತಾದ ಐತಿಹಾಸಿಕ ಮಹಾರಾಜರನ್ನು ನಾಯಕರನ್ನಾಗಿ ಮಾಡಿಕೊಂಡು ಕಾವ್ಯರಚನೆಗೆ ಹೊರಟ ಬಾಣ, ಬಿಲ್ಹಣಾದಿ ಕವೀಶ್ವರರು ಕೂಡ ರಾಮ, ಧರ್ಮರಾಜಾದಿ ಮಹಾಪುರುಷರ ಗುಣಗಳನ್ನೇ ಇತಿಹಾಸ ಪುರುಷರಿಗೂ ಅನ್ವಯಿಸಿ ತಮ್ಮ ಕಾವ್ಯಗಳನ್ನು ಬರೆದಿದ್ದಾರೆ. ರಾಜರ ಮಹಿಮೆ ಲೋಕದಲ್ಲಿ ಉಳಿಯಲು ಕವಿಗಳ ವರ್ಣನೆಯೇ ಕಾರಣವೆಂಬ ಭಾವನೆ ಅವರಿಗಿದ್ದುದರಿಂದ ಸಾಮಾನ್ಯ ನರರ ಲೋಪದೋಷಗಳನ್ನು ಅವರು ಎಲ್ಲಿಯೂ ವಾಸ್ತವ ವಿಧಾನದಿಂದ ಕಾಣಿಸಲು ಬಿಡುವುದಿಲ್ಲ. ಹೀಗೆ ಮಹಾಕಾವ್ಯ, ನಾಟಕ, ಚಂಪೂ, ಗದ್ಯಕಾವ್ಯಾದಿ ಮುಖ್ಯ ಸಂಸ್ಕೃತಕಾವ್ಯ ಪ್ರಕಾರಗಳೆಲ್ಲೆಲ್ಲ ಅತಿಮಾನವರಂತಿರುವ ಮಹಾರಾಜರು, ಪೌರಾಣಿಕ ರಾಜರ್ಷಿಗಳು, ದೇವತೆಗಳು, ಯಕ್ಷ-ರಾಕ್ಷಸ, ಗಂಧರ್ವ-ಕಿನ್ನರ, ಅಪ್ಸರಾದಿಗಳೇ ಪ್ರಧಾನಪಾತ್ರಗಳಾಗಿರುತ್ತಾರೆ. ಅವರ ಭವ್ಯ ದಿವ್ಯ ಘನತೆಗೆ ಅನುಸಾರವಾಗಿ ಅವರ ವೀರ್ಯ, ಶೌರ್ಯ, ಔದಾರ್ಯಾದಿಗಳನ್ನು ನಿದರ್ಶಿಸುವ ಸನ್ನಿವೇಶಗಳ ಕಥಾರಚನೆಯಿರುತ್ತದೆ. ಆನುಷಂಗಿಕವಾಗಿ ಬರುವ ವರ್ಣನೆಗಳಲ್ಲಿ ಮಾತ್ರ ಚೈತನ್ಯತರಂಗಿತವಾದ ಪ್ರಕೃತಿಯ ಹಾವಭಾವವಿಲಾಸಗಳು ರಮ್ಯವಾಗಿ ನಮ್ಮನ್ನು



ಆಕರ್ಷಿಸುತ್ತವೆ. ಸಂಸ್ಕೃತಮಹಾಕವಿಗಳು ಗಿಡಮರಗಳಿಗೂ, ಪಶುಪಕ್ಷಿಗಳಿಗೂ, ಲತಾಕುಸುಮಗಳಿಗೂ ನವಚೇತನವನ್ನು ಧಾರೆಯೆರೆದು, ತಮ್ಮದೇ ಆದ ಒಂದು ಮಾಯಾಲೋಕವನ್ನು ಸೃಷ್ಟಿಸಿಕೊಳ್ಳುತ್ತಾರೆ. ಇದಕ್ಕೆ ಅನುಸಾರವಾಗಿ ಸಾಗುವ ಅವರ ಕಲ್ಪನಾಸೃಷ್ಟಿಗೆ ಯಾವ ವಾಸ್ತವಿಕ ಸತ್ಯವೂ ಸಂವಾದಿಯಾಗಿರಬೇಕಾಗಿಲ್ಲ. ಇದನ್ನೇ 'ಕವಿಸಮಯ' ವೆನ್ನುವ ಪರಂಪರೆಯಿಂದೆ.

ಈ ಕವಿಸಮಯಗಳಲ್ಲಿ ಕೆಲವನ್ನಿಲ್ಲಿ ಉಲ್ಲೇಖಿಸಬಹುದು :— ಕೀರ್ತಿಯು ಹಾಲಿನಂತೆ ಬಿಳುಪಾಗಿಯೂ, ಕೋಪವು ರಕ್ತದಂತೆ ಕೆಂಪಾಗಿಯೂ ಇರುವ ದ್ರವ್ಯವಿಶೇಷಗಳು, ಇವುಗಳ ಕಾಂತಿ ಬೆಳ್ದಿಂಗಳಂತೆ, ಇಲ್ಲವೆ ಸಂಧ್ಯಾರಾಗದಂತೆ ದಿಗ್ದಿಗಂತಗಳನ್ನೆಲ್ಲ ವ್ಯಾಪಿಸಬಲ್ಲದು. ಚಕ್ರವಾಕಮಿಥುನವು ರಾತ್ರಿ ಆಗಲಿ, ಬೆಳಗಾಗುವವರೆಗೂ ವಿರಹತಾಪದಿಂದ ಒಂದನ್ನೊಂದು ಉದ್ದೇಶಿಸಿ ಆಕ್ರಂದಿಸುತ್ತಿರುತ್ತವೆ. ಚಕೋರಪಕ್ಷಿ ಚಂದ್ರಿಕೆಯನ್ನಲ್ಲದೆ ಮತ್ತೇನನ್ನೂ ಸವಿಯದು ; ಚಾತಕಪಕ್ಷಿ ತಣಿಯುವುದು ಮಳೆಹನಿಗಳಿಂದ ಮಾತ್ರ ; ಅದಕ್ಕೆ ಬೇರೆ ನೀರು ಸೇರದು. ಹಂಸಪಕ್ಷಿಯು ಹಾಲುನೀರುಗಳ ಮಿಶ್ರಣವನ್ನು ಬೇರ್ಪಡಿಸಿ ಹಾಲನ್ನು ಮಾತ್ರ ಕುಡಿಯಬಲ್ಲದು. ಸರ್ಪಗಳ ಹೆಡೆ, ಆನೆಗಳ ಕುಂಭಸ್ಥಳ ಮುಂತಾದೆಡೆಗಳಲ್ಲಿ ಮುತ್ತು, ರತ್ನಗಳು ತುಂಬಿರುತ್ತವೆ. ಇವು ಭೂಲೋಕಕ್ಕೆ ಸಂಬಂಧಿಸಿದ ಕೆಲವು ಕವಿಸಮಯಗಳು. ಹೀಗೆಯೇ ಸ್ವರ್ಗ-ಪಾತಾಳಗಳಿಗೆ ಸಂಬಂಧಿಸಿದಂತಹವೂ ಅನೇಕವುಂಟು.

ಸಾಂಪ್ರದಾಯಿಕವಾಗಿ ಮಹಾಕಾವ್ಯದಲ್ಲಿ ಬರಬಹುದಾದ ವರ್ಣನೆಗಳು ಹದಿನೆಂಟು :—

ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ ।
ಉದ್ಯಾನಸಲಿಲಕ್ರೀಡಾಮಧುಪಾನರತೋತ್ಸವೈಃ ॥
ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ ।
ಮಂತ್ರದೂತಪ್ರಯಾಣಾಜಿನಾಯಕಾಭ್ಯುದಯೈರಪಿ ॥

— ದಂಡಿ, ಕಾವ್ಯಾದರ್ಶ. 1. 16-17.

ಕೆಲವು ಲಾಕ್ಷಣಿಕರಂತೂ (ಉದಾ.: ರುದ್ರಟ) ಇನ್ನೂ ವಿವರವಾಗಿ ಆದಿಯಲ್ಲಿ ನಗರವರ್ಣನೆ, ಆಮೇಲೆ ನಾಯಕನ ವಂಶವರ್ಣನೆ, ಪ್ರಾಸಂಗಿಕವಾಗಿ ಶರದಾದಿ ಋತುವರ್ಣನೆ, ಪ್ರತಿಪಕ್ಷದವರನ್ನು ಹೇಳುವಾಗ ದೂತಪ್ರೇಷಣೆ, ಆಮೇಲೆ ರಾಜನ ಮಂತ್ರಾಲೋಚನೆ, ದಂಡಯಾತ್ರೆ, ದಾರಿಯಲ್ಲಿ ಅಡವಿ, ನದಿ, ಸಮುದ್ರ, ಪರ್ವತ, ದೇಶಾದಿಗಳ ವರ್ಣನೆ, ಸೇನಾಶಿಬಿರದಲ್ಲಿ ಯುವಜನರ ಕ್ರೀಡೆಗಳು, ಸೂರ್ಯೋದಯ, ಸೂರ್ಯಾಸ್ತಗಳು, ಚಂದ್ರೋದಯ, ಆಗ ಪಾನಗೋಷ್ಠಿ, ಸಂಗೀತ, ರತೋತ್ಸವ ಮುಂತಾದವನ್ನೂ ಪ್ರಾಸಂಗಿಕ [illegible]ಗಳನ್ನೂ ವರ್ಣಿಸಬಹುದೆಂದು ವರ್ಣನಾಕ್ರಮಗಳನ್ನು ಕೂಡ ಬಿಡಿಸಿ ತೋರಿಸಿದ್ದಾರೆ. ಇವು ಕಾಳಿದಾಸನಿಗಿಂತಲೂ ಕಾಳಿದಾಸೋತ್ತರ ಕವಿಗಳ ಕಾವ್ಯಗಳಿಗೆ ಹೆಚ್ಚಾಗಿ ಅನ್ವಯಿಸುತ್ತವೆ. [illegible] ಕಾವ್ಯಗಳು ಮಂಗಳಾಚರಣೆಯಿಂದ, ಇಲ್ಲವೆ ಶುಭದ ಹಾರೈಕೆಯಿಂದ, ಇಲ್ಲವೆ

ವಸ್ತುನಿರ್ದೇಶದಿಂದ ಆರಂಭವಾಗಿ, ಮುಂದಗಮನದಿಂದ ವರ್ಣನೆಗಳ ಮುಖಾಂತರ ಸಾಗುತ್ತ ನಾಯಕಾಭ್ಯುದಯದಲ್ಲಿ ಮುಗಿಯುತ್ತವೆ. ಇವೇ ಲಕ್ಷಣಗಳೇ ನಾಟಕಕ್ಕೂ ಸ್ಥೂಲವಾಗಿ ಅನ್ವಯಿಸಿದರೂ ಸಹ ಅಲ್ಲಿ ವರ್ಣನೆಯ ಭಾಗ ಬಹಳಷ್ಟು ಕಡಿಮೆಯಾಗಿ, ಕಥೆಯ ಏಕಸೂತ್ರತೆಗೆ ಹೆಚ್ಚಿನ ಪುರಸ್ಕಾರ ದೊರೆಯುತ್ತದೆ. ನಾಯಕಾಭ್ಯುದಯದ ಅಂಗವಾಗಿ ರಾಜ್ಯಪ್ರಾಪ್ತಿಯಂತೆ ಕನ್ಯಾಲಾಭವೂ ಶೃಂಗಾರನಾಟಕಗಳಲ್ಲಿ ಸೇರಿಬರುತ್ತದೆ. ಆದರೆ ಕಥಾವಸ್ತುವಿನಲ್ಲಿ ಬೀಜ, ಬಿಂದು, ಪತಾಕಾ, ಪ್ರಕರೀ ಕಾರ್ಯಗಳೆಂಬ ಪಂಚಾವಸ್ಥೆಗಳೂ, ನಾಯಕನ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಸಿದ್ಧಿ ಎಂಬ ಐದು ವ್ಯಾಪಾರಗಳೂ ಕೂಡಿ ಇಡಿಯ ಕಥಾಶರೀರವು ಮುಖ, ಪ್ರತಿಮುಖ, ಗರ್ಭ, ವಿಮರ್ಶ, ನಿರ್ವಹಣ ಎಂಬ ಪಂಚ ಸಂಧಿಗಳಿಂದ ಸಾವಯವ ಸೌಂದರ್ಯವನ್ನು ತಳೆದಿರಬೇಕೆಂಬ ನಿಯಮ ನಾಟಕಕ್ಕೆ ಪ್ರಧಾನವಾಗಿದ್ದರೂ ಕಾವ್ಯಗಳಿಗೂ ಗೌಣವಾಗಿ ಅನ್ವಯಿಸುತ್ತದೆ. ಮಹಾಕಾವ್ಯದ ಗಾತ್ರ ಕೂಡ ಐದು ಸರ್ಗಗಳಿಗಿಂತ ಕಡಿಮೆಯಾಗಿರಬಾರದೆಂಬ ನಿಯಮವಿದೆ. ಆದರೆ ಖಂಡಕಾವ್ಯಕ್ಕೆ ಈ ಗಾತ್ರದ ನಿಯಮವಾಗಲಿ ಕಥಾಸಂವಿಧಾನದ ನಿಯಮವಾಗಲಿ ಯಾವುದೂ ಇಲ್ಲ. ಅಲ್ಲಿಗೆ ಅನ್ವಯಿಸುವದೆಲ್ಲ ರಸಭಾವೋಚಿತವಾದ ವಿಭಾವಾನುಭಾವ-ಸಂಚಾರಿಭಾವಗಳ ವ್ಯಂಜನ ಮಾತ್ರ. ಒಂದೊಂದು ಬಿಡಿಪದ್ಯವೂ ಅಲ್ಲಿ 'ಮುಕ್ತಕ'ವೆನಿಸಿ ಸ್ವತಂತ್ರವಾಗಿಯೇ ಸಹೃದಯನ ಮೆಚ್ಚುಗೆಯನ್ನು ಗಳಿಸಬಹುದು ಅಥವಾ ಹಲವಾರು ಮುಕ್ತಕಗಳು ಸೇರಿ ಕುಲಕ, ಪಂಚಕ, ಷಟ್ಕ, ಅಷ್ಟಕ, ಶತಕ, ಇತ್ಯಾದಿ ಸಂಭಾಷಿತ ಕಾವ್ಯಸಂಗ್ರಹಗಳಾಗಿ ಪರಿಣಮಿಸಬಹುದು.

ಈ ಎಲ್ಲ ಸಾಹಿತ್ಯಪ್ರಕಾರಗಳಲ್ಲೂ ಸಂಸ್ಕೃತಮಹಾಕವಿಗಳು ಸಾಧಿಸಿದ ಸಿದ್ಧಿಯ ಎತ್ತರವನ್ನು ಮುಂದಿನ ಅಧ್ಯಾಯಗಳಲ್ಲಿ ವಿಶದಪಡಿಸಲಾಗುತ್ತದೆ. ವೈದಿಕ ಕವಿಗಳು ತಮ್ಮ ಇತಿಹಾಸ ಪುರಾಣಗಳನ್ನು ಆಶ್ರಯಿಸಿ ಮಹಾಕಾವ್ಯ, ಚಂಪೂ, ಗದ್ಯ, ನಾಟಕಾದಿಗಳನ್ನು ರಚಿಸಿದಂತೆಯೇ, ಬೌದ್ಧರು ಬೋಧಿಸತ್ತ್ವಜಾತಕಗಳನ್ನೂ, ಜೈನರು ತೀರ್ಥಂಕರಚರಿತ್ರೆಗಳನ್ನೂ ಆಶ್ರಯಿಸಿ 'ಪುರಾಣ' ಗಳೆಂಬ ಹೆಸರಿನಿಂದ ಕಾವ್ಯಗ್ರಂಥಗಳನ್ನು ರಚಿಸಿದ್ದಾರೆ ; ಇವುಗಳಿಗೆ 'ಚರಿತ'ವೆನ್ನುವುದೂ ಉಂಟು. ಪ್ರಥಮ ಜಿನಸೇನನ 'ಹರಿವಂಶಪುರಾಣ' (ಕ್ರಿ.ಶ. 783) ಮತ್ತು ದ್ವಿತೀಯ ಜಿನಸೇನನ 'ಪೂರ್ವಪುರಾಣ' (ಕ್ರಿ.ಶ. 9ನೆಯ ಶತಮಾನ) ಮೊದಲ ಗುಂಪಿಗೆ ಸೇರುತ್ತವೆ ; ಅಲ್ಲಿ ನೇರವಾಗಿ ಜೈನಧರ್ಮವಿಚಾರಕ್ಕೂ ಪ್ರವೇಶವಿದೆ. ವೀರನಂದಿಯ 'ಚಂದ್ರಪ್ರಭಚರಿತ' (ಕ್ರಿ.ಶ. 1025) ಅಸಗನ 'ವರ್ಧಮಾನಚರಿತ' (ಕ್ರಿ.ಶ. 9ನೆಯ ಶತಮಾನ), ವಾದಿರಾಜಸೂರಿಯ 'ಪಾರ್ಶ್ವನಾಥಚರಿತ' (ಕ್ರಿ.ಶ. 11ನೆಯ ಶತಮಾನ) ಮತ್ತು 'ಯಶೋಧರಚರಿತ' ವರ್ಧಮಾನಕವಿಯ 'ವರಾಂಗಚರಿತ' (ಕ್ರಿ.ಶ. 14ನೆಯ ಶತಮಾನ)—ಇವು ಕೆಲವು ಉಲ್ಲೇಖನೀಯ 'ಚರಿತ' ಕಾವ್ಯಗಳು. ಅದರಂತೆ ಹರಿಚಂದ್ರ 'ಧರ್ಮಶರ್ಮಾಭ್ಯುದಯ' (ಕ್ರಿ.ಶ. 1230), ವಾಗ್ಭಟನ 'ನೇಮಿನಿರ್ವಾಣ' (ಕ್ರಿ.ಶ. 1010) ವರ್ಧಮಾನಕವಿಯ 'ಜಯಂತವಿಜಯ' (ಕ್ರಿ.ಶ. 1221) ಮುಂತಾದವು 'ಕಾವ್ಯ' ನಾಮದಿಂದಲೇ ನಿಬದ್ಧವಾಗಿರುವ ಇತರ ಜೈನಪುರಾಣಗಳಾಗಿವೆ. ಇವುಗಳಲ್ಲೆಲ್ಲ ಲೋಕಾಕಾರಕಥನ, ದೇಶವಿಶೇಷವರ್ಣನ ಮುಂತಾದ ಪುರಾಣಾಂಗಗಳೂ ಸೇರಿಕೊಂಡೇ ಇರುತ್ತವೆ.



ಜೈನರ ಕಾವ್ಯರಚನೆ ಪುರಾಣಕಾವ್ಯಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ, ಅವರು 'ಹಮ್ಮೀರ ಮಹಾಕಾವ್ಯ' (ನಯಚಂದ್ರಸೂರಿರಚಿತ, ಕ್ರಿ.ಶ. 1334) ಮುಂತಾದ ಐತಿಹಾಸಿಕ ಕಾವ್ಯಗಳನ್ನೂ, ಐಹೊಳೆ ಶಿಲಾಲೇಖ (ರವಿಕೀರ್ತಿಕೃತ ಕ್ರಿ.ಶ. 634) ಮುಂತಾದ ರಾಜಪ್ರಶಸ್ತಿಗಳನ್ನೂ, 'ಕ್ಷತ್ರಚೂಡಾಮಣಿ' 'ಗದ್ಯಚಿಂತಾಮಣಿ' (ಒಡೆಯದೇವ ವಾದೀಭಸಿಂಹಕೃತ. ಕ್ರಿ.ಶ. 10ನೆಯ ಶತಮಾನ) ಮುಂತಾದ ಗದ್ಯಕಾವ್ಯಗಳನ್ನೂ, 'ಪಾರ್ಶ್ವಾಭ್ಯುದಯ' (ಜಿನಸೇನಕೃತ, ಕ್ರಿ.ಶ. 9ನೆಯ ಶತಮಾನ). 'ನೇಮಿದೂತ' (ವಿಕ್ರಮಕವಿಕೃತ. ಕ್ರಿ.ಶ. 14ನೆಯ ಶತಮಾನ) ಮುಂತಾದ ಸಂದೇಶಕಾವ್ಯಗಳನ್ನೂ 'ಸಂಭಾಷಿತರತ್ನಸಂದೋಹ' (ಅಮಿತಗತಿರಚಿತ, ಕ್ರಿ.ಶ. 1000), ಮುಂತಾದ ಸುಭಾಷಿತಸಂಗ್ರಹಗಳನ್ನೂ. 'ಯಶಸ್ತಿಲಕ' (ಸೋಮದೇವಸೂರಿಕೃತ, ಕ್ರಿ.ಶ. 10ನೆಯ ಶತಮಾನ ಮತ್ತು 'ಜೀವಂಧರಚಂಪೂ' (ಹರಿಚಂದ್ರ ಕೃತ ಕ್ರಿ.ಶ. 10ನೆಯ ಶತಮಾನ) ಮುಂತಾದ ಚಂಪೂಗ್ರಂಥಗಳನ್ನೂ ಸಂಸ್ಕೃತ ಸರಸ್ವತಿಗೆ ತಂದು ಮುಡಿಸಿದ್ದಾರೆ. ಹೀಗೆ ಸಂಸ್ಕೃತಕಾವ್ಯಸರಸ್ವತಿಗೆ ಜೈನರ ಕೊಡುಗೆ ಗುಣ ಗಾತ್ರಗಳೆರಡರಲ್ಲೂ ಹಿರಿದಾಗಿದೆ.

## ಶಿಲಾಲೇಖಗಳ ಪ್ರಶಸ್ತಿ ಕಾವ್ಯ

ಸಂಸ್ಕೃತ ಮತ್ತು ಪ್ರಾಕೃತದಲ್ಲಿರುವ ಶಾಸನಗಳು ಭಾರತೀಯ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿವೆ. ಒಂದು ಪ್ರಧಾನ ಕಾವ್ಯಶಾಖೆಯಾಗಿ ನಿಂತಿವೆ. ಇವು ಭಾರತದ ಜನ ಜೀವನ ಮತ್ತು ಭಾವನೆಗಳನ್ನು ಪ್ರತಿಬಿಂಬಿಸುತ್ತವೆ. ಇತಿಹಾಸ, ಸಂಸ್ಕೃತಿ, ನಾಗರಿಕತೆ, ವೇದಾಂತ, ಸಾಮಾಜಿಕ ಜೀವನ, ಸಾಹಿತ್ಯ, ಕಾನೂನು, ಭೌಗೋಳಿಕ ಪರಿಸ್ಥಿತಿ ಮೊದಲಾದವುಗಳ ಪರಿಚಯವನ್ನುಂಟು ಮಾಡುತ್ತವೆ. ಮಹಾಕವಿಗಳ, ರಾಜರ ಮತ್ತು ದಾನಿಗಳ ದೇಶಕಾಲಾದಿಗಳ ನಿರ್ಣಯಕ್ಕೆ ಸಹಾಯ ಮಾಡುತ್ತವೆ. ಅನೇಕ ಶಾಸನಗಳು ಉತ್ತಮ ಕಾವ್ಯವಾಗಿದ್ದು ಪ್ರಸಿದ್ಧ ಮಹಾಕಾವ್ಯಗಳೊಡನೆ ಸರಿದೂಗುತ್ತವೆ. ರಾಜಮನ್ನಣೆ ಪಡೆದಿದ್ದ ಕವಿಗಳಾದ ಈ ಶಾಸನಕಾರರ ಇತರ ಕಾವ್ಯಗಳು ದೊರೆಯದಿರುವುದು ವಿಷಾದದ ಸಂಗತಿಯಾಗಿದೆ, ಸುಲಭವಾಗಿ ನಾಶವಾಗದವುಗಳಾದುದರಿಂದ ಶಿಲಾಶಾಸನಗಳು ಉಳಿದಿರಬೇಕು. ಮಹಾಕವಿಗಳ ಶ್ರೇಣಿಗೆ ಸೇರಲು ಅರ್ಹರಾದ ಹರಿಷೇಣ, ರವಿಕೀರ್ತಿ, ಶಾಬ—ವೀರಸೇನ, ವಾಸುಲ, ಕೇಶವ, ವತ್ಸಭಟ್ಟಿ, ಕುಬ್ಜ ಮೊದಲಾದವರ ಶಾಸನಗಳು ಮಾತ್ರ ದೊರೆತಿವೆ. ಇಷ್ಟಾದರೂ ದೊರೆತುದು ನಮ್ಮ ಪುಣ್ಯವೇ ಸರಿ, ಪ್ರಾಕೃತದಲ್ಲಿರುವ ಅಶೋಕನ ಶಾಸನಗಳು ಕಾವ್ಯಧರ್ಮದಿಂದ ಆಸ್ವಾದ್ಯವೂ, ಆದರ್ಶದಿಂದ ಅನುಕರಣೀಯವೂ ಆಗಿದೆ. ಭಾರತದ ಎಲ್ಲ ಪ್ರಸಿದ್ಧ ಭಾಷೆಗಳಲ್ಲಿಯೂ ಶಾಸನಗಳಿವೆ. ಭಾರತದ ಒಳಗೂ ಹೊರಗೂ ಹಂಚಿಹೋಗಿರುವ ಇವುಗಳನ್ನು ಪತ್ತೆಹಚ್ಚಿ, ವ್ಯವಸ್ಥಿತ ಕ್ರಮದಲ್ಲಿ ಕಲೆ ಹಾಕಿ ಆಯಾ ಕಾಲದೇಶಗಳಲ್ಲಿ ಬಳಸಿರುವ ಲಿಪಿಯನ್ನು ಗುರುತಿಸಿ ಪ್ರಕಟಿಸುವುದು ಸಾಹಸವೇ

ಈ ಶಾಸನವು ಕಾವ್ಯಮಯವಾಗಿದೆ; ಶಾರ್ದೂಲವಿಕ್ರೀಡಿತ, ವಸಂತತಿಲಕಾ, ಆರ್ಯಾ, ಹರಿಣೀ, ಮಾಲಿನೀ, ಮಂದಾಕ್ರಾಂತಾ ಮುಂತಾದ ಛಂದಸ್ಸುಗಳಿಂದ ರಚಿತವಾದ 44 ಪದ್ಯಗಳು ಇದರಲ್ಲಿವೆ. ಭಾಷೆಯು ಸುಮಧುರವಾಗಿದೆ ; ಪದಮೈತ್ರಿಯಲ್ಲಿ ಒಳ್ಳೆಯ ಓಟವಿದೆ, ಉಪಮಾ ದ್ಯಲಂಕಾರಗಳಿಂದ ಕೂಡಿದ ವರ್ಣನೆಗಳು ಮನೋಜ್ಞವಾಗಿವೆ ; ಛಂದಸ್ಸಿನ ಬಳಕೆಯಲ್ಲಿ ಪ್ರಭುತ್ವವಿದೆ. ಇವುಗಳ ಪರಿಶೀಲನೆಯಿಂದ ವತ್ಸಭಟ್ಟಿಯು ಉತ್ತಮ ಕವಿಯೆಂಬುದು ಸ್ಪಷ್ಟವಾಗುತ್ತದೆ. ಮೊದಲನೆಯ ಮೂರು ಪದ್ಯಗಳಲ್ಲಿ ಸೂರ್ಯಸ್ತೋತ್ರವಿದೆ. ನಂತರ ದಶಪುರವನ್ನು ವರ್ಣಿಸಿ ಅನುಕ್ರಮವಾಗಿ ಕುಮಾರಗುಪ್ತ ಮತ್ತು ಬಂಧುವರ್ಮರ ಗುಣಶೀಲ ಗಳನ್ನು, ಪ್ರಜಾನುರಾಗವನ್ನೂ ವಿವರಿಸಲಾಗಿದೆ. ಇವನ ಕೆಲವು ಪದ್ಯಗಳಲ್ಲಿ ಕಾಳಿದಾಸನ ಪ್ರಭಾವವನ್ನು ವಿದ್ವಾಂಸರು ಗುರುತಿಸುತ್ತಾರೆ. ವತ್ಸಭಟ್ಟಿಯ ಪಾಂಡಿತ್ಯ ಪ್ರತಿಭೆಗಳ ಪರಿಚಯಕ್ಕಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ :—

ಶಾಸನದ ಪ್ರಾರಂಭದಲ್ಲಿರುವ ಸೂರ್ಯಸ್ತೋತ್ರ ;—

[ಯೋ] [ವೃತ್ತ್ಯರ್ಥ]ಮುಪಾಸ್ಯತೇ ಸುರಗಣೈ[ಸ್ಸಿದ್ಧೈಶ್ಚ] ಸಿದ್ಧ್ಯರ್ಥಿಭಿ-
ರ್ದ್ಧ್ಯಾನೈಕಾಗ್ರಪರೈರ್ವಿಧೇಯವಿಷಯೈರ್ಮೋಕ್ಷಾರ್ಥಿಭಿರ್ಯೋಗಿಭಿಃ ।
ಭಕ್ತ್ಯಾ ತೀವ್ರತಪೋಧನೈಶ್ಚ ಮುನಿಭಿಶ್ಶಾಪಪ್ರಸಾದಕ್ಷಮೈ-
ರ್ಹೇತುರ್ಯೋ ಜಗತಃ ಕ್ಷಯಾಭ್ಯುದಯಯೋಃ ಪಾಯಾತ್ಸ ವೋಭಾಸ್ಕರಃ ॥

ದಶಪುರದ ವರ್ಣನೆ :—

ಮತ್ತೇಭಗಂಡತಟವಿಚ್ಯುತದಾನಬಿಂದು—
ಸಿಕ್ತೋಪಲಾಚಲಸಹಸ್ರವಿಭೂಷಾಣಾಯಾಃ ।*
ಪುಷ್ಪಾವನಮ್ರತರುಮಂಡವತಂಸಕಾಯಾ
ಭೂಮೇಃ ಪರಂ ತಿಲಕಭೂತಮಿದಂ ಕ್ರಮೇಣ ॥ 6 ॥

ಚಲತ್ಪತಾಕಾನ್ಯಬಲಾಸನಾಥಾ-
ನ್ಯತ್ಯರ್ಥ ಶುಕ್ಲಾನ್ಯಧಿಕೋನ್ನತಾನಿ ।
ತಡಿಲ್ಲತಾಚಿತ್ರಸಿತಾಭ್ರಕೂಟ-
ತುಲ್ಯೋಪಮಾನಾನಿ ಗೃಹಾಣಿ ಯತ್ರ ॥ 10 ॥†

ಬಂಧುವರ್ಮನ ವರ್ಣನೆ :—

ಕಾಂತೋ ಯುವಾ ರಣಪಟುರ್ವಿನಯಾನ್ವಿತಶ್ಚ
ರಾಜಾಪಿ ಸನ್ನುಪಸೃತೋ ನ ಮದೈಃ ಸ್ಮಯಾದ್ಯೈಃ ।
ಶೃಂಗಾರಮೂರ್ತಿರಭಿಭಾತ್ಯನಲಂಕೃತೋ[s]ಪಿ
ರೂಪೇಣ ಯಃ ಕುಸುಮಚಾಪ ಇವ ದ್ವಿತೀಯಃ ॥ 27 ॥

* ವಿಭೂಷಾಣಾಯಾಃ—ವಿಭೂಷಣಾಯಾಃ ಎಂದು ಓದಿಕೊಳ್ಳಬೇಕು.

† ಹೋಲಿಸಿ :— 'ವಿದ್ಯುತ್ವನ್ತಂ ಲಲಿತವನಿತಾಃ ಸೇಂದ್ರಚಾಪಂ ಸಚಿತ್ರಾಃ...'— ಕಾಳಿದಾಸ, ಮೇಘದೂತ ಕಾವ್ಯ





ಶಶಿನೇವ ನಭೋ ವಿಮಲಂ ಕೌ[ಸ್ತು]ಭಮಣಿನೇವ ಶಾರ್ಙ್ಗಿಣೋ ವಕ್ಷಃ ।
ಭವನರಿವರೇಣ ತಥೇದಂ ಪುರಮಖಿಲಮಲಂಕೃತಮುದಾರಮ್ ॥ 42 ॥

## ಯಶೋಧರ್ಮನ ಶಿಲಾಸ್ತಂಭಶಾಸನ (ಕ್ರಿ. ಶ. 6ನೆಯ ಶತಮಾನ)

ಮಾಂಡಸೂರಿನ ಶಿಲಾಸ್ತಂಭದಲ್ಲಿ ಈ ಪ್ರಶಸ್ತಿಶಾಸನವನ್ನು ಔತ್ತರೇಯ ಬ್ರಾಹ್ಮೀಲಿಪಿಯಿಂದ ಕೆತ್ತಲಾಗಿದೆ. ಸ್ರಗ್ಧರೆಯ 8 ಪದ್ಯಗಳನ್ನೂ, ಶ್ಲೋಕದ ಒಂದು ಪದ್ಯವನ್ನೂ ಉಳ್ಳ ಈ ಶಾಸನದ ಕರ್ತೃ ವಾಸುಲ* . ಇದನ್ನು ಕೆತ್ತಿಸಿದವನು ಗೋವಿಂದ † ಯಶೋಧರ್ಮನ (ಕ್ರಿ. ಶ. 525-35) ಪರಾಕ್ರಮ ಮತ್ತು ಗುಣಾತಿಶಯಗಳ ಪ್ರಶಂಸೆಯೇ ಇದರ ವಸ್ತು. ಈ ಸಂಸ್ಕೃತಶಾಸನದ ಭಾಷೆ ಮತ್ತು ಶೈಲಿ ಪ್ರೌಢವಾಗಿವೆ. ವಾಸುಲನ ಕಾವ್ಯರಚನಾಸಾಮರ್ಥ್ಯದ ಪರಿಚಯಕ್ಕಾಗಿ ಒಂದು ಪದ್ಯವನ್ನಿಲ್ಲಿ ಕೊಡಲಾಗಿದೆ : —

ಶ್ಲಾಘ್ಯೇ ಜನ್ಮಾಸ್ಯ ವಂಶೇ ಚರಿತಮಘಹರಂ ದೃಶ್ಯತೇ ಕಾಂತಮಸ್ಮಿನ್
ಧರ್ಮಸ್ಯಾಯಂ ನಿಕೇತಶ್ಚಲತಿ ನಿಯಮಿತಂ ನಾಮುನಾ ಲೋಕವೃತ್ತಮ್ ।
ಇತ್ಯುತ್ಕರ್ಷಂ ಗುಣಾನಾಂ ಲಿಖಿತುಮಿವ ಯಶೋಧರ್ಮಣಶ್ಚಂದ್ರಬಿಮ್ಬೇ
ರಾಗಾದುತ್ಕ್ಷಿಪ್ತ ಉಚ್ಚೈರ್ಭುಜ ಇವ ರುಚಿಮಾನ್ಯಃ ಪೃಥಿವ್ಯಾ ವಿಭಾತಿ ॥ 8 ॥

## ಇಮ್ಮಡಿ ಪುಲಿಕೇಶಿಯ ಐಹೊಳೆ ಪ್ರಶಸ್ತಿ (ಕ್ರಿ. ಶ. 634)

ಕಲ್ಲುಚಪ್ಪಡಿಯ ಮೇಲೆ ದಾಕ್ಷಿಣಾತ್ಯ ಬ್ರಾಹ್ಮೀಲಿಪಿಯಲ್ಲಿ ಕೆತ್ತಲಾಗಿರುವ ಈ ಶಾಸನವು ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ಐಹೊಳೆ ಗ್ರಾಮದ ಪ್ರಾಚೀನ ಮೇಗುತಿ ದೇವಾಲಯದ ಪೂರ್ವಭಾಗದಲ್ಲಿದೆ. ಅಂಬುಧಿತ್ರಯಪರೀತಶಾಸನನಾದ ಸತ್ಯಾಶ್ರಯ ಪುಲಿಕೇಶಿಯ ಪರಮಾನುಗ್ರಹಕ್ಕೆ ಪಾತ್ರನೂ, ಧೀಮಂತನೂ ಆದ ರವಿಕೀರ್ತಿಯು ಈ ಜಿನೇಂದ್ರಭವನವನ್ನು ಕಟ್ಟಿಸಿ ಕ್ರಿ. ಶ. 634ರಲ್ಲಿ ಈ ಪ್ರಶಸ್ತಿಶಾಸನವನ್ನು ರಚಿಸಿದನು. ಇವನೊಬ್ಬ ಗಣ್ಯನಾದ ಜೈನಕವಿ† ‡ ತಾನು ಕಾಳಿದಾಸ, ಭಾರವಿಗಳ ಕೀರ್ತಿಯನ್ನು

* ಇತಿ ತುಷ್ಟೂಷಯಾ ತಸ್ಯ ನೃಪತೇಃ ಪುಣ್ಯಕರ್ಮಣಃ ।
ವಾಸುಲೇನೋಪರಿಚಿತಾಃ ಶ್ಲೋಕಾಃ ಕಕ್ಕಸ್ಯ ಸೂನುನಾ ॥

† ಉತ್ಕೀರ್ಣಾ ಗೋವಿಂದೇನ ॥

‡ ತಸ್ಯಾಮ್ಬುಧಿತ್ರಯನಿವಾರಿತಶಾಸನಸ್ಯ
ಸತ್ಯಾಶ್ರಯಸ್ಯ ಪರಮಾಪ್ತವತಾ ಪ್ರಸಾದಮ್ ।
ಶೈಲಂ ಜಿನೇಂದ್ರಭವನಂ ಭವನಂ ಮಹಿಮ್ನಾಂ
ನಿರ್ಮಾಪಿತಂ ಮತಿಮತಾ ರವಿಕೀರ್ತಿನೇದಮ್ ॥35॥
ಪ್ರಶಸ್ತೇರ್ವಸತೇಶ್ಚಾಸ್ಯ ಜಿನಸ್ಯ ತ್ರಿಜಗದ್ಗುರೋಃ ।
ಕರ್ತಾ ಕಾರಯಿತಾ ಚಾಪಿ ರವಿಕೀರ್ತಿಃ ಕೃತೀ ಸ್ವಯಮ್ ॥36॥

ಪದ್ಯ —

ಪ್ರದಾನಭುಜವಿಕ್ರಮಪ್ರಶಮಶಾಸ್ತ್ರವಾಕ್ಯೋದಯೈ-
ರುಪಯ್ಯುಪರಿಸಞ್ಚಯೋಚ್ಛ್ರಿತಮನೇಕಮಾಗ್ರ್ಯಂ ಯಶಃ ।
ಪುನಾತಿ ಭುವನತ್ರಯಂ ಪಶುಪತೇರ್ಜ್ಜಟಾನ್ತರ್ಗುಹಾ-
ನಿರೋಧಪರಿಮೋಕ್ಷಶೀಘ್ರಮಿವ ಪಾಣ್ಡು ಗಾಙ್ಗಂ [ಪಯಃ] ॥

ಗದ್ಯ —

ತಸ್ಯ ವಿವಿಧಸಮರಶತಾವತರಣದಕ್ಷಸ್ಯ ಸ್ವಭುಜಬಲಪರಾಕ್ರಮೈಕಬನ್ಧೋಃ ಪರಾಕ್ರಮಾಙ್ಕಸ ಪರಶುಶರಶಙ್ಕುಶಕ್ತಿಪ್ರಾಸಾಸಿತೋಮರಭಿನ್ದಿಪಾಲ[ನಾ] ರಾಚವೈತಸ್ತಿಕಾದ್ಯನೇಕಪ್ರಹರಣವಿರೂಢಾಕುಲವ್ರಣಶತಾಙ್ಕತೋಭಾಸಮುದಯೋಪಚಿತಕಾನ್ತತರವರ್ಷ್ಮಣಃ ............ ಇತ್ಯಾದಿ.

## ತಾಳಗುಂದದ ಕದಂಬ ಕಾಕುತ್ಸ್ಥವರ್ಮನ ಶಾಸನ (ಕ್ರಿ.ಶ. 5ನೆಯ ಶತಮಾನ)

ಈ ಶಾಸನವನ್ನು ಕರ್ಣಾಟಕ ಪ್ರಾಂತದ ಶಿವಮೊಗ್ಗ ಜಿಲ್ಲೆಗೆ ಸೇರಿದ ತಾಳಗುಂದದಲ್ಲಿರುವ ಪ್ರಣವೇಶ್ವರ ದೇವಸ್ಥಾನದ ಮುಂದೆ ನಿಂತಿರುವ ಶಿಲಾಸ್ತಂಭದಲ್ಲಿ ಕಲಾತ್ಮಕವಾದ ದಾಕ್ಷಿಣಾತ್ಯ ಬ್ರಾಹ್ಮೀ ಲಿಪಿಯಲ್ಲಿ ಕೆತ್ತಲಾಗಿದೆ. ಇದನ್ನು ಬರೆದ ಕವಿ ಕುಬ್ಜ *. ಇದು ಮಯೂರಶರ್ಮನ ಪೀಳಿಗೆಯಲ್ಲಿ ಆರನೆಯವನಾದ ಶಾಂತಿವರ್ಮನು ಬರೆಸಿದ ಶಾಸನವಾಗಿದೆ. ಶಾಸನದ ಭಾಷೆ, ಛಂದಸ್ಸುಗಳ ಪ್ರೌಢಿಮೆ,ವೈವಿಧ್ಯಗಳನ್ನು ಗಮನಿಸಿದರೆ ಇದನ್ನು ರಚಿಸಿದವನು ಒಳ್ಳೆಯ ವಿದ್ವತ್ಕವಿಯಾಗಿ ರಾಜಾಸ್ಥಾನದಲ್ಲಿ ಮಾನ್ಯತೆ ಪಡೆದಿರಬೇಕೆಂದು ತೋರುತ್ತದೆ. ಶಾಸನದಲ್ಲಿ ಕಾಲವನ್ನು ಹೇಳಿಲ್ಲವಾದರೂ ಇದರ ಕಾಲ ಕ್ರಿ.ಶ. 5ನೆಯ ಶತಮಾನವೆಂದು ಸಾಧಾರಣವಾಗಿ ಒಪ್ಪಲಾಗಿದೆ. ಕಾಕುತ್ಸ್ಥವರ್ಮನು ತಾಳಗುಂದದಲ್ಲಿ ಪ್ರಾಚೀನಕಾಲದಿಂದ ಪ್ರಸಿದ್ಧವಾಗಿದ್ದ ಪ್ರಣವೇಶ್ವರ ಸ್ವಾಮಿಯ ದೇವಾಲಯದ ಉಪಯೋಗಕ್ಕೆ ಕೆರೆಯೊಂದನ್ನು ಕಟ್ಟಿಸಿದ ವಿಷಯವನ್ನು ತಿಳಿಸುವುದೇ ಈ ಶಾಸನದ ಮುಖ್ಯ ಉದ್ದೇಶ. ಇದರಿಂದ ಕದಂಬವಂಶದ ಸ್ಥಾಪನೆ, ವಂಶದರಸರ ವಿಚಾರ, ಗುಪ್ತರ ಮತ್ತು ಕದಂಬರ ಸಂಬಂಧ, ಆ ಕಾಲದ ಧರ್ಮಸ್ವರೂಪ, ವಿದ್ಯಾಭ್ಯಾಸದ ಪದ್ಧತಿ ಮೊದಲಾದ ಸಂಗತಿಗಳು ತಿಳಿದುಬರುತ್ತವೆ.

ಸಂಸ್ಕೃತ ಪದ್ಯರೂಪವಾದ ಈ ಶಾಸನದಲ್ಲಿ 34 ಪದ್ಯಗಳಿವೆ. 1 ರಿಂದ 24ರವರೆಗಿನ ಪದ್ಯಗಳಿಗೆ ಬಹಳ ವಿರಳವಾದ ವಿಶೇಷ ಛಂದಸ್ಸನ್ನು ಬಳಸಲಾಗಿದೆ. ಉಳಿದ ಪದ್ಯಗಳಿಗೆ ಪುಷ್ಪಿತಾಗ್ರಾ, ವಸಂತತಿಲಕಾ, ಶಾರ್ದೂಲವಿಕ್ರೀಡಿತ, ಮಂದಾಕ್ರಾಂತಾ, ಇಂದ್ರವಜ್ರಾ ಮತ್ತು ಪ್ರಜಿತವೆಂಬ ದಂಡಕಗಳನ್ನು ಬಳಸಲಾಗಿದೆ. ಶಾಸನದ ಭಾಷೆ ಪ್ರೌಢವೂ, ಕಾವ್ಯಮಯವೂ ಆಗಿದೆ. ಸೊಗಸಾದ ಪದಮೈತ್ರಿ, ಮನೋಹರವಾದ ಶಬ್ದಾಲಂಕಾರ, ರಮಣೀಯವಾದ ಉಪಮಾರೂಪಕಾದ್ಯರ್ಥಾಲಂಕಾರಗಳು ಇದರಲ್ಲಿವೆ. ಶಾಸನವು ಶಿವನ ಪ್ರಾರ್ಥನೆಯಿಂದ ಪ್ರಾರಂಭವಾಗಿ

* ತಸ್ಯೌರಸಸ್ಯ ತನಯ[ಸ್ಯ] ವಿಶಾಲಕೀರ್ತೇಃ
(ಪ)ಟ್ಟತ್ರಯಾರ್ಪ್ಪಣವಿರಾ[ಜಿತ]ಚಾರುಮೂರ್ತೇಃ ।
ಶ್ರೀಶಾಂತಿವರ್ಮನೃಪತೇರ್ವ್ವರಶಾಸನಸ್ಥಃ
ಕುಬ್ಜಸ್ಸ್ವಕಾವ್ಯಮಿದಮುಶ್ಮತಲೇ ಲಿಲೇಖ ॥



"ತಾಳಗುಂದ ವಾಸಿಯಾದ ಮಹಾದೇವನಿಗೆ ನಮಸ್ಕಾರ, ದೇವಾಲಯಕ್ಕೆ ಬರುವ ಎಲ್ಲ ಜನರೂ ಸಂತೋಷಿಸಲಿ, ಪ್ರಜೆಗಳಿಗೆ ಒಳ್ಳೆಯದಾಗಲಿ" ಎಂಬ ಮಾತುಗಳಿಂದ ಮುಗಿಯುತ್ತದೆ. ಶಾಸನದ ಕಾವ್ಯಧರ್ಮದ ಪರಿಚಯಕ್ಕಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ.

ಭಂಗುರೋರ್ಮ್ಮಿವಲ್ಲಿತೈರ್ನೃತ್ಯದಪರಾರ್ಣವಾಭಃಕೈತಾವಧಿಮ್
ಪ್ರೇಹರಾನ್ಮಾಮನನ್ಯಸಂಚರಣಸಮಯಸ್ಥಿತಾಂ ಭೂಮಿಮೇವ ಚ ॥ 21 ॥

ಜ್ಯಾಯಸೋಭಿಸ್ಸಹ ವಿಗ್ರಹೋಽರ್ಥಿಷು ದಯಾ ಸಮ್ಯಕ್ಪ್ರಜಾಪಾಲನಮ್
ದೀನಾಭ್ಯುದ್ಧರಣಂ ಪ್ರಧಾನವಸುಭಿರ್ಮ್ಮಖ್ಯೈದ್ವಿಜಾಭ್ಯರ್ಹಣಮ್ ।
ಯಸ್ಯೈತತ್ಕುಲಭೂಷಣಸ್ಯ ನೃಪತೇಃ ಪ್ರಜ್ಞೋತ್ತರಂ ಭೂಷಣಂ
ತಮುಖ್ಯಾಃ ಖಲು ಮೇನಿರೇ ಸುರಸಖಂ ಕಾಕುತ್ಸ್ಥಮತ್ರಾಗತಮ್ ॥ 28 ॥

ನಾನಾ ವಿಧದ್ರವಿಣಸಾರಸಮುಚ್ಚಯೇಷು
ಮತ್ತದ್ವಿಪೇಂದ್ರಮದವಾಸಿತಗೋಪುರೇಷು ।
ಸಂಗೀತವಲ್ಗುನಿನದೇಷು ಗೃಹೇಷು ಯಸ್ಯ
ಲಕ್ಷ್ಮ್ಯಂಗನಾ ಧೃತಿಮತೀ ಸುಚಿರಂ ಚ ರೇಮೇ ॥ 30 ॥

ಗುಪ್ತಾದಿಪಾರ್ತ್ಥಿವಕುಲಾಂಬುರುಹಸ್ಥಲಾನಿ
ಸ್ನೇಹಾದರಪ್ರಣಯಸಮ್ಭ್ರಮಕೇಸರಾಣಿ ।
ಶ್ರೀಮನ್ತ್ಯನೇಕನೃಪಷಟ್ಪದಸೇವಿತಾನಿ
ಯೋ[s]ಬೋಧಯದ್ದುಹಿತೃದೀಧಿತಿಭಿರ್ನ್ನೃಪಾರ್ಕ್ಕಃ ॥ 31 ॥

ಕನ್ನಡ ನಾಡಿನಲ್ಲಿ ದೊರೆತಿರುವ ಈ ಸಂಸ್ಕೃತಶಾಸನವು ಕ್ರಿ. ಶ. 4, 5ನೆಯ ಶತಮಾನಗಳಲ್ಲಿ ಈ ನಾಡಿನಲ್ಲಿದ್ದ ಸಂಸ್ಕೃತಪ್ರಭಾವವನ್ನು ಸೂಚಿಸುತ್ತದೆ.

## ಮೊದಲನೆಯ ಕುಮಾರಗುಪ್ತ ಮತ್ತು ಬಂಧುವರ್ಮರ ಶಿಲಾಶಾಸನ (ಕ್ರಿ. ಶ. 5ನೆಯ ಶತಮಾನ)

ಕುಮಾರಗುಪ್ತ ಮತ್ತು ಬಂಧುವರ್ಮರ ಈ ಪ್ರಶಸ್ತಿ ಶಿಲಾಶಾಸನವು ಗ್ವಾಲಿಯರ್ ಸಂಸ್ಥಾನದ ಮಾಂಡಸೂರಿನ (ದಶಪುರ) ಸೂರ್ಯದೇವಾಲಯದಲ್ಲಿದೆ. ದಾಕ್ಷಿಣಾತ್ಯ ಬ್ರಾಹ್ಮೀಲಿಪಿಯನ್ನು ಬಳಸಲಾಗಿದೆ. ವಿದ್ವತ್ಕವಿಯಾದ ವತ್ಸಭಟ್ಟಿಯು ಇದರ ಕರ್ತೃ*; ಕಾಲ ಕ್ರಿ. ಶ. 436–473. ಸೂರ್ಯದೇವಾಲಯ ಮತ್ತು ಕುಮಾರಗುಪ್ತ–ಬಂಧುವರ್ಮರ ಪ್ರಜಾಪಾಲನೆಗಳ ವಿವರವನ್ನು ನೀಡುವುದು ಈ ಶಾಸನದ ಗುರಿ.

* ಶ್ರೇಣ್ಯಾದೇಶೇನ ಭಕ್ತ್ಯಾ ಚ ಕಾರಿತಂ ಭವನಂ ರವೇಃ ।
ಪೂರ್ವಾ ಚೇಯಂ ಪ್ರಯನ್ನೇನ ರಚಿತಾ ವತ್ಸಭಟ್ಟಿನಾ ॥44॥

ಸು. ದೀರ್ಘಕಾಲದ ತುಳಿತದಿಂದ ಅನೇಕ ಶಾಸನಗಳು ಗುರುತಿಸಲು ಸಾಧ್ಯವಾಗದಂತೆ ನಶಿಸಿ ಹೋಗಿವೆ. ಇಲ್ಲವೆ ಅಸಮಗ್ರವಾಗಿ ದೊರೆತಿವೆ. ಬಳಸಿರುವ ಬ್ರಾಹ್ಮೀ, ಖರೋಷ್ಠೀ, ಹಳೆಯ ಪಾರ್ಸಿ ಮೊದಲಾದ ಲಿಪಿಗಳು ಅನೇಕ ಕಡೆ ಉಜ್ಜಿ ಹೋಗಿವೆ. ಶಾಸನಗಳನ್ನು ಕೆತ್ತಲು ಬಂಡೆ ಕಲ್ಲಿನ ಚಪ್ಪಡಿ, ತಾಮ್ರ-ಬೆಳ್ಳಿ-ಚಿನ್ನ ಮೊದಲಾದ ಲೋಹಗಳ ತಗಡುಗಳು, ಕಲ್ಲುಕಂಬ, ನಾಣ್ಯಗಳು ಮೊದಲಾದ ವಸ್ತುಗಳನ್ನು ಬಳಸಿಕೊಳ್ಳಲಾಗಿದೆ. ಪ್ರಶಸ್ತಿ, ದಾನ, ತ್ಯಾಗ, ಆತ್ಮಾರ್ಪಣೆ, ವಿಜಯಾದಿಗಳನ್ನು ಇವು ಪ್ರತಿನಿಧಿಸುತ್ತವೆ. ಕೆರೆ, ಕೊಳ, ಅರಮನೆ, ದೇವಾಲಯ ಬಸದಿ, ಗೋಪುರ, ವಿಜಯಭೂಮಿ ಮುಂತಾದ ಕಡೆ ಇವು ದೊರೆಯುತ್ತವೆ. ರಾಜಾಜ್ಞೆ, ಧರ್ಮೋಪದೇಶಗಳಿಗಾಗಿಯೂ ನಿರ್ಮಾಣವಾದ ಶಾಸನಗಳಿವೆ. ಕಾಲಕ್ರಮದಲ್ಲಿ ಜನರ ನಿರ್ಲಕ್ಷ್ಯಕ್ಕೆ ಗುರಿಯಾಗಿ ನೆಲ ಸೇರಿಯೋ, ಮೂಲೆ ಹಿಡಿದೋ ಇವು ಕಣ್ಮರೆಯಾಗಿವೆ. ಸಾಹಿತ್ಯದ ಅನುಕ್ರಮವಿಕಾಸದ ಪರಿಚಯಕ್ಕೆ ಸಹಾಯಕಗಳಾದ ಇವುಗಳನ್ನು ತಿಳಿಯದೆ ಕಾವ್ಯಾಧ್ಯಯನವು ಪೂರ್ಣವಾಗದು. ಇವುಗಳ ಕಾವ್ಯಸೌರಭದ ಪರಿಚಯಕ್ಕಾಗಿ ಕೆಲವು ಶಾಸನಗಳನ್ನಿಲ್ಲಿ ಪ್ರಸ್ತಾಪಿಸಲಾಗಿದೆ.

## ರುದ್ರದಾಮನ ಶಿಲಾಶಾಸನ (ಕ್ರಿ. ಶ. 150)

ಕಾಥೇವಾಡಕ್ಕೆ ಸೇರಿದ ಜುನಾಗಡದ ಸಮೀಪದಲ್ಲಿರುವ ಬಂಡೆಯ ಮೇಲೆ ಈ ಶಾಸನವು ಉತ್ಕೀರ್ಣವಾಗಿದೆ. ಸುದರ್ಶನವೆಂಬ ತಟಾಕವನ್ನು ನಿರ್ಮಿಸಿ, ಅದನ್ನು ಉದ್ಘಾಟಿಸಿದ ಸಂದರ್ಭದಲ್ಲಿ ಈ ಶಾಸನವನ್ನು ರಚಿಸಲಾಯಿತು. ಇದರ ಭಾಷೆ ಸಂಸ್ಕೃತ. ಲಿಪಿ ಬ್ರಾಹ್ಮೀ. ಗದ್ಯರೂಪವಾಗಿರುವ ಈ ಶಾಸನದಲ್ಲಿ ಮಹಾಕ್ಷತ್ರಪ ರುದ್ರದಾಮನ ಶೌರ್ಯ—ಔದಾರ್ಯಾದಿ ಗುಣಗಳನ್ನು ವರ್ಣಿಸಲಾಗಿದೆ. ಈ ಗದ್ಯದಲ್ಲಿ ದಂಡಿಯು ನಿರೂಪಿಸಿರುವ ವೈದರ್ಭೀ ಶೈಲಿಯಿದೆ. ಇದಕ್ಕೂ, ಬಾಣನ ಗದ್ಯಕ್ಕೂ ಹಲವು ಅಂಶಗಳಲ್ಲಿ ಸಾದೃಶ್ಯವಿದೆ. ರುದ್ರದಾಮನಿಗೆ ಕೊಟ್ಟಿರುವ 'ಸ್ಫುಟ ಲಘು ಮಧುರ ಚಿತ್ರ ಕಾಂತ ಶಬ್ದಸಮಯೋದಾರಾಲು ಕೃತಗದ್ಯ-ಪದ್ಯ [ಕಾವ್ಯ] ವಿಧಾನ [ಪ್ರವೀಣೆನ] ಎಂಬ ವಿಶೇಷಣವು ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಕಾವ್ಯದ ಬಗೆಗಳನ್ನೂ, ಸ್ವರೂಪವನ್ನೂ, ಪ್ರಾಶಸ್ತ್ಯವನ್ನೂ ತಿಳಿಸುತ್ತದೆ. ಶೈಲಿಯಲ್ಲಿ ಮಧುರವಾದ ಓಟವಿದೆ, ದೀರ್ಘಸಮಾಸಗಳಿದ್ದರೂ ಅರ್ಥಕ್ಲೇಶವಿಲ್ಲ. ವರ್ಣನೆಗಳು ಹೃದಯಂಗಮವಾಗಿವೆ. ಉದಾಹರಣೆಗಾಗಿ ಇಲ್ಲಿ ಕೆಲವು ವಾಕ್ಯ ಖಂಡಗಳನ್ನು ಕೊಡಲಾಗಿದೆ—

(1)……ಸುವರ್ಣಸಿಕತಾಪಲಾಶಿನೀ-ಪ್ರಭೃತೀನಾಂ ನದೀನಾಂ ಅತಿಮಾತ್ರೋದ್ವೃತ್ತೈರ್ವ್ವೇ*ಗೈಃ ಸೇತುಮ…(ಯಮಾ)ಣಾನುರೂಪ ಪ್ರತೀಕಾರಮಪಿ ಗಿರಿಶಿಖರ-ತರು-ತಟಾಟ್ಟಾಲಕೋಪತ(ಲ್ಪ)-ದ್ವಾರ-ಶರಣೋಚ್ಛ್ರಯ-ವಿಧ್ವಂಸಿನಾ ಯುಗನಿಧನ-ಸದೃಶ-ಪರಮ ಘೋರ

---

*ವೇಗೈಃ



ವೇಗೇನ ವಾಯುನಾ ಪ್ರಮಥಿ[ತ]ಸಲಿಲ ವಿಕ್ಷಿಪ್ತ ಜರ್ಜ್ಜರೀಕೃತಾವ[ದೀ][ರ್ಣ][ಕ್ಷಿ] ಪ್ತಾಶ್ಮ-ವೃಕ್ಷ ಗುಲ್ಮ ಲತಾಪ್ರತಾನಂ ಆನದೀ[ತ] ಲಾದಿತ್ಯುದ್ಘಾಟಿತಮಾಸೀತ್ ।

(2)…………ಶಕ್ತೇನ ದಾಂತೇನಾಚಪಲೇನಾವಿಸ್ಮಿತೇನಾರ್ಯ್ಯೇಣಾಹಾರ್ಯೇಣ……

(3) · · · ಭ್ರಷ್ಟರಾಜಪ್ರತಿಷ್ಠಾಪಕೇನ ಯಥಾರ್ಥಹಸ್ತೋಚ್ಛ್ರಯಾರ್ಜಿತೋರ್ಜಿತ ಧರ್ಮಾನುರಾಗೇನ * ಶಬ್ದಾರ್ತ್ಥಗಾಂಧರ್ವ್ವನ್ಯಾಯಾದ್ಯಾನಾಂ ವಿದ್ಯಾನಾಂ ಮಹತೀನಾಂ ಪಾರಣಧಾರಣವಿಜ್ಞಾನಪ್ರಯೋಗಾವಾಪ್ತವಿಪುಲಕೀರ್ತಿನಾ………

## ಸಮುದ್ರಗುಪ್ತನ ಅಲಹಾಬಾದ್ ಶಾಸನ (ಕ್ರಿ. ಶ. 350)

ಈ ಪ್ರಶಸ್ತಿಶಾಸನವು ಅಲಹಾಬಾದ್ ಕೋಟೆಯೊಳಗಿರುವ ಶಿಲಾಸ್ತಂಭದ ಮೇಲೆ ಔತ್ತರೇಯ ವರ್ಗದ ಅರ್ವಾಚೀನ ಬ್ರಾಹ್ಮೀಲಿಪಿಯಿಂದ ಕೆತ್ತಲ್ಪಟ್ಟಿದೆ. ರಚಿತವಾದ ಕಾಲವನ್ನು ತಿಳಿಸಿಲ್ಲವಾದರೂ ಶಾಸನದ ಕಾಲ ಸು. ಕ್ರಿ. ಶ. 350 ಎಂದು ಊಹಿಸಲಾಗಿದೆ. ಇದನ್ನು ರಚಿಸಿದ ಕವಿ ಧ್ರುವಭೂತಿದಂಡಾಧಿಪನ ಮಗ ಹರಿಷೇಣ, ಇವನು ತಂದೆಯಂತೆಯೇ ಮಹಾದಂಡನಾಯಕನೂ, ಸಂಧಿವಿಗ್ರಹಿಕನೂ, ಕುಮಾರಾಮಾತ್ಯನೂ ಆಗಿದ್ದನು. ದಿಗ್ವಿಜಯಸಮಯದಲ್ಲಿ ಇವನು ಸಮುದ್ರಗುಪ್ತನ ಜತೆಗೆ ಪ್ರಯಾಣ ಮಾಡುತ್ತಿದ್ದನೆಂದು ಊಹಿಸಲವಕಾಶವಿದೆ. ಸಮುದ್ರಗುಪ್ತನ ಪ್ರಿಯ, ಸನ್ನಿಧಾನದ ಮಹಾದಂಡನಾಯಕ, ತಿಲಭಟ್ಟಕನ ಮೇಲ್ವಿಚಾರಣೆಯಲ್ಲಿ ಈ ಶಾಸನವನ್ನು ಸ್ಥಾಪಿಸಲಾಯಿತು. ಇದು ಮಹಾಚಕ್ರವರ್ತಿ, ಮಹಾಯೋಧ, ಕವಿ, ಕವಿಜನ ಪೋಷಕ ಮತ್ತು ಸುಸಂಸ್ಕೃತ ಚಕ್ರವರ್ತಿಯಾದ ಸಮುದ್ರಗುಪ್ತನ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ತಿಳಿಸುತ್ತದೆ. ಸಮುದ್ರಗುಪ್ತನು ಉತ್ತರಭಾರತ ಮತ್ತು ದಕ್ಷಿಣಾಪಥಗಳನ್ನು ಗೆದ್ದು ಅಶ್ವಮೇಧಯಾಗವನ್ನು ಮಾಡಿದನು.

ಹರಿಷೇಣನೇ ಈ ಶಾಸನವನ್ನು ಕಾವ್ಯವೆಂದು ಕರೆದಿದ್ದಾನೆ. ಗದ್ಯಪದ್ಯಗಳು ಬೆರೆತಿರುವ ಈ ಕಾವ್ಯ ಅಲಂಕಾರಿಕರ ವರ್ಗೀಕರಣದದಂತೆ ಚಂಪೂ ಆಗಿದೆ. ಮೊದಲು 8 ಪೀಠಿಕಾರೂಪವಾದ ಪದ್ಯಗಳಿದ್ದು, ನಂತರ ದೀರ್ಘ ಗದ್ಯ ಹರಿದು ಕೊನೆಯಲ್ಲಿ ಒಂದು ಪದ್ಯವಿದೆ. ಪದ್ಯಗಳ ಭಾಷೆ ಸರಳ ಮತ್ತು ಸುಲಭ, ಗದ್ಯದ ಭಾಷೆ ಸಮಾಸಭೂಯಿಷ್ಠವಾಗಿದ್ದು ಓಜಸ್ವಿಯಾಗಿದೆ. ಗದ್ಯದ ಸಮಾಸರಚನೆಯಲ್ಲಿ ಲಯದ ಸೊಗಸಿದೆ. ಶಬ್ದಾಲಂಕಾರಗಳಲ್ಲಿ ಅನುಪ್ರಾಸಶ್ಲೇಷೆಗಳೂ, ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕಗಳೂ ಬಂದಿವೆ. ಸಗ್ಧರಾ, ಶಾರ್ದೂಲವಿಕ್ರೀಡಿತ ಮಂದಾಕ್ರಾಂತಾ ಮತ್ತು ಪೃಥ್ವೀ ಛಂದಸ್ಸುಗಳನ್ನು ಪದ್ಯರಚನೆಗೆ ಬಳಸಿಕೊಳ್ಳಲಾಗಿದೆ. ಈ ಶಾಸನವು ಸಾಹಿತ್ಯಕ ಮೌಲ್ಯಗಳಿಂದ ಕೂಡಿದ ಒಂದು ಚಾರಿತ್ರ್ಯಕ ದಾಖಲೆಯಾಗಿದೆ. ಹರಿಷೇಣನ ಕಾವ್ಯ ರಚನಾ ಸಾಮರ್ಥ್ಯದ ಪರಿಚಯಕ್ಕಾಗಿ ಒಂದೆರಡು ಭಾಗಗಳನ್ನಿಲ್ಲಿ ಉದಾಹರಿಸಲಾಗಿದೆ.

---

* ರಾಗೇಣ

ಗಳಿಸಿದವನೆಂದು ಹೇಳಿಕೊಂಡಿದ್ದಾನೆ.* ಈ ಪ್ರಶಸ್ತಿಶಾಸನವು ಚಾಲುಕ್ಯವಂಶದ ಅರಸರ ವೃತ್ತಾಂತವನ್ನೂ, ಮುಖ್ಯವಾಗಿ ಸತ್ಯಾಶ್ರಯ ಪುಲಿಕೇಶಿಯ ವ್ಯಕ್ತಿತ್ವ ಮತ್ತು ದಿಗ್ವಿಜಯಗಳನ್ನೂ ತಿಳಿಸುತ್ತದೆ.

ಈ ಶಾಸನದಲ್ಲಿ ವಿವಿಧ ಛಂದಸ್ಸಿನ 37 ಪದ್ಯಗಳಿವೆ. ಸಾಲಂಕಾರವೂ, ಗಂಭೀರವೂ, ಪ್ರೌಢವೂ ಆದ ವೈದರ್ಭೀ ಶೈಲಿಯಲ್ಲಿ ಈ ಪದ್ಯಗಳು ರಚಿತವಾಗಿವೆ. ಉಪಮೆ, ರೂಪಕ, ಸಹೋಕ್ತಿ, ಅಪ್ರಸ್ತುತಪ್ರಶಂಸಾ, ಉತ್ಪ್ರೇಕ್ಷಾ, ವಿರೋಧಾಭಾಸ ಮುಂತಾದ ಅರ್ಥಾಲಂಕಾರಗಳೂ, ಯಮಕಾನುಪ್ರಾಸಗಳೂ ಸುಂದರವಾಗಿವೆ. ದಾಕ್ಷಿಣಾತ್ಯರಿಗೆ ಪ್ರಿಯವಾದ ಉತ್ಪ್ರೇಕ್ಷೆಯ ಕಲ್ಪನೆಯಲ್ಲಿ ಒಳ್ಳೆಯ ಚಾತುರ್ಯವಿದೆ, ಆರ್ಯಾ, ಇಂದ್ರವಜ್ರಾ, ದ್ರುತವಿಲಂಬಿತ, ಮತ್ತೇಭವಿಕ್ರೀಡಿತ, ಮಾಲಿನೀ. ಮಂದಾಕ್ರಾಂತಾ ಮೊದಲಾದ ಛಂದಸ್ಸುಗಳನ್ನು ಬಳಸಿಕೊಳ್ಳಲಾಗಿದೆ, ಛಂದಸ್ಸು ಮತ್ತು ಪದಬಂಧಗಳ ಮೇಲೆ ಪ್ರಭುತ್ವವಿದೆ. ವರ್ಣನೆಗಳು ಹೃದಯಂಗಮವಾಗಿವೆ. ರಘುವಂಶ ಮತ್ತು ಕಿರಾತಾರ್ಜುನೀಯಗಳೊಡನೆ ಚೆನ್ನಾಗಿ ಹೋಲುವ ಕೃತಿಭಾಗಗಳು ರವಿಕೀರ್ತಿಯ ಈ ಶಾಸನದಲ್ಲಿ ಕಂಡುಬರುತ್ತವೆ.† ಕಾಳಿದಾಸ ಭಾರವಿಗಳಿಂದ ಈ ಕವಿಯು ಪ್ರಭಾವಿತನಾಗಿರುವುದು ಸ್ಪಷ್ಟವಾಗಿದೆ. ಈ ಶಾಸನವು ಒಂದು ಐತಿಹಾಸಿಕ ದಾಖಲೆಯಾಗಿರುವಂತೆ ಉತ್ತಮ ಕಾವ್ಯವೂ ಆಗಿದೆ. ಇದು ಜಿನೇಂದ್ರನ ಪ್ರಾರ್ಥನೆಯಿಂದ ಪ್ರಾರಂಭವಾಗಿ ರವಿಕೀರ್ತಿಯ ವಿಜಯಾಶಂಸೆಯಲ್ಲಿ ಮುಗಿದಿದೆ. ಕವಿಯ ಪಾಂಡಿತ್ಯ ಮತ್ತು ಪ್ರತಿಭೆಗಳ ಪರಿಚಯಕ್ಕಾಗಿ ಕೆಲವು ಉದಾಹರಣೆಗಳನ್ನಿಲ್ಲಿ ಕೊಡಲಾಗಿದೆ :—

ನಲಮೌರ್ಯಕದಮ್ಬಕಾಲರಾತ್ರಿ-
ಸ್ತನಯಸ್ತಸ್ಯ ಬಭೂವ ಕೀರ್ತಿವರ್ಮಾ ।
ಪರದಾರನಿವೃತ್ತಚಿತ್ತವೃತ್ತೇ-
ರಪಿ ಧೀರ್ಯಸ್ಯ ರಿಪುಶ್ರಿಯಾನುಕೃಷ್ಟಾ ॥ 9 ॥

ಸ್ಫುರನ್ಮಯೂಖೈರಸಿದೀಪಿಕಾಶತೈ-
ರ್ವ್ಯುದಸ್ಯ ಮಾತಙ್ಗತಮಿಸ್ರಸಞ್ಚಯಮ್ ।
ಅವಾಪ್ತವಾನ್ಯೋ ರಣರಙ್ಗಮಂದಿರೇ
ಕಟಚ್ಛುರಿಶ್ರೀಲಲನಾಪರಿಗ್ರಹಮ್ ॥ 12 ॥

ವರದಾತುಙ್ಗತರಙ್ಗರಙ್ಗವಿಲಸದ್ಧಂಸಾವಲೀಮೇಖಲಾಂ
ವನವಾಸೀಮವಮೃದ್ನತಃ ಸುರಪುರಪ್ರಸ್ಪರ್ಧಿನೀಂ ಸಮ್ಪದಾ ।
ಮಹತಾ ಯಸ್ಯ ಬಲಾರ್ಣವೇನ ಪರಿತಃ ಸಞ್ಛಾದಿತೋರ್ವೀತಲಮ್
ಸ್ಥಲದುರ್ಗಂ ಜಲದುರ್ಗತಾಮಿವ ಗತಂ ತತ್ತತ್ಕ್ಷಣೇ ಪಶ್ಯತಾಮ್ ॥ ॥ 18 ॥

ಅಪರಿಮಿತವಿಭೂತಿಸ್ಫೀತ ಸಾಮನ್ತಸೇನಾ—
ಮುಕುಟಮಣಿಮಯೂಖಾಕ್ರಾನ್ತಪಾದಾರವಿನ್ದಃ ।
ಯುಧಿ ಪತಿತಗಜೇನ್ದ್ರಾನೀಕಬೀಭತ್ಸಭೂತೋ
ಭಯವಿಗಲಿತಹರ್ಷೋ ಯೇನ ಚಾಕಾರಿ ಹರ್ಷಃ ॥ ॥ 23 ॥

ಚೋಲಕೇರಲಪಾಣ್ಡ್ಯಾನಾಂ ಯೋಽಭೂತ್ತತ್ರ ಮಹರ್ದ್ಧಯೇ ।
ಪಲ್ಲವಾನೀಕನೀಹಾರತುಹಿನೇತರದೀಧಿತಿಃ ॥ ॥ 31 ॥

ಜುನಾಗಡದಲ್ಲಿ ಬಂಡೆಯ ಮೇಲೆ ಕೆತ್ತಿರುವ ಸ್ಕಾಂದಗುಪ್ತನ (ಕ್ರಿ. ಶ. 5ನೆಯ ಶತಮಾನ) ಶಾಸನದಲ್ಲಿ ವಿವಿಧ ಛಂದಸ್ಸಿನ 47 ಪದ್ಯಗಳಿವೆ. ಕವಿಯ ಪದ್ಯರಚನಾಸಾಮರ್ಥ್ಯದ ಪರಿಚಯಕ್ಕಾಗಿ ಒಂದು ಉದಾಹರಣೆ—

ಕ್ರಮೇಣ ಬುದ್ಧ್ಯಾ ನಿಪುಣಂ ಪ್ರಧಾರ್ಯ
ಧ್ಯಾತ್ವಾ ಚ ಕೃತ್ಸ್ನಾನ್ಗುಣದೋಷಹೇತೂನ್ ।
ವ್ಯಪೇತ್ಯ ಸರ್ವ್ವಾನ್ಮನುಜೇನ್ದ್ರಪುತ್ರಾನ್
ಲಕ್ಷ್ಮೀಃ ಸ್ವಯಂ ಯಂ ವರಯಾಂಚಕಾರ ॥ 5 ॥

ಕಾವ್ಯಮಯವಾದ ಗದ್ಯಶಾಸನಗಳೂ ಇವೆ. ಪದ್ಯಶಾಸನಗಳು ಅಧಿಕವಾಗಿವೆ. ಇವುಗಳನ್ನು ಬರೆದ ಕವಿಗಳು ಪ್ರತಿಭಾಸಂಪನ್ನರೆಂಬುದು ಇವುಗಳ ಕಾವ್ಯಧರ್ಮವೇ ಸಾರುತ್ತದೆ. ಕಾವ್ಯವೆಂದು ಒಪ್ಪಿಕೊಳ್ಳಬಹುದಾದ ಚಂಪೂರೂಪವಾದ ಶಾಸನಗಳೂ ಇವೆ. ದೀರ್ಘಕಾಲದಿಂದ ಬೆಳೆದು ಬಂದ ಕಾವ್ಯಕಲ್ಪತರುವಿಗೆ ಶಾಸನಗಳ ಕೊಡುಗೆಯೂ ಕಡಿಮೆಯಲ್ಲ. ಮುಂದಿನ ಪೀಳಿಗೆ ಗದ್ಯ–ಪದ್ಯ–ಚಂಪೂರೂಪವಾದ ಕಾವ್ಯ–ಪ್ರಕಾರಗಳನ್ನು ನಿರ್ಮಿಸಲು ಶಾಸನಗಳಿಂದ ಸಾಕಷ್ಟು ಪ್ರೇರಣೆಯೂ ದೊರೆತಿರಬಹುದು. ಕೇವಲ ಚರಿತ್ರೆಯನ್ನು ತಿಳಿಸುವುದು ಭಾರತೀಯರ ಸ್ವಭಾವವಲ್ಲವೆಂದು ತೋರುತ್ತದೆ. ಆದ್ದರಿಂದಲೇ ಚರಿತ್ರಾಂಶಗಳ ಉಲ್ಲೇಖನಕ್ಕಾಗಿ ಹೊರಟ ಶಾಸನಗಳೂ ಕಾವ್ಯಗಳಾಗಿ ಪರಿಣಮಿಸಿವೆ.

---

* ಯೇನಾಯೋಜಿನವೇಶ್ಮಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।
ಸ ವಿಜಯತಾಂ ರವಿಕೀರ್ತಿಃ ಕವಿತಾಶ್ರಿತಕಾಳಿದಾಸಭಾರವಿಕೀರ್ತಿಃ ॥37॥

† ಪುಲಿಕೇಶಿಯ ವಿಜಯ ವೃತ್ತಾಂತವನ್ನು ವರ್ಣಿಸಿರುವ 17ರಿಂದ32ರ ವರೆಗಿನ ಪದ್ಯಗಳಲ್ಲಿ ರಘುವಂಶದ ನಾಲ್ಕನೆಯ ಸರ್ಗದಲ್ಲಿರುವ ರಘುವಿನ ದಿಗ್ವಿಜಯದ ಅನುಕರಣವಿದೆ.

| ಶಾಸನ | | ರಘುವಂಶ | |
|---|---|---|---|
| ನೃತ್ಯದ್ಭೀಮಕಬಂಧ | (5) | ನೃತ್ಯತ್ಕಬಂಧಂ ಸಮರೇ ದದರ್ಶ | (7-48) |
| ಜಗದೇಕನಾಥಃ | (6) | ಜಗದೇಕನಾಥಃ | (5-23) |
| ದಂಡೋಪನತ | (22) | ದಂಡೋಪತನ ಚರಿತ | (4-29) |
| ಶಾಸನ | | ಕಿರಾತಾಜುನೀಯ | |
| ವೀತಜರಾಮರಣಜನ್ಮನೋ | (1) | ವೀತಜನ್ಮಜರಸಾಂ | (5-22) |
| ವಪುಃಪ್ರಕರ್ಷಾತ್ | (6) | ವಪುಃಪ್ರಕರ್ಷಾತ್ | (3-2) |
| ಪೃಥುಕದಂಬಕದಂಬಕದಂಬಕಂ | (10) | ಪೃಥುಕದಂಬಕದಂಬಕ | (5-9) —ಇತ್ಯಾದಿ |

## ನಾಟಕಗಳು

### ನಾಟಕಲಕ್ಷಣ

ಅಲಂಕಾರಿಕರು ಕಾವ್ಯಗಳನ್ನು ಸಾಧಾರಣವಾಗಿ ಶ್ರವ್ಯ ಮತ್ತು ದೃಶ್ಯಗಳೆಂದು ವಿಭಾಗಿಸುತ್ತಾರೆ. ಓದಿ, ಕೇಳಿ ಆನಂದಪಡಬಹುದಾದ ಗದ್ಯ, ಪದ್ಯ ಮುಂತಾದುವುಗಳನ್ನು ಶ್ರವ್ಯಕಾವ್ಯಗಳೆಂದೂ, ನೋಡಿ ಆನಂದಪಡಬಹುದಾದ ನಾಟಕಗಳನ್ನು ದೃಶ್ಯಕಾವ್ಯಗಳೆಂದೂ ಪರಿಗಣಿಸುತ್ತಾರೆ. ಆನಂದನಿಸ್ಯಂದಿಯಾದ ನಾಟಕ ಸಾಹಿತ್ಯದ ಅಪೂರ್ವರಮಣೀಯವಾದ ಕೊಡುಗೆ : ಸಾಹಿತ್ಯದ ಮಂಜರಿಯಲ್ಲಿ ಕೊನೆಗೆ ಅರಳಿದ ಪರಿಮಳ ಬೀರುವ ಕುಸುಮ ; ಇದನ್ನು ಸವಿದು ತಣಿಯಲು ಬಯಸದವರಿಲ್ಲ. ಇದರಲ್ಲಿ ಸಂಗೀತ, ಸಾಹಿತ್ಯ, ಅಭಿನಯ ಮುಂತಾದ ಲಲಿತಕಲೆಗಳು ಸಮಂಜಸವಾಗಿ ಮೇಳವಿಸಿ ಪಂಡಿತರಿಗೂ, ಪಾಮರರಿಗೂ ಅನಿರ್ವಚನೀಯವಾದ ಆನಂದವನ್ನು ಒದಗಿಸುತ್ತದೆ. ಕಲ್ಪನಾವಿಲಾಸಕ್ಕೆ, ಭಾವವೈಭವಕ್ಕೆ, ಸುಮನೋಹರ ಸನ್ನಿವೇಶಗಳ ನಿರ್ಮಾಣಕ್ಕೆ ಒಟ್ಟಿನಲ್ಲಿ ಸಹೃದಯಪ್ರೇಕ್ಷಕರಹೃದಯವನ್ನು ಸಂಕೀರ್ಣಭಾವಗಳ ರಂಗವನ್ನಾಗಿ ಪರಿವರ್ತಿಸಲು ನಾಟಕ ಪ್ರಭಾವಶಾಲಿಯಾದ ಮಾಧ್ಯಮ. ಮಾನವಹೃದಯದ ರಾಗ, ದ್ವೇಷ, ಮದ, ಮಾತ್ಸರ್ಯ ಮುಂತಾದ ಗುಣಾವಗುಣಗಳ ಪರಿವರ್ತನೆ, ಪರಿಣಾಮಗಳನ್ನು ಮನಮುಟ್ಟುವಂತೆ ಕಣ್ಣಿಗೆ ಕಟ್ಟುವಂತೆ ಎತ್ತಿ ತೋರಿಸಿ, ರಸದ ಹೊನಲನ್ನು ಹರಿಸಿ, ಚಿತ್ತ ಶುದ್ಧಿಯನ್ನುಂಟುಮಾಡಿ, ಸ್ವಾರ್ಥದಿಂದ ನಿಃಸ್ವಾರ್ಥದ ಕಡೆಗೆ ಕೈಹಿಡಿದು ನಡೆಸಿ ಜೀವನದ ಸತ್ಯವನ್ನು ತಿಳಿಸುವ ದಿವ್ಯ ಕಲೆಯೇ ನಾಟಕ. ನಾಟಕದ ವಿಷಯದಲ್ಲಿ ಕಾಳಿದಾಸನ ಅಭಿಪ್ರಾಯವಿದು—

> ದೇವಾನಾಮಿದಮಾಮನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಂ
> ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ ।
> ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೇ
> ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ ॥
>
> —ಮಾಲವಿಕಾಗ್ನಿಮಿತ್ರ—ಅಂ. 1. ಪ. 4.

ನಾಟಕಗಳ ಸೊಗಸು, ಸೌಂದರ್ಯಗಳನ್ನುಂಡು ಚಪ್ಪರಿಸಿದವರು ಕಾವ್ಯೇಷು ನಾಟಕಂ ರಮ್ಯಂ, 'ನಾಟಕಾಂತಂ ಸಾಹಿತ್ಯಂ', 'ನಾಟ್ಯವೇದ' ಮುಂತಾಗಿ ಪ್ರಶಂಸಿಸಿದ್ದಾರೆ. ಕಾಳಿದಾಸ, ಭಾಸ, ಭವಭೂತಿ ಮೊದಲಾದವರು ನಾಟಕಗಳನ್ನು ರಚಿಸಿ ಅಮರಕೀರ್ತಿಯನ್ನು ಗಳಿಸಿದ್ದಾರೆ. ಇವುಗಳ ಅಭಿನಯಕ್ಕಾಗಿ ಒಂದು ದೊಡ್ಡ ನಟವರ್ಗವೇ ಇದ್ದಿತು. ಯಾತ್ರೆ, ಉತ್ಸವ, ಹಬ್ಬ, ಹರಿದಿನಗಳು ನಾಟಕಗಳಿಂದ ಹಿರಿಮೆ-ಗರಿಮೆಗಳನ್ನು ಪಡೆಯುತ್ತವೆ. ವೇದಗಳ ಕಾಲದಿಂದ ಇಂದಿನವರೆಗೆ ಅಭಿನಯರುಚಿಯು ನೂರ್ಮಡಿಯಾಗಿ ಬೆಳೆಯುತ್ತಲೇ ಬರುತ್ತಿದೆ. ಶಿವನೇ ಆದಿನಟ : ಅವನ ಸೃಷ್ಟಿಯೇ ಒಂದು ಅದ್ಭುತ ನಾಟಕ—



> ಆಂಗಿಕಂ ಭುವನಂ ಯಸ್ಯ ವಾಚಿಕಂ ಸರ್ವವಾಙ್ಮಯಂ ।
> ಆಹಾರ್ಯಂ ಚಂದ್ರತಾರಾದಿ ತಂ ನುಮಃ ಸಾತ್ತ್ವಿಕಂ ಶಿವಂ ॥
>
> —ಸಂಗೀತರತ್ನಾಕರ.

ಕ್ರಿ. ಪೂ. 5ನೆಯ ಶತಮಾನದಿಂದಲೇ ಗ್ರೀಸಿನಲ್ಲಿ ರುದ್ರನಾಟಕಗಳು (Tragedy) ಮತ್ತು ಪ್ರಹಸನಗಳು (Comedy) ಮೂಡಿ ಬೆಳೆದಿವೆ. ಈ ನಾಟಕಲಕ್ಷ್ಯಗಳಿಗೆ ಲಕ್ಷಣಶಾಸ್ತ್ರವೂ ರಚಿತವಾಗಿದೆ. ಗ್ರೀಕ್ ನಾಟಕಸಾಹಿತ್ಯ ಅಂಕುರಿಸಿ, ವಿಕಾಸಗೊಂಡು ಅವಸಾನ ಹೊಂದು ವಷ್ಟರಲ್ಲಿ ರೋಮನ್ನರು ಗ್ರೀಕರನ್ನು ಸೋಲಿಸಿ, ಸಾಮ್ರಾಜ್ಯ ಕಟ್ಟಿದರು. ಗ್ರೀಕ್ ನಾಟಕಗಳ ಪ್ರಭಾವದಿಂದ ರೋಮನ್ ನಾಟಕಗಳು ರೂಪಗೊಂಡವು. ಗ್ರೀಕ್ ನಾಟಕಗಳನ್ನೇ ಭಾಷಾಂತರ, ರೂಪಾಂತರ, ಸಂಕಲನಾದಿಗಳ ಮೂಲಕ ಲ್ಯಾಟಿನ್ ನಾಟಕಗಳು ಅನುಕರಿಸಿದವು. ಸಂಸ್ಕೃತ ನಾಟಕಗಳು ಕ್ರಿ. ಶ. ಒಂದನೆಯ ಶತಮಾನದಿಂದ ಪ್ರಚಾರದಲ್ಲಿವೆ. ಇವುಗಳ ಮೇಲೆ ಗ್ರೀಕ್ ನಾಟಕಗಳ ಪ್ರಭಾವವಿದೆಯೆಂದು 19ನೆಯ ಶತಮಾನದ ಪಾಶ್ಚಾತ್ಯ ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಇಂಗ್ಲೀಷ್‌ನಾಟಕಗಳು ಹುಟ್ಟುವ ವೇಳೆಗೆ ಸಂಸ್ಕೃತನಾಟಕಗಳು ಪೂರ್ಣಾಕಾರ ವನ್ನು ಸಾಧಿಸಿಕೊಂಡು ಬೆಳಗುತ್ತಿದ್ದವು. ದೇಶಭಾಷೆಗಳಲ್ಲಿಯೂ ಸಾಕಷ್ಟು ನಾಟಕಗಳಿವೆ. ಗೊಂಬೆಯಾಟ, ಬಯಲಾಟ, ಯಕ್ಷಗಾನ, ಕಥಕ್ಕಳಿ ಮುಂತಾದವೂ ನಾಟಕಜಾತಿಗೇ ಸೇರಿವೆ. ನಾಟಕಗಳು ವಸ್ತುನಿಮಿತ್ತವಾಗಿ ಪೌರಾಣಿಕ, ಧಾರ್ಮಿಕ, ಐತಿಹಾಸಿಕ, ಸಾಮಾಜಿಕಗಳೆನಿಸುತ್ತವೆ. ವಸ್ತು, ನಾಯಕ, ರಸಭೇದಗಳಿಂದಾದ ಸ್ವರೂಪನಿಮಿತ್ತವಾಗಿ ಇವು 'ರೂಪಕಗಳು' (ನಾಟಕ, ಪ್ರಕರಣ, ಭಾಣ ಇತ್ಯಾದಿ) ಮತ್ತು 'ಉಪರೂಪಕ' (ನಾಟಿಕಾ, ತ್ರೋಟಕ, ಸಟ್ಟಕ ಇತ್ಯಾದಿ)ಗಳಾಗುತ್ತವೆ. 'ಕುಣಿತ' ಪ್ರಧಾನವಾದ, 'ಹಾಡು' ಪ್ರಧಾನವಾದ, ಎರಡೂ ಇರುವ, ಎರಡೂ ಇಲ್ಲದ ನಾಟಕಗಳಿವೆ. ಈಚೆಗೆ ನಾಟಕಗಳು ಸಂಗೀತನರ್ತನಗಳಿಲ್ಲದ, ಪರದೆಯೇ ಮುಂತಾದ ವಿಶೇಷರಂಗಸಜ್ಜಿಕೆಯೂ ಇಲ್ಲದ, ಚಮತ್ಕಾರ ತುಂಬಿದ ಸಂವಾದಗಳಾಗಿ ಪರಿಣಮಿಸುತ್ತಿವೆ. ಇವುಗಳಿಂದ ಒಂದು ವಿಧವಾದ ಮಾನಸೋಲ್ಲಾಸವೇನೋ ಲಭಿಸುತ್ತದೆ ; ಆದರೆ ಪ್ರೇಕ್ಷಕರ ಸಹಜವಾದ ವಿಭಿನ್ನರುಚಿಗೆ ತೃಪ್ತಿಯಾಗುವುದಿಲ್ಲ. ವಾಸ್ತುಶಿಲ್ಪ, ಚಿತ್ರಶಿಲ್ಪ ಗಳಿಂದ ರಂಜಿಸುವ ರಂಗಮಂದಿರದಲ್ಲಿ ವಾದ್ಯಗೋಷ್ಠಿ, ವೇಷಭೂಷಣ ನೇಪಥ್ಯರಚನೆ, ಅಭಿನಯ, ನರ್ತನ, ಸಂಗೀತ, ಸಂವಾದಗಳ ಸಮಾಯೋಗದಿಂದ ಲಭಿಸುವ ಸಂಕೀರ್ಣ ರುಚಿಯು ಅನಿರ್ವಚನೀಯವಾದುದು. 'ನಾಟಕ' ರೂಪಕಗಳಲ್ಲೊಂದು ಒಳಭೇದವಾದರೂ ಎಲ್ಲ ರೂಪಕಗಳನ್ನು ನಾಟಕಗಳೆಂದು ಕರೆಯುವುದು ವಾಡಿಕೆ.

### ಲಕ್ಷಣಗ್ರಂಥಗಳು

ನಾಟಕದಲ್ಲಿ ನಾನಾಕಲೆಗಳ ಸಮಾಯೋಗವಿರುವುದರಿಂದ ಅಲಂಕಾರಶಾಸ್ತ್ರದಲ್ಲಿ ಕಾವ್ಯಾಂಶ, ನಾಟ್ಯಶಾಸ್ತ್ರದಲ್ಲಿ ಅಭಿನಯಾಂಶ, ಸಂಗೀತಶಾಸ್ತ್ರದಲ್ಲಿ ಸಂಗೀತಾಂಶ, ವಾಸ್ತುಶಾಸ್ತ್ರದಲ್ಲಿ ರಂಗಮಂದಿರದ ನಿರ್ಮಾಣ ಹೀಗೆ ಒಂದೊಂದು ಕಲೆಗೆ ಸಂಬಂಧಿಸಿದಂತೆ ಒಂದೊಂದು ಶಾಸ್ತ್ರವೇ

ಬೆಳೆದಿದೆ. ಭರತ ನಾಟ್ಯಶಾಸ್ತ್ರ ಈ ಅಂಶಗಳನ್ನೂ ತಿಳಿಸುತ್ತದೆ. ಈ ಪ್ರಾಚೀನ ಲಕ್ಷಣ
ಗ್ರಂಥವನ್ನು ಭರತಶಾಸ್ತ್ರವೆಂದೂ ಕರೆಯುತ್ತಾರೆ.

ಭರತಮುನಿಯ ನಾಟ್ಯಶಾಸ್ತ್ರವೇ ಅತ್ಯಂತ ಪ್ರಾಚೀನವಾದ ಲಕ್ಷಣಗ್ರಂಥ. ಇವನಿಗೂ
ಹಿಂದೆ " ಶಿಲಾಲಿ " ಮತ್ತು " ಕೃಶಾಶ್ವ "ರು ನಟಸೂತ್ರಗಳನ್ನು ರಚಿಸಿದ್ದಂತೆ ಪಾಣಿನಿಯ
ವ್ಯಾಕರಣದಿಂದ ತಿಳಿದುಬರುತ್ತದೆ. ಭರತ ನಾಟ್ಯಶಾಸ್ತ್ರದ ಕಾಲವನ್ನು ಕ್ರಿ. ಶ. ಒಂದು
ಅಥವಾ ಎರಡನೆಯ ಶತಮಾನವೆಂದು ಹೇಳುತ್ತಾರೆ. ಇದರ ಎಲ್ಲ ಭಾಗಗಳು ಒಂದೇ ಕಾಲದ
ವಲ್ಲವೆಂಬ ಅಭಿಪ್ರಾಯವಿದೆ. ಇದು ಪ್ರಧಾನವಾಗಿ ಅನುಷ್ಟುಪ್ ಶ್ಲೋಕಗಳಿಂದ ರಚಿತ
ವಾಗಿದ್ದು ಅಲ್ಲಲ್ಲಿ ವೃತ್ತ ಮತ್ತು ಗದ್ಯಗಳನ್ನು ಹೊಂದಿದೆ. ಇದರಲ್ಲಿ ಮೂವತ್ತೇಳು
ಅಧ್ಯಾಯಗಳಿವೆ. ಪೀಠಿಕಾ ಭಾಗದಲ್ಲಿ ನಾಟ್ಯದ ಉತ್ಪತ್ತಿ, ಉದ್ದೇಶ, ಮಂಟಪ ವಿಧಾನ,
ಪೂರ್ವರಂಗ ವಿಧಾನಗಳಿವೆ. ಮುಂದಿನ ಅಧ್ಯಾಯಗಳಲ್ಲಿ ರಸ, ಭಾವ, ಅಭಿನಯ, ಧರ್ಮಿ,
ವೃತ್ತಿ, ಪ್ರವೃತ್ತಿ, ಸಿದ್ಧಿ, ಸ್ವರ, ಆತೋದ್ಯ, ಗಾನ, ಭೂಲೋಕಕ್ಕೆ ಭರತನು ನಾಟ್ಯ ತಂದುದು
ನಿರೂಪಿತವಾಗಿವೆ. ಬಹಳಮಟ್ಟಿಗೆ ಮುಂದಿನ ಲಕ್ಷಣಗ್ರಂಥಗಳು ಈ ಕೃತಿಯನ್ನವಲಂಬಿಸಿವೆ.
ಇದಕ್ಕೆ ಅಭಿನವಗುಪ್ತನು (ಕ್ರಿ. ಶ. 1000) ' ಅಭಿನವಭಾರತೀ ' ಎಂಬ ವ್ಯಾಖ್ಯಾನವನ್ನು
ಬರೆದಿದ್ದಾನೆ. ಇದು ಸ್ವತಂತ್ರಕೃತಿಯಷ್ಟು ಬೆಲೆಯುಳ್ಳದ್ದಾಗಿದೆ.

ಸಾಮಾನ್ಯವಾಗಿ ಮುಂದಿನ ಗ್ರಂಥಗಳು ಒಂದೊಂದು ಶಾಸ್ತ್ರಕ್ಕೇ ಮೀಸಲಾಗಿವೆ.
ಧನಂಜಯನ (ಕಿ. ಶ. 10 ನೆಯ ಶತಮಾನ) ದಶರೂಪಕವು ಹತ್ತು ರೂಪಕವಿಧಗಳನ್ನು,
ವಸ್ತು–ನಾಯಕ–ರಸಗಳನ್ನೂ, ಅಂಕ, ಸಂಧಿ ಮುಂತಾದ ರೂಪಕವಿಚಾರಗಳನ್ನೂ ನಿರೂಪಿ
ಸುತ್ತದೆ. ಶಾರದಾತನಯನ (ಸು. ಕ್ರಿ. ಶ. 1200) " ಭಾವಪ್ರಕಾಶನ "ವು ರಸ, ಭಾವ
ನಾಯಕ, ನಾಯಿಕಾ, ರೂಪಕ ಮತ್ತು ಉಪರೂಪಕಗಳ ಭೇದಗಳನ್ನೂ ತಿಳಿಸುತ್ತದೆ.
ವಿದ್ಯಾನಾಥನ (ಸು. ಕ್ರಿ. ಶ. 1300) ಪ್ರತಾಪರುದ್ರೀಯವು ದೃಶ್ಯಕಾವ್ಯಲಕ್ಷಣಗಳನ್ನು ತಿಳಿಸು
ವುದಲ್ಲದೆ ಲಕ್ಷ್ಯವಾಗಿ ಒಂದು ನಾಟಕವನ್ನೇ ಒಳಗೊಂಡಿದೆ. ವಿದ್ಯಾಧರನ (ಕಿ. ಶ. 1300),
" ಏಕಾವಳಿ " ಯು ಪ್ರತಾಪರುದ್ರೀಯದಂತೆಯೇ ಇದೆ. ವಿಶ್ವನಾಥನ (ಸು. ಕ್ರಿ. ಶ. 1350),
" ಸಾಹಿತ್ಯದರ್ಪಣ "ದ ನಾಲ್ಕು ಅಧ್ಯಾಯಗಳು ದೃಶ್ಯಕಾವ್ಯವಿಧಗಳನ್ನೂ, ಅವುಗಳ ಲಕ್ಷಣ
ಗಳನ್ನೂ ತಿಳಿಸುತ್ತವೆ.

## ನಾಟ್ಯಸ್ವರೂಪ

ನೃತ್ ಮತ್ತು ನಟ್ ಧಾತುಗಳಿಂದ ನಿಷ್ಪನ್ನವಾದ ನೃತ್ತ, ನೃತ್ಯ, ನಾಟ್ಯ, ನಾಟಕಗಳಲ್ಲಿ
ಕುಣಿತವು ಸಮಾನವಾಗಿದ್ದರೂ ಇವುಗಳಿಗೆ ಪರಸ್ಪರ ವ್ಯತ್ಯಾಸವಿದೆ. ನೃತ್ತವು ತಾಳಲಯ
ಗಳನ್ನು ಅನುಸರಿಸಿದ ಕುಣಿತ* ಇದನ್ನು ಒಬ್ಬನಾಗಲೀ ಹಲವರಾಗಲಿ ನಡೆಸಬಹುದು
ಇದರಲ್ಲಿ ಭಾವಪ್ರಕಾಶನವಾಗಲೀ, ಅಭಿನಯವಾಗಲೀ, ಸಂಗೀತವಾಗಲೀ ಇರಬೇಕಾಗಿಲ್ಲ.

* ನೃತ್ತಂ ತಾಲಲಯಾಶ್ರಯಂ—ದಶರೂಪಕ.



ನೃತ್ಯದಲ್ಲಿ ತಾಳಲಯಸಮನ್ವಿತವಾದ ಸಂಗೀತವಿರುತ್ತದೆ ; ಇದರಲ್ಲಿ ಭಾವಾಭಿನಯ ಮುಖ್ಯ.*
ಪ್ರಾಯಿಕವಾಗಿ ಇದು ಒಬ್ಬನ ಕುಣಿತ. ಇದರ ಸುಖದುಃಖಾದಿ ಭಾವ ರಸವಾಗಿ ಪರಿಣಮಿ
ಸುವುದಿಲ್ಲ. ನಾಟ್ಯದಲ್ಲಿಯೂ ಕುಣಿತವೇ ಇದ್ದರೂ 'ಅವಸ್ಥಾನುಕರಣ'ವು ಇದರಲ್ಲಿ ಮುಖ್ಯ.†
ಇದನ್ನು ಅಭಿನಯಿಸುವವನು 'ನಟ'. ಇವ್ವನು ವೇಷಭೂಷಾದಿಗಳಿಂದ ವ್ಯಕ್ತಿಯನ್ನು
ಅನುಕರಿಸುತ್ತಾನೆ ; ಇತರ ಪಾತ್ರಗಳ ಸಹಾಯವನ್ನು ಪಡೆಯುತ್ತಾನೆ. ನಾನಾ ದೃಶ್ಯಗಳನ್ನು
ಕಲ್ಪಿಸಿಕೊಂಡು ವ್ಯಕ್ತಿಯ ಭಾವವನ್ನೂ, ವೃತ್ತಾಂತವನ್ನೂ ಅಭಿನಯದ ಮೂಲಕ
ಪ್ರತಿಫಲಿಸುವಂತೆ ಮಾಡುತ್ತಾನೆ ; ಪ್ರೇಕ್ಷಕರಿಗೆ ರಸದೌತಣವನ್ನು ಒದಗಿಸುತ್ತಾನೆ. ಈ ನಾಟ್ಯವನ್ನು
' ರೂಪ ' ವೆಂದೂ, ' ರೂಪಕ ' ವೆಂದೂ ಕರೆಯುತ್ತಾರೆ. ನಾಟ್ಯವು ನೃತ್ಯದ ವಿಸ್ತೃತರೂಪ.‡
ನಾಟ್ಯದಲ್ಲಿ ಗದ್ಯಪ್ರವೇಶದಿಂದ ಸಂಭಾಷಣೆಯೂ, ಕಥೆಯೂ ಬೆಳೆಯುವುದಕ್ಕೆ ಅನುಕೂಲವಿದೆ.
ನೃತ್ಯ, ಗೀತ, ವಾದ್ಯಗಳಿಂದ ನಾಟಕಕ್ಕೆ ವಿಶೇಷ ಕಳೆ ಬರುತ್ತದೆ. ಗೀತಮಯವಾಗಿದ್ದರೆ
ಗೀತನಾಟಕವಾಗುತ್ತದೆ ; ಗೀತದ ಜೊತೆಗೆ ನಾಟ್ಯವು ಇರುತ್ತದೆ. ಇಂತಹ ನಾಟಕಗಳು
ಗ್ರೀಕ್ ನಾಟಕ ಸಾಹಿತ್ಯರೂಪದಲ್ಲಿರುವಂತೆ ಹಿಂದೆ ಸಂಸ್ಕೃತಸಾಹಿತ್ಯದಲ್ಲಿಯೂ ಇದ್ದಿರಬಹುದು.
ಈಗಿರುವ ಸಂಸ್ಕೃತನಾಟಕಗಳು ಗದ್ಯಪದ್ಯರೂಪವಾಗಿವೆ. ಹಿಂದೆ ನೃತ್ಯಗೀತಗಳನ್ನು ಬೆರೆಸಿ
ಕೊಂಡು ಇವುಗಳನ್ನು ಅಭಿನಯಿಸುತ್ತಿದ್ದಿರಬಹುದು. ಕೆಲವು ಸಂಸ್ಕೃತನಾಟಕಗಳು ಚಂಪೂ
ಕಾವ್ಯಗಳಂತಿವೆ. ದೀರ್ಘಸಮಾಸಗಳಿಂದ ಕೂಡಿ ಪದ್ಯಭೂಯಿಷ್ಠವಾದ ಈ ದೊಡ್ಡ ನಾಟಕ
ಗಳನ್ನು ಓದುವುದಕ್ಕಾಗಿಯೇ ಬರೆದಂತೆ ತೋರುತ್ತದೆ.

ಭರತನು ನಾಟ್ಯಶಾಸ್ತ್ರದಲ್ಲಿ ನಾಟ್ಯಾಂಶಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಿದ್ದಾನೆ. ಅವುಗಳ
ಲಘು ಪರಿಚಯವನ್ನಿಲ್ಲಿ ಕೊಡಲಾಗಿದೆ. ನಾಟ್ಯಶಾಸ್ತ್ರದ ಒಂದು ಕಾರಿಕೆಯಲ್ಲಿ ನಾಟ್ಯಾಂಶಗಳ
ಸಂಗ್ರಹವಿದೆ.

ರಸಾ ಭಾವಾ ಹ್ಯಭಿನಯಾಃ ಧರ್ಮೀವೃತ್ತಿಪ್ರವೃತ್ತಯಃ ।
ಸಿದ್ಧಿಸ್ಸ್ವರಾಸ್ತಥಾತೋದ್ಯಂ ಗಾನಂ ರಂಗಶ್ಚ ಸಂಗ್ರಹಃ ॥

## ರಸಭಾವಗಳು

ರಸವು ನಾಟ್ಯದ ಜೀವ. ಭರತಸೂತ್ರವು ರಸೋದ್ಬೋಧವನ್ನು ಕುರಿತು "ವಿಭಾವಾನು
ಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ" ಎಂದು ಹೇಳುತ್ತದೆ. ವಿಭಾವ ಕಾರಣ
ರೂಪವಾದುದು. - ಇದು ಎರಡು ವಿಧ—ಆಲಂಬನ ವಿಭಾವ, ಉದ್ದೀಪನ ವಿಭಾವ. ಶೃಂಗಾರ

* ಅನ್ಯದ್ಭಾವಾಶ್ರಯಂ ನೃತ್ಯಂ ಸ್ಯಾತ್—ದಶರೂಪಕ.

† ಅವಸ್ಥಾನುಕೃತಿರ್ನಾಟ್ಯಂ—ದಶರೂಪಕ.

‡ ರೂಪಂ ದೃಶ್ಯತಯೋಚ್ಯತೇ ।
ರೂಪಕಂ ತತ್ಸಮಾರೋಪಾತ್ ॥ — ದಶರೂಪಕ

ರಸಕ್ಕೆ ನಾಯಕನಾಯಿಕೆಯರು ಪರಸ್ಪರ ಆಲಂಬನವಿಭಾವ : ವಸಂತ, ಚಂದ್ರಚಕೋರಾದಿಗಳು ಉದ್ದೀಪನವಿಭಾವ. ಅನುಭಾವ ಕಾರ್ಯರೂಪವಾದದು. ಕಟಾಕ್ಷವಿಕ್ಷೇಪ, ಸ್ವೇದ, ಸ್ತಂಭ, ವೇಪಥು ಮೊದಲಾದವು ಅನುಭಾವಗಳು. ಭಯಲಜ್ಜಾದಿಗಳು ವ್ಯಭಿಚಾರಿಭಾವಗಳು. ನಿರ್ವೇದ, ಗ್ಲಾನಿ, ಶಂಕೆ, ಅಸೂಯೆ, ಮದ, ಶ್ರಮ, ಆಲಸ್ಯ, ದೈನ್ಯ, ಚಿಂತೆ, ಮೋಹ, ಸ್ಮೃತಿ, ಧೃತಿ, ಲಜ್ಜೆ, ಚಪಲತೆ, ಹರ್ಷ ಆವೇಗ, ಜಿತತ್ವ, ಗರ್ವ, ವಿಷಾದ, ಔತ್ಸುಕ್ಯ, ನಿದ್ರೆ, ಅಪಸ್ಮಾರ, ಸ್ವಪ್ನ, ಪ್ರಬೋಧ, ಅಮರ್ಷ, ಅವಹಿತ್ಥ, ಉಗ್ರತೆ, ಮತಿ, ವ್ಯಾಧಿ, ಉನ್ಮಾದ, ಮರಣ, ತ್ರಾಸ, ವಿತರ್ಕ, —ಈ ಮೂವತ್ತುಮೂರು ಸಂಚಾರಿಭಾವಗಳು. ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ, ವಿಸ್ಮಯ, ಶಮ—ಈ ಒಂಬತ್ತು ಸ್ಥಾಯೀಭಾವಗಳು. ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ಇವು ನವರಸಗಳು. ವಿಭಾವ, ಅನುಭಾವ, ವ್ಯಭಿಚಾರಿಭಾವಗಳನ್ನು ನುರಿತ ನಟರು ಅಭಿನಯಿಸಿದಾಗ ಸ್ಥಾಯೀಭಾವಗಳು ಉದ್ಬುದ್ಧವಾಗಿ ಆಸ್ವಾದಿಸುವಾಗ ಅವು ರಸವೆನಿಸುತ್ತವೆ. ರಾಮಾದಿಗಳ ಲೌಕಿಕ ಸ್ಥಾಯೀಭಾವವು ನಟರ ಅಭಿನಯಚಾತುರ್ಯದಿಂದ ಸಹೃದಯಪ್ರೇಕ್ಷಕರಿಗೆ ರಸವಾಗಿ ಲಭಿಸುತ್ತದೆ. ನಾಟಕದಲ್ಲಿ ಒಂದು ರಸ ಪ್ರಧಾನವಾಗಿದ್ದು ಉಳಿದವು ಅಂಗರಸಗಳಾಗಿರುತ್ತವೆ.

## ಅಭಿನಯ

ನಾಟ್ಯ ಅಭಿನಯರೂಪವಾದದು. ಇದು ಆಂಗಿಕ, ವಾಚಿಕ, ಆಹಾರ್ಯ, ಸಾತ್ತ್ವಿಕವೆಂದು ನಾಲ್ಕುವಿಧ. ಕಣ್ಣು, ಕೈ ಮುಂತಾದ ಅಂಗೋಪಾಂಗಗಳ ಚಲನೆಗೆ ಸಂಬಂಧಿಸಿದ ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರುವಿಧ. ಪ್ರಯೋಗಿಸುವ ಭಾಷೆ ವಾಚಿಕಾಭಿನಯ. ವೇಷಭೂಷಾದಿ ನೇಪಥ್ಯರಚನೆಯು ಆಹಾರ್ಯಾಭಿನಯ. ಸ್ತಂಭ, ಪ್ರಲಯ, ರೋಮಾಂಚ, ಸ್ವೇದಾದಿ ಸಾತ್ವಿಕಭಾವಗಳ ಪ್ರದರ್ಶನ ಸಾತ್ವಿಕಾಭಿನಯ. ಅವುಗಳಲ್ಲದೆ ಸಾಮಾನ್ಯಾಭಿನಯ, ಚಿತ್ರಾಭಿನಯಗಳೆಂಬ ಮತ್ತೆರಡು ವಿಧಗಳಿವೆ. ನಾಯಕ, ನಾಯಿಕಾ, ಪರಿವಾರ, ಸೂತ್ರಧಾರ, ಪಾರಿಪಾರ್ಶ್ವಕ ಮುಂತಾದವರ ಗುಣಶೀಲಗಳ ಅಭಿನಯವು ಸಾಮಾನ್ಯಾಭಿನಯ. ಚಂದ್ರ, ಸೂರ್ಯ ಮುಂತಾದ ಬಾಹ್ಯವಸ್ತುಗಳನ್ನು ಅಂಗಾಂಗಗಳ ಸಂಕೇತದಿಂದ ಸೂಚಿಸುವುದು ಚಿತ್ರಾಭಿನಯ. ಆಕಾಶವಚನ, ಜನಾಂತಿಕ, ಅಪವಾರಿತ ಮುಂತಾದವುಗಳನ್ನು ವಿಶಿಷ್ಟ ಸಂಕೇತಗಳ ಮೂಲಕವೇ ಅಭಿನಯಿಸಬೇಕು. ಸಂಭೋಗ, ವಧೆ, ಸ್ನಾನ, ಲೇಪನ ಮುಂತಾದವುಗಳನ್ನು ರಂಗದಲ್ಲಿ ಪ್ರದರ್ಶಿಸಬಾರದೆಂಬ ನಿಯಮವಿದೆ.

## ಧರ್ಮೀ – ವೃತ್ತಿ – ಪ್ರವೃತ್ತಿ – ಸಿದ್ಧಿಗಳು

ನಟರು ಆಚರಣೆಯಲ್ಲಿಟ್ಟುಕೊಂಡಿರುವ ಸಂಪ್ರದಾಯವು ಧರ್ಮೀ—ಸಂಗೀತರೂಪವಾಗಿ ಮಾತಾಡುವುದು, ನರ್ತಿಸುತ್ತಾ ನಡೆದು ಬರುವುದು ಮುಂತಾದದು. ವೃತ್ತಿಯು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ. ಕೈಶಿಕಿಯು ನೃತ್ಯಗೀತಾದಿಗಳಿಂದ ಕೂಡಿ



ಮೃದುವಾಗಿರುತ್ತದೆ. ಸಾತ್ವತಿಯು ಸತ್ವ, ಶೌರ್ಯ, ದಯೆ, ತ್ಯಾಗಾದಿಗಳಿಂದ ಕೂಡಿ ಗೆಲುವಾಗಿರುತ್ತದೆ. ಆರಭಟಿಯು ಇಂದ್ರಜಾಲ, ಜಗಳ, ಕೋಪಾದಿಗಳಿಂದ ಕೂಡಿ ಉದ್ಧತವಾಗಿರುತ್ತದೆ. ಭಾರತಿಯು ಉಕ್ತಿವೈಚಿತ್ರ್ಯಕ್ಕೆ ಸಂಬಂಧಿಸಿದುದು. ಆಯಾದೇಶ ಮತ್ತು ಪಾತ್ರಗಳಿಗೆ ತಕ್ಕಂತೆ ಭಾಷೆಯನ್ನು ಬಳಸುವುದು, ವೇಷಭೂಷಣಗಳನ್ನು ಧರಿಸುವುದು ಪ್ರವೃತ್ತಿ. ಯಾವ ತೊಂದರೆಯೂ ಇಲ್ಲದೆ ಪ್ರೇಕ್ಷಕರು ನಾಟಕವನ್ನು ನೋಡಿ ಆನಂದಿಸುವುದು ಸಿದ್ಧಿ. ಸ್ವರ, ಆತೋದ್ಯ, ಗಾನಗಳು ಸಂಗೀತಕ್ಕೆ ಸಂಬಂಧಿಸಿದ ವಿಷಯಗಳು.

## ವಸ್ತು

ನಾಟಕದ ಇತಿವೃತ್ತವು ವಸ್ತು. ಇದು ಆಧಿಕಾರಿಕ ಮತ್ತು ಪ್ರಾಸಂಗಿಕವೆಂದು ಎರಡು ವಿಧ. ನಾಟಕದ ಉದ್ದಕ್ಕೂ ಬರುವ ಮುಖ್ಯ ಕಥೆ ಆಧಿಕಾರಿಕ. ಇದಕ್ಕೆ ಪೋಷಕವಾಗಿ ಬರುವ ಅಂಗಕಥೆ ಪ್ರಾಸಂಗಿಕ. ಇದು ಬಹುದೂರ ವ್ಯಾಪಕವಾಗಿದ್ದರೆ ಇದಕ್ಕೆ 'ಪತಾಕಾ' ಎಂದೂ, ಚಿಕ್ಕದಾಗಿದ್ದರೆ 'ಪ್ರಕರೀ' ಎಂದೂ ಹೆಸರು. ವಸ್ತುವನ್ನು ಇತಿಹಾಸ ಪುರಾಣಾದಿಗಳಿಂದ ತೆಗೆದುಕೊಂಡಿದ್ದರೆ 'ಪ್ರಖ್ಯಾತ' ವೆಂದೂ, ಪ್ರತಿಭಾನಿರ್ಮಿತವಾಗಿದ್ದರೆ 'ಕಲ್ಪಿತ'ವೆಂದೂ, ಈ ಎರಡೂ ಅಂಶಗಳು ಬೆರತಿದ್ದರೆ 'ಮಿಶ್ರ'ವೆಂದೂ ಕರೆಯುತ್ತಾರೆ.

ವಿಷ್ಕಂಭ, ಪ್ರವೇಶಕ, ಚೂಲಿಕಾ, ಅಂಕಾಸ್ಯ, ಅಂಕಾವತಾರಗಳೆಂಬ ಐದು ಅರ್ಥೋಪಕ್ಷೇಪಗಳಿವೆ. ಇವು ತೋರಿಸಲು ಯೋಗ್ಯವಾದ, ಆದರೂ ಸೂಚಿಸಬೇಕಾದ ಅರ್ಥವನ್ನು ಸಂಕ್ಷೇಪವಾಗಿ ಸೂಚಿಸುತ್ತವೆ. ವಿಷ್ಕಂಭವು ಕಳೆದುಹೋದ ಮತ್ತು ಮುಂದೆ ಬರುವ ಕಥಾಭಾಗವನ್ನು ಸಂಕ್ಷೇಪವಾಗಿ ತಿಳಿಸುತ್ತದೆ. ಈ ಸೂಚನೆಯು ಮಧ್ಯಮ ಪಾತ್ರಗಳಿಂದಾದರೆ 'ಶುದ್ಧ ವಿಷ್ಕಂಭ'ವೂ ನೀಚ, ಮಧ್ಯಮ ಪಾತ್ರಗಳ ಬೆರಕೆಯಿಂದಾದರೆ 'ಮಿಶ್ರ ವಿಷ್ಕಂಭ'ವೂ ಆಗುತ್ತವೆ. ಮುಖ್ಯ ಪಾತ್ರಗಳು ಈ ಸೂಚನೆಯನ್ನು ಮಾಡುವುದಿಲ್ಲ, ಕೇವಲ ನೀಚ ಪಾತ್ರಗಳೇ ಸೂಚ್ಯಾಂಶವನ್ನು ಸೂಚಿಸಿದರೆ ಪ್ರವೇಶಕವಾಗುತ್ತದೆ. ಇದು ಪ್ರಥಮಾಂಕದಲ್ಲಿ ಬರುವುದಿಲ್ಲ. ಪಾತ್ರಗಳು ರಂಗವನ್ನು ಪ್ರವೇಶಿಸದೆ ತೆರೆಯ ಹಿಂದೆಯೇ ಇದ್ದು ಕಥಾಭಾಗವನ್ನು ಸೂಚಿಸುವುದಕ್ಕೆ 'ಚೂಲಿಕಾ' ಎಂದು ಹೆಸರು. ಅಂಕದ ಕೊನೆಯಲ್ಲಿ ಪಾತ್ರಗಳು ಹೋಗುವಾಗ ಮುಂದಿನ ಅಂಕದ ಪ್ರಾರಂಭದಲ್ಲಿ ಬರುವ ವಿಷಯವನ್ನು ಸೂಚಿಸುವುದು 'ಅಂಕಾಸ್ಯ', ಒಂದು ಅಂಕದ ಕೊನೆಯಲ್ಲಿ ಪಾತ್ರಗಳು ಸೂಚಿಸುವ ವಿಷಯದಿಂದಲೇ ಮತ್ತು ಪಾತ್ರಗಳಿಂದಲೇ ಮುಂದಿನ ಅಂಕ ಪ್ರಾರಂಭವಾಗುವುದು 'ಅಂಕಾವತಾರ.'

ಕಥೆಯ ಬೆಳವಣಿಗೆಗೆ ಸಹಾಯಕಗಳಾದ ಬೀಜ, ಬಿಂದು, ಪತಾಕಾ, ಪ್ರಕರೀ, ಕಾರ್ಯಗಳಿಗೆ ಅರ್ಥಪ್ರಕೃತಿಗಳೆಂದು ಹೆಸರು. ಫಲವನ್ನು ಬಯಸಿ ಪ್ರಾರಂಭಿಸಿದ ಕಾರ್ಯಕ್ಕೆ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಫಲಾಗಮಗಳೆಂಬ ಐದು ಅವಸ್ಥೆಗಳಿವೆ. ಐದು ಅರ್ಥಪ್ರಕೃತಿಗಳು ಯಥಾಕ್ರಮವಾಗಿ ಐದು ಅವಸ್ಥೆಗಳೊಡನೆ ಕೂಡುವುದರಿಂದ ಮುಖ, ಪ್ರತಿಮುಖ, ಗರ್ಭ,

ಅವಮರ್ಶ, ಉಪಸಂಹೃತಿಗಳೆಂಬ ಐದು ಸಂಧಿಗಳಾಗುತ್ತವೆ.* ಮುಖ ಸಂಧಿಯಲ್ಲಿ ಬೀಜ ರೂಪವಾಗಿದ್ದ ಕಥೆ ಅನುಕ್ರಮವಾಗಿ ವಿಕಾಸಗೊಂಡು ನಿರ್ವಹಣ ಸಂಧಿಯಲ್ಲಿ ನಾಯಕನು ಕಾರ್ಯಫಲವನ್ನು ಪಡೆಯುವ ಮೂಲಕ ಮುಗಿಯುತ್ತದೆ. ಈ ಐದು ಸಂಧಿಗಳಿಗೂ ಹಲವು ಅಂಗಗಳಿವೆ. ಅವುಗಳನ್ನು ಯಥೋಚಿತವಾಗಿ ನಾಟಕದಲ್ಲಿ ತರಬೇಕು.

## ಪಾತ್ರಗಳು

ವಿನಯ, ಮಾಧುರ್ಯ, ತ್ಯಾಗ, ದಕ್ಷತೆ, ಪ್ರಿಯವಚನ, ಜನಾನುರಾಗ, ಶುಚಿತ್ವ, ವಾಗ್ಮಿತೆ, ಸದ್ವಂಶಜನನ, ಸ್ಥೈರ್ಯ, ಯೌವನ, ಬುದ್ಧಿ, ಉತ್ಸಾಹ, ಸ್ಮೃತಿ, ಪ್ರಜ್ಞೆ, ಕಲಾನೈಪುಣ್ಯ, ಆತ್ಮಾಭಿಮಾನ, ಶೌರ್ಯ, ದಾರ್ಢ್ಯ, ತೇಜಸ್ಸು, ಶಾಸ್ತ್ರಜ್ಞಾನ, ಧರ್ಮಾಚರಣೆಗಳು ನಾಯಕನ ಸಾಮಾನ್ಯಗುಣಗಳು. ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತರೆಂದು ನಾಯಕರು ನಾಲ್ಕುವಿಧ, ಮಹಾಸತ್ವ, ಗಾಂಭೀರ್ಯ, ಕ್ಷಮೆ, ತನ್ನನ್ನು ಹೊಗಳಿಕೊಳ್ಳದಿರುವುದು, ಸ್ಥೈರ್ಯ, ವಿನಯ ಮುಚ್ಚಿದ ಅಹಂಭಾವ, ಕಾರ್ಯದಕ್ಷತೆಗಳು ಧೀರೋದಾತ್ತನ ವಿಶೇಷ ಗುಣಗಳು, ಉದಾ :—ಶ್ರೀರಾಮ, ದುಷ್ಯಂತ, ದರ್ಪ, ಮಾತ್ಸರ್ಯ, ಮಾಯೆ ಮೋಸ, ಅಹಕಾರ, ಚಾಂಚಲ್ಯ, ಉಗ್ರತೆ, ಆತ್ಮಶ್ಲಾಘನೆಗಳು ಧೀರೋದ್ಧತನ ಗುಣಗಳು, ಉದಾ. :—ರಾವಣ, ದುರ್ಯೋಧನ, ಸಚಿವರಿಗೆ ತನ್ನ ಯೋಗಕ್ಷೇಮವನ್ನು ವಹಿಸಿ ನಿಶ್ಚಿಂತನಾಗಿರುವುದು, ಸಂಗೀತ ಸಾಹಿತ್ಯಾದಿ ಲಲಿತಕಲೆಗಳಲ್ಲಿ ಆಸಕ್ತಿ, ಸುಖಾಪೇಕ್ಷೆ, ಮಾರ್ದವಗಳು ಧೀರಲಲಿತನ ಗುಣಗಳು, ಉದಾ :—ವತ್ಸರಾಜ. ಧೀರಶಾಂತನು ಸಾಮಾನ್ಯವಾಗಿ ಬ್ರಾಹ್ಮಣನೋ, ವೈಶ್ಯನೋ ಆಗಿರುತ್ತಾನೆ. ನಾಯಕನ ಸಾಮಾನ್ಯಗುಣಗಳೇ ಇವನ ಗುಣಗಳು, ಉದಾ. :—ಚಾರುದತ್ತ. ಮಾಧವ.

ಶೃಂಗಾರನಾಯಕರಲ್ಲಿ ದಕ್ಷಿಣ, ಶಠ, ಧೃಷ್ಟ, ಅನುಕೂಲರೆಂದು ನಾಲ್ಕುವಿಧ† ಮೇಲಿನ ಎಲ್ಲಾ ನಾಯಕರಲ್ಲಿ ಉತ್ತಮ, ಮಧ್ಯಮ, ಅಧಮರೆಂಬ ಭೇದಗಳಿವೆ. ಶತ್ರುವಾದ ಪ್ರತಿನಾಯಕನು ಲೋಭಿಯೂ, ಅಹಂಕಾರಿಯೂ, ಅದಕ್ಷನೂ, ಪಾಪಕಾರಿಯೂ, ವಿಷಯಾಸಕ್ತನೂ, ಆಗಿರುತ್ತಾನೆ. ಉದಾ. :—ರಾವಣ, ದುರ್ಯೋಧನ.

ನಾಯಕಿ ನಾಟಕದ ಪ್ರಧಾನ ಸ್ತ್ರೀಪಾತ್ರ, ನಾಯಕಿಯರು ಸ್ವೀಯೆ, ಅನ್ಯೆ, ಸಾಧಾರಣೆ ಎಂದು ಮೂರು ವಿಧ, ನಾಯಿಕಿಯು ಮುಗ್ಧೆ, ಮಧ್ಯೆ, ಪ್ರಗಲ್ಭೆ ಎಂದೂ ಮೂರು ವಿಧ ಗುಣ,

* ಬೀಜಬಿಂದುಪತಾಕಾಖ್ಯಪ್ರಕರೀಕಾರ್ಯಲಕ್ಷಣಾಃ ।
ಅರ್ಥಪ್ರಕೃತಯಃ ಪಂಚ ತಾ ಏತಾಃ ಪರಿಕೀರ್ತಿತಾಃ ॥
ಅವಸ್ಥಾಃ ಪಂಚ ಕಾರ್ಯಸ್ಯ ಪ್ರಾರಬ್ಧಸ್ಯ ಫಲಾರ್ಥಿಭಿಃ ।
ಆರಂಭಯತ್ನಪ್ರಾಪ್ತ್ಯಾಶಾನಿಯತಾಪ್ತಿಫಲಾಗಮಾಃ ।
ಅರ್ಥಪ್ರಕೃತಯಃ ಪಂಚ ಪಂಚಾವಸ್ಥಾಸಮನ್ವಿತಾಃ ।
ಯಥಾಸಂಖ್ಯೇನ ಜಾಯಂತೇ ಮುಖಾದ್ಯಾಃ ಪಂಚಸಂಧಯಃ ।
* ದಕ್ಷಿಣೋಽಸ್ಯಾಂ ಸಹೃದಯಃ ಗೂಢವಿಪ್ರಿಯಕೃತ್ ಶಠಃ ।
ವ್ಯಕ್ತಾಂಗವೈಕೃತೋ ಧೃಷ್ಟೋಽನುಕೂಲಸ್ತ್ವೇಕನಾಯಕಃ ॥—ದಶರೂಪಕ.



ಶೀಲ, ಸ್ವಭಾವಾದಿಗಳ ನಿಮಿತ್ತವಾಗಿ ನಾಯಿಕೆಯರಲ್ಲಿ ಬಹಳ ವಿಧಗಳಿವೆ.* ನಾಯಕನ ಸಾಮಾನ್ಯ ಗುಣಗಳೇ ನಾಯಿಕೆಯ ಗುಣಗಳು.

ನಾಟಕದ ಇತರ ಪಾತ್ರಗಳು ನಾಯಕ ಅಥವಾ ನಾಯಕಿಯರಿಗೆ ಸಹಾಯಕರಾಗಿರುತ್ತಾರೆ. ಪೀಠಮರ್ದ†, ವಿಟ, ಚೇಟ, ವಿದೂಷಕ‡, ಮಂತ್ರಿ, ಕುಬ್ಜ, ಷಂಡ, ಕಿರಾತ, ಋತ್ವಿಜರು, ಋಷಿಗಳು, ಮಿತ್ರ, ಸಾಮಂತ, ಸೈನಿಕ, ಮೊದಲಾದವರು ನಾಯಕನ ಸಹಾಯಕರು. ಸಖಿ, ದಾಸಿ, ಸನ್ಯಾಸಿನಿ, ದೂತಿ, ರಜಕಿ ಮೊದಲಾದವರು ನಾಯಿಕೆಯ ಸಹಾಯಕರು. ನಾಯಕನ ಸಹಾಯಕರ ಗುಣಗಳೇ ಇವರಲ್ಲಿಯೂ ಇರುತ್ತವೆ.

## ಗದ್ಯ–ಪದ್ಯ–ಭಾಷೆಗಳು

ಪ್ರಾರಂಭದಲ್ಲಿ ನೃತ್ಯಗೀತಗಳಿಗೆ ಪ್ರಾಧಾನ್ಯವಿದ್ದುದರಿಂದ ಪ್ರಾಯಶಃ ಸಂಸ್ಕೃತನಾಟಕಗಳಲ್ಲಿ ಹೆಚ್ಚು ಪದ್ಯಗಳ ಬಳಕೆಯು ರೂಢಿಗೆ ಬಂದಿರಬೇಕು. ಕಥನ, ಗಾನ, ವರ್ಣನೆ, ಭಾವಾದಿಗಳಿಗೆ ಪದ್ಯಗಳನ್ನು ಬಳಸಲಾಗಿದೆ. ಸುಮಾರು ಮೂವತ್ತು ವೃತ್ತಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಶ್ಲೋಕ, ಮಾಲಿನೀ, ವಸಂತತಿಲಕಾ, ಶಿಖರಿಣೀ, ಶಾರ್ದೂಲವಿಕ್ರೀಡಿತ, ಸ್ರಗ್ಧರಾ. ಪುಷ್ಪಿತಾಗ್ರಾ, ವಂಶಸ್ಥ, ಆರ್ಯಾ, ಪ್ರಹರ್ಷಿಣೀ—ಈ ಹತ್ತು ವೃತ್ತಗಳ ಬಳಕೆಯು ಹೆಚ್ಚಾಗಿದೆ. ಭಾಸನ ನಾಟಕಗಳಲ್ಲಿ ಚಿಕ್ಕ ಪದ್ಯಗಳೇ ಹೆಚ್ಚು ; ಇರುವ ದೊಡ್ಡ ಪದ್ಯಗಳನ್ನೂ ಸರಳಗೊಳಿಸಲಾಗಿದೆ. ಮುಂದೆ ಬರುಬರುತ್ತಾ ದೀರ್ಘಸಮಾಸ ತುಂಬಿದ ದೊಡ್ಡ ಪದ್ಯಗಳನ್ನು ಕಾಣುತ್ತೇವೆ. ಕುಣಿತ, ಹಾಡುಗಳು ಹಿಂದೆ ಸರಿದು, ರಸಕ್ಕೆ ಪ್ರಾಶಸ್ತ್ಯ ಬಂದ ಮೇಲೆ ನಾಟಕಗಳಲ್ಲಿ ಗದ್ಯ ಪ್ರವೇಶವಾಗಿರಬಹುದು. ಸಂವಾದಗಳಿಗೆ ಸರಳವೂ ಸುಲಭವೂ ಆದ ಗದ್ಯವೇ ಲೇಸು. ನಾಟಕದಲ್ಲಿರುವುದು ಬರಿಯ ಭಾವವಲ್ಲ ; ಅದಕ್ಕೆ ಆಧಾರವಾಗಿ ಕಥೆ ಇದೆ. ಕಥೆ ಮಾತಿನಿಂದ ಬೆಳೆಯಬೇಕಾದುದು. ಕಾಲಕ್ರಮದಲ್ಲಿ ಈ ಗದ್ಯವೂ ಚಂಪೂಗದ್ಯದ ಸ್ವರೂಪವನ್ನು ಪಡೆಯಿತು. ಇದರಿಂದ ನಾಟಕಗಳು ರಂಗಮಂದಿರದಲ್ಲಿನ ಪ್ರಯೋಗಾರ್ಹತೆಯನ್ನು ಕಳೆದುಕೊಂಡವು. ಸಂಸ್ಕೃತನಾಟಕಗಳಲ್ಲಿ ಸಂಸ್ಕೃತದ ಜೊತೆಗೆ ಮಾಗಧೀ. ಶೂರಸೇನೀ ಮುಂತಾದ ಪ್ರಾಕೃತಭಾಷೆಗಳೂ ಬರುತ್ತವೆ. ಕೇವಲ ಸಂಸ್ಕೃತ§ ಮತ್ತು ಕೇವಲ ಪ್ರಾಕೃತ‖ ಗಳನ್ನುಳ್ಳ ನಾಟಕಗಳೂ ಇವೆ. ಉತ್ತಮ ಪಾತ್ರಗಳೂ, ವಿದ್ಯಾವಂತನೂ ಸಂಸ್ಕೃತವನ್ನು

* ಚತುರಧಿಕಾಶೀತಿಯುತಂ ಶತತ್ರಯ ನಾಯಿಕಾಭೇದಾಃ । —ಸಾಹಿತ್ಯ ದರ್ಪಣ
† ದೂರಾನುವರ್ತಿನಿ ಸ್ಯಾತ್ತಸ್ಯ ಪ್ರಾಸಂಗಿಕೇತಿವೃತ್ತೇ ತು ।
ಕಿಂಚಿತ್ತದ್ಗುಣಹೀನಃ ಸಹಾಯ ಏವಾಸ್ಯ ಪೀಠಮರ್ದಾಖ್ಯಃ ॥ —ಸಾಹಿತ್ಯ ದರ್ಪಣ
‡ ಕುಸುಮವಸಂತಾದ್ಯಭಿಧಃ । ಕರ್ಮವಪುರ್ವೇಷಭಾಷಾದ್ಯೈಃ ।
ಹಾಸ್ಯಕರಃ ಕಲಹರತಿರ್ವಿದೂಷಕಃ ಸ್ಯಾತ್ ಸ್ವಕರ್ಮಜ್ಞಃ ॥ —ಸಾಹಿತ್ಯ ದರ್ಪಣ
§ ದೂತವಾಕ್ಯ.
‖ ಕರ್ಪೂರಮಂಜರಿ.

ಉಪಯೋಗಿಸುತ್ತಾರೆ. ಸಾಧಾರಣ ಸ್ತ್ರೀಯರೂ, ನೀಚಪಾತ್ರಗಳೂ ಪ್ರಾಕೃತವನ್ನು ಉಪಯೋಗಿಸುತ್ತಾರೆ. ಸನ್ಯಾಸಿನಿಯರು ಸಂಸ್ಕೃತವನ್ನು ಬಳಸುತ್ತಾರೆ.

## ರಂಗಮಂದಿರ–ಪ್ರಯೋಗಾದಿಗಳು

ಪ್ರದರ್ಶನ, ಪ್ರೇಕ್ಷಣಗಳಿಗೆ ಅಗತ್ಯವಾದ ರಂಗಮಂಟಪವು ಜ್ಯೇಷ್ಠ, ಮಧ್ಯಮ, ಕನಿಷ್ಠ ವೆಂದು ಮೂರು ವಿಧ. ಇವು ವಿಕೃಷ್ಟ, ಚತುರಸ್ರ ಅಥವಾ ತ್ರ್ಯಸ್ರ (ಉದ್ದ, ಚೌಕ, ತ್ರಿಕೋಣ) ಗಳಾಗಿರಬಹುದು. ವೃತ್ತಾಕಾರ ಅಥವಾ ಅರ್ಧ ವೃತ್ತಾಕಾರದ ರಂಗಮಂದಿರವೂ ಉಂಟು. ಇವುಗಳ ಉದ್ದ, ಅಗಲ, ವಿಭಾಗಗಳು (ನೇಪಥ್ಯಗೃಹ, ರಂಗಶೀರ್ಷ, ರಂಗಪೀಠ ಇತ್ಯಾದಿ). ಆಕಾರ ಮುಂತಾದುವುಗಳ ವಿಚಾರ ನಾಟ್ಯಶಾಸ್ತ್ರ, ಭಾವಪ್ರಕಾಶನಾದಿ ಲಕ್ಷಣಗ್ರಂಥಗಳಲ್ಲಿ ವಿವರವಾಗಿ ದೊರೆಯುತ್ತದೆ.

ಹಿಂದೆ ನಾಟಕಗಳನ್ನು ಹೇಗೆ ಪ್ರಯೋಗಿಸುತ್ತಿದ್ದರೆಂಬುದನ್ನು ಊಹಿಸುವುದು ಕಷ್ಟ. ಈಗ ಉಳಿದಿರುವ ಬಯಲಾಟ, ತೆರುಕ್ಕೂತ್ತು, ವೀಥೀ ನಾಟಕಗಳನ್ನು ನೋಡಿ ಹಿಂದಿನ ಪ್ರಯೋಗ ರೀತಿಯನ್ನು ತಿಳಿಯಬೇಕಾಗುತ್ತದೆ. ನಾಟಕದಲ್ಲಿ ನೃತ್ಯ, ಗೀತ, ಅಭಿನಯಗಳು ಪ್ರಧಾನವಷ್ಟೆ. ನಟನು ವರ್ಣವೇಷಭೂಷಾದಿಗಳನ್ನು ಧರಿಸಿ ನರ್ತಿಸುತ್ತ ವಸ್ತುಭಾವಾದಿಗಳನ್ನು ಅಂಗಾಂಗಗಳ ಅಭಿನಯದ ಮೂಲಕ ಪ್ರಕಟಿಸುತ್ತಿದ್ದನು. ಕೃತಕವಾದ ರಂಗವಸ್ತುಗಳನ್ನೂ, ಪರದೆ ಯನ್ನೂ ಬಳಸುತ್ತಿದ್ದರು.

ನಾಟಕಕಥೆಯು ಪ್ರಾರಂಭವಾಗುವುದಕ್ಕೆ ಮುಂಚೆ ಪೀಠಿಕಾರೂಪವಾಗಿ ನಡೆಸುತ್ತಿದ್ದ ಕಾರ್ಯಗಳಿಗೆ ಪೂರ್ವರಂಗವೆಂದು ಹೆಸರು. ಸಂಗೀತಗಾರರು ವಾದ್ಯಗಳನ್ನು ಶ್ರುತಿ ಮಾಡು ತ್ತಾರೆ; ರಂಗಪೂಜೆ ನಡೆಯುತ್ತದೆ; ಸೂತ್ರಧಾರನು* ನಾಂದಿ†ಯನ್ನು ಹೇಳಿ ನಟ, ಮಾರಿಷ, ಅಥವಾ ವಿದೂಷಕನೊಡನೆ ಸಂಭಾಷಿಸುತ್ತಾನೆ (ಪ್ರಸ್ತಾವನೆ)‡; ನಂತರ ನಾಟಕ ಪ್ರಾರಂಭವಾಗಿ ನಡೆದು ರಾಜ ಮತ್ತು ಪ್ರಜೆಗಳಿಗೆ ಶುಭವನ್ನು ಕೋರುವ ಭರತವಾಕ್ಯದಿಂದ ಮುಗಿಯುತ್ತದೆ.

---

* ಚತುರಾತೋದ್ಯನಿಷ್ಣಾತೋಽನೇಕಭಾಷಾಸಮಾವೃತಃ ।
ನಾಟ್ಯಪ್ರಯೋಗನಿಪುಣೋ ನಾನಾಶಿಲ್ಪಕಲಾನ್ವಿತಃ ॥
ಅವಧಾಯ ಪ್ರಯೋಕ್ತಾ ಚ ಯೋಕ್ತ್ರಾಣಾಮುಪದೇಶಕಃ ।
ಏವಂ ಗುಣಗಣೋಪೇತಃ ಸೂತ್ರಧಾರೋ ನಿಗದ್ಯತೇ ॥ —ಮಾತೃಗುಪ್ತ.

† ಆಶೀರ್ವಚನಸಂಯುಕ್ತಾ ಸ್ತುತಿರ್ಯಸ್ಮಾತ್ಪ್ರಯುಜ್ಯತೇ ।
ದೇವದ್ವಿಜನೃಪಾದೀನಾಂ ತಸ್ಮಾನ್ನಾಂದೀತಿ ಸಂಜ್ಞಿತಾ ॥
—ಸಾಹಿತ್ಯ ದರ್ಪಣ

‡ ಸೂತ್ರಧಾರೋ ನಟೀಂ ಬ್ರೂತೇ ಮಾರಿಷಂ ವಾ ವಿದೂಷಕಂ ।
ಸ್ವಕಾರ್ಯಪ್ರಸ್ತುತಾಕ್ಷೇಪಿ ಚಿತ್ರೋಕ್ತ್ಯಾಯತ್ತದಾಮುಖಂ ॥
ಪ್ರಸ್ತಾವನಾ ವಾ............................................................ ॥
—ದಶರೂಪಕ



ನಾಟಕವನ್ನು ಅಭಿನಯಿಸುವವರು ನಟರು. ಇವರನ್ನು ಭಾರತರು, ಶೈಲೂಷರು ಮುಂತಾಗಿ ಕರೆಯುತ್ತಾರೆ. ಸೂತ್ರಧಾರನು ಇವರ ನಾಯಕ. ಸ್ತ್ರೀಪಾತ್ರಗಳನ್ನು ಸ್ತ್ರೀಯರಾಗಲಿ, ಪುರುಷರಾಗಲೀ ವಹಿಸುತ್ತಿದ್ದರು. ಸಹೃದಯರಾದ ಪ್ರೇಕ್ಷಕರು ಸಾವಧಾನವಾಗಿ ಕುಳಿತು ನಾಟಕವನ್ನು ನೋಡಿ ಆನಂದಿಸುತ್ತಿದ್ದರು.

## ರೂಪಕಗಳು

ರೂಪಕಗಳು ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಾಕಾರ, ವೀಥಿ, ಅಂಕ, ಈಹಾಮೃಗ ಎಂದು ಹತ್ತುವಿಧ. ಅವುಗಳ ಸ್ಥೂಲ ಪರಿಚಯವನ್ನಿಲ್ಲಿ ಕೊಡಲಾಗಿದೆ.

**ನಾಟಕ :—**

ಇದರಲ್ಲಿ ಐದರಿಂದ ಹತ್ತು ಅಂಕಗಳಿರುತ್ತವೆ. ಇದರ ವಸ್ತು ಪ್ರಖ್ಯಾತ. ನಾಯಕ ಧೀರೋದಾತ್ತ; ಇವನು ರಾಜರ್ಷಿ, ದಿವ್ಯ ಅಥವಾ ದಿವ್ಯಾದಿವ್ಯನೋ ಆಗಿರುತ್ತಾನೆ. ಶೃಂಗಾರ, ವೀರಗಳಲೊಂದು ಪ್ರಧಾನರಸ. ಉಳಿದವು ಅಂಗರಸಗಳಾಗಿರುತ್ತದೆ. ನಾಟಕದ ಕೊನೆಯಲ್ಲಿ ಅದ್ಭುತವು ಬರುತ್ತದೆ. ಐದು ಸಂಧಿಗಳೂ ಇದ್ದು, ವಸ್ತುವಿನ್ಯಾಸಕ್ರಮ ಹಸುವಿನ ಬಾಲದ ತಂದಿಯಂತಿರುತ್ತದೆ.

ಉದಾ: :—ಅಭಿಜ್ಞಾನಶಾಕುಂತಲ, ಮುದ್ರಾರಾಕ್ಷಸ.

**ಪ್ರಕರಣ :—**

ಇದರಲ್ಲಿ ಹತ್ತು ಅಂಕಗಳಿರುತ್ತವೆ; ವಸ್ತು ಲೌಕಿಕ ಮತ್ತು ಕವಿಕಲ್ಪಿತ; ಶೃಂಗಾರ ಪ್ರಧಾನ ರಸ; ಉಳಿದವು ಅಂಗರಸಗಳಾಗಿರುತ್ತವೆ. ಬ್ರಾಹ್ಮಣನೋ, ಮಂತ್ರಿಯೋ, ವರ್ತಕನೋ ನಾಯಕನಾಗಿರುತ್ತಾನೆ. ಇವನು ಧರ್ಮಕಾಮಾರ್ಥಪರನಾದ ಧೀರಪ್ರಶಾಂತ. ನಾಯಿಕೆ ಸತ್ಕುಲಪ್ರಸೂತೆ ಅಥವಾ ವೇಶ್ಯೆ. ಐದು ಸಂಧಿಗಳಿರುತ್ತವೆ; ವಿಟ, ಚೇಟ, ಜೂಜುಗಾರ, ಮೋಸಗಾರ, ಚೋರ, ಶಕಾರಾದಿಗಳು ಬರುತ್ತಾರೆ.

ಉದಾ. :— ಮಾಲತೀಮಾಧವ, ಮೃಚ್ಛಕಟಿಕ.

**ಭಾಣ :—**

ಇದರಲ್ಲಿ ಒಂದು ಅಂಕವಿರುತ್ತದೆ; ವಸ್ತು ಉತ್ಪಾದ್ಯ, ನಿಪುಣನೂ, ಪಂಡಿತನೂ. ಧೂರ್ತನೂ ಆದ ವಿಟನೊಬ್ಬನೇ ಪಾತ್ರ. ಶೃಂಗಾರವೀರಗಳು ಸೂಚಿತವಾಗುತ್ತವೆ. ಮುಖ, ನಿರ್ವಹಣ ಸಂಧಿಗಳೂ, ಹತ್ತು ಲಾಸ್ಯಾಂಗಗಳೂ ಇರುತ್ತವೆ.

ಉದಾ. :—ಶೃಂಗಾರತಿಲಕ.

**ಪ್ರಹಸನ :—**

ಇದರಲ್ಲಿ ಕಲ್ಪಿತವಾದ ವಸ್ತುವಿದ್ದು ಅದು ಕೀಳುಜನರ ಚರಿತ್ರೆಯನ್ನು ಹೊಂದಿರುತ್ತದೆ. ಹಾಸ್ಯ ಪ್ರಧಾನರಸ. ವಿಷ್ಕಂಭಕ, ಪ್ರವೇಶಕಾದಿಗಳಿರುವುದಿಲ್ಲ. ಸಂಧ್ಯಾದಿಗಳು ಭಾಣಕ್ಕೆ

ಸದೃಶವಾಗಿರುತ್ತವೆ. ಪ್ರಹಸನವು ಶುದ್ಧ, ಸಂಕೀರ್ಣ, ವಿಕೃತವೆಂದು ಮೂರು ವಿಧ. ಶುದ್ಧದಲ್ಲಿ ತಪಸ್ವಿ, ಬ್ರಾಹ್ಮಣ ಅಥವಾ ಗುರು ನಾಯಕನಾಗಿರುತ್ತಾನೆ. ಸಂಕೀರ್ಣದಲ್ಲಿ ಭ್ರಷ್ಟರ ಚರಿತ್ರೆ ಇರುತ್ತವೆ. ವಿಕೃತದಲ್ಲಿ ಷಂಡ. ಕಂಚುಕಿ, ತಾಪಸ, ವಿಟ, ಚೇಟ ಮೊದಲಾದವರು ಬರುತ್ತಾರೆ.

ಉದಾ. :— ಲಟಕಮೇಲಕ.

ಡಿಮ :—

ಇದರ ವಸ್ತು ಪ್ರಖ್ಯಾತವಾಗಿದ್ದು ಮಾಯೆ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. ರೌದ್ರ ಪ್ರಧಾನರಸ, ಪೋಷಕರಸಗಳಲ್ಲಿ ಶಾಂತ, ಹಾಸ್ಯ, ಶೃಂಗಾರ ಗಳಿರುವುದಿಲ್ಲ. ನಾಲ್ಕು ಅಂಕಗಳಿದ್ದು ವಿಷ್ಕಂಭ, ಪ್ರವೇಶಕಗಳಿರುವುದಿಲ್ಲ. ದೇವ, ಗಂಧರ್ವ, ಯಕ್ಷ, ರಾಕ್ಷಸ ಮುಂತಾದ ಹದಿನಾರು ಜನ ಉದ್ಧತ ನಾಯಕರಿರುತ್ತಾರೆ. ಕೈಶಿಕೀವೃತ್ತಿ ಮತ್ತು ವಿಮರ್ಶಸಂಧಿಗಳಿರುವುದಿಲ್ಲ.

ವ್ಯಾಯೋಗ :—

ವಸ್ತು ಪ್ರಖ್ಯಾತ. ಒಂದೇ ಅಂಕ. ಹಾಸ್ಯ, ಶೃಂಗಾರ, ಶಾಂತಗಳನ್ನು ಬಿಟ್ಟು ಉಳಿದುವು ಪ್ರಧಾನ ; ನಾಯಕ ಧೀರೋದ್ಧತ. ಹೆಂಗಸರು ಕಡಿಮೆ ; ಗಂಡಸರು ಹೆಚ್ಚು. ಕೈಶಿಕೀವೃತ್ತಿ ಮತ್ತು ಗರ್ಭವಿಮರ್ಶಸಂಧಿಗಳಿರುವುದಿಲ್ಲ.

ಉದಾ. :—ಮಧ್ಯಮವ್ಯಾಯೋಗ.

ಸಮವಾಕಾರ :—

ಇದರ ವಸ್ತು ಪ್ರಖ್ಯಾತ; ದೇವಾಸುರರಿಗೆ ಸಂಬಂಧಿಸಿದುದು; ಪ್ರಸಿದ್ಧರೂ, ಉದಾತ್ತರೂ ಆದ ಹನ್ನೆರಡು ಮಂದಿ ದೇವದಾನವರು ನಾಯಕರು ; ವೀರರಸ ಪ್ರಧಾನ; ಅಂಕಗಳು ಮೂರು; ಕೈಶಿಕೀವೃತ್ತಿಯು ಕಡಿಮೆ, ವಿಮರ್ಶಸಂಧಿ ಇರುವುದಿಲ್ಲ. ನಾಯಕರಿಗೆ ಫಲ ಪ್ರತ್ಯೇಕ ವಾಗಿರುತ್ತದೆ. ಶೃಂಗಾರತ್ರಯ, ಕಪಟತ್ರಯ, ವಿದ್ರವತ್ರಯಗಳಿರುತ್ತವೆ.

ವೀಥೀ :—

ಇದರಲ್ಲಿ ಒಬ್ಬನೇ ನಾಯಕ ; ಅವನ ಆಕಾಶಭಾಷಿತಗಳಿಂದ ಕೂಡಿದ ಉಕ್ತಿಪ್ರತ್ಯುಕ್ತಿ ಗಳಿಂದ ರೂಪಕ ನಡೆಯುತ್ತದೆ. ಒಂದೇ ಅಂಕ. ಪ್ರಧಾನವಾಗಿ ಶೃಂಗಾರದ ಸೂಚನೆ ಇರುತ್ತದೆ. ಸಂಧಿ ಮತ್ತು ಅಂಕಗಳು ಭಾಣದಲ್ಲಿರುವಂತೆ.

ಅಂಕ :—

ಇವನ್ನು ಉತ್ಸೃಷ್ಟಿಕಾಂಕವೆಂದೂ ಕರೆಯುತ್ತಾರೆ. ಇದರ ವಸ್ತು ಪ್ರಖ್ಯಾತ ; ಒಂದೇ ಅಂಕ ; ಚಕ್ರಿಗಳಲ್ಲದ ಹಲವರು ನಾಯಕರು ; ರಸ, ಕರುಣ, ಸಂಧಿ, ವೃತ್ತಿ, ಅಂಗಾದಿಗಳು ಭಾಣದಲ್ಲಿರುವಂತೆಯೇ. ಜಯ, ಪರಾಜಯ, ವೈರಾಗ್ಯಗಳು ಬರುತ್ತವೆ.



ಈಹಾಮೃಗ * :—

ಇದರಲ್ಲಿ ವಸ್ತು ಮಿಶ್ರ ; ಅಂಕಗಳು ನಾಲ್ಕು ; ಮುಖ, ಪ್ರತಿಮುಖ, ನಿರ್ವಹಣ ಸಂಧಿಗಳಿರುತ್ತವೆ. ಪ್ರಖ್ಯಾತರೂ, ಧೀರೋದ್ಧತರೂ ಆದ ನರ–ದಿವ್ಯವ್ಯಕ್ತಿಗಳು ಪ್ರತಿನಾಯಕರಾಗಿತ್ತಾರೆ. ಪ್ರತಿನಾಯಕನು ಅಯುಕ್ತಾಚರಣೆ ಮತ್ತು ದಿವ್ಯಾಂಗನಾಪಹರಣದಲ್ಲಿ ತೊಡಗುತ್ತಾನೆ. ದಿವ್ಯ ಅಥವಾ ಮರ್ತ್ಯರಾದ ಹತ್ತು ಜನ ಪತಾಕಾನಾಯಕರಿರುತ್ತಾರೆ. ಬಂಧ್ಯ ಯುದ್ಧ ನಿವಾರಣೆಯಾಗುತ್ತದೆ ; ವಧೆಗೆ ಗುರಿಯಾದರೂ ಮಹಾತ್ಮನು ಬಿಡುಗಡೆ ಪಡೆಯುತ್ತಾನೆ.

## ಉಪರೂಪಕಗಳು

ಉಪರೂಪಕಗಳು ಹದಿನೆಂಟು ವಿಧ. ಇವುಗಳಲ್ಲಿ ನಾಟಿಕಾ, ತ್ರೋಟಕ, ಸಟ್ಟಕಗಳು ಹೆಚ್ಚು ಪ್ರಚಾರದಲ್ಲಿವೆ. ಇದು ಉಪರೂಪಕಗಳ ಸ್ಥೂಲಪರಿಚಯ :—

ನಾಟಿಕಾ :—

ಕಲ್ಪಿತ ವಸ್ತುವನ್ನುಳ್ಳ ಇದರಲ್ಲಿ ನಾಲ್ಕು ಅಂಕಗಳಿರುತ್ತವೆ. ಇದರ ನಾಯಕ ಧೀರಲಲಿತನಾದ ರಾಜ ; ನಾಯಿಕೆ ಅಂತಃಪುರದಲ್ಲಿರುವವಳೂ, ನವಾನುರಾಗವುಳ್ಳವಳೂ ಆದ ರಾಜಕನ್ಯೆ. ರಾಣಿಯು ಹಿರಿಯಳೂ, ರಾಜವಂಶೀಯಳೂ, ಪ್ರಗಲ್ಭೆಯೂ, ಶೀಘ್ರಕೋಪವುಳ್ಳವಳೂ ಆಗಿರುತ್ತಾಳೆ. ಅವಳ ಔದಾರ್ಯದಿಂದ ನಾಯಕನಾಯಿಕೆಯರ ವಿವಾಹವಾಗುತ್ತದೆ. ಇದರ ವೃತ್ತಿ ಕೈಶಿಕೀ ; ಪ್ರಾಯಿಕವಾಗಿ ವಿಮರ್ಶಸಂಧಿ ಇರುವುದಿಲ್ಲ.

ಉದಾ. :—ರತ್ನಾವಳೀ, ವಿದ್ಧಸಾಲಭಂಜಿಕಾ.

ತ್ರೋಟಕ :—

ಇದರ ವಸ್ತು ದಿವ್ಯಮಾನವರಿಗೆ ಸಂಬಂಧಿಸಿದುದು ; ಐದು, ಏಳು, ಎಂಟು ಅಥವಾ ಒಂಬತ್ತು ಅಂಕಗಳಿರುತ್ತವೆ. ವಿದೂಷಕನು ಪ್ರತಿ ಅಂಕದಲ್ಲಿಯೂ ಬರುತ್ತಾನೆ. ಶೃಂಗಾರ ಪ್ರಧಾನರಸ.

ಉದಾ. :—ವಿಕ್ರಮೋರ್ವಶೀಯ.

ಸಟ್ಟಕ :—

ಇದರ ಭಾಷೆ ಪ್ರಾಕೃತ ; ವಿಷ್ಕಂಭ, ಪ್ರವೇಶಕಗಳಿರುವುದಿಲ್ಲ ; ಅದ್ಭುತರಸವು ಪ್ರಚುರವಾಗಿರುತ್ತದೆ. ಇದರ ಅಂಕಗಳನ್ನು ಜವನಿಕೆಗಳೆಂದು ಕರೆಯುತ್ತಾರೆ. ಉಳಿದ ಅಂಶಗಳೆಲ್ಲಾ ನಾಟಿಕೆಯಲ್ಲಿರುವಂತೆಯೇ.

ಉದಾ. :—ಕರ್ಪೂರಮಂಜರೀ.

---

* ನಾಯಕೋ ಮೃಗವದಲಭ್ಯಾಮುಹಿ ನಾಯಿಕಾಮತ್ರ ಈಹತೇ ವಾಂಛತೀತಿ 'ಈಹಾಮೃಗಃ'

# ನಾಟ್ಯದ ಉತ್ಪತ್ತಿ

ಭರತನ 'ನಾಟ್ಯಶಾಸ್ತ್ರ'ವು ನಾಟ್ಯೋತ್ಪತ್ತಿಯನ್ನು ಕುರಿತು ಹೀಗೆ ಹೇಳುತ್ತದೆ—

ತ್ರೇತಾಯುಗದಲ್ಲಿ ಕಾಮಕ್ರೋಧದ್ವೇಷಾದಿಗಳಿಂದ ಲೋಕವು ದುಃಖಭಾಜನವಾದಾಗ ಇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನಲ್ಲಿಗೆ ಹೋಗಿ ಶ್ರವ್ಯವೂ, ದೃಶ್ಯವೂ, ಎಲ್ಲರೂ ಭಾಗವಹಿಸಬಹುದಾದುದೂ ಆದ ಒಂದು ಕ್ರೀಡೆಯನ್ನು ಅನುಗ್ರಹಿಸುವಂತೆ ಬೇಡಿದರು. ಬ್ರಹ್ಮನು ಋಗ್ವೇದದಿಂದ 'ಪಾಠ್ಯ'ವನ್ನೂ, ಯಜುರ್ವೇದದಿಂದ 'ಅಭಿನಯ'ವನ್ನೂ, ಸಾಮವೇದದಿಂದ 'ಗಾನ'ವನ್ನೂ, ಅಥರ್ವಣವೇದದಿಂದ 'ರಸ'ಗಳನ್ನೂ ತೆಗೆದುಕೊಂಡು ಅವುಗಳಿಂದ 'ನಾಟ್ಯ' ವೆಂಬ ಐದನೆಯ ವೇದವನ್ನು ನಿರ್ಮಿಸಿಕೊಟ್ಟನು. ಭರತನು ತನ್ನ ನೂರು ಮಕ್ಕಳು ಮತ್ತು ಅಪ್ಸರೆಯರೊಡನೆ ಅದನ್ನು ಇಂದ್ರಧ್ವಜೋತ್ಸವದಲ್ಲಿ ಪ್ರದರ್ಶಿಸಿದನು. ದೇವತೆಗಳು ದೈತ್ಯರನ್ನು ಸೋಲಿಸಿದುದೇ ಆ ನಾಟ್ಯದ ವಸ್ತು. ಅಸಮಾಧಾನಗೊಂಡು ಗದ್ದಲ ಮಾಡಿದ ದೈತ್ಯರನ್ನು ಇಂದ್ರನು ತನ್ನ ಧ್ವಜದಂಡದಿಂದ ಬಡಿದು ಓಡಿಸಿದನು. ಬ್ರಹ್ಮನು ಗದ್ದಲವಾಗದಿರಲು ನಾಟ್ಯಮಂದಿರವನ್ನು ಕಟ್ಟುವಂತೆ ಹೇಳಿದನು. ದೇವತೆಗಳು ಮತ್ತು ದಿಕ್ಪಾಲಕರು ಅದರ ನಾನಾ ಭಾಗಗಳಲ್ಲಿ ನೆಲಸಿ ರಕ್ಷಕರಾದರು. ಅನಂತರ ದೈತ್ಯರು ಬ್ರಹ್ಮನ ಹತ್ತಿರ ಹೋಗಿ ತಮಗೆ ಅಪಮಾನವಾಯಿತೆಂದು ದೂರಿದರು. ಆಗ ಬ್ರಹ್ಮನು 'ನಾಟ್ಯವು ಧರ್ಮ, ಕಾಮ, ಯುದ್ಧ, ಹಾಸ್ಯ, ವಿನೋದಾದಿಗಳಿಂದ ಕೂಡಿದ ಲೋಕವೃತ್ತಾಂತದ ಅನುಕರಣ ವೆಂದೂ ; ಜ್ಞಾನ, ಶಿಲ್ಪ, ವಿದ್ಯೆ, ಕಲೆ, ಕರ್ಮ, ಯೋಗ—ಎಲ್ಲವೂ ಇದರಲ್ಲಿದೆಯೆಂದೂ, ಧರ್ಮಿಗಳಿಗೆ ಧರ್ಮ, ಕಾಮಿಗಳಿಗೆ ಕಾಮ ಹೀಗೆ ಬಯಸಿದವರಿಗೆ ಬಯಸಿದುದನ್ನು ಕೊಡುತ್ತದೆಂದೂ ಆದ್ದರಿಂದ ಅತೃಪ್ತಿಗೆ ಕಾರಣವಿಲ್ಲವೆಂದೂ' ಹೇಳಿ ಸಮಾಧಾನಗೊಳಿಸಿದನು.

ಇದು ನಾಟ್ಯೋತ್ಪತ್ತಿಯ ಬಗ್ಗೆ ಪ್ರಾಚೀನ ಹೇಳಿಕೆ. ಇದರಿಂದ ತಕ್ಕಮಟ್ಟಿಗೆ ನಾಟ್ಯ ಸ್ವರೂಪದ ಪರಿಚಯವಾಗುತ್ತದೆ. ನಿಜವಾದ ಉತ್ಪತ್ತಿಕ್ರಮವನ್ನು ಬೇರೆ ಆಧಾರಗಳಿಂದ ಊಹಿಸಬೇಕಾಗುತ್ತದೆ.

ನಂದಿಕೇಶ್ವರನ ಅಭಿನಯದರ್ಪಣವು ಲೋಕದಲ್ಲಿ ನಾಟ್ಯ ಹರಡಿದ ಬಗೆಯನ್ನು ಹೀಗೆ ತಿಳಿಸುತ್ತದೆ—

ಬ್ರಹ್ಮನು ನಾಟ್ಯವೇದವನ್ನು ಸೃಷ್ಟಿಸಿ ಭರತನಿಗೆ ಕೊಟ್ಟನು. ಅವನು ಅದನ್ನು ಶಿವನ ಮುಂದೆ ಪ್ರದರ್ಶಿಸಿದನು. ಆಗ ಶಿವನು ತಂಡುವಿಗೆ ತಾಂಡವವನ್ನು ಉಪದೇಶಿಸಿದನು; ಅದು ಮುನಿಗಳ ಮೂಲಕ ಮಾನವರಿಗೆ ದೊರೆಯಿತು. ಪಾರ್ವತಿಯು ಬಾಣಾಸುರನ ಮಗಳಾದ ಉಷಾದೇವಿಗೆ ಲಾಸ್ಯವನ್ನು ಉಪದೇಶಿಸಿದಳು. ಅದು ಅವಳಿಂದ ದ್ವಾರಕೆಯ ಗೋಪಿಯರಿಗೂ, ಅವರಿಂದ ಸೌರಾಷ್ಟ್ರದ ಸ್ತ್ರೀಯರಿಗೂ ಅವರಿಂದ ಭೂಲೋಕದ ಸಕಲ ಸ್ತ್ರೀಯರಿಗೂ ಲಭಿಸಿತು.



ಈ ಹೇಳಿಕೆಯಿಂದಲೂ ಸರಿಯಾಗಿ ನಾಟ್ಯೋತ್ಪತ್ತಿಯು ತಿಳಿಯುವುದಿಲ್ಲ. ಇದರಿಂದ ಎಲ್ಲೆಲ್ಲಿ ನಾಟ್ಯದ ಪ್ರಚಾರವಿತ್ತೆಂಬುದರ ಕಿರುಪರಿಚಯವಾಗುತ್ತದೆ.

ಋಗ್ವೇದದಲ್ಲಿ ಹಲವು "ಸಂವಾದ" ಸೂಕ್ತಗಳಿವೆ. ಓಲ್ಡೆನ್‌ಬರ್ಗ್ ಮುಂತಾದ ಜರ್ಮನ್ ಪಂಡಿತರು ಇವೇ ನಾಟಕಗಳಿಗೆ ಉಗಮವೆಂದು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿರುವ "ಯಮ-ಯಮಿ" 'ಪುರೂರವ-ಊರ್ವಶೀ' ಮುಂತಾದವರ ಸಂವಾದಗಳ ನಾಟಕಕ್ಕೆ ಸಮೀಪಗತವಾಗಿವೆ. ಮೂವರು ಮತ್ತು ಅನೇಕರಿಗೆ ನಡೆಯುವ ಸಂವಾದಗಳೂ ಇವೆ. ಅಗಸ್ತ್ಯನು ತನ್ನ ಪತ್ನಿ ಲೋಪಾಮುದ್ರೆ ಮತ್ತು ಮಗನೊಡನೆ ಸಂಭಾಷಿಸುತ್ತಾನೆ. ಇದು ಇಂದ್ರಾಣಿ. ವೃಷಾಕಪಿಗಳ ಸಂವಾದವಿದೆ. ಇಂದ್ರನ ದೂತಿಯಾದ ಸರಮೆಯು ಪಣಿಗಳೊಡನೆ ಮಾತಾಡುತ್ತಾಳೆ. ವೈದಿಕ ಸಾಹಿತ್ಯದಲ್ಲಿ ಪ್ರಚುರವಾಗಿರುವ ಗಂಧರ್ವಗಣ ಗಾನಕ್ಕೂ, ಅಪ್ಸರೋಗಣ ನೃತ್ಯಕ್ಕೂ ಪ್ರಸಿದ್ಧವಾಗಿವೆ. ಯಜ್ಞಗಳಿಗೂ, ಈ ಸಂವಾದಗಳಿಗೂ ನೇರವಾದ ಯಾವ ಸಂಬಂಧವೂ ಇಲ್ಲ, ಯಾಸ್ಕ, ಶೌನಕ, ಸಾಯಣರಿಗೂ ಇವುಗಳ ಪ್ರಯೋಜನದ ವಿಷಯದಲ್ಲಿ ಏಕಾಭಿಪ್ರಾಯವಿಲ್ಲ. ಯಜುರ್ವೇದ, ಸಾಮವೇದಗಳಲ್ಲಿ ಅಭಿನಯ ಗಾನಗಳಿವೆ. ನಾಟಕಕ್ಕೆ ಅಗತ್ಯವಾದ ಎಲ್ಲ ಪರಿಕರಗಳೂ ಹೀಗೆ ವಿಕ್ಷಿಪ್ತವಾಗಿ ಕಾಣಿಸುತ್ತವೆ. ಬೀಜರೂಪವಾಗಿರುವ ಈ ಅಂಶಗಳು (ಸಂವಾದ, ಸಂಗೀತ, ಅಭಿನಯ) ಯಾವಾಗ ಒಟ್ಟುಗೂಡಿ ನಾಟಕರೂಪ ಗೊಂಡಿತೋ ಊಹಿಸುವುದು ಕಷ್ಟ. ಯಜುರ್ವೇದದಲ್ಲಿ ನಾನಾ ಕಸುಬುಗಳನ್ನವಲಂಬಿಸಿದ ಜನರ ಹೆಸರುಗಳು ಬಂದಿವೆ. ಆದರೆ ನಟರ ಪ್ರಸ್ತಾಪವಿಲ್ಲ, 'ಶೈಲೂಷ' ಎಂಬ ಶಬ್ದವೇನೋ ಇದೆ ; ಅದಕ್ಕೆ ಸಂಗೀತಗಾರ, ನರ್ತಕ ಎಂದೂ ಅರ್ಥವಾಗಬಹುದು.

ಪುರಾಣಗಳಿಂದಲೂ ನಾಟಕವಿದ್ದುದಕ್ಕೆ ಸ್ಪಷ್ಟ ಆಧಾರ ದೊರೆಯುವುದಿಲ್ಲ. ಮಹಾಭಾರತ ದಲ್ಲಿ 'ನಟ' ಶಬ್ದವಿದೆ ; ಅದಕ್ಕೆ ನರ್ತಕ ಎಂದೂ ಅರ್ಥವಾಗಬಹುದು. ಹರಿವಂಶದಲ್ಲಿ ನಟರು ರಾಮಾಯಣವನ್ನು ಆಡಿದ ಪ್ರಸ್ತಾಪವಿದೆ ; ಆದರೆ ಆ ಕೃತಿಯು ನಾಟ್ಯಶಾಸ್ತ್ರಕ್ಕಿಂತ ಈಚಿನದು ರಾಮಾಯಣದಲ್ಲಿಯೂ ನಟರ ಪ್ರಸ್ತಾಪವಿದೆ ; ಆದರೆ ಈ ಭಾಗವನ್ನು ಪ್ರಾಚೀನವಲ್ಲವೆಂದು ಹೇಳುತ್ತಾರೆ. ಪುರಾಣಗಳಿಂದ ನಾಟಕಗಳ ಅಸ್ತಿತ್ವವನ್ನು ಸಾಧಿಸುವುದು ಕಷ್ಟವಾದರೂ, ಅವುಗಳ ಪ್ರಭಾವದಿಂದ ನಾಟಕಗಳು ಜನ್ಮ ತಾಳಿರಬೇಕೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹಿಂದಿನಿಂದಲೂ 'ಪೌರಾಣಿಕ'ರು ಪುರಾಣಗಳನ್ನು ಹೇಳುತ್ತಿದ್ದರು ; 'ಪಾಠಕರು' ಗಾನದೊಡನೆ ಓದುತ್ತಿದ್ದರು ; 'ಧಾರಕ'ರು ಅದನ್ನು ವಿವರಿಸುತ್ತಿದ್ದರು ; 'ಕಥಕ'ರು ಅದರೊಡನೆ ಅಭಿನಯ ನೃತ್ಯ, ಗೀತ, ವಾದ್ಯಗಳನ್ನು ಮೇಳವಿಸುತ್ತಿದ್ದರು ; ಅದಕ್ಕೆ ಸಂಭಾಷಣೆ ಸೇರಿದರೆ ನಾಟಕ ವಾಗುತ್ತದೆ. ನಟರನ್ನು ಇಂದಿಗೂ 'ಭಾರತ'ರು 'ಭಾಗವತ'ರು ಎಂದು ಕರೆಯುತ್ತಾರೆ. ಪುರಾಣ, ಹರಿಕಥೆಗಳಿಗೂ ನಾಟಕಗಳಿಗೂ ಮಧ್ಯವರ್ತಿಯಾದ 'ತಾಳಮದ್ದಲೆ'ಯು ಈಗಲೂ ಕೆಲವು ಕಡೆ ಇದೆ. ಇದರಲ್ಲಿ ವೇಷಭೂಷಣಗಳಾಗಲೀ, ರಂಗಪರಿಕರಗಳಾಗಲೀ ಇರುವುದಿಲ್ಲ ; ಜನರು ಕುಳಿತಲ್ಲಿಯೇ ಸಂಭಾಷಣೆ ನಡೆಸುತ್ತಾರೆ ; ಭಾಗವತನು ಕಥೆ ನಡೆಸಲು ಆಗಾಗ ಪದ್ಯ ಓದುತ್ತಾನೆ. ಆಗಾಗ ಜಾಗಟೆ, ಚಂಡೆಗಳೂ ಧ್ವನಿಗೈಯುತ್ತವೆ.

ಪಾಣಿನಿಯು (ಸು. ಕ್ರಿ. ಪೂ. 5ನೆಯ ಶತಕ) "ಶಿಲಾಲಿ', 'ಕೃಶಾಶ್ವ' ರೆಂಬ ನಟಸೂತ್ರಕಾರರನ್ನು ಹೆಸರಿಸಿದ್ದಾನೆ*. ಇಲ್ಲಿಯೂ ನಟಶಬ್ದಕ್ಕೆ ನರ್ತಕನೆಂದರ್ಥವಾಗಬಹುದು, ಇವರ ಕೃತಿಗಳೂ ದೊರೆತಿಲ್ಲ. ಪತಂಜಲಿಯು (ಸು. ಕ್ರಿ. ಪೂ. 150) 'ಗ್ರಂಥಿಕ'ರು ಮಾತಿನಲ್ಲಿ ವರ್ಣಿಸುತ್ತಿದ್ದ ಕಂಸವಧ, ಬಲಿಬಂಧಗಳನ್ನು 'ಶೋಭನಿಕ'ರು ಅಭಿನಯದಿಂದ ಪ್ರತ್ಯಕ್ಷ ಮಾಡಿತೋರಿಸುತ್ತಿದ್ದರೆಂದು ಹೇಳಿದ್ದಾನೆ. ಇದು 'ಕಥಕಳಿ' ರೂಪದ ಮೂಕಾಭಿನಯವೋ ಸಂವಾದವೂ ಸೇರಿದ್ದಿತೋ ಊಹಿಸುವುದು ಕಷ್ಟ. ಸಂವಾದವಿರದಿದ್ದರೆ ನಾಟಕವಾಗುವುದಿಲ್ಲ. ಆಗ ನರ್ತನಗಾನಗಳೂ ಇದ್ದವು. ಇವುಗಳೆಲ್ಲಾ ಒಟ್ಟುಗೂಡಿ ಸು. ಕ್ರಿ. ಪೂ. ಎರಡನೆಯ ಶತಮಾನದಲ್ಲಿ ನಾಟ್ಯ-ನಾಟಕಗಳಾಗಿರಬಹುದು ಎಂದು ಸ್ಥೂಲವಾಗಿ ಹೇಳಬಹುದು. ನಾಟಕ ಸಾಹಿತ್ಯದಲ್ಲಿ ಪೌರಾಣಿಕವಸ್ತು ಹೆಚ್ಚಾಗಿರುವುದೂ ಈ ಅಭಿಪ್ರಾಯಕ್ಕೆ ಪುಷ್ಟಿಕೊಡುತ್ತದೆ. ಧರ್ಮದ ಹಿನ್ನೆಲೆಯಲ್ಲಿ ನಾಟಕಗಳು ಬೆಳೆದಿರಬೇಕು. ರಂಗಪೂಜೆ, ನಾಂದೀ ಮುಂತಾದವು ಇದನ್ನು ಸಮರ್ಥಿಸುತ್ತವೆ.

ಸಂಸ್ಕೃತನಾಟಕಗಳ ಪ್ರಾರಂಭದಲ್ಲಿ ತಪ್ಪದೆ 'ಸೂತ್ರಧಾರ'ನು ಬರುತ್ತಾನೆ. ಬೊಂಬೆಗಳ ಆಟದಲ್ಲಿ ಒಬ್ಬ ವ್ಯಕ್ತಿಯು ಸೂತ್ರ (ದಾರ)ಗಳನ್ನು ಹಿಡಿದು ಗೊಂಬೆಗಳನ್ನು ಕುಣಿಸುತ್ತಾನೆ. ಗೊಂಬೆಗಳ ಬದಲು ಮನುಷ್ಯರೇ ಪಾತ್ರವಹಿಸಿದ ಮೇಲೂ, ಅವುಗಳನ್ನಾಡಿಸುತ್ತಿದ್ದ ವ್ಯಕ್ತಿ ನಟರನ್ನು ಅಂಕಿತದಲ್ಲಿಟ್ಟುಕೊಳ್ಳಲು ಸೂತ್ರಧಾರನಾಗಿ ರೂಪಾಂತರಗೊಂಡಿರಬೇಕೆಂದೂ, ಈ ಮೂಲಕವಾಗಿ ನಾಟಕ ಹುಟ್ಟಿ ಬೆಳೆದಿರಬೇಕೆಂದೂ ಕೆಲವರು ಪಾಶ್ಚಾತ್ಯರು ಊಹಿಸುತ್ತಾರೆ. ಸೂತ್ರಧಾರ ಶಬ್ದಕ್ಕೆ ಅಳತೆದಾರ ಹಿಡಿದು ಪ್ರೇಕ್ಷಕಮಂದಿರವನ್ನು ಕಟ್ಟಿಸುವವನೆಂಬ ಅರ್ಥವೂ ಆಗಬಹುದು. ಅನಿರ್ಧಾರಿತವಾದ ಅರ್ಥವನ್ನುಳ್ಳ ಕೇವಲ ಒಂದು ಶಬ್ದದ ಆಧಾರದಿಂದ ಗೊಂಬೆಯಾಟದ ಅನುಕರಣವಾಗಿ ನಾಟಕ ಮೂಡಿತೆಂಬ ವಾದ ಅಸಮರ್ಥನೀಯ.

ಭರತಖಂಡಕ್ಕೂ, ಗ್ರೀಸ್‌ದೇಶಕ್ಕೂ ಬಹಳ ಹಿಂದಿನಿಂದಲೂ ಸಂಬಂಧವಿದ್ದಿತು, ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ವರ್ತಕರು ಮತ್ತು ಬುದ್ಧಿಜೀವಿಗಳ ಸಂಚಾರವಿದ್ದಿತು. ಕ್ರಿ. ಪೂರ್ವದಲ್ಲಿಯೇ ಗ್ರೀಕ್ ಸಾಹಿತ್ಯದಲ್ಲಿ ನಾಟಕಗಳಿದ್ದವು. ಇವುಗಳ ಪ್ರಭಾವ ಸಂಸ್ಕೃತನಾಟಕಗಳ ಮೇಲೆ ಬಿದ್ದಿದೆಯೇ ಎಂಬ ವಿಷಯದಲ್ಲಿ ವೆಬರ್ ಮುಂತಾದ ಪಾಶ್ಚಾತ್ಯಪಂಡಿತರು ಹೆಚ್ಚು ವಿಚಾರ ಮಾಡಿದ್ದಾರೆ

ಸಂತೋಷವಾದಾಗ ಹಾಡುವುದು, ಕುಣಿಯುವುದು ಮನುಷ್ಯನ ಸ್ವಭಾವ, ಗ್ರೀಕರು ಪ್ರತಿವರ್ಷ ವಸಂತದಲ್ಲಿ "ಡಯೋನೈಸಸ್" ದೇವತೆಯ ಉತ್ಸವವನ್ನು ನಡೆಸುತ್ತಿದ್ದರು. ಆಗ ಐವತ್ತು ಜನರು "ಮೇಳ" ವಾಗಿ ಸೇರಿ ದೇವತೆಯ ಭಕ್ತರ ವೇಷಗಳನ್ನು ಧರಿಸಿ, ದೇವತೆಯ ಮುಂದೆ ಹಾಡಿ ಕುಣಿಯುತ್ತಿದ್ದರು (Ballad dance). ಈ ಕುಣಿತ ಭಾವವ್ಯಂಜಕವೂ ಅಭಿನಯಯುಕ್ತವೂ ಆಗಿದ್ದು ಬಹಳಮಟ್ಟಿಗೆ ನಮ್ಮ ನೃತ್ಯವನ್ನು ಹೋಲುತ್ತಿದ್ದಿತು. ಕುಣಿತದ ನಡುನಡುವೆ ಅವರ ಮುಖಂಡ ವೇದಿಕೆಯ ಮೇಲೆ ನಿಂತು ಉತ್ಸವ ಅಥವಾ ದೇವತಾ ಕಥೆಯ

* 'ಪಾರಾಶರ್ಯಶಿಲಾಲಿಭ್ಯಾಂ ಭಿಕ್ಷುನಟಸೂತ್ರಯೋಃ'—ಶೈಲಾಲಿನೋ ನಟಾಃ.
'ಕರ್ಮಂದಕೃಶಾಶ್ವಾದಿನಿಃ'—ಕೃಶಾಶ್ವಿನೋ ನಟಾಃ.



ವಿಷಯವಾಗಿ ಮಾತಾಡುತ್ತಿದ್ದನು. ಆಮೇಲೆ ಅವನೇ ಒಬ್ಬ ಪಾತ್ರನಾದನು. ಕ್ರಮೇಣ ಪಾತ್ರಗಳು ಒಂದರಿಂದ ಎರಡು, ಮೂರು ಆದವು ; ಮೇಳದ ಸಂಖ್ಯೆ ಕಡಿಮೆಯಾಗುತ್ತಾ ಕರಗಿ ಹೋಯಿತು. ಹೀಗೆ ಗ್ರೀಕ್‌ನಾಟಕಗಳು ಜನಿಸಿದವು.

ಅಲೆಕ್ಸಾಂಡರನು (ಕ್ರಿ.ಪೂ. 4 ನೆಯ ಶತಮಾನ) ಭಾರತವನ್ನು ಮುತ್ತಿದ ಮೇಲೆ ಗ್ರೀಕರ ಮತ್ತು ಭಾರತೀಯರ ಸಂಬಂಧ ಘನಿಷ್ಠವಾಯಿತು. ನಮ್ಮ ಶಿಲ್ಪ, ಗಣಿತ, ಜ್ಯೋತಿಷ, ಸಂಸ್ಕೃತಿ, ಸಾಹಿತ್ಯಾದಿಗಳ ಮೇಲೆ ಅಲ್ಲಿನ ಪ್ರಭಾವ ಬಿದ್ದಿತು. ಅಲೆಕ್ಸಾಂಡರನಿಗೆ ಸಾಹಿತ್ಯ, ನಾಟಕಗಳಲ್ಲಿ ಅಭಿರುಚಿಯಿದ್ದಿತು. ಅವನೊಡನೆ ನಟರೂ ಭಾರತಕ್ಕೆ ಬಂದಿದ್ದರೆಂದೂ, ಅವನ ಒಂದು ಶಿಬಿರದಲ್ಲಿ 'ಏಗೆನ್" ಎಂಬ ನಾಟಕವನ್ನು ಅಭಿನಯಿಸಿದ್ದರೆಂದೂ, ಗೊತ್ತಾಗುತ್ತದೆ. ಈ ವೇಳೆಗೆ ಗ್ರೀಕ್‌ನಾಟಕಗಳು ಸಾಕಷ್ಟು ಬೆಳೆದು ಪ್ರಚಾರದಲ್ಲಿದ್ದವು. ಭಾರತದ ವಾಯುವ್ಯ ಪ್ರಾಂತ ಬಹಳ ಕಾಲ ಗ್ರೀಕರ ಆಡಳಿತದಲ್ಲಿದ್ದಿತು. ಇಲ್ಲಿಯೂ ಅವರು ನಾಟಕಗಳನ್ನಾಡಿಸಿರಬೇಕು. ಇವುಗಳ ಪ್ರಭಾವ ಸಂಸ್ಕೃತನಾಟಕಗಳ ಮೇಲೆ ಬಿದ್ದರಬಹುದು. ಸಂಸ್ಕೃತನಾಟಕಗಳಿಗಿಂತಲೂ ಗ್ರೀಕ್ ನಾಟಕಗಳು ಪ್ರಾಚೀನ. ಗ್ರೀಕರ "ನ್ಯೂ ಆ್ಯಟಿಕ್ ಕಾಮೆಡಿ" (ಒಂದು ಜಾತಿಯ ನಾಟಕ) ಮತ್ತು "ಮೈಮ್" (ನಾಟ್ಯ)ಗಳಿಗೂ ಸಂಸ್ಕೃತನಾಟಕಗಳಿಗೂ ಸಾಕಷ್ಟು ಬಿಂಬಪ್ರತಿಬಿಂಬಭಾವವಿದೆ. ಅಂಕವಿಭಾಗ ; ಪಾತ್ರಗಳ ಪ್ರವೇಶ ; ನಿಷ್ಕ್ರಮ ; ಸ್ವಗತ ; "ನಾಟಕಾ" ಕಥೆಯ ಸ್ವರೂಪ ಮುಂತಾದ ಅಂಶಗಳಲ್ಲಿ ಸಾದೃಶ್ಯವಿದೆ. ನಮ್ಮ ನಾಟ್ಯ ರಂಗದಲ್ಲಿರುವಂತೆ ಮೈಮ್ ನಾಟಕದಲ್ಲಿಯೂ ಪರದೆಯಿದ್ದಿತು ; ಬೇರೆ ಬೇರೆ ಭಾಷೆಗಳ ಪ್ರಯೋಗವಿದ್ದಿತು ; ಶಕಾರ, ವಿದೂಷಕರಿಗೆ ಸಮವಾದ ಪಾತ್ರಗಳೂ ಇದ್ದವು. ಮೃಚ್ಛಕಟಿಕವನ್ನು ಬಹಳ ಹೋಲುವ ಗ್ರೀಕ್‌ನಾಟಕಗಳಿವೆ. ಸಂಸ್ಕೃತನಾಟಕಗಳಲ್ಲಿ ಪರದೆಯನ್ನು "ಯವನಿಕಾ" ಎಂದು ಕರೆಯುತ್ತಾರೆ ; ಶಾಕುಂತಲ ಮುಂತಾದ ನಾಟಕಗಳಲ್ಲಿ ರಾಜಪರಿವಾರದಲ್ಲಿ "ಯವನಿ" ಯರಿದ್ದಾರೆ. ಈ ಯವನಿಯರು ಗ್ರೀಕರೇ ಆಗಿರಬೇಕೆಂದೂ, ಯವನಿಕಾ ಶಬ್ದವು ಗ್ರೀಕ್ ನಾಟಕ ಪ್ರಭಾವಕ್ಕೆ ಸೂಚಕವೆಂದೂ ಕೆಲವರು ಹೇಳುತ್ತಾರೆ. ಭಾರತೀಯರ ನಾಟ್ಯಮಂದಿರಕ್ಕೂ, ಗ್ರೀಕರ ನಾಟ್ಯಮಂದಿರಕ್ಕೂ ಸಾದೃಶ್ಯವಿಲ್ಲ. ಗ್ರೀಕರಂತೆ ಭಾರತೀಯರು ಮುಖವಾಡ ಧರಿಸುತ್ತಿರಲಿಲ್ಲ. ಗ್ರೀಕರು ಭಾರತಕ್ಕೆ ಬಂದಿದ್ದಂತೆ ಭಾರತೀಯ ವಿದ್ವಾಂಸರೂ ಗ್ರೀಸಿಗೆ ಹೋಗಿ ಬರುತ್ತಿದ್ದರೆಂದು ಹೇಳುತ್ತಾರೆ. ಗ್ರೀಕ್ ಮತ್ತು ಸಂಸ್ಕೃತನಾಟಕಗಳು ಉಪಲಬ್ಧವಿದ್ದ ಪರಿಕರಗಳಿಂದ ಸ್ವತಂತ್ರವಾಗಿ ಹುಟ್ಟಿ ಬೆಳೆದು ಒಂದಾನೊಂದು ಘಟ್ಟದಲ್ಲಿ ಪರಸ್ಪರ ಪ್ರಭಾವಿತವಾಗಿದ್ದರೆ ಯಾವ ಆಶ್ಚರ್ಯವೂ ಇಲ್ಲ. ಸಂಶೋಧಕರಲ್ಲಿ ತುಂಬಾ ವಾದವಿವಾದಗಳು ನಡೆದ ಮೇಲೂ, ಗ್ರೀಕ್ ಪ್ರಭಾವದ ಪಕ್ಷ ಸಮರ್ಥಿತವಾಗಿಲ್ಲ.

ಡಯೋನೈಸಸ್ ದೇವತೆಯ ಮುಂದೆ ನಡೆಸುತ್ತಿದ್ದ ನರ್ತನ ಗ್ರೀಕ್‌ನಾಟಕಗಳಿಗೆ ಮೂಲ ; ಭಾರತೀಯ ನಾಟ್ಯಕ್ಕೆ 'ಶಿವ' ಪ್ರವರ್ತಕ. ಮೆಗಾಸ್ತನೀಸ್ ಮುಂತಾದ ಗ್ರೀಕ್ ಗ್ರಂಥಕರ್ತರು ಶಿವನನ್ನು ಡಯೋನೈಸಸ್ ಎಂದು ಕರೆದಿದ್ದಾರೆ. ಡಯೋನೈಸಸ್‌ನ ಉತ್ಸವದಲ್ಲಿ ಲಿಂಗಪೂಜೆ ಯಿತ್ತು. ಈ ದೇವತೆಯ ಉತ್ಸವಕ್ಕೂ, ಶಿವನ ಕಾಮದಹನೋತ್ಸವಕ್ಕೂ ಬಹಳ ಸಾದೃಶ್ಯವಿದೆ,

ಡಯೋನೈಸಸ್ ಪೂರ್ವದಿಂದ ಗ್ರೀಸಿಗೆ ಬಂದ ದೇವತೆಯೆಂದು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವಿದೆ. ಈ ಅಂಶಗಳ ಪರಿಶೀಲನೆಯಿಂದ ಗ್ರೀಕ್‌ನಾಟಕಗಳಿಗೂ, ಸಂಸ್ಕೃತನಾಟಕಗಳಿಗೂ ಮೂಲಭೂತವಾದ ದೂರದ ಸಂಸ್ಕೃತಿಯ ಸಂಬಂಧವಿರಬೇಕೆನಿಸುತ್ತದೆ.

ಆರ್ಯರು ಹೊರಗಿನಿಂದ ಬಂದವರೆಂದು ಒಪ್ಪುವುದಾದರೆ, ಭಾರತದಲ್ಲಿದ್ದ ದ್ರಾವಿಡರು ಅನಾಗರಿಕರೂ, ಅಸಂಸ್ಕೃತರೂ ಆಗಿರಲಿಲ್ಲವೆಂದು ಹೇಳಬೇಕಾಗುತ್ತದೆ. ಬಲಿಷ್ಠರಾದ ಆರ್ಯರು ಕೈಮೇಲಾಗಿ ದ್ರಾವಿಡಸಂಸ್ಕೃತಿಯು ಕ್ಷೀಣಿಸಿರಬಹುದು. ಇಂದಿಗೂ ನಟರಾಜನಾದ ಶಿವನ, ದ್ರಾವಿಡದೇವತೆಯೆಂಬ ಭಾವನೆಯೂ ಬಂದಿದೆ. ಸಂಸ್ಕೃತನಾಟಕಗಳ ಮೇಲೆ ಎಷ್ಟರಮಟ್ಟಿಗೆ ದ್ರಾವಿಡಪ್ರಭಾವವಿದೆಯೆಂಬುದನ್ನು ಸಾಧಾರಣವಾಗಿ ತೋರಿಸುವುದು ಕಷ್ಟ. ಪತಂಜಲಿಯು ಹೆಸರಿಸಿರುವ ಕಂಸವಧ, ಬಲಿಬಂಧಗಳಿಗೂ, ಸಿಕ್ಕಿರುವ ಸಂಸ್ಕೃತದ ಪ್ರಥಮ ನಾಟಕಗಳಾದ 'ಶಾರೀಪುತ್ರಪ್ರಕರಣ' ಮುಂತಾದವುಗಳಿಗೆ ಯಾವ ಸಾದೃಶ್ಯವೂ ಇಲ್ಲ. ಈ ಮಧ್ಯಕಾಲದ ನಾಟಕ ಸಾಹಿತ್ಯ ಕಳೆದುಹೋಗಿದೆ ಅಥವಾ ದೊರೆತಿಲ್ಲ.

## ಅಶ್ವಘೋಷ

### (ಸು. ಕ್ರಿ.ಶ. 150)

ಅಶ್ವಘೋಷನ ನಾಟಕಗಳು ದೊರೆಯುವವರೆಗೆ ಭಾಸನೇ ಅತ್ಯಂತ ಪ್ರಾಚೀನ ನಾಟಕಕಾರನೆಂಬ ಭಾವನೆಯಿದ್ದಿತು. ಅಶ್ವಘೋಷನು ಬೌದ್ಧದಾರ್ಶನಿಕನೆಂದೂ, ಗ್ರಂಥಕಾರನೆಂದೂ. ಕವಿಯೆಂದೂ ಬಹಳ ಕಾಲದಿಂದ ಪ್ರಸಿದ್ಧನಾಗಿದ್ದನು. ಬೌದ್ಧ ಧರ್ಮಗ್ರಂಥಗಳಲ್ಲಿ ಅವನನ್ನು ಆಚಾರ್ಯನೆಂದು ಕರೆಯಲಾಗಿದೆ. ಅವನ ಗ್ರಂಥಗಳು ಸಂಸ್ಕೃತ ಮತ್ತು ಚೀನಾ ಭಾಷಾಂತರಗಳಲ್ಲಿ ದೊರೆಯುತ್ತವೆ. 1911ರಲ್ಲಿ ಲೂಡರ್ಸ್ (Luders) ಎಂಬ ಜರ್ಮನ್ ವಿದ್ವಾಂಸನು ಸೆಂಟ್ರಲ್ ಏಷ್ಯಾದ ಟರ್ಫಾನ್ ಎಂಬ ಸ್ಥಳದಲ್ಲಿ ಅಶ್ವಘೋಷನ ಕೆಲವು ರೂಪಕಗಳನ್ನು ಸಂಗ್ರಹಿಸಿ ತನ್ನ ಅಪಾರ ಪರಿಶ್ರಮದಿಂದ ಅವುಗಳನ್ನು ಸಂಪಾದಿಸಿ ಪ್ರಕಟಿಸಿದನು.

ಅಶ್ವಘೋಷನ 28 ಸರ್ಗಗಳನ್ನುಳ್ಳ 'ಬುದ್ಧಚರಿತ'ದ ಕ್ರಿ.ಶ. 5ನೆಯ ಶತಮಾನದ ಚೀನೀ ಭಾಷಾಂತರವೂ 8ನೆಯ ಶತಮಾನದ ಟಿಬೆಟನ್ ಭಾಷಾಂತರವೂ ಉಪಲಬ್ಧವಾಗಿವೆ. ಆದ್ದರಿಂದ ಇವನು ಕ್ರಿ.ಶ. ಐದನೆಯ ಶತಮಾನಕ್ಕಿಂತ ಹಿಂದಿನವನೆಂಬುದು ನಿರ್ವಿವಾದ. ಸುಮಾರು ಕ್ರಿ.ಶ. 125ರಲ್ಲಿ ಪೆಷಾವರ್ ನಗರದಲ್ಲಿ ಆಳುತ್ತಿದ್ದ ಸಿಥಿಯನ್ ದೊರೆಯಾದ ಕನಿಷ್ಕನಿಗೆ ಇವನು ಗುರುವಾಗಿದ್ದನೆಂದು ಚೀನಾದೇಶದ ಪ್ರತೀತಿಯಿದೆ. ಸಾರನಾಥದ ಅಶೋಕಸ್ತಂಭ ಶಾಸನದಲ್ಲಿ ಒಬ್ಬ 'ಅಶ್ವಘೋಷರಾಜ'ನ ವಿಚಾರವಿದೆ. ಮಠಾಧಿಪತಿಗಳನ್ನೂ, ದೊಡ್ಡ ಗುರುಗಳನ್ನೂ ಮಹಾರಾಜರೆಂದು ಕರೆಯುವ ವಾಡಿಕೆಯಿರುವುದರಿಂದ ಇವನ ಅಶ್ವಘೋಷ ಕವಿಯೇ ಆಗಿರಬೇಕೆಂದು ಊಹಿಸಬಹುದು. ಬೌದ್ಧಗುರುಪರಂಪರೆಯಲ್ಲಿ ಇವನ ಹೆಸರು ಪಾರ್ಶ್ವನಿಗಿಂತ ಮೂರು ತಲೆ ಮುಂದೂ, ನಾಗಾರ್ಜುನನಿಗಿಂತ ಮೂರು ತಲೆ ಹಿಂದೂ ಬರುತ್ತದೆ.



ಕನಿಷ್ಕನು ಏರ್ಪಡಿಸಿದ್ದ ಮಹಾಸಭೆಗೆ ಪಾರ್ಶ್ವನು ಅಧ್ಯಕ್ಷನಾಗಿದ್ದನು. ನಾಗಾರ್ಜುನನ ಕಾಲ ಸು.ಕ್ರಿ.ಶ. ಎರಡನೆಯ ಶತಮಾನ. ಈ ಅಂಶಗಳಿಂದ ಅಶ್ವಘೋಷನು ಸು.ಕ್ರಿ.ಶ. ಮೊದಲನೆಯ ಶತಮಾನದವನೆಂದು ಹೇಳಬಹುದು.

ಕಾಳಿದಾಸನ ಹೆಸರಿನಲ್ಲಿರುವಂತೆ ಅಶ್ವಘೋಷನೂ ಹೆಸರಿನಲ್ಲಿಯೂ ಹಲವು ಗ್ರಂಥಗಳು ಪ್ರಚಾರದಲ್ಲಿದ್ದರೂ, ಅವುಗಳಲ್ಲಿ ಕೆಲವು ಮಾತ್ರ ಅವನ ಕೃತಿಗಳೆಂದು ಅಭಿಪ್ರಾಯಪಡುತ್ತಾರೆ. 'ಬುದ್ಧಚರಿತ' ಮತ್ತು 'ಸೌಂದರನಂದ' — ಇವೆರಡು ಅಶ್ವಘೋಷನ ಮಹಾಕಾವ್ಯಗಳು.* ಟಿಬೆಟನ್ ಭಾಷಾಂತರದ ಮೂಲಕ ದೊರೆತಿರುವ 'ಸೂತ್ರಾಲಂಕಾರ'ದಲ್ಲಿ ಬೌದ್ಧಸಿದ್ಧಾಂತವಿದೆ. ದಾರ್ಶನಿಕ ಮತ್ತು ಧಾರ್ಮಿಕಗ್ರಂಥಗಳಾದ 'ಮಹಾಯಾನಶ್ರದ್ಧೋತ್ಪಾದ' ಮತ್ತು 'ವಜ್ರಸೂಚೀ'ಗಳು ಅಶ್ವಘೋಷನವೆಂಬ ವಿಷಯದಲ್ಲಿ ಸಂದೇಹವಿದೆ. 'ಗಂಡೀಸ್ತೋತ್ರ ಗಾಥಾ' ಮುಂತಾದ ಕೆಲವು ಸ್ತೋತ್ರಗಳೂ ಅವನ ಹೆಸರಿನಲ್ಲಿವೆ.

ಅಶ್ವಘೋಷನ ಗ್ರಂಥಗಳ ಕೊನೆಯಲ್ಲಿ ಬಂದಿರುವ ಸಮಾಪ್ತಿವಾಕ್ಯ†ಗಳಿಂದ ಅವನ ತಾಯಿ 'ಸುವರ್ಣಾಕ್ಷಿ' ಎಂದೂ, ಸ್ಥಳ 'ಸಾಕೇತ'ವೆಂದೂ, ಅವನನ್ನು ಆಚಾರ್ಯ, ಭದಂತ ಮಹಾಪಂಡಿತ, ಮಹಾವಾದಿ ಮುಂತಾಗಿ ಕರೆಯುತ್ತಿದ್ದರೆಂದೂ ತಿಳಿದುಬರುತ್ತದೆ. ಆತನ ಕೃತಿಗಳ ಪರಿಶೀಲನೆಯಿಂದ ಅವನಿಗೆ ವೇದ, ರಾಮಾಯಣ, ಮಹಾಭಾರತಗಳ ಮತ್ತು ಸಾಂಖ್ಯ, ವೈಶೇಷಿಕ, ಆರ್ಹತದರ್ಶನಗಳ ಪರಿಚಯವಿತ್ತೆಂದು ಕಂಡುಬರುತ್ತದೆ. ಅವನಿಗೆ ಸಂಗೀತ ಶಾಸ್ತ್ರದ ಪರಿಚಯವಿತ್ತೆಂದೂ, ಪಾಟಲೀಪುತ್ರದ ಯಾತ್ರಾಸಮಯದಲ್ಲಿ ಹಾಡುವವರೊಡನೆ ಹಾಡುತ್ತಾ ಸಹಯಾತ್ರಿಕರನ್ನು ಅನುರಕ್ತರನ್ನಾಗಿ ಮಾಡಿಕೊಳ್ಳುತ್ತಿದ್ದನೆಂದೂ ಹೇಳುತ್ತಾರೆ. ಅಲ್ಲದೆ ಅವನು 'ರಾಷ್ಟ್ರಪಾಲನಾಟಕ'‡ ವೆಂಬ ಒಂದು ರೂಪಕವನ್ನು ಬರೆದಿದ್ದನೆಂದೂ, ತಾನೂ ವೇಷ ಧರಿಸಿ ನಟರೊಡನೆ ಅದನ್ನು ಪಾಟಲೀಪುತ್ರದಲ್ಲಿ ಮನೋಜ್ಞವಾಗಿ ಅಭಿನಯಿಸಿದನೆಂದೂ, ಅದನ್ನು ನೋಡಿದ 500 ಮಂದಿ ಕ್ಷತ್ರಿಯಕುಮಾರರು ವೈರಾಗ್ಯ ತಾಳಿದರೆಂದೂ ಐದನೆಯ ಶತಮಾನದ ಒಂದು ಚೀನಾ ಗ್ರಂಥದಿಂದ ಗೊತ್ತಾಗುತ್ತದೆ. ಈ ರೂಪಕ ಈಗ ಉಪಲಬ್ಧವಿಲ್ಲ. ಅಶ್ವಘೋಷನು ಮಹಾವಿದ್ವಾಂಸನೂ, ಮಹಾಕವಿಯೂ, ದಾರ್ಶನಿಕನೂ, ಬೋಧಕನೂ ಆಗಿದ್ದನು. ಇತ್ತೀಚೆಗೆ ಅವನು ಉತ್ತಮನಾಟಕಕಾರನೂ ಆಗಿದ್ದನೆಂಬುದು ಬೆಳಕಿಗೆ ಬಂದಿತು. ಮತಿವಂತಮಾತ್ಸರ್ಯವಿಲ್ಲದೆ ಎಲ್ಲರೂ ಕಾಳಿದಾಸನ ಕಾವ್ಯಗಳಂತೆ ಅವನ ಕಾವ್ಯಗಳನ್ನು ಗೌರವಾದರಗಳಿಂದ ಓದುತ್ತಿದ್ದರು. ಇವರಿಬ್ಬರ ಕಾವ್ಯಗಳ ತೌಲನಿಕ ಪರಿಶೀಲನೆ ನಡೆಸಿದ

---

*ಇವುಗಳ ಪೂರ್ಣನಿರೂಪಣೆಗೆ "ಮಹಾಕಾವ್ಯ" ಅಧ್ಯಾಯವನ್ನು ನೋಡಿ.

†(i) ಶಾರೀಪುತ್ರಪ್ರಕರಣೇ ನವಮೋಂಕಃ । ಆರ್ಯಸುವರ್ಣಾಕ್ಷೀಪುತ್ರಸ್ಯಾರ್ಯಾಶ್ವಘೋಷಸ್ಯ ಕೃತಿಶ್ಶಾರದ್ವತೀಪುತ್ರಪ್ರಕರಣಮ್ ।— ಶಾರೀಪುತ್ರಪ್ರಕರಣ.

(ii) ಆರ್ಯಸುವರ್ಣಾಕ್ಷೀಪುತ್ರಸ್ಯ ಸಾಕೇತಕಸ್ಯ ಭಿಕ್ಷೋರಾಚಾರ್ಯಸ್ಯ ಭದಂತಾಶ್ವಘೋಷ ಮಹಾಕವೇರ್ಮಹಾವಾದಿನಃ ಕೃತಿರಿಯಮ್ ।— ಸೌಂದರನಂದ.

‡ಮಧ್ಯಮನಿಕಾಯದ 'ರಟ್ಠಪಾಲಸುತ್ತ'ದಲ್ಲಿ ಬಂದಿರುವ ಕಥೆಯನ್ನನುಸರಿಸಿ 'ರಾಷ್ಟ್ರಪಾಲ' ನಾಟಕವನ್ನು ಬರೆಯಲಾಗಿದೆ.

ವಿದ್ವಾಂಸರು ಹಲವು ಅಂಶಗಳಲ್ಲಿ ಸ್ಪಷ್ಟವಾದ ಸಾಮ್ಯವನ್ನು ಎತ್ತಿ ತೋರಿಸಿದ್ದಾರೆ. ಇಬ್ಬರ ಕಾಲವೂ ಸಂದಿಗ್ಧವಾಗಿರುವುದರಿಂದ ಯಾರಿಂದ ಯಾರು ಪ್ರಭಾವಿತರಾಗಿದ್ದಾರೆಂಬುದನ್ನು ಊಹಿಸಲು ಸಾಧ್ಯವಿಲ್ಲ.

ಅಶ್ವಘೋಷನು ಮಹಾಯಾನ ಬೌದ್ಧನೆಂಬ ಅಭಿಪ್ರಾಯವಿದೆ. ಆದರೆ ಇವನ ಕಾವ್ಯಗಳಲ್ಲಿ ಮಹಾಯಾನ ಸಂಪ್ರದಾಯ, ವಿಜ್ಞಾನವಾದ, ಶೂನ್ಯವಾದಗಳು ಅಷ್ಟಾಗಿ ಕಂಡುಬರುವುದಿಲ್ಲ. ಬಹಳ ಪ್ರಾಚೀನನಾದ ಇವನ ವಿಷಯದಲ್ಲಿ ಬೌದ್ಧರ ನಂಬಿಕೆಗಳೂ ಭಿನ್ನಭಿನ್ನವಾಗಿವೆ. ವೇದ, ಪುರಾಣ, ರಾಮಾಯಣ, ಮಹಾಭಾರತಗಳ ಒಳ್ಳೆಯ ಪರಿಚಯವಿರುವುದರಿಂದ ಪ್ರಾಯಶಃ ಇವನು ಮೊದಲು ಬ್ರಾಹ್ಮಣನಾಗಿದ್ದು ನಂತರ ಬೌದ್ಧಧರ್ಮವನ್ನು ಸ್ವೀಕರಿಸಿರಬೇಕು. ಚೀನಾದೇಶದ ಪ್ರತೀತಿಯೂ ಇದಕ್ಕನುಗುಣವಾಗಿಯೇ ಇದೆ. ಮೊದಲಿನಿಂದ ಇದ್ದವರಿಗಿಂತಲೂ ಹೊಸದಾಗಿ ಮತ ಸ್ವೀಕರಿಸಿದವರಲ್ಲಿ ಸಹಜವಾಗಿ ಹೆಚ್ಚು ಧರ್ಮಶ್ರದ್ಧೆ ಕಂಡುಬರುತ್ತದೆ. ತನ್ನ ಮುಖ್ಯ ಉದ್ದೇಶ ಧರ್ಮಪ್ರಚಾರವೆಂದೂ, ಕಾವ್ಯರಚನೆಯಲ್ಲವೆಂದೂ ಅಶ್ವಘೋಷನು ತಾನೇ ಸಾರಿಕೊಂಡಿದ್ದಾನೆ.* ಇವನದು ಸುಲಭ ಭಾಷೆ; ಸರಳ ಶೈಲಿ.† ವರ್ಣನೆಗಳು ರೂಪಕೋಪಮಾದ್ಯಲಂಕಾರಗಳಿಂದ ಕೂಡಿ ಮನೋಜ್ಞವಾಗಿವೆ. ಕೆಲವು ಪ್ರಯೋಗಗಳಲ್ಲಿ ವ್ಯಾಕರಣನಿಯಮದ ಉಲ್ಲಂಘನೆ ಇದೆ. ಇದಕ್ಕೆ ಪ್ರಾಕೃತದ ಒಲವೋ. ಲಿಪಿಕಾರರ ದೋಷವೋ ಕಾರಣವಾಗಿರಬಹುದು. ‡

ಟರ್ಫಾನ್‌ನಲ್ಲಿ ದೊರೆತ ಅಶ್ವಘೋಷನ ರೂಪಕಗಳನ್ನು ಓಲೆಗರಿಯ ಮೇಲೆ ಮಸಿಯಲ್ಲಿ ಬರೆಯಲಾಗಿದೆ. ಇವುಗಳನ್ನು ಈವರೆಗೆ ದೊರೆತಿರುವ ಓಲೆಗರಿ ಪುಸ್ತಕಗಳಲ್ಲೆಲ್ಲಾ ಅತ್ಯಂತ ಪ್ರಾಚೀನವೆಂದು ಪರಿಗಣಿಸಲಾಗಿದೆ. ಇವುಗಳ ಲಿಪಿ ಸುಮಾರು ಕುಷಾನರ ಕಾಲದ್ದು. ಎರಡು

---

* ಇತ್ಯೇಷಾವ್ಯುಪಶಾಂತಯೇ ನ ರತಯೇ ಮೋಕ್ಷಾರ್ಥಗರ್ಭಾಕೃತಿಃ
ಶ್ರೋತೄಣಾಂ ಗ್ರಹಣಾರ್ಥಮನ್ಯಮನಸಾಂ ಕಾವ್ಯೋಪಚಾರಾತ್ ಕೃತಾ ।
ಯನ್ಮೋಕ್ಷಾತ್ ಕೃತಮನ್ಯದತ್ರ ಹಿ ಮಯಾ ತತ್ ಕಾವ್ಯಧರ್ಮಾತ್ ಕೃತಂ
ಪಾತುಂ ತಿಕ್ತಮಿವೌಷಧಂ ಮಧುಯುತಂ ಹೃದ್ಯಂ ಕಥಂ ಸ್ಯಾದಿತಿ ॥
ಪ್ರಾಯೇಣಾಲೋಕ್ಯ ಲೋಕಂ ವಿಷಯರತಿಪರಂ ಮೋಕ್ಷಾತ್ ಪ್ರತಿಹತಂ
ಕಾವ್ಯವ್ಯಾಜೇನ ತತ್ತ್ವಂ ಕಥಿತಮಿಹ ಮಯಾ ಮೋಕ್ಷಃ ಪರಮಿತಿ ।
ತದ್ಬುದ್ಧ್ವಾ ಶಾಮಿಕಂ ಯತ್ತದವಹಿತಮಿತೋ ಗ್ರಾಹ್ಯಂ ನ ಲಲಿತಂ
ಪಾಂಸುಭ್ಯೋ ಧಾತುಜೇಭ್ಯೋ ನಿಯತಮುಪಕರಂ ಚಾಮೀಕರಮಿತಿ ॥ —ಸೌಂದರನಂದ.

†............ಪ್ರಾಪ್ತಂ ತಚ್ಚ ಯಥಾ ನಿಮ್ನಗತಂ ಭವತಿ ತತ್ರಾದೌ ಸ್ರೋತ ಉಪರತಮ್ ವಿಸಿಷ್ಟಮಿತಿ [ಭವ]ತಿ[ಏನಮು]ಸ.........ಆ.........ಮ್ ಶಾರೀ[ರೇ]ನ್ದ್ರಿಯ.................. ಬುದ್ಧಿಸ್ರೋತಸೋ ವರ್ತಮಾ[ನ]...........ಭಗವತಾಧಿ[ಗ]—ಶಾರೀಪುತ್ರಪ್ರಕರಣ.

The Sanskrit contain some errors, which are obvious Prakritisms, and which would be unjust to attribute to the author or authors. Genuine departures from the norm are scanty—A.B. Keith.



ಬರವಣಿಗೆಗಳನ್ನುಳ್ಳ ಸುಮಾರು 160 ತುಂಡುಗಳು ದೊರೆತಿವೆ; ಒಂದು ಪತ್ರವೂ ಅಖಂಡವಾಗಿ ದೊರೆತಿಲ್ಲ; ಇವುಗಳ ಭಾಷೆ ಸಂಸ್ಕೃತ ಮತ್ತು ಪ್ರಾಕೃತ. ಕೆಲವು ತುಂಡುಗಳಲ್ಲಿ ಶಾರೀಪುತ್ರ ಮತ್ತು ಮೌದ್ಗಲಾಯನರು ಬುದ್ಧನ ಶಿಷ್ಯರಾದ ವಿಚಾರವಿದ್ದು, ಒಂದು ತುಂಡಿನ ಕೊನೆಯಲ್ಲಿ ಅಶ್ವಘೋಷನ ಒಂಬತ್ತು ಅಂಕಗಳನ್ನುಳ್ಳ 'ಶಾರೀಪುತ್ರಪ್ರಕರಣ' ಅಥವಾ 'ಶಾರದ್ವತೀಪುತ್ರಪ್ರಕರಣ' ಮುಗಿಯಿತೆಂಬ ಸಮಾಪ್ತಿವಾಕ್ಯವಿದೆ. ಬೇರೆ ತುಂಡಿನಲ್ಲಿ ಧೃತಿ, ಕೀರ್ತಿ, ಬುದ್ಧಿಗಳ ಸಂಭಾಷಣ ಇದೆ. ಮತ್ತೆ ಕೆಲವು ತುಂಡುಗಳಲ್ಲಿ ಸೋಮದತ್ತ, ಧಾನಂಜಯ, ವೇಶ್ಯೆ, ದುಷ್ಟ ಮುಂತಾದವರ ವಿಚಾರವಿದೆ. ಇವೆರಡು ಪ್ರತ್ಯೇಕ ರೂಪಕಗಳಾಗಿದ್ದು ಇವುಗಳ ಕರ್ತೃ ಯಾರೆಂಬ ಬಗ್ಗೆ ಸೂಚನೆಯಿಲ್ಲ. ಈ ಎರಡು ರೂಪಕಗಳೂ ಶಾರೀಪುತ್ರಪ್ರಕರಣದ ಜೊತೆಗೇ ದೊರೆತಿರುವುದರಿಂದಲೂ, ಸಾದೃಶ್ಯವಿರುವುದರಿಂದಲೂ ಇವುಗಳ ಕರ್ತೃವೂ ಅಶ್ವಘೋಷನೇ ಆಗಿರಬಹುದು. ಹೀಗೆ ಲೂಡರ್ಸ್‌ರವರ ಪರಿಶ್ರಮದಿಂದ ಅತ್ಯಂತ ಪ್ರಾಚೀನವಾದ ಮೂರು ಬೌದ್ಧ ನಾಟಕಗಳು ಪ್ರಕಾಶಕ್ಕೆ ಬಂದವು.

ದೊರೆತಿರುವ ತುಂಡುಗಳಿಂದ ಶಾರೀಪುತ್ರಪ್ರಕರಣದ ಇಷ್ಟು ಕಥೆ ಗೊತ್ತಾಗುತ್ತದೆ:—

ಶಾರೀಪುತ್ರನು ಅಶ್ವಜಿತನಲ್ಲಿಗೆ ಹೋಗುತ್ತಾನೆ; ಬ್ರಾಹ್ಮಣನು ಕ್ಷತ್ರಿಯನಿಂದ ಉಪದೇಶ ಪಡೆಯಬಹುದೇ-ಕೂಡದೇ ಎಂಬುದನ್ನು ವಿದೂಷಕನೊಡನೆ ಚರ್ಚಿಸಿ, ಕೀಳು ಜಾತಿಯವನು ರೋಗಿಗೆ ಕೊಟ್ಟ ಔಷಧವೂ, ಬಾಯಾರಿದವನಿಗೆ ಕೊಟ್ಟ ನೀರೂ ಹಿತವಾಗುವಂತೆ ಮುಮುಕ್ಷುವಾದ ಬ್ರಾಹ್ಮಣನಿಗೆ ಚಿಕ್ಕ ಜಾತಿಯವರೂ ಉಪದೇಶಮಾಡಬಹುದೆಂದು ಹೇಳುತ್ತಾನೆ; ಇಬ್ಬರೂ ಬುದ್ಧನಲ್ಲಿಗೆ ಹೋಗುತ್ತಾರೆ; ಬುದ್ಧನಿಗೂ, ಶಾರೀಪುತ್ರನಿಗೂ ಆತ್ಮದ ವಿಷಯವಾಗಿ ಚರ್ಚೆ ನಡೆಯುತ್ತದೆ; ಮೆಚ್ಚಿಕೊಂಡ ಬುದ್ಧನು ಶಿಷ್ಯರಿಬ್ಬರನ್ನೂ ಆಶೀರ್ವದಿಸುತ್ತಾನೆ.

ಪ್ರಕರಣದಲ್ಲಿ ಹತ್ತು ಅಂಕಗಳಿರಬೇಕೆಂಬ ನಿಯಮವಿದೆ. ಶಾರೀಪುತ್ರಪ್ರಕರಣದಲ್ಲಿ ಒಂಬತ್ತು ಅಂಕಗಳು ಮಾತ್ರ ಇವೆ. ಕೊನೆಯ ಎರಡಂಕಗಳ ಕೆಲವು ತುಂಡುಗಳು ಮಾತ್ರ ದೊರೆತಿದೆ. ಉಳಿದ ಅಂಕಗಳಲ್ಲಿ ಏನಿದ್ದಿತೋ ಊಹಿಸಲಾಗುವುದಿಲ್ಲ. ಮುಮುಕ್ಷುವಾದ ಶಾರೀಪುತ್ರನಿಗೆ ಹಾಸ್ಯಗಾರನಾದ ವಿದೂಷಕನು ಮಿತ್ರನಾಗಿದ್ದಾನೆ. ನಾಟಕವು, 'ದೇಶಕ್ಕೆ ಸುಭಿಕ್ಷವಾಗಲಿ' ಎಂಬ ಸಂಪ್ರದಾಯದ ಭರತವಾಕ್ಯದಿಂದ ಮುಗಿಯದೆ 'ಇನ್ನು ಮುಂದೆ ನೀವು ಮೋಕ್ಷಾರ್ಥವಾಗಿ ಈ ಜ್ಞಾನವನ್ನು ನಿರಂತರವಾಗಿಯೂ, ಯತೇಂದ್ರಿಯರಾಗಿಯೂ ಭಾವನೆ ಮಾಡಿಕೊಂಡು ಬನ್ನಿ' ಎಂಬ ಬುದ್ಧನ ಆಶೀರ್ವಚನದಿಂದ ಮುಗಿಯುತ್ತದೆ.

ಎರಡನೆಯ ತುಂಡು—ನಾಟಕ. ಕೃಷ್ಣಮಿಶ್ರನ 'ಪ್ರಬೋಧಚಂದ್ರೋದಯ'ವನ್ನು ಹೋಲುತ್ತದೆ. ಅಮೂರ್ತಗಳಾದ ಗುಣಧರ್ಮಾದಿಗಳನ್ನು ಪಾತ್ರಗಳನ್ನಾಗಿಸಿಕೊಂಡು ರಚಿತವಾದ ನಾಟಕಪರಂಪರೆಗೆ ಇದು ಪ್ರಾಚೀನ ಮೇಲ್ಪಂಕ್ತಿಯಾಗಿದೆ.

ಮೂರನೆಯ ತುಂಡು—ನಾಟಕ, ಭಾಸನ 'ಚಾರುದತ್ತ'ವನ್ನೂ, ಶೂದ್ರಕನ 'ಮೃಚ್ಛಕಟಿಕ'ವನ್ನೂ ಹೋಲುತ್ತದೆ. ಇದರಲ್ಲಿ ಸೋಮದತ್ತ (ನಾಯಕ ?), ಧಾನಂಜಯ (ರಾಜಪುತ್ರ ?),

ಮಾಗಧವತಿ (ವೇಶ್ಯೆ), ಕೋಮುದಗಂಧ (ವಿದೂಷಕ ?) ಮುಂತಾದವರು ಬರುತ್ತಾರೆ. ಜೀರ್ಣೋದ್ಯಾನ, ವೇಶ್ಯಾಗೃಹ, ಪ್ರವಹಣ ಪ್ರವೇಶಗಳಿವೆ.

ಅಶ್ವಘೋಷನ ರೂಪಕಗಳು ಲಕ್ಷಣ ಗ್ರಂಥಗಳ ನಿಯಮಗಳಿಗನುಸಾರವಾಗಿವೆ. ವಿದೂಷಕನು ಬ್ರಾಹ್ಮಣ. ಉತ್ತಮ ಪಾತ್ರಗಳು ಸಂಸ್ಕೃತವನ್ನೂ, ನೀಚ ಪಾತ್ರಗಳು ಪ್ರಾಕೃತವನ್ನೂ ಆಡುತ್ತವೆ. ಈ ರೂಪಕಗಳಲ್ಲಿ ಮೂರು ವಿಧವಾದ ಪ್ರಾಕೃತಗಳಿವೆ. ದುಷ್ಟನ ಪ್ರಾಕೃತ ಮಾಗಧಿಗೂ, ಗೋಬಂನ ಪ್ರಾಕೃತ ಹಳೆಯ ಮಾಗಧಿಗೂ, ವೇಶ್ಯೆ, ವಿದೂಷಕರ ಪ್ರಾಕೃತ ಶೌರಸೇನಿಗೂ ಸದೃಶವಾಗಿವೆ. ಪದ್ಯಗಳು ಹಲವು ವೃತ್ತಗಳಲ್ಲಿವೆ*. ಸಂಸ್ಕೃತಸಾಹಿತ್ಯ ಧರ್ಮದ ತಳಹದಿಯ ಮೇಲೆ ಹುಟ್ಟಿ ಬೆಳೆದಿರುವುದು ಸರ್ವವಿದಿತ. ಈ ನಾಟಕಗಳು ಧಾರ್ಮಿಕ ನಾಟಕಗಳೇ ಆಗಿವೆ. ಲಕ್ಷಣಾನುಸಾರವಾಗಿ ರಚಿತವಾಗಿರುವ ನಾಟಕಗಳನ್ನು ನೋಡಿದರೆ ಈ ವೇಳೆಗಾಗಲೇ ಸಾಕಷ್ಟು ಸಂಸ್ಕೃತನಾಟಕಗಳ ರಚನೆಯಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

## ಭಾಸ
## (ಸು. ಕ್ರಿ.ಶ. 300)

ಭಾಸನು ಕಾಳಿದಾಸ, ಬಾಣ, ರಾಜಶೇಖರ ಮುಂತಾದ ಮಹಾಕವಿಗಳ ಪ್ರಶಂಸೆಗೆ ಪಾತ್ರನಾಗಿದ್ದರೂ, ಸೂಕ್ತಿಮುಕ್ತಾವಲೀ, ಸದುಕ್ತಿಕರ್ಣಾಮೃತ, ಶಾರ್ಙ್ಗಧರಪದ್ಧತಿ ಮುಂತಾದ ಪ್ರಸಿದ್ಧ ಸುಭಾಷಿತ ಗ್ರಂಥಗಳಲ್ಲಿ ಅವನ ಪದ್ಯಗಳ ಸಂಗ್ರಹವಿದ್ದರೂ, ಅನುಭವ ತುಂಬಿದ ಅವನ ಸುಂದರ ಮಾತುಗಳನ್ನು ದೀರ್ಘಕಾಲದಿಂದ ಲೋಕ ಉದಾಹರಿಸುತ್ತಿದ್ದರೂ ಅವನ ಕೃತಿಗಳು ದೊರೆತದ್ದು ಇತ್ತೀಚೆಗೆ. ಮಹಾಮಹೋಪಾಧ್ಯಾಯ ಟಿ. ಗಣಪತಿಶಾಸ್ತ್ರಿಗಳು 1910 ರಲ್ಲಿ ತಿರುವಾಂಕೂರು ಸಂಸ್ಥಾನದ ದಕ್ಷಿಣ ಪ್ರಾಂತದಲ್ಲಿ ಗ್ರಂಥಸಂಗ್ರಹಕ್ಕಾಗಿ ಸಂಚರಿಸುತ್ತಿದ್ದಾಗ ಅವರಿಗೆ ಸಂಸ್ಕೃತ ರೂಪಕಗಳ ಒಂದು ಹಸ್ತಪ್ರತಿಗಳ ಕಟ್ಟು ದೊರೆಯಿತು. ಅದರಲ್ಲಿ ಕವಿಯ ಹೆಸರಿಲ್ಲದ ಸ್ವಪ್ನನಾಟಕಂ, ಪ್ರತಿಜ್ಞಾನಾಟಿಕಾ, ಪಂಚರಾತ್ರಂ, ಚಾರುದತ್ತಂ, ಅವಿಮಾರಕಂ, ದೂತಘಟೋತ್ಕಚಂ, ಬಾಲಚರಿತಂ, ಮಧ್ಯಮವ್ಯಾಯೋಗಃ, ಕರ್ಣಭಾರಂ, ಊರುಭಂಗಂ, ಅಭಿಷೇಕನಾಟಕಂ, ಪ್ರತಿಮಾನಾಟಕಂ, ದೂತವಾಕ್ಯಂ ಎಂಬ ಹದಿಮೂರು ರೂಪಕಗಳಿದ್ದುವು. ಸ್ವಪ್ನನಾಟಕವು ಸ್ವಪ್ನವಾಸವದತ್ತದ ಸಂಕುಚಿತನಾಮವೆಂದೂ, ವಾಸವದತ್ತೆಯ ಸ್ವಪ್ನದೃಶ್ಯದಿಂದ ರಮ್ಯವಾಗಿರುವುದರಿಂದ ಇದು ರಾಜಶೇಖರನು (ಸು.ಕ್ರಿ.ಶ. 1000) ಹೆಸರಿಸಿರುವ ಭಾಸನ ಸ್ವಪ್ನವಾಸವದತ್ತವೆಂದೂ ಪರಿಗ್ರಹಿಸಿದರು. ರಾಜಶೇಖರನು ಸ್ವಪ್ನವಾಸವದತ್ತವನ್ನು ಮುಕ್ತಕಂಠದಿಂದ ಹೀಗೆ ಪ್ರಶಂಸಿಸಿದ್ದಾನೆ:—

ಭಾಸನಾಟಕಚಕ್ರೇಽಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಮ್ ।
ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ ॥

*ಶ್ಲೋಕ, ಉಪಜಾತಿ, ಶಾಲಿನೀ, ವಂಶಸ್ಥ, ಪ್ರಹರ್ಷಿಣೀ, ವಸಂತತಿಲಕಾ, ಮಾಲಿನೀ, ಶಿಖರಿಣೀ, ಹರಿಣೀ, ಶಾರ್ದೂಲವಿಕ್ರೀಡಿತ, ಸ್ರಗ್ಧರಾ, ಸುವದನಾ—ಇತ್ಯಾದಿ.



ಇದರಿಂದ ಭಾಸನು ಅನೇಕ ನಾಟಕಗಳನ್ನು ಬರೆದಿದ್ದಾನೆಂದೂ, ಅವುಗಳಲ್ಲಿ ಸ್ವಪ್ನವಾಸವದತ್ತ ಅತ್ಯುತ್ತಮವಾದುದೆಂದೂ ಗೊತ್ತಾಗುತ್ತದೆ. ಹೀಗೆ ವಿದ್ವಾಂಸರ ವಾದ ವಿವಾದರೂಪವಾದ ಅಗ್ನಿಯು ಸುಡದ, ಲೋಕೋತ್ತರವಾದ ಭಾಸನ ಒಂದು ನಾಟಕ ದೊರೆತಂತಾಯಿತು. ಇದಕ್ಕೂ ಉಳಿದ ಹನ್ನೆರಡು ನಾಟಕಗಳಿಗೂ ಹಲವು ಅಂಶಗಳಲ್ಲಿ ಪೂರ್ಣ ಸಾದೃಶ್ಯವಿರುವುದರಿಂದ ಅವರು ಈ ಎಲ್ಲ ನಾಟಕಗಳ ಕರ್ತೃ ಭಾಸನೆಂದು ತೀರ್ಮಾನಿಸಿದರು. ಹದಿಮೂರು ನಾಟಕಗಳ ಪ್ರಾರಂಭದಲ್ಲಿ ಆವರಣದಲ್ಲಿ 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂಬ ರಂಗನಿರ್ದೇಶನವಿದೆ. ನಾಂದೀ ಪದ್ಯಗಳಲ್ಲಿ ಕಾವ್ಯವಸ್ತುವನ್ನು ಸೂಚಿಸುವ ಮುದ್ರಾಲಂಕಾರವಿದೆ*, ಪ್ರಸ್ತಾವನೆ ಅಥವಾ ಆ ಮುಖಕ್ಕೆ ಬದಲಾಗಿ ಬಳಸಿರುವ ಸ್ಥಾಪನೆಗಳು ಕವಿಕಾವ್ಯಾದಿಗಳ ವಿಚಾರವಿಲ್ಲದೆ ಬಹಳ ಚಿಕ್ಕವಾಗಿವೆ. 'ಏವಮಾರ್ಯಮಿಶ್ರಾನ್ ವಿಜ್ಞಾಪಯಾಮಿ! ಅಯೇ ಕಿನ್ನು ಖಲು ಮಯಿ ವಿಜ್ಞಾಪನವ್ಯಗ್ರೇ ಶಬ್ದ ಇವ ಶ್ರೂಯತೇ! ಅಂಗ! ಭವತು ಪಶ್ಯಾಮಿ!' ಎಂಬ ಮಾತು ಬಹಳ ಸ್ಥಾಪನೆಗಳಲ್ಲಿದೆ; "ಕಿಂ ವಕ್ಷ್ಯತೀತಿ ಹೃದಯಂ ಪರಿಶಂಕಿತಂ ಮೇ" ಈ ಮಾತು ಸ್ವಪ್ನವಾಸವದತ್ತ ಮತ್ತು ಅಭಿಷೇಕ ನಾಟಕಗಳಲ್ಲಿ ಬಂದಿದೆ; ಹದಿಮೂರು ನಾಟಕಗಳಲ್ಲಿಯೂ ಹೀಗೆ ಹಲವು ಸಮಾನವಾಕ್ಯಗಳು ದೊರೆಯುತ್ತವೆ. ಪಾತ್ರಗಳು ಪದ್ಯಗಳನ್ನು ಹಂಚಿಕೊಂಡು ಹೇಳುವುದುಂಟು. ಒಂದೇ ತರಹದ ಭರತ ವಾಕ್ಯಗಳಿವೆ†. ಬಳಸಿರುವ ಪ್ರಾಕೃತ, ಶೈಲಿ, ತಂತ್ರ, ಕಥಾಸಂವಿಧಾನ, ರಸಪರಿಪೋಷಣೆ, ವರ್ಣನೆ, ಅಲಂಕಾರಾದಿಗಳಲ್ಲಿ ಸಾದೃಶ್ಯವಿದ್ದು ಅವು ಏಕಕರ್ತೃತ್ವವನ್ನು ಎತ್ತಿ ತೋರಿಸುತ್ತವೆ. ಬಾಣನು (ಕ್ರಿ. ಶ. 7ನೆಯ ಶತಮಾನ) ತನ್ನ ಹರ್ಷಚರಿತದಲ್ಲಿ ಭಾಸನ ನಾಟಕಗಳನ್ನು ಕುರಿತು ಹೀಗೆ ಹೇಳಿದ್ದಾನೆ:—

ಸೂತ್ರಧಾರಕೃತಾರಂಭೈರ್ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥

ಗಣಪತಿಶಾಸ್ತ್ರಿಗಳಿಗೆ ದೊರೆತ ನಾಟಕಗಳಲ್ಲಿ ಈ ಎಲ್ಲಾ ಲಕ್ಷಣಗಳೂ ಸ್ಪಷ್ಟವಾಗಿವೆ. ಹೀಗೆ ತೆಗೆದುಕೊಂಡರೆ ಭಾಸಕರ್ತೃತ್ವ ಆಳವಾದ ಗ್ರಂಥೋಪಲಬ್ಧಿಯು ದೀರ್ಘಕಾಲವನ್ನು ತೆಗೆದುಕೊಂಡರೆ ಭಾಸಕರ್ತೃಕತ್ವ ಆಳವಾದ ಪರಿಶೀಲನೆಗೆ ಗುರಿಯಾಗಿದೆ.

ಈ ವಾದವನ್ನು ಹಲವು ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರು ಒಪ್ಪಿಕೊಂಡಿದ್ದಾರೆ; ಭಾಸಕರ್ತೃಕತ್ವವನ್ನು ವಿರೋಧಿಸುವವರೂ ಇಲ್ಲದಿಲ್ಲ. ಏಕೆಂದರೆ ಸದುಕ್ತಿಕರ್ಣಾಮೃತ ಶಾರ್ಙ್ಗಧರಪದ್ಧತಿ ಮುಂತಾದ ಸುಭಾಷಿತ ಗ್ರಂಥಗಳಲ್ಲಿ ಭಾಸನವೆಂದು ಸಂಗ್ರಹವಾಗಿರುವ ಪದ್ಯಗಳು ಈ ನಾಟಕಗಳಲ್ಲೆಲ್ಲೂ ದೊರೆಯುವುದಿಲ್ಲ; ರಂಗಪ್ರದರ್ಶನಕ್ಕಾಗಿ ಸಿದ್ಧಗೊಳಿಸಿದ ಕೆಲವು ತಮಿಳು ನಾಟಕಗಳೂ ಇವುಗಳಂತೆಯೇ ಇವೆ; ಅವುಗಳ ಮಾದರಿಯಲ್ಲಿ ಯಾರೋ

* ಸೂಚ್ಯಾರ್ಥಸೂಚನಂ ಮುದ್ರಾ ಪ್ರಕೃತಾರ್ಥಪರೈಃ ಪದೈಃ ।

† ಭವೇತ್ವರಜಸೋ ಗಾವಃ ಪರಚಕ್ರಂ ಪ್ರಶಾಮ್ಯತು ।
ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ ॥
—ಈ ರಾಜಸಿಂಹನು ಯಾರೋ ತಿಳಿಯದು.

ಈ ನಾಟಕಗಳನ್ನು ಪ್ರದರ್ಶನಕ್ಕಾಗಿ ರೂಪಿಸಿರಬೇಕು ; ಈ ರೂಪಕಗಳಿಗೆ ವಿಶೇಷಲಕ್ಷಣವಾ
ಹೇಳಿರುವ ನಾಂದಿಯ ನಂತರ ಸೂತ್ರಧಾರನ ಪ್ರವೇಶ ಮತ್ತುಸ್ಥಾಪನೆಗಳು ಮಹೇಂದ್ರವರ್ಮನ
'ಮತ್ತವಿಲಾಸಪ್ರಹಸನ', ಶಕ್ತಿಭದ್ರನ 'ಆಶ್ಚರ್ಯಚೂಡಾಮಣಿ'. ನೀಲಕಂಠ ಕವಿಯ
'ಕಲ್ಯಾಣಸೌಗಂಧಿಕ' ಮುಂತಾದ ರೂಪಕಗಳಲ್ಲಿಯೂ ಕಂಡುಬರುತ್ತವೆ ; ಭಾಷೆ, ಶೈಲಿ
ಮುಂತಾದುವು ಏಕಕರ್ತೃತ್ವ ನಿರ್ಣಯಕ್ಕೆ ಸಮರ್ಥ ಕಾರಣಗಳಲ್ಲ. ಅಭ್ಯಾಸಬಲದಿಂದ
ಅವುಗಳನ್ನು ಅನುಕರಿಸಲೂ ಸಾಧ್ಯವಿದೆ. ಹೀಗೆ ವಿರೋಧಿಸುವವರ ಪ್ರಬಲ ಆಕ್ಷೇಪಣೆಗ
ಸಮಾಧಾನವೂ ಇಲ್ಲದಿಲ್ಲ. ಅವನು ಬೇರೆ ಕಾವ್ಯಗಳನ್ನೂ ಬರೆದಿರಬಹುದು. ದೊರೆಯದಿರುವ
ಅವನ ಕೃತಿಗಳಲ್ಲಿ ಈ ಪದ್ಯಗಳಿರಬಹುದು.

ಈ ಕೃತಿಗಳು ಕೇರಳದಲ್ಲಿ ದೊರೆತಿರುವುದರಿಂದಲೂ, ಅವುಗಳಲ್ಲಿ ಆಮು, ಭೃಂಗಾರ,
ಸಂಬಂಧ ಮುಂತಾದ ದ್ರಾವಿಡ ಅರ್ಥವುಳ್ಳ ಶಬ್ದಗಳು ದೊರೆಯುವುದರಿಂದಲೂ, ತಮಿಳು
ನಾಟಕಗಳ ರಂಗಾಧಿದೇವತೆಯಾದ ಬಲರಾಮನಿಗೆ* ಪ್ರಾಶಸ್ತ್ಯವಿರುವುದರಿಂದಲೂ, ಇವುಗಳ
ಕರ್ತೃ ಕೇರಳದವನು ಅಥವಾ ದಕ್ಷಿಣದೇಶದವನಾದರೂ ಆಗಿರಬೇಕೆಂದು ಕೆಲವರು ಅಭಿಪ್ರಾಯ
ಪಡುತ್ತಾರೆ.

ಪ್ರಸ್ತಾವನೆಯಲ್ಲಿ ಕವಿಕಾವ್ಯ ವಿಚಾರ, ನಾಟಾದಿಗಳ ಪ್ರಶಂಸೆ ಇರಬೇಕೆಂಬ ನಿಯಮ
ವಿದ್ದರೂ ಭಾಸನು ತನ್ನ ಕೃತಿಗಳಲ್ಲಿ ಹೆಸರನ್ನೂ ತಿಳಿಸಿಲ್ಲ. ಭಾಸನು ಭರತನ ನಾಟ್ಯಶಾಸ್ತ್ರ
ಲಕ್ಷಣಗಳನ್ನು ಅಷ್ಟಾಗಿ ಪಾಲಿಸಿಲ್ಲ. ರಂಗದಲ್ಲಿ ಯುದ್ಧ, ವಧೆಗಳ ಪ್ರದರ್ಶನವನ್ನು
ನಿಷೇಧಿಸಿದ್ದರೂ ಊರುಭಂಗದಲ್ಲಿ ಭೀಮನ ಗದಾಪ್ರಹಾರಕ್ಕೆ ತುತ್ತಾದ ದುರ್ಯೋಧನನ
ಮರಣದೃಶ್ಯವಿದೆ. ಇವನ ನಾಟಕಗಳಲ್ಲಿ ಪಾಣಿನಿಯ ವ್ಯಾಕರಣ ನಿಯಮಗಳಿಗೆ
ಬದ್ಧವಾಗದ ಅನೇಕ ಪ್ರಯೋಗಗಳಿವೆ. ನಾಟ್ಯಶಾಸ್ತ್ರ ಮತ್ತು ಅಷ್ಟಾಧ್ಯಾಯಿಗಳ
ಪರಿಚಯವಿದ್ದಿದ್ದರೆ ಹೀಗಾಗುತ್ತಿರಲಿಲ್ಲ. ಆದ್ದರಿಂದ ಭಾಸನು ಭರತ (ಸು. ಕ್ರಿ. ಪೂ. 4ನೆಯ†
ಶತ.) ಮತ್ತು ಪಾಣಿನಿ (ಸು. ಕ್ರಿ. ಪೂ. 4ನೆಯ ಶತ.) ಗಳಿಗಿಂತ ಪ್ರಾಚೀನನಾಗಿರಬೇಕು.
ಕೌಟಿಲ್ಯನ (ಸು. ಕ್ರಿ. ಪೂ. 4ನೆಯ ಶತ.) ಅರ್ಥಶಾಸ್ತ್ರದಲ್ಲಿ ಬಂದಿರುವ ಒಂದು ಪದ್ಯದ†
ಪ್ರಕರಣವನ್ನು ಪರಿಶೀಲಿಸಿದರೆ ಅದನ್ನು ಬೇರೆ ಕಡೆಯಿಂದ ಉದಾಹರಣೆಗಾಗಿ ತೆಗೆದುಕೊಂಡಿರು
ವಂತೆ ಕಂಡುಬರುತ್ತದೆ. ಈ ಪದ್ಯ ಭಾಸನ ಪ್ರತಿಜ್ಞಾಯೌಗಂಧರಾಯಣದಲ್ಲಿದೆ. ವ್ಯಾಸ,
ವಾಲ್ಮೀಕಿ, ಭರತರನ್ನು ಕರೆಯುವಂತೆ ಇವನನ್ನು ಮುನಿಯೆಂದು‡ ಕರೆದಿರುವುದು ಇವನ

* ಸ್ವಪ್ನವಾಸವದತ್ತದ ನಾಂದೀಪದ್ಯದಲ್ಲಿ ಬಲರಾಮನ ಸ್ತೋತ್ರವಿದೆ.

† ನವಂ ಶರಾವಂ ಸಲಿಲೈಸ್ಸುಪೂರ್ಣಂ
ಸುಸಂಸ್ಕೃತಂ ದರ್ಭಕೃತೋತ್ತರೀಯಂ ।
ತತ್ತಸ್ಯ ಮಾ ಭೂನ್ನರಕಂ ಸ ಗಚ್ಛೇತ್
ಯೋ ಭರ್ತೃಪಿಂಡಸ್ಯ ಕೃತೇ ನ ಯುದ್ಧ್ಯೇತ್ ॥ —ಪ್ರತಿಜ್ಞಾಯೌಗಂಧರಾಯಣ

‡ ಜೋನರಾಜನು ಭಾಸನನ್ನು ಮುನಿಯೆಂದು ಕರೆದಿದ್ದಾನೆ. ಇದು ಭಾಸನ ಆದರ್ಶ ಜೀವನ
ಮತ್ತು ತಾತ್ವಿಕದೃಷ್ಟಿಗಳನ್ನು ಪ್ರಕಟಿಸುತ್ತದೆ.



ಪ್ರಾಚೀನತೆಗೆ ಪೋಷಕವಾಗಿದೆ. ಆರ್ಷಪ್ರಯೋಗಗಳೂ, ಸುಲಭವಾದ ಆಡುಭಾಷೆ,
ಸರಳ ಶೈಲಿ ಮುಂತಾದುವೂ ಇವನ ಪ್ರಾಚೀನತೆಯನ್ನೇ ಸಮರ್ಥಿಸುತ್ತವೆ. ಈ ಆಧಾರಗಳಿಂದ
ಗಣಪತಿಶಾಸ್ತ್ರಿಗಳು ಭಾಸನ ಕಾಲವನ್ನು ಸು. ಕ್ರಿ. ಪೂ. 5ನೆಯ ಅಥವಾ 6ನೆಯ ಶತಮಾನ
ವೆಂದು ಹೇಳಿದರು.

ಈ ವಾದವನ್ನು ಅನೇಕ ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರು ಒಪ್ಪುವುದಿಲ್ಲ. ಪಾಣಿನಿಯ ವ್ಯಾಕರಣಸೂತ್ರಗಳಿಗೆ ವಿರುದ್ಧವಾದ ಪ್ರಯೋಗಗಳು ಕಾಳಿದಾಸನೇ ಮೊದಲಾದವರ ಕೃತಿಗಳಲ್ಲೂ ಇವೆ. ಭರತಮುನಿಯ ನಾಟ್ಯಶಾಸ್ತ್ರದ ನಿಯಮಗಳನ್ನು ಉದ್ದೇಶಪೂರ್ವಕವಾಗಿ ಅನುಸರಿಸದೆಯೋ, ಬೇರೆ ಯಾವ ನಿಯಮವನ್ನಾದರೂ ಅನುಸರಿಸಿಯೋ, ತನ್ನದೇ ಆದ ನಿಯಮದಂತೆಯೋ ಭಾಸನು ನಾಟಕಗಳನ್ನು ಬರೆದಿರಬಹುದು. ರಸೈಕದೃಷ್ಟಿಯುಳ್ಳ ಕವಿಗೆ ನಿಯಮಪರಿಪಾಲನೆ ಗೌಣ. ಭಾಸ, ಕೌಟಿಲ್ಯರಿಬ್ಬರೂ ಬೇರೆ ಮೂಲದಿಂದ ಪದ್ಯವನ್ನು ತೆಗೆದುಕೊಂಡಿರಬಹುದು. ಈ ಕಾರಣಗಳು ಭಾಸನ ಕಾಲನಿರ್ಣಯಕ್ಕೆ ಉತ್ತಮ ಕಾರಣಗಳಲ್ಲ. ಈ ಮುಂತಾದ ವಿಚಾರಗಳಿಂದ ಭಾಸನ ಕಾಲವನ್ನು ಕ್ರಿ. ಪೂ. 5ನೆಯ ಶತಮಾನದಿಂದ ಹಿಡಿದು ಕ್ರಿ. ಶ. 11ನೆಯ ಶತಮಾನದವರಗೆ ಎಳೆದಾಡಲಾಗಿದೆ. ಶಾರದಾತನಯ (ಕ್ರಿ. ಶ. 12ನೆಯ ಶತ,). ಭೋಜದೇವ (ಕ್ರಿ. ಶ. 11ನೆಯ ಶತ.), ಅಭಿನವಗುಪ್ತಾಚಾರ್ಯ (ಕ್ರಿ.ಶ. 10ನೆಯ ಶತ.), ರಾಜಶೇಖರ (ಸು. ಕ್ರಿ. ಶ. 10ನೆಯ ಶತ.), ವಾಮನ (ಕ್ರಿ. ಶ. 8ನೆಯ ಶತ.), ಬಾಣ (ಕ್ರಿ. ಶ. 7ನೆಯ ಶತ.), ಭಾಮಹ (ಕ್ರಿ.ಶ. 6ನೆಯ ಶತ.) ಮೊದಲಾದವರ ಕೃತಿಗಳಲ್ಲಿ ಭಾಸನ ಒಂದಲ್ಲೊಂದು ರೀತಿಯ ಪ್ರಸ್ತಾಪವಿದೆ. ಕಾಳಿದಾಸನ ಮಾಲವಿಕಾಗ್ನಿಮಿತ್ರದಲ್ಲಿ 'ಪ್ರಥಿತಯಶಸಾಂ ಭಾಸಸೌಮಿಲ್ಲಕಪುತ್ರಾದೀನಾಂ ಪ್ರಬಂಧಾನತಿಕ್ರಮ್ಯ ವರ್ತಮಾನಕವೇಃ ಕಾಲಿದಾಸಸ್ಯ ಕ್ರಿಯಾಯಾಂ ಕಥಂ ಬಹುಮಾನಃ ಎಂಬ ಉಲ್ಲೇಖವಿದೆ. ಕಾಳಿದಾಸನ ಕಾಲ ನಿರ್ಣಯವಾಗದಿದ್ದರೂ ಅವನನ್ನು ಸದ್ಯಕ್ಕೆ ಕ್ರಿ. ಶ. 4ನೆಯ ಅಥವಾ 5ನೆಯ ಶತಮಾನದವನೆಂದು ಭಾವಿಸಲಾಗಿದೆ. ಭಾಸನ ಶೈಲಿ ಮತ್ತು ಪ್ರಾಕೃತಗಳು ಕಾಳಿದಾಸನವುಗಳಿಗಿಂತ ಪುರಾತನವಾಗಿವೆ. ಆದ್ದರಿಂದ ವಿಂಟರ್ ನಿಟ್ಸ್‌ರವರು ಭಾಸನ ಕಾಲ ಸು. ಕ್ರಿ. ಶ. 4 ಅಥವಾ 5ನೆಯ ಶತಮಾನವೆಂದು ಅಭಿಪ್ರಾಯಪಡುತ್ತಾರೆ. ಭಾಸನ ರೂಪಕಗಳ ಪ್ರಾಕೃತ ಅಶ್ವಘೋಷ ಮತ್ತು ಕಾಳಿದಾಸರ ಮಧ್ಯಕಾಲದ್ದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಭಾಸನ ಕಾಲ ಸು. ಕ್ರಿ. ಶ. ಮೂರನೆಯ ಶತಮಾನವೆಂದು ಬಹಳ ಮಂದಿ ವಿದ್ವಾಂಸರ ಅಭಿಪ್ರಾಯ. ಹೀಗೆ ಭಾಸನ ಕೃತಿ, ಕಾಲ, ದೇಶಾದಿಗಳೆಲ್ಲ ವಿವಾದಗ್ರಸ್ತವಾಗಿಯೇ ಉಳಿದಿವೆ.

ವಸ್ತುದೃಷ್ಟಿಯಿಂದ ಈ ನಾಟಕಗಳನ್ನು ನಾಲ್ಕು ಗುಂಪಾಗಿ ವಿಂಗಡಿಸಬಹುದು :—

1. ಬೃಹತ್ಕಥೆಯ ಆಧಾರದ ಮೇಲೆ ರಚಿತವಾದವು—ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ಅವಿಮಾರಕ, ಚಾರುದತ್ತ, ಅವಿಮಾರಕ, ಚಾರುದತ್ತಗಳಿಗೆ ಪ್ರಚಾರದಲ್ಲಿದ್ದ ಜನಕಥೆಗಳೂ ಮೂಲವಾಗಿದ್ದಿರಬಹುದು.
2. ರಾಮಾಯಣದ ಆಧಾರದ ಮೇಲೆ ಬರೆದುವು—ಅಭಿಷೇಕನಾಟಕ, ಪ್ರತಿಮಾನಾಟಕ

3. ಭಾಗವತದ ಆಧಾರದ ಮೇಲೆ ರಚಿಸಿದುದು —ಬಾಲಚರಿತ.

4. ಭಾರತದ ಆಧಾರದ ಮೇಲೆ ರಚಿಸಿದುವು—ಪಂಚರಾತ್ರ, ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ, ಊರುಭಂಗ.

ಕಾಥಿಯವಾಡ ಸಂಸ್ಥಾನದ ಗೋಂಡಲವೆಂಬ ಗ್ರಾಮದ ನಿವಾಸಿಗಳಾದ ಜೀವರಾಮ ಕಾಲಿದಾಸ ಶಾಸ್ತ್ರಿಗಳು 1941ರಲ್ಲಿ ಎರಡು ಹಸ್ತಪ್ರತಿಗಳ ಆಧಾರದ ಮೇಲೆ 'ಯಜ್ಞಫಲ' ವೆಂಬ ನಾಟಕವನ್ನು ಸಂಪಾದಿಸಿ ಪ್ರಕಟಿಸಿದರು. ಇದಕ್ಕೂ ಸ್ವಪ್ನವಾಸವದತ್ತ ಮುಂತಾದ ನಾಟಕಗಳಿಗೂ ನಾಂದೀ, ಸ್ಥಾಪನೆ ಮುಂತಾದ ಅಂಶಗಳಲ್ಲಿ ಸಾದೃಶ್ಯವಿದೆ ; ಇದು ಪ್ರತಿಮಾ ನಾಟಕದ ಪೂರ್ವವರ್ತಿಯಾಗಿ ತೋರುತ್ತದೆ. ಆದ್ದರಿಂದ ಇದನ್ನೂ ಭಾಸನಾಟಕವೆಂದು ಅಂಗೀಕರಿಸಲಾಗಿದೆ.

ನಾಟಕರಚನೆಯಲ್ಲಿ ಸಿದ್ಧಿ ಪಡೆದ ಮಹಾಕವಿಯಾದ ಇವನ ಹೃದಯ ವಿಶಾಲವಾದುದು ; ದೃಷ್ಟಿ ತಾತ್ವಿಕವಾದುದು. ಇವನು ದೋಷಾನ್ವೇಷಿಯಲ್ಲ ; ಗುಣಪಕ್ಷಪಾತಿ. ದೋಷಗಳಿಗೆ ಭೂತಕನ್ನಡಿ ಹಿಡಿದು ವ್ಯಕ್ತಿಯನ್ನು ಕೀಳುಗೈದು ದಮನ ಮಾಡುವುದಕ್ಕಿಂತಲೂ, ಗುಣಗಳನ್ನು ಪ್ರಕಟಿಸಿ ತಿದ್ದುವುದು ಇವನ ಪ್ರಕೃತಿ. ಧರ್ಮದ್ರೋಹಿಗಳೆಂದೂ, ಪಾತಕಿಗಳೆಂದೂ ಎಲ್ಲರೂ ತೆಗಳಿರುವ ದುರ್ಯೋಧನ, ಕರ್ಣ, ಘಟೋತ್ಕಚ, ರಾವಣ ಮುಂತಾದವರ ವಿಚಾರದಲ್ಲಿಯೂ ಕವಿಯು ಕರುಣಾದ್ರ್ರಹೃದಯಿಯಾಗಿದ್ದಾನೆ ; ತನ್ನ ಮನೋಭಾವ ಮತ್ತು ರಸಪೋಷಣೆಗಳಿಗೆ ಪುರಾಣಪ್ರಸಿದ್ಧ ಕಥೆಗಳನ್ನು ಮಾರ್ಪಡಿಸಿಕೊಂಡಿದ್ದಾನೆ. ದುರ್ಯೋಧನಾದಿಗಳ ವಿಷಯದಲ್ಲಿ ಪ್ರೇಕ್ಷಕರಿಗೆ ತಾತ್ಸಾರತಿರಸ್ಕಾರಗಳಿಗೆ ಬದಲಾಗಿ ಸಹಾನುಭೂತಿಯುಂಟಾಗುತ್ತದೆ. ಕ್ಷತ್ರಿಯ ರಾಗಲೀ, ರಾಕ್ಷಸರಾಗಲೀ ಯಾರಾದರೇನು ? ಎಲ್ಲರೂ ಅನುಕಂಪಕ್ಕೆ ಪಾತ್ರರೇ. ಭೀಮನು ಹಿಡಿಂಬಾದೇವಿಯನ್ನು ಕುರಿತು 'ಜಾತ್ಯಾ ತು ರಾಕ್ಷಸೀ, ನ ಸಮುದಾಚಾರೇಣ' ಎಂದೂ, ಘಟೋತ್ಕಚನು ದುರ್ಯೋಧನನನ್ನು ಕುರಿತು 'ವಿಕೃತವಪುಷೋಪ್ಯಗ್ರ್ಯಾಚಾರಾ ಘೃಣಾನ ತು ವರ್ಜಿತಾ' ಎಂದೂ ಹೇಳಿರುವ ಮಾತುಗಳು ಹೃದಯಸ್ಪರ್ಶಿಯಾಗಿವೆ. ಯೌಗಂಧರಾಯಣನ ಮೂಲಕ ಅಸೀಮ ದೇಶಪ್ರೇಮವನ್ನೂ, ಪ್ರಭುನಿಷ್ಠೆಯನ್ನೂ, ಆತ್ಮಾಭಿಮಾನವನ್ನೂ ಕವಿಯು ಚಿತ್ರಿಸಿದ್ದಾನೆ. ಚಾರುದತ್ತದಲ್ಲಿ ವೇಶ್ಯೆಯು ಅಂತಸ್ತು ಕುಲವಧುವಿನ ಮಟ್ಟಕ್ಕೆ ಏರಿದೆ. ಕಾವ್ಯಕ್ಕೆ ಆನಂದದಂತೆ ಆದರ್ಶವೂ ಪ್ರಧಾನ ಫಲವೇ. ಸುಖಶಾಂತಿಗಳನ್ನು ಪಡೆಯಲು ಯೋಗ್ಯವಾದ ಆದರ್ಶಜೀವನವನ್ನು ಕವಿಯು ತನ್ನ ನಾಟಕಗಳಲ್ಲಿ ನಿರೂಪಿಸಿದ್ದಾನೆ. ಈ ನಾಟಕಗಳ ದೃಶ್ಯರಮಣೀಯತೆ ಅದ್ವಿತೀಯವಾದುದು ; ಶ್ರವ್ಯರಮಣೀಯತೆಗೂ ಕೊರತೆ ಯಿಲ್ಲ. ದುರ್ಯೋಧನನ ಮರಣದಲ್ಲಿ ಮುಗಿಯುವ 'ಊರುಭಂಗ' ವು ಸಂಸ್ಕೃತಸಾಹಿತ್ಯ ದಲ್ಲಿಯೇ ವಿಶಿಷ್ಟಪ್ರಕಾರದ್ದು ; ದುಃಖಾಂತನಾಟಕಕ್ಕೆ ಇದೊಂದೇ ಇರುವ ಉದಾಹರಣೆ. 'ದೂತವಾಕ್ಯ' ಸ್ತ್ರೀಪಾತ್ರಗಳೇ ಇಲ್ಲದ ನಾಟಕ. ಆಕರ್ಷಕ ಘಟನೆಗಳನ್ನು ಆಯ್ದುಕೊಂಡು ಅಗತ್ಯ ಬದಲಾವಣೆಯನ್ನು ಮಾಡಿಕೊಂಡು ರಚಿಸಿರುವ ಇವನ ಏಕಾಂಕ ನಾಟಕಗಳು ರಸದ ಬುಗ್ಗೆಗಳಂತಿವೆ. ಪ್ರೇಕ್ಷಕರ ಹೃದಯದಲ್ಲಿ ಮಾಸದೆ ಚಿರಕಾಲ ನಿಲ್ಲುವಂತೆ ಪಾತ್ರಗಳನ್ನು



ಚಿತ್ರಿಸಲಾಗಿದೆ. 'ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ' ಮುಂತಾದ ಇವನ ಅನುಭವದ ಮಾತುಗಳಂತೂ ಅನವರತ ಮೆಲುಕುಹಾಕಲು ಯೋಗ್ಯವಾಗಿವೆ. ಉದಯನನ ಸ್ವಪ್ನ, ಭರತನ ಪ್ರತಿಮಾಗೃಹಪ್ರವೇಶ ಮುಂತಾದ ಕಲ್ಪನೆಗಳು ಅವನ ಅನುಪಮ ಪ್ರತಿಭೆಗೆ ಸಾಕ್ಷಿಗಳು. ಶೂದ್ರಕ, ಭವಭೂತಿ, ಭಟ್ಟನಾರಾಯಣ, ಶ್ರೀಹರ್ಷ ಮುಂತಾದ ಕವಿಗಳು ಭಾಸನಿಂದ ಉಪಕೃತರು. ಕನ್ನಡ ಮಹಾಕವಿಗಳಾದ ಪಂಪ, ರನ್ನರೂ ಅವನಿಗೆ ಋಣಿಗಳೇ. ಭಾಸ ಕವಿತಾಕಾಮಿನಿಯ ಹಾಸ.

ಸ್ಥಾಲೀಪುಲಾಕನ್ಯಾಯದಿಂದ ಭಾಸನ ಹದಿನಾಲ್ಕು ನಾಟಕಗಳ ಕಿರುಪರಿಚಯವನ್ನು ಇಲ್ಲಿ ಕೊಡಲಾಗಿದೆ.

ಪ್ರತಿಜ್ಞಾಯೌಗಂಧರಾಯಣ :—

ಇದರಲ್ಲಿ ನಾಲ್ಕು ಅಂಕಗಳಿವೆ. ಮೊದಲನೆಯ ಅಂಕದಲ್ಲಿ ಮಹಾಸೇನನ ಯೋಧರು ಕೃತ್ರಿಮಗಜದ ಮೂಲಕ ಅಪ್ರತಿಮವೀರನಾದ ಉದಯನನ್ನು ಬಂಧಿಸುವರು ; ತಾಯಿ ಶೋಕಿಸುವಳು ; ಮಂತ್ರಿ ಯೌಗಂಧರಾಯಣ ದೊರೆಯನ್ನು ಬಿಡಿಸಿ ತರುವುದಾಗಿ ಪ್ರತಿಜ್ಞೆ ಮಾಡುವನು. ಎರಡನೆಯ ಅಂಕದಲ್ಲಿ ವತ್ಸರಾಜನ ಬಂಧನವನ್ನು ಕೇಳಿ ಮಹಾಸೇನನಿಗೆ ಆಶ್ಚರ್ಯವಾಗುತ್ತದೆ ; ಅವನು ವತ್ಸರಾಜನ ಯೋಗಕ್ಷೇಮದಲ್ಲಿ ಬಹಳ ಆಸಕ್ತಿಯನ್ನು ತಾಳುತ್ತಾನೆ. ಮೂರನೆಯ ಅಂಕದಲ್ಲಿ ರಾಜನ ಬಿಡುಗಡೆಗಾಗಿ ಯೌಗಂಧರಾಯಣ ಹುಚ್ಚನ ವೇಷದಲ್ಲಿ ಉಜ್ಜಯಿನಿಯನ್ನು ಪ್ರವೇಶಿಸುತ್ತಾನೆ ; ಮಹಾಸೇನನ ಪುತ್ರಿಯಾದ ವಾಸವದತ್ತೆ ಯಲ್ಲಿ ವತ್ಸರಾಜನು ಅನುರಕ್ತನಾಗಿರವುದನ್ನು ತಿಳಿದು ಇಬ್ಬರನ್ನೂ ಅಪಹರಿಸುವ ಪ್ರತಿಜ್ಞೆ ಮಾಡುತ್ತಾನೆ. ನಾಲ್ಕನೆಯ ಅಂಕದಲ್ಲಿ ವತ್ಸರಾಜವಾಸವದತ್ತೆಯರು ಯೌಗಂಧರಾಯಣನ ತಂತ್ರದಂತೆ ತಪ್ಪಿಸಿಕೊಂಡು ಕೌಶಾಂಬಿಗೆ ಹೋಗುತ್ತಾರೆ ; ಬೆನ್ನುಹತ್ತಿದ ಶತ್ರುಸೈನ್ಯವನ್ನು ಸಾಹಸಿ ಯೌಗಂಧರಾಯಣ ತಡೆಗಟ್ಟುತ್ತಾನೆ ; ವಾಸವದತ್ತೆಯ ತಾಯಿ ಅಂಗಾರವತಿಯು ಮುದ್ದುಮಗಳಿಗಾಗಿ ದುಃಖಿಸುತ್ತಾಳೆ ; ಗಾಂಧರ್ವವಿಧಿಯಿಂದ ಮದುವೆಯಾಗಿರುವುದೆಂದೂ, ಅವರ ಚಿತ್ರಪಟಗಳಿಗೇ ಮದುವೆ ಮಾಡೋಣವೆಂದೂ ರಾಜನು ಅವಳನ್ನು ಸಮಾಧಾನ ಪಡಿಸುತ್ತಾನೆ.

ಬೃಹತ್ಕಥೆ ಈಗ ಉಪಲಬ್ಧವಿಲ್ಲ. ಇದರ ವಸ್ತು ಸೋಮದೇವನ ಕಥಾಸರಿತ್ಸಾಗರ, ಕ್ಷೇಮೇಂದ್ರನ ಬೃಹತ್ಕಥಾಮಂಜರಿ ಮುಂತಾದ ಕೃತಿಗಳಲ್ಲಿ ದೊರೆಯುತ್ತದೆ. ಯಾವ ಮೂಲ ದಿಂದ ಕವಿಯು ಕಥೆಯನ್ನು ತೆಗೆದುಕೊಂಡಿದ್ದಾನೋ ಹೇಳುವುದು ಕಷ್ಟ. ಉದಯನ ಚರಿತ್ರ ವ್ಯಕ್ತಿಯೆಂದೂ, ಗೌತಮಬುದ್ಧನ ಸಮಕಾಲೀನನೆಂದೂ ಕೆಲವರು ಹೇಳುತ್ತಾರೆ. ಆಧಾರ ಯಾವುದಾದರೂ ಆಗಿರಲಿ ಈ ಕಥೆ ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ಗಳೆರಡರಲ್ಲಿಯೂ ಇದೆ. ಇವೆರಡೂ ಸೇರಿ ಹತ್ತು ಅಂಕಗಳ ಒಂದೇ ಪ್ರಕರಣವಾಗಿದ್ದು ನಂತರ ಪ್ರದರ್ಶನಸೌಕರ್ಯಕ್ಕಾಗಿ ಎರಡು ನಾಟಕಗಳನ್ನಾಗಿ ಮಾಡಿಕೊಂಡಿರಬೇಕೆಂಬ ಅಭಿಪ್ರಾಯವೂ ಇದೆ. ಈ ನಾಟಕದಲ್ಲಿರುವುದು ಉದಯನನ ಕಥೆಯಾದರೂ ಯೌಗಂಧರಾಯಣನ

ಪ್ರತಿಜ್ಞೆ, ತಂತ್ರ, ಸಾಹಸಾದಿಗಳೇ ಪ್ರಧಾನವಾಗಿವೆ ; ಆದ್ದರಿಂದಲೇ ಪ್ರತಿಜ್ಞಾಯೌಗಂಧರಾಯಣ ವೆಂಬ ಶೀರ್ಷಿಕೆ ಕೊಡಲಾಗಿದೆ. ವತ್ಸರಾಜನು ಕೃತ್ರಿಮಗಜಕ್ಕೆ ಮೋಸಹೋಗುವಷ್ಟು ದಡ್ಡನೇ ? ಮಹಾಸೇನ ಪರಮಶತ್ರುವಾದ ಅವನನ್ನು ಕೊಲ್ಲದೆ ಬಿಟ್ಟನೆ ? ಎಂದು ಪ್ರಶ್ನಿಸಿ ಭಾಮಹನು ಈ ವಸ್ತುವನ್ನು 'ನ್ಯಾಯವಿರುದ್ಧ' ವೆಂದು ಖಂಡಿಸಿದ್ದಾನೆ. ಆದರೆ ಕಾವ್ಯಕ್ಕೆ ಬೇಕಾದುದು ರಸ ; ನ್ಯಾಯವಲ್ಲ.

ಈ ನಾಟಕದಲ್ಲಿ ದಕ್ಷನೂ, ಅಭಿಮಾನಿಯೂ ಆದ ಯೌಗಂಧರಾಯಣನ ಪಾತ್ರ ಉಜ್ವಲವಾಗಿ ಚಿತ್ರಿತವಾಗಿದೆ. ತಾನು ಎಷ್ಟೇ ಎಚ್ಚರಿಕೆ ವಹಿಸಿದ್ದರೂ ವಿಧಿವಶದಿಂದ ದೊರೆಯು ಬಂಧನಕ್ಕೊಳಗಾದುದನ್ನು ತಿಳಿದು ಅವನು ತಳಮಳಗೊಳ್ಳುತ್ತಾನೆ. ಪ್ರಭುನಿಷ್ಠೆಯಷ್ಟೇ ಅವನ ದೇಶಪ್ರೇಮವೂ ಅಪಾರ. ವತ್ಸರಾಜನನ್ನು ಹೊಡೆಯಲು ಬಂದು ಯೋಧನು ಭೂಮಿಯಲ್ಲಿ ಜಾರಿ ಬಿದ್ದುದನ್ನು ಕೇಳಿದಾಗ ಅವನು ಹೇಳಿದ ಮಾತಿದು—

ಪರಚಕ್ರೈರನಾಕ್ರಾಂತಾ ಧರ್ಮಸಂಕರವರ್ಜಿತಾ ।
ಭೂಮಿರ್ಭರ್ತಾರಮಾಪನ್ನಂ ರಕ್ಷಿತಾ ಪರಿರಕ್ಷತಿ ॥

ದುಃಖಿತಳಾಗಿದ್ದ ರಾಜಮಾತೆಯನ್ನು ಸಮಾಧಾನಗೊಳಿಸಿ, ದೊರೆಯನ್ನು ಬಿಡಿಸುವುದಾಗಿ ಪ್ರತಿಜ್ಞೆ ಮಾಡಿ, ಹುಚ್ಚನ ವೇಷ ಧರಿಸಿ ಉಜ್ಜಯಿನಿಗೆ ಹೋಗುತ್ತಾನೆ. ಯತ್ನಕ್ಕೆ ತಕ್ಕ ಫಲ ದೊರೆಯುತ್ತದೆಂಬ ನಂಬಿಕೆ ಅವನಿಗುಂಟು—

ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾ-
ದ್ಭೂಮಿಸ್ತೋಯಂ ಖನ್ಯಮಾನಾ ದದಾತಿ ।
ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ
ಮಾರ್ಗಾರಬ್ಧಾಃ ಸರ್ವಯತ್ನಾಃ ಫಲಂತಿ ॥

ಮೂರನೆಯ ಅಂಕದಲ್ಲಿ ಯೌಗಂಧರಾಯಣನ ಗೂಢಚಾರಜಾಲ ಮತ್ತು ತಂತ್ರಗಳನ್ನು ನೋಡುತ್ತೇವೆ. ಕೌಶಾಂಬಿಯ ವೀರರೆಲ್ಲಾ ಉಜ್ಜಯಿನಿಯಲ್ಲಿ ನಾನಾವ್ಯಾಜಗಳಿಂದ, ನಾನಾ ಉದ್ಯೋಗಗಳಲ್ಲಿರುತ್ತಾರೆ. ಉಜ್ಜಯಿನಿಯು ಕೌಶಾಂಬಿಯೇ ಆಗಿರುವಂತೆ ತೋರುತ್ತದೆ. ಮಂತ್ರಿಗೆ ದೊರೆಯ ಬಿಡುಗಡೆಯ ಚಿಂತೆ ; ದೊರೆಗೆ ವಾಸವದತ್ತೆಯ ಅನುರಾಗದ ಚಿಂತೆ. ಗತ್ಯಂತರವಿಲ್ಲದೆ ಅವನು ಮತ್ತೊಂದು ಮಹಾಪ್ರತಿಜ್ಞೆ ಮಾಡುತ್ತಾನೆ :—

ಯದಿ ತಾಂ ಚೈವ ತಂ ಚೈವ ತಾಂ ಚೈವಾಯತಲೋಚನಾಂ ।
ನಾಹರಾಮಿ ನೃಪಂ ಚೈವ ನಾಸ್ಮಿ ಯೌಗಂಧರಾಯಣ ॥

ಇವನ ಯೋಜನೆಯಂತೆ ವತ್ಸರಾಜ-ವಾಸವದತ್ತೆಯರು ಬಂಧನದಿಂದ ಪಾರಾಗಿ ಕೌಶಾಂಬಿಗೆ ಹೋಗುತ್ತಾರೆ. ರಿಪುಸೈನ್ಯ ಹಿಂಬಾಲಿಸುತ್ತದೆ. ವೇಷಾಂತರದಲ್ಲಿದ್ದ ತನ್ನವರಿಗೆ ಭರ್ತೃಋಣ



ಮುಕ್ತರಾಗಲು ಕರೆಕೊಟ್ಟು ಯೌಗಂಧರಾಯಣ ಹೋರಾಡುತ್ತಾ ಶತ್ರುವಶನಾಗುತ್ತಾನೆ. ತನ್ನನ್ನು ನೋಡಲು ಸೇರಿದ್ದವರನ್ನು ಕುರಿತು ಅವನು ಹೇಳಿದ ಮಾತು ಇಂದಿಗೂ ವಿಚಾರಾರ್ಹ—

ಪಶ್ಯಂತು ಮಾಂ ನರಪತೇಃ ಪುರುಷಾಃ ಸಸತ್ವಾಃ
ರಾಜಾನುರಾಗನಿಯಮೇನ ವಿಪದ್ಯಮಾನಂ ।
ಯೇ ಪ್ರಾರ್ಥಯಂತಿ ಚ ಮನೋಭಿರಮಾತ್ಯಶಬ್ದಂ
ತೇಷಾಂ ಸ್ಥಿರೀಭವತು ನಶ್ಯತು ವಾಭಿಲಾಷಃ ॥

ಕರ್ತವ್ಯನಿರ್ವಹಣೆಯಿಂದ ಅವನ ಮನಸ್ಸಿಗೆ ಸಂತೃಪ್ತಿ ಲಭಿಸಿದೆ ; ಈಗ ಅವನಿಗೆ ಬಂಧನವೂ ಸನ್ಮಾನವೇ.

ಈ ನಾಟಕದಲ್ಲಿ ಎರಡನೆಯ ಅಂಕ ಶ್ರೇಷ್ಠವಾದುದು. ಸಮ್ರಾಟನಾದರೂ ಮಹಾಸೇನನಿಗೆ ಮಗಳ ಮದುವೆಯ ಚಿಂತೆ. ಗುಣಗಳಿಂದ ಮೆಚ್ಚುಗೆಯಾಗಿದ್ದ ವತ್ಸರಾಜ ಕಡುವೈರಿ. ತಾಯಿಗೆ ಮಗಳ ಮದುವೆಯಾದರೂ ವ್ಯಥೆ ; ಆಗದಿದ್ದರೂ ವ್ಯಥೆ, 'ಧರ್ಮಸ್ನೇಹಾಂತರೇ ನ್ಯಸ್ತಾ ದುಃಖಿತಾಃ ಖಲು ಮಾತರಃ'. ರಾಣಿಯೊಡನೆ ಮಗಳ ವಿವಾಹವನ್ನು ಪ್ರಸ್ತಾಪಿಸುತ್ತಿದ್ದ ಸಮಯಕ್ಕೆ ಸರಿಯಾಗಿ ವತ್ಸರಾಜನ ಬಂಧನದ ವಾರ್ತೆ ಬರುತ್ತದೆ. ಉದಯನನ ಬಂಧನವನ್ನು ನಂಬಲಾರ. ಈ ಸಂದರ್ಭದಲ್ಲಿ ಬರುವ ದೊರೆ ಮತ್ತು ಕಾಂಚುಕೀಯರ ಸಂವಾದ ಹೃದಯದ ಭಾವವೇಗಚಿತ್ರಣಕ್ಕೆ ಒಂದು ಉತ್ತಮ ನಿದರ್ಶನ. ರಾಜಾಜ್ಞೆಯಂತೆ ವತ್ಸರಾಜನ ಉಪಚಾರಕ್ಕೆ ಸುವ್ಯವಸ್ಥೆಯೂ ಆಗುತ್ತದೆ. ದೊರೆಯ ಹೃದಯ ರಾಜಕುಮಾರಿಯ ಮದುವೆಯನ್ನು ನಿಷ್ಕರ್ಷಿಸುತ್ತದೆ. ರಾಣಿಯು 'ಅಲಮಿದಾನೀಂ ತ್ವರಿತ್ವಾ । ಬಾಲಾ ಮೇ ದಾರಿಕಾ ।' ಎಂದು ಹೇಳಿ ಅಂತಃಪುರಕ್ಕೆ ಹೋಗುತ್ತಾಳೆ. ಅವಳ ಮಾತೂ ಮಗಳ ಭವಿಷ್ಯಕ್ಕೆ ಸೂಚಕವಾಗಿದೆ. ಮೂರನೆಯ ಅಂಕದಲ್ಲಿ ವಿದೂಷಕನ ಮಾತುಗಳಿಂದಲೂ, ನಾಲ್ಕನೆಯ ಅಂಕದಲ್ಲಿ ಕುಡಿದವನಂತೆ ಪ್ರಲಪಿಸುವ ಗಾತ್ರಸೇವಕನ ಮಾತುಗಳಿಂದಲೂ ಸುಂದರವಾಗಿ ತಿಳಿಹಾಸ್ಯ ಚೆಲ್ಲುತ್ತದೆ.

## ಸ್ವಪ್ನವಾಸವದತ್ತ :—

ಇದರಲ್ಲಿ ಆರು ಅಂಕಗಳಿವೆ. ಮೊದಲನೆಯ ಅಂಕದಲ್ಲಿ ಯೌಗಂಧರಾಯಣನು ಪದ್ಮಾವತಿಯ ವಿವಾಹದ ಮೂಲಕ ಉದಯನನ ಶ್ರೇಯಸ್ಸನ್ನು ಸಂಪಾದಿಸಲು ವಾಸವದತ್ತೆಯ ಅನುಮತಿಯನ್ನು ಪಡೆದು ಅವಳನ್ನು ಮಗಧರಾಜಪುತ್ರಿಯಾದ ಪದ್ಮಾವತಿಯಲ್ಲಿ ನ್ಯಾಸವಾಗಿ ಇಡುತ್ತಾನೆ. ಪೂರ್ವಯೋಜನೆಯಂತೆ ವಾಸವದತ್ತೆ ಅಗ್ನಿದಗ್ಧಳಾದಳೆಂಬ ವಾರ್ತೆ ಹರಡುತ್ತದೆ. ಎರಡನೆಯ ಅಂಕದಲ್ಲಿ ಉದಯನ ಮತ್ತು ಪದ್ಮಾವತಿಯರ ವಿವಾಹ ನಿಷ್ಕರ್ಷೆಯಾಗುತ್ತದೆ. ಮೂರನೆಯ ಅಂಕದಲ್ಲಿ ವಾಸವದತ್ತೆ ಕೌತುಕಮಾಲಿಕೆಯನ್ನು ಕಟ್ಟುತ್ತಾಳೆ. ನಾಲ್ಕನೆಯ ಅಂಕದಲ್ಲಿ ನವತರುಣಿಯ ಕೈಹಿಡಿದಿದ್ದರೂ, ವಾಸವದತ್ತೆಯನ್ನು ಮರೆಯಲಾರದ ಉದಯನನ ಚಿತ್ರಣವಿದೆ ಐದನೆಯ ಅಂಕದಲ್ಲಿ ಪದ್ಮಾವತಿಯು ಶೀರ್ಷವೇದನೆಯಿಂದ ಪೀಡಿತಳಾಗುತ್ತಾಳೆ. ಸಮುದ್ರಗೃಹದಲ್ಲಿ ಅವಳನ್ನು ಕಾಣಲು ಬಂದು ಅವಳಿಲ್ಲದಿದ್ದುದರಿಂದ ಉದಯನ ಅಲ್ಲಿಯೇ

ನಿದ್ರಿಸಿ ವಾಸವದತ್ತೆಯನ್ನು ಕನವರಿಸುತ್ತಾನೆ. ಪದ್ಮಾವತಿಯು ಉಪಚಾರಕ್ಕಾಗಿ ಬಂದಿದ್ದ ಅವಂತಿಕಾ ವೇಷದ ವಾಸವದತ್ತೆಯು ಅವನ ಸ್ವಪ್ನವಚನವನ್ನು ಕೇಳಿಸಿಕೊಂಡು ತನ್ನ ಪರಿಶ್ರಮ ಫಲಿಸಿತೆಂದು ಭಾವಿಸುತ್ತಾಳೆ. ಆರನೆಯ ಅಂಕದಲ್ಲಿ ಬ್ರಾಹ್ಮಣವೇಷದ ಯೌಗಂಧರಾಯಣನು ಬರುತ್ತಾನೆ. ರಹಸ್ಯ ಬಯಲಾಗುತ್ತದೆ. ಎಲ್ಲರೂ ಒಟ್ಟುಗೂಡಿ ಕೌಶಾಂಬಿಗೆ ಹೋಗುತ್ತಾರೆ.

ಕಥೆ ಬಹಳ ಚಿಕ್ಕದು ! ಆಶ್ರಮ, ಅಂತಃಪುರ ; ಪ್ರಮದವನ, ಸಮುದ್ರಗೃಹಗಳಲ್ಲಿ ಹುಟ್ಟಿ ಬೆಳೆದು ಮುಗಿಯುತ್ತದೆ. ಕಥೆಯ ತಿರುಳು ಪದ್ಮಾವತೀ ಕಲ್ಯಾಣವಲ್ಲ ; ವಾಸವದತ್ತೆಯ ಅಪೂರ ಪ್ರೇಮಚಿತ್ರಣ. ಪ್ರತಿಜ್ಞಾಯೌಗಂಧರಾಯಣದಲ್ಲಿರುವುದು ವಾಸವದತ್ತೆಯ ಕಾಮಾಂಧ ಮೋಲುಗ್ಗೆ ಪಡೆದ ಪ್ರಣಯ ; ಇಲ್ಲಿರುವುದು ತ್ಯಾಗಮಯವೂ, ಮಧುರವೂ, ಸ್ಥಿರವೂ ಆದ ಪ್ರಣಯ. ಇಲ್ಲಿನ ವತ್ಸರಾಜ ಕಾಮದ ಬೆನ್ನು ಹತ್ತುವ ಧೀರಲಲಿತನಲ್ಲ. ಪದ್ಮಾವತಿಯನ್ನು ಮದುವೆಯಾಗುವುದೂ ಬಲವಂತದಿಂದ. ಮದುವೆಯಾದರೂ ಮನಸ್ಸಿನ ತುಂಬ ವಾಸವದತ್ತೆಯೇ. ಇವಳನ್ನು ಪ್ರೀತಿಸದಿರಲಾರ, ಅವಳನ್ನು ಮರೆಯಲಾರ, ಗಂಡನ ಶ್ರೇಯಸ್ಸಿಗಾಗಿ ಬೆಂಕಿಯಲ್ಲಿ ಬೆಂದುಹೋದ ವದಂತಿಯನ್ನು ಹಬ್ಬಿಸಿ ವಾಸವದತ್ತೆ ತನ್ನ ಪ್ರಿಯತಮನನ್ನು ಕೈಹಿಡಿಯುವವಳ ಮನೆಯಲ್ಲಿ ವೇಷಾಂತರದಿಂದ ನ್ಯಾಸವಾಗಿ ವಾಸಮಾಡಿದಳು. ಪದ್ಮಾವತಿಯು ಬಂದಾಗ ತಪೋವನದ ನೂಕುನುಗ್ಗಲಿನಲ್ಲಿ ಸಾಧಾರಣಳಂತೆ ನಡೆದುಕೊಂಡಳು, ತಳ್ಳಿಸಿಕೊಂಡಳು. ತನ್ನ ಅಗಲಿಕೆಯಿಂದುಂಟಾದ ಗಂಡನ ಗೋಳಾಟವನ್ನು ಬ್ರಹ್ಮಚಾರಿಯಿಂದ ಕೇಳಿ ಮಮ್ಮಲಮರುಗಿದಳು, ಗತ್ಯಂತರವಿಲ್ಲದೆ ಸಹಿಸಿಕೊಂಡಳು. 'ಧನ್ಯಾ ಸಾ ಸ್ತ್ರೀ ಯಾಂ ತಥಾವೇತ್ತಿ ಭರ್ತಾ । ಭರ್ತೃಸ್ನೇಹಾತ್ಸಾ ಹಿ ದಗ್ಧಾಪ್ಯದಗ್ಧಾ', ಸೇವೆ ಮಾಡಿಸಿಕೊಂಡು ಅಭ್ಯಾಸವುಳ್ಳವಳು ಪರರ ಸೇವೆ ಮಾಡಿದಳು. ಬಲಾತ್ಕಾರದಿಂದ ವತ್ಸರಾಜ ಮರುಮದುವೆಗೆ ಒಪ್ಪಿಕೊಂಡನೆಂದು ತಿಳಿದು ಅವಳ ಮನಸ್ಸಿಗೆ ಕೊಂಚ ನೆಮ್ಮದಿಯೂ ಆಗುತ್ತದೆ. ತನ್ನ ನಲ್ಲನ ಮತ್ತೊಂದು ಮದುವೆಗೆ, ಸವತಿಯ ಸಂಪಾದನೆಗೆ ಸಂಬಂಧಮಾಲೆಯನ್ನು ಕಟ್ಟುವಾಗ ಅವಳ ಮೃದುಹೃದಯದಲ್ಲಿ ಎಂತಹ ಉದ್ವೇಗ ತಾಂಡವವಾಡಿರಬೇಕು ! ಸವತೀಮರ್ದನವನ್ನು ದೂರಮಾಡಿ ಅವಿಧವಾಕರಣವನ್ನು ಸೇರಿಸಿ ಮಾಲೆ ಕಟ್ಟುತ್ತಾಳೆ. ಏನೂ ಅರಿಯದ, ಯಾವ ಅಪರಾಧವನ್ನೂ ಮಾಡದ ಪದ್ಮಾವತಿಯು ಉದಯನನ ಗುಣಶೀಲಗಳನ್ನು ಸಹಜವಾಗಿ ಹೇಳಿದಾಗ ಅವಳ ಹೊಟ್ಟೆ ಎಷ್ಟು ಉರಿದಿರಬೇಕು ! ಅವಳು ಗಂಡನಿಗಾಗಿ ಸವತಿಯನ್ನು ಪ್ರೀತಿಸಿ ಉಪಚರಿಸುತ್ತಾಳೆ.

ಐದನೆಯ ಅಂಕವೇ ನಾಟಕದಲ್ಲಿ ಅತ್ಯಂತ ರಮಣೀಯವಾದುದು. ಇದರಲ್ಲಿರುವ ಸ್ವಪ್ನದೃಶ್ಯ ಸಂಸ್ಕೃತಸಾಹಿತ್ಯದಲ್ಲೇ ಅಪೂರ್ವವಾದುದು. ಕವಿಯು ಪವಿತ್ರಪ್ರೇಮವುಳ್ಳ ವಾಸವದತ್ತೆಯನ್ನು ಪದ್ಮಾವತಿಯ ಶೀರ್ಷವೇದನೆಯನ್ನು ವಿಚಾರಿಸುವ ವ್ಯಾಜ್ಯದಿಂದ ಸಮುದ್ರಗೃಹಕ್ಕೆ ಕರೆತಂದು ಕತ್ತಲೆಯಲ್ಲಿ ಮಲಗಿದ್ದ ಉದಯನನ ಶಯನದಲ್ಲಿ ಕುಳ್ಳಿರಿಸುತ್ತಾನೆ. ಪರಸ್ಪರ ಇಬ್ಬರೂ ಪರಿತಪಿಸುತ್ತಿದ್ದರೂ, ಏಕಾಸನದಲ್ಲಿದ್ದರೂ ಒಬ್ಬರ ಅರಿವು ಮತ್ತೊಬ್ಬರಿಗಿಲ್ಲ. ಆದರೂ ಅವಿದಿತಸ್ಪರ್ಶಸುಖ ಉಂಟಾಗುತ್ತದೆ. ಸುಂದರಿಯೂ, ನವಯುವತಿಯೂ,



ಗುಣಸಂಪನ್ನೆಯೂ ಆದ ರಾಜಕುಮಾರಿ ದೊರೆತಿದ್ದರೂ ವತ್ಸರಾಜ ವಾಸವದತ್ತೆಯನ್ನು ಕನವರಿಸುತ್ತಾನೆ. ಅವನ ಕನಸಿನ ವಾಸವದತ್ತೆ ಸಮೀಪದಲ್ಲಿಯೇ ಮೂರ್ತಿಮತ್ತಾಗಿ ಕುಳಿತಿದ್ದಾಳೆ. ಅವಳ ಹೃದಯದ ವತ್ಸರಾಜ ಪಕ್ಕದಲ್ಲಿ ಪವಡಿಸಿದ್ದಾನೆ. ಸ್ಥಳ ಏಕಾಂತವಾದುದು. 'ಹಾ ! ವಾಸವದತ್ತೆ, ಹಾ ! ಅವಂತಿರಾಜಪುತ್ರಿ, ಪ್ರಿಯೇ ! ಪ್ರಿಯಶಿಷ್ಯೇ !, ಉತ್ತರ ಕೊಡು. ಕೋಪಿಸಿಕೊಂಡಿರುವೆಯಾ ? ಏತಕ್ಕೆ ಅಲಂಕರಿಸಿಕೊಂಡಿಲ್ಲ ?'– ಮುಂತಾಗಿ ವತ್ಸರಾಜ ಮಾತನಾಡಿಸಿದಾಗ ಅವಳ ಹೃದಯದಲ್ಲಿ ಎಂತಹ ಭಾವಪರಂಪರೆ ಎದ್ದಿರಬೇಕು ! ಪ್ರಸನ್ನಳಾಗಿ ಕೈಚಾಚಿದಾಗ ಅವಳ ಮೃದುಮಧುರವಾದ ಕಿರುಹೃದಯದ ಗತಿಯೇನು ? ಚಾಚಿದ್ದ ಕೈಯನ್ನು ಯಥಾಸ್ಥಾನಕ್ಕೆ ಸೇರಿಸಿ, ಹೃದಯದ ತುಮುಲಭಾವವನ್ನು ಅದುಮಿಕೊಂಡು ತೆಪ್ಪಗೆ ಸರಿದ ಅವಳನ್ನೂ, ಅವಳ ಹಸ್ತಸ್ಪರ್ಶದಿಂದ ಕಣ್ದೆರೆದು ಅವಳನ್ನು ಕಾಣದೆ ಕಾತರಿಸುವ ವತ್ಸರಾಜನನ್ನೂ ಕಂಡಾಗ ಪ್ರೇಕ್ಷಕರಿಗಾಗುವ ರಸಾನುಭವ ಅನಿರ್ವಚನೀಯವಾದುದು. ಅವರ ಕುತೂಹಲ, ಕಳವಳಗಳು ಉಕ್ಕಿ ಬರುತ್ತವೆ. ಈ ದೃಶ್ಯವನ್ನು ಅಭಿನಯಿಸಲು ನಟರಿಗೆ ಬಹಳ ಸಾಮರ್ಥ್ಯವಿರಬೇಕು. ಆರನೆಯ ಅಂಕದಲ್ಲಿ ಪ್ರಿಯ—ಪ್ರೇಯಸಿಯರ ಮತ್ತು ಮಿತ್ರಭಾಂಧವರ ಸಮಾಗಮದಲ್ಲಿ ಅದ್ಭುತವಿದೆ. ನಾಟಕದ ನಾಯಕ ಧೀರೋದಾತ್ತ; ರಸ ಶೃಂಗಾರ. ಋಷ್ಯಾಶ್ರಮ, ಸಾಯಂಕಾಲ, ಶಯ್ಯಾಗೃಹ, ವಾಸವದತ್ತೆ ಮುಂತಾದ ವರ್ಣನೆಗಳು ಸುಂದರವಾಗಿವೆ. ರಸ ಪೋಷಕವಲ್ಲದ ಘಟನೆಗಳಾಗಲೀ, ಪಾತ್ರಗಳಾಗಲೀ ಇದರಲ್ಲಿಲ್ಲ.

**ಅವಿಮಾರಕ :—**

ಆರು ಅಂಕಗಳನ್ನುಳ್ಳ ಈ ನಾಟಕವನ್ನು ಭಾಸನ ಕೃತಿಗಳಲ್ಲಿ ಮೊದಲನೆಯದೆಂದು ಭಾವಿಸಲಾಗಿದೆ. ಇದರ ವಸ್ತು ಸಾಂಸಾರಿಕವಾಗಿದ್ದರೂ ವಿಷಯ, ಸನ್ನಿವೇಶ, ಆವರಣಗಳಿಂದ ಅದ್ಭುತ ಪೌರಾಣಿಕಪ್ರಪಂಚದ ರೂಪವನ್ನು ಹೊಂದಿದೆ.

ವೈರಂತ್ಯರಾಜನ ಮಗ ಕುಂತಿಭೋಜನು ತನ್ನ ಮಗಳಾದ ಕುರಂಗಿಯನ್ನು ವಿಷ್ಣುಸೇನನಿಗೆ ಕೊಡಬೇಕೆಂದಿರುತ್ತಾನೆ. ಆದರೆ ಇದ್ದಕ್ಕಿದ್ದ ಹಾಗೆಯೇ ಅವನು ಅದೃಶ್ಯನಾಗುತ್ತಾನೆ. ಒಂದು ದಿನ ಉದ್ಯಾನವನದಲ್ಲಿ ವಿಹರಿಸುತ್ತಿದ್ದಾಗ ಮದಗಜಕ್ಕೆ ಸಿಕ್ಕಿದ ರಾಜಕುಮಾರಿಯನ್ನು ಒಬ್ಬ ಚಂಡಾಲ ಯುವಕ ಕಾಪಾಡುತ್ತಾನೆ. ಇಬ್ಬರೂ ಅನುರಕ್ತರಾಗಿ ಅಂತಃಪುರ ಸೇರುತ್ತಾರೆ. ಇದನ್ನು ತಿಳಿದ ದೊರೆ ಅವನನ್ನು ಹಿಡಿಸಲು ಪ್ರಯತ್ನಿಸುತ್ತಾನೆ. ಆದರೆ ಅವನು ತಪ್ಪಿಸಿಕೊಂಡು, ನಿರಾಶನಾಗಿ ಆತ್ಮಹತ್ಯೆಯಲ್ಲಿ ತೊಡಗುತ್ತಾನೆ. ಅಷ್ಟರಲ್ಲಿ ಒಬ್ಬ ವಿದ್ಯಾಧರನು ಕರುಣೆಯಿಂದ ಅವನಿಗೆ ಅದೃಶ್ಯವಾಗಿಸುವ ಒಂದು ಉಂಗುರವನ್ನು ಕೊಡುತ್ತಾನೆ. ಅದರ ಸಹಾಯದಿಂದ ಅವನು ಮತ್ತೆ ಅಂತಃಪುರವನ್ನು ಸೇರುತ್ತಾನೆ. ಈ ಚಾಂಡಾಲ ಯುವಕನೇ ವಿಷ್ಣುಸೇನ. ಅವನು ಶಾಪದಿಂದ ನಗರದ ಹೊರಗಡೆ ವಾಸಿಸುತ್ತಿದ್ದನು. ಇದೊಂದನ್ನೂ ತಿಳಿಯದ ಕುಂತಿಭೋಜ ಕುರಂಗಿಯನ್ನು ಜಯವರ್ಮನಿಗೆ ಕೊಡಲು ಪ್ರಯತ್ನಿಸುತ್ತಾನೆ. ನಾರದರು ಬಂದು ನಿಜಸ್ಥಿತಿಯನ್ನು ತಿಳಿಸಲು ಅವನು ಕುರಂಗಿಯನ್ನು ಅವಿಮಾರಕನಾದ ವಿಷ್ಣುಸೇನನಿಗೂ, ಎರಡನೆಯ ಮಗಳಾದ ಸುಮಿತ್ರೆಯನ್ನು ಜಯವರ್ಮನಿಗೂ ಕೊಟ್ಟು ಮದುವೆ ಮಾಡುತ್ತಾನೆ.

ಈ ನಾಟಕದ ಕಥೆ ತೊಡಕುತೊಡಕಾಗಿದೆ. ಸಂವಿಧಾನ ಕೌಶಲವಿಲ್ಲ, ರಸವತ್ತಾದ ಸನ್ನಿವೇಶಗಳಿಲ್ಲ, ನಂಬಲಾಗದ ಅವಶಾನುಷ, ಅಸಾಧರಣ ಸಾಧನೆಗಳಿಂದ ಚಮತ್ಕಾರ ತುಂಬುವ ಪ್ರಯತ್ನ ನಡೆದಿದೆ. ಮದಗಜ, ನಾರದ, ವಿದ್ಯಾಧರ, ಅದೃಶಾಂಗುಲೀಯಕಗಳು ನಾಟಕಕ್ಕೆ ಪುರಾಣರೂಪ ತಂದಿವೆ. ಅವಿಮಾರಕ ಅಗ್ನಿಪ್ರಸಾದದಿಂದ ಹುಟ್ಟಿದ ದಿವ್ಯಪುರುಷ ; ಬಾಲ್ಯದಲ್ಲಿಯೇ ಕುರಿ (ಅವಿ)ಯಾಗಿ ಬಂದ ರಾಕ್ಷಸನನ್ನು ಕೊಂದುದರಿಂದ ಅವನಿಗೆ ಅವಿಮಾರಕನೆಂಬ ಹೆಸರು ಬಂದಿತು. ಈ ನಾಟಕದ ವಸ್ತು 'ಅರೇಬಿಯನ್ ನೈಟ್ಸ್' ಕಥೆಯಂತಿದೆ. ಒರಟೊರಟಾಗಿ ಶೃಂಗಾರದ್ಭುತಗಳನ್ನು ತರಲಾಗಿದೆ. 'ಪ್ರಾಜ್ಞಸ್ಯ ಮೂರ್ಖಸ್ಯ ಚ ಕಾರ್ಯಯೋಗೇ। ಸಮತ್ವಮಭ್ಯೇತಿ ತನುರ್ನ ಬುದ್ಧಿಃ ॥ ' 'ದೈವಂ ವಿಧಾನಮನುಗಚ್ಛತಿ ಕಾರ್ಯಸಿದ್ಧಿಃ' ಮುಂತಾದ ಕೆಲವು ಸುಂದರವಾಕ್ಯಗಳು ಇದರಲ್ಲಿವೆ.

ಈ ನಾಟಕದ ನಾಲ್ಕು ಅಂಕಗಳು ಮಾತ್ರ ದೊರೆತಿವೆ. ಇದರಲ್ಲಿ ಸಾಮಾನ್ಯ ಸಾಮಾಜಿಕ ವೃತ್ತಾಂತವಿದೆ.

ಉಜ್ಜಯಿನಿಯ ಪ್ರಸಿದ್ಧ ವೇಶ್ಯೆಯಾದ ವಸಂತಸೇನೆ ದಾರಿಯಲ್ಲಿ ರಾಜಶ್ಯಾಲಕನಾದ ಸಂಸ್ಥಾನಿಕನಿಂದ ಪೀಡಿತಳಾಗಿ ಪಕ್ಕದಲ್ಲಿದ್ದ ಚಾರುದತ್ತನ ಮನೆಗೆ ನೆರವಿಗಾಗಿ ಹೋಗಿ ಅಲ್ಲಿ ತನ್ನ ಒಡವೆಗಳನ್ನು ನ್ಯಾಸವಾಗಿಟ್ಟು ಮನೆಗೆ ಹಿಂದಿರುಗುತ್ತಾಳೆ. ಸಜ್ಜಲಕನು ಅವುಗಳನ್ನು ಕದ್ದು ವಸಂತಸೇನೆಗೆ ಕೊಟ್ಟು ಅವಳ ಊಳಿಗದಲ್ಲಿದ್ದ ತನ್ನ ಪ್ರೇಯಸಿ ಮದನಿಕೆಯನ್ನು ಬಿಡಿಸಿಕೊಳ್ಳುತ್ತಾನೆ. ಚಾರುದತ್ತನ ಹೆಂಡತಿ ಕಳುವಾಗಿದ್ದ ಒಡವೆಗಳಿಗೆ ಬದಲಾಗಿ ತನ್ನ ತೌರುಮನೆಯವರು ಕೊಟ್ಟಿದ್ದ ಮುತ್ತಿನಹಾರವನ್ನು ವಿದೂಷಕನ ಮೂಲಕ ಕಳುಹಿಸುತ್ತಾಳೆ. ಚಾರುದತ್ತನು ಜೂಜಿನಲ್ಲಿ ಒಡವೆಗಳನ್ನು ಸೋತುದರಿಂದ ಹಾರವನ್ನು ಕಳುಹಿಸಿಕೊಟ್ಟಿರುವುದಾಗಿ ಅವನು ತಿಳಿಸುತ್ತಾನೆ. ನಂಬಿಕೆ ಉಳಿಸಿಕೊಳ್ಳಲು ನಡೆದ ಈ ಪ್ರಸಂಗದಿಂದ ಸಂತೋಷಗೊಂಡ ವಸಂತಸೇನೆ ಚಾರುದತ್ತನನ್ನು ನೋಡಲು ಅವನ ಮನೆಗೆ ಹೋಗುತ್ತಾಳೆ.

ಈ ನಾಟಕ ಮೃಚ್ಛಕಟಿಕಕ್ಕೆ ಮೂಲ; ಕೆಲವರು ಇದನ್ನು ಮೃಚ್ಛಕಟಿಕದ ಸಂಗ್ರಹವೆಂದೂ ಹೇಳುತ್ತಾರೆ. ದಾನವೀರನೂ; ಗುಣಶಾಲಿಯೂ ಆದ ಬಡಬ್ರಾಹ್ಮಣ ನಾಯಕ; ಪ್ರಸಿದ್ಧ ವೇಶ್ಯೆನಾಯಿಕೆ. ಈ ಪ್ರಣಯಕತೆಯಲ್ಲಿ ನಾಯಿಕೆಯೇ ನಾಯಕನನ್ನರಸಿಕೊಂಡು ಹೋಗುತ್ತಾಳೆ. ಮೃಚ್ಛಕಟಿಕದಲ್ಲಿರುವ ರಾಜ್ಯಕ್ರಾಂತಿಯ ವಿಚಾರ ಇಲ್ಲಿಲ್ಲ. ವಸ್ತು ಮತ್ತು ಬಳಸಿರುವ ಪ್ರಾಕೃತಗಳ ದೃಷ್ಟಿಯಿಂದ ಈ ನಾಟಕ ಸಂಸ್ಕೃತಸಾಹಿತ್ಯದಲ್ಲಿ ಅಪೂರ್ವವಾದುದ್ದು. ಚಾರುದತ್ತನಿಗೆ ಧನವಿನಾಶದಿಂದ ಚಿಂತೆಯಿಲ್ಲ ; ಧನಾಭಾವದಿಂದ ಮಿತ್ರರು ದೂರ ಸರಿಯುತ್ತಿರುವುದು ಅವನನ್ನು ಬಾಧಿಸುತ್ತದೆ. ಸಿರಿವಂತಿಕೆಯಿಂದ ಬಡತನಕ್ಕಿಳಿದವನ ಬವಣೆ ಅವನಿಗೆ ಅರಿವಾಗಿದೆ—

ಸುಖಂ ಹಿ ದುಃಖಾನ್ಯನುಭೂಯ ಶೋಭತೇ
ಯಥಾಂಧಕಾರಾದಿವ ದೀಪದರ್ಶನಮ್ ।
ಸುಖಾತ್ತು ಯೋ ಯಾತಿ ದಶಾಂ ದರಿದ್ರತಾಂ
ಸ್ಥಿತಃ ಶರೀರೇಣ ಮೃತಃ ಸ ಜೀವತಿ ॥



ನಂಬಿಕೆಯನ್ನೆಂದೂ ಕಳೆದುಕೊಳ್ಳದ ನಾಯಕ ಮತ್ತು ನಂಬಿಕೆಗೆ ಒಲಿದ ನಾಯಿಕೆಯರಿಂದ ನಾಟಕಕ್ಕೆ ಕಳೆ ಬಂದಿದೆ. ವಸಂತಸೇನೆ ರೂಪಾಜೀವಿಯಾಗಿದ್ದರೂ ಧನವನ್ನು ನಿರ್ಲಕ್ಷಿಸಿ ಗುಣವನ್ನು ಮೆಚ್ಚಿಕೊಂಡು ಸಾಧ್ವಿಯರೊಡನೆ ಸರಿದೂಗುತ್ತಾಳೆ. ಶಕಾರ ಮತ್ತು ವಿದೂಷಕರು ಹಾಸ್ಯದ ಹೊನಲನ್ನು ಹರಿಸುತ್ತಾರೆ. ' ಅಹಂ ತ್ವಾಂ ಗೃಹೀತ್ವಾ ಕೇಶಹಸ್ತೇ ದುಃಶಾಸನಃ ಸೀತಾಮಿವಾ-ಹರಾಮಿ ' ಎಂಬ ಶಕಾರನ ಮಾತೂ, 'ಚೋರಂ ಭಿತ್ವಾ ಸಂಧಿಃ ಪ್ರವಿಷ್ಟಃ ' ಎಂಬ ವಿದೂಷಕನ ಮಾತೂ ಯಾರನ್ನು ನಗಿಸಿ ರಂಜಿಸುವುದಿಲ್ಲ ?

ಯಜ್ಞ ಫಲ :—

ಏಳು ಅಂಕಗಳನ್ನುಳ್ಳ ಈ ನಾಟಕದಲ್ಲಿ ರಾಮಾಯಣದ ಬಾಲಕಾಂಡದ ಕಥೆ ಇದೆ. ಪುತ್ರಕಾಮೇಷ್ಟಿಯಾಗದ ಫಲವಾಗಿ ದಶರಥನಿಗೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳಾದರು ; ವಿಶ್ವಾಮಿತ್ರರ ಯಾಗಸಂರಕ್ಷಣೆಯ ಫಲವಾಗಿ ಅವರಿಗೆ ವಿದ್ಯೆ ಮತ್ತು ಅಸ್ತ್ರಗಳು ಲಭಿಸಿದವು ; ಜನಕನು ನಡೆಸಿದ ಯಜ್ಞದ ಕೊನೆಯಲ್ಲಿ ರಾಮನು ಧನುರ್ಭಂಗ ಮಾಡಿದುದರಿಂದ ವಿವಾಹ ನಡೆಯಿತು. ಇವು ಮೂರೂ ಯಜ್ಞಫಲಗಳು. ನಾಟಕದ ಕೊನೆಯಲ್ಲಿ ದಶರಥನು ಹೇಳುವ ಈ ಮಾತು ಮಕ್ಕಳನ್ನು ಹಡೆದವರು ಅಭಿಲಾಷೆಯನ್ನು ಪ್ರಕಟಿಸುತ್ತದೆ—

ಅಪುತ್ರದುಃಖಂ ನಷ್ಟಂ ಮೇ ಸಂಬಂಧೀ ಜನಕೋಽಭವತ್ ।
ಸುತಾ ವೀರಾಃ ಪ್ರೀತಿಮಂತಃ ಕಿಮಿಚ್ಛೇಯಮತಃ ಪರಮ್ ॥

ಪ್ರತಿಮಾನಾಟಕ :—

ಈ ನಾಟಕದಲ್ಲಿ ರಾಮಾಯಣದ ಅಯೋಧ್ಯಾಕಾಂಡ ಮತ್ತು ಅರಣ್ಯಕಾಂಡಗಳ ಕಥೆ ಇದೆ. ಉದಯನಕಥಾ ನಾಟಕಗಳಲ್ಲಿ ಸ್ವಪ್ನವಾಸವದತ್ತದಂತೆ ರಾಮಕಥಾನಾಟಕಗಳಲ್ಲಿ ಇದು ಶ್ರೇಷ್ಠವಾದುದು. ಇದರಲ್ಲಿ ಭಾಸನ ಪ್ರತಿಭೆ ಮತ್ತು ಕಲಾಕೌಶಲಗಳು ಪೂರ್ಣವಾಗಿ ಪ್ರಕಾಶಗೊಂಡಿವೆ.

ಮೊದಲನೆಯ ಅಂಕದಲ್ಲಿ ರಾಮಪಟ್ಟಾಭಿಷೇಕಕ್ಕೆ ಕೈಕೇಯಿಯಿಂದ ವಿಘ್ನ ಮತ್ತು ದಶರಥನ ಆಶಾಭಂಗಗಳಿವೆ. ಎರಡನೆಯ ಅಂಕದಲ್ಲಿ ದಶರಥನ ಮರಣ ವೃತ್ತಾಂತವಿದೆ. ಮೂರನೆಯ ಅಂಕದಲ್ಲಿ ಭರತನು ಪ್ರತಿಮಾದರ್ಶನದಿಂದ ಕಂಗೆಡುತ್ತಾನೆ : ಅಯೋಧ್ಯೆ ಶೋಕಸಾಗರದಲ್ಲಿ ಮುಳುಗುತ್ತದೆ ; ಕರುಣ ಹೊಳೆಯಾಗಿ ಹರಿಯುತ್ತದೆ. ನಾಲ್ಕನೆಯ ಅಂಕದಲ್ಲಿ ಭರತನು ಅರಣ್ಯದಲ್ಲಿ ರಾಮಲಕ್ಷ್ಮಣರನ್ನು ಸಂಧಿಸಿ ನಗರಕ್ಕೆ ಹಿಂದಿರುಗುವಂತೆ ಬೇಡಿಕೊಳ್ಳುತ್ತಾನೆ : ಅವರು ಒಪ್ಪದಿರಲು ರಾಮಪಾದುಕೆಗಳನ್ನು ಪಡೆಯುತ್ತಾನೆ. ಐದನೆಯ ಅಂಕದಲ್ಲಿ ಸೀತಾಪಹರಣವಾಗುತ್ತದೆ. ಆರನೆಯದರಲ್ಲಿ ಜಟಾಯು ಮತ್ತು ರಾವಣರ ಯುದ್ಧವೂ, ಏಳನೆಯದರಲ್ಲಿ ರಾವಣವಧೆ ಮತ್ತು ರಾಮಪಟ್ಟಾಭಿಷೇಕಗಳೂ ಬಂದಿವೆ. ಈ ನಾಟಕದಲ್ಲಿ ರಾಮಾಯಣದ ಎರಡು ಕಾಂಡಗಳ ಕಥೆಯಿದ್ದರೂ ಬಾಲಕಾಂಡದ ಕಥೆಗೇ ಪ್ರಾಧಾನ್ಯ.

ಭಾಸನ ಕೈಕೇಯಿ ಪುತ್ರವ್ಯಾಮೋಹದಿಂದ ನಿಷ್ಠುರಳಾಗಿ ನಡೆದುಕೊಳ್ಳುವುದಿಲ್ಲ : ಅವಳು ರಾಮನ ವನವಾಸಕ್ಕೆ ಕಾರಣಳಾದುದು ವಿಧಿವಿಲಾಸ. ಭರತನಿಗಿಂತಲೂ ರಾಮನನ್ನು ಅವಳು ಹೆಚ್ಚು ಪ್ರೀತಿಸುತ್ತಿದಳು. ಸೀತೆ ಪತಿಯ ಮೇಲಿನ ಮೋಹದಿಂದ ಕಠಿಣವಾಗಿ ಮಾತನಾಡುವುದಿಲ್ಲ: ಅವಳು ಕೇವಲ ಪ್ರೇಮಮಯಿ; ಭರತ, ಲಕ್ಷ್ಮಣರನ್ನು ಮಕ್ಕಳಿಗಿಂತ ಮಿಗಿಲಾಗಿ ಪ್ರೀತಿಸುತ್ತಿದಳು. ಭರತನಿಗೆ ರಾಮನಲ್ಲಿ ಅಪಾರ ಭಕ್ತಿ; ಅವನು ಆತ್ಮಹತ್ಯೆಗೆ ಚಿಂತಿಸುವುದಿಲ್ಲ; ಬದಲಾಗಿ ರಾಮನ ಸಹಾಯಕ್ಕೆ ಸಿದ್ಧತೆ ನಡೆಸುತ್ತಾನೆ. ಕವಿ ತನ್ನ ಮನೋಧರ್ಮಕ್ಕೆ ತಕ್ಕಂತೆ ರಸಾನುಗುಣವಾಗಿ ಎಲ್ಲ ಪಾತ್ರಗಳನ್ನೂ ನಯವಾಗಿ ತಿದ್ದಿ ಹೊಳಪು ಕೊಟ್ಟಿದ್ದಾನೆ. ಅವದಾತಿಕೆಯಿಂದ ವಲ್ಕಲಾನಯನ, ಭರತನಿಂದ ಪ್ರತಿಮಾಸಂದರ್ಶನ, ರಾವಣನಿಂದ ಸೀತಾಪಹರಣ— ಇವೇ ಮುಂತಾದುವು ಕವಿಯ ಅನುಪಮ ಪ್ರತಿಭೆಗೆ ನಿದರ್ಶನಗಳು. ನಾಟಕದ ಪ್ರಾರಂಭದಲ್ಲಿರುವ ಪದ್ಯವೇ ಕವಿಯ ಕಾವ್ಯರಚನಾಸಾಮರ್ಥ್ಯವನ್ನೂ ವಿಶದಪಡಿಸುತ್ತದೆ—

ಚರತಿ ಪುಲಿನೇಷು ಹಂಸೀ ಕಾಶಾಂಶುಕವಾಸಿನೀ ಸುಸಂಹೃಷ್ಟಾ ।
ಮುದಿತಾ ನರೇಂದ್ರಭವನೇ ತ್ವರಿತಾ ಪ್ರತಿಹಾರರಕ್ಷೀವ ॥

ರಾಮನು ತಂದೆಯ ಆಜ್ಞಾಪರಿಪಾಲಕ ; 'ಸ್ವಃ ಪುತ್ರಃ ಕುರುತೇ ಪಿತುರ್ಯದಿ ವಚಃ ಕಸ್ತತ್ರ ಭೋ ವಿಸ್ಮಯಃ' ಎಂಬುದು ಅವನ ಪ್ರಶ್ನೆ. ಲಕ್ಷ್ಮಣನಾದರೋ ತಮಗಾದ ವಂಚನೆಯಿಂದ ಕ್ರುದ್ಧನಾಗಿ ಲೋಕವನ್ನು ಯುವತಿರಹಿತವನ್ನಾಗಿ ಮಾಡುವೆನೆಂದು ಆರ್ಭಟಿಸುತ್ತಾನೆ; ಭೋಗಗಳನ್ನು ತ್ಯಜಿಸಿ, ಸಂಕಷ್ಟಗಳನ್ನು ಸಹಿಸಿಕೊಂಡು ಅಣ್ಣನ ಪಡಿನೆಳಲಾಗಿ ನಡೆಯುತ್ತಾನೆ. ರಾಮಾದಿಗಳ ವನಗಮನವನ್ನು ತಿಳಿದ ಭರತ 'ದಷ್ಟುಂ ಪ್ರಯಾಮ್ಯಕೃಪಣೇಷು ತಪೋವನೇಷು ರಾಮಾಭಿಧಾನಮಪರಂ ಜಗತಃ ಶಶಾಂಕಂ' ಎಂದು ಹೇಳಿ ಅಯೋಧ್ಯೆಗೆ ಹೋಗದೆ ಕಾಡಿಗೆ ತೆರಳುತ್ತಾನೆ : ತಾನು ಇಕ್ಷ್ವಾಕುಕುಲಕಲಂಕನಾದೆನೆಂದು ಮರುಗುತ್ತಾನೆ. ಚಿತ್ರಕೂಟದಲ್ಲಿ—

ನಿರ್ಘೃಣಶ್ಚ ಕೃತಘ್ನಶ್ಚ ಪ್ರಾಕೃತಃ ಪ್ರಿಯಸಾಹಸಃ ।
ಭಕ್ತಿಮಾನಾಗತಃ ಕಶ್ಚಿತ್ ಕಥಂ ತಿಷ್ಠತು ಯಾತ್ವಿತಿ ॥

ಎಂದು ಕೇಳುವ ಮಾತು ಅವನ ಸರಳ ಹೃದಯ, ಶೋಕ, ಪಶ್ಚಾತ್ತಾಪ, ಭಕ್ತಿಗಳಿಗೆ ಕನ್ನಡಿಯಂತಿದೆ. ರಾಮಭರತರ ಸಮಾಗಮ ರಮಣೀಯವಾದುದು. ತಾಯಿಯ ತಪ್ಪನ್ನು ಮಕ್ಕಳ ತಲೆಯ ಮೇಲೆ ಹೇರಿ ಸಮಾಜ ನಿರ್ದಯವಾಗಿ ವರ್ತಿಸುತ್ತದೆ. ಮುನಿಹೃದಯದ ಕವಿಗೆ ಇದು ಸರಿಗಾಣಲಿಲ್ಲ. 'ಸುಪುರುಷ, ಪುರುಷಾಣಾಂ ಮಾತೃದೋಷೋ ನ ದೋಷಃ' ಎಂಬ ಭರತನ ಮಾತಿಗೆ ಮೂಲಕ ಸಮಾಜಕ್ಕೆ ತಿಳುವಳಿಕೆ ನೀಡಿದ್ದಾನೆ. ರಾಮ-ಸೀತೆ-ಲಕ್ಷ್ಮಣರು ಸತ್ಯ-ಶೀಲ-ಭಕ್ತಿಸ್ವರೂಪರು. ನಡೆ, ನುಡಿ, ರೂಪಾದಿಗಳಲ್ಲಿ ಭರತ ರಾಮನ ಅಪರಾವತಾರ,



**ಅಭಿಷೇಕನಾಟಕ :—**

ಆರು ಅಂಕಗಳನ್ನುಳ್ಳ ಈ ನಾಟಕದಲ್ಲಿ ರಾಮಾಯಣದ ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡಗಳ ಕಥೆಯಿದೆ. ಮೊದಲನೆಯ ಅಂಕದಲ್ಲಿ ವಾಲಿವಧೆಯೂ, ಎರಡನೆಯದರಲ್ಲಿ ಸೀತಾನ್ವೇಷಣವೂ, ಮೂರನೆಯದರಲ್ಲಿ ಲಂಕಾದಹನವೂ, ನಾಲ್ಕನೆಯದರಲ್ಲಿ ರಾಮಾದಿಗಳ ಲಂಕಾಗಮನವೂ, ಐದನೆಯದರಲ್ಲಿ ಮಾಯಾಶಿರಸ್ಸಿನ ಪ್ರಸಂಗ ಮತ್ತು ಇಂದ್ರಜಿತುವಿನ ವಧೆಗಳೂ, ಆರನೆಯದರಲ್ಲಿ ರಾವಣವಧೆ ಮತ್ತು ಸೀತೆಯ ಅಗ್ನಿಶುದ್ಧಿಗಳೂ ಬಂದಿವೆ. ರಾಮಪಟ್ಟಾಭಿಷೇಕದಿಂದ ನಾಟಕ ಮುಗಿಯುತ್ತದೆ.

ನಾಟಕದಲ್ಲಿ ಕವಿಯ ಪ್ರತಿಭೆ ಅಷ್ಟಾಗಿ ಬೆಳಗಿಲ್ಲ ; ಗಂಭೀರ ಘಟನೆಗಳಿಂದ ಕೂಡಿದ ಅರಣ್ಯಾದಿ ಕಾಂಡಗಳನ್ನು ಸಂಗ್ರಹಿಸುವುದರಲ್ಲಿಯೇ ಅದು ಮುಗಿದುಹೋಗಿದೆ. ರಾಮ, ವಾಲಿ, ಸುಗ್ರೀವಾದಿಪಾತ್ರಗಳು ಕಡಿಮೆಯಾಗಿ ಕಾಣಿಸಿಕೊಂಡರೂ ಖಚಿತವಾಗಿ ರೂಪಿತವಾಗಿವೆ. ರಾವಣ ಮತ್ತು ಆಂಜನೇಯರ ಸಂವಾದ ಆಕರ್ಷಕವಾಗಿದೆ. ಆಂಜನೇಯನು ತಿಳಿಸುವ ರಾಮಶಾಸನವಿದು—

ವರಶರಣಮುಪೇಹಿ ಶಂಕರಂ ವಾ
ಪ್ರವಿಶ ಚ ದುರ್ಗತಮಂ ರಸಾತಲಂ ವಾ ।
ಶರವರಪರಿಭಿನ್ನಸರ್ವಗಾತ್ರಂ
ಯಮಸದನಂ ಪ್ರತಿ ಯಾಪಯಾಮ್ಯಹಂ ತ್ವಾಂ ॥

ಈ ನಾಟಕದಲ್ಲಿ ಸೇತುಬಂಧನವಿಲ್ಲ ; ಸಮುದ್ರರಾಜನು ತಾನೇ ರಾಮಸೈನ್ಯಕ್ಕೆ ದಾರಿ ಬಿಟ್ಟುಕೊಡುತ್ತಾನೆ. ಪ್ರತಿಮಾನಾಟಕದ ಪಕ್ಕದಲ್ಲಿ ಈ ನಾಟಕ ಚಂದ್ರನ ಪಕ್ಕದ ಚಿಕ್ಕ ಚುಕ್ಕಿಯಂತೆ ಮಂಕಾಗಿ ಕಾಣುತ್ತದೆ.

**ಬಾಲಚರಿತ :—**

ಇದರಲ್ಲಿ ಕೃಷ್ಣನ ಬಾಲ್ಯಚರಿತ್ರೆ ಇದೆ. ಮೊದಲನೆಯ ಅಂಕದಲ್ಲಿ ವಸುದೇವನು ಕೃಷ್ಣನನ್ನು ಗೋಕುಲದಲ್ಲಿ ಬಿಟ್ಟು ನಂದಗೋಪನ ಹೆಣ್ಣು ಮಗುವಿನ ಶವವನ್ನು ತೆಗೆದುಕೊಂಡು ಹೊರಡುತ್ತಾನೆ ; ಆಗ ಅದಕ್ಕೆ ಜೀವ ಬಂದು ಕಾತ್ಯಾಯಿನಿಯಾಗುತ್ತಾಳೆ. ಎರಡನೆಯದರಲ್ಲಿ ತನ್ನನ್ನು ಕೊಲ್ಲಲು ಪ್ರಯತ್ನಿಸಿದ ಕಂಸನಿಗೆ ಕಾತ್ಯಾಯಿನಿಯು ಘೋರ ರೂಪವನ್ನು ತೋರಿಸುತ್ತಾಳೆ. ಮೂರನೆಯ ಅಂಕದಲ್ಲಿ ಧೇನುಕಾಸುರವಧೆಯು ರಂಗಸ್ಥಳದಲ್ಲಿ ನಡೆಯುತ್ತದೆ. ನಾಲ್ಕನೆಯದರಲ್ಲಿ ಕಾಳಿಂಗಮರ್ದನ ಮತ್ತು ಕಂಸನ ಆಹ್ವಾನ, ಐದನೆಯದರಲ್ಲಿ ಮುಷ್ಟಿಕ-ಚಾಣೂರರೊಡನೆ ಮಲ್ಲಯುದ್ಧ, ಕಂಸವಧೆ, ಉಗ್ರಸೇನನ ಪಟ್ಟಾಭಿಷೇಕಗಳು ಬಂದಿವೆ. ವಿಷ್ಣುಪೂಜೆಯಿಂದ ನಾಟಕ ಮುಗಿಯುತ್ತದೆ.

ಇದರಲ್ಲಿ ಭಾಗವತದ ದಶಮ ಸ್ಕಂಧದ ಕಥೆ ಪ್ರತಿಪಾದಿತವಾಗಿದೆಯೆಂದು ಸ್ಥೂಲವಾಗಿ ಹೇಳಬಹುದು. ಇಲ್ಲಿನ ಹಲವು ಸಂಗತಿಗಳು ಭಾಗವತಕ್ಕಿಂತ ಭಿನ್ನವಾಗಿರುವುದರಿಂದ ಕವಿಯು ಯಾವ ಆಧಾರದಿಂದ ವಸ್ತುವನ್ನು ತೆಗೆದುಕೊಂಡಿದ್ದಾನೆಂದು ಹೇಳಲಾಗುವುದಿಲ್ಲ. ಕೃಷ್ಣ

ಎಂಟನೆಯ ಮಗುವಲ್ಲ; ಏಳನೆಯವನು. ಮಧೂಕಋಷಿಯ ಶಾಪ ಚಂಡಾಲರೂಪಿಗಳಾದ ಅಲಕ್ಷ್ಮಿ, ಕಾಲರಾತ್ರಿ ಮುಂತಾದವರೊಡನೆ ಬಂದು ಕಂಸನ ಮನೆಯಲ್ಲಿ ನೆಲಸುತ್ತದೆ. ಕ್ಯಾತ್ಯಾಯಿನಿಯು ಕುಂಡೋದರ, ಶೂಲ ಮೊದಲಾದವರೊಡನೆ ಗೊಲ್ಲವೇಷದಿಂದ ಗೋಕುಲ ಸೇರುತ್ತಾಳೆ. ಈ ಪದ್ಯ ಶಿಶು, ಕೃಷ್ಣನ ಮಹತ್ವವನ್ನು ತಿಳಿಸುತ್ತದೆ—

ವಿಂಧ್ಯಮಂದರಸಾರೋಽಯಂ ಬಾಲಃ ಪದ್ಮದಲೇಕ್ಷಣಃ ।
ಗರ್ಭೇ ಯಯಾ ಧೃತಃ ಶ್ರೀಮಾನಹೋ ಧೈರ್ಯಂ ಹಿ ಯೋಷಿತಃ ॥

ನಂದನಗೋಪನ ಈ ರಾತ್ರಿವರ್ಣನೆ ಅನುಭವಸಿದ್ಧವೂ, ಸಹಜವೂ, ಸಮರ್ಪಕವೂ ಆದುದು—

ದುರ್ದಿನವಿನಷ್ಟಜ್ಯೋತ್ಸ್ನಾ ರಾತ್ರಿರ್ವರ್ತತೇ ನಿಮೀಲಿತಾಕಾರಾ ।
ಸಂಪ್ರಾವೃತಪ್ರಸುಪ್ತಾ ನೀಲನಿವಸನಾ ಯಥಾ ಗೋಪೀ ॥

**ಪಂಚರಾತ್ರ :—**

ಭಾರತಕಥಾ ನಾಟಕಗಳಲ್ಲಿ ಪಂಚರಾತ್ರ ಶ್ರೇಷ್ಠವಾದುದು. ಐದು ರಾತ್ರಿಗಳ ಅವಧಿಯ ವೃತ್ತಾಂತದ ಮೇಲೆ ರಚಿತವಾಗಿರುವುದರಿಂದ ಈ ನಾಟಕವನ್ನು ಪಂಚರಾತ್ರವೆಂದು ಕರೆಯಲಾಗಿದೆ. ಉತ್ತರ ಗೋಗ್ರಹಣದ ಕಥೆಯನ್ನುಳ್ಳ ಈ ರೂಪಕ ಮೂರು ಅಂಕಗಳ 'ಸಮವಕಾರ'ವಾಗಿದೆ. ದುರ್ಯೋಧನನು ಯಾಗದ ನಂತರ ದ್ರೋಣರಿಗೆ ಗುರುಪೂಜೆ ಸಲ್ಲಿಸಿ ಇಷ್ಟವಾದುದನ್ನು ಕೊಡುವುದಾಗಿ ಹೇಳಿದನು. ಅವರು ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡೆಂದು ಕೇಳಿದರು. ಶಕುನಿಯು 'ಐದು ರಾತ್ರಿಗಳೊಳಗೆ ಪಾಂಡವರ ವೃತ್ತಾಂತವನ್ನು ತರುವುದಾದರೆ ಕೊಡುತ್ತಾನೆ' ಎಂದನು. ಕೀಚಕವಧೆಯಿಂದ ಪಾಂಡವರು ವಿರಾಟನಗರದಲ್ಲಿರಬೇಕೆಂದು ಊಹಿಸಿ ಭೀಷ್ಮರು ಅದನ್ನು ಒಪ್ಪಿಕೊಳ್ಳುವಂತೆ ಸಲಹೆ ಮಾಡಿದರು. ವೈರವ್ಯಾಜದಿಂದ ಗೋಗ್ರಹಣ ನಡೆಯಿತು. ಜಯ ಉತ್ತರನ ಸಾರಥಿಯಾಗಿ ಹೊರಟ ಬೃಹನ್ನಳೆಗೆ ಲಭಿಸಿತು. ಕೌರವರು ಸೋತರು. ಭೀಷ್ಮದ್ರೋಣರು ತೃಪ್ತಿಗೊಂಡರು. ಉತ್ತರನಿಂದ ನಿಜವಾದ ವಿಚಾರ ಬೆಳಕಿಗೆ ಬಂದಿತು. ಅಭಿಮನ್ಯು–ಉತ್ತರೆಯರ ವಿವಾಹನಿಶ್ಚಿತಾರ್ಥದ ವಾರ್ತೆ ಕೌರವರ ಶಿಬಿರ ಮುಟ್ಟಿತು. ಮಾತಿನಂತೆ ದುರ್ಯೋಧನ ಅರ್ಧ ರಾಜ್ಯವನ್ನು ಕೊಟ್ಟೆನೆಂದನು.

ಇದರಲ್ಲಿರುವುದು ಮಹಾಭಾರತದ ವಿರಾಟಪರ್ವದ ಕಥೆ. ಹಳೆಯ ಕಥೆಯಾದರೂ, ಪ್ರಸಿದ್ಧ ಪಾತ್ರಗಳಾದರೂ ಭಾಸನ ಕುಂಚನದಿಂದ ಹೊಸತನ ಪಡೆದಿವೆ; ರಚನಾ ವಿಶೇಷದಲ್ಲಿ ಸೌಂದರ್ಯವಿದೆ; ಸ್ತ್ರೀ ಪಾತ್ರಗಳಿಲ್ಲ. ದ್ವೇಷಿಯೂ, ದುಷ್ಟನೂ ಆದ ದುರ್ಯೋಧನನಿಂದ ಗೋಗ್ರಹಣವಾಗಲಿಲ್ಲ; ಮಂಗಳಾಕಾಂಕ್ಷಿಗಳಾದ ಭೀಷ್ಮರು ಇದಕ್ಕೆ ಕಾರಣರು. ಶಿಷ್ಯನ ಕೈ ಚಳಕದಿಂದ ಗುರು–ಪಿತಾಮಹರು ಸಂತುಷ್ಟರಾದರು. ದುರ್ಯೋಧನನ ಈ ಯಾಗ ಮಹಾಭಾರತದಲ್ಲಿಲ್ಲ. ಕೌರವರೊಡನೆ ಕಿಶೋರನಾದ ಅಭಿಮನ್ಯುವೂ ಗೋಗ್ರಹಣದಲ್ಲಿ ಭಾಗವಹಿಸುತ್ತಾನೆ; ಅವನ ಬಂಧನಕ್ಕೆ ಬಂದ ಫಲ ಕನ್ಯಾರತ್ನ. ಉತ್ತರನ ಜಂಬ ಹೇಡಿತನಗಳ ಪರಿಹಾಸ್ಯ ಇಲ್ಲಿಲ್ಲ;



ಧಾರ್ಮಿಕ ವಾತಾವರಣದಲ್ಲಿ ಗಂಭೀರವಾಗಿ ಕಥೆ ಬೆಳೆದಿದೆ. ಘನತೆ, ಗಾಂಭೀರ್ಯ, ಶಾಂತಿ, ಶೌರ್ಯ, ಔದರ್ಯಗಳಿಂದ ಕೂಡಿದ, ಭೀಷ್ಮ, ದ್ರೋಣರನ್ನವಲಂಬಿಸಿ ರೂಪಗೊಂಡ ಈ ನಾಟಕದಲ್ಲಿ ದುರ್ಯೋಧನ ಉದಾತ್ತವ್ಯಕ್ತಿಯಾಗಿ ಕಂಗೊಳಿಸುತ್ತಾನೆ.

ನಾಟಕದ ಪ್ರಾರಂಭದಲ್ಲಿ ಯಾಗಾಗ್ನಿಯ ವಿಸ್ತೃತ ವರ್ಣನೆಯಿದೆ; ವರ್ಣನೆಯಲ್ಲಿ ಒಳ್ಳೆಯ ಚಮತ್ಕಾರವಿದೆ. ಇದೊಂದು ಚಿಕ್ಕ ಉದಾಹರಣೆ :—

ದಹ್ಯಮಾನಸ್ಯ ವೃಕ್ಷಸ್ಯ ಸಾನಿಲೇನ ಮುಖಾಗ್ನಿನಾ ।
ಕೋಟರಾಂತರದೇಹಸ್ಥಾಃ ಖಗಾಃ ಪ್ರಾಣಾ ಇವೋದ್ಗತಾಃ ॥

ಅಭಿಮನ್ಯುವಿನ ಬಂಧನವಾದಾಗ ದುರ್ಯೋಧನ ನುಡಿದ ಮಾತು ಅವನ ವ್ಯಕ್ತಿತ್ವವನ್ನು ಉಜ್ವಲಗೊಳಿಸುತ್ತದೆ; ತನ್ನಲ್ಲಿ ಜನ ದೋಷ ಎಣಿಸೀತೆಂದು ಅವನು ಹೆದರುತ್ತಾನೆ.

ಮಮ ಹಿ ಪಿತೃಭಿರಸ್ಯ ಪ್ರಸ್ತುತೋ ಜ್ಞಾತಿಭೇದಃ
ತದಿಹ ಮಯಿ ತು ದೋಷೋ ವಕ್ತೃಭಿಃ ಪಾತನೀಯಃ ।
ಅಥ ಚ ಮಮ ಸ ಪುತ್ರಃ ಪಾಂಡವಾನಾಂ ತು ಪಶ್ಚಾತ್
ಸತಿ ಕುಲವಿರೋಧೇ ನಾಪರಾಧ್ಯಂತಿ ಬಾಲಾಃ ॥

'ಧರ್ಮೇಣಾವರ್ಜಿತಾ ಭಿಕ್ಷಾ ಧರ್ಮೇಣೈವ ಪ್ರದೀಯತಾಂ' ಎಂದು ದ್ರೋಣರು ಕೇಳಿದಾಗ ಅವನಾಡಿದ ಮಾತು ಅವನ ಔನ್ನತ್ಯವನ್ನು ಮುಗಿಲೆತ್ತರ ಮುಟ್ಟಿಸುತ್ತದೆ—

ಬಾಢಂ ದತ್ತಂ ಮಯಾ ರಾಜ್ಯಂ ಪಾಂಡವೇಭ್ಯೋ ಯಥಾಪುರಂ ।
ಮೃತೇಽಪಿ ಹಿ ನರಾಃ ಸರ್ವೇ ಸತ್ಯೇ ತಿಷ್ಠಂತಿ ತಿಷ್ಠತಿ ॥

ಇವನ ಯಜ್ಞಾಚರಣೆಯ ಮಹತ್ವ ಅಷ್ಟಿಷ್ಟಲ್ಲ; ಅಗ್ನಿಗೆ ತೃಪ್ತಿ; ದ್ವಿಜರಿಗೆ ತೃಪ್ತಿ; ಪಕ್ಷಿಗಣ ಗೋಗಣಗಳಿಗೆ ತೃಪ್ತಿ; ಅವನ ಸದ್ಗುಣಗಳಿಂದ ಎಲ್ಲರಿಗೂ ತೃಪ್ತಿ. ಹುಲಿಗಳು ಹಿಂಸೆ ತ್ಯಜಿಸಿ ಹರಿಣಗಳಂತಾಗಿವೆ; ಸಿಂಹಗಳು ಗುಹೆಗಳಲ್ಲಿ ತೆಪ್ಪಗಿವೆ, 'ನೃಪೇ ದೀಕ್ಷಾಂ ಪ್ರಾಪ್ತೇಜಗದಪಿ ಸಮಂ ದೀಕ್ಷಿತಮಿವ'. ಈ ನಾಟಕದಲ್ಲಿ ಯಜ್ಞ ದುರ್ಯೋಧನನ ಕಳಂಕ ತೊಳೆದಿದೆ; ಲೋಕ ಮತ್ತು ಗುರುಹಿರಿಯರ ಅನುವರ್ತನೆ ಅವನಿಗೆ ಕೀರ್ತಿ ತಂದಿದೆ; ಸೋದರರಿಗೆ ರಾಜ್ಯ ಹಂಚಿದುದು ಅವನ ಭ್ರಾತೃತ್ವ, ಔದಾರ್ಯ, ಸತ್ಯಗಳನ್ನು ಬೆಳಗಿಸಿದೆ. ಪಾಂಡವರು ಕಾಡಿಗೆ ಹೋದಾಗ ಅಭಿಮನ್ಯು ಕೌರವರಲ್ಲಿ ಬೆಳೆಯುತ್ತಾನೆ. ದುರ್ಯೋಧನನ ಪರಾಕ್ರಮವೂ ಲೋಕಪ್ರಸಿದ್ಧವಾದುದು. 'ರಾಜ್ಞಾ ದೇಯಂ ಚಾಪಮಾತ್ರಂ ಸುತೇಭ್ಯಃ', 'ಸೌಭ್ರಾತೃತಾಂ ನ ಪ್ರತಿಷೇಧಯಾಮಿ', 'ಸಂಗ್ರಾಮಕಾಲೇಷು ವಯಂ ಸಹಾಯಾಃ' ಈ ಮುಂತಾದ ಕರ್ಣನ ಮಾತುಗಳು ಅವನ ಉದಾತ್ತ ವ್ಯಕ್ತಿತ್ವವನ್ನು ಸಾರುತ್ತವೆ. ಶಕುನಿ ಮಾತ್ರ ತನ್ನ ಕೀಳುತನವನ್ನು ಕಳೆದುಕೊಂಡಿಲ್ಲ. ತಂದೆತಾಯಿಗಳ ಭಾಗ್ಯದೋಷದಿಂದ ಬದ್ಧನಾದ ಅಭಿಮನ್ಯುವಿಗೂ, ಭೀಮಾರ್ಜುನರಿಗೂ ನಡೆಯುವ ಸಂಭಾಷಣೆ ಹೃದಯಸ್ಪರ್ಶಿಯಾಗಿದೆ.

ಈ ನಾಟಕದ ಪ್ರತಿಪಾತ್ರವೂ ಉಜ್ವಲ ; ಪ್ರತಿವಾತೂ ರಸಪೋಷಕ ; ಪ್ರತಿದೃಶ್ಯವೂ ರಮಣೀಯ. ಇದು ಆನಂದ, ಆದರ್ಶಗಳೆರಡನ್ನೂ ನೀಡುತ್ತದೆ ; ಆಕಾರದಿಂದ ಪುಟ್ಟದಾದರೂ ಮಹತ್ವದಿಂದ ಮಹಾನಾಟಕ.

ಬೃಹನ್ನಲೆಯು ವೇಷದಲ್ಲಿದ್ದುದರಿಂದ ಅರ್ಜುನನ ಗುರುತು ಅಭಿಮನ್ಯುವಿಗೆ ಸಿಕ್ಕಲಿಲ್ಲ. ದೀರ್ಘಕಾಲದ ನಂತರ ವೀರಪುತ್ರನನ್ನು ನೋಡಿ ಆತನೊಡನೆ ಸಂಭಾಷಿಸಿ ಅರ್ಜುನ ವಿನೋದ ಪಡುತ್ತಾನೆ. ಭೀಮಸೇನನಿಗೂ ವಿನೋದವೇ. ಸ್ವಾರಸ್ಯಪರಿಚಯಕ್ಕಾಗಿ ಸಂಭಾಷಣೆಯ ಕೆಲವು ಮಾತುಗಳನ್ನಿಲ್ಲಿ ಕೊಡಲಾಗಿದೆ :—

ಬೃಹನ್ನಲೆ—ಅಭಿಮನ್ಯು, ನಿನ್ನ ತಾಯಿ ಸುಖವೇ ?

ಅಭಿಮನ್ಯು—ಏನು, ತಾಯಿಯೇ? ಮೇಲೆ ಬಿದ್ದು ತಂದೆಯಂತೆ ಹೆಂಗಸರ ವಿಚಾರ ಕೇಳಲು ನೀನೇನು ಧರ್ಮರಾಜನೋ ? ಭೀಮಸೇನನೋ ? ಧನಂಜಯನೋ ?

ಬೃಹನ್ನಲೆ—ಅಭಿಮನ್ಯು, ಕೇಶವ ಕ್ಷೇಮವೇ ?

ಅಭಿಮನ್ಯು— ಏನು, ಭಗವಂತನನ್ನೂ ಹೆಸರು ಹಿಡಿದು ಕರೆಯುವೆಯಾ ? ಹೌದು, ಹೌದು ನಿಮ್ಮ ಬಂಧು ಕ್ಷೇಮ.

* * * *

ವಿರಾಟ—ಯಾರು ಇವನನ್ನು ಹಿಡಿದು ತಂದವರು ?

ಭೀಮಸೇನ—ಮಹಾರಾಜ, ನಾನು.

ಅಭಿಮನ್ಯು—' ನಿರಾಯುಧನಾಗಿ ' ಎಂದು ಹೇಳು.

ಭೀಮಸೇನ—ಭುಜವೇ ನನ್ನ ಆಯುಧ ; ನಾನು ಯುದ್ಧ ಮಾಡುವುದು ಅದರಿಂದಲೇ; ಕೈಲಾಗದವರಿಗೆ ಧನುಸ್ಸು.

ಅಭಿಮನ್ಯು—ನೀನೇನು ನನ್ನ ನಡುತಂದೆಯೋ ? ಈ ಮಾತು ಅವನಿಗೆ ಸಲ್ಲುತ್ತದೆ.

ಭಾಸನ ಸಂಭಾಷಣೆಗಳು ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ್ದು ಉಲ್ಲಾಸದಾಯಕವಾಗಿವೆ; ಹರ್ಷಾದಿ ಭಾವಗಳನ್ನು ಸುಂದರವಾಗಿ ಅಭಿವ್ಯಂಜಿಸುತ್ತವೆ. ಭಾಸನನ್ನು ' ಜ್ವಲನಮಿತ್ರ ' ನೆಂದು ಕರೆಯುತ್ತಾರೆ. ಯಜ್ಞಾಗ್ನಿ, ಲಾವಣಕಾಗ್ನಿ, ಸೀತೆಯ ಅಗ್ನಿಪ್ರವೇಶ ಮುಂತಾದುವು ಗಳಿಂದ ಅವನಿಗೆ ಈ ಹೆಸರು ಬಂದಿರಬಹುದು. ಅಥವಾ ಅಗ್ನಿಯಂತೆ ದೋಷ ಕಳೆದು ಗುಣ ಬೆಳಗಿಸುವ ಸ್ವಭಾವದಿಂದಲೂ ಈ ಖ್ಯಾತಿ ಬಂದಿರಬಹುದು.

ಮಧ್ಯಮವ್ಯಾಯೋಗ :—

ಭಾಸನದು ಮಧುರ ಮನೋಧರ್ಮ, ಅವನು ಹಿಂಸೆ, ಕ್ರೌರ್ಯ, ಮಾನಭಂಗ, ದೌರ್ಜನ್ಯಾದಿಗಳನ್ನು ವಿಸ್ತರಿಸಲು ಬಯಸುವುದಿಲ್ಲ. ಭಾರತದ ಅಂತಹ ಪ್ರಸಂಗಗಳನ್ನು ಬಿಟ್ಟು ತನ್ನ ಸ್ವಭಾವಕ್ಕೆಸಲ್ಲುವ ಪ್ರಸಂಗಗಳನ್ನು ಆಯ್ದುಕೊಂಡಿದ್ದಾನೆ. ಈ ಏಕಾಂತ ನಾಟಕದಲ್ಲಿ ಅರಣ್ಯ ಪರ್ವದ ಘಟನೆ ಇದೆ. ಭೀಮನು ಕುಂತಿಯ ಪುತ್ರರಲ್ಲಿ ಮಧ್ಯಮ. ಈ ' ಮಧ್ಯಮ ' ಕೇಶವ ದಾಸನೆಂಬ ಬ್ರಾಹ್ಮಣನ ' ಮಧ್ಯಮ ' ಪುತ್ರನನ್ನು ಬಿಡಿಸಲು ಹೋಗಿ ಮಗನಾದ ಘಟೋತ್ಕಚ



ನೊಡನೆ " ವ್ಯಾಯೋಗ " (ಜಗಳ) ದಲ್ಲಿ ತೊಡಗುವನು. ಆದ ರಿಂದ ಈ ನಾಟಕಕ್ಕೆ ಮಧ್ಯಮ ವ್ಯಾಯೋಗವೆಂಬ ಶೀರ್ಷಿಕೆ ಬಂದಿದೆ. ಮಹಾಭಾರತದ ಪಾತ್ರಗಳಾದರೂ ಘಟನೆ ಕಲ್ಪಿತ. ತಾಯಿಯಾದ ಹಿಡಿಂಬೆಯ ಪಾರಣೆಗೆ ಘಟೋತ್ಕಚನು ಬ್ರಾಹ್ಮಣಕುಟುಂಬದ ಬೆನ್ನು ಹತ್ತಿದನು. ಆ ಬ್ರಾಹ್ಮಣ ಗತ್ಯಂತರವಿಲ್ಲದೆ ತನ್ನ ಮಧ್ಯಮಪುತ್ರನನ್ನು ಒಪ್ಪಿಸಿದನು. ಕೊನೆಯ ಸಾರಿ ನೀರು ಕುಡಿಯಲು ಹೋಗಿ ತಡಮಾಡಿದ ಅವನನ್ನು ಘಟೋತ್ಕಚನು ಮಧ್ಯಮ, ಮಧ್ಯಮ ಎಂದು ಕೂಗಿದನು. ಅರಣ್ಯದಲ್ಲಿ ಹತ್ತಿರದಲ್ಲಿದ್ದ ಭೀಮನು ಕೂಡಲೇ ಬಂದನು. ಮಾತಿಗೆ ಮಾತು ಘಟಿಸಿ ಇಬ್ಬರಿಗೂ ಹೋರಾಟ ನಡೆದು ನಾಟಕ ತಂದೆ, ತಾಯಿ; ಮಕ್ಕಳ ಸಮಾಗಮದಲ್ಲಿ ಮುಗಿಯುತ್ತದೆ.

ಭೀಮನಿಂದ ಪಂಚರಾತ್ರದಲ್ಲಿ ಅಭಿಮನ್ಯುವಿನಂತೆ ಇಲ್ಲಿ ಘಟೋತ್ಕಚನೂ ಪರಾಜಿತ ನಾಗುತ್ತಾನೆ. ಮಗನ ಹಿಡಿತದ ಅನುಭವಗೊಂಡ ಅವನು ' ಭೋಃ ಸುಯೋಧನ, ವರ್ಧತೇ ತೇ ಶತ್ರುಪಕ್ಷಃ । ಕೃತರಕ್ಷೋ ಭವ ।' ಎನ್ನುತ್ತಾನೆ. ಬಹಳ ಕಾಲದಿಂದ ಬಯಸಿದ್ದ ಊಟ ಬಂದಾಗ ಹಿಡಿಂಬೆ ಘಟೋತ್ಕಚರಲ್ಲಿ ನಡೆಯುವ ಸಂಭಾಷಣೆ ಹೃದ್ಯವಾಗಿದೆ. ಈ ನಾಟಕದಲ್ಲಿ ತಂದೆ, ತಾಯಿ, ಮಕ್ಕಳ ಮಧುರ ಸ್ನೇಹದ ಸುಂದರ ಚಿತ್ರಣವಿದೆ.

ದೂತವಾಕ್ಯ :—

ಇದು ಸ್ತ್ರೀಪಾತ್ರ ಮತ್ತು ಪ್ರಾಕೃತಗಳಿಲ್ಲದ ಒಂದು ಏಕಾಂಕನಾಟಕ, ಇದರಲ್ಲಿ ಉದ್ಯೋಗ ಪರ್ವದ ವೃತ್ತಾಂತವಿದೆ. ಲೋಕವಿನಾಶಕಾರಿಯಾದ ಘೋರ ಯುದ್ಧವನ್ನು ತಡೆಗಟ್ಟಲು ಭಗವಂತನಾದ ಕೃಷ್ಣನೇ ದುರ್ಯೋಧನನ ಸಭೆಗೆ ದೂತನಾಗಿ ಹೋಗುತ್ತಾನೆ. ತನ್ನನ್ನು ಬಂಧಿಸಲು ಪ್ರಯತ್ನಿಸಿದಾಗ ವಿಶ್ವರೂಪ ತಾಳುತ್ತಾನೆ. ಸಂದರ್ಶನ ಸಮೀಪಿಸುತ್ತದೆ. ಧೃತರಾಷ್ಟ್ರನ ಭಕ್ತಿಯಿಂದ ಕೃಷ್ಣನು ಶಾಂತನಾಗಿ ಹಿಂದಿರುಗುತ್ತಾನೆ. ಕೃಷ್ಣ, ದುರ್ಯೋಧನ ಇಬ್ಬರೇ ಪ್ರಧಾನಪಾತ್ರಗಳು. ಧೃತರಾಷ್ಟ್ರ, ಸುದರ್ಶನಾದಿಗಳು ಕ್ಷಣಕಾಲ ಮಾತ್ರ ಕಾಣಿಸಿ ಕೊಳ್ಳುತ್ತಾರೆ. ಕೃಷ್ಣದುರ್ಯೋಧನರ ವಾಗ್ಯುದ್ಧ ತುಂಬ ಚಮತ್ಕಾರವಾಗಿದೆ. ಈ ನಾಟಕದಲ್ಲಿ ಎಲ್ಲರ ದೃಷ್ಟಿ ಕೃಷ್ಣನ ಮೇಲಿರುತ್ತದೆ.

ದೂತಘಟೋತ್ಕಚ :—

ಕುರುಕ್ಷೇತ್ರಯುದ್ಧದಲ್ಲಿ ಅಭಿಮನ್ಯು ಹತನಾದನು. ಇದು ವಂಶಕ್ಷಯಕಾರಕವಾದ ' ಶಿಶುವಧ ' ವೆಂದು ಧೃತರಾಷ್ಟ್ರನು ಮರುಗಿದನು. ಮರುದಿನ ಸೂರ್ಯಾಸ್ತದೊಳಗೆ ಸೈಂಧವ ನನ್ನು ಕೊಲ್ಲುವೆನೆಂದು ಅರ್ಜುನ ಪ್ರತಿಜ್ಞೆಮಾಡಿದನು. ಘಟೋತ್ಕಚ ಈ ವಾರ್ತೆಯನ್ನು ಕೌರವರಿಗೆ ತಲುಪಿಸಿದನು. ಇದು ದ್ರೋಣಪರ್ವದ ಆಧಾರದ ಮೇಲೆ ರಚಿತವಾದ ಈ ಏಕಾಂಕನಾಟಕದ ವಸ್ತು.

ಇದರಲ್ಲಿ ಧೃತರಾಷ್ಟ್ರ ಗಂಭೀರವಾದ ಆಕಾರ ಮತ್ತು ಸ್ವಭಾವಗಳನ್ನುಳ್ಳವನು. ಅವನಿಗೆ ಕೃಷ್ಣನಲ್ಲಿ ವಿಶೇಷಭಕ್ತಿ. ಧೃತರಾಷ್ಟ್ರಗಾಂಧಾರಿಯರು ಅಭಿಮನ್ಯುವಿನ ಮರಣದಿಂದ ಮರುಗಿಸುತ್ತಾರೆ. ದುಃಶಲೆಯು ' ಅಹಮಪಿ ಗಮಿಷ್ಯಾಮಿ ವಧ್ವಾ ಉತ್ತರಾಯಾಃ ಸಕಾಶಂ '

ಘಟೋತ್ಕಚ ರಾಕ್ಷಸನಾದರೂ ಎಂಬ ಮಾತಿನಿಂದ ಅವಳ ಭಯ ವ್ಯಕ್ತವಾಗುತ್ತದೆ. ಅವನು ಯುದ್ಧವು ದ್ಯೂತವಾಗಲೀ, ರಾಜ್ಯತಂತ್ರವಾಗಲೀ ಅಲ್ಲ; ಸಮುದಾಚಾರಸಂಪನ್ನ. 'ಪ್ರಾಣಾಃ ಪಣೋಽತ್ರ ರತಿರುಗ್ರಬಲೈಶ್ಚ ಬಾಣೈಃ' ಎಂದು ಶಕುನಿಯನ್ನು ಎಚ್ಚರಿಸುತ್ತಾನೆ. ಕೋಪಿಸಿಕೊಂಡ ದುರ್ಯೋಧನ 'ವಯಮಪಿ ಖಲು ರೌದ್ರಾ ರಾಕ್ಷಸೋಗ್ರಸ್ವಭಾವಾಃ' ಎಂದು ಗದರಿಸುತ್ತಾನೆ. ಆಗ ಘಟೋತ್ಕಚ ಕೊಟ್ಟ ಉತ್ತರ ಮನನೀಯವಾದುದು—

ನ ತು ಜತುಗೃಹೇ ಸುಪ್ತಾನ್ ಭ್ರಾತೄನ್ ದಹಂತಿ ನಿಶಾಚರಾಃ ।
ಶಿರಸಿನ ತಥಾ ಭ್ರಾತುಃ ಪತ್ನೀಂ ಸ್ಪೃಶಂತಿ ನಿಶಾಚರಾಃ ।
ನ ಚ ಸುತವಧುಂ ಸಂಖ್ಯೇ ಕರ್ತುಂ ಸ್ಮರಂತಿ ನಿಶಾಚರಾಃ
ವಿಕೃತವಪುಷೋಽಪ್ಯುಗ್ರಾಚಾರಾ ಘೃಣಾ ನ ತು ವರ್ಜಿತಾ॥

ನಾಟಕ ಜನಾರ್ದನನ ಈ ಪಶ್ಚಿಮಸಂದೇಶದಿಂದ ಮುಗಿಯುತ್ತದೆ—

ಜಾತ್ಯೋಪದೇಶ ಇವ ಪಾಂಡವರೂಪಧಾರೀ ।
ಸೂರ್ಯಾಂಶುಭಿಃ ಸಮಮುಪೈಷ್ಯತಿ ವಃ ಕೃತಾಂತಃ ॥

**ಕರ್ಣಭಾರ :—**

ಇದು ಕರ್ಣಪರ್ವದ ಆಧಾರದ ಮೇಲೆ ರಚಿತವಾದ ಏಕಾಂಕನಾಟಕ. ಭಾಸ್ವರನೂ, ಗುರು ಸಮರಾಗ್ರಗಣ್ಯನೂ, ಶೂರನೂ ಆದ ಕರ್ಣ ತಾನು ತಾಯಿಗೆ ಕೊಟ್ಟ ಮಾತಿನಿಂದ, ಗುರು ತನಗೆ ಕೊಟ್ಟ ಶಾಪದಿಂದ ನಿರ್ವೀರ್ಯನಾಗಿದ್ದರೂ ಸತ್ತರೆ ಸ್ವರ್ಗ, ಗೆದ್ದರೆ ಕೀರ್ತಿಯೆಂಬ ದೃಢನಿರ್ಧಾರದಿಂದ ರಣಭೂಮಿಯ ಕಡೆಗೆ ಹೊರಡುತ್ತಾನೆ. ಆಗಲೂ ಶಕ್ರನು ಬ್ರಾಹ್ಮಣ ವೇಷದಿಂದ ಬಂದು ಕವಚ, ಕರ್ಣಕುಂಡಲಗಳನ್ನು ಬೇಡುತ್ತಾನೆ. ಇದು ವಂಚನೆಯೆಂದು ತಿಳಿದರೂ, ಮಹಾದಾನಿಯಾದ ಅವನು 'ಹುತಂ ಚ ದತ್ತಂ ಚ ತಥೈವ ತಿಷ್ಠತಿ' ಎಂದು ಅವುಗಳನ್ನು ಕೊಟ್ಟು ಅರ್ಜುನನ ಕಡೆಗೆ ವೀರಾವೇಶದಿಂದ ನುಗ್ಗುತ್ತಾನೆ. ಈ ನಾಟಕದಲ್ಲಿ ಔದಾರ್ಯ, ಪರಾಕ್ರಮಗಳಿಂದ ಬೆಳಗುವ ಕರ್ಣ ಚಿತ್ರಿತನಾಗಿದ್ದಾನೆ; ಅವನು ಮರಣ ವೃತ್ತಾಂತವಿಲ್ಲ.

**ಊರುಭಂಗ :—**

ಈ ಏಕಾಂಕದ ರುದ್ರನಾಟಕದಲ್ಲಿ ಶಲ್ಯಪರ್ವದ ಕಥೆಯಿದೆ. ದುರ್ಯೋಧನ ಸತ್ತು ಭೀಮನ ಪ್ರತಿಜ್ಞೆ ಮುಗಿಯುವತನಕ ಕುರುಸಮರ ನಿಲ್ಲದು. ಬಳಲಿದ್ದರೂ,ನಿರಾಶನಾಗಿದ್ದರೂ, ವೀರ ದುರ್ಯೋಧನ ಪಾಂಡವರ ಬಲಾತ್ಕಾರದಿಂದ ಗದೆಯನ್ನು ಹಿಡಿದು ಏಕಾಕಿಯಾಗಿ ಹೋರಾಡಿ ಮಡಿದನು. ದೈವಪ್ರಾತಿಕೂಲ್ಯ, ಕೃಷ್ಣನ ಕುಹಕಗಳು ಅವನನ್ನು ಆಹುತಿ ತೆಗೆದುಕೊಂಡವು. ಭೀಮನು ಬಿದ್ದಾಗ 'ನ ತು ಭೀಮ ದೀನು ವೀರೋ ನಿಹಂತಿ ಸಮರೇಷು ಭಯಂ ತ್ಯಜ' ಎಂದು ಹೇಳುವ ಮಾತು ಅವನ ದಿಟ್ಟತನ ಮತ್ತು ಸಮರ ಧರ್ಮಗಳಿಗೆ ಸಾಕ್ಷಿ. ಇದಕ್ಕೆ ದೊರೆತ ಫಲ—'ತ್ಯಕ್ತ್ವಾ ಧರ್ಮಘೃಣಾಂ ವಿಹಾಯ ಸಮಯಂ ಕೃಷ್ಣಸ್ಯ ಸಂಜ್ಞಾಸಮಂ । ಗಾಂಧಾರೀತನಯಸ್ಯ ಪಾಂಡುತನಯೇನೋರ್ವೋರ್ವಿಮುಕ್ತಾ ಗದಾ ॥' ಚಕ್ರವರ್ತಿಯಾದರೂ. ಹನ್ನೊಂದು ಅಕ್ಷೌಹಿಣೀ ಸೇನೆಗೆ ಒಡೆಯನಾದರೂ. ಕೊನೆಗಾಲದಲ್ಲಿ



ತೊಡೆ ಮುರಿದು, ಸಾಧಾರಣನಂತೆ ಮಣ್ಣಿನಲ್ಲಿ ಹೊರಳಾಡಿ ನಿಸ್ಸಹಾಯಕನಾಗಿ ಸಾಯುವ ದೃಶ್ಯ ಯಾರ ಮನಸ್ಸನ್ನು ಕರಗಿಸುವುದಿಲ್ಲ? ಕವಿಯು ನೂರುಮಂದಿ ಮಕ್ಕಳನ್ನು ಕಳೆದ ಕೊಂಡ, ಅಂಧರೂ, ವೃದ್ಧರೂ ಆದ ತಂದೆತಾಯಿಗಳನ್ನೂ, ಧರ್ಮಪತ್ನಿಯರಾದ ಮಾಲವಿ. ಪೌರವಿಯರನ್ನೂ, ಮುದ್ದು ಕಂದನಾದ ದುರ್ಜಯನನ್ನೂ, ಮರಣೋನ್ಮುಖನಾದ ದುರ್ಯೋಧನನ ಹತ್ತಿರಕ್ಕೆ ಕರೆತಂದು ಮೊದಲೇ ದಾರುಣವಾಗಿದ್ದ ದುಃಖವನ್ನು ದಾರುಣತರ ಗೊಳಿಸಿದ್ದಾನೆ. ಅರಿಯದ ಮಗ, ಸಾವ ತಂದೆ—ಇವರ ಸಂಭಾಷಣೆಯಿಂದ ಕರುಣೆಯ ಕೋಡಿಯನ್ನು ಹರಿಸಿದ್ದಾನೆ :—

ದುರ್ಜಯಃ—ಕುತ್ರ ನು ಖಲು ಮಹಾರಾಜೋ ಗಮಿಷ್ಯತಿ ?
ರಾಜಾ—ಭ್ರಾತೃಶತಮನುಗಚ್ಛಾಮಿ ।
ದುರ್ಜಯಃ—ಮಾಮಪಿ ತತ್ರ ನಯ ।
ರಾಜಾ—ಗಚ್ಛ ಪುತ್ರ । ಏವಂ ವೃಕೋದರಂ ಬ್ರೂಹಿ ।

ಈ ನಾಟಕದ ದುರ್ಯೋಧನನಿಗೆ ಜ್ಞಾನೋದಯವಾಗಿದೆ; ದ್ವೇಷ ಅಳಿದಿದೆ. ಪಿತೃ ಪಿತಾಮಹರು, ಕರ್ಣನನ್ನು ಮುಂದುಮಾಡಿಕೊಂಡು ಸೋದರರು, ಇಂದ್ರನ ಕೈಹಿಡಿದ ಅಭಿಮನ್ಯು, ಅಪ್ಸರೆಯರು ಅವನನ್ನು ಎದುರುಗೊಳ್ಳುತ್ತಾರೆ; ಕಾಲನು ಕಳುಹಿಸಿದ ವೀರವಾಹಿ ವಿಮಾನ ಹತ್ತಿ ಅವನು ಸ್ವರ್ಗಕ್ಕೆ ತೆರಳುತ್ತಾನೆ.

ಯೂರಿಪಿಡೀಸ್, ಈಸ್ಕಿಲಸ್, ಸೋಫೋಕ್ಲಿಸ್, ಷೇಕ್ಸ್ಪಿಯರ್ ಮುಂತಾದವರು ತಮ್ಮ ರುದ್ರನಾಟಕಗಳಿಂದ ಶಾಶ್ವತ ಕೀರ್ತಿ ಗಳಿಸಿದ್ದಾರೆ. ಸಂಸ್ಕೃತಸಾಹಿತ್ಯದಲ್ಲಿ ರುದ್ರನಾಟಕ ಸದೃಶ ರಚನೆಯ ಕೀರ್ತಿ ಭಾಸನೊಬ್ಬನಿಗೇ ಸಲ್ಲುತ್ತದೆ. ರುದ್ರನಾಟಕದಲ್ಲಿ ತೇಜಸ್ವಿಯೂ ಗುಣಸಂಪನ್ನನೂ ಆದ ನಾಯಕನು, ತನ್ನ ಒಂದಾನೊಂದು ಪ್ರಮಾದದಿಂದ. ಬತ್ತಿಯನ್ನು ಕಳೆದುಕೊಂಡ ದೀಪ ನಂದುವಂತೆ, ವಿಧಿಕೋಪಕ್ಕೆ ತುತ್ತಾಗಿ ಅವಸಾನ ಹೊಂದುತ್ತಾನೆ. ಅವನ ಗುಣಗಳು ಮಂಕಾಗುತ್ತವೆ; ದೋಷ ಮಾತ್ರ ಎದ್ದು ಕಾಣುತ್ತದೆ. ವಿಧಿಗೂ ಸೆಟೆದು ನಿಂತ ಅವನಿಗೆ ಅವನ ಮರಣ ಅಥವಾ ಪರಾಜಯಕಾಲದಲ್ಲಿ ಜ್ಞಾನೋದಯವಾಗುತ್ತದೆ. ಆದರೆ ಕಾಲ ಮೀರಿರುತ್ತದೆ. ಪಶ್ಚಾತ್ತಾಪದಿಂದ ಅಂತ್ಯವನ್ನು ಕಾಣುವ ಅವನು ಪ್ರೇಕ್ಷಕರ ಹೃದಯಗಳಲ್ಲಿ ಕರುಣೆಯನ್ನು ಹರಿಸುತ್ತಾನೆ. ಈ ಲಕ್ಷಣಗಳಲ್ಲಿ ಕೆಲವು ಊರುಭಂಗದ ನಾಯಕನಾದ ದುರ್ಯೋಧನನಲ್ಲಿದೆ. ಅವನು ಕೃಷ್ಣನ ಕೋಪಕ್ಕೆ ಪಾತ್ರನಾಗುತ್ತಾನೆ. ಗದಾಯುದ್ಧದಲ್ಲಿ ಹರಿಯೇ ಭೀಮನ ಗದೆಯನ್ನು ಪ್ರವೇಶಿಸಿ ಅವನ ಪ್ರಾಣವನ್ನು ಅಪಹರಿಸುತ್ತಾನೆ. 'ತೀವ್ರಾಂ ಭೀಮಗದಾಂ ಪ್ರವಿಶ್ಯ ಸಹಸಾ ನಿರ್ವ್ಯಾಜಯುದ್ಧಪ್ರಿಯಃ । ತೇನಾಹಂ ಜಗತಃ ಪ್ರಿಯೇಣ ಹರಿಣಾ ಮೃತ್ಯೋಃ ಪ್ರತಿಗ್ರಾಹಿತಃ ॥' ಎಂದು ದುರ್ಯೋಧನನೇ ಬಲದೇವನಿಗೆ ಹೇಳುತ್ತಾನೆ. ಅವನು ಯುಧಿಷ್ಠಿರನನ್ನು ವಂದಿಸಿ, ಪಾಂಡವರೊಡನೆ ಕೂಡಿ ಕೊಂಡು, ತನಗೆ ತರ್ಪಣೋದಕವನ್ನು ಕೊಡೆಂದು ದುರ್ಜಯನಿಗೆ ಹೇಳಿ ತನಗಾದುದು

'ಅಪರಿತೋಷ'ದ ಫಲವೆಂದೂ, ದ್ಯೂತವಂಚನೆ, ದ್ರೌಪದೀಮಾನಭಂಗ, ಪಾಂಡವರ ವನ ನಿರ್ಗಮನ, ಅಭಿಮನ್ಯು ಹನನಾದಿಗಳು ದೊಡ್ಡ ದೋಷಗಳೆಂದೂ ಅಶ್ವತ್ಥಾಮನಿಗೆ ಹೇಳಿ, ಪಶ್ಚಾತ್ತಾಪ ದಗ್ಧ ಹೃದಯನಾಗಿ ಸಾಯುತ್ತಾನೆ. ಸಾಮಾನ್ಯವಾಗಿ ಸಂಸ್ಕೃತ ನಾಟಕಗಳು ಸುಖಾಂತಗಳು ; ಇದು ದುಃಖಾಂತ ನಾಟಕ.

## ಕಾಳಿದಾಸ

### (ಕ್ರಿ. ಶ. ಸುಮಾರು 400)

ವರಕವಿ, ಕವಿಕುಲಗುರು—ಎಂಬ ಶ್ಲಾಘನೆಗೆ* ಪಾತ್ರನಾಗಿ ಅಮರ ಕೃತಿಗಳನ್ನು ರಚಿಸಿ ಸಂಸ್ಕೃತಸಾಹಿತ್ಯಕ್ಕೆ ಶಾಶ್ವತಕೀರ್ತಿಯನ್ನು ಗಳಿಸಿಕೊಟ್ಟಕಾಳಿದಾಸನ ಕಾಲ. ದೇಶ, ಜೀವಿತಾದಿಗಳು ಇಂದಿಗೂ ನಿಶ್ಚಿತವಾಗಿಲ್ಲ. ಅವನ ಕಾವ್ಯಗಳು ವಿಶ್ವಮನ್ನಣೆ ಪಡೆದಿವೆ, ಅಭಿಜ್ಞಾನ ಶಾಕುಂತಲವು ಜಗತ್ತಿನ ಬೆಳೆದ ಭಾಷೆಗಳಿಗೆಲ್ಲಾ ಭಾಷಾಂತರಗೊಂಡಿದೆ, ಮೊಟ್ಟಮೊದಲಿಗೆ ಇದನ್ನು ಸರ್ ವಿಲಿಯಂ ಜೋನ್ಸ್ ಅವರು 1789ರಲ್ಲಿ ಪಾಶ್ಚಾತ್ಯ ಭಾಷೆಗೆ ಅನುವಾದಿಸಿದರು. ಕಾಳಿದಾಸನನ್ನು ಕುರಿತು; ಅಪಾರ ವಿಚಾರ ಸಾಹಿತ್ಯ ಬೆಳೆದಿದೆ. ಸಂಶೋಧಕ ವಾದ ವಿವಾದಗಳಿಗೇನೂ ಕಡಿಮೆಯಿಲ್ಲ, ಆದರೆ ಪ್ರಯತ್ನಕ್ಕೆ ತಕ್ಕ ಫಲ ದೊರೆತಿಲ್ಲ. ಶಾಸನವೇ ಮೊದಲಾದ ಬಾಹ್ಯ ಸಾಧನದಿಂದಲೂ ಕಾವ್ಯಗತ ಸಾಮಗ್ರಿಯಿಂದಲೂ ಕವಿಯ ಕಾಲ, ದೇಶಾದಿಗಳನ್ನು ಕಾಣಲು ಹೊರಟ ಫಲವಾಗಿ ಮೂಡಿರುವ ಹಲವು ಮತಗಳಲ್ಲಿ ಪ್ರಧಾನವಾಗಿ ಎರಡು ಮತಗಳನ್ನಿಲ್ಲಿ ಪ್ರಸ್ತಾಪಿಸಲಾಗುವುದು.

ಮಹಾಪುರುಷರ ವಿಷಯದಲ್ಲಿ ಪವಾಡ ಕಥೆಗಳು ಹುಟ್ಟಿಕೊಂಡಿರುವಂತೆ ಕಾಳಿದಾಸನ ವಿಷಯದಲ್ಲಿಯೂ ಹಲವು ದಂತ ಕಥೆಗಳು ಪ್ರಚಾರದಲ್ಲಿವೆ. ಇವು ಕಥೆ ಕಟ್ಟಿದವರ ಸರಳತೆ, ಕುತೂಹಲ, ಅವಿಮರ್ಶಬುದ್ಧಿ ಮತ್ತು ಕವಿಯ ಬಗ್ಗೆ ಮೆಚ್ಚುಗೆಗಳನ್ನು ಪ್ರಕಟಿಸುತ್ತವೆಯೇ ಹೊರತು, ಕವಿಯ ಕಾಲ, ದೇಶ, ವ್ಯಕ್ತಿತ್ವಾದಿಗಳ ನಿರ್ಣಯಕ್ಕೆ ಯೋಗ್ಯಪ್ರಮಾಣಗಳಾಗುವುದಿಲ್ಲ. ಕಾಳಿದಾಸನು ದಡ್ಡ ಶಿಖಾಮಣಿಯಾದ ಕುರುಬನಾಗಿದ್ದು, ಮಂತ್ರಿಯ ನೆರವಿನಿಂದ ಪ್ರಾಜ್ಞಳಾದ ರಾಜಕುಮಾರಿಯನ್ನು ಮದುವೆಯಾಗಿ ಕಾಳಿಯ ವರದಿಂದ ಕವಿಯಾದನೆಂಬ ಒಂದು ಕಥೆ ಇದೆ,

---

* 1. ಪುರಾ ಕವೀನಾಂ ಗಣನಾ ಪ್ರಸಂಗೇ ಕನಿಷ್ಠಿಕಾಧಿಷ್ಠಿತ ಕಾಲಿದಾಸಾ
ಅದ್ಯಾಪಿ ತತ್ತುಲ್ಯ ಕವೇರಭಾವಾದನಾಮಿಕಾ ಸಾರ್ಥವತೀ ಬಭೂವ ॥

2. ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿ ಚ ಶಕುಂತಲಾ
ತತ್ರಾಪಿಚ ಚತುರ್ಥೋಂಕಸ್ತತ್ರ ಶ್ಲೋಕ ಚತುಷ್ಟಯಮ್

3. ಕವಿಕುಲಗುರುಃ ಕಾಲಿದಾಸೋ ವಿಲಾಸಃ '—ಜಯದೇವ

4. ನಿರ್ಗತಾಸು ನ ವಾ ಕಸ್ಯ ಕಾಲಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರ ಸಾಂದ್ರಾಸು ಮಂಜರೀಷ್ವಿವ ಜಾಯತೇ ॥ ಬಾಣ ॥



ವೇದ, ಶಾಸ್ತ್ರ, ಪುರಾಣಾದಿಗಳ ಪರಿಚಯವಿರುವ, ಕಾವ್ಯರಚನೆಯಲ್ಲಿ ಸಿದ್ಧಿ ಪಡೆದು ರಸಋಷಿಯೆನಿಸಿದ ಕಾಳಿದಾಸನನ್ನು ಕ್ಷಣ ಮಾತ್ರದಲ್ಲಿ ಕಾಳಿಯ ಬೀಜಾಕ್ಷರದ ಪ್ರಭಾವದಿಂದ ಮಹಾಕವಿಯಾದನೆಂದು ಹೇಳಿದರೆ ನಂಬುವುದು ಹೇಗೆ ಸಾಧ್ಯ, ಇದು ಕಾಳಿದಾಸನೆಂಬ ಹೆಸರನ್ನೂ, ವರಕವಿ ಎಂಬ ಕೀರ್ತಿಯನ್ನೂ ಅವಲಂಬಿಸಿ ಕೈಕಾಲು ಬೆಳೆದು ಆಗಿರುವ ಕಥೆಯಾಗಿ ತೋರುತ್ತದೆ. ಧಾರಾನಗರಿಯ ಭೋಜನ (ಕ್ರಿ. ಶ. 11ನೇ ಶ.ಮಾ.)ಆಸ್ಥಾನಕವಿಯಾಗಿದ್ದು ಸಮಸ್ಯಾ ಪೂರಣ ಮಾಡುತ್ತಿದ್ದನೆಂಬುದು ಮತ್ತೊಂದು ಕಥೆ. ಕಾಳಿದಾಸನು ಇಷ್ಟು ಅರ್ವಾಚೀನನಲ್ಲವೆಂಬುದಕ್ಕೆ ಸಾಕಷ್ಟು ಪ್ರಮಾಣಗಳಿವೆ. ಸ್ವತಃ ಕವಿಯೂ, ಕವಿಗಳಿಗೆ ಆಶ್ರಯದಾತನೂ ಆಗಿದ್ದ ಭೋಜ ರಾಜನ ಆಸ್ಥಾನದಲ್ಲಿ ಕಾಳಿದಾಸನಂತಹ ಕವಿಯಿದ್ದರೆ ಶೋಭಿಸುತ್ತದೆಂದು ಭಾವಿಸಿ ಯಾರೋ ಈ ಕಥೆಯನ್ನು ಕಟ್ಟಿರಬೇಕು. ಕಾಳಿದಾಸನು ಭವಭೂತಿಯ (ಕ್ರಿ. ಶ. 8ನೇ ಶ. ಮಾ.)ಸಮಕಾಲೀನನೆಂದೂ, "ಅವಿದಿತಗತ ಯಾಮಾ ರಾತ್ರಿ ರೇವಂವ್ಯರಂ ಸೀತ್ "ಎಂಬ ಭವಭೂತಿಯ ಮಾತನ್ನು "ರಾತ್ರಿರೇವ ವ್ಯರಂ ಸೀತ್ " ಎಂದು ತಿದ್ದಿದನೆಂದೂ ಒಂದು ಹೇಳಿಕೆಯಿದೆ, ಇದಕ್ಕೆ ಯಾವ ಆಧಾರವೂ ಇಲ್ಲ. ಕಾಳಿದಾಸನನ್ನು ಪ್ರೀತಿಸುವವನು ಅರ್ಥಪುಷ್ಟಿಯ ದೃಷ್ಟಿಯಿಂದ ತಿದ್ದಿ ಈ ಕಥೆ ಕಟ್ಟಿರಬೇಕು.

ಕುಮಾರದಾಸನ ಕಾಲದಲ್ಲಿ ಸಿಂಹಳ ದ್ವೀಪಕ್ಕೆ ಹೋಗಿ ಅಲ್ಲಿ ವೇಶ್ಯಾ ಗೃಹದಲ್ಲಿ ಹತನಾದನೆಂಬ ಇನ್ನೊಂದು ಕಥೆಯಿದೆ. ಕುಮಾರದಾಸನ ಕಾಲ ಕ್ರಿ. ಶ. 6ನೇ ಶತಮಾನ, ಕಾಳಿದಾಸನು ಇನ್ನೂ ಹಿಂದಿನವನೆಂಬುವಕ್ಕೆ ಆಧಾರಗಳಿವೆ, ವೇಶ್ಯಾಸಂಬಂಧವಾದ ಆಭಾಸದ ಕಥೆಗಳಿಗೆ ಅವನ ಕಾವ್ಯಗಳ ಶೃಂಗಾರ ಕಾರಣವಾಗಿರಬಹುದು.

ಕಾಳಿದಾಸನು ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲಿ ಒಬ್ಬನೆಂಬ ಹೇಳಿಕೆಯಿಂದೆ :—

ಧನ್ವಂತರಿ ಕ್ಷಪಣಕಾಮರಸಿಂಹ ಶಂಕು
ವೇತಾಳಭಟ್ಟಘಟಕರ್ಪರ ಕಾಳಿದಾಸಾಃ ।
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ
ರತ್ನಾನಿ ವೈ ವರರುಚಿರ್ನವವಿಕ್ರಮಸ್ಯ ॥

ಧನ್ವಂತರಿ ಕ್ಷಪಣಾಕಾದಿಗಳು ಭಿನ್ನ ಭಿನ್ನ ಕಾಲದವರು, ಅವರೆಲ್ಲರ ಕಾಲವು ಗೊತ್ತಿಲ್ಲ ವರಾಹ ಮಿಹಿರನು ಕ್ರಿ. ಶ. 587 ರಲ್ಲಿ ಕಾಲವಾದನೆಂದು ಹೇಳಲು ಆಧಾರವಿದೆ. ಮಿಕ್ಕವರೂ ಸುಮಾರು ಇದೇ ಕಾಲದವರೆಂದು ಸಾಧಿಸಿದರೂ ಕಾಳಿದಾಸನು ಇಷ್ಟು ಈಚಿನವನಲ್ಲವೆಂಬುದಕ್ಕೆ ಪ್ರಮಾಣಗಳಿವೆ. ನವಮಣಿಗಳನ್ನು ಆಯ್ದು ಒಟ್ಟುಗೂಡಿಸಿದವನ ಬುದ್ಧಿಯನ್ನು ಮೆಚ್ಚಬಹುದಾದರೂ ಈ ಹೇಳಿಕೆಯು ಕಾಳಿದಾಸನ ನಿರ್ಣಯಕ್ಕೆ ಸಾಧು ಪ್ರಮಾಣವಲ್ಲ, ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದನೆಂಬ ಅಂಶವೂ ವಿಚಾರಾರ್ಹ, ಭರತಖಂಡದಲ್ಲಿ ಈ ಬಿರುದಿನ ಹಲವು ದೊರೆಗಳಿದ್ದರು ಕ್ರಿ. ಪೂ. 57ರಲ್ಲಿ ಶಕರನ್ನು ಗೆದ್ದು ತನ್ನ ಶಕೆಯನ್ನು ಪ್ರಾರಂಭಿಸಿದ ವಿಕ್ರಮಾದಿತ್ಯನೇ ನವಮಣಿಗಳ ಪೋಷಕನೆಂಬುದು ಸಂಪ್ರದಾಯದಿಂದ ಬಂದ ನಂಬಿಕೆ ಕಾಳಿದಾಸನು ಇಷ್ಟು ಪ್ರಾಚೀನನೆಂಬುದನ್ನು ಪಾಶ್ಚಾತ್ಯ ವಿದ್ವಾಂಸರು ಒಪ್ಪುವುದಿಲ್ಲ.

ಅಲ್ಲದೆ ಅವನು ಇನ್ನೂ ಈಚಿನವನೆಂಬುದಕ್ಕೆ ಪ್ರಮಾಣಗಳಿವೆ. ಕ್ರಿ. ಶ. 6ನೇ ಶತಮಾನದಲ್ಲಿದ್ದ ಯಶೋಧರ್ಮನಿಗೂ ವಿಕ್ರಮಾದಿತ್ಯನೆಂಬ ಬಿರುದಿತ್ತು. ಕಾಳಿದಾಸನು ಇಷ್ಟು ಈಚಿನವನಲ್ಲವೆಂಬುದಕ್ಕೂ ವಿಶ್ವಾಸಾರ್ಹ ಆಧಾರಗಳಿವೆ. ಗುಪ್ತರ ಪ್ರಸಿದ್ಧ ದೊರೆಯಾದ ಇಮ್ಮಡಿಯ ಚಂದ್ರಗುಪ್ತ (357–413) ಮತ್ತು ಇವನ ಮೊಮ್ಮಗನಾದ ಸ್ಕಾಂದಗುಪ್ತ (455–480) ಇವರಿಗೂ ವಿಕ್ರಮಾದಿತ್ಯರೆಂಬ ಬಿರುದಿದ್ದಿತು. ಕಾಳಿದಾಸನ ಕಾವ್ಯಗಳು ಶಾಂತಿ, ಸಂತೃಪ್ತಿಗಳಿಂದ ತುಂಬಿದ ಜನ ಜೀವನವನ್ನು ಪ್ರತಿಬಿಂಬಿಸುತ್ತವೆ. ಗುಪ್ತರ ಕಾಲದಲ್ಲಿ ದೇಶ ಸರ್ವತೋಮುಖವಾದ ಅಭ್ಯುದಯವನ್ನು ಪಡೆದಿದ್ದಿತು. ಶತ್ರುಪೀಡೆ ಇರಲಿಲ್ಲ. ಸೌಭಾಗ್ಯ ಸಂಪತ್ತುಗಳು ನಲೆಸಿದ್ದವು. ಕಲೆ ಸಾಹಿತ್ಯಗಳಿಗೆ ಹೆಚ್ಚು ಪ್ರೋತ್ಸಾಹವಿದ್ದಿತು. ಗುಪ್ತರ ಕಾಲವನ್ನು ಸಂಸ್ಕೃತ ಸಾಹಿತ್ಯದ ಸ್ವರ್ಣಯುಗವೆಂದು ಹೇಳುವುದುಂಟು. ಇಂತಹ ಕಾಲದಲ್ಲಿಯೇ ಸಂಸ್ಕೃತ ಸಾಹಿತ್ಯಗಿರಿಯ ಉತ್ತುಂಗ ಶಿಖರ ಮುಟ್ಟಿದ ಕಾಳಿದಾಸನು ಜೀವಿಸಿರಬೇಕೆಂದು ಊಹಿಸಿದರೆ ತಪ್ಪಾಗಲಾರದು. ವಿಕ್ರಮಾದಿತ್ಯನೆಂಬ ಬಿರುದಿನಿಂದ ಉಜ್ಜಯಿನಿಯಲ್ಲಿ ಆಳುತ್ತಿದ್ದ ಇಮ್ಮಡಿ ಚಂದ್ರಗುಪ್ತನು ಕಾಳಿದಾಸನ ಪೋಷಕನಾಗಿದ್ದಿರಬಹುದು[1]. ಅವನ ಕಾವ್ಯಗಳ ಹಲವು ಸಂಗತಿಗಳು ಈ ವಿಚಾರವನ್ನು ಪೋಷಿಸುತ್ತವೆ.

ಪುರಾಣಾದಿಗಳು ಪುರೂರವಸ್ಸನ್ನು ವಿಕ್ರಮನೆಂದು ಕರೆಯುದಿದ್ದರೂ ಕಾಳಿದಾಸನು ಪೋಷಕನ ಬಿರುದನ್ನು ಶಾಶ್ವತಗೊಳಿಸಲು ಬಯಸಿ ತನ್ನ ಒಂದು ನಾಟಕಕ್ಕೆ 'ವಿಕ್ರಮೋರ್ವಶೀಯಂ' ವೆಂಬ ಹೆಸರನ್ನಿಟ್ಟಿರುವಂತೆ ತೋರುತ್ತದೆ, 'ಕುಮಾರಸಂಭವ'ವು ದೊರೆಯ ಮಗನಾದ ಕುಮಾರಗುಪ್ತನ ಜನನವನ್ನೂ, ಮಾಲವಿಕಾಗ್ನಿಮಿತ್ರದಲ್ಲಿ ಬಂದಿರುವ ಅಶ್ವಮೇಧಯಾಗ ಮತ್ತು ರಘುವಂಶದಲ್ಲಿ ಬಂದಿರುವ ರಘುವಿನ ದಿಗ್ವಿಜಯಗಳು ದೊರೆಯ ತಂದೆಯಾದ ಸಮುದ್ರಗುಪ್ತನ ಅಶ್ವಮೇಧಯಾಗ ಮತ್ತು ದಂಡಯಾತ್ರೆಗಳನ್ನೂ ಸೂಚಿಸುವಂತಿವೆ. ಹೀಗೆ ಕಾಳಿದಾಸನು ತನ್ನ ಕಾವ್ಯಗಳ ಮೂಲಕ ತನ್ನ ಪೋಷಕನ ಬಗ್ಗೆ ಆದರ ಗೌರವಗಳನ್ನು ಪ್ರಕಟಿಸಿರಬಹುದು. ರವಿಕೀರ್ತಿಯ ಐಹೊಳೆ ಶಿಲಾಶಾಸನ (ಕ್ರಿ. ಶ. 634)ದಲ್ಲಿ ಕಾಳಿದಾಸನ ಪ್ರಶಂಸೆ ಇದೆ[2]. ಕ್ರಿ. ಶ. 7ನೆಯ ಶತಮಾನದ ಪ್ರಾರಂಭದಲ್ಲಿದ್ದ ಬಾಣನು ತನ್ನ ಹರ್ಷಚರಿತ ಕಾವ್ಯದಲ್ಲಿ ಕಾಳಿದಾಸನನ್ನು ಪ್ರಶಂಸಿದ್ದಾನೆ. ವತ್ಸಭಟ್ಟಿಯಿಂದ ರಚಿತವಾದ ಮಾಂಡಸೋರಿನ ಶಿಲಾ ಪ್ರಶಸ್ತಿ (ಕ್ರಿ. ಶ. 473) ಯಲ್ಲಿ ಕಾಳಿದಾಸನ ಸ್ಪಷ್ಟವಾದ ಅನುಕರಣವಿದೆ. ಆದ್ದರಿಂದ ಕಾಳಿದಾಸನು ಈ ಶಿಲಾಶಾಸನಕ್ಕಿಂತಲೂ ಹಿಂದಿನವನೆಂಬುದು

1. ವಿಕ್ರಮಾದಿತ್ಯನೆಂಬ ಬಿರುದನ್ನು ಪಡೆದಿದ್ದ 2ನೆಯ ಚಂದ್ರಗುಪ್ತನು ಕಾಳಿದಾಸನನ್ನು 4ನೆಯ ಶತಮಾನದ ಕೊನೆಯಲ್ಲಿ ಆಳುತ್ತಿದ್ದ ಭಗೀರಥನೆಂಬ ಕುಂತಲ ರಾಜನ ಸಭೆಗೆ ರಾಯಭಾರಿಯನ್ನಾಗಿ ಕಳುಹಿಸಿದ್ದನೆಂಬ ಪ್ರತೀತಿ ಇದೆ — ಭೋಜನ ಶೃಂಗಾರ ಪ್ರಕಾಶಿಕಾ, ಕ್ಷೇಮೇಂದ್ರನ ಔಚಿತ್ಯ ವಿಚಾರ ಚರ್ಚಾ
2. ಯೇನಾಯೋಜಿನವೇಶ್ಮಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।
ಸವಿಜಯತಾಂ ರವಿಕೀರ್ತಿಃ ಕವಿತಾಶ್ರಿತ ಕಾಳಿದಾಸ ಭಾರವಿಕೀರ್ತಿಃ



ನಿರ್ವಿವಾದ. ಅವನ ಕಾವ್ಯಗಳಲ್ಲಿ ಗ್ರೀಕ್‌ಪದಗಳಿಂದ ಜನ್ಯವಾದ 'ಉಚ್ಚ' 'ಜಾಮಿತ್ರ' ಮುಂತಾದ ಜ್ಯೋತಿಷ್ಯ ಶಬ್ದಗಳ ಪ್ರಯೋಗವಿದೆ. ಇದನ್ನು ನೋಡಿದರೆ ಅವನ್ನು ಕ್ರಿ. ಶ. 350 ಕ್ಕಿಂತ ಹಿಂದಿನವನಲ್ಲವೆಂದು ಹೇಳಬೇಕಾಗುತ್ತದೆ. ಪ್ರಸಿದ್ಧವ್ಯಾಖ್ಯಾಕಾರನಾದ ಮಲ್ಲಿನಾಥನು (ಕ್ರಿ. ಶ. 14ನೆಯ ಶ. ಮಾ.) ಮೇಘಸಂದೇಶದ 14ನೆಯ ಪದ್ಯದ ವ್ಯಾಖ್ಯಾನದಲ್ಲಿ ಕವಿಯು ಶ್ಲೇಷೆಯಿಂದ ತನ್ನ ಮಿತ್ರನಾದ ನಿಚುಲನನ್ನೂ ಪ್ರತಿಪಕ್ಷಿಯಾದ ದಿಙ್ನಾಗನನ್ನೂ ಸೂಚಿಸಿದ್ದಾನೆಂದು ಹೇಳಿದ್ದಾನೆ. ನಿಚುಲನ ವಿಚಾರವಾಗಿ ಏನೂ ತಿಳಿಯದು. ಬೌದ್ಧ ತಾರ್ಕಿಕನಾದ ದಿಙ್ನಾಗನು ಪ್ರತಿಪಕ್ಷಿಯಾಗಲು ಕಾರಣವೂ ತಿಳಿಯದು. ಒಂದು ವೇಳೆ ಪ್ರತಿಪಕ್ಷಿಯೆಂದು ಒಪ್ಪಿಕೊಂಡರೆ ಅವನ ಕಾಲ ಕ್ರಿ. ಶ. ಸುಮಾರು 400. ಒಂದು ಸಾವಿರ ವರ್ಷಗಳ ಕಾಲ ಈಚಿನವನಾದ ಮಲ್ಲಿನಾಥನ ಮಾತನ್ನು ಪ್ರಮಾಣವೆಂದು ಒಪ್ಪಿಕೊಳ್ಳುವುದಾದರೂ ಹೇಗೆ? ಕಾಳಿದಾಸನು ಭಾಸ (ಕ್ರಿ. ಶ. ಸು–300) ನನ್ನು ಸ್ಮರಿಸಿದ್ದಾನೆ. ಕಾಳಿದಾಸನ ಪ್ರಾಕೃತ ಭಾಸನಪ್ರಾಕೃತಕ್ಕಿಂತ ಈಚಿನದೆಂದು ತೋರುತ್ತದೆ. ಈ ಹಿಂದಿನ ಅಂಶಗಳ ಪರಿಶೀಲನೆಯಿಂದ ಕಾಳಿದಾಸನ ಕಾಲ ಕ್ರಿ. ಶ. ನಾಲ್ಕು ಅಥವಾ ಐದನೆಯ ಶತಮಾನವೆಂದು ಬಹಳ ಮಂದಿ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವಾಗಿದೆ.

ಕಾಳಿದಾಸನು ವತ್ಸಭಟ್ಟಿಗಿಂತ ಹಿಂದಿನವನೆಂಬುದು ನಿಜವಾದರೂ ಎಷ್ಟು ಹಿಂದಿನವನೆಂಬುದನ್ನು ನಿಶ್ಚಯಿಸಲು ಸಾಧ್ಯವಿಲ್ಲ; ಅಶ್ವಘೋಷನು (ಕ್ರಿ. ಶ. ಸು–100) ಇವನ ಶೈಲಿಯನ್ನು ಅನುಕರಣ ಮಾಡಿದ್ದಾನೆ. ಆದ್ದರಿಂದ ಇವನು ಕ್ರಿ. ಪೂ. ಸು 100—150ರಲ್ಲಿ ಇದ್ದಿರಬಹುದೆಂಬುದು ಇನ್ನೊಂದು ಮತ, ಈ ಮತಕ್ಕೆ ಮಾಲವಿಕಾಗ್ನಿಮಿತ್ರದಲ್ಲಿರುವ ಐತಿಹಾಸಿಕ ಭಿತ್ತಿಯು ಪ್ರಧಾನ ಕಾರಣ. ಈ ನಾಟಕದಲ್ಲಿ ಬಂದಿರುವ ಶುಂಗವಂಶದ ರಾಜರಾದ ಪುಷ್ಯಮಿತ್ರ, ಅಗ್ನಿಮಿತ್ರ, ವಸುಮಿತ್ರ, ಮೊದಲಾದವರು ಕ್ರಿ. ಪೂ. 178 ರಿಂದೀಚೆಗೆ ಇದ್ದ ಚಾರಿತ್ರಿಕವ್ಯಕ್ತಿಗಳು. ಅಗ್ನಿಮಿತ್ರನಿಂದ ಹೇಳಿಸಿರುವ ಭರತವಾಕ್ಯ[1] — ಮತ್ತು ಅವನಿಗೆ ಬಹುಪತ್ನೀತ್ವವನ್ನು ಸಂಪಾದಿಸಿರುವ ರೀತಿಗಳು ಕವಿಗೆ ತನ್ನ ಆಶ್ರಯದಾತನಲ್ಲಿರುವ ಆದರ ಗೌರವಗಳಿಂದ ಕಲ್ಪಿಸಿದಂತಿವೆ. ಶಾಕುಂತಲದಲ್ಲಿ ದುಷ್ಯಂತನು ಅಪುತ್ರನಾಗಿ ಸತ್ತ. ಸಮುದ್ರ ವ್ಯಾಪಾರಿ ಧನಮಿತ್ರನ ಗರ್ಭಿಣಿಯಾಗಿದ್ದ ಹೆಂಡತಿಗೆ ಅವನ ಆಸ್ತಿಯನ್ನು ಕೊಡಿಸಿದ ಸಂಗತಿ ಮತ್ತು ಉಂಗುರದ ಕಳವಿಗಾಗಿ ಬೆಸ್ತನಿಗೆ ಮರಣದಂಡನೆಯಾಗಬಹುದಾದ ಸಂದರ್ಭಗಳು ಕ್ರಿ. ಪೂ. 1ನೆಯ ಶತಮಾನದಲ್ಲಿ ಪ್ರಚಾರದಲ್ಲಿದ್ದ ಬೃಹಸ್ಪತಿಯ ಧರ್ಮಶಾಸ್ತ್ರಕ್ಕೆ ಅನುಗುಣವಾಗಿವೆ. ಹೀಗೆ ಕಾಳಿದಾಸನ ಕಾಲ ಇನ್ನೂ ವಾದಗ್ರಸ್ತವಾಗಿಯೇ ಉಳಿದಿದೆ[2],

ಕಾಳಿದಾಸನ ಕಾವ್ಯಗಳ ಪರಿಶೀಲನೆಯಿಂದ ಅವನ ಒಂದು ಅಸ್ಪಷ್ಟವಾದ ಸಾರಸ್ವತ ಚಿತ್ರ ಮಾತ್ರ ಮೂಡುತ್ತದೆ; ಅವನ ಹುಟ್ಟು, ವಾಸ, ಜೀವಿತಾದಿಗಳೊಂದೂ ಸ್ಪಷ್ಟವಾಗಿ ಗೊತ್ತಿಲ್ಲ.

1. ಆಶಾಸ್ಯಮೀತಿವಿಗಮ ಪ್ರಭೃತಿ ಪ್ರಜಾನಾಂ ।
ಸಂಪದ್ಯತೇ ನಖಲು ಗೋಪ್ತರಿ ನಾಗ್ನಿಮಿತ್ರೇ ॥
2. ಕಾಳಿದಾಸನ ಕಾಲವನ್ನು ಕ್ರಿ. ಪೂ. ೮ನೆಯ ಶತಮಾನದಿಂದ ಕ್ರಿ. ಶ. 11ನೆಯ ಶತಮಾನದವರೆಗೆ ಎಳೆದಾಡಲಾಗಿದೆ.

ಅವನ ಕಾವ್ಯಗಳಲ್ಲಿ ಉಜ್ಜಯಿನಿಯ ಅಭಿಮಾನ ತುಂಬಿ ತುಳುಕುತ್ತದೆ. ಭೂಮಿಗೆ ಇಳಿದು ಬಂದ ಸ್ವರ್ಗದ ಒಂದು ಭಾಗದಂತಿರುವ ಸಿಪ್ರಾತೀರದ ಉಜ್ಜಯಿನಿ. ಅಲ್ಲಿನ ದೇವನಾದ ಮಹಾಕಾಲ, ಸುತ್ತ ಹರಿಯುವ ನದಿಗಳು ಕಾಳಿದಾಸನ ಮೇಲೆ ಪ್ರಭಾವ ಬೀರಬೇಕೆಂದು ಮೇಘದೂತದಿಂದ ತಿಳಿದು ಬರುತ್ತದೆ[1]. ಆದ್ದರಿಂದ ಕಾಳಿದಾಸನ ಜನ್ಮಸ್ಥಳ ಉಜ್ಜಯಿನಿಯಾಗಿರಬೇಕೆಂದು ಅಭಿಪ್ರಾಯಪಡಲಾಗಿದೆ. ಕಾಶ್ಮೀರದಲ್ಲಿ ಮಾತ್ರ ಬೆಳೆಯುವ ಕೇಸರ ಪುಷ್ಪವನ್ನು ಕಣ್ಣಾರೆ ಕಂಡಂತೆ ವರ್ಣಿಸಿರುವುದರಿಂದ ಅವನು ಕಾಶ್ಮೀರವಾಸಿಯಾಗಿಯೂ ಇದ್ದಿರಬಹುದು. ಮಾಳವ ಮತ್ತು ವಿದರ್ಭದವರು ಇವನನ್ನು ತಮ್ಮವನೆಂದು ಹೇಳುತ್ತಾರೆ. ಇವನು ತನ್ನ ಆಶ್ರಯದಾತನೊಡನೆ ಭಾರತದಾದ್ಯಂತ ಸುತ್ತಾಡಿ ನಾನಾ ದೇಶ, ಗಿರಿ, ನದಿ, ಮುಂತಾದುವುಗಳ ಪರಿಚಯ ಪಡೆದಿದ್ದನೆಂದು ರಘುವಿನ ದಿಗ್ವಿಜಯದಿಂದ ಊಹಿಸಲು ಅವಕಾಶವಿದೆ. ಇವನ ಎಲಾ ಕೃತಿಗಳೂ ಶಿವಸ್ತೋತ್ರದಿಂದ ಪ್ರಾರಂಭವಾಗಿವೆ. ಇವನ ಸ್ತೋತ್ರಗಳಲ್ಲಿ ಅದ್ವೈತಸಿದ್ಧಾಂತವೂ, ಉಪನಿಷತ್ತತ್ತ್ವಗಳೂ ಅಡಕವಾಗಿವೆ. ಕಾಳಿದಾಸನಿಗೆ ಶ್ರುತಿ, ಸ್ಮೃತಿ, ಪುರಾಣ, ಮಹಾಭಾರತ, ರಾಮಾಯಣ, ಧರ್ಮಶಾಸ್ತ್ರ, ರಾಜನೀತಿ, ವೇದಾಂಗಗಳು, ಸಂಗೀತ, ಜ್ಯೋತಿಷ್ಯ, ಆಯುರ್ವೇದ ಮುಂತಾದುವುಗಳ ಪರಿಚಯವಿದೆ. ಅವನು ವೀತರಾಗನಲ್ಲ. ಅವನದು ಧರ್ಮಕ್ಕೆ ವಿರುದ್ಧವಾಗದ ಶೃಗಾರ, ದಾಂಪತ್ಯಜೀವನದ ಪ್ರಧಾನಫಲ ಸಂತಾನ ಅದಿಲ್ಲದೆ ಇಹಪರ, ಸುಖಗಳಿಲ್ಲವೆಂಬುದು ಅವನ ಮತ[2]. ಅವನಿಗೆ ಮಕ್ಕಳಲ್ಲಿ ಬಹಳ ಮಮತೆ ಇದ್ದಂತೆ ಕಾಣುತ್ತದೆ. ಅವನ ಕಾವ್ಯಗಳಲ್ಲಿ ವೈದಿಕ ಧರ್ಮದ ನಿರೂಪಣೆಯಿದ್ದರೂ ಅವನು ಧರ್ಮದಗೊಡ್ಡನಲ್ಲ, ಶುಷ್ಕಛಾಂಧಸವನ್ನೂ, ಜಾತಿಮತ ಆಚಾರ, ಮುಂತಾದ ಸಾಮಾಜಿಕ ಕಟ್ಟುಪಾಡುಗಳನ್ನೂ ಅವನು ನಯವಾಗಿ ಟೀಕಿಸಿದ್ದಾನೆ[3]. ಅವನು ಆದರ್ಶಪ್ರಾಯವಾದ ಆಡಳಿತ, ನಿಷ್ಕಳಂಕ ಪ್ರೇಮ, ಸಾಧು ಜೀವನಾದಿಗಳನ್ನು ಮನಮುಟ್ಟುವಂತೆ ಪ್ರತಿಪಾದಿಸಿದ್ದಾನೆ. ಅವನ ಕಾವ್ಯಗಳು ಆನಂದ, ಆದರ್ಶಗಳೆರಡನ್ನೂ ಒದಗಿಸುತ್ತವೆ.

ಕಾಳಿದಾಸನು ರಘುವಂಶ, ಕುಮಾರಸಂಭವಗಳೆಂಬ ಎರಡು ಮಹಾಕಾವ್ಯಗಳನ್ನೂ, ಋತುಸಂಹಾರ, ಮೇಘದೂತಗಳೆಂಬ ಎರಡು ಖಂಡ ಕಾವ್ಯಗಳನ್ನೂ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನಶಾಕುಂತಲಗಳೆಂಬ ಮೂರು ನಾಟಕಗಳನ್ನೂ ಬರೆದಿದ್ದಾನೆ.

1. ವಕ್ರಃ ಪಂಥಾ ಯದಪಿ ಭವತಃ ಪ್ರಸ್ಥಿತಸ್ಯೋತ್ತರಾಶಾಂ
ಸೌಧೋತ್ಸಂಗಂ ಪ್ರಣಯವಿಮುಖೋ ಮಾಸ್ಮ ಭೂರುಜ್ಜಯಿನ್ಯಾಃ ।
ವಿದ್ಯುದ್ದಾಮ ಸ್ಫುರಿತ ಚಕಿತೈಸ್ತತ್ರ ಪೌರಾಂಗನಾನಾಂ
ಲೋಲಾಪಾಂಗೈರ್ಯದಿನ ರಮಸೇ ಲೋಚನೈರ್ವಂಚಿತೋಽಸಿ ॥ –ಮೇಘದೂತ

2. (i) ಪ್ರಜಾಯೈ ಗೃಹಮೇಧಿನಾಮ್—ರಘುವಂಶ,
(ii) ಲೋಕಾಂತರ ಸುಖಂ ಪುಣ್ಯಂ ತಪೋದಾನ ಸಮುದ್ಭವಂ ।
ಸಂತತಿಃ ಶುದ್ಧ ವಂಶ್ಯಾ ಹಿ ಪರತ್ರೇಹ ಚ ಶರ್ಮಣೇ ॥ ರಘುವಂಶ ॥

3. ಊರ್ವಶಿಯ ತಂದೆ ವೇದಾಭ್ಯಾಸಜಡ, ಋಷಿಗಳು, ಜೋಲು ಗಡ್ಡದವರು, ಅವರ ತಲೆ ಇಂಗುದಿ ತೈಲದಿಂದ ಸಿಕ್ಕು ಕಟ್ಟಿರುತ್ತದೆ... ಇತ್ಯಾದಿ



ಶ್ಯಾಮಲಾದಂಡಕ, ಅಂಬಾಸ್ತುತಿ, ಮುಂತಾದ ಇನ್ನೂ ಹಲವು ಕೃತಿಗಳು ಅವನ ಹೆಸರಿನಲ್ಲಿ ಪ್ರಚಾರದಲ್ಲಿವೆ, ಇಲ್ಲಿ ಅವನ ನಾಟಕಗಳ ಪರಿಚಯವನ್ನು ಮಾತ್ರ ಕೊಡಲಾಗಿದೆ.

ಮಾಳವಿಕಾಗ್ನಿಮಿತ್ರ :—ಐದು ಅಂಕಗಳನ್ನುಳ್ಳ ಇದು ಕವಿಯ ಪ್ರಥಮ ನಾಟಕ. ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನ ಶಾಕುಂತಲಗಳಲ್ಲಿ ಅನುಕ್ರಮವಾಗಿ ಕವಿಯ ಆತ್ಮವಿಶ್ವಾಸ ಬೆಳೆದಿರುವುದು ಸ್ಪಷ್ಟವಾಗಿ ಕಾಣುತ್ತದೆ.3 ಮಾಳವಿಕಾಗ್ನಿಮಿತ್ರದ ಪ್ರಸ್ತಾವನೆಯಲ್ಲಿ ತನ್ನ ಸಾಮರ್ಥ್ಯದ ಬಗ್ಗೆ ತೋರಿಸಿಕೊಂಡಿರುವ ಅಧೈರ್ಯವು ವಿಕ್ರಮೋರ್ವಶೀಯದಲ್ಲಿ ಕಡಿಮೆಯಾಗಿ ಶಾಕುಂತಲದಲ್ಲಿ ಗೂಢವಾದ ಆತ್ಮವಿಶ್ವಾಸವಾಗಿ ಪರಿಣಮಿಸಿದೆ.

ಮಾಲವಿಕಾಗ್ನಿಮಿತ್ರವನ್ನು ಯೋಚಿಸಿ, ತಿದ್ದಿ, ಪ್ರಯತ್ನ ಪೂರ್ವಕವಾಗಿ ಚಮತ್ಕಾರ ತುಂಬಿ ಬರೆದಿರುವಂತೆ ತೋರುತ್ತದೆ. ಶಾಕುಂತಲದ ಪ್ರತಿಭೆ ವಾಗ್ಧೋರಣೆಗಳು ಇಲ್ಲಿಲ್ಲ. ಕಲಾಕೌಶಲ್ಯವೂ ಮಾಳವಿಕಾಗ್ನಿಮಿತ್ರದಲ್ಲಿ ಮೂಡಿ ವಿಕ್ರಮೋರ್ವಶೀಯದಲ್ಲಿ ಬೆಳೆದು ಶಾಕುಂತಲದಲ್ಲಿ ಪೂರ್ಣತೆಪಡೆದಿರುವುದು ವಿಮರ್ಶಕರಿಗೆ ಗೋಚರಿಸದಿರಲಾರದು. ಈ ನಾಟಕಗಳನ್ನು ಕ್ರಮವಾಗಿ ಕಾಯಿ, ದೋರೆಕಾಯಿ, ಪಕ್ವಫಲಗಳೆಂದು ಭಾವಿಸಬಹುದು.

ಕಥಾಸಂಗ್ರಹ :—ವಿದಿಶಾನಗರಿಯ ದೊರೆಯಾದ ಅಗ್ನಿಮಿತ್ರನಿಗೆ ಧಾರಿಣಿ ಮತ್ತು ಇರಾವತಿಯರೆಂಬ ಇಬ್ಬರು ಹೆಂಡತಿಯರಿದ್ದರು. ಒಂದುಸಾರಿ ಅವನು ಅಂತಃಪುರದಲ್ಲಿ ಸ್ತ್ರೀಯರ ಚಿತ್ರದಲ್ಲಿ ಮಾಳವಿಕೆಯನ್ನು ಕಂಡು ಮೋಹಗೊಂಡನು. ಇವನ ಮಿತ್ರನಾದ ಗೌತಮನು (ವಿದೂಷಕ) ಯುಕ್ತಿಯಿಂದ ನಾಟ್ಯಚಾರ್ಯರಾದ ಹರದತ್ತ ಗಣದಾಸರಿಗೆ ತಮ್ಮ ಕಲಾ ಸಾಮರ್ಥ್ಯದ ವಿಷಯದಲ್ಲಿ ಜಗಳಹುಟ್ಟುವಂತೆ ಮಾಡಿದನು. ತೀರ್ಮಾನಕ್ಕಾಗಿ ಪರಿವ್ರಾಜಿಕೆಯಾದ ಕೌಶಿಕಿಯ ಸಲಹೆಯಂತೆ ಅಭಿನಯ ಪ್ರದರ್ಶನ ನಡೆಯಿತು. ಇದರಿಂದ ಮಾಳವಿಕೆಯ ನರ್ತನವಾಯಿತು. ರಾಜನ ಕಣ್ಣು ತಣಿಯಿತು.

ಗೌತಮನು ಮಾಳವಿಕೆ ಮತ್ತು ಅಗ್ನಿಮಿತ್ರರ ಸಮಾಗಮವನ್ನು ಸಾಧಿಸಲು ಮಾಳವಿಕೆಯ ಸಖಿಯಾದ ಬಕುಳಾವಳಿಕೆಯನ್ನು ಒಳಹಾಕಿಕೊಂಡನು. ಧಾರಿಣಿಯ ಕಾಲು ಊನವಾಗಿದ್ದು

3. (i) ಪಾರಿಪಾರ್ಶ್ವಿಕ ! !—ಮಾ ತಾವತ್ ಪ್ರಥಿತಯಶಸಾಂ ಭಾಸಸೌಮಿಲ್ಲಕವಿಪುತ್ರಾದೀನಾಂ ಪ್ರಬಂಧಾನತಿಕ್ರಮ್ಯ ವರ್ತಮಾನಕವೇಃ ಕಾಲಿದಾಸಸ್ಯ ಕ್ರಿಯಾಯಾಂ ಕಥಂ ಬಹುಮಾನಃ ।
—ಮಾಲವಿಕಾಗ್ನಿಮಿತ್ರ.

(ii) ಸೂತ್ರಧಾರ :—ಮಾರಿಷ, ಬಹುಶಸ್ತು ಪರಿಷದೇಷಾ ಪೂರ್ವೇಷಾಂ ಕವೀನಾ ದೃಷ್ಟರಸ ಪ್ರಬಂಧಾ ।............
ಪಣಯಿಷು ವಾ ದಾಕ್ಷಿಣ್ಯದಥವಾ ಸದ್ವಸ್ತು ಪುರುಷ ಬಹುಮಾನಾತ್
ಶೃಣುತ ಜನಾ ಅವಧಾ ನಾಕ್ರಿಯಾಮಿಮಾಂ ಕಾಲಿದಾಸಸ್ಯ— ವಿಕ್ರಮೋರ್ವಶೀಯಂ

(iii) ನಟೀ—ಸುವಿಹಿತ ಪ್ರಯೋಗತಯಾರ್ಯಸ್ಯನ ಕಿಮಪಿ ಪರಿಹಾಸತೇ ।
ಸೂತ್ರಧಾರ :— ಆರ್ಯೇ, ಕಥಯಾಮಿ ತೇ ಭೂತಾರ್ಥಂ,
ಅಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ ।
ಬಲವದಪಿ ಶಿಕ್ಷಿತಾನಾಮಾತ್ಮನ್ಯ ಪ್ರತ್ಯಯಂ ಚೇತಃ ॥
—ಅಭಿಜ್ಞಾನ ಶಾಕುಂತಲ

ದರಿಂದ ಅವಳ ಪರವಾಗಿ ಮಾಳವಿಕೆ ಅಶೋಕಕ್ಕೆ ದೋಹದ ಮಾಡಲು ರಾಜೋದ್ಯಾನಕ್ಕೆ ಬಂದಳು. ಬಕುಳಾವಳಿಕೆ ಅವಳ ಹೆಜ್ಜೆಗೆ ಅಲಂಕಾರಮಾಡುತ್ತಾ ರಾಜನ ಪ್ರಣಯವನ್ನು ತಿಳಿಸಿದಳು, ರಾಜನು ಮುಂದೆ ಬಂದು ಉಪಚಾರದ ಮಾತುಗಳಲ್ಲಿ ತೊಡಗಿದ್ದಾಗ ಉಯ್ಯಾಲೆಯ ಆಟಕ್ಕಾಗಿ ಉದ್ಯಾನಕ್ಕೆ ಬಂದಿದ್ದ ಇರಾವತಿಯು ಕಾಣಿಸಿಕೊಂಡಳು. ಎಲ್ಲವೂ ವಿರಸವಾಯಿತು. ರಾಣಿಯ ಅಪ್ಪಣೆಯಂತೆ ಮಾಳವಿಕೆಯ ಬಂಧನವಾಯಿತು.

ಗೌತಮನು ಧೃತಿಗೆಡಲಿಲ್ಲ. ಅವನು ವೈದ್ಯನಾದ ಧ್ರುವಸಿದ್ಧಿಯನ್ನು ಒಳಹಾಕಿಕೊಂಡು ಹಾವು ಕಚ್ಚಿತೆಂದು ನಟಿಸಿ, ಉದಕುಂಭ ವಿಧಾನದಿಂದ ವಿಷಪರಿಹಾರಕ್ಕಾಗಿ ಧಾರಿಣಿಯಿಂದ ನಾಗಮುದ್ರಿಕೆಯನ್ನು ಪಡೆದು ಅದನ್ನು ಕಾವಲುಗಾರರಿಗೆ ತೋರಿಸಿ ಕಾರಾಗಾರದಿಂದ ಮಾಳವಿಕೆಯನ್ನು ಬಿಡಿಸಿದನು. ಸಮುದ್ರಗೃಹದಲ್ಲಿ ರಾಜನ ಮತ್ತು ಅವಳ ಸರಸಸಲ್ಲಾಪಗಳಿಗೆ ಅವಕಾಶ ಮಾಡಿಕೊಟ್ಟು ತಾನು ಬಾಗಿಲಿನಲ್ಲಿ ಕುಳಿತು ನಿದ್ರಿಸಿದನು. ಅವನನ್ನು ಕಂಡು ಸಂದೇಹಗೊಂಡ ಪರಿಚಾರಿಕೆ ಅದನ್ನು ಇರಾವತಿಗೆ ತಿಳಿಸಿದಳು. ಅವಳು ಬಂದು ರಾಜನ ಪ್ರಣಯ ಚರಿತ್ರೆಯನ್ನು ಕಂಡಳು. ದೊರೆಯು ದಿಕ್ಕುಗಾಣದೆ ಮಗಳಾದ ವಸುಲಕ್ಷ್ಮಿಯು ಕೋತಿಗೆ ಹೆದರಿದ್ದ ವಾರ್ತೆಯನ್ನು ನೆಪಮಾಡಿಕೊಂಡು ಹೊರಟು ಹೋದನು. ಅಶೋಕ ಪುಷ್ಪಿಸಿದ ವಾರ್ತೆ ಬಂದಿತು. ಐದು ದಿನಗಳಲ್ಲಿ ಪುಷ್ಪಿಸಿದರೆ ಅವಳ ಅಭಿಲಾಷೆಯನ್ನು ಪೂರೈಸುವುದಾಗಿ ಧಾರಿಣಿ ಕೊಟ್ಟಿದ್ದ ಮಾತಿನ ಧೈರ್ಯದಿಂದ ಮಾಳವಿಕೆಯು ಹೊರಟು ಹೋದಳು.

ಸೇನಾಧಿಪತಿಯಾದ ವೀರಸೇನನು ವಿದರ್ಭ ದೇಶವನ್ನು ಮುತ್ತಿ ಯಜ್ಞಸೇನನನ್ನು ಸೋಲಿಸಿ ಸೆರೆಯಲ್ಲಿದ್ದ ಮಾಧವಸೇನನನ್ನು ಬಿಡಿಸಿ ಅಗ್ನಿಮಿತ್ರನಿಗೆ ವಿಜಯ ವೃತ್ತಾಂತವನ್ನೂ, ಇಬ್ಬರು ಹುಡುಗಿಯರೊಡನೆ ಹಲವು ಉಪಹಾರ ವಸ್ತುಗಳನ್ನೂ ಕಳುಹಿಸಿದನು. ಆ ಹುಡುಗಿಯರು ಮಾಳವಿಕೆಯನ್ನು ತಮ್ಮ ರಾಜಕುಮಾರಿಯೆಂದು ಗುರುತಿಸಿದರು. ಮಾಧವಸೇನನ ಬಂಧನವಾಗಲು ಮಂತ್ರಿಯಾದ ಸುಮತಿಯೊಡನೆ ವಿದಿಶಾನಗರಿಗೆ ಹೊರಟ ಮಂತ್ರಿಯ ತಂಗಿಯಾದ ಕೌಶಿಕೆಯೂ ಮಾಳವಿಕೆಯೂ. ಮಾರ್ಗ ಮಧ್ಯದಲ್ಲಿ ಕಾಡುಕಳ್ಳರ ಪಡೆಗೆ ಸಿಕ್ಕಿ ಸುಮತಿ ಸಾಯಲು ಗಲಾಟೆಯಲ್ಲಿ ಪರಸ್ಪರ ಅಗಲಿದರು. ಕೌಶಿಕೆ ಸಂನ್ಯಾಸಿನಿಯ ವೇಷದಿಂದ ಧಾರಿಣಿಯ ಆಶ್ರಯ ಪಡೆದಳು. ವೀರಸೇನನು ಕಳ್ಳರಿಂದ ಮಾಳವಿಕೆಯನ್ನು ಬಿಡಿಸಿ ಕರೆತಂದು ಧಾರಿಣಿಗೆ ಒಪ್ಪಿಸಿದನು. ಇದೆಲ್ಲ ಗೊತ್ತಾಗುವ ವೇಳೆಗೆ ಅಗ್ನಿಮಿತ್ರನ ಮಗನಾದ ವಸುಮಿತ್ರನು ತಾತನಾದ ಪುಷ್ಯಮಿತ್ರನ ಯಜ್ಞಾಶ್ವವನ್ನು ಹಿಂಬಾಲಿಸಿ ಜಯಶೀಲನಾದ ಸಂಗತಿಯೂ ಯಜ್ಞದಲ್ಲಿ ಭಾಗವಹಿಸಲು ಕರೆಯೂ ಬಂದವು. ಸಂತೋಷಗೊಂಡ ಧಾರಿಣಿ ಕೊಟ್ಟಿದ್ದ ಮಾತಿನಂತೆ ನಡೆದು ಮಾಳವಿಕೆಯನ್ನು ರಾಜನಿಗೆ ಒಪ್ಪಿಸಿದಳು.

ಮಾಲವಿಕಾಗ್ನಿಮಿತ್ರವು ಐತಿಹಾಸಿಕವಸ್ತುವಿನ ಆಧಾರದಮೇಲೆ ರಚಿತವಾದ ಶೃಂಗಾರ ನಾಟಕ. ಶುಂಗವಂಶದವರಾದ ಪುಷ್ಯಮಿತ್ರ, ಅಗ್ನಿಮಿತ್ರ, ವಸುಮಿತ್ರರು ಕ್ರಿ॥ಪೂ । 2ನೆಯ ಶತಮಾನದಲ್ಲಿ ಆಳುತ್ತಿದ್ದ ಚರಿತ್ರವ್ಯಕ್ತಿಗಳು. ವಸುಮಿತ್ರನು ಯಜ್ಞಾಶ್ವವನ್ನು ಹಿಂಬಾಲಿಸಿ ಯವನರನ್ನು (ಗ್ರೀಕರನ್ನು) ಸೋಲಿಸಿದ ವೃತ್ತಾಂತವೂ ಇದಕ್ಕೆ ಉಪಷ್ಟಂಭಕವಾಗಿದೆ.



ಈ ಯವನರು ಕ್ರಿ. ಪೂ. ಸುಮಾರು 155–153ರ ಮಧ್ಯೆ ಭಾರತವನ್ನು ಮುತ್ತಿದ ಮಿನಾಂಡರ್‌ನ ಸೈನಿಕರೆಂದು ವಿನ್ಸೆಂಟ್‌ಸ್ಮಿತ್ತರು ಅಭಿಪ್ರಾಯ ಪಡುತ್ತಾರೆ. ಗುಣಾಢ್ಯನ ಬೃಹತ್ಕಥೆಯಲ್ಲಿರುವ ಬಂಧುಮತೀವೃತ್ತಾಂತವು ಈ ನಾಟಕದ ಮೂಲ ವಸ್ತುವೆಂದು ಕೆಲವರ ಮತ. ವಾಸವದತ್ತೆಗೆ ಅವಳ ಸೋದರನಾದ ಪಾಲಕನು ಬಂಧುಮತಿ ಎಂಬ ರಾಜಕುಮಾರಿಯನ್ನು ಉಪಾಯವಾಗಿ ಕಳುಹಿಸಿಕೊಟ್ಟನು. ಉದಯನನು ಅವಳ ಸೌಂದರ್ಯದಿಂದ ಮುಗ್ಧನಾಗಿ ವಿದೂಷಕನ ಸಹಾಯದಿಂದ ಅವಳನ್ನು ಮದುವೆಯಾದನು. ಈ ಕಥೆಯಲ್ಲಿ ವಾಸವದತ್ತೆಯ ಕೋಪ, ವಿದೂಷಕನ ಬಂಧನ, ಪರಿವ್ರಾಜಿಕೆಯ ಸಹಾಯಗಳೂ ಇವೆ. ಭಾಸನ ಸ್ವಪ್ನವಾಸವದತ್ತವು ಮೂಲವನ್ನೊದಗಿಸಿರಬಹುದೆಂದು ಊಹಿಸುವವರೂ ಇದ್ದಾರೆ.

ಈ ನಾಟಕದಲ್ಲಿರುವುದು ರಾಜನ ಅಂತಃಪುರ ಮತ್ತು ಪ್ರಮದವನಗಳ ಶೃಂಗಾರ ಪ್ರಪಂಚದಲ್ಲಿ ನಡೆದ ಅಗ್ನಿಮಿತ್ರ ಮತ್ತು ಮಾಳವಿಕೆಯರ ಪ್ರಣಯಕಥೆ. ಗಂಡಿನ ಕಡೆಯ ಮತ್ತು ಹೆಣ್ಣಿನ ಕಡೆಯ ಎರಡು ಕಥೆಗಳನ್ನು ಹೆಣೆದು ಈ ನಾಟಕವನ್ನು ರಚಿಸಲಾಗಿದೆ. ಮಾಧವಸೇನನು ಮಾಳವಿಕೆಯನ್ನು ಅಗ್ನಿಮಿತ್ರನಿಗೆ ಮದುವೆ ಮಾಡಿಕೊಡಲು ಬಯಸಿದ್ದನು. ಒಂದು ವರ್ಷದನಂತರ ಅವಳ ಮದುವೆಯಾಗುವುದಾಗಿ ಸಿದ್ಧಾದೇಶವಿದ್ದಿತು. ವೀರಸೇನನು ಅವಳನ್ನು ವಿಜಯದ ಕಾಣಿಕೆಯಾಗಿ ಧಾರಿಣಿಗೆ ಒಪ್ಪಿಸಿದನು. ಸುಮತಿಯ ಸೋದರಿಯಾದ ಕೌಶಿಕೆಯೂ ಧಾರಿಣಿಯನ್ನೇ ಆಶ್ರಯಿಸಿದಳು. ಇದೆಲ್ಲವೂ ನಾಯಕನಾಯಿಕೆಯರ ಸಮಾಗಮಕ್ಕೆ ಹಾದಿಮಾಡಿತು. ಈ ನಾಟಕದಲ್ಲಿ ವಿದರ್ಭ ರಾಜನೊಡನೆ ಯುದ್ಧ ಮಾಧವಸೇನನ ಬಂಧನ ವಿಮೋಚನೆಗಳು, ಕಾಡುಕಳ್ಳರ ಪಡೆಯೊಡನೆ ಹೋರಾಟ, ವಸುಮಿತ್ರನ ಚೈತ್ರಯಾತ್ರೆ, ಪುಷ್ಯಮಿತ್ರನ ಅಶ್ವಮೇಧಯಾಗಗಳು ಬಂದಿದ್ದರೂ ಇವು ರಾಜನ ಪ್ರಣಯ ಕಥೆಗೆ ಪೋಷಕವಾಗಿವೆ. ಕಾಮತಂತ್ರ ಸಚಿವನಾದ ವಿದೂಷಕನ ಕುಟಿಲ ಕಾರ್ಯಗಳು ಮತ್ತು ಧಾರಿಣೀದೇವಿಯ ಔದಾರ್ಯಗಳಿಂದ ರಾಜನ ಪ್ರಣಯ ಫಲಿಸಿತು. ಮಾಳವಿಕಾಗ್ನಿಮಿತ್ರರಲ್ಲಿ ನಾಟಿಕೆಯ ಅನೇಕ ಲಕ್ಷಣಗಳು ಸಮನ್ವಯಗೊಂಡರೂ ಇದರ ನಾಯಕ ಧೀರಲಲಿತನಲ್ಲ; ಅವನು ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ನಿಶ್ಚಿಂತನಾಗಿಲ್ಲ; ಯುದ್ಧ ಮತ್ತು ಯಾಗಗಳ ವೃತ್ತಾಂತ ಬಂದಿದೆ. ಐದು ಅಂಕಗಳಿವೆ.

ವಸಂತೋತ್ಸವದಲ್ಲಿ ಅಭಿನಯಿಸುವ ಈ ನಾಟಕ ಸಂಗೀತ ನರ್ತನಗಳಿಂದ ಪ್ರಾರಂಭವಾಗಿ ವಿಜಯ ವಾರ್ತೆ, ಯಜ್ಞಾಹ್ವಾನ, ವಿವಾಹಗಳಿಂದ ಮುಗಿಯುತ್ತದೆ. ಮಹಾರಾಣಿಯಾದ ಧಾರಿಣಿ ಮತ್ತು ಇರಾವತಿಯರಿದ್ದರೂ ಮಾಳವಿಕೆಯೇ ನಾಯಿಕೆ; ಅವಳಿಗಿರುವಷ್ಟು ಪ್ರಾಧಾನ್ಯ ಅಗ್ನಿಮಿತ್ರನಿಗೂ ಇಲ್ಲ. ನಾಟ್ಯಾಚಾರ್ಯನಾದ ಗಣದಾಸ ಅವಳ ವಿದ್ಯಾಗುರು. ಹೇಳಿದುದಕ್ಕೆ ಮಿಗಿಲಾಗಿ ಕಲಿಯುವ ಶಿಷ್ಯೆ ದೊರೆತುದು ತನ್ನ ಪುಣ್ಯವೆಂದು ಅವನ ಭಾವನೆ. ರಾಜಕುಮಾರಿಯೂ ಸುಂದರಿಯೂ ಯುವತಿಯೂ ಕಲಾನಿಪುಣೆಯೂ ಅವಿವಾಹಿತೆಯೂ ಆದ ಅವಳನ್ನು ಸಂಗೀತಶಾಲೆಯಲ್ಲಿ ಕುಣಿಸಿ ಹಾಡಿಸಿ ಅವಳ ಅಂಗಗಳ ಸೌಷ್ಠವ ಸೌಂದರ್ಯಗಳನ್ನು

ಹಾವಭಾವಭಂಗಿಗಳನ್ನು ನಾಯಕನು ಕಣ್ತುಂಬ ನೋಡಿ ತಣಿಯುತ್ತಾನೆ. ಅವಳ ನಾಟ್ಯಾಭಿನಯ ಅನಿರ್ವಚನೀಯ ಮತ್ತು ಅನವದ್ಯ.

ಅಂಗೈರಂತರ್ನಿಹಿತವಚನೈಃ ಸೂಚಿತಃ ಸಮ್ಯಗರ್ಥಃ
ಪಾದನ್ಯಾಸೋ ಲಯಮನುಗತಸ್ತನ್ಮಯತ್ವಂ ರಸೇಷು ।
ಶಾಖಾಯೋನಿರ್ಮೃದುರಭಿನಯಸ್ತದ್ವಿಕಲ್ಪಾನುವೃತ್ತಾ
ಭಾವೋ ಭಾವಂ ನುದತಿ ವಿಷಯಾದ್ರಾಗಬಂಧಃ ಸ ಏವ ॥

ಅವಳನ್ನು ಎಷ್ಟು ವರ್ಣಿಸಿದರೂ ರಾಜನಿಗೆ ತೃಪ್ತಿಯಾಗದು. ಪರಿಮಿತಾಭರಣಗಳಿದ್ದರೂ ಎಲೆಉದುರಿ ಕತಿಪಯ ಕುಸುಮಗಳನ್ನುಳ್ಳ ಕುಂದಲತೆಯಂತೆ ಶೋಭಿಸುತ್ತಾಳೆ. ಇದು ಒಂದು ಅವಳ ಚೆಲುವಾದ ಭಂಗಿ :—

ವಾಮಂ ಸಂಧಿಸ್ತಿಮಿತವಲಯಂ ನ್ಯಸ್ಯ ಹಸ್ತಂ ನಿತಂಬೇ.
ಕೃತ್ವಾ ಶ್ಯಾಮಾವಿಟಪಸದೃಶಂ ಸ್ರಸ್ತಮುಕ್ತಂ ದ್ವಿತೀಯಂ ।
ಪಾದಾಂಗುಷ್ಠಾಲುಲಿತಕುಸುಮೇ ಕುಟ್ಟಿಮೇ ಪಾತಿತಾಕ್ಷಂ
ನೃತ್ತಾದಸ್ಯಾಃ ಸ್ಥಿತಮತಿತರಾಂ ಕಾಂತಮೃಜ್ವಾಯತಾರ್ಧಂ ॥

ಕವಿಯು ಅವಳನ್ನು ವಿವಿಧ ವಸ್ತ್ರಾಭರಣಗಳಿಂದ ಪ್ರದರ್ಶಿಸಿದ್ದಾನೆ. ಕುಳಿತಾಗ, ನಿಂತಾಗ. ನಕ್ಕಾಗ, ನಡೆದಾಗ, ಹೀಗೆ ನಾನಾ ಅವಸ್ಥೆಗಳಲ್ಲಿ ಮೋಹಕವಾದ ಅವಳ ವಿಲಾಸವನ್ನು ಕಾಣಲು ಅವಕಾಶ ಕಲ್ಪಿಸಿದ್ದಾನೆ. ಸಂಭ್ರಮ, ಸಂತೋಷ, ಲಜ್ಜಾದಿ ನಾನಾ ಭಾವಗಳ ಪ್ರಕಟಣೆಗೆ ಯೋಗ್ಯವಾದ ಘಟನೆಗಳನ್ನು ನಿರ್ಮಿಸಿದ್ದಾನೆ. ಅಲಂಕೃತವಾದ ಅಂತಃಪುರ, ಸಜ್ಜಾದ ಸಂಗೀತ ಶಾಲೆ, ಗಾನನರ್ತನಗಳು, ಪ್ರಮದೋದ್ಯಾನ, ಋತುರಾಜ ವಸಂತ, ಕಮಲಗಳ ನೆರಳಿನಲ್ಲಿ ಕುಳಿತ ಹಂಸಗಳು, ವಲಭಿಪರಿಚಯವನ್ನು ದ್ವೇಷಿಸುವ ಪಾರಿವಾಳಗಳು, ತಿರುಗುವ ಜಲಯಂತ್ರ, ಜಲಬಿಂದುಗಳನ್ನು ಕುಡಿಯಲು ಅದರ ಸುತ್ತ ಸುತ್ತುವ ನವಿಲು, ಲತಾಮಂದಿರ, ದೋಲಾಗೃಹ, ಅಶೋಕವನ್ನರಳಿಸುವ ವಸಂತಲಕ್ಷ್ಮಿಯಂತೆ ಶೋಭಿಸುವ ಮಾಳವಿಕೆ, ಅವಳಿಗನುಗುಣರಾದ ಪರಿಚಾರಿಕೆಯರು. ಇವು ಈ ನಾಟಕದ ಪ್ರಣಯಲೋಕದ ಮೋಹಕ ವಸ್ತುಗಳು. ಈ ನಾಟಕದ ಸ್ತ್ರೀ ವರ್ಣನೆಗಳು ಕಲಿತು ಬರೆದಂತಿಲ್ಲ; ರಸಿಕನಾಗಿ ನೋಡಿ ಆನಂದಿಸಿ, ಸ್ವಾನುಭವದಿಂದ ಬರೆದಂತಿದೆ.

ವಿಕ್ರಮೋರ್ವಶೀಯ, ಶಾಕುಂತಲಗಳಲ್ಲಿ ಉಜ್ವಲವೂ ಪ್ರೌಢವೂ, ಕಲಾತ್ಮಕವೂ, ಮೋಹಕವೂ ಕಾಮೋದ್ದೀಪಕವೂ ಆದ ಪ್ರಣಯದ ಪರಿಸರವಾಗಲೀ ಸನ್ನಿವೇಶವಾಗಲೀ ಇಲ್ಲ. ಮಾಳವಿಕಾಗ್ನಿಮಿತ್ರದ ನಾಯಿಕೆ ನಾಗರಿಕತೆಯೇ, ಮೂರ್ತಿಗೊಂಡ ರಸಿಕಲೋಕದ ಚೆಲುವೆಯಾದ ರಾಜಕುಮಾರಿ, ಅವಳು ಹಾವಭಾವ ವಿಲಾಸ ವೈಯಾರಗಳಿಂದ ಮನೋಹರಳಾಗಿ ವಿರಾಜಿಸುತ್ತಾಳೆ. ಅವಳಿಗೆ ಮಕ್ಕಳ ಚಿಂತೆಯಾಗಲೀ ಸಂಸಾರದ ಹೊರೆಯಾಗಲೀ ಇಲ್ಲ. ವಿಕ್ರಮೋರ್ವಶೀಯ ಮತ್ತು ಶಾಕುಂತಲಗಳ ಪ್ರಣಯಸ್ವರೂಪವೇ ಬೇರೆ; ಒಂದು ಗಂಧರ್ವಾಪ್ಸರೆಯರ ಅತಿಮಾನುಷಲೋಕ, ಮತ್ತೊಂದು ಭಾವದಸಪ್ರಪಂಚ; ಊರ್ವಶಿ, ಶಕುಂತಲೆಯರಿಬ್ಬರೂ ಋಷಿ ಪುತ್ರಿಯರು. ಗಂಧರ್ವಲೋಕದ ಊರ್ವಶಿ ಉನ್ಮಾದಕ ಸೌಂದರ್ಯದ ಚಿತ್ತಾರೆ; ಋಷ್ಯಾಶ್ರಮದ ಶಕುಂತಲೆ ಸಹಜ ಸೌಂದರ್ಯದ ಮುಗ್ಧೆ.

ಧಾರಿಣಿಯು ಭೂತಧಾರಿಣಿಯಂತೆ ಸಹನ ಶೀಲಳು. ಮಹಾದೇವಿಯಾದ ಅವಳಲ್ಲಿ ಸ್ಥಾನಕ್ಕೆ ತಕ್ಕ ಗಾಂಭೀರ್ಯ, ಔದಾರ್ಯಗಳಿವೆ. ರಾಜನ ಹೊಸ ಪ್ರಣಯ ಗೊತ್ತಿದ್ದರೂ ದಾಕ್ಷಿಣ್ಯದಿಂದ ನಾಟ್ಯ ಪ್ರದರ್ಶನಕ್ಕೆ ಒಪ್ಪಿದಳು; ಹಾವು ಕಚ್ಚಿದಾಗ ವಿಷಪರಿಹಾರಕ್ಕಾಗಿ ವಿದೂಷಕನಿಗೆ ಹಿಂದು ಮುಂದು ನೋಡದೆ ತನ್ನ ನಾಗಮುದ್ರಿಕೆಯನ್ನು ಕೊಟ್ಟಳು. ಇರಾವತಿಯು ಪ್ರಮದೆ, ಮುಂಗೋಪಿ; ಅವಳು ರಾಜನ ಹೊಸ ಪ್ರಣಯವನ್ನು ಸಹಿಸಲಾರಳು; ಅಪರಾಧಿಯಾದ ಗಂಡನನ್ನು ಛರಾಟೆಗೆ ತೆಗೆದುಕೊಳ್ಳಲು ಹಿಂಜರಿಯುವುದಿಲ್ಲ. ಆದರೂ ಅವಳದು ಆತ್ಯಂತಿಕ ಕೋಪವಲ್ಲ. ಪ್ರಣಯ ಕೋಪ. ಪರಿಚಾರಿಕೆಯರಾದ ಬಕುಳಾವಳಿಕೆ, ಕೌಮುದಿಕ, ನಿಪುಣಿಕೆ, ಮದನಿಕೆ ಮುಂತಾದ ಪಾತ್ರಗಳೂ ಪ್ರಧಾನ ಪಾತ್ರಗಳಿಗೆ ಅನುರೂಪವಾಗಿವೆ.

ಅಗ್ನಿಮಿತ್ರನು ನಾಟಕದ ನಾಯಕನಾದರೂ ಮಾಳವಿಕಾ ಚಿತ್ರಣಕ್ಕೆ ಭಿತ್ತಿಯಂತಿದ್ದಾನೆ. ಅವನು ಧೀರೋದಾತ್ತನಾಗಲೀ, ಧೀರಲಲಿತನಾಗಲೀ, ಆಗಿರದೆ ಅವರ ಮಧ್ಯಸ್ಥನಾಗಿ ಕಾಣುತ್ತಾನೆ, "ಭವಾನಪಿ ಸೂನೋಪರಿಚರೋ ವಿಹಂಗಮ ಇವಾಮಿಷಲೋಲುಪೋ ಭೀರುಕಶ್ಚ" ಎಂಬ ವಿದೂಷಕನ ಮಾತು ಅವನ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತದೆ. ಪ್ರೇಮದ ಸುಳಿಗೆ ಸಿಕ್ಕಿದರೂ ಅವನು ಆಳ್ವಿಕೆಯ ವಿಷಯದಲ್ಲಿ ಔದಾಸೀನ್ಯವನ್ನು ತಾಳಿಲ್ಲ. ವಿದರ್ಭ ರಾಜನೊಡನೆ ಯುದ್ಧ ದಾಯಾದಿಗಳಾದ ಮಾಧವಸೇನ ಯಜ್ಞಸೇನರಿಗೆ ರಾಜ್ಯದ ಹಂಚಿಕೆ, ಅಶ್ವಮೇಧ ಯಾಗಕ್ಕೆ ಸಹಕಾರ, ಮಗನ ಜೈತ್ರಯಾತ್ರೆ ಮುಂತಾದುವುಗಳಲ್ಲಿ ಅವನಿಗೆ ಆಸಕ್ತಿ ಇದೆ, ಈ ನಾಟಕದಲ್ಲಿ ವಿದೂಷಕನ ಕಾರ್ಯಕ್ಷೇತ್ರ ವಿಸ್ತಾರವಾದುದು; ಅವನ ಹಸಿವು ದಡ್ಡತನಗಳಿಗಿಂತ ಹಾಸ್ಯ ನೈಪುಣ್ಯ ಯುಕ್ತಿ ಚಾತುರ್ಯಗಳು ಹೆಚ್ಚಾಗಿ ಪ್ರಕಟವಾಗಿವೆ. ಹರದತ್ತ ಗಣದಾಸರ ಕಲಹ, ವಿದೂಷಕನನ್ನು ಹಾವು ಕಡಿದು, ವಸುಲಕ್ಷ್ಮಿಯು ಕೋತಿಗೆ ಹೆದರಿದುದು, ಮುಂತಾದ ಕಲ್ಪನೆಗಳು ಚಮತ್ಕಾರವಾಗಿವೆ. ಈ ನಾಟಕದಲ್ಲಿ ಕಾಣಿಸುವುದು ವಿರಹದುಃಖ ಮಾತ್ರ, ಶ್ರೀಸಾಮಾನ್ಯನ ನೋವು ನಲಿವುಗಳಿಗೆ ಇಲ್ಲಿ ಎಡೆಯಿಲ್ಲ.

ನಟನಿಗೆ ಅಗತ್ಯವಾದ ಸಂಗೀತ, ನರ್ತನ, ವೇಷ, ಭಾಷಾದಿಗಳ ಜ್ಞಾನ ನಾಟಕಕರ್ತನಾದ ಕಾಳಿದಾಸನಿಗೂ ಇದೆ. ಚಲಿತನಾಟ್ಯ, ಪಂಚಾಂಗಾಭಿನಯ, ಶರ್ಮಿಷ್ಠೆಯ ಕೃತಿಯಾದ ಚತುಷ್ಪದ ವಸ್ತುವಿನ ಗಾಯನಗಳನ್ನು ಕವಿಯು ಬಳಸಿಕೊಂಡಿದ್ದಾನೆ. ನಾಟ್ಯವಿಷಯದಲ್ಲಿ ಗೌರವ ಬುದ್ಧಿಗೆ ಅವನು ಕೊಟ್ಟಿರುವ ಕಾರಣ ಇದು—

ದೇವಾನಾಮಿದಮಾಮನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಂ,
ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ ।
ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೇ
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ ॥

ವಿಕ್ರಮೋರ್ವಶೀಯದ ನಾಲ್ಕನೆಯ ಅಂಕ ಗಾನ. ನರ್ತನಗಳಿಂದ ತುಂಬಿದೆ. ಶಾಕುಂತಲದ ಐದನೆಯ ಅಂಕದಲ್ಲಿ ಹಂಸಪದಿಕೆಯು ಹಾಡುತ್ತಾಳೆ. ರಘುವಂಶದಲ್ಲಿಯೂ ಕವಿಯ ಸಂಗೀತ ಜ್ಞಾನಕ್ಕೆ ನಿದರ್ಶನವಿದೆ 1, ಕಾಳಿದಾಸನು ಸಂಗೀತಾಭಿನಯಗಳ ಪೂರ್ಣಜ್ಞಾನವನ್ನು ಪಡೆದಿದ್ದು ಅಶ್ವಘೋಷ. ಷೇಕ್ಸ್‌ಪಿಯರ್, ಮೊದಲಾದವರಂತೆ ನಾಟಕಗಳನ್ನು ರಚಿಸಿ ತಾನೂ ಅಭಿನಯದಲ್ಲಿ ಪಾಲ್ಗೊಳ್ಳುತ್ತಿದ್ದನೋ ಏನೋ ಎನಿಸುತ್ತದೆ.

ಕಾಳಿದಾಸನ ಕೃತಿಗಳಲ್ಲಿ ಕಾವ್ಯಸಂಪತ್ತು ತುಂಬಿದೆ. ಧಾರಿಣಿಯು ಇರಾವತಿಯ ದಾಕ್ಷಿಣ್ಯದಿಂದ ಸಾರಭಾಂಡಭೂಗೃಹದಲ್ಲಿ ಮಾಲವಿಕೆಯನ್ನು ಬಂಧಿಸಿದುದನ್ನು ಈ ಪದ್ಯವು ಸುಂದರವಾಗಿ ಧ್ವನಿಸುತ್ತದೆ—

ಮಧುರಸ್ವರಾ ಪರಭೃತಾ ಭ್ರಮರೀ ಚ ವಿಬುದ್ಧಚೂತಸಂಗಿನ್ಯೌ ।
ಕೋಟರಮಕಾಲವೃಷ್ಟ್ಯಾ ಪ್ರಬಲಪುರೋವಾತಯಾ ಗಮಿತೇ ॥

ಉತ್ತಮ ಶಿಕ್ಷಕನ ಲಕ್ಷಣ :—

ಶ್ಲಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ ।
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ ॥

ಪಾತ್ರಪ್ರಾಶಸ್ತ್ಯ ;

ಪಾತ್ರವಿಶೇಷನ್ಯಸ್ತಂ ಗುಣಾಂತರಂ ವ್ರಜತಿ ಶಿಲ್ಪಮಾಧಾತುಃ ।
ಜಲಮಿವ ಸಮುದ್ರಶುಕ್ತೌ ಮುಕ್ತಾಫಲತಾಂ ಪಯೋದಸ್ಯ ॥

ವಿದ್ಯೆ ಜೀವಿಕೆ :

ಯಸ್ಯಾಗಮಃ ॥ ಕೇವಲಜೀವಿಕಾಯೈ ।
ತಂ ಜ್ಞಾನಪಣ್ಯಂ ವಣಿಜಂ ವದಂತಿ ॥

ಹಳೆಯದು ಹೊಸದೆಂಬ ಭೇದಬುದ್ಧಿ :—

ಪುರಾಣಮಿತ್ಯೇವ ನ ಸಾಧು ಸರ್ವಂ
ನಚಾಪಿ ಕಾವ್ಯಂ ನವಮಿತ್ಯವದ್ಯಂ ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ
ಮೂಢಃ ಪರಪ್ರತ್ಯಯನೇಯಬುದ್ಧಿಃ ॥

ಶೃಂಗಾರ ಕವಿಯೆಂದು ವಿಖ್ಯಾತನಾಗಿರುವ ಕಾಳಿದಾಸನ ಕಾವ್ಯಧರ್ಮದಿಂದ ರಂಜಿಸುವ ಅಧ್ಯಾತ್ಮನಿರೂಪಣೆ :—

ಏಕೈಶ್ವರ್ಯೇ ಸ್ಥಿತೋಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ
ಕಾಂತಾಸಂಮಿಶ್ರ ದೇಹೋಪ್ಯವಿಷಯಮನಸಾಂ ಯಃ ಪರಸ್ತಾದ್ಯತೀನಾಂ ।
ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ
ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ ॥

---

1. ಮನೋಭಿರಾಮಾಃ ಶೃಣ್ವಂತೌ ರಥನೇಮಿಸ್ವನೋನ್ಮುಖೈಃ ।
ಷಡ್ಜಸಂವಾದಿನೀಃ ಕೇಕಾಃ ದ್ವಿಧಾ ಭಿನ್ನಾ ಶಿಖಂಡಿಭಿಃ ॥ ರಘುವಂಶ



ವಿಕ್ರಮೋರ್ವಶೀಯಂ :—

ಐದು ಅಂಕಗಳುಳ್ಳ ಈ ನಾಟಕ ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಗಳಲ್ಲಿ ದೊರೆಯುತ್ತದೆ. ರಂಗನಾಥನು (ಕ್ರಿ॥ಶ॥ 1650) ಔತ್ತರೇಯ ಪಾಠವನ್ನೂ, ಕಾಟಯವೇಮನು (ಕ್ರಿ॥ಶ॥ಸು— 1400 ದಾಕ್ಷಿಣಾತ್ಯ ಪಾಠವನ್ನೂ ಬಳಸಿಕೊಂಡು ವ್ಯಾಖ್ಯಾನಗಳನ್ನು ಬರೆದಿದ್ದಾರೆ, ಔತ್ತರೇಯ ಪಾಠದ ನಾಲ್ಕನೆಯ ಅಂಕವು ಅಪಭ್ರಂಶದ ಪದ್ಯಗಳನ್ನು ಹೊಂದಿ ಗಾನ, ನಾಟ್ಯಗಳಿಂದ ತುಂಬಿದೆ. ಈ ಪದ್ಯಗಳ ರಾಗಗಳನ್ನೂ, ಪಾದನ್ಯಾಸಗಳನ್ನು (ನೃತ್ಯ) ಗುರುತಿಸಲಾಗಿದೆ. ಕೆಲವು ಕಡೆ ನರ್ತನಕ್ಕೆ ಹಂಸ, ಮೇಘ ಮುಂತಾದ ವಸ್ತುಗಳನ್ನು ಕುರಿತ ಪ್ರಕೃತಕ್ಕೆ ಸಂಬಂಧವಿಲ್ಲದ ಪದ್ಯಗಳೂ ಇವೆ. ಸಹಜನ್ಯೆ ಚಿತ್ರಲೇಖೆಯರು ಅಂಕದ ಪ್ರಾರಂಭದಲ್ಲಿ ಆಕ್ಷಿಪ್ತಿಕೆಯಿಂದ (ಗಾನ) ಪ್ರವೇಶಿಸಿ, ಅಂತ್ಯದಲ್ಲಿ ಖಂಡದಾರೆಯಿಂದ (ನಾಟ್ಯ) ನಿರ್ಗಮಿಸುತ್ತಾರೆ.

ಪ್ರಾಯಕವಾಗಿ ಇಲ್ಲಿನ ಗಾನದೊಡನೆ ನಾಟ್ಯವೂ ಬೆರೆತಿರುತ್ತದೆ. ಹೆಂಗಸು ಗಂಡಸರಿಬ್ಬರಿಂದಲೂ ನಾನಾವಿಧವಾದ ಗಾನ ನಾಟ್ಯಗಳನ್ನು ತಂದು ಪ್ರೇಕ್ಷಕರಿಗೆ ರಮಣೀಯ ದೃಶ್ಯವನ್ನು ಒದಗಿಸುವ ಪ್ರಯತ್ನ ಇಲ್ಲಿದೆ, ಇದರಲ್ಲಿ ಕವಿರಚಿತವಾದ ಭಾಗವೆಷ್ಟು ಎಂಬುದನ್ನು ನಿರ್ಧರಿಸಲಾಗುವುದಿಲ್ಲ. ಪುರುಷ ಪಾತ್ರವು ಪ್ರಾಕೃತ ಪದ್ಯಗಳನ್ನು ಹೇಳುವುದು ಸಂಪ್ರದಾಯಕ್ಕೆ ವಿರುದ್ಧವಾದುದರಿಂದಲೂ, ಪದ್ಯಗಳಿಗೂ ಗದ್ಯಗಳಿಗೂ ಅಂತರವು ಕಂಡು ಬರುವುದರಿಂದಲೂ ಉಳಿದೆರಡು ನಾಟಕಗಳಲ್ಲಿ ಈ ಪ್ರಯತ್ನವಿಲ್ಲದಿರುವುದರಿಂದಲೂ ವಿದ್ವಾಂಸರು ಈ ಭಾಗಗಳನ್ನು ಪ್ರಕ್ಷಿಪ್ತಗಳೆಂದು ಅಭಿಪ್ರಾಯ ಪಡುತ್ತಾರೆ. ವಿಕ್ರಮೋರ್ವಶೀಯವನ್ನು ದಾಕ್ಷಿಣಾತ್ಯ ಪಾಠವು ನಾಟಕವೆಂದೂ, ಔತ್ತರೇಯಪಾಠವು ತ್ರೋಟಕವೆಂದೂ ಕರೆದಿದೆ. ಬಹಳ ಮಟ್ಟಿಗೆ ಇದನ್ನು ತ್ರೋಟಕವೆಂದೇ ಪರಿಗ್ರಹಿಸಲಾಗಿದೆ, ತ್ರೋಟಕದ **ಲಕ್ಷಣ :—**

ಸಪ್ತಾಷ್ಟ ನವ ಪಂಚಾಂಕಂ ದಿವ್ಯ ಮಾನುಷ ಸಂಶ್ರಯಂ ।
ತ್ರೋಟಕಂ ನಾಮ ತತ್ಪ್ರಾಹುಃ ಪ್ರತ್ಯಂಗಂ ಸವಿದೂಷಕಂ ।

ದಿವ್ಯ ಮಾನುಷ ಪಾತ್ರಾದಿ ಲಕ್ಷಣವು ಶಾಕುಂತಲವೇ ಮುಂತಾದ ಕೆಲವು ನಾಟಕಗಳಲ್ಲಿಯೂ ಕಂಡುಬರುತ್ತದೆ. ಆದ್ದರಿಂದ ತ್ರೋಟಕ ಲಕ್ಷಣದಲ್ಲಿ ಗಾನ, ನಾಟ್ಯಗಳನ್ನು ಸೇರಿಸಬೇಕೆಂದು ತೋರುತ್ತದೆ. ಆಗ ಈ ಬಗೆಯ ರೂಪಕ ಇಂಗ್ಲೀಷ್ ಸಾಹಿತ್ಯದ 'ಅಪೇರಾ' ದಂತಾಗುತ್ತದೆ. ಇತರ ನಾಟಕಗಳಿಗಿಂತ ಈ ನಾಟಕದ ಶೃಂಗಾರ, ವಾತಾವರಣ, ಸನ್ನಿವೇಶ ಮುಂತಾದವೂ ಭಿನ್ನವಾಗಿವೆ. ಮೆಚ್ಚಿಬಂದ ಸ್ವತಂತ್ರಳಾದ ಅಪ್ಸರೆಗೆ ತಕ್ಕಂತಿವೆ. ಪುರೂರವನು ಚಂದ್ರನ ಮೊಮ್ಮಗ, ಚಂದ್ರರಥ, ಚಂದ್ರಧ್ವಜ. ಇವನೊಡನೆ ಊರ್ವಶಿ ಸೇರಿದರೆ ಚಂದ್ರನೊಡನೆ ಚಂದ್ರಿಕೆ ಬೆರೆತಂತಾಗುತ್ತದೆ. ಊರ್ವಶಿಗೆ ತಿರಸ್ಕರಣೀಯ ಸಹಾಯವಿದೆ. ಅವಳು ಇಷ್ಟ ಬಂದಲ್ಲಿಗೆ ಇಷ್ಟಬಂದಾಗ ಹೋಗಿ ರಮಿಸಬಲ್ಲಳು.

---

1. ಕಾಟಯವೇಮನು ಕುಮಾರವೀಡುವಿನ ರೆಡ್ಡಿರಾಜನಾದ ಕುಮಾರಗಿರಿಯ ಮಂತ್ರಿಯಾಗಿದ್ದನು. ಇವನ ವ್ಯಾಖ್ಯಾನಕ್ಕೆ 'ಕುಮಾರಗಿರಿ ರಾಜೀಯ' ವೆಂದು ಹೆಸರು.
2. ದ್ವಿಪದೀ, ಚರ್ಚರೀ, ಭಿನ್ನಕ, ಖಂಡಕ, ಖುರಕ, ಕುಟಿಲಿಕಾ, ಮಲ್ಲಘಟ್ಟೀ ಮುಂದಘಟೀ, ಗಲಿತಕ ಇತ್ಯಾದಿ. ಗಾನ, ನಾಟ್ಯ ವಿಧಗಳನ್ನು ಸೂಚಿಸಲಾಗಿದೆ.

ಕಥಾಸಾರಾಂಶ :—ಕುಬೇರ ಭವನದಿಂದ ಹಿಂದಿರುಗಿ ಬರುತ್ತಿದ್ದ ಉರ್ವಶಿಯನ್ನು ಅವಳ ಸಖಿಯಾದ ಚಿತ್ರಲೇಖೆಯೊಡನೆ ಕೇಶಿಯೆಂಬ ರಾಕ್ಷಸನು ಅಪಹರಿಸಿದನು. ಸೂರ್ಯೋಪಾಸನೆ ಮಾಡಿ ಬರುತ್ತಿದ್ದ ಪುರೂರವನು ಅವಳನ್ನು ಬಿಡಿಸಿ ಕರೆತಂದನು. ಅವಳು ಹೇಮಕೂಟದಲ್ಲಿ ರಂಭೆ, ಮೇನಕೆ, ಮೊದಲಾದ ತನ್ನ ಸಖಿಯರನ್ನು ಸೇರಿ ಇಂದ್ರನು ಕಳುಹಿಸಿದ್ದ ಚಿತ್ರರಥನೆಂಬ ಗಂಧರ್ವರಾಜನೊಡನೆ ಸ್ವರ್ಗಕ್ಕೆ ಹೋದಳು; ಪುರೂರವ ಉರ್ವಶಿಯರಲ್ಲಿ ಅನುರಾಗ ಮೂಡಿತು.

ಉರ್ವಶಿಯು ಚಿತ್ರಲೇಖೆಯೊಡನೆ ಬಂದು ಉದ್ಯಾನದಲ್ಲಿ ವಿರಹಪೀಡಿತನಾಗಿದ್ದ ಅಗ್ನಿಮಿತ್ರನನ್ನು ಕಂಡು, ಮೊದಲು ಭೂರ್ಜಪತ್ರದಲ್ಲಿ ಲೇಖನವೊಂದನ್ನು ಬರೆದು ನಂತರ ಕಾಣಿಸಿಕೊಂಡಳು. 'ಇಬ್ಬರೂ ಸುಖವಾಗಿರುವಷ್ಟರಲ್ಲಿ ಇಂದ್ರನ ಅಪ್ಪಣೆಯಂತೆ ದೇವದೂತನು ಬಂದು ನಾಟ್ಯಪ್ರದರ್ಶನಕ್ಕೆಂದು ಅವಳನ್ನು ಕರೆದುಕೊಂಡು ಹೋದನು. ನಿಪುಣಿಕೆಯಿಂದ ಉರ್ವಶೀವೃತ್ತಾಂತವನ್ನು ತಿಳಿದು ರಾಣಿಯಾದ ಉಶೀನರಿಯು ಆವನನ್ನು ಹುಡುಕಿಕೊಂಡು ಬಂದು, ವಿದೂಷಕನ ಅಜಾಗರೂಕತೆಯಿಂದ ತನ್ನ ಕೈಗೆ ಸಿಕ್ಕಿದ ಭೂರ್ಜಪತ್ರವನ್ನು ಓದಿ ಕೋಪಿಸಿಕೊಂಡು ರಾಜನ ಅನುನಯದಿಂದ ಸಮಾಧಾನಗೊಳ್ಳದೆ ಹೊರಟು ಹೋದಳು.

ದೇವಸಭೆಯಲ್ಲಿ ನಡೆಯುತ್ತಿದ್ದ ಸರಸ್ವತೀರಚಿತವಾದ "ಲಕ್ಷ್ಮೀಸ್ವಯಂವರವೆಂಬ" ನಾಟಕ ಪ್ರದರ್ಶನದಲ್ಲಿ ಲಕ್ಷ್ಮಿಯ ಪಾತ್ರವನ್ನು ವಹಿಸಿದ್ದ ಉರ್ವಶಿಯು ಅಭಿನಯ ಸಮಯದಲ್ಲಿ ಯಾರನ್ನು ವರಿಸುತ್ತೀಯ ಎಂದು ಕೇಳಿದಾಗ ಅಜಾಗರೂಕತೆಯಿಂದ "ಪುರುಷೋತ್ತಮನನ್ನು ಎನ್ನುವುದಕ್ಕೆ ಬದಲು 'ಪುರೂರವನನ್ನು' ಎಂದುಬಿಟ್ಟಳು. ಕೋಪಗೊಂಡ ಭರತಮುನಿಯು ದೇವಲೋಕವನ್ನು ಬಿಡುವಂತೆ ಅವಳಿಗೆ ಶಾಪಕೊಟ್ಟನು. ಇಂದ್ರನು ಕನಿಕರದಿಂದ ಪುರೂರವನಿಗೆ ಸಂತಾನದರ್ಶನವಾದಾಗ ದೇವಲೋಕಕ್ಕೆ ಬರುವಂತೆ ಅವಧಿಯನ್ನು ಕಲ್ಪಿಸಿದನು. ಅವಳು ರಾಜನ ಮಣಿಹರ್ಮ್ಯಕ್ಕೆ ಬಂದು ಇಳಿದಾಗ ರಾಣಿಯು ರೋಹಿಣೀ ಚಂದ್ರಸಮಾಗಮವೆಂಬ ಪತಿಪ್ರಸಾದನ ವ್ರತವನ್ನು ಆಚರಿಸುತ್ತಿದ್ದಳು. ಚಂದ್ರಪೂಜೆ ಮುಗಿದಮೇಲೆ ಅವಳು ರಾಜನಿಗೆ ನಿರಾತಂಕವಾಗಿ ಪ್ರಿಯಳೊಡನೆ ಸೇರಬಹುದೆಂದು ಅನುಮತಿಕೊಟ್ಟು ಹೊರಟು ಹೋದಳು. ತರುವಾಯ ಉರ್ವಶಿಯು ಅವನಿಗೆ ಕಾಣಿಸಿಕೊಂಡಳು.

ಉರ್ವಶಿಯ ಜೊತೆಯಲ್ಲಿ ಗಂಧಮಾದನ ಪರ್ವತದ ಸುಂದರಪ್ರದೇಶಗಳಲ್ಲಿ ವಿಹರಿಸುತ್ತಿದ್ದಾಗ ಪುರೂರವನು ಗಂಗಾತೀರದ ಮರಳು ಗುಡ್ಡೆಯಲ್ಲಿ ಆಟವಾಡುತ್ತಿದ್ದ ವಿದ್ಯಾಧರಿಯನ್ನು ದೃಷ್ಟಿಸಿ ನೋಡಿದನು. ಉರ್ವಶಿಯು ಕೋಪಿಸಿಕೊಂಡು ಕುಮಾರವನಕ್ಕೆ ಹೋಗಿ 'ಈ ವನಕ್ಕೆ ಬಂದ ಹೆಂಗಸು ಲತೆಯಾಗಲಿ' ಎಂಬ ಕುಮಾರಸ್ವಾಮಿಯ ಶಾಪದಿಂದ ಲತೆಯಾದಳು. ದುಃಖಿತನಾದ ಪುರೂರವನು ಹುಚ್ಚನಂತೆ ಅವಳಿಗಾಗಿ ಎಲ್ಲೆಡೆ ಹುಡುಕಾಡುತ್ತಿದ್ದಾಗ ದೊರೆತ ಸಂಗಮನೀಯಮಣಿಯ ಪ್ರಭಾವದಿಂದ ಉರ್ವಶೀಲತೆಯನ್ನು ತಬ್ಬಿಕೊಂಡಾಗ ಅದು ಉರ್ವಶಿಯಾಯಿತು. ಅವರು ವಿಹಾರದಿಂದ ಹಿಂದಿರುಗಿದರು. ಸಂಗಮನೀಯ ಮಣಿಯು ಅವಳ ಚೂಡಾಮಣಿಯಾಯಿತು.



ಒಂದುದಿನ ತಟ್ಟೆಯಲ್ಲಿ ಆ ಮಣಿಯನ್ನು ತರುತ್ತಿದ್ದಾಗ ಮಾಂಸದ ತುಂಡೆಂಬ ಭ್ರಾಂತಿಯಿಂದ ಅದನ್ನು ಒಂದು ಹದ್ದು ಎತ್ತಿಕೊಂಡು ಹೋಯಿತು. ಅದು ತಪ್ಪಿಸಿಕೊಂಡು ದೂರ ಹೋದುದರಿಂದ ಎಲ್ಲರೂ ನಿರಾಶರಾಗಿರಲು ಕಿರಾತಿಯು ಹದ್ದನ್ನು ಕೊಂದಿದ್ದ ಬಾಣವನ್ನೂ ಮಣಿಯನ್ನೂ ತಂದು ಕೊಟ್ಟಳು, ಆ ಬಾಣದಲ್ಲಿ 'ಉರ್ವಶೀಪುರೂರವರ ಮಗನಾದ ಆಯು' ಎಂದು ಬರೆದಿದ್ದಿತು. ಅಷ್ಟರಲ್ಲಿ ಒಬ್ಬ ತಾಪಸಿಯು ರಾಜನಕಣ್ಣಿಗೆ ಬೀಳಿಸಬಾರದೆಂದು ಹೇಳಿ ಹುಟ್ಟಿದ ಕೂಡಲೇ ತನ್ನಲ್ಲಿಟ್ಟಿದ್ದ ಆಯುವನ್ನು ಕರೆತಂದು ಋಷ್ಯಾಶ್ರಮ ಧರ್ಮಕ್ಕೆ ವಿರುದ್ಧವಾಗಿ ಆಚರಿಸಿದನೆಂದು ತಿಳಿಸಿ ಅವನನ್ನು ಉರ್ವಶಿಗೆ ಒಪ್ಪಿಸಿದಳು. ಭರತನ ಶಾಪವನ್ನು ತಿಳಿಯಂದ ದೊರೆಗೆ ಸಂತೋಷವಾಯಿತು ; ಅವನ ಅಗಲಿಕೆಯನ್ನು ನೆನೆದ ಉರ್ವಶಿಗೆ ದುಃಖವಾಯಿತು. ಈ ವೇಳೆಗೆ ಸರಿಯಾಗಿ ದೇವಾಸುರ ಯುದ್ಧದಲ್ಲಿ ತನಗೆ ಸಹಾಯ ಮಾಡಬೇಕೆಂದು ಉರ್ವಶಿಯು ಅವನೊಡನೆ ಆಜೀವವಾಗಿ ಇರಬಹುದೆಂದೂ ಇಂದ್ರನು ನಾರದರ ಮೂಲಕ ಪುರೂರವನಿಗೆ ಹೇಳಿಕಳುಹಿಸಿದನು. ನಾರದರು ಆಯುವಿನ ಯೌವರಾಜ್ಯ ಪಟ್ಟಾಭಿಷೇಕ ಮಾಡಿದರು.

ವಿಕ್ರಮೋರ್ವಶೀಯರ ಕಥೆಯು ಬಹಳ ಪೂರ್ವ ಕಾಲದಿಂದಲೂ ಪ್ರಚಾರದಲ್ಲಿದೆ. ಇದು ವೇದ ಪುರಾಣ ಇತಿಹಾಸ, ಕಥಾಸಾಹಿತ್ಯ ಮುಂತಾದವುಗಳಲ್ಲೆಲ್ಲಾ ಕಂಡು ಬರುತ್ತದೆ. ಋಗ್ವೇದದ ಈ ವಿರಹ ಕಥೆ ಪದ್ಮಪುರಾಣ, ವಿಷ್ಣುಪುರಾಣ, ಭಾಗವತಗಳಲ್ಲಿ ವಿಸ್ತಾರವಾಗಿ ಬಂದಿದೆ[1]; ಅದರ ಸಂಗ್ರಹ ಇದು.

ಮಿತ್ರಾವರುಣರ ಶಾಪದಿಂದ ಉರ್ವಶಿ ಭೂಲೋಕಕ್ಕೆ ಬಂದು ಪ್ರತಿಷ್ಠಾನಗರದಲ್ಲಿದ್ದ ಪುರೂರವನನ್ನು ಕಾಮಿಸಿ, (1) ತಾನು ಮಕ್ಕಳಂತೆ ಸಾಕಿಕೊಂಡಿದ್ದ ಎರಡು ಆಡುಗಳನ್ನು ಕಾಪಾಡಬೇಕು, (2) ತನಗೆ ಆಹಾರವನ್ನಾಗಿ ತುಪ್ಪವನ್ನೇ ಕೊಡಬೇಕು. (3) ತನಗೆ ಬೆತ್ತಲೆಯಾಗಿ ಕಾಣಕೂಡದು ಎಂಬ ನಿಬಂಧನೆಗಳ ಮೇಲೆ ಅವನೊಡನೆ ಸುಖವಾಗಿದ್ದಳು. ಉರ್ವಶಿ ಇಲ್ಲದೆ ಬೇಸರವಾದುದರಿಂದ ದೇವತೆಗಳು ಅವಳನ್ನು ಕರೆತರಲು ಗಂಧರ್ವರನ್ನು ಕಳುಹಿಸಿದರು ಅವರು ಉರ್ವಶಿಯ ಮಂಚಕ್ಕೆ ಕಟ್ಟಿದ್ದ ಆಡುಗಳನ್ನು ಕದ್ದರು. ಅವು ಕೂಗಿಕೊಳ್ಳಲು ಗಾಬರಿಯಿಂದ ಬೆತ್ತಲೆಯಾಗಿ ಎದ್ದ ಪುರೂರವನು ಅವುಗಳನ್ನು ಬಿಡಿಸಿಕೊಳ್ಳಲು ಹೋದನು ಗಂಧರ್ವರು ನಿರ್ಮಿಸಿದ ಮಿಂಚಿನ ಬೆಳಕಿನಲ್ಲಿ ಉರ್ವಶಿಯು ಅವನನ್ನು ನೋಡಿ ಅದೃಶ್ಯಳಾಗಿ ಹೊರಟು ಹೋದಳು. ದುಃಖಿತನಾದ ಪುರೂರವನು ಹುಚ್ಚನಂತೆ ಅಲೆದಾಡುತ್ತಾ ಒಂದು ದಿನ ಅವಳನ್ನು ಮಾನಸ ಸರೋವರದ ಹತ್ತಿರ ಕಂಡನು. ಆಗ ಗರ್ಭಿಣಿಯಾಗಿದ್ದ ಅವಳು ಒಂದು ವರ್ಷದ ನಂತರ ಬರಬೇಕೆಂದು ಹೇಳಿದಳು. ನಂತರ ಅವನು ವರ್ಷಕ್ಕೊಂದು ದಿನದಂತೆ ಅವಳೊಡನಿದ್ದು ಆಯು ಮುಂತಾದ ಆರು ಮಕ್ಕಳನ್ನು ಪಡೆದನು ಅವನು ಅವಳೊಡನೆ ಶಾಶ್ವತವಾಗಿ ಇರಲು ಬೇಡಿದುದರಿಂದ ಗಂಧರ್ವರು ಅವನಿಗೆ ಅಗ್ನಿಸ್ಥಾಲಿಯನ್ನು ಕೊಟ್ಟರು. ಒಂದು ದಿನ ಅವನು

1. ಋಗ್ವೇದ—X ಶತಪಥಬ್ರಾಹ್ಮಣ—V12, ಬೃಹದೇವತಾ—VII,140 7, ಮತ್ಸ್ಯಪುರಾಣ—24, ಭಾಗವತ—IX, 14, ಕಥಾಸರಿತ್ಸಾಗರ—III 3. ಹರಿವಂಶ. ಉಷಸ್ಸು ಮತ್ತು ಸೂರ್ಯರು ಕ್ರಮವಾಗಿ ವೇದದಲ್ಲಿ ಉರ್ವಶೀಪುರೂರವರಾಗಿ ಪರಿಣಮಿಸಿದ್ದಾರೆಂದು ಹೇಳುತ್ತಾರೆ

ಅದನ್ನು ಕಾಡಿನಲ್ಲಿ ಮರೆತು ಮನೆಗೆ ಬಂದನು. ಪುನಃ ಹೋಗಿ ನೋಡುವಾಗ ಅದರ ಜಾಗದಲ್ಲಿ ಒಂದು ಬನ್ನಿಯ ಮರವೂ, ಅದರೊಳಗಿನಿಂದ ಒಂದು ಅರಳಿಯ ಮರವೂ ಹುಟ್ಟಿಕೊಂಡಿದ್ದವು. ಅವನು ಅವುಗಳ ತುಂಡುಗಳನ್ನು ಮಥಿಸಿ ಪಡೆದ ಅಗ್ನಿಯಿಂದ ಯಜ್ಞಮಾಡಿ ಶಾಶ್ವತವಾಗಿ ಗಂಧರ್ವ ಲೋಕಕ್ಕೆ ಹೋದನು.

ಕಥಾಸರಿತ್ಸಾಗರದಂತೆ ಪುರೂರವನು ನಂದನವನದಲ್ಲಿ ಉರ್ವಶಿಯನ್ನು ಕಂಡು ಮೋಹಿಸಿ ದನು ; ವಿಷ್ಣು ಅವಳನ್ನು ಇಂದ್ರನಿಂದ ಅವನಿಗೆ ಕೊಡಿಸಿದನು. ಒಂದು ಸಾರಿ ವಿಜಯೋತ್ಸವ ಸಂದರ್ಭದಲ್ಲಿ ನಡೆದ ನಾಟ್ಯದಲ್ಲಿ ರಂಭೆಯ ತಪ್ಪನ್ನು ಕಂಡು ಅವನು ನಕ್ಕನು. ಉರ್ವಶಿ ಯಿಂದ ತಾನು ದೇವನಾಟ್ಯದ ಗುಟ್ಟನ್ನು ತಿಳಿದಿರುವುದಾಗಿಯೂ ತನಗೆ ತಿಳಿದಿರುವಷ್ಟು ಆಚಾರ್ಯನಾದ ತುಂಬುರನಿಗೂ ತಿಳಿಯದೆಂದೂ ಅವನು ರಂಭೆಗೆ ಹೇಳಿದನು. ಕೋಪಗೊಂಡ ತುಂಬುರನು ಕೃಷ್ಣನನ್ನು ಆರಾಧಿಸುವ ತನಕ ಉರ್ವಶಿಯ ವಿಯೋಗವಾಗಲೆಂದು ಅವನಿಗೆ ಶಾಪ ಕೊಟ್ಟನು. ಪುರೂವರನು ಹರಿಯನ್ನು ಮೆಚ್ಚಿಸಿ ಗಂಧರ್ವರು ಅಪಹರಿಸಿದ್ದ ಉರ್ವಶಿ ಯನ್ನು ಮತ್ತೆ ಪಡೆದು ಭೂಲೋಕದಲ್ಲಿಯೇ ಸುಖವನ್ನನುಭವಿಸಿದನು.

ಮತ್ಸ್ಯಪುರಾಣದ ಪ್ರಕಾರ ಪುರೂರವನು ಉರ್ವಶಿ, ಚಿತ್ರಲೇಖೆಯರನ್ನು ಕೇಶಿಯೆಂಬ ದಾನವನಿಂದ ಬಿಡಿಸಿ ಇಂದ್ರನ ಮಿತ್ರನಾದನು. ಒಮ್ಮೆ ಭರತನು ಏರ್ಪಡಿಸಿದ್ದ ಲಕ್ಷ್ಮೀ ಸ್ವಯಂವರದಲ್ಲಿ ಉರ್ವಶಿ, ಮೇನಕೆ, ರಂಭೆಯರು ಅಭಿನಯಿಸಿದರು. ಲಕ್ಷ್ಮೀ ಪಾತ್ರವನ್ನು ವಹಿಸಿದ್ದ ಉರ್ವಶಿಯು ಪುರೂರವನನ್ನು ಕಂಡು ಉದ್ದೀಪಿತಳಾಗಿ ಅಭಿನಯದಲ್ಲಿ ತಪ್ಪು ಮಾಡಿದಳು. ಭರತನು ಕೋಪಗೊಂಡು ಅವಳು ಭೂಲೋಕದಲ್ಲಿ ಐವತ್ತೈದು ವರ್ಷ ಲತೆ ಯಾಗಿರಬೇಕೆಂದೂ ಪುರೂರವನು ಪಿಶಾಚತ್ವವನ್ನೂ ಪಡೆಯಬೇಕೆಂದೂ ಶಪಿಸಿದನು. ಶಾಪ ಮುಗಿದ ಮೇಲೆ ಉರ್ವಶಿ ಭೂಲೋಕದಲ್ಲಿ ಪುರೂರವನೊಡನೆ ಇದ್ದು ಆಯು ಮುಂತಾದ ಎಂಟು ಮಕ್ಕಳನ್ನು ಪಡೆದಳು. ಈ ಕಥೆಯ ಪೀಠಿಕಾ ಭಾಗದಲ್ಲಿ ಒಂದು ಉಪಕಥೆಯಿದೆ. ಅದರಂತೆ ಲೋಭದಿಂದ ಕಷ್ಟ ಬರಲೆಂದು ಅರ್ಥವೂ, ಗಂಧಮಾದನ ಪರ್ವತದ ಕುಮಾರ ವನದಲ್ಲಿ ಪ್ರೇಯಸಿಯ ವಿರಹ ವ್ಯಥೆಯನ್ನು ಅನುಭವಿಸೆಂದು ಕಾಮವೂ ಧರ್ಮ ಪಕ್ಷಪಾತಿ ಯಾದ ಪುರೂರವನನ್ನು ಶಪಿಸಿದವು; ಧರ್ಮದಿಂದ ಬಾಳಿ ಸುಖವಾಗಿರಲೆಂದು ಧರ್ಮ ಆಶೀರ್ವದಿಸಿತು.

ಮತ್ಸ್ಯಪುರಾಣದ ಕತೆಗೂ ನಾಟಕದ ಕತೆಗೂ ಹಲವು ಅಂಶಗಳಲ್ಲಿ ಸಾದೃಶ್ಯವಿದೆ. ಪುರಾಣಗಳ ಕಾಲ ಇನ್ನೂ ವಿವಾದಾಸ್ಪದವಾಗಿಯೇ ಉಳಿದಿರುವುದರಿಂದ ಕಾಳಿದಾಸನು ಯಾವ ಮೂಲದಿಂದ ವಸ್ತುವನ್ನು ತೆಗೆದುಕೊಂಡಿದ್ದಾನೆಂಬುದನ್ನು ನಿರ್ಧರಿಸುವುದು ಕಷ್ಟ. ನಾಟಕದ ಕತೆಯಲ್ಲಿ ಅಗ್ನಿಮಥನ, ವಿಷ್ಣೂಪಾಸನೆಗಳು ಬಿಟ್ಟುಹೋಗಿವೆ. ಒಂದೊಂದು ಜಾತಿಯ ಕಥೆ ಯಿಂದ ಒಂದೆರಡು ಅಂಶಗಳಾದರೂ ಬಂದಿವೆ. ಎಲ್ಲಾ ಮೂಲಗಳ ಪರಿಚಯವಿದ್ದರೂ ಕವಿಯು ಪುರೂರವ, ಉರ್ವಶಿಯರ ಪ್ರಣಯ ಪರಿಪೋಷಣೆಗಾಗಿ ಹಲವು ಬದಲಾವಣೆಗಳನ್ನು ಮಾಡಿಕೊಂಡಿರುವುದು ಸ್ಪಷ್ಟ. ನಾಟಕದ ಉರ್ವಶಿ. ಮಿತ್ರಾವರುಣರ ಶಾಪದಿಂದ ಭೂ



ಲೋಕಕ್ಕೆ ಬಂದವಳಾಗಲೀ, ನಂದನ ವನದಲ್ಲಿ ಪುರೂರವನನ್ನು ಕಾಮಿಸಿದವಳಾಗಲೀ, ನಿಬಂಧನೆ ಗಳ ಮೇಲೆ ಪುರೂರವನೊಡನೆ ಕೂಡಿದವನಾಗಲೀ ಅಲ್ಲ; ತನ್ನನ್ನು ಸಂಕಟದಿಂದ ಪಾರು ಮಾಡಿದ ವೀರನೂ, ಸುಂದರನೂ ಆದ ಪುರೂರವನನ್ನು ಯಾವ ನಿಬಂಧನೆಯೂ ಇಲ್ಲದೆ ಸಹಜವಾಗಿ ಪ್ರೀತಿಸಿದಳು. ಅವನು ನಾಟಕದಲ್ಲಿ ಬೆತ್ತಲೆಯಾಗಿ ಕಾಣಿಸಿಕೊಳ್ಳುವ ಪ್ರಮೇಯ ವಿಲ್ಲ. ಇಲ್ಲಿರುವುದು ರಂಭೆ ತಪ್ಪು ಮಾಡಿದ ಅಪ್ಸರೆಯರ ನರ್ತನವಲ್ಲ; ಸರಸ್ವತಿಯಿಂದ ರಚಿತ ವಾದ "ಲಕ್ಷ್ಮೀಸ್ವಯಂವರ"ದ ಪ್ರದರ್ಶನ; ಅಭಿನಯದಲ್ಲಿ ತಪ್ಪು ಮಾಡಿದವಳು ಉರ್ವಶಿ. ಕವಿಯು ಪ್ರಚಾರದಲ್ಲಿದ್ದ ಕಥೆಗಳ ಪ್ರಣಯ ಪೋಷಣೆಗೆ ಯೋಗ್ಯವಲ್ಲದ ಭಾಗಗಳನ್ನು ಬಿಟ್ಟು ಕುಮಾರಸ್ವಾಮಿಯ ಶಾಪ ಮತ್ತು ಸಂಗಮನೀಯ ಮಣಿಗಳನ್ನು ತನ್ನ ಪ್ರತಿಭೆಯಿಂದ ಕಲ್ಪಿಸಿ ಕೊಂಡು ಪ್ರಥಮಾನುರಾಗವು ದೃಢಪ್ರೇಮವಾಗಿ ಪರಿಣಮಿಸುವಂತೆ ನಾಟಕವನ್ನು ರಚಿಸಿದ್ದಾನೆ. ಮಾಲವಿಕಾಗ್ನಿಮಿತ್ರದ ಪ್ರೇಮ ಚಾಂಚಲ್ಯದಿಂದ ತುಂಬಿ ಮಯೋನುಗುಣವಾದುದು; ವಿಕ್ರ ಮೋರ್ವಶೀಯರ ಪ್ರೇಮ ದೇವತೆಗಳಿಂದ ಅನುಮೋದಿತವಾದುದು ; ಶಾಕುಂತಲದಲ್ಲಿರುವುದು ಋಷಿಗಳಿಗೂ ದೇವತೆಗಳಿಗೂ ಧರ್ಮಕ್ಕೂ ಸಮ್ಮತವಾಗಿ ಪೂರ್ಣಫಲ ಪಡೆದ ಅಮರಪ್ರೇಮ. ಸರಸ್ವತಿಯು ಮಾಲವಿಕಾಗ್ನಿಮಿತ್ರದಲ್ಲಿ ಕಾಣಿಸದೆ, ವಿಕ್ರಮೋರ್ವಶೀಯದಲ್ಲಿ ಲಕ್ಷ್ಮಿಯೊಡನೆ ಕಾಣಿಸಿಕೊಂಡು, ಶಾಕುಂತಲದಲ್ಲಿ ಅದ್ವಿತೀಯಳಾಗಿ ಹರಸುತ್ತಾಳೆ.[1]

ವಿಕ್ರಮೋರ್ವಶೀಯದ ನಾಯಿಕೆಯಾದ ಉರ್ವಶಿ, ಮಾಳವಿಕೆಯಂತೆ ಭಯ, ಸಂಕೋಚ, ನಾಚಿಕೆಗಳಿಂದ ತುಂಬಿ ಪರಾಧೀನೆಯಾದ ರಾಜಕುಮಾರಿಯಲ್ಲ; ಆಕಸ್ಮಾತ್ತಾಗಿ ಒದಗಿದ ದರ್ಶನ ಮಾತ್ರದಿಂದ ಅನುರಕ್ತಳೂ ಅಲ್ಲ ; ಸ್ವತಂತ್ರಳೂ ಅದಮ್ಯ ಪ್ರೇಮವುಳ್ಳವಳೂ, ದಿವ್ಯ ಸುಂದರಿಯೂ ಆದ ಅವಳು ತನ್ನನ್ನು ಸಂಕಟದಿಂದ ಪಾರುಮಾಡಿದ ಪುರೂರವನ ಪರಾಕ್ರಮ, ಸೌಜನ್ಯ, ಸೌಂದರ್ಯಗಳನ್ನು ಕಣ್ಣಾರೆ ಕಂಡು ಮೆಚ್ಚಿ ಒಲಿದ ಅಪ್ಸರೆ. ಕಣ್ಣು ಕೋರೈಸುವ ಹುಚ್ಚು ಹಿಡಿಸುವ ಲೋಕಾತೀತ ಸೌಂದರ್ಯವುಳ್ಳವಳಾದರೂ ಅವಳ ಪ್ರಣಯ ಕಪಟ, ವಂಚನೆ, ಕ್ಷಣಿಕತೆಗಳಿಂದ ರಹಿತವಾದುದು. ಹೆತ್ತ ತಾಯಿಗೆ ತನ್ನ ಮುದ್ದು ಕಂದನಲ್ಲಿ ಅತೀವ ವಾತ್ಸಲ್ಯ ವಿರುವುದು ಸಹಜವಾದರೂ ಅವಳು ಪ್ರಿಯನ ಅಗಲಿಕೆಯ ಭಯದಿಂದ ತನ್ನ ಕರುಳಿನ ಕೋಮಲ ಕುಡಿಯನ್ನು ದೂರದ ಋಷ್ಯಾಶ್ರಮದಲ್ಲಿ ಬಿಟ್ಟು ಅದನ್ನು ಪೋಷಿಸಿ ಆಡಿಸಿ, ಪಡೆಯಬಹುದಾಗಿದ್ದ ಸಂತೋಷವನ್ನು ಕಳೆದುಕೊಂಡಳು. ಅಪ್ಸರೆಯಾದ ಅವಳು ಪ್ರಣಯದ ಭರದಲ್ಲಿ ಔಚಿತ್ಯದ ಎಲ್ಲೆ ಮೀರಿ ನಡೆಯಲಿಲ್ಲ; ಪ್ರಣಯ ಪರವಶೆಯಾಗಿ ಇಂದ್ರನ ಆದೇಶ ವನ್ನು ಅತಿಕ್ರಮಿಸಲಿಲ್ಲ. ನಾಟಕದಲ್ಲಿ ಅವಳ ಪಾತ್ರ ಚಿತ್ರಣವು ಮೋಹಕವಾಗಿದೆ. ಅವಳು, ಸ್ವರ್ಗದ ಅಲಂಕಾರ, ರೂಪ ಗರ್ವಿತೆಯಾದ ಲಕ್ಷ್ಮಿಯ ತಿರಸ್ಕಾರ, ಆಭರಣಕ್ಕೆ ಆಭರಣ.

1 ಪರಸ್ಪರವಿರೋಧಿನ್ಯೋರೇಕಸಂಶ್ರಯದುರ್ಲಭಂ ।
ಸಂಗತಂ ಶ್ರೀ ಸರಸ್ವತ್ಯೋರ್ಭೂತಯೇsಸ್ತು ಸದಾ ಸತಾಂ ॥
—ವಿಕ್ರಮೋರ್ವಶೀಯದ ಭರತ ವಾಕ್ಯ
ಸರಸ್ವತೀ ಶ್ರುತಮಹತಾಂ ಮಹೀಯಸಾಂ ।
—ಶಾಕುಂತಲದ ಭರತವಾಕ್ಯ

ಉಪಮಾನಕ್ಕೆ ಉಪಮಾನ, ರಂಭೆ, ಮೇನಕೆ, ಸಹಜನ್ಯೆ, ಚಿತ್ರಲೇಖೆಯರು ಅವಳ ಸಖಿಯರು. ಅವಳು ವೇದಾಭ್ಯಾಸ ಜಡನಾದ ಮುನಿಯ ಸೃಷ್ಟಿಯಾಗಿರಲಾರಳು—

ಅಸ್ಯಾಸ್ಸರ್ಗವಿಧೌ ಪ್ರಜಾಪತಿರಭೂತ್ ಚಂದ್ರೋ ನು ಕಾಂತಪ್ರಭಃ
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ ।
ವೇದಾಭ್ಯಾಸಜಡಃ ಕಥಂ ಸ ವಿಷಯವ್ಯಾವೃತ್ತಕೌತೂಹಲೋ ।
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥

ಇದು ಮೂರ್ಛೆ ತಿಳಿದೇಳುವ ಉರ್ವಶಿಯ ಸುಂದರ ದೃಶ್ಯ :—

ಆವಿರ್ಭೂತೇ ಶಶಿನಿ ತಮಸಾ ಮುಚ್ಯಮಾನೇವ ರಾತ್ರಿಃ
ನೈಶಸ್ಯಾರ್ಚಿರ್ಹುತಭುಜ ಇವಚ್ಛಿನ್ನಭೂಯಿಷ್ಠಧೂಮಾ ।
ಮೋಹೇನಾಂತರ್ವರತನುರಿಯಂ ಲಕ್ಷ್ಯತೇ ಮುಚ್ಯಮಾನಾ
ಗಂಗಾರೋಧಃಪತನಕಲುಷಾ ಗೃಹ್ಣತೀವ ಪ್ರಸಾದಂ ॥

ಉರ್ವಶಿಯನ್ನು ಕಳೆದುಕೊಂಡಾಗ ಪುರೂರವನಿಗೆ ಹುಚ್ಚು ಹಿಡಿದುದು ಹೆಚ್ಚಲ್ಲ. ಇದು ಲತೆಯಾಗಿದ್ದ ಉರ್ವಶಿಯ ವರ್ಣನೆ :—

ತನ್ವೀ ಮೇಘಜಲಾರ್ದ್ರಪಲ್ಲವತಯಾ ಧೌತಾಧರೇವಾಶ್ರುಭಿಃ
ಶೂನ್ಯೇವಾಭರಣೈಃ ಸ್ವಕಾಲವಿರಹಾದ್ವಿಶ್ರಾಂತ ಪುಷ್ಪೋದ್ಗಮಾ ।
ಚಿಂತಾಮೌನಮಿವಾಸ್ಥಿತಾ ಮಧುಲಿಹಾಂ ಶಬ್ದೈರ್ವಿನಾ ಲಕ್ಷ್ಯತೇ
ಚಂಡೀ ಮಾಮವಧೂಯ ಪಾದಪತಿತಂ ಜಾತಾನುತಾಪೇವ ಸಾ ॥

ಮಾಳವಿಕೆ ರಾಜಕುಮಾರಿ ; ಅವಳ ವ್ಯಾಪ್ತಿ ಭೂಲೋಕದ ಪ್ರಮದವನ, ಅಂತಃಪುರಗಳಿಗೆ ಸೀಮಿತವಾದುದು ; ಅವಳದು ಸಂತಾನ ಸಂಪರ್ಕವಿಲ್ಲದ ಪ್ರಣಯ, ಉರ್ವಶೀ ಶಕುಂತಲೆಯರು ಋಷಿಪುತ್ರಿಯರು ; ಒಬ್ಬಳು ಉಭಯಲೋಕಗಳಲ್ಲಿಯೂ ಓಡಾಡಬಲ್ಲವಳಾದರೆ, ಮತ್ತೊಬ್ಬಳು ಭೂಮಿಯಿಂದ ಸಾಗಿ ಮಾರೀಚಾಶ್ರಮದಲ್ಲಿ ನಿಂತವಳು. ಸಂತಾನ ಉರ್ವಶಿಯ ಪ್ರಣಯಕ್ಕೆ ವಿಘ್ನವಾದರೆ, ಶಕುಂತಲೆಯ ಪ್ರಣಯಕ್ಕೆ ಪರಿಪೋಷಕ.

ಪುರೂರವನು ಧೀರೋದಾತ್ತನಾಯಕ. ಅಪ್ಸರೆಯರ ಗೋಳನ್ನು ಕೇಳಿ ಮರುಗಿ ಕೇಶಿಯನ್ನು ಸದೆಬಡಿದು ಉರ್ವಶಿಯನ್ನು ಬಿಡಿಸಿ ತಂದನು. ದೇವಾಸುರರ ಯುದ್ಧದಲ್ಲಿ ಭಾಗವಹಿಸಿ ಇಂದ್ರನಿಗೆ ಜಯಗಳಿಸಿಕೊಟ್ಟನು. ಕೇಶಿಯನ್ನು ಜಯಿಸಿದುದು ವಜ್ರಿಯ ಪ್ರಭಾವವೆಂಬ ಅವನ ಮಾತು ಅವನ ವಿನಯಕ್ಕೆ ದ್ಯೋತಕ. ಚಿತ್ರರಥನು ಅವನನ್ನು "ಅನುತ್ಸೇಕಃ ಖಲುವಿಕ್ರಮಾಲಂಕಾರಃ " ಎಂದು ಶ್ಲಾಘಿಸಿದನು. ಉರ್ವಶಿಯಲ್ಲಿ ಅನುರಕ್ತನಾದರೂ ಅವನು ರಾಣಿಯನ್ನು ನೋಯಿಸಲಾರದ ದಕ್ಷಿಣ ನಾಯಕ. ಅವನ ಉರ್ವಶೀ ಪ್ರಣಯ ಅನುಪಮವಾದುದು. ಅವಳ ಸ್ಪರ್ಶ ಅವನಿಗೆ ಸುಖಾವಹವಾದುದು.

ಯದಯಂ ರಥ ಸಂಕ್ಷೋಭಾದಂಸೇನಾಂಸೋ ನಿಪೀಡಿತಃ ।
ಏಕಃ ಕೃತೀ ಶರೀರೇಽಸ್ಮಿನ್ ಶೇಷಮಂಗಂ ಭುವೋಭರಃ ॥



ಅವನು ಉರ್ವಶಿಯನ್ನು ಅಗಲಿರಲಾರ ; ಕುಸುಮ ಶಯನವಾಗಲೀ ಚಂದ್ರಮರೀಚಿಗಳಾಗಲೀ ಗಂಧಾನುಲೇಪನವಾಗಲೀ ಅವನ ಸಂತಾಪವನ್ನು ಪರಿಹರಿಸಲಾರವು. ಪ್ರಣಯ ವಿಹಾರ ಸಮಯದಲ್ಲಿ ಪ್ರೇಯಸಿಯನ್ನು ಕಳೆದುಕೊಂಡು ಹುಚ್ಚನಂತೆ ಸುತ್ತಾಡಿದನು. ಪಶು, ಪಕ್ಷಿ, ತರು, ಲತೆಗಳನ್ನು ತನ್ನ ಪ್ರೇಯಸಿಯನ್ನು ತೋರಿಸಿರೆಂದು ಕಂಗಾಲಾಗಿ ಬೇಡಿಕೊಂಡನು. ಈ ಪದ್ಯ ಅವನ ಮನೋವೈಕಲ್ಯವನ್ನು ತಿಳಿಸುತ್ತದೆ :—

ನವಜಲಧರಃ ಸನ್ನದ್ಧೋಽಯಂ ನ ದೃಪ್ತನಿಶಾಚರಃ
ಸುರಧನುರಿದಂ ದೂರಾಕೃಷ್ಟಂ ನ ನಾಮ ಶರಾಸನಂ ।
ಅಯಮಪಿ ಪಟುರ್ಧಾರಾಸಾರೋ ನ ಬಾಣ ಪರಂಪರಾ
ಕನಕನಿಕಷಸ್ನಿಗ್ಧಾ ವಿದ್ಯುತ್ಪ್ರಿಯಾ ನ ಮಮೋರ್ವಶೀ ॥

ಇದು ದುಂಬಿಯನ್ನು ಕುರಿತ ಅವನ ಮಾತು—

ಮಧುಕರ ಮದಿರಾಕ್ಷ್ಯಾಃ ಶಂಸ ತಸ್ಯಾಃ ಪ್ರವೃತ್ತಿಂ
ವರತನುರಥವಾಸೌ ನೈವ ದೃಷ್ಟಾ ತ್ವಯಾ ಮೇ ।
ಯದಿ ಸುರಭಿಮವಾಪ್ಸ್ಯಸ್ತನ್ಮುಖೋಚ್ಛ್ವಾಸಗಂಧಂ
ತವ ರತಿರಭವಿಷ್ಯತ್ಪುಂಡರೀಕೇ ಕಿಮಸ್ಮಿನ್ ॥

ಇಂತಹ ಉನ್ಮಾದಾವಸ್ಥೆಯಿಂದ ಪೂರ್ವಸ್ಥಿತಿಗೆ ಬರುವುದು ಅತಿವಿರಳ. ಸಾಮಾನ್ಯವಾಗಿ ಈ ದಯನೀಯ ಹುಚ್ಚಿನಲ್ಲಿಯೇ ಜೀವನ ಮುಗಿಯುತ್ತದೆ. ಹೀಗೆಯೇ ಈ ಕೃತಿಯು ಮುಗಿದಿದ್ದರೆ ದುರಂತ ನಾಟಕವಾಗುತ್ತಿದ್ದಿತು. ಕವಿಯು ಸಂಪ್ರದಾಯಬದ್ಧನಾಗಿ ಸಂಗಮನೀಯ ಮಣಿಯ ಮೂಲಕ ತಂದೆ ತಾಯಿ, ಮಕ್ಕಳನ್ನು ಒಂದುಗೂಡಿಸಿರುವಂತೆ ತೋರುತ್ತದೆ.

ವಿದೂಷಕನಿಂದ ಗುಟ್ಟನ್ನು ಇಟ್ಟುಕೊಂಡಿರಲಾರ. ಚತುರೆಯಾದ ನಿಪುಣಿಕೆಯು 'ಭರ್ತನು ರಾಣಿಯನ್ನು ತನ್ನ ಪ್ರೇಯಸಿಯ ಹೆಸರಿನಿಂದ ಕರೆದನು' ಎಂದಾಗ ಅವನು ಉರ್ವಶಿಯೆಂದು ಕರೆದನೇ ಎಂದು ಕೇಳಿಬಿಟ್ಟನು. ವಿನೋದ ಪಡೆಯಲು ಮಹಾನಸಕ್ಕೆ ಹೋಗೋಣ, ರೂಪದಲ್ಲಿ ತನ್ನಂತೆ ಸ್ವರೂಪದಲ್ಲಿ ಉರ್ವಶಿ ಅದ್ವಿತೀಯಳೇ, ಭೂರ್ಜಪತ್ರ ಉರ್ವಶಿಯ ದಾರಿಯಲ್ಲಿ ಹೋಯಿತು, ತಾನು ಆಶ್ರಮವಾಸಿ ಪರಿಚಿತವಾದ ಶಾಖಾಮೃಗ—ಈ ಮುಂತಾದ ವಿದೂಷಕನ ಮಾತುಗಳು ಯಾರನ್ನು ನಗಿಸುವುದಿಲ್ಲ.

ಉರ್ವಶಿ ಗಂಗೆಯಂತೆ ಪ್ರಸನ್ನೆ, ಮಿಂಚಿನಂತೆ ಚಂಚಲೆ ; ಔಶೀನರಿ ಮಳೆಗಾಲದ ಪ್ರವಾಹದಂತೆ ಗಂಭೀರಳು, ಗುಡುಗಿ ಮಳೆಗರೆವ ಮೋಡದಂತೆ ಅವಳ ಸ್ವಭಾವದಲ್ಲಿ ಔದಾರ್ಯ ತುಂಬಿದೆ. ರಾಜನ ಉರ್ವಶೀ ಪ್ರಣಯವನ್ನು ತಿಳಿದು ಸಿಡುಕಿದರೂ ಪತಿ ಪ್ರಸಾದನ ವ್ರತವನ್ನು ಆಚರಿಸಿ ಅವನ ಪ್ರಣಯ ವ್ಯವಹಾರಕ್ಕೆ ಅನುಮತಿ ಕೊಟ್ಟಳು. ಅವಳು ನಿಸ್ವಾರ್ಥಳೂ ; ಸಾತ್ವಿಕಳೂ ಆದ ಸಹಧರ್ಮಿಣಿ. ಇದು ವ್ರತನಿರತಳಾದ ಅವಳ ವರ್ಣನೆ—

ಸಿತಾಂಶುಕಾ ಮಂಗಲಮಾತ್ರ ಭೂಷಣಾ
ಪವಿತ್ರದೂರ್ವಾಂಕುರಲಾಂಛಿತಾಲಕಾ ।
ವ್ರತಾಪದೇಶೋಜ್ಝಿತಗರ್ವವೃತ್ತಿನಾ
ಮಯಿ ಪ್ರಸನ್ನಾ ವಪುಷೈವ ಲಕ್ಷ್ಯತೇ ॥

ಇದು ಶೃಂಗಾರ ಪ್ರಧಾನವಾದ ನಾಟಕ, ಮೂಡಿದ ಅನುರಾಗವು ವಿರಹಮೂಸೆಯಿಂದ ಕಾಲುಷ್ಯ ಕಳೆದುಕೊಂಡು ಅಪರಂಜಿಯಂತೆ ಅಮರಪ್ರೇಮವಾಗಿದೆ. ಕಾಂತವೂ ಶಾಂತವೂ ಆಗಿ ಶೋಭಿಸಿವೆ, ಕವಿಯು ಮೂರು ಸಲ ನಾಯಕ, ನಾಯಿಕೆಯರಿಗೆ ಆಗಲಿಕೆಯನ್ನುಂಟುಮಾಡಿ ಶೃಂಗಾರವನ್ನು ಹೆಚ್ಚು ಆಸ್ವಾದ್ಯಗೊಳಿಸಿದ್ದಾನೆ. ನಾಟಕವು ಗಾನ ನರ್ತನಗಳಿಂದ ತುಂಬಿ ಗೆಲುವಾಗಿದೆ. ಇದಕ್ಕೆ ಹೇಮಕೂಟದಲ್ಲಿ ಚೆಲುವೆಯರಾದ ಅಪ್ಸರೆಯರ ಸಮೂಹ, ಲತೆಯನ್ನು ಉರ್ವಶಿಯನ್ನಾಗಿಸುವ ಸಂಗಮನೀಯಮಣಿ, ಲಕ್ಷ್ಮೀಸ್ವಯಂವರ, ಮುಂತಾದವುಗಳ ಕೊಡುಗೆಯೂ ಇದೆ. ಕ್ರೋಧ, ಕರುಣ, ಮೂರ್ಛೆ, ಹಾಸ್ಯ, ಹರ್ಷ, ವಿಷಾದ ಮುಂತಾದ ನಾನಾ ಭಾವಗಳ ಅಭಿನಯಕ್ಕೆ ಒಳ್ಳೆಯ ಅವಕಾಶವಿದೆ. ಕೊನೆಯ ಅಂಕದಲ್ಲಿ ಬಂದಿರುವ ಪುತ್ರ ವೃತ್ತಾಂತವೇ ಪರಿಷ್ಕಾರಗೊಂಡು ಶಾಕುಂತಲದಲ್ಲಿ ಸಂತಾನ ವ್ಯಾಪ್ತಿಯ ಸುಂದರ ದೃಶ್ಯವಾಗಿ ಪರಿಣಮಿಸಿರುವಂತೆ ತೋರುತ್ತದೆ. ಎರಡೂ ನಾಟಕಗಳ ಹಲವು ಘಟನೆಗಳು ಮತ್ತು ಮಾತುಗಳಲ್ಲಿ ಸಾದೃಶ್ಯವಿದೆ.

ಈ ನಾಟಕದ ಕಾವ್ಯಾಂಶ ದೃಶ್ಯಾಂಶಗಳೆರಡೂ ರಮಣೀಯ. ಇವು ಮಾಲವಿಕಾಗ್ನಿಮಿತ್ರದಲ್ಲಿ ಆಕಾರಗೊಂಡು ವಿಕ್ರಮೋರ್ವಶೀಯದಲ್ಲಿ ಪರಿಷ್ಕೃತವಾಗಿ, ಶಾಕುಂತಲದಲ್ಲಿ ಪೂರ್ಣತೆ ಪಡೆದಿವೆ. ಈ ಮಾತು ಭಾಷೆ, ಶೈಲಿ, ಲೋಕಾನುಭವ, ಮುಂತಾದವುಗಳಿಗೂ ಅನ್ವಯಿಸುತ್ತದೆ. ಮಧ್ಯಾಹ್ನದ ವರ್ಣನೆ—

ಉಷ್ಣಾಲುಃ ಶಿಶಿರೇ ನಿಷೀದತಿ ತರೋರ್ಮೂಲಾಲವಾಲೇ ಶಿಖೀ
ನಿರ್ಭಿದ್ಯೋಪರಿ ಕರ್ಣಿಕಾರ ಮುಕುಲಾನ್ಯಾಲೀಯತೇ ಷಟ್ಪದಃ ।
ತಪ್ತಂ ವಾರಿ ವಿಹಾಯ ತೀರನಲಿನೀಂ ಕಾರಂಡವಃ ಸೇವತೇ
ಕ್ರೀಡಾವೇಶ್ಮನಿ ಚೈಷ ಪಂಜರಶುಕಃ ಕ್ಲಾಂತೋ ಜಲಂ ಯಾಚತೇ ॥

ವಾತ್ಸಲ್ಯ ಉಕ್ಕಿ ಹರಿಯುವ ರೀತಿ—

ಬಾಷ್ಪಾಯತೇ ನಿಪತಿತಾ ಮಮ ದೃಷ್ಟಿರಸ್ಮಿನ್
ವಾತ್ಸಲ್ಯ ಬಂಧಿ ಹೃದಯಂ ಮನಸಃ ಪ್ರಸಾದಃ ।
ಸಂಜಾತವೇಪಥುಭಿರುಜ್ಝಿತ ಧೈರ್ಯವೃತ್ತಿ
ರಿಚ್ಛಾಮಿ ಚೈನಮದಯಂ ಪರಿರಬ್ಧುಮಂಗೈಃ ॥

ಅನುವಾದ ಮಾಡಲು ಯೋಗ್ಯವಾದ ಕೆಲವು ಸುಭಾಷಿತಗಳು—

1. ಯದೇವೋಪನತಂ ದುಃಖಾತ್ಸುಖಂ ತದ್ರಸವತ್ತರಂ ।
   ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ ॥
2. ಪರಾವೃತ್ತಭಾಗಧೇಯಾನಾಂ ದುಃಖಂ ದುಃಖಾನುಬಂಧಿ ।
3. ಅನ್ಯಸಂಕ್ರಾಂತಪ್ರೇಮಾಣೋ ನಾಗರಿಕಾ ಅಧಿಕಂ ದಕ್ಷಿಣಾ ಭವಂತಿ ।
4. ಛಿನ್ನಹಸ್ತೇ ಮತ್ಸ್ಯೇ ಪಲಾಯಿತೇ ನಿರ್ವಿಣ್ಣೋ ಧೀವರೋ ಭಣತಿ ಧರ್ಮೋ ಮೇ ಭವಿಷ್ಯತೀತಿ ।
5. ತಪ್ತೇನ ತಪ್ತಮಯಸಾ ಘಟನಾಯ ಯೋಗ್ಯಂ ।



## ಅಭಿಜ್ಞಾನ ಶಾಕುಂತಲ:—

ಏಳು ಅಂಕಗಳನ್ನುಳ್ಳ ಈ ನಾಟಕದಲ್ಲಿ[1] ಕಾಳಿದಾಸನ ಕಾವ್ಯರಚನಾ ಕೌಶಲವು ಸಿದ್ಧಿ ಪಡೆದಿದೆ, ದೃಶ್ಯರಮಣೀಯತೆ ಕಾವ್ಯ ಸೌಂದರ್ಯ, ಸಂವಿಧಾನ ಚಾತುರ್ಯ, ಸನ್ನಿವೇಶ ಕಲ್ಪನೆ, ಪಾತ್ರ ಚಿತ್ರಣ, ರಸಪರಿಪೋಷಣಾದಿಗಳಿಂದ ಇದು ವಿಶ್ವಮಾನ್ಯತೆ ಪಡೆದಿದೆ. ಭಾರತೀಯ ಸಂಸ್ಕೃತಿಯ ರನ್ನಗನ್ನಡಿಯಾದ ಈ ಕೃತಿ ಅಂದಿನಿಂದ ಇಂದಿನವರೆಗೆ ಸಂಸ್ಕೃತ ನಾಟಕ ಸಾಹಿತ್ಯದ ಸೀಮಾರೇಖೆಯಾಗಿ ಉಳಿದಿದೆ.

ಕಥಾಸಾರಾಂಶ :—ಬೇಟೆಗೆ ಹೊರಟ ದುಷ್ಯಂತನು ವೈಖಾನಸನ ಪ್ರಾರ್ಥನೆಯನ್ನು ಅಂಗೀಕರಿಸಿ ಕಣ್ವಾಶ್ರಮಕ್ಕೆ ಹೋಗಿ ಅನುಸೂಯೆ ಮತ್ತು ಪ್ರಿಯಂವದೆಯರೊಡನೆ ತರುಲತೆಗಳಿಗೆ ನೀರೆರೆಯುತ್ತಿದ್ದ ಶಕುಂತಲೆಯ ಅವ್ಯಾಜ ಮನೋಹರವಾದ ರೂಪವನ್ನು ಕಂಡು ಮೋಹಗೊಂಡನು. ಬೇಟೆಯು ಅದರ ಕೈಬಿಟ್ಟಿತು ; ನಗರಕ್ಕೆ ಮರಳುವ ಆಶೆ ಮಂದವಾಯಿತು. ಆತಿಥ್ಯ ಸ್ವೀಕರಿಸಿ ವಿಶ್ರಮಿಸಿಕೊಳ್ಳುವ ವೇಳೆಗೆ ವ್ರತಾನಂತರದ ಪಾರಣೆಯಲ್ಲಿ ತನ್ನ ಜೊತೆಗಿರಬೇಕೆಂದು ತಾಯಿಯ ಸಂದೇಶವೂ ಬಂದಿತು. ಕಣ್ವರಿಲ್ಲದ ಸಮಯದಲ್ಲಿ ರಾಕ್ಷಸರ ಉಪದ್ರವಗಳಿಂದ ರಕ್ಷಣೆ ಕೋರಿ ಮುನಿಜನರ ಕರೆಯೂ ಬಂದಿತು. ಅವನು ತಪಸ್ವಿಕಾರ್ಯಕ್ಕೆ ತಾನುಳಿದುಕೊಂಡು ತಾಯಿಯೊಡನೆ ತನಗೆ ಪ್ರತಿಯಾಗಿ ಇರಲು ವಿದೂಷಕನನ್ನು ಕಳುಹಿಸಿದನು. ಪ್ರಣಯ ಕ್ಷೇತ್ರಕ್ಕೆ ಹಳಬನಾದರೂ ದುಷ್ಯಂತನು ಚಿತ್ತಸ್ವಾಸ್ಥ್ಯವನ್ನು ಕಳೆದುಕೊಂಡು ಮಾಲಿನೀ ತೀರದ ಲತಾಮಂಟಪದಲ್ಲಿ ಸ್ಮರಬಾಧೆಯಿಂದ ಪೀಡಿತಳಾಗಿದ್ದ ಅವಳನ್ನು ಕಂಡನು. ಗಾಂಧರ್ವ ವಿವಾಹ ಧರ್ಮಸಮ್ಮತವೆಂದೂ, ಕಣ್ವರು ಒಪ್ಪಿಕೊಳ್ಳುವರೆಂದೂ ಹೇಳಿ ಅವಳನ್ನು ಪರಿಗ್ರಹಿಸಿದನು. ಅವನು ಅವಳಿಗೆ ತನ್ನ ಮುದ್ರೆಯುಂಗುರವನ್ನಿತ್ತು ಬೇಗ ಕರೆಸಿಕೊಳ್ಳುವುದಾಗಿ ಮಾತುಕೊಟ್ಟು ರಾಜಧಾನಿಗೆ ಹಿಂದಿರುಗಿದನು. ದುರ್ವಾಸನು ಆಶ್ರಮಕ್ಕೆ ಬಂದು ತನಗೆ ಆತಿಥ್ಯ ದೊರೆಯಲಿಲ್ಲವೆಂದು ಕೋಪಿಸಿಕೊಂಡು 'ನೀನು ಯಾರನ್ನು ಅನನ್ಯ ಮನಸ್ಕಳಾಗಿ ಚಿಂತಿಸುತ್ತಿರುವೆಯೋ ಅವನು ನಿನ್ನನ್ನು ಮರೆಯಲಿ' ಎಂದು ಶಾಪಕೊಟ್ಟನು. ಪ್ರಿಯಂವದೆಯು ಕಾಲಿಗೆಬಿದ್ದು ಬೇಡಿಕೊಂಡಾಗ ಅಭಿಜ್ಞಾನಾಭರಣದರ್ಶನದಿಂದ ಶಾಪಕ್ಕೆ ಪರಿಹಾರವನ್ನು ತಿಳಿಸಿ ಹೊರಟು ಹೋದನು. ಆಶ್ರಮಕ್ಕೆ ಹಿಂದಿರುಗಿದ ಕಣ್ವರು ಮಂಗಳ ಗಾಂಧರ್ವ ವಿವಾಹವನ್ನು ಸಮಾಧಾನ ಚಿತ್ತದಿಂದಲೇ ಒಪ್ಪಿಕೊಂಡರು. ಶಾಪದಿಂದ ದುಷ್ಯಂತನು ಶಕುಂತಲೆಯನ್ನು ಮರೆತುಬಿಟ್ಟನು. ಕಣ್ವರು ಗರ್ಭಿಣಿಯಾದ ಅವಳನ್ನು ಗೌತಮಿ, ಶಾರ್ಙ್ಗರವ, ಶಾರದ್ವತರೊಡನೆ ರಾಜಧಾನಿಗೆ ಕಳುಹಿಸಿಕೊಟ್ಟರು.

---

1 ಲೋಕ ವಿಖ್ಯಾತವಾದ ಈ ನಾಟಕ ಬಂಗಾಳಿ, ದೇವನಾಗರಿ, ಕಾಶ್ಮೀರಿ, ದಾಕ್ಷಿಣಾತ್ಯ ಪಾಠಗಳಲ್ಲಿ ದೊರೆಯುತ್ತದೆ. ೨೨೧ ಪದ್ಯಗಳನ್ನುಳ್ಳ ಬಂಗಾಳಿ ಪಾಠಕ್ಕೆ ಶಂಕರ ಮತ್ತು ಚಂದ್ರಶೇಖರರೂ, ೧೯೪ ಪದ್ಯಗಳನ್ನುಳ್ಳ ದೇವನಾಗರಿ ಪಾಠಕ್ಕೆ ರಾಘವ ಭಟ್ಟನೂ ವ್ಯಾಖ್ಯಾನ ಬರೆದಿದ್ದಾರೆ. ಔತ್ತರೇಯ ಪಾಠದ ಮೂರು ಮತ್ತು ಆರನೇ ಅಂಕದಲ್ಲಿ ಶಕುಂತಲೆ ಮತ್ತು ದುಷ್ಯಂತರ ಪ್ರಣಯವನ್ನು ವರ್ಣಿಸುವ ಹೆಚ್ಚು ಪದ್ಯಗಳಿವೆ. ಹಲವು ಪದ್ಯಗಳು ಅಲ್ಪ ವ್ಯತ್ಯಾಸದಿಂದ ಕೂಡಿದ ಪುನರುಕ್ತಿಗಳಾಗಿವೆ. ಇವು ಪ್ರಕ್ಷಿಪ್ತವಾಗಿರಬಹುದು, ಅಭಿರಾಮ ಮತ್ತು ಕಾಟಯವೇಮರೂ ಶಾಕುಂತಲಕ್ಕೆ ವ್ಯಾಖ್ಯಾನ ಬರೆದಿದ್ದಾರೆ.

ರಾಜನು ಶಕುಂತಲೆಯನ್ನು ಗುರುತಿಸಲಿಲ್ಲ; ಹೇಳಿದುದೆಲ್ಲ ವ್ಯರ್ಥವಾಯಿತು. ಅಂಗುಲೀಯಕ ಶಚೀತೀರ್ಥದಲ್ಲಿ ಕಳೆದು ಹೋಗಿದ್ದಿತು. ಪತ್ನಿಗೆ ಪತಿಕುಲದಾಸ್ಯವೇ ಲೇಸೆಂದು ಹೇಳಿ ಮುನಿಜನರು ಹಿಂದಿರುಗಿದರು. ಅಪ್ಸರೆಯರ ಆಕಾರದ ಜ್ಯೋತಿಯೊಂದು ವ್ಯಾಕುಲಳಾದ ಅವಳನ್ನು ಎತ್ತಿಕೊಂಡು ಶಚೀತೀರ್ಥದ ಕಡೆಗೆ ತೆರಳಿತು.

ಮುದ್ರೆಯುಂಗುರವು ಮೀನಿನ ಮೂಲಕ ಒಬ್ಬ ಬೆಸ್ತನಿಗೆ ಸಿಕ್ಕಿತು. ಅವನು ಮಾರಲು ಹೋಗಿ ಕಳ್ಳತನದ ಆಪಾದನೆಗೆ ಗುರಿಯಾದನು. ರಾಜನು ಉಂಗುರವನ್ನು ಗುರುತಿಸಿ ಆತನನ್ನು ಬಂಧನದಿಂದ ಬಿಡುಗಡೆಮಾಡಿದನು. ಅದರ ದರ್ಶನದಿಂದ ಅವನಿಗೆ ಎಲ್ಲವೂ ಜ್ಞಾಪಕಕ್ಕೆ ಬಂದಿತು. ಅವನ ದುಃಖವು ಎಲ್ಲೆಮೀರಿತು. ಮನಸ್ಸಿನ ನೆಮ್ಮದಿ ಮಾಯವಾಯಿತು. ಜೊತೆಗೆ ಅನತಿಕ್ರಮಣೀಯವಾದ ರಾಜಕಾರ್ಯ. ಸಂತಾನವಿಲ್ಲದೆ ಸತ್ತ ಸಮುದ್ರ ವ್ಯಾಪಾರಿಯಾದ ಧನಮಿತ್ರನ ಆಸ್ತಿ ಗರ್ಭಿಣಿಯಾದ ಅವನ ಹೆಂಡತಿಗೆ ಸೇರತಕ್ಕದ್ದೆಂದು ತೀರ್ಮಾನಿಸಿ, ತನಗೂ ಸಂತಾನವಿಲ್ಲದಿರಲು ಬಹಳ ದುಃಖಿಸಿದನು. ಮಾತಲಿಯು ಅದೃಶ್ಯನಾಗಿ ವಿದೂಷಕನನ್ನು ಹಿಡಿದು ವಿಷಣ್ಣನಾಗಿದ್ದ ದೊರೆಯನ್ನು ಕೆರಳಿಸಿದನು. ಬಿಲ್ಲು ಹಿಡಿದ ಅವನನ್ನು ಇಂದ್ರನಿಗೆ ಸಹಾಯ ಮಾಡಲು ಕರೆದುಕೊಂಡು ಹೋದನು. ಇಂದ್ರನಿಗೆ ಉಪಕಾರಮಾಡಿ ಹಿಂದಿರುಗುವಾಗ ಅವನು ಮಾರೀಚಾಶ್ರಮದಲ್ಲಿ ಸಿಂಹಶಿಶುಗಳೊಡನೆ ಕ್ರೀಡಿಸುತ್ತಿದ್ದ ಸರ್ವದಮನನನ್ನು ಕಂಡನು. ಅವನ ಕರುಳು ಬಾಲಕನನ್ನು ಗುರುತಿಸಿತು. ಕ್ರಮವಾಗಿ ತನ್ನ ಹೆಂಡತಿ ಮಕ್ಕಳು ಅಲ್ಲಿರುವುದು ಅವನಿಗೆ ತಿಳಿಯಿತು. ಅವನು ಮಾರೀಚ ಮಹರ್ಷಿಗಳ ಆಶೀರ್ವಾದ ಪಡೆದು ಅವರನ್ನು ಕರೆದುಕೊಂಡು ರಾಜಧಾನಿಗೆ ಹೋದನು.

ಕಾಳಿದಾಸನ ಈ ನಾಟಕಕ್ಕೆ ವಸ್ತುವನ್ನು ಮಹಾಭಾರತದ ಆದಿಪರ್ವದಲ್ಲಿರುವ ಶಕುಂತಲೋಪಾಖ್ಯಾನದಿಂದ ತೆಗೆದುಕೊಂಡಿದ್ದಾನೆ. ಇದು ಅದರ ಸಂಗ್ರಹಃ—ಬೇಟೆಗೆ ಹೋಗಿದ್ದ ದುಷ್ಯಂತನು ಜಿಂಕೆಯನ್ನು ಹಿಂಬಾಲಿಸಿ ಕಣ್ವಾಶ್ರಮಕ್ಕೆ ಹೋದನು. ಕಣ್ವರು ಆಶ್ರಮದಲ್ಲಿರಲಿಲ್ಲ. ಸಾಕುಮಗಳಾದ ಶಕುಂತಲೆಯು ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದಳು. ಅವನು ಅವಳ ರೂಪದಿಂದ ಮೋಹಿತನಾದನು. ವಿಶ್ವಾಮಿತ್ರ ಮೇನಕೆಯರ ಮಗಳಾಗಿ ಹುಟ್ಟಿ, ತಂದೆ ತಾಯಿಗಳಿಂದ ಪರಿತ್ಯಕ್ತಳಾಗಿ, ಪಕ್ಷಿಗಳಿಂದ ಪೋಷಿತಳಾದ ಅವಳು ಕಣ್ವರ ಸಾಕುಮಗಳೆಂದು ತಿಳಿದು, ಅವಳ ಮಗನಿಗೇ ಪಟ್ಟಗಟ್ಟುವುದಾಗಿ ಮಾತುಕೊಟ್ಟು ಅವನು ಶಕುಂತಲೆಯನ್ನು ಪರಿಗ್ರಹಿಸಿದನು. ಅವನು ಅವಳೊಡನೆ ಕೆಲವು ದಿನಗಳಿದ್ದು ಬೇಗ ಕರೆಸಿಕೊಳ್ಳುವುದಾಗಿ ಮಾತುಕೊಟ್ಟು ರಾಜಧಾನಿಗೆ ಹಿಂದಿರುಗಿದನು.

ಕಣ್ವರು ವೃತ್ತಾಂತವನ್ನು ತಿಳಿದು ದುಷ್ಯಂತನ ಸಂಬಂಧವನ್ನು ಅನುಮೋದಿಸಿದರು. ಗರ್ಭಿಣಿಯಾಗಿದ್ದ ಅವಳು ಆಶ್ರಮದಲ್ಲಿಯೇ ಮಗನನ್ನು ಹಡೆದಳು. ಅಲ್ಲಿಯೇ ಜಾತಕರ್ಮಾದಿಗಳೂ ಯಥೋಚಿತವಾಗಿ ನಡೆದುವು. ಹನ್ನೆರಡು ವರ್ಷಗಳು ಕಳೆದರೂ ರಾಜನು ಅವಳನ್ನು ಕರೆಸಿಕೊಳ್ಳಲಿಲ್ಲ. ಅವನು [illegible], ಕಾಲಕ್ರಮದಲ್ಲಿ ಅವಳನ್ನು ಮರೆತೇಬಿಟ್ಟನು. ಕಣ್ವರು ಅವಳನ್ನು ಹುಡುಗನನ್ನೂ ತಮ್ಮ ಶಿಷ್ಯರ ಜೊತೆಯಲ್ಲಿ ರಾಜಧಾನಿಗೆ



ಕಳುಹಿಸಿಕೊಟ್ಟರು. ತಮ್ಮ ಇರುವಿಕೆಯನ್ನು ಕಂಡು ನಗರದ ಜನರು ಹಾಸ್ಯ ಮಾಡಲು ಬೇಸರಗೊಂಡ ಶಿಷ್ಯರು ಅವಳನ್ನೂ ಹುಡುಗನನ್ನೂ ಅಲ್ಲಿಯೇ ಬಿಟ್ಟು ಹಿಂದಿರುಗಿದರು.

ಶಕುಂತಲೆ ನೇರವಾಗಿ ದುಷ್ಯಂತನೆದುರಿಗೆ ಹೋಗಿ ತನ್ನ ವೃತ್ತಾಂತವನ್ನು ತಿಳಿಸಿದಳು. ಜ್ಞಾಪಕವಿದ್ದರೂ ಅವನು ಲೋಕಾಪವಾದಕ್ಕೆ ಹೆದರಿ ತನಗೊಂದೂ ತಿಳಿಯದೆಂದನು. ತನ್ನ ಮಗನನ್ನಾದರೂ ಸ್ವೀಕರಿಸುವಂತೆ ಅವಳು ಕೇಳಿಕೊಂಡದ್ದೂ ವ್ಯರ್ಥವಾಯಿತು. ಅವಳು ಉಗ್ರ ಕೋಪಗೊಂಡು ಅವನನ್ನು ಚೆನ್ನಾಗಿ ಭರ್ತ್ಸನೆಮಾಡಿ ತನನ್ನು ಅಲಕ್ಷಿಸಿದರೆ ಅವನ ತಲೆ ಸಹಸ್ರ ಹೋಳಾದೀತೆಂದು ಗರ್ಜಿಸಿದಳು. ಅವನು ಅವಳನ್ನು ವೇಶ್ಯಾಪುತ್ರಿಯೆಂದು ನಿಂದಿಸಿದನು. ಪ್ರತಿಯಾಗಿ ಅವಳು ಅವನ ಪೂರ್ವಜರು ಊರ್ವಶಿಯಿಂದ ಹುಟ್ಟಿದ್ದನ್ನು ಜ್ಞಾಪಿಸಿ ಹಿಂದಿರುಗಿ ಹೊರಟಳು. ಅಷ್ಟರಲ್ಲಿ ಅಶರೀರವಾಣಿಯು ಶಕುಂತಲೆ ಹೇಳಿದುದು ಸತ್ಯವೆಂದು ತಿಳಿಸಿತು. ಆಗ ಅವನು ಹೆಂಡತಿಯನ್ನೂ ಮಗನನ್ನೂ ಆದರದಿಂದ ಬರಮಾಡಿಕೊಂಡನು. ಸರ್ವದಮನನು ಯುವರಾಜ ಪದವಿಯಲ್ಲಿ ಅಭಿಷಿಕ್ತನಾಗಿ ಮುಂದೆ ಭರತನೆಂದು ಪ್ರಖ್ಯಾತನಾದನು.

ಬಂಗಾಳೀಪಾಠದ ಪದ್ಮಪುರಾಣದಲ್ಲಿಯೂ ಶಕುಂತಲೆಯ ಕಥೆ ಇದೆ. ಇದರಲ್ಲಿ ಶಕುಂತಲೆಯು ತನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ಪಟ್ಟಕಟ್ಟಬೇಕೆಂಬ ಮಹಾಭಾರತ ವೃತಾಂತವೂ, ನಾಟಕದ ದುರ್ವಾಸ ಶಾಪ, ಅಂಗುಳೀಯಕ ವೃತ್ತಾಂತ, ಬೆಸ್ತ, ಪ್ರಿಯಂವದೆ, ದರ್ತಕ, ಮಾತಲಿ, ಕಶ್ಯಪ ಮುಂತಾದ ಪಾತ್ರಗಳೂ ಇವೆ. ಮಹಾಭಾರತ ಮತ್ತು ನಾಟಕಗಳನ್ನು ಮುಂದಿಟ್ಟುಕೊಂಡು ಈ ಕಥೆಯನ್ನು ಬರೆದಿರುವಂತೆ ಕಾಣಿಸುತ್ತದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಮಹಾಭಾರತ ಒಂದು ಬಂಗಾರದ ಅದುರು. ಅದರ ಬಂಗಾರವನ್ನು ಬೇರ್ಪಡಿಸಿಕೊಂಡು ಕಲಾತ್ಮಕವಾಗಿ ನಿರ್ಮಿಸಿದ ಮೂರ್ತಿ ಈ ನಾಟಕ. ಕಾಳಿದಾಸನು ಮೂಲವನ್ನು ಸಂಗ್ರಹಿಸಿಕೊಂಡು, ತನ್ನ ಪ್ರತಿಭೆಯಿಂದ ದುರ್ವಾಸಶಾಪ ಮುಂತಾದುವನ್ನು ಸೃಷ್ಟಿಸಿಕೊಂಡು ದುಷ್ಯಂತ ಶಕುಂತಲೆಯರ ಬಣ್ಣವನ್ನೇ ಬದಲಾಹಿಸಿ ಅಭಿಜ್ಞಾನ ಶಾಕುಂತಲವನ್ನು ರಚಿಸಿದ್ದಾನೆ. ಪ್ರೇಕ್ಷಕರ ಹೃದಯರಂಗದಲ್ಲಿ ಕಂಗೊಳಿಸುವ ಪಾತ್ರ ಶಕುಂತಳೆ. ಅವಳ ಪ್ರಣಯನಿರೂಪಣೆಯಲ್ಲಿ ಅಭಿಜ್ಞಾನವಾದ ಅಂಗುಳೀಯಕದ ಪಾತ್ರ ಅಮೂಲ್ಯವಾದುದು. ಆದ್ದರಿಂದ ನಾಟಕಕ್ಕೆ ಅಭಿಜ್ಞಾನ ಶಾಕುಂತಲವೆಂಬ ಹೆಸರನ್ನು ಕೊಡಲಾಗಿದೆ. ಮೂಲಕಥೆ ಒರಟೊರಟಾಗಿದ್ದು ಅಮರ ಪ್ರೇಮ ಚಿತ್ರಣಕ್ಕೆ ಅಸಮರ್ಥವಾಗಿದೆ. ಅದು ಕೌಟುಂಬಿಕ ಜೀವವನ್ನಾಗಲೀ ಲೋಕ ವ್ಯವಹಾರವನ್ನಾಗಲೀ ಪ್ರಣಯದ ಸಾರ್ಥಕತೆಯನ್ನಾಗಲೀ ಪ್ರತಿಪಾದಿಸುವುದಿಲ್ಲ. ದುಷ್ಯಂತನು ಶಾಕುಂತಲೆಯನ್ನು ತಿರಸ್ಕರಿಸಿದುದರಿಂದ ಕಥೆಯು ಸರಣಿಯೇ ಕಡಿದುಬೀಳುತ್ತದೆ. ಹಠಾತ್ತನೆ ಕೇಳಿಸಿದ ಆಕಾಶವಾಣಿಯಿಂದ ಪುನಃ ಸಮಾಗಮವನ್ನು ಸಂಪಾದಿಸಿರುವುದು ನೀರಸವಾಗಿದೆ. ಭಾರತದ ಶಕುಂತಲೆ ಕೊಂಚವೂ ಸಂಕೋಚವಿಲ್ಲದೆ ಅಪರಿಚಿತ ಪುರುಷನೊಡನೆ ನೇರವೂ ಸರಳವೂ ಆಗಿ ವ್ಯವಹರಿಸಿ, ತನ್ನ ಮಗನಿಗೇ ಪಟ್ಟಗಟ್ಟಬೇಕೆಂಬ ನಿಯಮದ ಮೇಲೆ ಮದುವೆಯನ್ನು ಕುದುರಿಸುತ್ತಾಳೆ. ಕಣ್ವಾಶ್ರಮದಲ್ಲಿಯೇ ಹುಟ್ಟಿ ಬೆಳೆದು ಹನ್ನೆರಡು ವರ್ಷಗಳನ್ನು

ದಾಟಿದ ಮಗನನ್ನು ಕರೆದುಕೊಂಡು ರಾಜಧಾನಿಗೆ ಹೋಗುತ್ತಾಳೆ. ಈ ದೀರ್ಘಾವಧಿಯಲ್ಲಿ ಅವರ ಪ್ರಣಯದ ಸುಳಿವೇ ತಿಳಿಯುವುದಿಲ್ಲ. ತನ್ನನ್ನು ಪರಿಗ್ರಹಿಸಲು ದುಷ್ಯಂತನು ಒಪ್ಪದೇ ಹೋದಾಗ ಅವಳು ಚಂಡಿಯಂತೆ ಉಗ್ರಳಾಗಿ ಅವನ ಕುಲಗೋತ್ರಗಳ ವಿಚಾರವನ್ನು ಎತ್ತಿ ಹಾಕಿ. ಅಲಕ್ಷಿಸಿದರೆ ತಲೆ ಸಹಸ್ರ ಹೋಳಾಗುತ್ತದೆಂದು ಗರ್ಜಿಸುತ್ತಾಳೆ. ದುಷ್ಯಂತನು ಕಣ್ವರಿಗೂ, ಲೋಕಾಪವಾದಕ್ಕೂ ಹೆದರಿ ತಾನು ಕೊಟ್ಟಿದ್ದ ಮಾತನ್ನು ಮುರಿಯುತ್ತಾನೆ ; ತನಗೆ ಜ್ಞಾಪಕ ವಿದ್ದರೂ ತಿಳಿಯದವನಂತೆ ವರ್ತಿಸಿ ಅಸಹಾಯಳೂ ಪತಿವ್ರತೆಯೂ ಆದ ಹೆಂಡತಿಯನ್ನೂ ಮಗನನ್ನೂ ತಿರಸ್ಕರಿಸುತ್ತಾನೆ. ರೂಪಮೋಹಿತನಾಗಿ ಭೋಗಲಾಲಸೆಯಿಂದ ಮಾತುಕೊಟ್ಟು, ತನ್ನ ಮನಸ್ಸಿನ ಬಯಕೆಯನ್ನು ತೀರಿಸಿಕೊಂಡು, ಅಂತಃಪುರದ ವಿಲಾಸಿನಿಯರ ಸಹವಾಸದಿಂದ ಶಕುಂತಲೆಯನ್ನು ತ್ಯಜಿಸಿದ ಅವನು ಅಧರ್ಮಿಯಾಗಿ ತೋರುತ್ತಾನೆ. ಕಾಳಿದಾಸನು ಈ ಲೋಪದೋಷಗಳನ್ನೆಲ್ಲಾ ತೊಳೆದು ರಸ ಚಿಮ್ಮಿ, ಆದರ್ಶ ನೀಡಿ, ವೈಮನಸ್ಯಗಳನ್ನು ಮರೆಸುವ ನಾಟಕವನ್ನು ರಚಿಸಿದ್ದಾನೆ.

ಶಕುಂತಲೆಯು ವಿಶ್ವಾಮಿತ್ರ ಮತ್ತು ಮೇನಕೆಯರ ಮಗಳಾಗಿ ಜನಿಸಿ, ಕಣ್ವರ ಸಾಕು ಮಗಳಾಗಿ ಬೆಳೆದು, ರಾಜರ್ಷಿಯಾದ ದುಷ್ಯಂತನ ಪತ್ನಿಯಾಗಿ, ಮಾರೀಚಾಶ್ರಮದಲ್ಲಿ ಮಗನನ್ನು ಹಡೆದಳು. ತಪಸ್ವಿನಿಯಾದ ಗೌತಮಿಯ ಕೃಪೆ ಸದಾ ಅವಳಿಗಿದ್ದಿತು. ಅವಳನ್ನು ದುಷ್ಯಂತನ ರಾಜಧಾನಿಗೆ ಕರೆದುಕೊಂಡು ಹೋದವರೂ ತಪಸ್ವಿಗಳಾದ ಶಾರ್ಙ್ಗರವ, ಶಾರದ್ವತರೇ. ಕಣ್ವಾಶ್ರಮಕ್ಕೆ ಬರುವಂತೆ ರಾಜನಿಗೆ ಕರೆಕೊಟ್ಟವನು ವೈಖಾನಸ. ನಾಟಕ ಕಣ್ವಾಶ್ರಮದಿಂದ ಪ್ರಾರಂಭಗೊಂಡು ಮಾರೀಚಾಶ್ರಮದಲ್ಲಿ ಮುಗಿಯುತ್ತದೆ. ಧಾರ್ಮಿಕ ವಾತಾವರಣದಲ್ಲಿ ರಚಿತವಾದ ಈ ನಾಟಕದಲ್ಲಿ ಭಾರತೀಯ ಸಂಸ್ಕೃತಿಯು ಸಮರ್ಪಕವಾಗಿ ಪ್ರತಿಬಿಂಬಿತವಾಗಿದೆ.

ಕಥಾ ಸಂವಿಧಾನದಲ್ಲಿ ಒಳ್ಳೆಯ ಚಾತುರ್ಯವಿದೆ. ಸಾರಂಗ ದುಷ್ಯಂತನನ್ನು ಕಣ್ವಾಶ್ರಮಕ್ಕೆ ಬರುವಂತೆ ಮಾಡುತ್ತದೆ ; ಶಕುಂತಲೆಯ ಮುಖಕಮಲಕ್ಕೆ ಮುತ್ತಿದ ಮಧುಕರ ರಾಜನ ಕಣ್ಣುಗಳನ್ನು ಪ್ರತಿನಿಧಿಸಿ ಅವನು ಅವಳ ಹತ್ತಿರ ಹೋಗಲು ಅವಕಾಶ ಕಲ್ಪಿಸಿ, ದೊಡ್ಡ ರಾಣಿ ವಾಸವನ್ನು ಪಡೆದಿದ್ದ ಅವನ ಮಧುಕರ ವರ್ತನೆಯನ್ನು ಧ್ವನಿಸುತ್ತದೆ ; ಮೂರ್ತಿಗೊಂಡ ತಪೋವಿಘ್ನದಂತಿದ್ದ ಮದಗಜ ಧರ್ಮಾರಣ್ಯಕ್ಕೆ ನುಗ್ಗಿ, ಆಶ್ರಮವಾಸಿಗಳನ್ನು ಹೆದರಿಸಿ, ಪ್ರಶಾಂತವಾದ ತಪೋವನದಮೇಲೆ ದುಷ್ಯಂತನ ಪ್ರವೇಶದಿಂದಾದ ದುಷ್ಪರಿಣಾಮವನ್ನು ಸೂಚಿಸುತ್ತದೆ ; ಅನುಕಂಪ, ಕುತೂಹಲ, ಆಶ್ವಾಸನೆ, ವಿಸ್ಮೃತಿ, ಸ್ಮೃತಿ ಮೊದಲಾದ ಭಾವಗಳ ಪ್ರತೀಕವಾದ ಅಂಗುಲೀಯಕದ ಪಾತ್ರ ಹಿರಿದು ; ಸಮಾಗಮ ವಿಯೋಗಗಳೆರಡರಲ್ಲಿಯೂ ಅದರ ಪಾತ್ರವಿದೆ ; ದುರ್ವಾಸ ಶಾಪವು ಕಥಾಬೆಳವಣಿಗೆಗೂ ದುಷ್ಯಂತ ಪಾತ್ರದ ಪರಿಷ್ಕಾರಕ್ಕೂ ಕಾರಣವಾಗಿದೆ ; ಮಾತಲಿ ದುಷ್ಯಂತನ ಚಿಂತೆಯನ್ನು ಮರೆಸಿ, ಕೋಪವನ್ನು ಕೆರಳಿಸಿ ಅವನನ್ನು ಭೂಮಿಯಿಂದ ಸ್ವರ್ಗಕ್ಕೂ, ಅಲ್ಲಿಂದ ಮಾರೀಚಾಶ್ರಮಕ್ಕೂ ಕರೆದುಕೊಂಡು ಹೋಗಿ ಪತ್ನೀ ಪುತ್ರರ ಸಮಾಗಮಕ್ಕೆ ಕಾರಣನಾಗುತ್ತಾನೆ ; ಪ್ರಕೃತಿಯ ಪಾತ್ರವೂ ಇದೆ.



ನಾಟಕದ ಮೊದಲನೆಯ ಅಂಕ ಚಾಂಚಲ್ಯ ಮತ್ತು ಔಜ್ವಲ್ಯಗಳಿಂದ ತುಂಬಿ ರಂಜಕವೂ, ಪ್ರಣಯೋದ್ದೀಪಕವೂ ಆಗಿದೆ. ಕಣ್ವರ ತಪೋವನದ ಏಕಾಂತ ಭಾಗವೊಂದರಲ್ಲಿ ಕೌತುಕೋತ್ಸಾಹಗಳಿಂದ ತುಂಬಿದ ಸಖಿಯರೊಡನೆ ಉಕ್ಕುತ್ತಿರುವ ಯೌವನವುಳ್ಳ ಮುನಿಕನ್ಯೆ ಕೈಬೀಸಿ ಕರೆವಂತಿರುವ ಕೇಸರವೃಕ್ಷಕ, ನವಕುಸುಮಯೌವನೆಯಾದ ವನಜ್ಯೋತ್ಸ್ನೆ, ವದನ ಸೌರಭದಿಂದ ಭ್ರಾಂತಿಗೊಂಡ ಭ್ರಮರ, ಮರಗಳ ಮರೆಯಲ್ಲಿ ನಿಂತು ಮೋಹಪರವಶನಾದ ರಾಜ — ಇವರು ಪ್ರಣಯಕ್ಕೆ ಉದ್ದೀಪಕವಾದ ಸುಂದರ ಸನ್ನಿವೇಶವನ್ನು ನಿರ್ಮಿಸುತ್ತಾರೆ. ನಾಲ್ಕನೆಯ ಅಂಕದಲ್ಲಿ ಶಕುಂತಲೆ ತಪೋವನದಿಂದ ಬೀಳ್ಕೊಂಡು ಪತಿಗೃಹಕ್ಕೆ ತೆರಳುವ ಸಂದರ್ಭದ ಮನೋಜ್ಞ ಚಿತ್ರಣವಿದೆ. ಒಂದುಕಡೆ ಶಾಕುಂತಲೆ, ಮತ್ತೊಂದುಕಡೆ ಕೈಹಿಡಿದ ಗಂಡ ; ಹೋಗಲಾರಳು ಇರಲಾರಳು. ಹುಟ್ಟಿದುಂದಿನಿಂದ ಆಶ್ರಮದಲ್ಲಿಯೇ ಬೆಳೆದ, ಲೋಕಾನುಭವವಿಲ್ಲದ ಅವಳ ಸುಕೋಮಲ ಹೃದಯ ಪರಸ್ಪರ ವಿರೋಧಗಳಾದ ನೋವು ನಲಿವುಗಳ ಆಘಾತಕ್ಕೆ ಸಿಕ್ಕಿ ತತ್ತರಿಸಿಹೋಯಿತು. ಸೂರ್ಯೋದಯಕ್ಕೆ ಸರಿಯಾಗಿ ಶಿಷ್ಯಮಜ್ಜನ, ಮಂತ್ರೈದೇವರಿಂದ ಆಶೀರ್ವಾದ, ಸಖಿಯರಿಂದ ಅಲಂಕರಣ ಮುಂತಾದುವು ವಿಧಿವತ್ತಾಗಿ ನಡೆದವು. ತಪೋವನಬಂಧುಗಳಾದ ತರುಗಳು ಮಂಗಲಕ್ಷೌಮ, ಲಾಕ್ಷಾರಸ ಮತ್ತು ಆಭರಣಗಳನ್ನು ನೀಡಿದವು. ಕಣ್ವರು ಸಂನ್ಯಾಸಿ ಮತ್ತು ವನವಾಸಿಯಾಗಿದ್ದರೂ ಅವರ ಹೃದಯ ಉತ್ಕಂಠಿತವಾಗುತ್ತದೆ. ಕಂಠ ಕಟ್ಟಿಬರುತ್ತದೆ, ಕಣ್ಣುಗಳಲ್ಲಿ ಕಂಬನಿ ತುಂಬುತ್ತದೆ. ಅಗ್ನಿ ಪ್ರದಕ್ಷಿಣೆ ಮಾಡಿದ ಶಕುಂತಲೆಯನ್ನು ಅವರು ಮುಕ್ತಮನಸ್ಸಿನಿಂದ ಹರಸುತ್ತಾರೆ. ಶಾರ್ಙ್ಗರವ ಶಾರದ್ವತರು ಅವಳನ್ನು ಕರೆದೊಯ್ಯಲು ಮುಂದೆ ಬಂದು ನಿಲ್ಲುತ್ತಾರೆ. 'ತಪೋವನ ತರುಗಳೇ, ಶಕುಂತಲೆಯು ಗಂಡನ ಮನೆಗೆ ತೆರಳುತ್ತಾಳೆ. ಅನುಜ್ಞೆ ಕೊಡಿ' ಎಂಬ ಕಣ್ವರ ಮಾತು ಕೊರಗಿನ ಬಾಗಿಲನ್ನು ತೆರೆಯುತ್ತದೆ. ಕೋಗಿಲೆಯ ಕೂಗಿನ ಮೂಲಕ ವನದೇವತೆಯರು ಶುಭಕೋರುತ್ತಾರೆ. ಅವಳು ವನಜ್ಯೋತ್ಸ್ನೆಯನ್ನು ಅಗಲಲಾರಳು ; ತುಂಬುಗರ್ಭಿಣಿಯಾದ ಜಿಂಕೆಯನ್ನು ಮರೆಯಲಾರಳು. ಮರಿಜಿಂಕೆ ಸೆರಗು ಹಿಡಿದು ಎಳೆಯುತ್ತದೆ, ಹರಿಣಗಳು ಮೇವು ಬಿಟ್ಟು ಮೂಕಾಗಿನಿಲ್ಲುತ್ತವೆ. ಕಣ್ವರ ಹೃದಯ ಛಿದ್ರವಿಚ್ಛಿದ್ರವಾಗುತ್ತದೆ. ಅವಳು ಎಲ್ಲರನ್ನು ಅಪ್ಪಿಕೊಂಡು ಗೋಳಾಡಿ ಹೊರಡುತ್ತಾಳೆ. ಕಣ್ವರು ಶೂನ್ಯವಾದ ತಪೋವನಕ್ಕೆ ಹಿಂದಿರುಗುತ್ತಾರೆ. ಇಲ್ಲಿ ಅನುಕ್ರಮವಾದ ಅಗಲಿಕೆಯ ಬೆಳವಣಿಗೆಯಿಂದ ಕರುಣ ಕಾವೇರುತ್ತದೆ. ಐದನೆಯ ಅಂಕದಲ್ಲಿ ಶಾಪದ ಪರಿಣಾಮವಿದೆ. ಶಕುಂತಲೆಯ ಮನೋನಿರ್ಮಿತವಾದ ಭವ್ಯಸೌಧ ಉರುಳಿ ಬೀಳುತ್ತದೆ. ದುಷ್ಯಂತ ಕಣ್ವರ ಆದೇಶವನ್ನು ಮುರಿಯಲಾರ ; ಮುಂದೆ ನಿಂತಿರುವ ಅನವದ್ಯ ರೂಪವನ್ನು ಕಳೆದುಕೊಳ್ಳಲಾರ ; ಸಾಗಿಬಂದಿರುವ ಧರ್ಮ ಮಾರ್ಗವನ್ನು ಬಿಡಲಾರ, ಕೊನೆಗೆ ಪರಸ್ತ್ರೀ ಸ್ಪರ್ಶಕ್ಕಿಂತಲೂ ದಾರತ್ಯಾಗಿಯೆಂಬ ಅಪವಾದವು ಲೇಸೆಂದು ಬಗೆದು ಶಕುಂತಲೆಯನ್ನು ತ್ಯಜಿಸುತ್ತಾನೆ. ಶಾಪಪರಿಹಾರದಿಂದ ಪರಿಗ್ರಹಸ್ಮೃತಿ ಲಭಿಸಿದ ಮೇಲೆ ಅವನಿಗಾದ ಸಂತಾಪ ಪಶ್ಚಾತ್ತಾಪಗಳು ಅವರ್ಣನೀಯ. ಕೊನೆಯ ಅಂಕದಲ್ಲಿ ಸಿಂಹದ ಮರಿಗಳೊಡನೆ ಕ್ರೀಡಿಸುವ ಮಗನನ್ನೂ, ನಿಯಮಮ್ಲಾನಳಾದ ಹೆಂಡತಿಯನ್ನೂ ಕಂಡು

ಆಶ್ಚರ್ಯ ಪುಳಕಿತನಾಗುತ್ತಾನೆ. ಹೀಗೆ ನಾಟಕ ಅದ್ಭುತದಲ್ಲಿ ಮುಗಿಯುತ್ತದೆ. ಸ್ವರ್ಗಗಮನ, ಮಾರೀಚಾಶ್ರಮ ಪ್ರದೇಶಗಳನ್ನು ಕಲ್ಪಿಸಿಕೊಂಡು ಕಿಂಪುರುಷ ಪರ್ವತವಾದ ಹೇಮಕೂಟದಲ್ಲಿ ನಾಯಕ ನಾಯಿಕೆಯರ ಸಮಾಗಮವನ್ನು ಸಾಧಿಸಿರುವುದು ಅಸಹಜವೂ, ಅಭಿನಯಕ್ಕೆ ಅಸಾಧ್ಯವೂ ಆಗಿರುವಂತೆ ತೋರುತ್ತದೆ. 'ನರನಾಸಿಕಾಲೋಲುಪಸ್ಯ ಜೀರ್ಣಋಕ್ಷಸ್ಯ ಕಸ್ಯಾಽಪಿ ಮುಖೇ ಪತಿಷ್ಯಸಿ,' 'ಪೂರಿತವ್ಯಮನೇನ ಚಿತ್ರಫಲಕಂ ಲಂಬಕೂರ್ಚಾನಾಂ ತಾಪಸಾನಾಂ ಕದಂಬೈಃ'—ಈ ಮುಂತಾದ ವಿದೂಷಕನ ಮಾತುಗಳು ತಿಳಿಹಾಸ್ಯವನ್ನುಂಟು ಮಾಡುತ್ತವೆ. ಈ ನಾಟಕದಲ್ಲಿರುವುದು ಪ್ರಣಯದ ಆವಿರ್ಭಾವ, ವೃದ್ಧಿ, ಪರಿಣಾಮ ಮತ್ತು ಫಲಗಳ ನಿರೂಪಣೆ. ಇಲ್ಲಿನ ಪ್ರೇಮ ಚೊಕ್ಕ ಅಪರಂಜಿ. ಶೃಂಗಾರವು ಈ ನಾಟಕದ ಪ್ರಧಾನರಸ. ಮಾಲವಿಕಾಗ್ನಿಮಿತ್ರದಲ್ಲಿ ತಾರುಣ್ಯಕ್ಕೆ ಸಹಜವಾದ ಶೃಂಗಾರವಿದೆ ; ವಿಕ್ರಮೋರ್ವಶೀಯ, ಶಾಕುಂತಲಗಳಲ್ಲಿ ವಿರಹ ಶೃಂಗಾರ ಮೇಲುಗೈ ಪಡೆದಿದೆ. ಮೇಘದೂತವು ವಿರಹ ಶೃಂಗಾರದ ಬುಗ್ಗೆಯಾಗಿದೆ. ಕಾಳಿದಾಸನ ಸಂಭೋಗ ಶೃಂಗಾರಕ್ಕಿಂತಲೂ ವಿರಹ ಶೃಂಗಾರ ಹೆಚ್ಚು ರಮಣೀಯವೆನ್ನಬಹುದು.

ನಾಯಕನಾದ ದುಷ್ಯಂತ ಧೀರೋದಾತ್ತ. ಅವನು ಋಷಿಗೌರವ ಬುದ್ಧಿಯಿಂದ ಕಣ್ವಾಶ್ರಮಕ್ಕೆ ಹೋದನು ; ಶಕುಂತಲೆಯ ಅನುಪಮ ಸೌಂದರ್ಯ ಕಂಡು ಮುಗ್ಧನಾದನು ; ಪರಿಗ್ರಹ ಯೋಗ್ಯಳೆಂದು ತಿಳಿದಮೇಲೆ ಅವಳನ್ನು ಗಾಂಧರ್ವ ವಿಧಿಯಿಂದ ಮದುವೆಯಾದನು. ಬೇಗ ಕರೆಸಿಕೊಳ್ಳುವ ಋಜುಬುದ್ಧಿಯಿಂದಲೇ ಅವನು ನಗರಕ್ಕೆ ಹಿಂದಿರುಗಿದನು. ಈ ನಾಟಕದಲ್ಲಿ ಅವನು ಕಪಟಿಯಲ್ಲ ; ಲೋಕಕ್ಕೂ, ಋಷಿಗಳಿಗೂ ಹೆದರಿ ಅವನು ಶಕುಂತಲೆಯನ್ನು ಕೈಬಿಡಲಿಲ್ಲ ; ಋಷಿಶಾಪ ತನ್ನ ಕೆಲಸ ಮಾಡಿತು. ಯುವತಿಯೂ, ಸುಂದರಿಯೂ ಆದ ಹೆಣ್ಣು ತಾನಾಗಿ ಕೈಗೆ ಬಂದಾಗ ಬಿಡುವುದು ಸಾಮಾನ್ಯವಲ್ಲ. ಅದಕ್ಕೆ ಆತ್ಮಸ್ಥೈರ್ಯ ಮತ್ತು ಧರ್ಮಬುದ್ಧಿಗಳಿರಬೇಕು. ಶಕುಂತಲೆಯನ್ನು ತ್ಯಜಿಸಿದುದೂ ಅವನಿಗೆ ಭೂಷಣವೇ ಆಯಿತು. ಅವಳ ಸ್ಮರಣೆ ಬಂದ ಮೇಲೆ ಅವನು ಪಟ್ಟ ಪಶ್ಚಾತ್ತಾಪ ಅಷ್ಟಿಷ್ಟಲ್ಲ ; ಅರಮನೆಯ ಉತ್ಸವಗಳು ನಿಂತು ಹೋದವು ; ರಮ್ಯವೂ ದ್ವೇಷ್ಯವಾಯಿತು. ಒಂದು ಕಡೆ ಹೆಂಡತಿಯನ್ನು ಬಿಟ್ಟ ಚಿಂತೆ, ಮತ್ತೊಂದು ಕಡೆ ಸಂತಾನವಿಲ್ಲದ ಚಿಂತೆ ಅವನನ್ನು ಕೊರೆದವು. ಇಂತಹ ಪರಿಸ್ಥಿತಿಯಲ್ಲಿದ್ದರೂ ಅವನು ಧನಮಿತ್ರನ ಮರಣ ಸಮಯದಲ್ಲಿ ಬಿಟ್ಟ ಆಸ್ತಿ ಹಕ್ಕಿನ ತೀರ್ಮಾನ 'ಯೇನ ಯೇನ ವಿಯುಜ್ಯಂತೇ ಪ್ರಜಾಃ ಸ್ನಿಗ್ಧೇನ ಬಂಧುನಾ । ಸ ಸ ಪಾಪಾದೃತೇ ತಾಸಾಂ ದುಷ್ಯಂತ ಇತಿ ಘುಷ್ಯತಾಮ್' ॥ ಎಂಬ ಘೋಷಣೆಗಳು ಅವನ ಲೋಕ ಸಂರಕ್ಷಣವ್ರತ, ಅನುಕಂಪ, ಪ್ರಜಾವಾತ್ಸಲ್ಯಗಳಿಗೆ ಜ್ವಲಂತ ನಿದರ್ಶನಗಳು ; ಗಾಳಿ ಹಗಲೂ ರಾತ್ರಿಯೂ ನಿಲ್ಲದೆ ಚಲಿಸುವಂತೆ ಅವನ ರಾಜಧರ್ಮಕ್ಕೂ ವಿರಾಮವಿಲ್ಲ.

ನಾಟಕದ ಜೀವಾಳ ಶಕುಂತಲೆಯ ಚಿತ್ರಣ. ಅವಳ ಸಹವಾಸದಿಂದ ದುಷ್ಯಂತನ ಪ್ರಣಯ ಶುದ್ಧವಾಗುತ್ತದೆ. ಯುವತಿಯೂ, ಸುಂದರಿಯೂ, ಪ್ರೇಮಮಯಿಯೂ ಆಗಿದ್ದ ಅವಳಿಗೆ ಪುರುಷರೊಡನೆ ಪ್ರಣಯವೆಂಬುದರ ಪರಿಚಯವಿರಲಿಲ್ಲ. ದುಷ್ಯಂತನ ದರ್ಶನದಿಂದ



ತನ್ನಲ್ಲಾದ ಬದಲಾವಣೆಯನ್ನು ಕಂಡು 'ತಪೋವನವಿರೋಧಿನೋ ವಿಕಾರಸ್ಯ ಗಮನೀಯಾಸ್ಮಿ ಸಂವೃತ್ತಾ' ಎಂದು ಆಶ್ಚರ್ಯಪಡುತ್ತಾಳೆ. ತಪೋವನದಲ್ಲಿ ಹುಟ್ಟಿ ಬೆಳೆದು, ಮಹರ್ಷಿಗಳಿಂದ ಪೋಷಿತಳಾಗಿ, ಶಿಕ್ಷಿತಳಾಗಿ, ಗಿಡಮರಗಳಿಗೆ ನೀರೆರೆದು, ಅತಿಥಿಗಳನ್ನು ಸೇವಿಸಿ, ಜಿಂಕೆಯ ಮರಿಗಳನ್ನು ಪೋಷಿಸಿ ಆಡಿಸಿ, 'ಅಖಂಡ ಪುಣ್ಯಫಲ' ದಂತೆ ಬೆಳೆದವಳು ಅವಳು. ಕರ್ತವ್ಯನಿಷ್ಠೆ, ಧರ್ಮಶ್ರದ್ಧೆಗಳು ಮೂರ್ತಿವೆತ್ತಂತಿದ್ದಳು. ಪ್ರೇಮಪರವಶಳಾದರೂ ಔಚಿತ್ಯದ ಎಲ್ಲೆಯನ್ನು ಅವಳು ಮೀರಲಿಲ್ಲ. ದುಷ್ಯಂತನು ಅವಳ ಕಾಲನ್ನು ಒತ್ತುತ್ತೇನೆಂದಾಗ, 'ನ ಮಾನನೀಯೇಷ್ವಾತ್ಮಾನಂ ಅಪರಾಧಯಿಷ್ಯೇ' ಎಂದೂ, ತನ್ನನ್ನು ತಡೆಗಟ್ಟಿದಾಗ 'ಪೌರವ, ರಕ್ಷ ವಿನಯಂ' ಎಂದೂ ಹೇಳಿಬಿಟ್ಟಳು. ಅವಳು ಹುಟ್ಟುತ್ತಲೇ ತಂದೆ ತಾಯಿಗಳಿಂದ ತ್ಯಕ್ತಳಾಗಿ, ಕಣ್ವಾಶ್ರಮದಲ್ಲಿ ಪತಿಯ ಅಗಲಿಕೆಯ ಒಂದೊಂದು ದಿನವನ್ನೂ ಒಂದೊಂದು ಯುಗವಾಗಿ ಕಳೆದು, ರಾಜಧಾನಿಯಲ್ಲಿ ಪತಿಯಿಂದ ತಿರಸ್ಕೃತಳಾಗಿ ನೆಂಟರಿಷ್ಟರಿಂದಲೂ ಪರಿತ್ಯಕ್ತಳಾಗಿ, ಮಾರೀಚಾಶ್ರಮದಲ್ಲಿ ಏಕವೇಣಿಯಾಗಿ ನವೆಯುತ್ತಿದ್ದರೂ ಮಗನ ಸಹವಾಸದಿಂದ ತನ್ನ ಸಂಕಷ್ಟ ಅವಹೇಳನಗಳನ್ನೆಲ್ಲಾ ನುಂಗಿಕೊಂಡು ಬಾಳಿ ದೈವಾನುಗ್ರಹದಿಂದ ದಾಂಪತ್ಯ ಜೀವನದ ಸುಖಶಾಂತಿಗಳನ್ನು ಪಡೆದಳು. ಯೌವನದ ಸ್ವಭಾವದಿಂದಲೋ, ದುಷ್ಯಂತನ ಪ್ರೇರಣೆಯಿಂದಲೋ ಅವಳು ತಂದೆಯನ್ನು ಕೇಳದೆ ಗಾಂಧರ್ವವಿವಾಹ ಮಾಡಿಕೊಂಡಳು ; ಪತಿಯ ಅನನ್ಯಚಿಂತನೆಯಿಂದ ತನ್ನ ಕರ್ತವ್ಯಕ್ಕೆ ಲೋಪ ತಂದುಕೊಂಡಳು. ಸಾಕು ತಂದೆಯೇನೋ ಅವಳನ್ನು ಕ್ಷಮಿಸಿ ವಿವಾಹವನ್ನು ಅನುಮೋದಿಸಿದನು. ದುಷ್ಯಂತನೂ ತಾಯಿಯ ಕರೆಯನ್ನು ಮೀರಿದ ಅನುರಾಗ ಬಯಸಿದನು. ಪ್ರಕೃತಿ ವಕ್ರನಾದ ದುರ್ವಾಸನು ಅತಿಥ್ಯಕ್ಕೆ ಲೋಪ ಬಂದುದರಿಂದ ಶಕುಂತಲೆಯನ್ನು ಶಪಿಸಿದನು. ಸಂಪ್ರದಾಯಬದ್ಧ ಲೋಕ ಪ್ರೇಮಿಗಳ ಇಂತಹ ಪ್ರಣಯವನ್ನು ಸಹಿಸುತ್ತದೆಯೇ ? ಆದ್ದರಿಂದ ದುಷ್ಯಂತ ಶಕುಂತಲೆಯರು ಚಿರಕಾಲ ಪರಿತಪಿಸಬೇಕಾಯಿತು. ಮಾಲವಿಕಾಗ್ನಿಮಿತ್ರದ ಮಾಳವಿಕೆ ಹಾಡಿ ನರ್ತಿಸಿ ಅಗ್ನಿಮಿತ್ರನ ಹೃದಯವನ್ನು ಸೂರೆಗೊಂಡ ಮಧುರ ಸ್ವಭಾವದ ಸುಕೋಮಲೆ. ಇರಾವತಿ ಗಂಡನ ಪ್ರಣಯ ಲೋಕದ ಚೆಲ್ಲಾಟವನ್ನು ಸಹಿಸದ ಮುಂಗೋಪಿ, ಧಾರಿಣಿ ಪದವಿಗೆ ತಕ್ಕ ಗಾಂಭೀರ್ಯವುಳ್ಳವಳು. ವಿಕ್ರಮೋರ್ವಶೀಯದ ಊರ್ವಶಿ ಗಂಡನ ಪ್ರೇಮಕ್ಕಾಗಿ ಮಗನನ್ನು ದೂರಮಾಡಿದವಳು. ಉಶೀನರಿ ಸಹನಶೀಲೆ ಮತ್ತು ಗಂಡನಿಗೆ ಅನುಕೂಲೆ. ಶಾಕುಂತಲದ ಶಕುಂತಲೆ ಭಾರತದ ಸಂಸ್ಕೃತಿಯ ಆದರ್ಶಸತಿ, ರಂಗದಲ್ಲಿ ಕಾಣಿಸಿಕೊಳ್ಳದ ಹಂಸಪದಿಕೆ ಅಭಾಗಿನಿ, ವಸುಮತಿ ಬಹುಮಾನ ಗರ್ವಿತೆ. ಶಕುಂತಲೆಯ ಸಖಿಯರಲ್ಲಿ ಅನಸೂಯೆ ನಡೆನುಡಿಗಳಲ್ಲಿ ವಿವೇಕಗಾಂಭೀರ್ಯಗಳನ್ನುಳ್ಳವಳು. ಪ್ರಿಯಂವದೆ ರಸಿಕೆ ಮತ್ತು ಗೇಲಿ ಸ್ವಭಾವದ ತುಂಟಿ. ಗೌತಮಿ ಯಾರೋ ? ಎಲ್ಲಿಂದ ಬಂದಳೋ ? ಆಶ್ರಮದಲ್ಲಿ ಹೇಗೆ ತನ್ನ ಪ್ರಭುತ್ವ ಪಡೆದಳೋ ? ಕಣ್ವರಿಗೂ ಅವಳಿಗೂ ಯಾವ ಸಂಬಂಧವೋ ? ಒಂದೂ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಇದು ಕಾಳಿದಾಸನ ನಾಟಕಗಳ ಸ್ತ್ರೀಲೋಕ.

ಕಣ್ವರು ವನೌಕಸರಾದರೂ ಗೃಹಸ್ಥರ ಹೃದಯವುಳ್ಳವರು, ಲೋಕವ್ಯವಹಾರ ತಿಳಿದವರು, ಉಪಶಾಂತರು. ಶಾರ್ಙ್ಗರವ ಬಿಗಿಸ್ವಭಾವದ ಮುಂಗೋಪಿ ; ಶಾರದ್ವತ ಶಾಂತ, ಕಶ್ಯಪರು ಸಂಸಾರಿಗಳಾದ ಮಹರ್ಷಿಗಳು, ವಯೋವೃದ್ಧರು, ಜ್ಞಾನವೃದ್ಧರು.

ಕಾಳಿದಾಸನ ಶೈಲಿಯಲ್ಲಿ ಅನುಕ್ರಮವಾದ ಬೆಳವಣಿಗೆಯಿಂದ ಕುತೂಹಲ ಕೆರಳಿಸಿ ಅರ್ಥಕ್ಕೆ ಪೋಷಣೆ ನೀಡುವ ವಿಶೇಷ ಸಾಮರ್ಥ್ಯವಿದೆ. ದುಷ್ಯಂತನು ಋಷಿಗಳ ಪ್ರಾರ್ಥನೆಯಿಂದ ಆಶ್ರಮಕ್ಕೆ ಹೋದನು ; ಸಖಿಯರೊಡನೆ ನೀರೆರೆಯುತ್ತಿದ್ದ ಶಕುಂತಲೆಯನ್ನು ಕಂಡು 'ದೂರೀ ಕೃತಾಃ ಖಲು ಗುಣೈರುದ್ಯಾನಲತಾ ವನಲತಾಭಿಃ' ಎಂದುಕೊಂಡನು ; ಅವರ ಮಾತುಗಳಿಂದ ಶಕುಂತಲೆ ಕಣ್ವರ ಮಗಳೆಂದು ಗೊತ್ತಾಯಿತು ; ಮರಗಳ ಮರೆಯಲ್ಲಿ ನಿಂತು ಅವಳ ಅವ್ಯಾಜ ಮನೋಹರವಾದ ರೂಪವನ್ನು ಕಂಡು ಮೋಹಗೊಂಡನು ; ತಪಸ್ವಿಕನ್ಯೆ ತನಗೆ ದೊರೆಯಳಲ್ಲಾ ಎನಿಸಿತು ; ಆದರೂ ಅವನ ಆರ್ಯವಾದ ಅಂತಃಕರಣ ಅವಳಲ್ಲಿ ಪ್ರವರ್ತಿಸಿ ಅವಳು ದೊರೆಯಬಹುದಾದ ಸೂಚನೆಯನ್ನು ಕೊಟ್ಟಿತು ; ಮಧುಕರದ ಅವಿನಯವನ್ನು ನಿವಾರಿಸಲು ಅವನು ಅವಳನ್ನು ಸಮೀಪಿಸಿದನು ; ಮಾತುಕತೆಗಳಲ್ಲಿ ಇಬ್ಬರ ವೃತ್ತಾಂತವೂ ಹೊರಪಟ್ಟಿತು; ಇಬ್ಬರೂ ಅನುರಕ್ತರಾದರು ; ಕ್ರಮವಾಗಿ ಪರಿಚಯ ಪ್ರಣಯವಾಗಿ ಬೆಳೆದು ಗಾಂಧರ್ವ ವಿವಾಹದಲ್ಲಿ ಕೊನೆಗೊಂಡಿತು. ಉಷಃಕಾಲದಲ್ಲಿ ಲೋಕ ಕ್ರಮವಾಗಿ ಬೆಳ್ಳು ಬೆಳಕಾಗುವಂತೆ ಕುತೂಹಲ ಕೃತಿಯಲ್ಲಿ ಪರ್ಯವಸಾನ ಗೊಳ್ಳುತ್ತದೆ. ಈ ಕ್ರಮಿಕವಾದ ಬೆಳವಣಿಗೆಯನ್ನು ಶಕುಂತಲೆ ಆಶ್ರಮವನ್ನು ಬಿಳ್ಕೊಡುವಾಗಲೂ, ಮಾರೀಚಾಶ್ರಮದಲ್ಲಿ ದುಷ್ಯಂತನು ಹೆಂಡತಿ ಮಕ್ಕಳನ್ನು ಪಡೆಯುವಾಗಲೂ ಕಾಣುತ್ತೇವೆ. ದುಷ್ಯಂತ ಮಾರೀಚಾಶ್ರಮದಲ್ಲಿ ಅಶೋಕ ವೃಕ್ಷದ ಕೆಳಗೆ ಕುಳಿತನು ; ಅವನ ಭುಜ ಅದುರಿತು ; ಅಲ್ಲಿ ಚಕ್ರವರ್ತಿಯ ಲಕ್ಷಣಗಳನ್ನುಳ್ಳ ಬಾಲಕನನ್ನು ಕಂಡನು ; ಆ ಹುಡುಗನು ಸಿಂಹದ ಮರಿಗಳೊಡನೆ ಆಡುತ್ತಿದ್ದನು. ಅವನು ಋಷಿಕುಮಾರನಲ್ಲವೆಂದೂ, ತಾಯಿ ಅಪ್ಸರೆಯ ಮಗಳೆಂದೂ, ತಂದೆ ಹೆಂಡತಿಯನ್ನು ಬಿಟ್ಟವನೆಂದೂ ತಿಳಿಯಿತು ; 'ಶಕುಂತಲಾವಣ್ಯವನ್ನು ನೋಡು' ಎಂದರೆ ಆ ಹುಡುಗನು "ನನ್ನ ತಾಯಿ ಎಲ್ಲಿ" ಎಂದು ಕೇಳಿದನು ; ಅವನಲ್ಲಿ ತನ್ನ ಆಕಾರದ ಸಾದೃಶ್ಯ ವಿದೆ ; ಬಿದ್ದಿದ್ದ ರಕ್ಷಾಯಂತ್ರ ಮುಟ್ಟಿದಾಗ ಹಾವಾಗಿ ಕಚ್ಚಲಿಲ್ಲ ; ಆ ಹುಡುಗನು "ನನ್ನ ತಂದೆ ದುಷ್ಯಂತ" ಎಂದನು ; ಅಷ್ಟರಲ್ಲಿ ಪ್ರಶುನುಷ್ಠಾನದಿಂದ ಸೊರಗಿದ್ದ ಶಕುಂತಲೆ ಅಲ್ಲಿಗೆ ಬಂದಳು ; ದೀರ್ಘವ್ರತಕ್ಕೆ ಪರಮಕಲ್ಯಾಣ ಲಭಿಸಿತು. ಇಲ್ಲಿ ಕಾಣಿಸುವ ಶಕುಂತಳೆಯ ಮಂಗಳಮೂರ್ತಿ ಮತ್ತು ಆಶ್ರಮದ ತುಂಬ ತುಂಬಿರುವ ಭರತ ಪ್ರೇಕ್ಷಕರ ಹೃದಯದಲ್ಲಿ ಮಾಸದೆ ಚಿರಕಾಲ ನಿಲ್ಲುತ್ತಾರೆ.

ರಘುವಂಶದಲ್ಲಿ ರಘು, ಅಜ ಮುಂತಾದ ಹಲವು ಮಕ್ಕಳ ಜನನವೂ, ಕುಮಾರ ಸಂಭವ ದಲ್ಲಿ ಷಣ್ಮುಖನ ಜನನವೂ, ವಿಕ್ರಮೋರ್ವಶೀಯದಲ್ಲಿ ಆಯುವಿನ ಜನನವೂ, ಶಾಕುಂತಲದಲ್ಲಿ ಭರತನ ಜನನವೂ ಬಂದಿವೆ. ಹೃದಯ ಸ್ಪರ್ಶಿಯಾಗಿರುವ ಈ ವರ್ಣನೆಗಳು ಕಾಳಿದಾಸನಿಗೆ ಮಕ್ಕಳಲ್ಲಿರುವ ವಾತ್ಸಲ್ಯವನ್ನು ಸಾರುತ್ತವೆ. ಸರ್ವದಮನನನ್ನು ಕಂಡಾಗ ದುಷ್ಯಂತನ ಹೃದಯದಿಂದ ಮೂಡಿ ಬರುವ ಮಾತುಗಳು ಕವಿಯ ಹೃದಯವನ್ನು ಪ್ರಕಟಿಸುತ್ತವೆ. ಈ ಮಾತುಗಳು ಯೋಚಿಸಿ ಬರೆದಂತಿಲ್ಲ ; ಸ್ವಾನುಭವದಿಂದ ಬಂದಂತಿವೆ.—

ಆಲಕ್ಷ್ಯದಂತ ಮುಕುಲಾನನಿಮಿತ್ತಹಾಸೈ
ರವ್ಯಕ್ತವರ್ಣರಮಣೀಯವಚಃಪ್ರವೃತ್ತೀನ್ !
ಅಂಕಾಶ್ರಯಪ್ರಣಯಿನಸ್ತನಯಾನ್ವಹಂತೋ
ಧನ್ಯಾಸ್ತದಂಗರಜಸಾ ಮಲಿನೀಭವಂತಿ ॥



ಅನೇನ ಕಸ್ಯಾಪಿ ಕುಲಾಂಕುರೇಣ
ಸ್ಪೃಷ್ಟಸ್ಯ ಗಾತ್ರೇಷು ಸುಖಂ ಮಮೈವಂ ।
ಕಾಂ ನಿರ್ವೃತಿಂ ಚೇತಸಿ ತಸ್ಯ ಕುರ್ಯಾ
ದ್ಯಸ್ಯಾಯಮಂಕಾತ್ಕೃತಿನಃ ಪ್ರರೂಢಃ ॥

(ಈ ಮಾತುಗಳಿಂದ ಕಾಳಿದಾಸನಿಗೆ ಮಕ್ಕಳಿದ್ದರೇ ಎಂಬುದು ವಿಚಾರಾರ್ಹವಾಗಿದೆ).

ಮಾಳವಿಕೆ ಅಗ್ನಿಮಿತ್ರರ ಸಮಾಗಮ ಸಿದ್ಧಾದೇಶನನ್ನೂ, ಪುರೂರವ ಊರ್ವಶಿಯರ ಸಮಾಗಮ ದೇವಸಮ್ಮತಿಯನ್ನೂ ಅವಲಂಬಿಸಿವೆ. ದುಷ್ಯಂತ ಶಕುಂತಲೆಯರ ಸಮಾಗಮವೂ ದೈವ ಸಂಕಲ್ಪಿತವಾದುದು ; ದೇವತೆಗಳಿಗೆ ಸಮ್ಮತವಾದುದರಿಂದಲೇ ಅದು ಸಕಾಲದಲ್ಲಿ ಆಶ್ರಮದಲ್ಲಿ ನೆರವೇರಿತು. ಭಾಸಾದಿಗಳಂತೆ ಕಾಳಿದಾಸನೂ ವಿಧಿವಾದಿ; ಆದರೆ ಅವನು ಪೌರುಷೇಯವನ್ನು ಕಡೆಗಣಿಸಿಲ್ಲವೆಂಬುದು ಗಮನಾರ್ಹ. ಅವನು ಧರ್ಮದ ಗೊಡ್ಡಾಗಲೀ ವಿರಕ್ತನಾಗಲೀ ಅಲ್ಲ; ಧರ್ಮಸಮ್ಮತವಲ್ಲದ ಕಾಮವೂ ಅವನಿಗೆ ರುಚಿಸದು. ಧರ್ಮಾರ್ಥ ಕಾಮಗಳಿಗೆ ಸಾಮರಸ್ಯವಿರಬೇಕು, ಧರ್ಮದಿಂದ ಬಾಳಬೇಕು; ಧರ್ಮದಲ್ಲಿ 'ಶ್ರದ್ಧೆ,' 'ವಿಧಿ'ಗ ಳೆರಡೂ ಇರಬೇಕು; ಇವುಗಳಿದ್ದರೆ 'ವಿತ್ತ'ವು ತಾನಾಗಿಯೇ ಬರುತ್ತದೆ; ಧರ್ಮಸಮ್ಮತವಾದ ಸುಖದಲ್ಲಿ ವಿತ್ತದ ವಿನಿಯೋಗ. ಪತ್ನೀ, ಪತಿ, ಪುತ್ರರು, ಶ್ರದ್ಧೆ, ವಿಧಿ, ವಿತ್ತಗಳಂತಿರಬೇಕು—

ದಿಷ್ಟ್ಯಾ ಶಕುಂತಲಾ ಸಾಧ್ವೀ ಸದಪತ್ಯಮಿದಂ ಭವಾನ್ ।
ಶ್ರದ್ಧಾ ವಿತ್ತಂ ವಿಧಿಶ್ಚೇತಿ ತ್ರಿತಯಂ ತತ್ಸಮಾಗತಮ್ ॥ (ಶಾಕುಂತಲ)

ಮನುಷ್ಯರು ಉತ್ಸವ ಪ್ರಿಯರು, ಲೋಕದಲ್ಲಿ ಸುಖದುಃಖಗಳೆರಡೂ ಶಾಶ್ವತವಲ್ಲ. ಒಂದೆಡೆ ಸುಖ ಮತ್ತೊಂದೆಡೆ ದುಃಖ ಅನಿವಾರ್ಯ :

ಯಾತ್ಯೇಕತೋಽಸ್ತಶಿಖರಂ ಪತಿರೋಷಧೀನಾ
ಮಾವಿಷ್ಕೃತಾರುಣಪುರಃಸರ ಏಕತೋಽರ್ಕಃ ।
ತೇಜೋದ್ವಯಸ್ಯ ಯುಗಪದ್ವ್ಯಸನೋದಯಾಭ್ಯಾಂ
ಲೋಕೋ ನಿಯಮ್ಯತ ಇವಾತ್ಮದಶಾಂತರೇಷು ॥ (ಶಾಕುಂತಲ)

ಸುಖ ದುಃಖಗಳನ್ನು ಸಮಚಿತ್ತದಿಂದ ಅನುಭವಿಸುವ ಕಲೆಯನ್ನು ಕಲಿತು ಕೊಂಡರೆ ಬಾಳಿನಲ್ಲಿ ನೆಮ್ಮದಿ ದೊರೆಯುತ್ತದೆ. ಸುಖದುಃಖ, ಲಾಭಾಲಾಭ, ಜಯಾಪಜಯಗಳನ್ನು ಸಮವಾಗಿ ಪರಿಗಣಿಸಬೇಕೆಂದು ಭಾರತೀಯ ಸಂಸ್ಕೃತಿಯ ಸಂದೇಶ. ಇದು ಕಾಳಿದಾಸನ ಜೀವನ ವಿಮರ್ಶೆಯಾಗಿ ತೋರುತ್ತದೆ. ಭಾಸನ ಮನೋಧರ್ಮವೂ ಇದೇ ಆಗಿದೆ.

ಕಾಳಿದಾಸನ ಭಾಷೆ ಸುಲಭ, ಶೈಲಿ ಸರಳ ಮತ್ತು ಸುಂದರ. ಅವನ ಮಧುರವೂ, ಲಲಿತವೂ, ಅವೃತ್ತಿ ಅಥವಾ ಅಲ್ಪವೃತ್ತಿಯೂ, ಶಕ್ತವೂ ಆದ ವೈದರ್ಭೀ ಶೈಲಿಯು * ಓದುಗರ ಮನ ಸೆಳೆದು ಆಸ್ವಾದವನ್ನುಂಟುಮಾಡುತ್ತದೆ. ವೈದರ್ಭಿಯು ತಾನಾಗಿ ಕಾಳಿದಾಸನನ್ನು ವರಿಸಿದೆ—

ವಾಲ್ಮೀಕೇರಜನಿ ಪ್ರಕಾಶಿತಗುಣಾ ವ್ಯಾಸೇನ ಲೀಲಾವತೀ ।
ವೈದರ್ಭೀ ಕವಿತಾ ಸ್ವಯಂ ವೃತವತೀ ಶ್ರೀ ಕಾಲಿದಾಸಂ ವರಂ ॥

ಕಾಳಿದಾಸನು ಪ್ರಕೃತಿಯ ಆರಾಧಕ. ಅವನು ಅಂತರಂಗ ಸೌಂದರ್ಯದಂತೆ ಬಾಹ್ಯ ಸೌಂದರ್ಯವನ್ನೂ ಮನೋಹರವಾಗಿ ಚಿತ್ರಿಸಿದ್ದಾನೆ. ಅವನು ತನ್ನ ಆಶ್ರಯದಾತನ ಜೊತೆಯಲ್ಲಿ ಭಾರತದ ಎಲ್ಲೆಡೆ ಸುತ್ತಾಡಿ ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಮನಸಾರ ಸವಿದಿದ್ದಾನೆ. ಅವನ ಕಾವ್ಯಗಳಲ್ಲಿ ಪ್ರಕೃತಿ ಸುಖದುಃಖಮಯವಾದ ಮಾನವಜೀವನದಲ್ಲಿ ಸಮವಾಗಿ ಪಾಲ್ಗೊಂಡಿದೆ. ನಾಟಕಗಳಲ್ಲಂತೂ ಪ್ರಕೃತಿಯೂ ಪಾತ್ರವಹಿಸಿದೆ. ವಿಕ್ರಮೋರ್ವಶೀಯ ಮತ್ತು ಶಾಕುಂತಲಗಳ ನಾಲ್ಕನೆಯ ಅಂಕದಲ್ಲಿ ಪುರೂರವ, ಕಣ್ವ, ಶಕುಂತಲೆಯರೊಡನೆ ಪ್ರಕೃತಿಯು ಭಾವಪೂರ್ಣವಾಗಿ ಸಹಕರಿಸಿದೆ. ಕಾಳಿದಾಸನ ವರ್ಣನಾಸಾಮರ್ಥ್ಯ ಅದ್ವಿತೀಯವಾದುದು. ಅವನ ಕಾವ್ಯಗಳಲ್ಲಿ ಸಹಜವೂ, ಸುಂದರವೂ ಆದ ಉಪಮಾಲಂಕಾರಗಳು ಹೇರಳವಾಗಿವೆ. "ಉಪಮಾ ಕಾಲಿದಾಸಸ್ಯ" ಎಂಬ ಲೋಕೋಕ್ತಿಯೇ ಹುಟ್ಟಿಕೊಂಡಿದೆ. ಅರ್ಥಾಂತರನ್ಯಾಸ, ದೃಷ್ಟಾಂತ, ರೂಪಕಾದ್ಯಲಂಕಾರಗಳೂ ಮನೋಜ್ಞವಾಗಿಯೇ ಇವೆ. ಅವನ ರಚನೆಗಳು ಪ್ರಸಾದ ಗುಣದಿಂದ ಬೆಳಗುವ ಧ್ವನಿಕಾವ್ಯಗಳು.

ಇದು ಹೆದರಿ ಓಡುವ ಸಾರಂಗದ ವರ್ಣನೆ—

ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಂ ।
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ ॥

ಸ್ವರ್ಗದಿಂದ ಇಳಿಯುವ ದುಷ್ಯಂತನಿಗೆ ಕಂಡ ಭೂಮಿಯ ದೃಶ್ಯ—

ಶೈಲಾನಾಮವರೋಹತೀವ ಶಿಖರಾದುನ್ಮಜ್ಜತಾಂ ಮೇದಿನೀ
ಪರ್ಣಸ್ವಾಂತರಲೀನತಾಂ ವಿಜಹತಿ ಸ್ಕಂಧೋದಯಾತ್ಪಾದಪಾಃ ।
ಸಂತಾನೈಸ್ತನುಭಾವನಷ್ಟಸಲಿಲಾ ವ್ಯಕ್ತಿಂ ಭಜಂತ್ಯಾಪಗಾಃ
ಕೇನಾಪ್ಯುತ್ಕ್ಷಿಪತೇವ ಪಶ್ಯ ಭುವನಂ ಮತ್ಪಾರ್ಶ್ವಮಾನೀಯತೇ ॥

ಶಕುಂತಲೆಯ ಮೋಹಕ ರೂಪದ ವರ್ಣನೆ—

ಅನಾಘ್ರಾತಂ ಪುಷ್ಪಂ ಕಿಸಲಯಮಲೂನಂ ಕರರುಹೈ-
ರನಾವಿದ್ಧಂ ರತ್ನಂ ಮಧು ನವಮನಾಸ್ವಾದಿತರಸಂ ।
ಅಖಂಡಂ ಪುಣ್ಯಾನಾಂ ಫಲಮಿವ ಚ ತದ್ರೂಪಮನಘಂ
ನ ಜಾನೇ ಭೋಕ್ತಾರಂ ಕಮಿಹ ಸಮುಪಸ್ಥಾಸ್ಯತಿ ವಿಧಿಃ ॥

---

(i) ಶ್ಲೇಷಃ ಪ್ರಸಾದಃ ಸಮತಾ ಮಾಧುರ್ಯಂ ಸುಕುಮಾರತಾ ।
ಅರ್ಥವ್ಯಕ್ತಿರುದಾರತ್ವಮೋಜಃ ಕಾಂತಿ ಸಮಾಧಯಃ ॥ -ಕಾವ್ಯಾದರ್ಶ

(ii) ಮಾಧುರ್ಯವ್ಯಂಜಕೈರ್ವರ್ಣೈ ರಚನಾ ಲಲಿತಾತ್ಮಿಕಾ ।
ಅವೃತ್ತಿರಲ್ಪವೃತ್ತಿರ್ವಾ ವೈದರ್ಭೀ ರೀತಿರಿಷ್ಯತೇ ॥ -ಸಾಹಿತ್ಯ ದರ್ಪಣ



ಇದು ಕಣ್ವಾಶ್ರಮದ ಚಿತ್ರ—

ನೀವಾರಾಃ ಶುಕಗರ್ಭಕೋಟರಮುಖಭ್ರಷ್ಟಾಸ್ತರೂಣಾಮಧಃ
ಪ್ರಸ್ನಿಗ್ಧಾಃ ಕ್ವಚಿದಿಂಗುದೀಫಲಭಿದಃ ಸೂಚ್ಯಂತ ಏವೋಪಲಾಃ ।
ವಿಶ್ವಾಸೋಪಗಮಾದಭಿನ್ನಗತಯಃ ಶಬ್ದಂ ಸಹಂತೇ ಮೃಗಾ-
ಸ್ತೋಯಾಧಾರಪಥಾಶ್ಚ ವಲ್ಕಲಶಿಖಾನಿಷ್ಯಂದರೇಖಾಂಕಿತಾಃ ॥

ಇದು ಮಾರೀಚಾಶ್ರಮದ ಮಹತ್ವ—

ಪ್ರಾಣಾನಾಮನಿಲೇನ ವೃತ್ತಿರುಚಿತಾ ಸತ್ಕಲ್ಪವೃಕ್ಷೇ ವನೇ
ತೋಯೇ ಕಾಂಚನಪದ್ಮರೇಣುಕಪಿಶೇ ಧರ್ಮಾಭಿಷೇಕಕ್ರಿಯಾ ।
ಧ್ಯಾನಂ ರತ್ನಶಿಲಾತಲೇಷು ವಿಬುಧಸ್ತ್ರೀಸಂನಿಧೌ ಸಂಯಮೋ
ಯತ್ಕಾಂಕ್ಷಂತಿ ತಪೋಭಿರನ್ಯಮುನಯಸ್ತಸ್ಮಿಂಸ್ತಪಸ್ಯಂತ್ಯಮೀ ॥

ಕಣ್ವರು ದುಷ್ಯಂತನಿಗೆ ಕೊಟ್ಟ ಸಂದೇಶ—

ಅಸ್ಮಾನ್ಸಾಧು ವಿಚಿಂತ್ಯ ಸಂಯಮಧನಾನುಚ್ಚೈಃ ಕುಲಂ ಚಾತ್ಮನ-
ಸ್ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹಪ್ರವೃತ್ತಿಂ ಚ ತಾಂ ।
ಸಾಮಾನ್ಯಪ್ರತಿಪತ್ತಿಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
ಭಾಗ್ಯಾಯತ್ತಮತಃ ಪರಂ ನ ಖಲು ತದ್ವಾಚ್ಯಂ ವಧೂಬಂಧುಭಿಃ ॥

ಕಣ್ವರು ಶಕುಂತಲೆಗೆ ನೀಡಿದ ಉಪದೇಶ—

ಶುಶ್ರೂಷಸ್ವ ಗುರೂನ್ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ
ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ ।
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ॥

ಕಾಳಿದಾಸನ ಸಂಭಾಷಿತಗಳಲ್ಲಿ ಲೋಕಾನುಭವ ತುಂಬಿದೆ, ಗಾದೆಗಳು ವೇದಗಳೆಂಬ ಮಾತು ಅವುಗಳಿಗೆ ಅನ್ವಯಿಸುತ್ತದೆ. ಅದು ಸತ್ಪುರುಷರ ಸ್ವಭಾವ—

ಭವಂತಿ ನಮ್ರಾಸ್ತರವಃ ಫಲಾಗಮೈ-
ರ್ನವಾಂಬುಭಿರ್ದೂರವಿಲಂಬಿನೋ ಘನಾಃ ।
ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ
ಸ್ವಭಾವ ಏವೈಷ ಪರೋಪಕಾರಿಣಾಂ ॥

ಇದು ವಿರಾಮವಿಲ್ಲದ ರಾಜಧರ್ಮ—

ಭಾನುಃ ಸಕೃದ್ಯುಕ್ತತುರಂಗ ಏವ
ರಾತ್ರಿಂದಿವಂ ಗಂಧವಹಃ ಪ್ರಯಾತಿ ।
ಶೇಷಃ ಸದೈವಾಹಿತಭೂಮಿಭಾರಃ
ಷಷ್ಠಾಂಶವೃತ್ತೇರಪಿ ಧರ್ಮ ಏಷಃ ॥

ರಸಭಾವಗಳಿಗನುಗುಣವಾಗಿ ಛಂದಸ್ಸನ್ನು ಬಳಸುವುದರಲ್ಲಿ ಕಾಳಿದಾಸನ ಕೈ ಚೆನ್ನಾಗಿ ಪಳಗಿದೆ. ಮಾಲವಿಕಾಗ್ನಿಮಿತ್ರದಲ್ಲಿ ಆರ್ಯಾ (35) ಮತ್ತು ಶ್ಲೋಕ (17) ಹೆಚ್ಚಾಗಿ ಬಳಕೆಗೊಂಡಿವೆ. ವಿಕ್ರಮೋರ್ವಶೀಯದಲ್ಲಿ ಇವು ಸಮತೂಕ ಪಡೆದಿವೆ (ಆರ್ಯಾ–29, ಶ್ಲೋಕ –30). ವಸಂತತಿಲಕ (12) ಮತ್ತು ಶಾರ್ದೂಲವಿಕ್ರೀಡಿತ (11) ಗಳೂ ಗಣ್ಯಸ್ಥಾನವನ್ನು ಗಳಿಸಿಕೊಂಡಿವೆ. ಶಾಕುಂತಲದಲ್ಲಿಯೂ ಆರ್ಯಾ (38) ಮತ್ತು ಶ್ಲೋಕ (36) ಗಳಲ್ಲಿ ಸಮತೆ ಉಳಿದಿದೆ. ವಸಂತತಿಲಕ (30), ಶಾರ್ದೂಲ ವಿಕ್ರೀಡಿತ (22) ಗಳು ತಮ್ಮ ಸ್ಥಾನವನ್ನು ವೃದ್ಧಿಗೊಳಿಸಿಕೊಂಡಿವೆ. ಇವುಗಳನ್ನಲ್ಲದೆ ಕಾಳಿದಾಸನು ತನ್ನ ನಾಟಕಗಳಲ್ಲಿ ಅಪರ ವಕ್ತ್ರ, ಔಪಚ್ಛಂದಸಿಕ, ವೈತಾಲೀಯ, ದ್ರುತವಿಲಂಬಿತ, ಮಾಲಿನೀ, ವಂಶಸ್ಥ ಮುಂತಾದ ಛಂದಸ್ಸುಗಳನ್ನೂ ಬಳಸಿಕೊಂಡಿದ್ದಾನೆ. ಕಾಳಿದಾಸನಷ್ಟು ಔಚಿತ್ಯದಿಂದ ಯಾರೂ ಛಂದಸ್ಸನ್ನು ಪ್ರಯೋಗಿಸಿಲ್ಲ. 'ನಖಲು ನಖಲು (I=10)' ಎಂಬ ಮಾಲಿನೀ ವೃತ್ತವು 'ಬೇಡ ಬೇಡ' ಎಂದು ಆತುರ ಮತ್ತು ಗಾಬರಿಯನ್ನು ತಿಳಿಸುವುದಕ್ಕೂ, 'ಕ್ವವಯಂ ಕ್ವಪರೋಕ್ಷಮನ್ಮಥೋ' (III—18), ಎಂಬ ವೈತಾಲೀಯ ವೃತ್ತವು ವಿದೂಷಕನನ್ನು ಬೆನ್ನತಟ್ಟಿ ಪುಸಲಾಯಿಸಿ ಮುಂಕುಗೊಳಿಸುವುದಕ್ಕೂ, 'ಪಾತುಂ ನ ಪ್ರಥಮಂ(IV—8)' ಎಂಬ ಗುರುಸ್ವರಗಳಿಂದ ತುಂಬಿದ ಶಾರ್ದೂಲವಿಕ್ರೀಡಿತವು ಶೋಕತುಂಬಿದ ಕಣ್ವರ ಹೃದಯದ ಭಾರವನ್ನು ಪ್ರತಿನಿಧಿಸುವುದಕ್ಕೂ, 'ಅನುಮತಗಮನಾ (IV—9)' ಎಂದು ಕೋಗಿಲೆಯ ಧ್ವನಿಗೆ ಬಳಸಿರುವ ಅಪರವಕ್ತ್ರವು ಕಣ್ವರ ಆನಂದೋಲ್ಲಾಸಗಳನ್ನು ವ್ಯಕ್ತಗೊಳಿಸುವುದಕ್ಕೂ ಸಮರ್ಥವಾಗಿವೆ. ಕಣ್ವರು 'ಅಮೀ ವೇದಿಂ(IV—7)' ಎಂದು ಆಶೀರ್ವದಿಸಲು ಪ್ರಯೋಗಿಸಿರುವ ಋಕ್ ಛಂದಸ್ಸು ಋಷ್ಯಾಶ್ರಮದ ಶ್ರೋತ್ರಿಯವಾತಾವರಣವನ್ನು ತಿಳಿಸಲು ಬಹಳ ಯೋಗ್ಯವಾಗಿದೆ.

## ಶೂದ್ರಕ

### (ಕ್ರಿ. ಶ. ಸು. 400)

ಶೂದ್ರಕನೆಂಬ ಹೆಸರಿನ ಒಬ್ಬ ವ್ಯಕ್ತಿಯು ಇದ್ದನೇ? ಅಥವಾ ಅವನು ಕಾಲ್ಪನಿಕ ವ್ಯಕ್ತಿಯೋ ? ಎಂಬುದನ್ನು ನಿರ್ಧರಿಸಲು ಸರಿಯಾದ ಪ್ರಮಾಣವಿಲ್ಲ. ಈ ಹೆಸರು ಶಾಸನಗಳಲ್ಲಾಗಲಿ, ನಾಣ್ಯಗಳಲ್ಲಾಗಲೀ ದೊರೆಯುವುದಿಲ್ಲ. ಹಿಂದಿನ ಪುರಾಣ, ಶಾಸ್ತ್ರ, ಸಾಹಿತ್ಯಗಳಲ್ಲೇನೋ ಒಬ್ಬ ಶೂದ್ರಕರಾಜನ ಪ್ರಸ್ತಾಪವಿದೆ[1]. ಆದ್ದರಿಂದ ಶೂದ್ರಕರಾಜನಿದ್ದುದು ಸಂಭವವಾಗಿ ಕಾಣಿಸುತ್ತದೆ. ರಾಮಿಲ ಸೋಮಿಲರು ಒಂದು ಶೂದ್ರಕ ಕಥೆಯನ್ನು ಬರೆದಿದ್ದರೆಂಬ ಅಂಶದಿಂದ ಕಾಳಿದಾಸನ ವೇಳೆಗಾಗಲೇ ಅವನು ಪುರಾಣವ್ಯಕ್ತಿಯಾಗಿ ಪರಿಣಮಿಸಿದ್ದನೆಂದು ಹೇಳಬಹುದು.

1 (i) ಸಂತ್ಯಜ್ಯ ವಿಕ್ರಮಾದಿತ್ಯಂ ಸಂತ್ವೋದ್ರಿಕ್ತಂ ಚ ಶೂದ್ರಕಂ ।
ತ್ವಾಂ ಚ ಭೂಪಾಲ ಪರ್ಯಾಪ್ತಂ ಧೈರ್ಯಮನ್ಯತ್ರ ದುರ್ಲಭಂ ॥ —ರಾಜತರಂಗಿಣಿ.

(ii) ಆಂಧ್ರ ಭೃತ್ಯರಲ್ಲಿ ಮೊದಲನೆಯವನೆಂದು ಸ್ಕಾಂಧಪುರಾಣವೂ, ರಾಜಧಾನಿಯಾದ ವರ್ಧಮಾನ ಅಥವಾ ಶೋಭಾವತಿಯಲ್ಲಿ ನೂರು ವರ್ಷ ಬದುಕಿದ್ದನೆಂದು ವೇತಾಳ ಪಂಚವಿಂಶತಿಯೂ ತಿಳಿಸುತ್ತವೆ. ಒಬ್ಬ ಬ್ರಾಹ್ಮಣನ ಯಾಗ ಮತ್ತು ಆತ್ಮಾರ್ಪಣಗಳಿಂದ ಶೂದ್ರಕನು ನೂರು ವರ್ಷ ಬದುಕಿದ್ದನೆಂದು ಕಥಾಸರಿತ್ಸಾಗರ ಹೇಳುತ್ತದೆ. ವೀರಚರಿತವು ಅವನು ಸಾತವಾಹನ ಅಥವಾ ಶಾಲಿವಾಹನನ ಮಂತ್ರಿಯಾಗಿದ್ದು ಅವನಿಂದ ಪ್ರತಿಷ್ಠಾನವನ್ನುಳ್ಳ ಅರ್ಧರಾಜ್ಯವನ್ನು ಪಡೆದನೆಂದು ತಿಳಿಸುತ್ತದೆ. ಕಾದಂಬರಿ, ಹರ್ಷಚರಿತ, ದಶಕುಮಾರ ಚರಿತ, ಕಾವ್ಯಾಲಂಕಾರ ಸೂತ್ರವೃತ್ತಿಗಳಲ್ಲಿ ಇವನ ಪ್ರಸ್ತಾಪವಿದೆ. ಪಂಚತಂತ್ರದಲ್ಲಿ ಮೃಚ್ಛಕಟಿಕದ ೩ ಭಾಗದ ೪ ನೆಯ ಅಂಕಗಳ ಕೆಲವು ಭಾಗಗಳು ಬಂದಿವೆ.



ವಾಮನ ಶೂದ್ರಕನನ್ನು ಕವಿಯೆಂದು ಕರೆದಿದ್ದಾನೆ. ಮೃಚ್ಛಕಟಿಕದ ಪ್ರಸ್ತಾವನೆಯಿಂದ ಅವನ ವಿಷಯದಲ್ಲಿ ಈ ವಿಚಾರಗಳು ದೊರೆಯುತ್ತವೆ—

ದ್ವಿರದೇಂದ್ರಗತಿಶ್ಚಕೋರನೇತ್ರಃ ಪರಿಪೂರ್ಣೇಂದುಮುಖಃ ಸುವಿಗ್ರಹಶ್ಚ ।
ದ್ವಿಜಮುಖ್ಯತಮಃ ಕವಿರ್ಬಭೂವ ಪ್ರಥಿತಃ ಶೂದ್ರಕ ಇತ್ಯಗಾಧಸತ್ವಃ ॥
ಋಗ್ವೇದಂ ಸಾಮವೇದಂ ಗಣಿತಮಥಕಲಾಂ ವೈಶಿಕೀಂ ಹಸ್ತಿಶಿಕ್ಷಾಂ
ಜ್ಞಾತ್ವಾ ಶರ್ವಪ್ರಸಾದಾದ್ವ್ಯಪಗತತಿಮಿರೇ ಚಕ್ಷುಷೀ ಚೋಪಲಭ್ಯ ।
ರಾಜಾನಂ ವೀಕ್ಷ್ಯ ಪುತ್ರಂ ಪರಮಸಮುದಯೇನಾಶ್ವಮೇಧೇನ ಚೇಷ್ಟ್ವಾ
ಲಬ್ಧ್ವಾ ಚಾಯುಃ ಶತಾಬ್ದಂ ದಶದಿನಸಹಿತಂ ಶೂದ್ರಕೋಽಗ್ನಿಂ ಪ್ರವಿಷ್ಟಃ ॥
ಸಮರವ್ಯಸನೀ ಪ್ರಮಾದಶೂನ್ಯಃ ಕಕುದಂ ವೇದವಿದಾಂ ತಪೋಧನಶ್ಚ ।
ಪರವಾರಣಬಾಹುಯುದ್ಧಲುಬ್ಧಃ ಕ್ಷಿತಿಪಾಲಃ ಕಿಲ ಶೂದ್ರಕೋ ಬಭೂವ ॥

ಶೂದ್ರಕರಾಜನು ಪ್ರಸಿದ್ಧನೂ, ಸುಂದರನೂ, ಸತ್ವಶಾಲಿಯೂ, ಕವಿಯೂ ಆಗಿದ್ದನು. ಅವನು ಋಗ್ವೇದ, ಸಾಮವೇದ. ಗಣಿತ, ಕಾಮಶಾಸ್ತ್ರ, ಗಜಶಾಸ್ತ್ರಗಳನ್ನು ತಿಳಿದಿದ್ದನು. ಅವನು ಕಳೆದುಕೊಂಡಿದ್ದ ಕಣ್ಣುಗಳನ್ನು ಶರ್ವಪ್ರಸಾದದಿಂದ ಮತ್ತೆ ಪಡೆದುಕೊಂಡು, ಮಗನಿಗೆ ಪಟ್ಟಕಟ್ಟಿ, ವೈಭವದಿಂದ ಅಶ್ವಮೇಧಯಾಗ ಮಾಡಿ. ನೂರು ವರ್ಷಗಳ ಮೇಲೆ ಹತ್ತು ದಿವಸಗಳ ಕಾಲ ಬದುಕಿದ್ದು ಅಗ್ನಿ ಪ್ರವೇಶ ಮಾಡಿದನು. ಅವನಿಗೆ ಯುದ್ಧದಲ್ಲಿ ಆಸಕ್ತಿಯೂ ಆನೆಗಳೊಡನೆ ಹೋರಾಟದಲ್ಲಿ ಆಸೆಯೂ ಇದ್ದವು. ಇವನು ಪ್ರಮಾದರಹಿತನೂ, ಶ್ರೋತ್ರಿಯನೂ, ತಪೋಧನನೂ ಆಗಿದ್ದನು.

ಮೊದಲನೆಯ ಮೂರು ವರ್ಗದವರಿಗೆ ದ್ವಿಜ ವ್ಯವಹಾರವಿದ್ದರೂ ಸಮರವ್ಯಸನ, ಅಶ್ವಮೇಧಯಾಗಾದಿಗಳಿಂದಲೂ, ಕಾವ್ಯ ಪುರಾಣಗಳ ಉಕ್ತಿಗಳಿಂದಲೂ ಶೂದ್ರಕನನ್ನು ಕ್ಷತ್ರಿಯ ರಾಜನೆಂದು ಭಾವಿಸಲಾಗಿದೆ. ಅವನು ನೂರು ವರ್ಷ ಹತ್ತು ದಿವಸಗಳ ಕಾಲ ಬದುಕಿದ್ದು ಅಗ್ನಿಪ್ರವೇಶ ಮಾಡಿದ ಸಂಗತಿಯು ಪ್ರಸ್ತಾವನೆಯಲ್ಲಿರುವುದು ಆಶ್ಚರ್ಯಕರ. ಕವಿ ಪ್ರಸ್ತಾವನೆಯಲ್ಲಿಯೇ ಸತ್ತರೆ ನಾಟಕ ಮುಗಿಯುವುದು ಹೇಗೆ ? ಭವಿಷ್ಯ ಬಲ್ಲವನಾಗಿದ್ದು ಹೀಗೆ ಬರೆದನೋ ? ಪೋಷಕನಾದ ಅವನ ಹೆಸರಲ್ಲಿ ಬೇರೆಯಾದರೂ ಈ ನಾಟಕವನ್ನು ಬರೆದಿರಬಹುದೇ ? ಶೂದ್ರಕನೇ ಬರೆದಿದ್ದು ಅವನ ಮರಣದ ನಂತರ ಯಾರಾದರೂ ಈ ವಿಚಾರವನ್ನು ಪ್ರಸ್ತಾವನೆಯಲ್ಲಿ ಸೇರಿಸಿರಬಹುದೇ ? ಇದು ಬಿಡಿಸಲಾಗದ ಒಗಟಾಗಿಯೇ ಉಳಿದಿದೆ.

ನಾಟಕದ ಕರ್ತೃವಿಚಾರದಂತೆ ಕಾಲ ವಿಚಾರವೂ ಅನಿಶ್ಚಿತ. ಆಭೀರರು ಗೋಪಾಲಕರು ಮತ್ತು ಪಶುಪಾಲಕರಾಗಿದ್ದರೆಂದೂ. 'ಗೋಪಾಲದಾರಕ' ನಾದ ಆರ್ಯಕನು ಉಜ್ಜಯಿನಿಯ ದೊರೆಯಾದ ಪಾಲಕನನ್ನು ರಾಜ್ಯಚ್ಯುತನನ್ನಾಗಿ ಮಾಡಿದ ಸಂಗತಿಯು ಆಭೀರರಾಜನು ಆಂಧ್ರಭೃತ್ಯರ ಕೊನೆಯ ದೊರೆಯನ್ನು ರಾಜ್ಯಚ್ಯುತನನ್ನಾಗಿಸಿದ ಸಂಗತಿಗೆ ಸೂಚಕವೆಂದೂ, ಆದ್ದರಿಂದ ಶೂದ್ರಕನು ಮೂರನೆಯ ಶತಮಾನದಲ್ಲಿದ್ದ ಆಭೀರರಾಜನಾದ ಶಿವದತ್ತನಾಗಿರಬೇಕೆಂದೂ ಸ್ಟೆನ್‌ಕೋನೋ ಎಂಬ ಪಂಡಿತರು ಅಭಿಪ್ರಾಯ ಪಡುತ್ತಾರೆ. ಗೋಪಾಲ ಶಬ್ದಕ್ಕೆ

ದನೆಂದಾಯುವವನೆಂದೇ ಅರ್ಥಮಾಡಲು ಸಾಧ್ಯವಿಲ್ಲ. ಆರ್ಯಕ, ಪಾಲಕರಂತೆ ಗೋಪಾಲ ಶಬ್ದವೂ ಒಬ್ಬನ ಹೆಸರಾಗಿರಬಹುದು. ಉಜ್ಜಯಿನಿಯ ದೊರೆಯಾದ ಮಹಾಸೇನನಿಗೆ ಗೋಪಾಲ ಮತ್ತು ಪಾಲಕರೆಂಬ ಇಬ್ಬರು ಪುತ್ರರಿದ್ದರೆಂದು ಭಾಸನ ಪ್ರತಿಜ್ಞಾಯೌಗಂಧರಾಯಣದಲ್ಲಿ ಹೇಳಲಾಗಿದೆ. ಭಾಸನ ಚಾರುದತ್ತದ ಆಧಾರದಿಂದ ಮೃಚ್ಛಕಟಿಕ ರಚಿತವಾಗಿದೆ. ಭಾಸನಿಗೆ ವಸ್ತುವನ್ನೊದಗಿಸಿದ ಬೃಹತ್ಕಥೆಯಲ್ಲಿ ಮಹಾಸೇನನ ಮರಣದ ನಂತರ ಕ್ರಮವಾಗಿ ಗೋಪಾಲನು ಪಾಲಕನಿಗೂ, ಪಾಲಕನು ಅಣ್ಣನ ಮಗನಾದ ಆರ್ಯಕನಿಗೂ ರಾಜ್ಯವನ್ನು ಒಪ್ಪಿಸಿದ ವೃತ್ತಾಂತವಿರಬಹುದು.

ವಿ. ಜಿ. ಪರಂಜಪೆಯವರು ಬೌದ್ಧರಿಗಿದ್ದ ಸ್ಥಾನಮಾನ, ಬ್ರಾಹ್ಮಣನು ಶೂದ್ರಳನ್ನು ಮದುವೆಯಾಗುವುದು. ಮಿಶ್ರ ಪ್ರಾಕೃತ ಮೊದಲಾದ ಅಂಶಗಳಿಂದ ಶೂದ್ರಕನು ಆಂಧ್ರಭೃತ್ಯರ ಮೂಲಪುರುಷನಾಗಿರಬೇಕೆಂದೂ, ಆದ್ದರಿಂದ ನಾಟಕದ ಕಾಲ ಕ್ರಿ. ಪೂ. ಮೊದಲನೆಯ ಶತಮಾನವೆಂದೂ ಅಭಿಪ್ರಾಯ ಪಡುತ್ತಾರೆ. ಆಂಧ್ರಭೃತ್ಯರ ಮೂಲಪುರುಷನ ಹೆಸರು ಶಿಮುಖ, ಸಿಂಧುಕ, ಶಿಶುಕ, ಶಿಪ್ರಕ, ಶೂದ್ರ–ಹೀಗೆ ಒಂದೊಂದು ಪುರಾಣದಲ್ಲಿ ಒಂದೊಂದು ರೂಪದಲ್ಲಿ ದೊರೆಯುತ್ತದೆ. ಇವುಗಳಲ್ಲಿ ಮೂಲ ಯಾವುದೋ, ಅಪಭ್ರಂಶ ಯಾವುದೋ ಗೊತ್ತಾಗುವುದಿಲ್ಲ. ಚಾರುದತ್ತದ ಕಾಲ ಕ್ರಿ. ಶ. ಮೂರನೆಯ ಶತಮಾನವಾದ್ದರಿಂದ ಮೃಚ್ಛಕಟಿಕದ ಕಾಲವನ್ನು ಕ್ರಿ. ಪೂ. ಒಂದನೆಯ ಶತಮಾನವೆಂದು ಹೇಳುವುದು ತಪ್ಪಾಗುತ್ತದೆ.

ಮೆಹಂಡಲೆಯವರು ರಾಜತರಂಗಿಣಿಯ ಆಧಾರದಮೇಲೆ ಶೂದ್ರಕನು ಆರನೆಯ ಶತಮಾನದವನೆಂದೂ, ಪಿಷೆಲ್ ಅವರು ನಾಟಕ ಸ್ವರೂಪ ಪರಿಶೀಲನೆಯಿಂದ ಅವನು ಕಾಳಿದಾಸಾದಿಗಳ ಕಾಲದವನೆಂದೂ ಅಭಿಪ್ರಾಯಪಡುತ್ತಾರೆ. ಭಾಷಾ ಸ್ವರೂಪದಿಂದ ಈ ನಾಟಕ ನಾಲ್ಕನೆಯ ಶತಮಾನಕ್ಕಿಂತ ಈಚಿನದಲ್ಲವೆಂದು ಗವರೋಂಸ್ಕಿಯವರೂ, ನಾಟಕದಲ್ಲಿ ಬಂದಿರುವ ಜ್ಯೋತಿಷಾಂಶಗಳಿಂದ ಇದು ನಾಲ್ಕನೆಯ ಶತಮಾನಕ್ಕಿಂತ ಹಿಂದಿನದಲ್ಲವೆಂದು ಯಾಕೋಬಿಯವರೂ ಹೇಳುತ್ತಾರೆ. ಮೃಚ್ಛಕಟಿಕದ ಕಾಲನಿರ್ಣಯ ವ್ಯರ್ಥವೆಂದು ವಿಂಟರ್‌ನಿಟ್ಸ್ ಅವರ ಮತ. ನಾಟಕದಲ್ಲಿ ಬಂದಿರುವ ಆತ್ಮಹೋಮಪದ್ಧತಿ, ಚೌರ್ಯ ಶಾಸ್ತ್ರಕಾರರ ಪ್ರಸ್ತಾಪ, ಇಂದ್ರಧ್ವಜೋತ್ಸವ, ರತ್ನಷಷ್ಠೀ ಉಪವಾಸ, ನಾಟ್ಯಶಾಸ್ತ್ರದ ಲಕ್ಷಣಗಳನ್ನು ಪಾಲಿಸದಿರುವುದು, ದ್ಯೂತದ ಪಾರಿಭಾಷಿಕ ಶಬ್ದಗಳು 'ಗದ್ದಹೀ' 'ಮರಂಡಲಂಬುಅ', ಬೌದ್ಧಧರ್ಮಕ್ಕಿದ್ದ ಮರ್ಯಾದೆ ಮೊದಲಾದ ಸಂಗತಿಗಳಿಂದ ನಾಟಕಕ್ಕೆ ಪ್ರಾಚೀನತೆಯನ್ನು ಹೇಳಬೇಕಾಗುತ್ತದೆ. ಚಾರುದತ್ತದ ಆಧಾರದಿಂದ ಈ ನಾಟಕ ಹುಟ್ಟಿರುವುದರಿಂದಲೂ ಇದರ ಪ್ರಾಕೃತ ಕಾಳಿದಾಸನ ಪ್ರಾಕೃತಕ್ಕಿಂತ ಹಿಂದಿನದಾದ್ದರಿಂದಲೂ ಶೂದ್ರಕನು ಕಾಳಿದಾಸನಿಗೆ ಸಮೀಪ ಕಾಲದವನು, ಎಂದರೆ ಸ್ಥೂಲವಾಗಿ ನಾಲ್ಕು ಅಥವಾ ಐದನೆಯ ಶತಮಾನದಲ್ಲಿದ್ದನೆಂದು ಹೇಳಬಹುದು. ರಾಮಿಲ ಸೋಮಿಲರು ಶೂದ್ರಕಥೆಯನ್ನು ಬರೆದಿರುವುದಾಗಿ ರಾಜಶೇಖರನು ಹೇಳಿದ್ದಾನೆ; ಸೋಮಿಲನನ್ನು ಕಾಳಿದಾಸನು ಸ್ಮರಿಸಿಕೊಂಡಿದ್ದಾನೆ: ಪಂಚತಂತ್ರದಲ್ಲಿ (ಕ್ರಿ.ಶ.ಸು.4 ಅಥವಾ 5ನೆಯ ಶತಮಾನ) ಮೃಚ್ಛಕಟಿಕದ ಕೆಲವು ಅಂಕಗಳಿವೆ. ಈ ಸಂಗತಿಗಳೂ ಮೇಲಿನ ಅಭಿಪ್ರಾಯವನ್ನು ಪೋಷಿಸುತ್ತವೆ.



ಶೂದ್ರಕನು ದಾಕ್ಷಿಣಾತ್ಯನೆಂದು ಕಾವ್ಯಾಲಂಕಾರಸೂತ್ರವೃತ್ತಿಯ ವ್ಯಾಖ್ಯಾನದಿಂದ ತಿಳಿದು ಬರುತ್ತದೆ. ನಾಟಕದಲ್ಲಿ ಚಂದನಕನು[1] ತನ್ನನ್ನು ದಾಕ್ಷಿಣಾತ್ಯನೆಂದೂ ಹೇಳಿಕೊಂಡಿದ್ದಾನೆ; ಕರ್ಣಾಟ ಕಲಹ ಬಂದಿದೆ. ಆದರೂದಾಕ್ಷಿಣಾತ್ಯರ ವಿಚಾರ ತಿಳಿದ ಔತ್ತರೇಯನೂ ನಾಟಕ ಬರೆದಿರಬಹುದಾದ ಸಂಭವವುಂಟು. ಶೂದ್ರಕನ ಹೆಸರಿನಲ್ಲಿ ದೊರೆತಿರುವುದು ಮೃಚ್ಛಕಟಿಕ ಒಂದೇ. ವಲ್ಲಭದೇವನ ಸುಭಾಷಿತಾವಳಿಯಲ್ಲಿ ಶೂದ್ರಕನ ಹೆಸರಿನಲ್ಲಿ ಒಂದು ಪದ್ಯ ದೊರೆಯುತ್ತದೆ[2]. ಮೃಚ್ಛಕಟಿಕ ಹತ್ತು ಅಂಕಗಳ ಒಂದು ಪ್ರಕರಣ, ಅಂಕಗಳಿಗೆ ಕ್ರಮವಾಗಿ ಅಲಂಕಾರನ್ಯಾಸ, ದ್ಯೂತಕರ ಸಂವಾಹಕ, ಸಂಧಿಚ್ಛೇದ, ಮದನಿಕಾಶರ್ವಿಲಕ, ದುರ್ದಿನ, ಪ್ರವಹಣ ವಿಪರ್ಯಯ, ಆರ್ಯಕಾಪವಾಹನ, ವಸಂತಸೇನಾಮೋಚನ, ವ್ಯವಹಾರ, ಸಂಹಾರಗಳೆಂಬ ಹೆಸರುಗಳನ್ನು ಕೊಡಲಾಗಿದೆ. ಇದು ನಾಟಕ ಕಥಾಸಂಗ್ರಹ—

ಉಜ್ಜಯಿನಿಯ ವರ್ತಕನಾದ ಚಾರುದತ್ತನು ದಾನ ಧರ್ಮಗಳಲ್ಲಿ ದುಡ್ಡನ್ನು ಕಳೆದುಕೊಂಡು ಕಡುಬಡವನಾಗಿದ್ದನು. ಅವನ ಗುಣಗಳಿಗಾಗಿ ಇಡೀ ನಗರ ಅವನನ್ನು ಮೆಚ್ಚಿಕೊಂಡಿದ್ದಿತು. ಒಂದುದಿನ ಉದ್ಯಾನದಿಂದ ಹಿಂದಿರುಗುತ್ತಿದ್ದ ಪ್ರಸಿದ್ಧ ವೇಶ್ಯೆಯಾದ ವಸಂತಸೇನೆಯನ್ನು ಶಕಾರನು ದುರ್ಬುದ್ಧಿಯಿಂದ ಹಿಂಬಾಲಿಸಿದನು. ಅವಳು ಹೆದರಿ ದಾರಿಯಲ್ಲಿದ್ದ ಚಾರುದತ್ತನ ಮನೆಗೆ ಹೋಗಿ ತನ್ನ ಆಭರಣಗಳನ್ನು ಅವನಲ್ಲಿ ನ್ಯಾಸವಾಗಿಟ್ಟಳು. ಚಾರುದತ್ತನು ಅವಳನ್ನು ಮನೆಗೆ ತಲುಪಿಸಿದನು. (1)

ಹಿಂದೆ ಚಾರುದತ್ತನಲ್ಲಿದ್ದ ಸಂವಾಹಕನು ಜೂಜಿನಲ್ಲಿ ಸೋತು ರಕ್ಷಣೆಗಾಗಿ ವಸಂತಸೇನೆಯ ಮನೆಯನ್ನು ಸೇರಿದನು. ಚಾರುದತ್ತನಲ್ಲಿದ್ದವನೆಂದು ತಿಳಿದು ಅವಳು ಅವನನ್ನು ಬಿಡಿಸಿದಳು. ಅವನು ಭಿಕ್ಷುವಾದನು (2)

ವಸಂತಸೇನೆಯ ಮನೆಯಲ್ಲಿ ದಾಸಿಯಾಗಿದ್ದ ತನ್ನ ಪ್ರಿಯತಮಳಾದ ಮದನಿಕೆಯನ್ನು ಬಿಡಿಸಿಕೊಳ್ಳಲು ಶರ್ವಿಲಕನು ಚಾರುದತ್ತನ ಮನೆಗೆ ಕನ್ನಹಾಕಿ ವಸಂತಸೇನೆಯ ಆಭರಣಗಳನ್ನು ಅಪಹರಿಸಿದನು. ಚಾರುದತ್ತನು ಅವುಗಳಿಗೆ ಬದಲಾಗಿ ಧೂತಾದೇವಿಯು ಕೊಟ್ಟ ಹಾರವನ್ನು ವಸಂತಸೇನೆಗೆ ಕಳುಹಿಸುವನು. (3)

ಮದನಿಕೆಯು ಚಾರುದತ್ತನೇ ಕಳುಹಿಸಿರುವನೆಂದು ಹೇಳಿ ಶರ್ವಿಳಕನು ತಂದ ಒಡವೆಗಳನ್ನು ವಸಂತಸೇನೆಗೆ ಕೊಡಿಸಿದಳು. ಶರ್ವಿಳಕನು ದಾಸ್ಯಮುಕ್ತಳಾದ ಪ್ರೇಯಸಿಯನ್ನು ಕರೆದುಕೊಂಡು ಹಿಂದಿರುಗುವಾಗ ಪಾಲಕನು ಆರ್ಯಕನನ್ನು ಸೆರೆಹಾಕಿದನೆಂಬ ಸಮಾಚಾರ ಕೇಳಿ ಕೂಡಲೇ ಮಿತ್ರನಾದ ಅವನಿಗೆ ನೆರವಾಗಲು ಹೋದನು. ಇಷ್ಟರಲ್ಲಿ ಮೈತ್ರೇಯನು ಚಾರುದತ್ತನು ಕಳುಹಿಸಿದ್ದ ಹಾರವನ್ನು ತಂದುವಸಂತಸೇನೆಗೆ ಕೊಟ್ಟನು. (4)

---

1. ಶೂದ್ರಕ, ಪಲ್ಲವಕ, ಕರ್ಣಪೂರಕ, ವರ್ಧಮಾನಕ, ಶರ್ವಿಲಕ, ವೀರಕ, ರದನಿಕೆ, ಮದನಿಕೆ—ಹೀಗೆ ಈ ನಾಟಕದಲ್ಲಿ ಬರುವ ಬಹಳ ಹೆಸರುಗಳು ಕಕಾರಾಂತವಾಗಿವೆ. ಇದಕ್ಕೆ ಆಂಧ್ರಪ್ರದೇಶದ ಪ್ರಭಾವ ಕಾರಣವಾಗಿರಬಹುದು.
2. ತ್ಯಾಗೋಹಿ ಸರ್ವವ್ಯಸನಾನಿ ಹಂತೀತ್ಯಲೀಕಮೇತದ್ಭುವಿ ಸಂಪ್ರತೀತಂ।
ಜಾತಾನಿ ಸರ್ವವ್ಯಸನಾನಿ ತಸ್ಯಾಸ್ತ್ಯಾಗೇನ ಮೇ ಮುಗ್ಧವಿಲೋಚನಾಯಾಃ॥

ವಸಂತಸೇನೆ ಚಾರುದತ್ತನ ಮನೆಗೆ ಬಂದು ರತ್ನಹಾರವನ್ನು ಜೂಜಿನಲ್ಲಿ ಸೋತುದಾಗಿ ಹೇಳಿ ಅದಕ್ಕೆ ಬದಲಾಗಿ ಒಡವೆಗಳ ಗಂಟನ್ನು ಕೊಟ್ಟಳು. ಸತ್ಯ ಸಂಗತಿಯನ್ನು ತಿಳಿದು ಅವನಿಗೆ ಬಹಳ ಸಂತೋಷವಾಯಿತು. ಮಳೆ ಸುರಿಯುತ್ತಿದ್ದುದರಿಂದ ಅವಳು ಆದಿನ ಅವನ ಮನೆಯಲ್ಲಿಯೇ ಉಳಿದುಕೊಂಡಳು. (5)

ಮಾರನೆಯದಿನ 'ಮಣ್ಣಿನ ಗಾಡಿಬೇಡ, ಚಿನ್ನದ ಗಾಡಿಯೇ ಬೇಕು' ಎಂದು ಅಳುತ್ತಿದ್ದ ರೋಹಸೇನನನ್ನು ಸಮಾಧಾನಗೊಳಿಸಿ ಅವಳು ತನ್ನ ಒಡವೆಗಳನ್ನು ಅವನ ಗಾಡಿಗೆ ತುಂಬಿ ಚಿನ್ನದ ಗಾಡಿಯನ್ನು ಮಾಡಿಸಿಕೊಳ್ಳೆಂದು ಹೇಳಿದಳು; ಚಾರುದತ್ತನು ಹೇಳಿದ್ದಂತೆ ಪುಷ್ಪಕ-ರಂಡಕ ಜೀರ್ಣೋದ್ಯಾನಕ್ಕೆ ಹೋಗಲು ಬಾಗಿಲಲ್ಲಿ ನಿಂತಿದ್ದ ಶಕಾರನ ಗಾಡಿಯನ್ನು ತಿಳಿಯದೆ ಹತ್ತಿದಳು. ಬಂಧನದಿಂದ ತಪ್ಪಿಸಿಕೊಂಡು ಬಂದಿದ್ದ ಆರ್ಯಕ ಚಾರುದತ್ತನ ಗಾಡಿಯನ್ನು ಹತ್ತಿ ಹೊರಟು ದಾರಿಯಲ್ಲಿ ಕಾವಲುಗಾರರ ಕೈಗೆ ಸಿಕ್ಕಿಬಿದ್ದನು. ಚಂದನಕನು ಅವನನ್ನು ವಿಶ್ವಾಸದಿಂದ ಬಿಡಿಸಿ ಕಳುಹಿಸಿದನು. (6)

ತನ್ನ ಗಾಡಿಯಲ್ಲಿ ಬಂದ ಆರ್ಯಕನನ್ನು ಚಾರುದತ್ತನು ಅದೇ ಗಾಡಿಯಲ್ಲಿ ಸುರಕ್ಷಿತ ಸ್ಥಾನಕ್ಕೆ ಕಳುಹಿಸಿದನು. (7)

ವಸಂತಸೇನೆಯು ಶಕಾರನ ಗಾಡಿಯಲ್ಲಿ ಉದ್ಯಾನಕ್ಕೆ ಬಂದಳು. ಶಾಕಾರನು ವಶವಾಗಲು ಒಪ್ಪದ ಅವಳ ಕತ್ತನ್ನು ಹಿಸುಕಿ, ತರಗೆಲೆಯಲ್ಲಿ ಮುಚ್ಚಿ ಹೊರಟು ಹೋದನು. ಬಟ್ಟೆ ತೊಳೆಯಲು ಬಂದಿದ್ದ ಭಿಕ್ಷು ಅವಳನ್ನು ಉಪಚರಿಸಿ ಕರೆದುಕೊಂಡು ಹೋದನು. (8)

ಚಾರುದತ್ತನು ವಸಂತಸೇನೆಯನ್ನು ಕೊಂದಿರುವನೆಂದು ಶಕಾರನು ನ್ಯಾಯಾಲಯಕ್ಕೆ ದೂರು ತಂದನು. ವಿಚಾರಣೆಯಾಗಿ ಅವನಿಗೆ ಗಲ್ಲು ಶಿಕ್ಷೆಯಾಯಿತು. (9)

ಚಾರುದತ್ತನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುತ್ತಿದ್ದಾಗ ವಸಂತಸೇನೆ ಬದುಕಿರುವ ವಿಚಾರ ಬೆಳಕಿಗೆ ಬಂದಿತು. ಆರ್ಯಕನು ಪಾಲಕನನ್ನು ಕೊಂದು ರಾಜ್ಯವನ್ನು ವಹಿಸಿಕೊಂಡನು. ಚಾರುದತ್ತನು ಬದುಕಿದನು. ವಸಂತಸೇನೆಗೆ ವಧೂ ಪದವಿ ದೊರೆಯಿತು. ಹೊಸ ಆಡಳಿತದಲ್ಲಿ ಎಲ್ಲರಿಗೂ ಒಳ್ಳೆಯದಾಯಿತು. (10)

ಮೃಚ್ಛಕಟಿಕದ ವಸ್ತುವಿನಲ್ಲಿ ಎರಡು ಪ್ರಧಾನ ಭಾಗಗಳಿವೆ—ಒಂದು ಚಾರುದತ್ತ ಮತ್ತು ವಸಂತಸೇನೆಯರ ಪ್ರಣಯ ಸಂಬಂಧದಿಂದ ಬೆಳೆದ ಸಾಮಾಜಿಕ ವೃತ್ತಾಂತ ಮತ್ತೊಂದು ಆರ್ಯಕ ಮತ್ತು ಪಾಲಕರಿಗೆ ಸಂಬಂಧಿಸಿದ ರಾಜಕೀಯ ವೃತ್ತಾಂತ. ಶರ್ವಿಳಕ ಮತ್ತು ಮದನಿಕೆಯರ ಪ್ರಣಯ ವೃತ್ತಾಂತ ಈ ಎರಡು ವೃತ್ತಾಂತಗಳಿಗೆ ಬೆಸುಗೆಯಂತಿದೆ. ಚಾರುದತ್ತನ ಮನೆಯಲ್ಲಿ ಕಳ್ಳತನ ಮಾಡಿದ ಶರ್ವಿಳಕ ಮಿತ್ರ; ಪಾಲಕನ ಸೇನೆಯಲ್ಲಿದ್ದ ಚಂದನಕ ಚಾರುದತ್ತನಿಗೆ ಬೇಕಾದವನು; ಚಾರುದತ್ತನ ಸೇವೆಯಲ್ಲಿದ್ದ ಸಂವಾಹಕ ವಸಂತಸೇನೆಯ ಉಪಚಾರಕ್ಕೆ ಪ್ರತ್ಯುಪಕಾರ ಮಾಡಿ ಚಾರುದತ್ತನ ಪ್ರಾಣವನ್ನು ಉಳಿಸಿದನು; ಚಾರುದತ್ತನ ಸಾರಥಿಯಾದ ವರ್ಧಮಾನಕನು ಆರ್ಯಕನನ್ನೂ, ಶಕಾರನ ಸಾರಥಿಯಾದ



ಸ್ಥಾವರಕನು ವಸಂತಸೇನೆಯನ್ನೂ ಉದ್ಯಾನಕ್ಕೆ ಕರೆತರುವರು. ಹೀಗೆ ಶರ್ವಿಳಕನೇ ಮೊದಲಾದವರು ಪ್ರಧಾನ ವೃತ್ತಾಂತಗಳ ಜೋಡಣೆಗೆ ಸಹಾಯಕರಾಗಿದ್ದಾರೆ. ಚಾರುದತ್ತದ ಕಥೆಯೂ ಈ ಪ್ರಕರಣದ ಮೊದಲನೆಯ ನಾಲ್ಕು ಅಂಕಗಳ ಕಥೆಯೂ ಒಂದೇ ಆಗಿದೆ; ಚಾರುದತ್ತದ ಸಜ್ಜಲಕ, ಸಂಸ್ಥಾಪಕರು ಮೃಚ್ಛಕಟಿಕದಲ್ಲಿ ಶರ್ವಿಳಕ, ಶಕಾರರೆಂದು ಹೊಸ ಹೆಸರು ಪಡೆದಿದ್ದಾರೆ. ಚಾರುದತ್ತದ ದೊರೆಯದಿರುವ ಅಂಕಗಳಲ್ಲಿ ರಾಜ್ಯಕ್ರಾಂತಿಯ ವೃತ್ತಾಂತವಿದ್ದಿತೋ ಇಲ್ಲವೋ ಊಹಿಸಲು ಸಾಧ್ಯವಿಲ್ಲ. ಶೂದ್ರಕನು ಆಗಲೇ ಸಿದ್ಧವಾಗಿದ್ದ ಚಾರುದತ್ತದ ಕಥೆಯೊಡನೆ ತನ್ನ ಪ್ರತಿಭೆಯಿಂದ ಆರ್ಯಕನ ರಾಜಕೀಯ ಕಥೆಯನ್ನು ನೆಯ್ದಿದ್ದಾನೆಂದು ವಿದ್ವಾಂಸರ ಅಭಿಪ್ರಾಯ.

ಸಿರಿತನದಿಂದ ಬಡತನಕ್ಕಿಳಿದ ಚಾರುದತ್ತನ ಮಗ ರೋಹಸೇನ ತನಗೆ ಮಣ್ಣಿನ ಗಾಡಿ ಬೇಡವೆಂದೂ, ಚಿನ್ನದಗಾಡಿ ಬೇಕೆಂದೂ ಅಳುತ್ತಾನೆ. ದರಿದ್ರ ತಂದೆಗೆ ಶಕ್ತಿಯಿಲ್ಲ; ಮಮತೆಯು ಮಗುವಿಗೆ ಅರಿವಿಲ್ಲ. ರೂಪಜೀವಿಯಾದ ವೇಶ್ಯೆ ತನಗೆ ಪ್ರಿಯವಾದ, ಬೆಲೆಬಾಳುವ ಎಲ್ಲ ಒಡವೆಗಳನ್ನು ಕೊಟ್ಟು ಮಗುವನ್ನು ಸಂತೈಸುತ್ತಾಳೆ. ಸ್ನೇಹ, ಅನುಕಂಪಾದಿ ಭಾವಗಳನ್ನು ಕೆರಳಿಸಿ ಕರುಳು ಹಿಂಡುವ ಈ ಘಟನೆಯಿಂದ ನಾಟಕಕ್ಕೆ ಮೃಚ್ಛಕಟಿಕವೆಂಬ ಹೆಸರು ಬಂದಿದೆ. ಈ ಹೆಸರಿನಿಂದಲೇ ಚಾರುದತ್ತನ ಕಥೆ ಪ್ರಧಾನವೆಂಬುದು ಸ್ಪಷ್ಟ, ಆರ್ಯಕನ ಕಥೆ ಇದಕ್ಕೆ ಪೋಷಕ. ನಾಟಕದಲ್ಲಿ ಆರ್ಯಕನು ಒಂದುಸಾರಿ ಮಾತ್ರ ಕಾಣಿಸಿಕೊಳ್ಳುತ್ತಾನೆ; ಪಾಲಕನು ಕಾಣಿಸಿಕೊಳ್ಳುವುದೇ ಇಲ್ಲ. ಸುಮಾರು ಮುವ್ವತ್ತು ಪಾತ್ರಗಳಿದ್ದರೂ ಅವು ಕಥೆಯ ಸ್ವಾರಸ್ಯವನ್ನು ಹೆಚ್ಚಿಸಿವೆಯೇ ಹೊರತು ಹೊರೆಯಾಗಿಲ್ಲ. ಬಂದಿರುವ ಘಟನೆಗಳೆಲ್ಲ ಕವಿಯ ಆಶಯವನ್ನು ಪೂರೈಸಲು ಸಮರ್ಥವಾಗಿವೆ—

ತಯೋರಿದಂ ಸತ್ಸುರತೋತ್ಸವಾಶ್ರಯಂ ನಯಪ್ರಚಾರಂ ವ್ಯವಹಾರದುಷ್ಟತಾಂ।
ಖಲಸ್ವಭಾವಂ ಭವಿತವ್ಯತಾಂ ತಥಾ ಚಕಾರ ಸರ್ವಂ ಕಿಲ ಶೂದ್ರಕೋ ನೃಪಃ ॥

ನಾಟಕ ಶಂಭುವಿನ 'ಶೂನ್ಯೇಕ್ಷಣಘಟಿತಲಯಬ್ರಹ್ಮಲಗ್ನಸಮಾಧಿ' ಯ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತದೆ. ನಾಯಕನಾದ ಚಾರುದತ್ತ ಜಾತಿಯಲ್ಲಿ ಬ್ರಾಹ್ಮಣ ವೃತ್ತಿಯಲ್ಲಿ ವರ್ತಕ, ದಾನಧರ್ಮಾದಿಗಳಲ್ಲಿ ಕ್ಷತ್ರಿಯ—ಅವನು ದೀನರಿಗೆ ಕಲ್ಪವೃಕ್ಷ, ಸ್ವಗುಣಫಲನತ, ಸಜ್ಜನರ ಕುಟುಂಬಿ, ಶಿಕ್ಷಿತರಿಗೆ ಆದರ್ಶ, ಸುಚರಿತ ನಿಕಷ, ಶೀಲವೇಲಾಸಮುದ್ರ, ಸತ್ಕರ್ತಾ, ನಾವಮಂತಾ, ಪುರುಷ ಗುಣನಿಧಿ, ದಕ್ಷಿಣೋದಾತ್ತಸತ್ವ. ಇದು ಅವನ ಬಡತನದ ಅನುಭವ—

ದಾರಿದ್ರ್ಯಾದ್ಧ್ರಿಯಮೇತಿ ಹ್ರೀಪರಿಗತಃ ಪ್ರಭ್ರಶ್ಯತೇ ತೇಜಸೋ
ನಿಸ್ತೇಜಾಃ ಪರಿಭೂಯತೇ ಪರಿಭವಾನ್ನಿರ್ವೇದಮಾಪದ್ಯತೇ ।
ನಿರ್ವಿಣ್ಣಃ ಶುಚಮೇತಿ ಶೋಕಪಿಹಿತೋ ಬುದ್ಧ್ಯಾ ಪರಿತ್ಯಜ್ಯತೇ
ನಿರ್ಬುದ್ಧಿಃ ಕ್ಷಯಮೇತ್ಯಹೋ ನಿಧನತಾ ಸರ್ವಾಪದಾಮಾಸ್ಪದಂ ॥

ದುಡ್ಡು ಹೋದುದರಿಂದ ಅವನಿಗೆ ಚಿಂತೆಯಿಲ್ಲ. ಕಾಲಾಂತರದಲ್ಲಿ ಮಧುಕರಗಳು ಕರಿಯ ಕಪೋಲವನ್ನು ತ್ಯಜಿಸುವಂತೆ ದರಿದ್ರನಾದ ಅವನನ್ನು ಮಿತ್ರರು ತೊರೆದರು; ಅರ್ಥಿಗಳು ದೂರ ಸರಿದರು; ಇದು ಅವನ ದುಃಖಕ್ಕೆ ಕಾರಣ. ಶಕಾರನ ದುಷ್ಕೃತ್ಯ ಮತ್ತು ದುರ್ಬುದ್ಧಿ

ಗಳಿಂದ ಅವನು ವಸಂತಸೇನೆಯನ್ನು ಕೊಂದನೆಂಬ ಅಪವಾದಕ್ಕೆ ತುತ್ತಾದನು ; ಗಲ್ಲುಗಂಬ ಹತ್ತುವ ಪರಿಸ್ಥಿತಿ ಬಂದಿತು. ಅವನು ಮರಣಕ್ಕಿಂತಲೂ ಅಕೀರ್ತಿಗೆ ಅಂಜಿದನು—

ನ ಭೀತೋ ಮರಣಾದಸ್ಮಿ ಕೇವಲಂ ದೂಷಿತಂ ಯಶಃ ।
ವಿಶುದ್ಧಸ್ಯ ಹಿ ಮೇ ಮೃತ್ಯುಃ ಪುತ್ರಜನ್ಮಸಮೋ ಭವೇತ್ ॥

ಆರ್ಯಕನು ಮರೆ ಹೊಕ್ಕಾಗ 'ಅಪಿ ಪ್ರಾಣಾನಹಂ ಜಹ್ಯಾಂ ನತು ತ್ವಾಂ ಶರಣಾಗತಂ ಎಂದು ದೊರೆಗೆ ಹೆದರದೆ ಅಭಯ ವಚನವನ್ನಿತ್ತು ಸಹಾಯಮಾಡಿದನು. ಅಪರಾಧಿಯಾದ ಶಕಾರನ ವಿಷಯದಲ್ಲಿ 'ಉಪಕಾರ ಹತಸ್ತು ಕರ್ತವ್ಯಃ 1' ಎಂದು ಹೇಳಿದ ಮಾತು ಅವನ ಕ್ಷಮಾಗುಣಕ್ಕೆ ನಿದರ್ಶನ. ನಾಟಕದ ನಾಯಿಕೆಯಾದ ವಸಂತಸೇನೆ ಉಜ್ಜಯಿನಿಯ ಪ್ರಸಿದ್ಧ ವೇಶ್ಯೆ, ಆದರೂ ಅವಳು ಗುಣಸಂಪನ್ನೆ. ಧನವಂತೆ, ಗೌರವಾನ್ವಿತೆ. ಗಣಿಕೆಯಾದರೂ ಗುಣಾನುರಕ್ತೆ. ವಸಂತಶೋಭೆಯಂತಿದ್ದ ವಸಂತಸೇನೆ ಸಹಕಾರ ಪಾದಪವನ್ನು ಸೇವಿಸಿ ಪಲಾಶ ಪಾದಪವನ್ನು ಹೇಗೆ ಅಂಗೀಕರಿಸಿಯಾಳು ? ಅವಳನ್ನು ಪಡೆಯಲು ನಡೆಸಿದ ಶಕಾರನ ಸರ್ವ ಪ್ರಯತ್ನವೂ ವ್ಯರ್ಥವಾಯಿತು. ಮಹಾರಾಜನು ಅವಳಿಗೆ ವಧೂಪದವಿಯನ್ನು ಅನುಗ್ರಹಿಸಿ ಗೌರವಿಸಿದನು. ಚಾರುದತ್ತನ ಪ್ರಥಮ ಪತ್ನಿಯಾದ ಧೂತಾದೇವಿ ಸಾಧ್ವೀಮಣಿ ; ತನ್ನ ಗಂಡನನ್ನು ಮೆಚ್ಚಿ ಬಂದ ವೇಶ್ಯೆಯನ್ನೂ ಸೋದರಿಯಂತೆ ಕಂಡಳು. ಗಂಡನು ಅವಳಿಗೆ ಹೆದರಿ ನಡೆಯುವ ಅಗತ್ಯವಿಲ್ಲ. ಶರ್ವಿಳಕನು ಜಾತಿಯಲ್ಲಿ ಬ್ರಾಹ್ಮಣ ; ಅವನು ಮಾಡಿದ್ದು ಚೌರ್ಯ ; ಕೈ ಹಿಡಿದಿದ್ದು ದಾಸಿಯನ್ನು. ರಾಜಕೀಯ ವ್ಯವಹಾರದಲ್ಲಿ ಅವನಿಗೆ ಒಳ್ಳೆಯ ಸ್ಫೂರ್ತಿ ಮತ್ತು ಚಾತುರ್ಯಗಳಿದ್ದವು. ಶರ್ವಿಳಕ ಮದನಿಕೆಯರ ಅನುರಾಗ ಚಾರುದತ್ತ ವಸಂತಸೇನೆಯರ ಅನುರಾಗದಂತೆ ಅಮರವಾದದು. ದ್ಯೂತ, ಚೌರ್ಯ, ಕರ್ಣಾಟಕಲಹ ದೃಶ್ಯಗಳು ಪ್ರೇಕ್ಷಕರಿಗೆ ಗೆಲುವನ್ನುಂಟು ಮಾಡುತ್ತವೆ. ಚಾರುದತ್ತ ಕರ್ಣಪೂರಕನಿಗೆ ಪಾರಿತೋಷಕವಾಗಿ ಕೊಟ್ಟ ಜಾತೀಕುಸುಮವಾಸಿತವಾದ ಪ್ರಾವಾರಕ ಮತ್ತು ವಸಂತಸೇನೆ ಚಾರುದತ್ತನ ಮನೆಯಲ್ಲಿ ನ್ಯಾಸವಾಗಿಟ್ಟ ಆಭರಣಗಳ ಗಂಟು ಅಚೇತನ ವಸ್ತುಗಳಾದರೂ ನಾಯಕ ನಾಯಿಕೆಯರ ಪ್ರಣಯ ವರ್ಧನೆಗೆ ಹೃದ್ಯವಾಗಿ ಉಪಕರಿಸಿವೆ. ವಿಟ ಚೇಟಾದಿ ಚಿಕ್ಕ ಪಾತ್ರಗಳೂ ಚೈತನ್ಯದಿಂದ ತುಂಬಿವೆ.

ದೃಶ್ಯರಮಣೀಯತೆಗೆ ಪ್ರಾಶಸ್ತ್ಯ ಸಂದಿದ್ದರೂ, ನಾಟಕದ ಕಾವ್ಯಾಂಶವೂ ಶ್ಲಾಘನೀಯವಾಗಿದೆ. ಇದು ಅಕಾಲ ದುರ್ದಿನದ ಮನೋಜ್ಞ ವರ್ಣನೆ—

ಮೇಘೋ ಜಲಾರ್ದ್ರ ಮಹಿಷೋದರಭೃಂಗನೀಲೋ
ವಿದ್ಯುತ್ಪ್ರಭಾರಚಿತಪೀತಪಟೋತ್ತರೀಯಃ ।
ಆಭಾತಿ ಸಂಹೃತಬಲಾಕ ಗೃಹೀತ ಶಂಖಃ
ಖಂ ಕೇಶವೋಽಪರ ಇವಾಕ್ರಮಿತುಂ ಪ್ರವೃತ್ತಃ ॥

ಇದು ದ್ಯೂತದ ಮಹಿಮೆ

ದ್ರವ್ಯಂ ಲಬ್ಧಂ ದ್ಯೂತೇನೈವ ದಾರಾ ಮಿತ್ರಂ ದ್ಯೂತೇನೈವ ।
ದತ್ತಂ ಭುಕ್ತಂ ದ್ಯೂತೇನೈವ ಸರ್ವಂ ನಷ್ಟಂ ದ್ಯೂತೇನೈವ ॥

---

1 ಕೃತಾಪರಾಧಸ್ಯ ಹಿ ಸತ್ಕೃತಿರ್ವಧಃ— ಭಾಸನ ಪ್ರತಿಜ್ಞಾಯೌಗಂಧರಾಯಣ



ಕೆಲವು ಸಂಭಾಷಿತ ವಾಕ್ಯಗಳು—

(1) ವಿಷಮಾ ಇಂದ್ರಿಯಚೌರಾ ಹರಂತಿ ಚಿರಸಂಚಿತಂ ಧರ್ಮಂ ।
(2) ಭವಂತಿ ನಿತರಾಂ ಸ್ಫೀತಾಃ ಸುಕ್ಷೇತ್ರೇ ಕಂಟಕಿದ್ರುಮಾಃ ॥
(3) ಮೂರ್ಖಸ್ಯ ದಿಶಃ ಶೂನ್ಯಾಃ ಸರ್ವಂ ಶೂನ್ಯಂ ದರಿದ್ರಸ್ಯ ।
(4) ದೈವೀ ಚ ಸಿದ್ಧಿರಪಿ ಲಂಘಯಿತುಂ ಶಕ್ಯಾ ।
(5) ಮನುಷ್ಯಸ್ಯ ವಿಪತ್ತಿಕಾಲೇ ಛಿದ್ರೇಷ್ವನರ್ಥಾ ಬಹುಲೀ ಭವಂತಿ ।
(6) ಬಲವತಾ ಸಹ ಕೋ ವಿರೋಧಃ ।
(7) ಶಂಕನೀಯಾ ಹಿ ಲೋಕೇಽಸ್ಮಿನ್ ನಿಷ್ಪ್ರತಾಪಾ ದರಿದ್ರತಾ ।

ಇದು ಶೃಂಗಾರ ಪ್ರಧಾನವಾದ ನಾಟಕ ; ಹಾಸ್ಯವೂ ತುಂಬಿ ತುಳುಕುತ್ತದೆ. ವಿದೂಷಕ ಶಕಾರ. ಚೇಟಾದಿಗಳನ್ನು ಬಳಸಿಕೊಂಡು ನಡೆ, ನುಡಿ. ವೇಷಭೂಷಾದಿಗಳಿಂದ ಹಾಸ್ಯವನ್ನು ತರಲಾಗಿದೆ. ಈ ನಾಟಕದ ಹಾಸ್ಯ ವಿದೂಷಕನ ಕೇವಲ ಹೊಟ್ಟೆ ಬಾಕತನವನ್ನು ಅವಲಂಬಿಸಿಕೊಂಡಿಲ್ಲ ; ಸಂಪ್ರದಾಯಬದ್ಧವೂ ಅಲ್ಲ. ಇಷ್ಟು ಹಾಸ್ಯ ಬೇರೆ ಯಾವ ಸಂಸ್ಕೃತ ನಾಟಕದಲ್ಲಿಯೂ ಇಲ್ಲ. ವೈವಿಧ್ಯದಿಂದ ಕೂಡಿ ಸರ್ವತೋಮುಖವಾದ ಇಲ್ಲಿನ ಹಾಸ್ಯ ಪಾಶ್ಚಾತ್ಯ ಗ್ರಂಥಗಳ ಪ್ರಸಿದ್ಧ ಹಾಸ್ಯದೊಡನೆ ಸರಿದೂಗಬಲ್ಲದು. ನಿದ್ರೆಯಲ್ಲಿ ಕನವರಿಸುತ್ತಾ 'ಬ್ರಾಹ್ಮಣನ ಮೇಲೆ ಆಣೆ, ತೆಗೆದುಕೋ' ಎಂದು ಹೇಳಿ ಮೈತ್ರೇಯನು ಆಭರಣಗಳ ಗಂಟನ್ನು ಕಳ್ಳನ ಕೈಗೆ ಕೊಡುವನು. ಜೂಜುಕಟ್ಟೆಯಿಂದ ತಪ್ಪಿಸಿಕೊಂಡು ಓಡಿದ ಸಂವಾಹಕ ಹೆಜ್ಜೆ ಹಿಂದು ಮುಂದಾಗಿ ಹೋಗಿ ಹಾಳುಬಿದ್ದ ದೇವಾಲಯದ ವಿಗ್ರಹಸ್ಥಾನದಲ್ಲಿ ನಿಂತಿದ್ದು ಹಿಂಬಾಲಿಸಿ ಬಂದಿದ್ದ ಜೂಜುಗಾರರು ತನ್ನ ಮುಂದೆ ಆಟಕ್ಕೆ ಕುಳಿತುಕೊಳ್ಳಲು, ಮೈಮರೆತು ಛಟಕ್ಕನೆ ಆಟಕ್ಕೆ ಇಳಿಯುವನು. ಈ ಪ್ರಸಂಗಗಳು ಯಾರನ್ನು ನಗಿಸುವುದಿಲ್ಲ. ಶಕಾರನು ತನ್ನನ್ನು ಪ್ರವರಪುರುಷ, ಮನುಷ್ಯ, ವಾಸುದೇವಕನೆಂದು ಹೇಳಿಕೊಂಡರೆ ಪ್ರೇಕ್ಷಕರು ನಗದಿರಲು ಸಾಧ್ಯವೇ ? ಇದು ಶಕಾರನ ಪುರಾಣ ಪಾಂಡಿತ್ಯ—

ಚಾಣಕ್ಯೇನ ಯಥಾ ಸೀತಾ ಮಾರಿತಾ ಭಾರತೇ ಯುಗೇ ।
ಏವಂ ತ್ವಾಂ ಮೋಟಯಿಷ್ಯಾಮಿ ಜಟಾಯುರಿವ ದ್ರೌಪದೀಂ ॥

ಚೇಟ ವಿದೂಷಕರ ಸಂಭಾಷಣೆ :—

ಚೇಟ—ಅರೇ ಜಾನೀಹಿ ತಾವತ್; ತೇನ ಹಿ ಕಸ್ಮಿನ್‌ಕಾಲೇ ಚೂತಾ ಮುಕುಲಿತಾ ಭವಂತಿ ।
ವಿದೂಷಕ—ಅರೇ, ದಾಸ್ಯಾಃ ಪುತ್ರ ! ಗ್ರೀಷ್ಮೇ ।
ಚೇಟ—(ಸಹಾಸಂ) —ಅರೇ, ನಹಿ ನಹಿ ।
ವಿದೂಷಕ (ಚಾರುದತ್ತಮುಪಸೃತ್ಯ)- ಭೋ ವಯಸ್ಯ ! ಪ್ರಕ್ಷ್ಯಾಮಿ ತಾವತ್, ಕಸ್ಮಿನ್ ಕಾಲೇ ಚೂತಾ ಮುಕುಲಿತಾ ಭವಂತಿ ।
ಚಾರುದತ್ತ—ಮೂರ್ಖ, ವಸಂತೇ ।
ವಿದೂಷಕ (ಚೇಟಮುಪಗಮ್ಯ)—ಮೂರ್ಖ, ವಸಂತೇ ।

ಭಾಸನು ಊರುಭಂಗದಲ್ಲಿ ಮಗುವಾದ ದುರ್ಜಯನನ್ನು ತೊಡೆಮೇಲಿರಿಸಿ ಬಿದ್ದಿದ್ದ ದುರ್ಯೋಧನನಲ್ಲಿಗೆ ಕರೆತರುವಂತೆ ಶೂದ್ರಕನು ರೋಹಸೇನನನ್ನು ವಧ್ಯಸ್ಥಾನಕ್ಕೆ ಹೋಗುತ್ತಿದ್ದ ಚಾರುದತ್ತನಲ್ಲಿಗೆ ಕರೆತಂದು ಕರುಣಾವನ್ನು ಹರಿಸಿದ್ದಾನೆ.

ಶಕಾರ ಬಹಳ ವಿಕಾರನಾಗಿದ್ದಾನೆ ; ಅವನಲ್ಲಿ ಎಲ್ಲ ದುರ್ಗುಣಗಳೂ ಮನೆಮಾಡಿಕೊಂಡಿವೆ ; ಅವನ ಪುರಾಣಸಂಕರ ಅತಿಯಾಗಿದೆ. ನ್ಯಾಯಾದೀಶನು ರಾಜನಿಗೆ ಹೆದರಿ ಶಕಾರನಿಗೆ ಪಕ್ಷಪಾತ ತೋರಿಸುತ್ತಾನೆ. ವಸಂತಸೇನೆ ಮತ್ತು ಅವಳ ಮನೆಯ ವರ್ಣನೆಗಳು ದೀರ್ಘವಾಗಿವೆ. ಇವು ಈ ನಾಟಕದ ದೋಷಗಳಾಗಿ ಕಾಣಿಸಿಕೊಳ್ಳುತ್ತವೆ. ನಾಟ್ಯಶಾಸ್ತ್ರವನ್ನು ಕೆಲವಂಶಗಳಲ್ಲಿ ಅನುಸರಿಸಿಲ್ಲ ; ಪಾಣಿನಿಯ ವ್ಯಾಕರಣಕ್ಕೆ ವಿರುದ್ಧವಾದ ಪ್ರಯೋಗಗಳೂ ಇವೆ.

ಕವಿಯು ಪಾತ್ರೋಚಿತವಾಗಿ ಶೌರಸೇನೀ, ಆವಂತಿಕಾ, ಪ್ರಾಚ್ಯಾ, ಶಾಕಾರೀ ಮೊದಲಾದ ಹಲವು ಪ್ರಾಕೃತಗಳನ್ನು ಬಳಸಿದ್ದಾನೆ. ವೈವಿಧ್ಯ ಮತ್ತು ಬಾಹುಲ್ಯದ ದೃಷ್ಟಿಯಿಂದ ಇಲ್ಲಿರುವಷ್ಟು ಪ್ರಾಕೃತ ಬೇರೆ ಯಾವ ನಾಟಕದಲ್ಲಿಯೂ ಇಲ್ಲ. ಸಂಭಾಷಣೆಯ ಓಟಕ್ಕೆ ಸಹಾಯಕವಾದ 'ಶ್ಲೋಕ' ಛಂದಸ್ಸನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ವಸಂತತಿಲಕಾ, ಶಾರ್ದೂಲ ವಿಕ್ರೀಡಿತ, ಇಂದ್ರವಜ್ರಾ, ವಂಶಸ್ಥ, ಉಪಜಾತಿ ಮುಂತಾದ ಛಂದಸ್ಸುಗಳ ಉಪಯೋಗವನ್ನು ಪಡೆದುಕೊಳ್ಳಲಾಗಿದೆ. ಪ್ರಾಕೃತ ಛಂದಸ್ಸುಗಳ ಬಳಕೆಯೂ ಇದೆ.

## ವಿಶಾಖ ದತ್ತ

(ಕ್ರಿ.ಶ. ಸು. 450)

ವಿಶಾಖದತ್ತನ ದೇಶ ಕಾಲಾದಿಗಳ ವಿಷಯದಲ್ಲಿ ಬಹಳ ವಿವಾದವಿದೆ. ಮುದ್ರಾರಾಕ್ಷಸದ ಪ್ರಸ್ತಾವನೆಯಿಂದ ಅವನ ತಂದೆ ಮಹಾರಾಜ ಭಾಸ್ಕರದತ್ತ (ಅಥವಾ ಪೃಥು) ನೆಂದೂ, ತಾತ ಸಾಮಂತ ವಟೇಶ್ವರದತ್ತನೆಂದೂ ತಿಳಿದು ಬರುತ್ತದೆ. ಅವರು ಯಾರು ಎಲ್ಲಿದ್ದರು ಎಂಬುದು ತಿಳಿಯದು. ನಾಟಕದ[1] ಭರತವಾಕ್ಯದಲ್ಲಿರುವ ಮ್ಲೇಚ್ಛಶಬ್ದವು ಮಹಮ್ಮದ್ ಘೋರಿಯನ್ನು ನಿರ್ದೇಶಿಸುತ್ತದೆಂದೂ, ಆದ್ದರಿಂದ ನಾಟಕದ ಕಾಲ ಸುಮಾರು ಹನ್ನೆರಡನೆಯ ಶತಮಾನವಿರಬಹುದೆಂದೂ ವಿಲ್ಸನ್ ಅವರು ಅಭಿಪ್ರಾಯ ಪಡುತ್ತಾರೆ. ಟೆಲಾಂಗರ ಮತದಂತೆ ನಾಟಕದ ಕಾಲ ಎಂಟನೆಯ ಶತಮಾನ. ಇದು ಒಂಬತ್ತನೆಯ ಶತಕದಲ್ಲಿದ್ದಿತೆಂದು ಕೀತ್ ಅವರ ಮತ. ಇದರ ಕಾಲ ಏಳನೆಯ ಶತಮಾನವಾಗಿರಬಹುದೆಂದು ಸಿಲ್ವೇನ್ ಲೆವಿಯವರು ಊಹಿಸುತ್ತಾರೆ. ಜಯಸ್ವಾಲ್ ಅವರು ಭರತವಾಕ್ಯದಲ್ಲಿರುವ 'ಅಧುನಾ' 'ಚಂದ್ರಗುಪ್ತಃ' ಎಂಬ ಮಾತುಗಳ ಆಧಾರದಿಂದ ಇದು ಚಂದ್ರಗುಪ್ತನ ಕಾಲದಲ್ಲಿ ರಚಿತವಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ.

1 ವಾರಾಹೀಮಾತ್ಮಯೋನೇಸ್ತನುಮವನವಿಧಾವಾಸ್ಥಿತಸ್ಯಾನುರೂಪಾಂ
ಯಸ್ಯಪ್ರಾಗ್ದಂತಕೋಟಿಂ ಪ್ರಲಯಪರಿಗತಾ ಶಿಶ್ರಿಯೇ ಭೂತಧಾತ್ರೀ ।
ಮ್ಲೇಚ್ಛೈರುದ್ವಿಜ್ಯಮಾನಾ ಭುಜಯುಗಮಧುನಾ ಸಂಶ್ರಿತಾ ರಾಜಮೂರ್ತೇಃ
ಸ ಶ್ರೀಮದ್ಬಂಧುಭೃತ್ಯಶ್ಚಿರಮವತು ಮಹೀಂ ಪಾರ್ಥಿವಶ್ಚಂದ್ರಗುಪ್ತಃ ॥



ಬಹಳ ವಿದ್ವಾಂಸರು ಈ ಕಾಲವನ್ನು ಪುಷ್ಟೀಕರಿಸುತ್ತಾರೆ. ನಾಟಕದಲ್ಲಿ ಬಂದಿರುವ 'ಸುಗಾಂಗ ಪ್ರಾಸಾದ' 'ಪುಷ್ಪಚತ್ವರ' 'ಉಪವನ' ಮುಂತಾದುವುಗಳ ವರ್ಣನೆಯನ್ನು ಪರಿಶೀಲಿಸಿದರೆ ಕವಿಯು 'ಪಾಟಲೀಪುತ್ರ' ನಗರವನ್ನು ನೋಡಿರಬೇಕೆಂದೂ, ಪ್ರಾಸಾದಿಗಳ ಪರಿಚಯ ಅವನಿಗಿದ್ದಿರಬೇಕೆಂದೂ ತೋರುತ್ತದೆ. ಹುಯೆನ್‌ತ್ಸಾಂಗನ ಕಾಲಕ್ಕೆ (ಕ್ರಿ. ಶ. 629–645) ಈ ನಗರ ಪಾಳಾಗಿತ್ತು. ಇಮ್ಮಡಿ ಚಂದ್ರಗುಪ್ತನ ಕಾಲದಲ್ಲಿ ಈ ನಗರ ಸುಸ್ಥಿತಿಯಲ್ಲಿದ್ದಿತು. ಚಂದ್ರಗುಪ್ತನು ತನ್ನ ಅಣ್ಣನಾದ ರಾಮಗುಪ್ತನ ಹೆಂಡತಿಯನ್ನು ಕಾಮಿಸಿದ ಶಕಾಧಿಪತಿಯನ್ನು ಕೊಂದನೆಂದು 'ದೇವೀ ಚಂದ್ರಗುಪ್ತ' ಮುಂತಾದ ಆಧಾರಗಳಿಂದ ತಿಳಿದು ಬರುತ್ತದೆ ; ಇದರಿಂದ 'ಬಂಧು ಭೃತ್ಯಃ' ಎಂಬ ಮಾತಿಗೆ ಔಚಿತ್ಯ ದೊರೆಯುತ್ತದೆ. ಮುದ್ರಾರಾಕ್ಷಸದ ಶೈಲಿ ಋಜುವಾಗಿಯೂ ಬಿಗುವಾಗಿಯೂ ಇದೆ · ಆದರೆ ಜಟಿಲವಾಗಿಲ್ಲ. ಈ ಕಾರಣಗಳಿಂದ ವಿಶಾಖದತ್ತನು ಕಾಳಿದಾಸನ ಕಾಲದವನು ಅಥವಾ ಅವನಿಗಿಂತ ಸ್ವಲ್ಪ ಈಚಿನವನಾಗಿರಬೇಕು.

ವಿಶಾಖದತ್ತನ ಕೃತಿಗಳಲ್ಲಿ 'ಮುದ್ರಾರಾಕ್ಷಸ' ಪೂರ್ತಿಯಾಗಿ ದೊರೆತಿದೆ. ಅವನು 'ರಾಘವಾನಂದ' 'ದೇವೀಚಂದ್ರಗುಪ್ತ' 'ಅಭಿಸಾರಿಕಾವಂಚಿತಕ' ವೆಂಬ ನಾಟಕಗಳನ್ನೂ ಬರೆದಿದ್ದಂತೆ ಭೋಜನ ಶೃಂಗಾರ ಪ್ರಕಾಶದಿಂದ ತಿಳಿದು ಬರುತ್ತದೆ. ಇವು ದೊರೆತಿಲ್ಲ. 'ದೇವೀ ಚಂದ್ರಗುಪ್ತ'ದ ಕೆಲವು ಭಾಗಗಳು ಈಚೆಗೆ ದೊರೆತಿವೆ.

ಮುದ್ರಾರಾಕ್ಷಸ ನಾಟಕದ ಕಥಾಸಂಗ್ರಹ :—

ಚಾಣಕ್ಯನು ಶಕಟದಾಸನಿಂದ ಹೆಸರು ಕುಲಗೋತ್ರಗಳಿಲ್ಲದ ಒಂದು ಪತ್ರವನ್ನು ಬರೆಸಿ, ಉಪಯೋಗದಿಂದ ತನ್ನ ಕೈಸೇರಿದ ರಾಕ್ಷಸನ ಮುದ್ರೆಉಂಗುರದಿಂದ ಅದಕ್ಕೆ ಮೊಹರುಮಾಡಿಸಿ ಅದನ್ನು ಸಿದ್ಧಾರ್ಥನಿಗೆ ಕೊಟ್ಟನು. ಅಲ್ಲದೆ ಶಕಟದಾಸನನ್ನು ಶೂಲಕ್ಕೇರಿಸುವಂತೆಯೂ, ಅವನನ್ನು ಸಿದ್ಧಾರ್ಥಕನು ಬಿಡಿಸಿ ರಾಕ್ಷಸನ ಹತ್ತಿರಕ್ಕೆ ಕರೆದುಕೊಂಡು ಹೋಗುವಂತೆಯೂ ಏರ್ಪಾಡಿಸಿದನು. ಚಂದನದಾಸನನ್ನು ಕರೆಸಿ ಬಂಧನದಲ್ಲಿಡಿಸಿದನು. ಭದ್ರಭಟ ಮುಂತಾದವರು ಅತೃಪ್ತರಾದವರಂತೆ ಓಡಿಹೋಗಿ ರಾಕ್ಷಸನಲ್ಲಿ ಸೇರಿಕೊಳ್ಳುವಂತೆ ವ್ಯವಸ್ಥೆ ಮಾಡಿದನು. ರಾಕ್ಷಸನ ತಂತ್ರಗಳು ವ್ಯರ್ಥವಾದವು. ವಿಷಕನ್ಯೆಯಿಂದ ಪರ್ವತರಾಜನು ಸತ್ತನು. ಇದರಿಂದ ರಾಕ್ಷಸನಿಗೆ ಅಪಖ್ಯಾತಿಬಂದಿತು. ಚಾಣಕ್ಯನ ತಂತ್ರದಿಂದ ಪರ್ವತರಾಜನ ಕಡೆಯವರೆಲ್ಲಾ ಹತರಾದರು. ಸಿದ್ಧಾರ್ಥಕನು ಶಕಟದಾಸನನ್ನು ಬಿಡಿಸಿ ರಾಕ್ಷಸನಿಗೆ ಒಪ್ಪಿಸಿ ಅವನಲ್ಲಿಯೇ ಉಳಿದುಕೊಂಡು ಕಪಟಜಾಲವನ್ನು ವಿಸ್ತರಿಸಿದನು.

ಚಾಣಕ್ಯ ಚಂದ್ರಗುಪ್ತರು ಕಪಟ ಜಗಳ ನಡೆಸಿದರು ; ಚಾಣಕ್ಯನು ಕೋಪಗೊಂಡವನಂತೆ ಚಂದ್ರಗುಪ್ತನಿಂದ ದೂರವಾದನು. ರಾಕ್ಷಸನು ಅವರ ಮೇಲೆ ದಂಡೆತ್ತಿ ಹೋಗಲು ಸಿದ್ಧತೆ ಮಾಡಿದನು. ಚಾಣಕ್ಯನ ತಂತ್ರದಿಂದ ಮಲಯಕೇತುವಿಗೆ ರಾಕ್ಷಸನಲ್ಲಿ ನಂಬಿಕೆ ಹೋಯಿತು. [illegible] ಮತ್ತು ಅವನ ಸಾಮಂತರೂ ರಾಕ್ಷಸನನ್ನು ತ್ಯಜಿಸಿದರು. ಭದ್ರಭಟಾದಿಗಳು [illegible]ನ್ನು ಸೆರೆಹಿಡಿದರು. ರಾಕ್ಷಸನು ಮಿತ್ರನಾದ ಚಂದನದಾಸನನ್ನು ರಕ್ಷಿಸಲು ಅವನ

ವಧ್ಯಸ್ಥಾನದಲ್ಲಿ ನಿಂತು ಚಾಣಕ್ಯ ಚಂದ್ರಗುಪ್ತರ ಪ್ರಾರ್ಥನೆಯಂತೆ ಚಂದ್ರಗುಪ್ತನ ಮಂತ್ರಿಯಾದನು. ಮಲಯಕೇತುವಿಗೆ ತಂದೆಯ ರಾಜ್ಯ ಬಂದಿತು. ಚಾಣಕ್ಯನು ಜುಟ್ಟನ್ನು ಕಟ್ಟಿದನು.

ಭಾಗವತ, ವಿಷ್ಣುಪುರಾಣ ಮುಂತಾದ ಗ್ರಂಥಗಳಲ್ಲಿ ಚಂದ್ರಗುಪ್ತನ ಕಥೆ ಸಂಕ್ಷೇಪವಾಗಿ ದೊರೆಯುತ್ತದೆ. ಮುದ್ರಾರಾಕ್ಷಸಕ್ಕೆ ಬೃಹತ್ಕಥೆಯು ಮೂಲವೆಂದು ಧನಿಕನು ಹೇಳುತ್ತಾನೆ. ಚಾಣಕ್ಯ ಚಂದ್ರಗುಪ್ತರು ಐತಿಹಾಸಿಕ ವ್ಯಕ್ತಿಗಳು. ನಂದರ ಸಂಹಾರ, ಚಂದ್ರಗುಪ್ತನ ಪ್ರತಿಷ್ಠೆ. ರಾಕ್ಷಸನ ಸಂಪಾದನೆಗಳು ಈ ಕಥೆಯ ತಿರುಳು. ನಾಟಕದ ವಸ್ತು ಕವಿಕಲ್ಪನೆಯಿಂದ ಪುಷ್ಟಿಗೊಂಡಿದೆ. ಮುದ್ರಾರಾಕ್ಷಸವು ನಾಟಕ ಸಾಹಿತ್ಯದಲ್ಲಿ ವಿಶೇಷಸ್ಥಾನವನ್ನು ಪಡೆದಿದೆ. ಇದರಲ್ಲಿರುವುದು ಕಾಮತಂತ್ರವಲ್ಲ; ಚಾಣಕ್ಯತಂತ್ರ. ; ಇಲ್ಲಿ ಕಾಣುವುದು ಆಯುಧಗಳ ಘರ್ಷಣೆಯನ್ನಲ್ಲ; ಬುದ್ಧಿಗಳ ಘರ್ಷಣೆಯನ್ನು, ಬುದ್ಧಿಯ ಹೋರಾಟದಿಂದ ಕಲ್ಪಿತವಾದ ರಾಜಕೀಯ ತಂತ್ರಗಳು ಬಹಳ ಚಮತ್ಕಾರವಾಗಿವೆ. ಚಂದ್ರಗುಪ್ತನ ವಿರೋಧಿಯಾದ ಅಮಾತ್ಯರಾಕ್ಷಸನನ್ನು ಮಂತ್ರಿಯನ್ನಾಗಿ ಮಾಡುವುದು ಚಾಣಕ್ಯನ ಗುರಿ. ಅದು ಸಿದ್ಧಿಸಿದೆ. ಅವಿಶ್ವಾಸಿಗಳ ಕಪಟತಂತ್ರಗಳಿಗೆ ಸೋಲಾಗಿ ನಿಷ್ಕಪಟವಾದ ಸ್ನೇಹ ಗೆದ್ದಿದೆ. ಜಾಣತನದ ಮಾತುಗಳ ಪಾಂಡಿತ್ಯ ಇಲ್ಲಿಲ್ಲ. ಮಾತಿಗಿಂತಲೂ ಕಾರ್ಯವಿಧಾನ ಪ್ರಧಾನ.

ರಾಕ್ಷಸನು ನಂದಭಕ್ತಿಯನ್ನು ತ್ಯಜಿಸಿ ಚಂದ್ರಗುಪ್ತನ ಮಂತ್ರಿಯಾಗುತ್ತಿರಲಿಲ್ಲ; ಅವನಿಗೆ ಐಶ್ವರ್ಯಾದಿಗಳ ಲೋಭವೂ ಇರಲಿಲ್ಲ; ದಂಡೋಪಾಯದಿಂದ ಅವನ ಪ್ರಾಣಕ್ಕೆ ಹಾನಿಯುಂಟಾಗುತ್ತಿದ್ದಿತು. ಅನೇಕರ ಕೊಲೆಯಾಗುತ್ತಿದ್ದಿತು; ರಕ್ತಪಾತಕ್ಕೆ ಚಾಣಕ್ಯನು ಹೆದರುವವನಲ್ಲ. ಆದರೆ ಉಗುರಿನಿಂದ ಹೋಗುವುದಕ್ಕೆ ಕೊಡಲಿಯು ಸರಿಯಲ್ಲವೆಂದು ಅವನ ಮತ. ಆದ್ದರಿಂದ ಅವನು ಕುಳಿತಕಡೆಯಿಂದಲೇ ಭೇದೋಪಾಯದಿಂದ ಕಷ್ಟ ನಷ್ಟಗಳಿಲ್ಲದಂತೆ ರಾಕ್ಷಸನನ್ನು ಹಿಡಿದು ಜಯವನ್ನು ಸಂಪಾದಿಸಿದನು. ಒಂದು ರೀತಿಯಲ್ಲಿ ಇದು ರಾಕ್ಷಸನ ಶೌರ್ಯ–ಸಾಹಸಬುದ್ಧಿಗಳ ಜಯವೂ ಹೌದು. ಚಾಣಕ್ಯನದು ತೀಕ್ಷ್ಣ ಬುದ್ಧಿ; ಮಂತ್ರಿಕಾರ್ಯದಲ್ಲಿ ನುರಿತ ರಾಕ್ಷಸನ ಬುದ್ಧಿ ಅದರ ಮುಂದೆ ಮಂಕಾಯಿತು.

ರಾಕ್ಷಸನು ಶತ್ರುವಾಗಿರುವ ತನಕ ಚಂದ್ರಗುಪ್ತನ ಸ್ಥಾನ ಅಸ್ಥಿರ; ಹೊರಗಿದ್ದ ಅವನನ್ನು ಒಳ ಹಾಕಿಕೊಂಡರೆ ವಿಶೇಷಲಾಭವುಂಟು. ಇದನ್ನರಿತ ಚಾಣಕ್ಯನು ಬುದ್ಧಿವಂತನೂ ಶೂರನೂ ಆಗಿದ್ದ ರಾಕ್ಷಸನನ್ನು ಚಂದ್ರಗುಪ್ತನ ಮಂತ್ರಿಯನ್ನಾಗಿ ಮಾಡಿ ತಾನು ನಿಶ್ಚಿಂತನಾಗಿ ತಪಸ್ಸಿಗೆ ಹೋಗಬಹುದೆಂದು ಭಾವಿಸಿದನು. ಅವನ ಬುದ್ಧಿ ಮಿಂಚಿನ ವೇಗದಿಂದ ಪ್ರವಹಿಸುತ್ತಿದ್ದಿತು; ಉಂಗುರ ಸಿಕ್ಕಿದ ಕೂಡಲೇ ರಾಕ್ಷಸನನ್ನು ಗೆದ್ದೆನೆಂದುಕೊಂಡನು. ಅವನು ಆರಂಭಿಸಿದ ಕಾರ್ಯವನ್ನು ದಕ್ಷತೆಯಿಂದ ನಡೆಸುತ್ತಿದ್ದನು; ಸಣ್ಣದನ್ನೂ ಅಲಕ್ಷಿಸುತ್ತಿರಲಿಲ್ಲ. ಅವನು ಮಲಯಕೇತುವಿಗೂ ರಾಕ್ಷಸನಿಗೂ ಇದ್ದ ಸ್ನೇಹವನ್ನು ಒಡೆದು, ರಾಕ್ಷ[illegible] ಚಂದ್ರಗುಪ್ತಾಭಿಮಾನಿಯೆಂದು ಭಾಗುರಾಯಣಾದಿಗಳಿಂದ ತೋರ್ಪಡಿಸಿ, ಏಕಾಕಿಯಾ[illegible]



ಅವನನ್ನು ಚಂದನದಾಸನ ಸಹಾಯಕ್ಕಾಗಿ ನಗರಕ್ಕೆ ಬರುವಂತೆ ಮಾಡಿದನು. ಚಾಣಕ್ಯನು ತನ್ನ ಕೆಲಸವನ್ನು ಬಹಳ ಮಟ್ಟಿಗೆ ಗೂಢಚಾರರು ಮತ್ತು ವೇಷಧಾರಿಗಳ ಮೂಲಕ ಸಾಧಿಸಿದನು. ಅವನ ನೀತಿ ' ಅಶ್ರುತಗತಿ ' ? ಎಲ್ಲಿ ನೋಡಿದರೂ ಅವನ ಜನರೇ; ಎಲ್ಲೆಲ್ಲಿಯೂ ಅವನ ಪ್ರಭಾವವೇ. ಅವನ ಜನರು ಶತ್ರುಗಳ ಜೊತೆ ಜೊತೆಗೇ ಇದ್ದರು–ರಾಕ್ಷಸನಿಗೆ ಕ್ಷಪಣಕ, ಶಕಟದಾಸನಿಗೆ ಸಿದ್ಧಾರ್ಥಕ, ಮಲಯಕೇತುವಿಗೆ ಭಾಗುರಾಯಣ, ಅವನು ಎಲ್ಲರ ಮರ್ಮವನ್ನೂ ತಿಳಿದಿದ್ದನು; ಅವನ ಮರ್ಮ ಯಾರಿಗೂ ತಿಳಿಯದು. ಅವನು ಕ್ರೂರಿಯಾಗಲಿ ಸ್ವಾರ್ಥಪರನಾಗಲೀ ಅಲ್ಲ; ಉದಾರಿ, ಗುಣಪಕ್ಷಪಾತಿ, ವೈರಾಗ್ಯಶಾಲಿ, ಧರ್ಮಪರ. ಅವನಲ್ಲಿ ಆತ್ಮವಿಶ್ವಾಸ ಮತ್ತು ಧೈರ್ಯಗಳು ಅಪಾರವಾಗಿದ್ದವು. ದೈವವೂ ಅವನಿಗೆ ಸಹಾಯ ಮಾಡಿತು. ಚಂದ್ರಗುಪ್ತನು ಚಾಣಕ್ಯನಿಗೆ ತಕ್ಕ ಶಿಷ್ಯ. ಶೌರ್ಯ ಸಾಹಸಗಳಲ್ಲಿ ರಾಕ್ಷಸನದೇ ಮೇಲುಗೈ. ಅವನು ಸಂಸಾರಿ, ಸ್ವಾತಿಕ, ಋಜು ಸ್ವಭಾವದವನು. ಅವನ ಪ್ರೇಮ, ಸ್ನೇಹ, ದಯೆ, ರಾಜಭಕ್ತಿಗಳು ಪ್ರಶಂಸನೀಯವಾದುವು.

ನಾಟಕದಲ್ಲಿ ಪಾತ್ರಗಳು ಖಚಿತವಾಗಿ ರೂಪಿತವಾಗಿವೆ. ವಿದೂಷಕನಿಲ್ಲ, ನಾಯಿಕೆಯಿಲ್ಲ; ಒಂದೆರಡು ಗೌಣ ಪಾತ್ರಗಳನ್ನು ಬಿಟ್ಟರೆ ಸ್ತ್ರೀಪಾತ್ರಳೇ ಇಲ್ಲ. ಕಥೆ ಒಮ್ಮುಖವಾಗಿದೆ. ಶೃಂಗಾರ ಹಾಸ್ಯಗಳ ಸಹಾಯವಿಲ್ಲದ ವಿಶೇಷ ವೀರರಸವಿದೆ. ಇದು ಲಾಕ್ಷಣಿಕರ ದಾನವೀರ, ದಯಾವೀರ, ಯುದ್ಧವೀರ ಧರ್ಮವೀರಗಳಲ್ಲಿ ಅಂತರ್ಗತವಾಗುವುದಿಲ್ಲ. ವರ್ಣನೆ, ಅಲಂಕಾರಗಳಲ್ಲಿ ಮಿತಿಯಿದೆ, ಮುದ್ರಾರಾಕ್ಷಸವು ನಾಟಕದ ಹೆಸರಿನ ಪ್ರೌಢಕಾವ್ಯವಲ್ಲ.

'ದೇವೀಚಂದ್ರಗುಪ್ತ'ವು ವಿಶಾಖದತ್ತನ ಎರಡನೆಯ ನಾಟಕ, ಇದರಲ್ಲಿ ಇಮ್ಮಡಿ ಚಂದ್ರಗುಪ್ತನ ಜೀವಿತದ ಕೆಲವು ಘಟನೆಗಳಿವೆ, ಶಕಪತಿಯು ಚಂದ್ರಗುಪ್ತನ ಅಣ್ಣನಾದ ರಾಮಗುಪ್ತನ ಹೆಂಡತಿಯನ್ನು ಕಾಮಿಸಿದನು; ಚಂದ್ರಗುಪ್ತನು ಅತ್ತಿಗೆಯಾದ ಧ್ರುವದೇವಿಯ ವೇಷದಿಂದ ಶಕಪತಿಯ ಶಿಬಿರಕ್ಕೆ ಹೋಗಿ ಅವನನ್ನು ಕೊಂದನು.

ವಿಶಾಖದತ್ತನ ಭಾಷೆ, ಶೈಲಿ, ವರ್ಣನೆಗಳ ಪರಿಚಯಕ್ಕಾಗಿ ಕೆಲವು ಉದಾಹರಣೆಗಳನ್ನಿಲ್ಲಿ ಕೊಡಲಾಗಿದೆ.

ಚಾಣಕ್ಯ ಆಶ್ರಮ—

ಉಪಲಶಕಲಮೇತದ್ಭೇದಕಾ ಗೋಮಯಾನಾಂ
ವಟುಭಿರುಪಹೃತಾನಾಂ ಬರ್ಹಿಷಾಂ ಸ್ತೂಪಮೇತತ್ ।
ಶರಣಮಪಿ ಸಮಿದ್ಭಿಃ ಶಿಷ್ಯಮಾಣಾಭಿರಾಭಿಃ
ವಿನಮಿತಪಟಲಾಂತಂ ದೃಶ್ಯತೇ ಜೀರ್ಣಕುಡ್ಯಂ॥—ಮುದ್ರಾರಾಕ್ಷಸ.

ಜೀರ್ಣೋಧ್ಯಾನದ ವರ್ಣನೆ—

ವಿಪರ್ಯಸ್ತಂ ಸೌಧಂ ಕುಲಮಿವ ಮಹಾರಂಭರಚನಂ
ಸರಃ ಶುಷ್ಕಂ ಸಾಧೋರ್ಹೃದಯಮಿವ ನಾಶೇನ ಸುಹೃದಾಂ ।
ಫಲೈರ್ಹೀನಾ ವೃಕ್ಷಾ ವಿಗುಣನೃಪಯೋಗಾದಿವ ನಯಾಃ
ತೃಣೈಶ್ಛನ್ನಾ ಭೂಮಿರ್ಮತಿರಿವ ಕುನೀತೇರವಿದುಷಃ ॥—ಮುದ್ರಾರಾಕ್ಷಸ

ಚಂದ್ರಗುಪ್ತನೊಡನೆ ಕಪಟ ಕಲಹದಲ್ಲಿ ಚಾಣಕ್ಯನ ಮಾತು—

ಶಿಖಾಂ ಮೋಕ್ತುಂ ಬದ್ಧಾಮಪಿ ಪುನರಯಂ ಧಾವತಿ ಕರಃ
ಪ್ರತಿಜ್ಞಾಮಾರೋಢುಂ ಪುನರಪಿ ಚಲತ್ಯೇಷ ಚರಣಃ ।
ಪ್ರಣಾಶಾನ್ನಂದಾನಾಂ ಪ್ರಶಮಮುಪಯಾತಂ ತ್ವಮಧುನಾ
ಪರೀತಃ ಕಾಲೇನ ಜ್ವಲಯಸಿ ಮಮ ಕ್ರೋಧದಹನಂ॥—ಮುದ್ರಾರಾಕ್ಷಸ

ರಾಮಗುಪ್ತನು ಧ್ರುವದೇವಿಯ ವೇಷದಲ್ಲಿದ್ದ ಚಂದ್ರಗುಪ್ತನಿಗೆ ಹೇಳುವ ಮಾತು—

ತ್ಯಜಾಮಿ ದೇವೀಂ ತೃಣವತ್ತ್ವದಂತರೇ
ತ್ವಯಾ ವಿನಾ ರಾಜ್ಯಮಿದಂ ಹಿ ನಿಷ್ಫಲಂ ।
ಊಢೇತಿ ದೇವೀಂ ಪ್ರತಿ ಮೇ ದಯಾಲುತಾ
ತ್ವಯಿ ಸ್ಥಿತಂ ಸ್ನೇಹನಿಬಂಧನಂ ಮನಃ ॥ ದೇವೀಚಂದ್ರಗುಪ್ತ

## ಹರ್ಷವರ್ಧನ

### (ಕ್ರಿ. ಶ. 590—647)

ಬಾಣನ ಹರ್ಷಚರಿತ, ಹುಯನ್‌ತ್ಸಾಂಗನ ಹೇಳಿಕೆ, ಮತ್ತು ಹರ್ಷ, ಇಮ್ಮಡಿ ಪುಲಿಕೇಶಿ ಮುಂತಾದವರ ಶಾಸನಗಳಿಂದ ಹರ್ಷನ ವಿಚಾರ ಖಚಿತವಾಗಿಯೂ, ವಿಸ್ತಾರವಾಗಿಯೂ ತಿಳಿದಿದೆ. ಅವನು ಕ್ರಿ. ಶ. 590ರಲ್ಲಿ ಹುಟ್ಟಿದನು. ಅವನ ತಂದೆ ಪ್ರಭಾಕರವರ್ಧನ, ತಾಯಿ ಯಶೋಮತಿ. ಆದಿತ್ಯವರ್ಧನನು ಅವನ ತಾತ. ಯಶೋಮತಿಯು ಮಾಳವರಾಜನಾದ ವಿಕ್ರಮಾದಿತ್ಯ ಯಶೋಧರ್ಮನ ಮಗಳು, ಹರ್ಷ ಅಥವಾ ಶ್ರೀಹರ್ಷನಿ[1]ಗೆ ರಾಜ್ಯವರ್ಧನನೆಂಬ ಅಣ್ಣನೂ, ರಾಜ್ಯಶ್ರೀಯೆಂಬ ತಂಗಿಯೂ ಇದ್ದರು. ಗೌಡ ದೊರೆಯಿಂದ ರಾಜ್ಯವರ್ಧನನ ಕೊಲೆಯಾದ ಮೇಲೆ ಹರ್ಷನು ಪಟ್ಟಕ್ಕೆ ಬಂದನು (606). ಮಾಳವದ ದೊರೆಯು ರಾಜ್ಯಶ್ರೀಯ ಗಂಡನಾದ ಗೃಹವರ್ಮನನ್ನು ಕೊಂದನು. ಹರ್ಷನು ವಿಂಧ್ಯಾರಣ್ಯಕ್ಕೆ ಓಡಿಹೋಗಿದ್ದ ತಂಗಿಯನ್ನು ರಕ್ಷಿಸಿದನು.

ಹರ್ಷನ ರಾಜ್ಯಭಾರ ಯುದ್ಧದಿಂದಲೇ ಪ್ರಾರಂಭವಾಯಿತು. ಅವನು ದಿಗ್ವಿಜಯವನ್ನು ಕೈಗೊಂಡು ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ ಜಯವನ್ನು ಸಂಪಾದಿಸಿದನು. ಆದರೆ ಅವನು ದಕ್ಷಿಣಕ್ಕೆ ಹೋದಾಗ ಅಲ್ಲಿ ಪ್ರಬಲನಾಗಿದ್ದ ಇಮ್ಮಡಿಪುಲಿಕೇಶಿಯಿಂದ ಸೋಲನ್ನು ಅನುಭವಿಸಬೇಕಾಯಿತು (620). ಅವನು ಉತ್ತರಾಪಥಚಕ್ರವರ್ತಿಯೆನಿಸಿಕೊಂಡು ಚೀನಾ ದೇಶದೊಡನೆ ರಾಯಭಾರಿಯ ವಿನಿಮಯವನ್ನು ಮಾಡಿಕೊಂಡನು. ಅವನ ಒಂದು ಶಕೆಯೂ ಸ್ಥಾಪಿತವಾಯಿತು (606). ಅವನು ಸ್ಥಾಣೇಸ್ವರ ಮತ್ತು ಕನ್ಯಕುಬ್ಜಗಳಲ್ಲಿ ನೆಲಸಿ ಸುಮಾರು ನಲವತ್ತು ವರ್ಷಗಳ ಕಾಲ ರಾಜ್ಯವನ್ನಾಳಿದನು. ಆಗ ದೇಶದಲ್ಲಿ ಶಾಂತಿಸುಭಿಕ್ಷಗಳು

1 ಅವನನ್ನು ಹರ್ಷವರ್ಧನ, ರಾಜಪುತ್ರ—ಶೀಲಾದಿತ್ಯನೆಂದೂ ಕರೆಯುತ್ತಿದ್ದರು.



ನೆಲಸಿದ್ದವು. ರಾಜನಿಗೆ ಧರ್ಮ, ಸಾಹಿತ್ಯ, ಶಾಸ್ತ್ರ, ಕಲೆಗಳಲ್ಲಿ ಆಸಕ್ತಿ ಇದ್ದಿತು. ವಿದ್ಯೆಗೆ ಪ್ರೋತ್ಸಾಹವಿದ್ದಿತು. ಬಾಣ, ಮಯೂರ. ಮಾತಂಗದಿವಾಕರ ಮುಂತಾದ ಪ್ರಸಿದ್ಧ ಕವಿಗಳು ಅವನ ಆಸ್ಥಾನದಲ್ಲಿದ್ದರು. ನಲಂದ ವಿಶ್ವವಿದ್ಯಾನಿಲಯವೂ. ದಿವಾಕರಮಿತ್ರನ ವಿದ್ಯಾಶ್ರಮವೂ ಇದ್ದದ್ದು ಈ ಕಾಲದಲ್ಲಿಯೇ. ಹರ್ಷನು ಭೂಕಂದಾಯದಿಂದ ಬಂದ ಒಟ್ಟು ಹುಟ್ಟುವಳಿಯ ಕಾಲುಭಾಗವನ್ನು ವಿದ್ಯಾಭಿವೃದ್ಧಿಗೆ ಮೀಸಲಾಗಿ ಇಟ್ಟಿದ್ದನಂತೆ. ಅವನು ವೈದಿಕಧರ್ಮಕ್ಕೂ, ಬೌದ್ಧಧರ್ಮಕ್ಕೂ ಸಮಾನವಾಗಿ ಮಾನ್ಯತೆ ಕೊಟ್ಟಿದ್ದನು ; ತನ್ನ ಪೂರ್ವಿಕರಂತೆ ತಾನೂ ಶಿವನನ್ನೂ [1] ಆದಿತ್ಯನನ್ನೂ[2] ಆರಾಧಿಸುತ್ತಿದ್ದನು. ಅವನಿಗೆ ಬುದ್ಧನಲ್ಲಿಯೂ ಭಕ್ತಿಯಿದ್ದಿತು. ಗಂಜಾಂ ಯುದ್ಧವಾದ ಮೇಲೆ (643) ಬೌದ್ಧಾಭಿಮಾನವು ಹೆಚ್ಚಾಗಿ ಅವನು ಬೌದ್ಧನಾದಂತೆ ತೋರುತ್ತದೆ. ಅವನು ಧೀರನೂ, ದಾನಿಯೂ ಆಗಿ ಬಾಳಿ ಶಾಂತಿಯಿಂದ ಮಡಿದನು[3] (647).

ಹರ್ಷನು ಪ್ರಿಯದರ್ಶಿಕಾ, ರತ್ನಾವಳಿ, ನಾಗಾನಂದ ಎಂಬ ಮೂರು ನಾಟಕಗಳನ್ನೂ, ಸುಪ್ರಭಾತಸ್ತೋತ್ರ ಮತ್ತು ಅಷ್ಟಮಹಾಶ್ರೀ ಎಂಬ ಎರಡು ಬೌದ್ಧ ಸ್ತೋತ್ರಗಳನ್ನೂ ಬರೆದಿದ್ದಾನೆ. ಬನ್ಸ್‌ಖೇರ (628), ಮಧುವನ (631) ತಾಮ್ರ ಶಾಸನಗಳೂ ಅವನಿಂದಲೇ ರಚಿತವಾಗಿರುವಂತೆ ತೋರುತ್ತವೆ. ಅವನು ಒಂದು ವ್ಯಾಕರಣವನ್ನೂ ಬರೆದಿರುವಂತೆ ತಿಳಿದು ಬರುತ್ತದೆ.

ಈ ನಾಟಕಗಳನ್ನು ಹರ್ಷನ ಆಸ್ಥಾನದ ಯಾರೋ ಪಂಡಿತರು ಬರೆದಿರಬೇಕೆಂಬ ಸಂದೇಹ ಬಹಳಕಾಲದಿಂದಲೂ ಇದೆ. ಮಮ್ಮಟನು (1100) ಕಾವ್ಯ ಪ್ರಕಾಶದಲ್ಲಿ ಬರೆದಿರುವ 'ಶ್ರೀ ಹರ್ಷಾದೇಃ ಧಾವಕಾದೀನಾಮಿವ ಧನಂ' ಎಂಬ ಮಾತಿಗೆ ನಾಗೋಜಿಭಟ್ಟ (ಕ್ರಿ. ಶ. 17ನೆಯ ಶತ) ಮುಂತಾದ ವ್ಯಾಖ್ಯಾನಕಾರರು ರತ್ನಾವಳಿಯನ್ನು ಬರೆದದ್ದಕ್ಕಾಗಿ ಧಾವಕನಿಗೆ (ಅಥವಾ ಬಾಣ) ಶ್ರೀಹರ್ಷನು ಧನವನ್ನು ಕೊಟ್ಟನೆಂದು ಅರ್ಥಮಾಡಿದ್ದಾರೆ. ಆ ಮಾತಿಗೆ ಹೇಗೆ ಈ ಅರ್ಥ ಮಾಡಿದರೋ ತಿಳಿಯದು. ಅವನು ಧಾವಕಾದಿಗಳಿಗೆ ಧನವನ್ನು ಕೊಟ್ಟನೆಂದು ಮಾತ್ರ ಆ ವಾಕ್ಯಕ್ಕೆ ಅರ್ಥವಾಗುತ್ತದೆ. ಹರ್ಷನು ಕವಿ ಪೋಷಕನೂ,[4] ಸ್ವತಃ ಕವಿಯೂ

1 ಪರಮಮಹೇಶ್ವರೋ ಮಹೇಶ್ವರ ಇವ ಸರ್ವಸತ್ವಾನುಕಂಪಃ—ಬನ್ಸ್‌ಖೇರಸಾಸನ.

2 " ಏಕಃ ಶ್ಲಾಘ್ಯೋ ವಿವಸ್ವಾನ್ ಪರಹಿತಕರಣಾಯೈವ ಯಸ್ಯ ಪ್ರಯಾಸಃ,—
ನಾಗಾನಂದ, III—18. ಆಸ್ಥಾನ ಕವಿಯಾದ ಮಯೂರನು ರಾಜನಿಗಾಗಿ ಸೂರ್ಯಶತಕವನ್ನು ರಚಿಸಿದ್ದಾನೆ.

3 ಕರ್ಮಣಾ ಮನಸಾ ವಾಚಾ ಕರ್ತವ್ಯಂ ಪ್ರಾಣಿಭಿರ್ಹಿತಂ ।
ಹರ್ಷೇಣೈತತ್ಸಮಾಖ್ಯಾತಂ ಧರ್ಮಾರ್ಜನಮನುತ್ತಮಂ ॥—ಬನ್ಸ್‌ಖೇರತಾಮ್ರ ಶಾಸನ.

4 (i) ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು
ನಾಮ್ನೈವಕೇವಲಮಜಾಯತ ವಸ್ತುತಸ್ತು ।
ಗೀರ್ಹರ್ಷ ಏಷ ನಿಜಸಂಸದಿಯೇನ ರಾಜ್ಞಾ
ಸಂಪೂಜಿತಃ ಕನಕಕೋಟಿಶತೇನ ಬಾಣಃ॥—ಸೊಡ್ಢಲ.

(ii) ಶ್ರೀ ಹರ್ಷೋ ವಿತತಾರ ಗದ್ಯಕವಯೇ ಬಾಣಾಯ ವಾಣೀಫಲಂ ।—ರಾಮಚರಿತ

ಚಂದ್ರಗುಪ್ತನೊಡನೆ ಕಪಟ ಕಲಹದಲ್ಲಿ ಚಾಣಕ್ಯನ ಮಾತು—

ಶಿಖಾಂ ಮೋಕ್ತುಂ ಬದ್ಧಾಮಪಿ ಪುನರಯಂ ಧಾವತಿ ಕರಃ
ಪ್ರತಿಜ್ಞಾಮಾರೋಢುಂ ಪುನರಪಿ ಚಲತ್ಯೇಷ ಚರಣಃ ।
ಪ್ರಣಾಶಾನ್ನಂದಾನಾಂ ಪ್ರಶಮಮುಪಯಾತಂ ತ್ವಮಧುನಾ
ಪರೀತಃ ಕಾಲೇನ ಜ್ವಲಯಸಿ ಮಮ ಕ್ರೋಧದಹನಂ॥—ಮುದ್ರಾರಾಕ್ಷಸ

ರಾಮಗುಪ್ತನು ಧ್ರುವದೇವಿಯ ವೇಷದಲ್ಲಿದ್ದ ಚಂದ್ರಗುಪ್ತನಿಗೆ ಹೇಳುವ ಮಾತು—

ತ್ಯಜಾಮಿ ದೇವೀಂ ತೃಣವತ್ತ್ವದಂತರೇ
ತ್ವಯಾ ವಿನಾ ರಾಜ್ಯಮಿದಂ ಹಿ ನಿಷ್ಫಲಂ ।
ಊಢೇತಿ ದೇವೀಂ ಪ್ರತಿ ಮೇ ದಯಾಲುತಾ
ತ್ವಯಿ ಸ್ಥಿತಂ ಸ್ನೇಹನಿಬಂಧನಂ ಮನಃ ॥ ದೇವೀಚಂದ್ರಗುಪ್ತ

## ಹರ್ಷವರ್ಧನ

### (ಕ್ರಿ. ಶ. 590—647)

ಬಾಣನ ಹರ್ಷಚರಿತ, ಹುಯೆನ್‌ತ್ಸಾಂಗನ ಹೇಳಿಕೆ, ಮತ್ತು ಹರ್ಷ, ಇಮ್ಮಡಿ ಪುಲಿಕೇಶಿ ಮುಂತಾದವರ ಶಾಸನಗಳಿಂದ ಹರ್ಷನ ವಿಚಾರ ಖಚಿತವಾಗಿಯೂ, ವಿಸ್ತಾರವಾಗಿಯೂ ತಿಳಿದಿದೆ. ಅವನು ಕ್ರಿ. ಶ. 590ರಲ್ಲಿ ಹುಟ್ಟಿದನು. ಅವನ ತಂದೆ ಪ್ರಭಾಕರವರ್ಧನ, ತಾಯಿ ಯಶೋಮತಿ. ಆದಿತ್ಯವರ್ಧನನು ಅವನ ತಾತ. ಯಶೋಮತಿಯು ಮಾಳವರಾಜನಾದ ವಿಕ್ರಮಾದಿತ್ಯ ಯಶೋಧರ್ಮನ ಮಗಳು, ಹರ್ಷ ಅಥವಾ ಶ್ರೀಹರ್ಷನಿ[1]ಗೆ ರಾಜ್ಯವರ್ಧನನೆಂಬ ಅಣ್ಣನೂ, ರಾಜ್ಯಶ್ರೀಯೆಂಬ ತಂಗಿಯೂ ಇದ್ದರು. ಗೌಡ ದೊರೆಯಿಂದ ರಾಜ್ಯವರ್ಧನನ ಕೊಲೆಯಾದ ಮೇಲೆ ಹರ್ಷನು ಪಟ್ಟಕ್ಕೆ ಬಂದನು (606). ಮಾಳವದ ದೊರೆಯು ರಾಜ್ಯಶ್ರೀಯ ಗಂಡನಾದ ಗೃಹವರ್ಮನನ್ನು ಕೊಂದನು. ಹರ್ಷನು ವಿಂಧ್ಯಾರಣ್ಯಕ್ಕೆ ಓಡಿಹೋಗಿದ್ದ ತಂಗಿಯನ್ನು ರಕ್ಷಿಸಿದನು.

ಹರ್ಷನ ರಾಜ್ಯಭಾರ ಯುದ್ಧದಿಂದಲೇ ಪ್ರಾರಂಭವಾಯಿತು. ಅವನು ದಿಗ್ವಿಜಯವನ್ನು ಕೈಗೊಂಡು ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ ಜಯವನ್ನು ಸಂಪಾದಿಸಿದನು. ಆದರೆ ಅವನು ದಕ್ಷಿಣಕ್ಕೆ ಹೋದಾಗ ಅಲ್ಲಿ ಪ್ರಬಲನಾಗಿದ್ದ ಇಮ್ಮಡಿಪುಲಿಕೇಶಿಯಿಂದ ಸೋಲನ್ನು ಅನುಭವಿಸಬೇಕಾಯಿತು (620). ಅವನು ಉತ್ತರಾಪಥಚಕ್ರವರ್ತಿಯೆನಿಸಿಕೊಂಡು ಚೀನ ದೇಶದೊಡನೆ ರಾಯಭಾರಿಯ ವಿನಿಮಯವನ್ನು ಮಾಡಿಕೊಂಡನು. ಅವನ ಒಂದು ಶಕೆಯು ಸ್ಥಾಪಿತವಾಯಿತು (606). ಅವನು ಸ್ಥಾಣೇಸ್ವರ ಮತ್ತು ಕನ್ಯಕುಬ್ಜಗಳಲ್ಲಿ ನೆಲಸಿ ಸುಮಾರು ನಲವತ್ತು ವರ್ಷಗಳ ಕಾಲ ರಾಜ್ಯವನ್ನಾಳಿದನು. ಆಗ ದೇಶದಲ್ಲಿ ಶಾಂತಿಸುಭಿಕ್ಷಗಳು

1 ಅವನನ್ನು ಹರ್ಷವರ್ಧನ, ರಾಜಪುತ್ರ—ಶೀಲಾದಿತ್ಯನೆಂದೂ ಕರೆಯುತ್ತಿದ್ದರು.



ನೆಲಸಿದ್ದವು. ರಾಜನಿಗೆ ಧರ್ಮ, ಸಾಹಿತ್ಯ, ಶಾಸ್ತ್ರ, ಕಲೆಗಳಲ್ಲಿ ಆಸಕ್ತಿ ಇದ್ದಿತು. ವಿದ್ಯೆಗೆ ಪ್ರೋತ್ಸಾಹವಿದ್ದಿತು. ಬಾಣ, ಮಯೂರ, ಮಾತಂಗದಿವಾಕರ ಮುಂತಾದ ಪ್ರಸಿದ್ಧ ಕವಿಗಳು ಅವನ ಆಸ್ಥಾನದಲ್ಲಿದ್ದರು. ನಲಂದ ವಿಶ್ವವಿದ್ಯಾನಿಲಯವೂ, ದಿವಾಕರಮಿತ್ರನ ವಿದ್ಯಾಶ್ರಮವೂ ಇದ್ದದ್ದು ಈ ಕಾಲದಲ್ಲಿಯೇ. ಹರ್ಷನು ಭೂಕಂದಾಯದಿಂದ ಬಂದ ಒಟ್ಟು ಹುಟ್ಟುವಳಿಯ ಕಾಲುಭಾಗವನ್ನು ವಿದ್ಯಾಭಿವೃದ್ಧಿಗೆ ಮೀಸಲಾಗಿ ಇಟ್ಟಿದ್ದನಂತೆ. ಅವನು ವೈದಿಕಧರ್ಮಕ್ಕೂ, ಬೌದ್ಧಧರ್ಮಕ್ಕೂ ಸಮಾನವಾಗಿ ಮಾನ್ಯತೆ ಕೊಟ್ಟಿದ್ದನು ; ತನ್ನ ಪೂರ್ವಿಕರಂತೆ ತಾನೂ ಶಿವನನ್ನೂ [1] ಆದಿತ್ಯನನ್ನೂ[2] ಆರಾಧಿಸುತ್ತಿದ್ದನು. ಅವನಿಗೆ ಬುದ್ಧನಲ್ಲಿಯೂ ಭಕ್ತಿಯಿದ್ದಿತು. ಗಂಜಾಂ ಯುದ್ಧವಾದ ಮೇಲೆ (643) ಬೌದ್ಧಾಭಿಮಾನವು ಹೆಚ್ಚಾಗಿ ಅವನು ಬೌದ್ಧನಾದಂತೆ ತೋರುತ್ತದೆ. ಅವನು ಧೀರನೂ, ದಾನಿಯೂ ಆಗಿ ಬಾಳಿ ಶಾಂತಿಯಂದ ಮಡಿದನು[3] (647).

ಹರ್ಷನು ಪ್ರಿಯದರ್ಶಿಕಾ, ರತ್ನಾವಳಿ, ನಾಗಾನಂದ ಎಂಬ ಮೂರು ನಾಟಕಗಳನ್ನೂ, ಸುಪ್ರಭಾತಸ್ತೋತ್ರ ಮತ್ತು ಅಷ್ಟಮಹಾಶ್ರೀ ಎಂಬ ಎರಡು ಬೌದ್ಧ ಸ್ತೋತ್ರಗಳನ್ನೂ ಬರೆದಿದ್ದಾನೆ. ಬಸ್ಖೇರ (628), ಮಧುವನ (631) ತಾಮ್ರ ಶಾಸನಗಳೂ ಅವನಿಂದಲೇ ರಚಿತವಾಗಿರುವಂತೆ ತೋರುತ್ತವೆ. ಅವನು ಒಂದು ವ್ಯಾಕರಣವನ್ನೂ ಬರೆದಿರುವಂತೆ ತಿಳಿದು ಬರುತ್ತದೆ.

ಈ ನಾಟಕಗಳನ್ನು ಹರ್ಷನ ಆಸ್ಥಾನದ ಯಾರೋ ಪಂಡಿತರು ಬರೆದಿರಬೇಕೆಂಬ ಸಂದೇಹ ಬಹಳಕಾಲದಿಂದಲೂ ಇದೆ. ಮಮ್ಮಟನು (1100) ಕಾವ್ಯ ಪ್ರಕಾಶದಲ್ಲಿ ಬರೆದಿರುವ 'ಶ್ರೀ ಹರ್ಷಾದೇಃ ಧಾವಕಾದೀನಾಮಿವ ಧನಂ' ಎಂಬ ಮಾತಿಗೆ ನಾಗೋಜಿಭಟ್ಟ (ಕ್ರಿ. ಶ. 17ನೆಯ ಶತ) ಮುಂತಾದ ವ್ಯಾಖ್ಯಾನಕಾರರು ರತ್ನಾವಳಿಯನ್ನು ಬರೆದದ್ದಕ್ಕಾಗಿ ಧಾವಕನಿಗೆ (ಅಥವಾ ಬಾಣ) ಶ್ರೀಹರ್ಷನು ಧನವನ್ನು ಕೊಟ್ಟನೆಂದು ಅರ್ಥಮಾಡಿದ್ದಾರೆ. ಆ ಮಾತಿಗೆ ಹೇಗೆ ಈ ಅರ್ಥ ಮಾಡಿದರೋ ತಿಳಿಯದು. ಅವನು ಧಾವಕಾದಿಗಳಿಗೆ ಧನವನ್ನು ಕೊಟ್ಟನೆಂದು ಮಾತ್ರ ಆ ವಾಕ್ಯಕ್ಕೆ ಅರ್ಥವಾಗುತ್ತದೆ. ಹರ್ಷನು ಕವಿ ಪೋಷಕನೂ,[4] ಸ್ವತಃ ಕವಿಯೂ

1 ಪರಮಮಾಹೇಶ್ವರೋ ಮಹೇಶ್ವರ ಇವ ಸರ್ವಸತ್ವಾನುಕಂಪಃ—ಬಸ್ಖೇರಶಾಸನ.

2 "ಏಕಃ ಶ್ಲಾಘ್ಯೋ ವಿವಸ್ವಾನ್ ಪರಹಿತಕರಣಾಯೈವ ಯಸ್ಯ ಪ್ರಯಾಸಃ,— ನಾಗಾನಂದ, III—18. ಆಸ್ಥಾನಕವಿಯಾದ ಮಯೂರನು ರಾಜನಿಗಾಗಿ ಸೂರ್ಯಶತಕವನ್ನು ರಚಿಸಿದ್ದಾನೆ.

3 ಕರ್ಮಣಾ ಮನಸಾ ವಾಚಾ ಕರ್ತವ್ಯಂ ಪ್ರಾಣಿಭಿರ್ಹಿತಂ ।
ಹರ್ಷೇಣೈತತ್ಸಮಾಖ್ಯಾತಂ ಧರ್ಮಾರ್ಜನಮನುತ್ತಮಂ ॥—ಬಸ್ಖೇರತಾಮ್ರ ಶಾಸನ.

4 (i) ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು
ನಾಮ್ನೈವ ಕೇವಲಮಜಾಯತ ವಸ್ತುತಸ್ತು ।
ಗೀರ್ಹರ್ಷ ಏಷ ನಿಜಸಂಸದಿಯೇನ ರಾಜ್ಞಾ
ಸಂಪೂಜಿತಃ ಕನಕಕೋಟಿಶತೇನ ಬಾಣಃ ॥—ಸೊಡ್ಢಲ.

(ii) ಶ್ರೀ ಹರ್ಷೋ ವಿತತಾರ ಗದ್ಯಕವಯೇ ಬಾಣಾಯ ವಾಣೀಫಲಂ ।—ರಾಮಚರಿತ

ಆಗಿದ್ದನೆಂಬುದಕ್ಕೆ ಬೇಕಾದಷ್ಟು ಆಧಾರಗಳಿವೆ. ಹರ್ಷನ ಕವಿತಾಶಕ್ತಿಯನ್ನು ಬಾಣನೇ ಕೊಂಡಾಡಿದ್ದಾನೆ[1] ; ಶೀಲಾದಿತ್ಯನು ಜೀಮೂತವಾಹನನ ಕಥೆಯನ್ನು ನಾಟಕ ರೂಪವಾಗಿ ರಚಿಸಿ ಆಡಿಸಿದನೆಂದು ಇತ್ಸಿಂಗನು ಹೇಳಿದ್ದಾನೆ ; ಹರ್ಷನು ವಿಕ್ರಮಾದಿತ್ಯ, ಮುಂಜ, ಭೋಜರಂತೆ ಭೂಪಾಲಕವೀಂದ್ರನಾಗಿ ಸಭಾಧ್ಯಕ್ಷನಾಗಿದ್ದನೆಂದು ಉದಯಸುಂದರೀ ಕಥಾಕಾರನಾದ ಸೊಡ್ಡಲನು ಹೇಳಿದ್ದಾನೆ ; ಜಯಾಪೀಡನು (ಕ್ರಿ. ಶ. 800) ರತ್ನಾವಳಿಯಿಂದ ಅನುವಾದಮಾಡಿ ಅದು ರಾಜ ರಚಿತವೆಂದು ತಿಳಿಸಿದ್ದಾನೆ ; ಜಯದೇವನು (ಕ್ರಿ. ಶ. 11ನೆಯ ಶತ) ಹರ್ಷನು ಕವಿಯೆಂದು ಅಭಿಪ್ರಾಯ ಪಟ್ಟಿದ್ದಾನೆ ; ಮಧುಸೂದನನು (ಕ್ರಿ. ಶ. ಸು. 1654) ಅವನನ್ನು 'ರತ್ನಾವಳ್ಯಾಖ್ಯನಾಟಿಕಾಕರ್ತ' ನೆಂದು ಹೇಳಿದ್ದಾನೆ ; ಅನೇಕ ಲಕ್ಷಣಗ್ರಂಥಗಳಲ್ಲಿ ದೊರೆಯುವ ಈ ನಾಟಕಗಳ ಪದ್ಯಗಳನ್ನು ಗ್ರಂಥಕಾರರು ಹರ್ಷರಚಿತವೆಂದು ಹೇಳಿದ್ದಾರೆ. ಈ ಬಾಹ್ಯ ಪ್ರಮಾಣಗಳಲ್ಲದೆ ನಾಟಕಗಳ ಪ್ರಸ್ತಾವನೆಯಲ್ಲಿ 'ಅಸ್ಮತ್ಸ್ವಾಮಿನಾ ಶ್ರೀಹರ್ಷದೇವೇನಾಪೂರ್ವವಸ್ತುರಚನಾಲಂಕೃತಂ', 'ಶ್ರೀಹರ್ಷೋ ನಿಪುಣಃ ಕವಿಃ' ಎಂಬ ಸ್ಪಷ್ಟವಾದ ಹೇಳಿಕೆ ಇದೆ. ಮೂರೂ ನಾಟಕಗಳಲ್ಲಿ ಅನೇಕ ಸಮಾನ ವಾಕ್ಯಗಳಿರುವುದರಿಂದಲೂ, ಭಾಷೆ, ಶೈಲಿ, ತಂತ್ರಾದಿಗಳಲ್ಲಿ ಪೂರ್ಣಸಾಮ್ಯವಿರುವುದರಿಂದಲೂ ಇವುಗಳ ಕರ್ತೃ ಒಬ್ಬನೆಂಬುದು ನಿರ್ವಿವಾದವಾದುದು. ಪ್ರಿಯದರ್ಶಿಕಾ ಮತ್ತು ರತ್ನಾವಳಿಗಳು ಅವಳಿ ನಾಟಿಕೆಗಳು. ರಾಜರು ಕವಿಗಳಾಗಿರುವುದು ಅಪರೂಪವಾದ್ದರಿಂದ ಹರ್ಷನ ಕವಿತ್ವದ ವಿಷಯದಲ್ಲಿ ಸಂದೇಹ ಮೂಡಿರಬಹುದು. ಪ್ರೌಢಗದ್ಯಕಾವ್ಯಗಳಾದ ಹರ್ಷಚರಿತ ಕಾದಂಬರಿಗಳ ಕರ್ತೃವಾದ ಬಾಣನಂತೂ ಇವುಗಳನ್ನು ಬರೆದಿರಲಾರ. ವೈದಿಕ ಮತಾನುಯಾಯಿಯಾದ ಬಾಣನು ಬೋಧಿಸತ್ವನ ಕಥೆಯುಳ್ಳ ನಾಗಾನಂದವನ್ನು ಬರೆಯುವುದು ಅಸಂಭವ. ಧಾವಕನು ಯಾರೋ ತಿಳಿಯದು.

ಪ್ರಿಯದರ್ಶಿಕೆ ಮತ್ತು ರತ್ನಾವಳಿಗಳು ನಾಟಿಕೆಗಳು. ಇವು ವಸ್ತು, ನಾಯಕ, ರಸ, ಭಾಷೆ, ಶೈಲಿ, ತಂತ್ರ ಮುಂತಾದ ಹಲವು ಅಂಶಗಳಲ್ಲಿ ಒಂದೇ ವಿಧವಾಗಿವೆ. ಎರಡರಲ್ಲಿಯೂ ವತ್ಸರಾಜನು ಅಂತಃಪುರದಲ್ಲಿ ಪರಿಚಾರಿಕೆಯಾಗಿದ್ದ ರಾಜಪುತ್ರಿಯನ್ನು ಪ್ರೀತಿಸುತ್ತಾನೆ ; ಅವರ ಸಮಾಗಮಕ್ಕೆ ಮಿತ್ರರು ಸಹಾಯ ಮಾಡುತ್ತಾರೆ ; ವಾಸವದತ್ತೆ ಕೋಪಗೊಂಡು ಅವಳನ್ನು ಬಂಧನದಲ್ಲಿಡುತ್ತಾಳೆ ; ಅಸಹಾಯಕಳಾದ ಅವಳು ಪ್ರಾಣ ಬಿಡುವ ಸಂದರ್ಭದಲ್ಲಿ ನಾಯಕನು ಅವಳನ್ನು ರಕ್ಷಿಸುತ್ತಾನೆ ; ಅವಳ ಕಡೆಯ ಜನರು ಅವಳನ್ನು ತಮ್ಮ ರಾಜಪುತ್ರಿಯೆಂದು ಗುರುತಿಸುತ್ತಾರೆ ; ಅವಳು ಹಿಂದೆ ವತ್ಸರಾಜನಿಗೇ ಉದ್ದಿಷ್ಟಳಾಗಿದ್ದಳೆಂಬುದನ್ನೂ ತನಗೆ ಬಂಧುವೆಂಬುದನ್ನೂ ತಿಳಿದು ವಾಸವದತ್ತೆ ಅವಳನ್ನು ವತ್ಸರಾಜನಿಗೆ ಮದುವೆಮಾಡಿಕೊಡುತ್ತಾಳೆ.

---

1 (i) ಅಪಿ ಚಾಸ್ಯ ತ್ಯಾಗಸ್ಯಾರ್ಥಿನಃ ಪ್ರಜ್ಞಾಯಾಃ ಶಾಸ್ತ್ರಾಣಿ ಕವಿತ್ವಸ್ಯ ವಾಚಃ.......... ಕೌಶಲಸ್ಯ ಕಲಾ ನ ಪರ್ಯಾಪ್ತೋ ವಿಷಯಃ—ಹರ್ಷಚರಿತ.

(ii) ಮುಖನಿವಾಸಿನೀಂ ಸರಸ್ವತೀಂ ದಧಾನಂ—ಹರ್ಷ ಚರಿತ.

(iii) ಅಧ್ಯರಾಜಕೃತೋತ್ಸಾಹೈಃ ಹೃದಯಸ್ಥೈಃ ಸ್ಮೃತೈರಪಿ ।
ಜಿಹ್ವಾಂತಃ ಕೃಷ್ಯಮಾಣೇವ ನ ಕವಿತ್ವೇ ಪ್ರವರ್ತತೇ ॥ — ಹರ್ಷಚರಿತ



ಪ್ರಿಯದರ್ಶಿಕೆಯು ನಾಲ್ಕು ಅಂಕಗಳ ಒಂದು ನಾಟಿಕೆ. ಇದು ಅದರ ಕಥೆ :—

ಅಂಗರಾಜನಾದ ದೃಢವರ್ಮನು ತನ್ನ ಮಗಳಾದ ಪ್ರಿಯದರ್ಶಿಕೆಯನ್ನು ವತ್ಸರಾಜನಿಗೆ ಮದುವೆಮಾಡಿಕೊಡುವುದಾಗಿ ಮಾತು ಕೊಟ್ಟಿದನು. ಕಳಿಂಗರಾಜನು ಅವಳನ್ನು ತನಗೆ ಕೊಡಲಿಲ್ಲವೆಂದು ಕೋಪಿಸಿಕೊಂಡು ಅಂಗರಾಜನನ್ನು ಸೆರೆಹಿಡಿದನು. ಕಂಚುಕಿಯು ಗದ್ದಲದಲ್ಲಿ ಪ್ರಿಯದರ್ಶಿಕೆಯನ್ನು ಸಾಗಿಸಿ ವಿಂಧ್ಯಕೇತುವೆಂಬ ರಾಜರ ಹತ್ತಿರ ರಕ್ಷಣೆಗಾಗಿ ಬಿಟ್ಟನು. ವತ್ಸರಾಜನ ಸೈನ್ಯ ವಿಂಧ್ಯಕೇತುವನ್ನು ಧ್ವಂಸಮಾಡಿತು. ಆಗ ಯೌಗಂಧರಾಯಣನು ಗೋಳಾಡುತ್ತಿದ್ದ ಅವಳನ್ನು ಕರೆತಂದು ರಾಜನಿಗೆ ಒಪ್ಪಿಸಿದನು. ಅರಣ್ಯದಲ್ಲಿ ಸಿಕ್ಕಿದ್ದರಿಂದ ಅವಳು ಅರಣ್ಯಕೆಯೆಂಬ ಹೆಸರಿನಿಂದ ವಾಸವದತ್ತೆಯ ವಶದಲ್ಲಿ ನಿಂತಳು.

ಆರಣ್ಯಕೆ ಮತ್ತು ವತ್ಸರಾಜನಲ್ಲಿ ಪ್ರಣಯ ಬೆಳೆಯಿತು. ಅವರ ಸಮಾಗಮಕ್ಕೆ ಮನೋರಮೆ ವಸಂತಕರು ಸಂಚು ಮಾಡಿದರು. ಅದನ್ನು ತಿಳಿದು ಕೋಪಿಸಿಕೊಂಡ ವಾಸವದತ್ತೆಯು ಅವರಿಬ್ಬರನ್ನೂ ಸೆರೆಯಲ್ಲಿಟ್ಟಳು.

ದೃಢವರ್ಮನು ವಾಸವದತ್ತೆಯ ಚಿಕ್ಕಮ್ಮನ ಗಂಡ. ಅವನ ಬಂಧನವನ್ನು ತಿಳಿದು ವಾಸವದತ್ತೆಯು ದುಃಖಿಸುತ್ತಿದ್ದಳು ; ಪ್ರಿಯದರ್ಶಿಕೆಯು ಸಮಾಚಾರಕ್ಕಾಗಿ ಹಲುಬುತ್ತಿದ್ದಳು. ವತ್ಸರಾಜನ ಸಹಾಯದಿಂದ ದೃಢವರ್ಮನು ಪುನಃ ರಾಜ್ಯವನ್ನು ಪಡೆದ ಸಮಾಚಾರ ಬಂದಿತು. ಆರಣ್ಯಕೆ ನಿರಾಶಳಾಗಿ ವಿಷಪಾನ ಮಾಡಿದಳು. ವಿಷಪರಿಹಾರಕ್ಕಾಗಿ ವತ್ಸರಾಜನ ಹತ್ತಿರಕ್ಕೆ ಕರೆತಂದಾಗ ಅವಳನ್ನು ಕಂಚುಕಿಯು ಪ್ರಿಯದರ್ಶಿಕೆಯೆಂದು ಗುರುತಿಸಿದನು, ವಾಸವದತ್ತೆ ಸಂತೋಷದಿಂದ ತಂಗಿಯನ್ನು ವತ್ಸರಾಜನಿಗೆ ಮದುವೆ ಮಾಡಿಕೊಂಡಳು.

ರತ್ನಾವಳಿಯೂ ನಾಲ್ಕು ಅಂಕಗಳು ಒಂದು ನಾಟಿಕೆ. ಇದು ಅದರ ಕಥೆ:—

ಸಿಂಹಳದ ದೊರೆಯಾದ ವಿಕ್ರಮ ಬಾಹುವಿಗೆ ರತ್ನಾವಳೀ ಎಂಬ ಮಗಳಿದ್ದಳು. ಅವಳನ್ನು ಮದುವೆಯಾದವನು ಚಕ್ರವರ್ತಿಯಾಗುತ್ತಾನೆಂದು ಸಿದ್ಧಾದೇಶವಿದ್ದಿತು. ಮಂತ್ರಿಯಾದ ಯೌಗಂಧರಾಯಣನು ಅವಳನ್ನು ವತ್ಸರಾಜನಿಗೆ ತಂದುಕೊಳ್ಳಲು ಯೋಚಿಸಿದನು ; ಆದರೆ ತನ್ನ ಸೋದರ ಸೊಸೆಯಾದ ವಾಸವದತ್ತೆಗೆ ವ್ಯಥೆಯಾಗುವುದರಿಂದ ವಿಕ್ರಮಬಾಹು ಮಗಳನ್ನು ಕೊಡಲು ಒಪ್ಪಲಿಲ್ಲ. ಯೌಗಂಧರಾಯಣನು ಲಾವಣಕದಲ್ಲಿ ವಾಸವದತ್ತೆ ಸುಟ್ಟು ಹೋದಳೆಂಬ ವಾರ್ತೆಯನ್ನು ಹಬ್ಬಿಸಿದನು. ಆಗ ಸಿಂಹಳರಾಜನು ಮಗಳನ್ನು ವಸುಭೂತಿ ಬಾಭ್ರವ್ಯರಜೊತೆ ವತ್ಸರಾಜನಲ್ಲಿಗೆ ಕಳುಹಿಸಿಕೊಟ್ಟನು. ಆದರೆ ಅವರು ಪ್ರಯಾಣ ಮಾಡುತ್ತಿದ್ದ ಹಡಗು ಸಮುದ್ರದಲ್ಲಿ ಮುಳುಗಿಹೋಯಿತು. ವಸುಭೂತಿ ಬಾಭ್ರವ್ಯರು ಸಮುದ್ರದಿಂದ ಪಾರಾಗಿ ಕೋಸಲ ದೇಶಕ್ಕೆ ದಂಡೆತ್ತಿಬಂದಿದ್ದ ವತ್ಸರಾಜನ ಸೇನಾಪತಿಯಾದ ರುಮಣ್ವಂತನನ್ನು ಸೇರಿಕೊಂಡರು. ಹಲಗೆಯನ್ನು ಹಿಡಿದು ತೇಲಿ ದಡಮುಟ್ಟಿದ ರತ್ನಾವಳಿಯನ್ನು ಒಬ್ಬ ರತ್ನ ವ್ಯಾಪಾರಿಯು ಕಂಡು ಗುರುತಿಸಿ, ಅವಳನ್ನು ಯೌಗಂಧರಾಯಣನಲ್ಲಿಗೆ ಕರೆತಂದು ಬಿಟ್ಟನು. ಅವನು ಅವಳನ್ನು ಸಾಗರಿಕೆಯೆಂಬ ಹೆಸರಿನಿಂದ ವಾಸವದತ್ತೆಯ ಅಂತಃಪುರದಲ್ಲಿರುವಂತೆ ಏರ್ಪಡಿಸಿದನು. ಇದು ಪೂರ್ವಕಥೆ.

ಸಾಗರಿಕೆಯು ಮದನೋತ್ಸವದಲ್ಲಿ ವತ್ಸರಾಜನನ್ನು ಕಂಡು ಮೋಹಗೊಂಡಳು. ಮದನ ಸಂತಾಪವನ್ನು ತಾಳಲಾರದೆ ಅವಳು ರಾಜನ ಭಾವಚಿತ್ರವನ್ನು ಬರೆದಳು; ಸಖಿಯಾದ ಸುಸಂಗತೆಯು ಅದರ ಮಗ್ಗುಲಲ್ಲಿ ಸಾಗರಿಕೆಯ ಚಿತ್ರವನ್ನೂ ಬರೆದಳು. ಅಂತಃಪುರದ ಗಿಣಿಯು ತಪ್ಪಿಸಿಕೊಂಡು ಹೋದ ಗಲಾಟೆಯಲ್ಲಿ ಅವರ ಅಜಾಗರೂಕತೆಯಿಂದ ಚಿತ್ರಪಟ ರಾಜನ ಕಣ್ಣಿಗೆ ಬಿದ್ದಿತು. ಅಷ್ಟರಲ್ಲಿ ಅದನ್ನು ಹುಡುಕಿಕೊಂಡು ಅವರು ಅಲ್ಲಿಗೆ ಬಂದರು. ವತ್ಸರಾಜ ಸಾಗರಿಕೆಯರು ಪರಸ್ಪರ ಅನುರಕ್ತರಾಗಿ ಸರಸಸಲ್ಲಾಪದಲ್ಲಿ ತೊಡಗಿದ್ದಾಗ ಕುಸುಮಿತವಾದ ನವಮಲ್ಲಿಕೆಯನ್ನು ನೋಡಲು ವಾಸವದತ್ತೆಯೂ ಅಲ್ಲಿಗೆ ಬಂದಳು. ಅವರ ಪ್ರೇಮವ್ಯವಹಾರವು ಗೊತ್ತಾಗಿ ಅವಳು ಕೋಪಿಸಿಕೊಂಡು ಹೊರಟುಹೋದಳು.

ವಿದೂಷಕ, ಸುಸಂಗತೆಯರು ಸಾಗರಿಕೆಯನ್ನು ವಾಸವದತ್ತೆಯ ವೇಷದಿಂದ ರಾಜನಲ್ಲಿಗೆ ಕರೆದುಕೊಂಡು ಹೋಗಲು ಮಾಡಿದ ಯೋಜನೆಯು ವಾಸವದತ್ತೆಗೆ ಗೊತ್ತಾಗಿ ಅವರ ಬಂಧನವಾಯಿತು. ವಸಂತಕನಿಗೆ ಬೇಗ ಬಿಡುಗಡೆಯಾಯಿತು. ವಾಸವದತ್ತೆಯು ಸಾಗರಿಕೆಯನ್ನು ಉಜ್ಜಯಿನಿಗೆ ಕಳುಹಿಸಿ ಬಿಟ್ಟಂತೆ ಸಮಾಚಾರ ಹರಡಿದ್ದಳು. ಅಷ್ಟರಲ್ಲಿ ರುಮಣ್ವಂತನು ಜಯಶಾಲಿಯಾದ ವಾರ್ತೆ ಬಂದಿತು, ವಾಸವದತ್ತೆಯ ಮೂಲಕ ಬಂದ ಐಂದ್ರಜಾಲಿಕನ ಆಟವನ್ನು ನೋಡಲು ಎಲ್ಲರೂ ಸೇರಿದರು. ವಸುಭೂತಿ, ಬಾಭ್ರವ್ಯರು ಬಂದು ರತ್ನಾವಳಿಯು ಸಮುದ್ರದ ಪಾಲಾದಳೆಂದು ತಿಳಿಸಿದರು. ಆಟದಲ್ಲಿ ಎಲ್ಲರೂ ಮುಳುಗಿದ್ದಾಗ ಹಠಾತ್ತಾಗಿ ಅಂತಃಪುರಕ್ಕೆ ಬೆಂಕಿ ಬಿದ್ದಿತು. ವಾಸವದತ್ತೆಯ ಕೋರಿಕೆಯಂತೆ ವತ್ಸರಾಜನು ಒಳನುಗ್ಗಿ ಅಂತಃಪುರದಿಂದ ಸಾಗರಿಕೆಯನ್ನು ಕರೆದು ತಂದನು. ತಾನಾಗಿ ಬೆಂಕಿ ತಣ್ಣಗಾಯಿತು. ಅದು ಐಂದ್ರಜಾಲಿಕನ ಮಾಯೆಯೆಂದು ತಿಳಿಯಿತು. ವಸುಭೂತಿಯು ಸಾಗರಿಕೆಯನ್ನು ರತ್ನಾವಳಿಯೆಂದು ಗುರುತಿಸಿದನು. ಯೌಗಂಧರಾಯಣನು ಮುಂದೆ ಬಂದು ಸಾಗರಿಕೆಯನ್ನು ಅಂತಃಪುರಕ್ಕೆ ಒಪ್ಪಿಸಿದ್ದರಿಂದ ಮೊದಲುಗೊಂಡು ಐಂದ್ರಜಾಲಿಕ ವೃತ್ತಾಂತದವರೆಗೆ ನಡೆದ ಕಾರ್ಯಗಳಿಗೆಲ್ಲಾ ತಾನು ಕಾರಣನೆಂದು ಹೇಳಿ ಕ್ಷಮೆ ಕೇಳಿದನು. ಪ್ರಸನ್ನಳಾದ ವಾಸವದತ್ತೆ ರತ್ನಾವಳಿಯನ್ನು ತನ್ನ ಗಂಡನಿಗೆ ಮದುವೆ ಮಾಡಿಕೊಟ್ಟಳು.

ಪ್ರಿಯದರ್ಶಿಕೆ, ರತ್ನಾವಳಿಗಳ ಕಥೆಯು ಕಥಾಸರಿತ್ಸಾಗರದ ಬಂಧುಮತೀ ವೃತ್ತಾಂತದಂತಿದೆ. ಗೋಪಾಲಕನು ತನ್ನ ತಂಗಿಯಾದ ವಾಸವದತ್ತೆಗೆ ಬಂಧುಮತಿಯೆಂಬ ರಾಜಕುಮಾರಿಯನ್ನು ಕಾಣಿಕೆಯಾಗಿ ಕೊಟ್ಟಿದ್ದನು. ವಾಸವದತ್ತೆಯು ಅವಳಿಗೆ ಮಂಜುಳಿಕೆಯೆಂಬ ಹೆಸರನ್ನಿಟ್ಟು ಅವಳನ್ನು ಗುಟ್ಟಾಗಿಟ್ಟುಕೊಂಡಿದ್ದಳು. ವತ್ಸರಾಜನು ಲಾವಣ್ಯಜಲಧಿಯಿಂದ ಹುಟ್ಟಿಬಂದ ಎರಡನೆಯ ಲಕ್ಷ್ಮಿಯಂತಿದ್ದ ಅವಳನ್ನು ಉದ್ಯಾನಲತಾಗೃಹದಲ್ಲಿ ಕಂಡು ವಸಂತಕನ ಸಹಾಯದಿಂದ ಗಾಂಧರ್ವವಿವಾಹಮಾಡಿಕೊಂಡನು. ವಾಸವದತ್ತೆಯು ಕೋಪಿಸಿಕೊಂಡು ವಸಂತಕನನ್ನು ಬಂಧಿಸಿದಳು. ರಾಜನು ಸಾಂಕೃತ್ಯಾಯನಿಯೆಂಬ ಸಂನ್ಯಾಸಿಯ ಮೂಲಕ ರಾಣಿಯನ್ನು ಸಮಾಧಾನಗೊಳಿಸಿ ಬಂಧುಮತಿಯನ್ನು ಪಡೆದನು. ಬೃಹತ್ಕಥೆಯ ಆಧಾರದಿಂದ ರಚಿತವಾಗಿರುವ ಕಥಾಸರಿತ್ಸಾಗರ (ಕ್ರಿ. ಶ. 11ನೆಯ ಶತ), ಬೃಹತ್ಕಥಾಮಂಜರಿ



(ಕ್ರಿ.ಶ. 11ನೆಯ ಶತ) ಮತ್ತು ಬೃಹತ್ಕಥಾ ಶ್ಲೋಕ ಸಂಗ್ರಹಗಳು (ಕ್ರಿ.ಶ. 8 ಅಥವಾ 9ನೆಯ ಶತ) ಹರ್ಷನ ಕಾಲಕ್ಕಿಂತ ಈಚಿನವು. ಆದ್ದರಿಂದ ಹರ್ಷನು ಮೂಲ ಬೃಹತ್ಕಥೆಯಿಂದಲೋ, ಪ್ರಚಾರದಲ್ಲಿದ್ದ ಕಥೆಯಿಂದಲೋ ವಸ್ತುವನ್ನು ತೆಗೆದುಕೊಂಡಿರಬೇಕು. ಮಂಜುಳಿಕೆ ಪ್ರಿಯದರ್ಶಿಕೆಯನ್ನೂ, ಲಾವಣ್ಯಜಲಧಿ ಸಾಗರಿಕೆಯನ್ನೂ ಸೂಚಿಸಿರಬಹುದು. ಈ ನಾಟಿಕೆಗಳಿಗೆ ಬಂಧುಮತೀವೃತ್ತಾಂತಕ್ಕಿಂತಲೂ ಮಾಲವಿಕಾಗ್ನಿಮಿತ್ರದೊಡನೆ ಹೆಚ್ಚು ಸಾದೃಶ್ಯವಿದೆ. ಮತ್ಸರಿಣಿಯಾದ ರಾಣಿ, ಗೋಪ್ಯವಾಗಿದ್ದ ರಾಜಕುಮಾರಿ, ಸಹಾಯಕಳಾದ ಸಂನ್ಯಾಸಿನಿ, ವಿದೂಷಕ-ಸಖಿಯರ ನೆರವು, ದೋಹದ, ಸಹಾಯಕರ ಬಂಧನ ಮೊದಲಾದ ಅಂಶಗಳಲ್ಲಿ ಪೂರ್ಣ ಸಾದೃಶ್ಯವಿದೆ. ಶಾಕುಂತಲ, ವಿಕ್ರಮೋರ್ವಶೀಯ, ಸ್ವಪ್ನವಾಸವದತ್ತಗಳಿಗೂ ಈ ನಾಟಿಕೆಗಳಿಗೂ ಸನ್ನಿವೇಶ, ಘಟನೆ ಮುಂತಾದುವುಗಳಲ್ಲಿ ಸಾದೃಶ್ಯವನ್ನು ಹೇಳಬಹುದು. ಅರಣ್ಯಕೆ ಪೂಜೆಗಾಗಿ ಕಮಲಗಳನ್ನು ಕೊಯ್ಯುತ್ತಿದ್ದಾಗ ದುಂಬಿಗಳು ಅವಳನ್ನು ಮುತ್ತಿ ಪೀಡಿಸುತ್ತವೆ; ವಿಹಾರಕ್ಕಾಗಿ ಬಂದಿದ್ದ ರಾಜನು ಭ್ರಮರ ಬಾಧೆಯನ್ನು ತಪ್ಪಿಸುತ್ತಾನೆ; ಇಬ್ಬರಲ್ಲಿಯೂ ಅನುರಾಗವುಂಟಾಗುತ್ತದೆ. ಇದು ಅಭಿಜ್ಞಾನ ಶಾಕುಂತಲದ ಭ್ರಮರ ವೃತ್ತಾಂತದಂತಿದೆ. ಮಾಲವಿಕಾಗ್ನಿಮಿತ್ರದ ಪಂಡಿತಕೌಶಿಕಿಯೇ ಪ್ರಿಯದರ್ಶಿಕೆಯಲ್ಲಿ ಸಾಂಕೃತ್ಯಾಯನಿಯಾಗಿದ್ದಾಳೆ. ಮಾಲವಿಕಾಗ್ನಿಮಿತ್ರದಲ್ಲಿರುವಂತೆಯೇ ಎರಡೂ ನಾಟಿಕೆಗಳಲ್ಲಿ ನಾಯಿಕೆಯ ಬಂಧನವಾಗುತ್ತದೆ. ಶಾಕುಂತಲದಲ್ಲಿ ಆಶ್ರಮಪ್ರವೇಶ ಸಮಯದಲ್ಲಿ ದುಷ್ಯಂತನ ಬಲಭುಜ ಅದುರುತ್ತದೆ; ಅವನು ಮರಗಳ ಮರೆಯಲ್ಲಿ ನಿಂತು ಶಕುಂತಲೆಯ ಸೌಂದರ್ಯವನ್ನು ಸವಿಯುತ್ತಾನೆ; ಅವನಿಗೆ ಶಕುಂತಳೆ ಮತ್ತು ಅವಳ ಸಖಿಯರಿಂದ ಆತಿಥ್ಯ ದೊರೆಯುತ್ತದೆ. ಹೀಗೆಯೇ ನಾಗಾನಂದದಲ್ಲಿಯೂ ಜೀಮೂತವಾಹನನ ಬಲಗಣ್ಣು ಅದುರುತ್ತದೆ; ಅವನೂ ಮರಗಳ ಮರೆಯಿಂದ ಮಲಯವತಿಯನ್ನು ನೋಡುತ್ತಾನೆ; ಅವನಿಗೆ ಮಲಯವತಿ ಮತ್ತು ಅವಳ ಸಖಿಯರಿಂದ ಆತಿಥ್ಯ ದೊರೆಯುತ್ತದೆ. ಗೌರಿಯ ಮುಂದೆ ಮಲಯವತಿಯ ವೀಣಾವಾದನವು ಕಾದಂಬರಿಯ ಮಹಾಶ್ವೇತೆಯ ವೀಣಾವಾದನದಿಂದ ಪ್ರೇರಣೆಗೊಂಡಿರಬೇಕು. ನಾಗಾನಂದದ ನಾಯಕನ ಸ್ವಪ್ನವು ಸ್ವಪ್ನವಾಸವದತ್ತದಿಂದ ಬಂದಿರಬೇಕು.

ಹರ್ಷನು ಭಾಸ, ಶೂದ್ರಕ, ಕಾಳಿದಾಸ, ಬಾಣರ ಪ್ರಭಾವಕ್ಕೆ ಒಳಗಾಗಿ ಅವರ ಕೃತಿಗಳಿಂದ ಸನ್ನಿವೇಶ, ಘಟನೆ, ಪಾತ್ರ ಮುಂತಾದವುಗಳನ್ನು ತೆಗೆದುಕೊಂಡಿರುವುದರ ಜೊತೆಗೆ ಅರ್ಧವೋ ಅಥವಾ ಪೂರ್ಣವೋ ಆಗಿ ಕಾಳಿದಾಸನ ಅನೇಕ ವಾಕ್ಯಗಳನ್ನು ತೆಗೆದುಕೊಂಡಿದ್ದಾನೆ. ಇವನಿಂದಲೂ ಅನೇಕ ಕವಿಗಳು ಉಪಕೃತರಾಗಿದ್ದಾರೆ. ಪ್ರಿಯದರ್ಶಿಕೆಯ ಗರ್ಭಾಂಕವು ಉತ್ತರ ರಾಮಚರಿತ, ಬಾಲರಾಮಾಯಣಗಳ ಗರ್ಭಾಂಕಕ್ಕೆ ಪ್ರೇರಕವೆಂದು ತೋರುತ್ತದೆ. ಇದನ್ನು ಕೃತಿಚೌರ್ಯವೆಂದು ಪರಿಗಣಿಸಬಾರದು. ಹೀಗೆ ತೆಗೆದುಕೊಂಡವರೆಲ್ಲರೂ ಉತ್ತಮಕೃತಿಗಳನ್ನು ರಚಿಸಲು ಸಾಧ್ಯವಿಲ್ಲ.

ಪ್ರಿಯದರ್ಶಿಕೆಯಲ್ಲಿರುವ ಗರ್ಭಾಂಕವು ಪ್ರಾಯಶಃ ಸಂಸ್ಕೃತ ಸಾಹಿತ್ಯದಲ್ಲಿಯೇ ಪ್ರಥಮ ಪ್ರಯೋಗ. ಸಾಂಕೃತ್ಯಾಯನಿಯು ವತ್ಸರಾಜ ವಾಸವದತ್ತೆಯರು ಮದುವೆಯಾಡಿಕೊಂಡ

ಸಂಗತಿಯನ್ನು ಒಂದು ನಾಟಕವನ್ನಾಗಿ ರಚಿಸಿದ್ದಳು. ಅದನ್ನು ಅರಮನೆಯಲ್ಲಿ ಆಡಬೇಕೆಂದೂ ಮತ್ತು ವಾಸವದತ್ತೆಯ ಪಾತ್ರವನ್ನು ಆರಣ್ಯಕೆಯೂ, ವತ್ಸರಾಜನ ಪಾತ್ರವನ್ನು ಅವಳ ಸಖಿಯಾದ ಮನೋರಮೆಯೂ ವಹಿಸಬೇಕೆಂದೂ ನಿರ್ಣಯವಾಗಿದ್ದಿತು. ಮನೋರಮೆ, ವಸಂತಕರು ಈ ಸಂದರ್ಭದಲ್ಲಿ ರಾಜನನ್ನೂ ಆರಣ್ಯಕೆಯನ್ನೂ ಸೇರಿಸಲು ಯೋಚಿಸಿದಳು. ವತ್ಸರಾಜನು ತಾನೇ ತನ್ನ ಪಾತ್ರವನ್ನು ವಹಿಸಿದನು. ನಾಯಕ, ನಾಯಿಕೆಯರ ಸರಸಸಲ್ಲಾಪಗಳಿಗೆ ಒಳ್ಳೆಯ ಅವಕಾಶ ದೊರೆಯಿತು. ವಸಂತನು ಒಳಗೆ ನಿದ್ರಿಸಿಬಿಟ್ಟನು. ಪ್ರೇಕ್ಷಕಳಾಗಿದ್ದ ವಾಸವದತ್ತೆಗೆ ಮಧ್ಯದಲ್ಲಿ ಸಂದೇಹಬಂದು ಗುಟ್ಟು ಬಯಲಾಯಿತು. ನಾಟಕ ಸಾಹಿತ್ಯದಲ್ಲಿ ಅನುರಕ್ತರಾದ ನಾಯಕ ನಾಯಿಕೆಯರ ಸಮಾಗಮಕ್ಕೆ ಗರ್ಭಾಂಕವು ಒಂದು ವಿನೂತನ ಪ್ರಯೋಗ.

ರತ್ನಾವಳಿಯಲ್ಲಿ ಅಂತಃಪುರದಲ್ಲಿ ಕಟ್ಟಿದ್ದ ಒಂದು ಕೋತಿ ಸರಪಳಿಯನ್ನು ಕಿತ್ತುಕೊಂಡು, ಮೊಸರನ್ನದ ಆಸೆಯಿಂದ ಪಂಜರದ ಬಾಗಿಲನ್ನು ತೆರೆಯಿತು. ಅದರಲ್ಲಿದ್ದ ಗಿಣಿಯು ಹಾರಿ ಹೋದುದರಿಂದ ಗದ್ದಲವಾಯಿತು. ತಾನು ಬರೆದಿದ್ದ ರಾಜನ ಚಿತ್ರಪಟವನ್ನು ಇದ್ದಲ್ಲಿಯೇ ಬಿಟ್ಟು ಗಾಬರಿಯಿಂದ ಸಾಗರಿಕೆಯು ಗಿಣಿಯನ್ನು ಹುಡುಕಲು ಹೋದಳು. ದೋಹದದಿಂದ ಕುಸುಮಿತವಾದ ನವಮಲ್ಲಿಕೆಯನ್ನು ನೋಡಲು ಬಂದ ರಾಜನು ಆ ಚಿತ್ರಪಟವನ್ನು ಕಂಡನು. ಸಾಗರಿಕೆಯೂ ಅಲ್ಲಿಗೆ ಹಿಂದಿರುಗಿ ಬಂದಳು. ಇಬ್ಬರ ಸರಸಸಲ್ಲಾಪ ನಡೆಯುತ್ತಿದ್ದಾಗ ವಾಸವದತ್ತೆಯೂ ಅಲ್ಲಿಗೆ ಬಂದುದರಿಂದ ಅವರ ಪ್ರಣಯ ಪ್ರಸಂಗ ಅಷ್ಟಕ್ಕೇ ನಿಂತಿತು. ಹೀಗೆ ಒಂದು ಕೋತಿ ನಾಯಕ ನಾಯಿಕೆಯರ ಸಮಾಗಮವನ್ನು ಸಂಪಾದಿಸುತ್ತದೆ. ಮಾಲವಿಕಾಗ್ನಿಮಿತ್ರದಲ್ಲಿಯೂ ಒಂದು ಕೋತಿಯ ಸಹಾಯವಿದೆ. ಮತ್ತೆ ವಿದೂಷಕ ಸುಸಂಗತೆಯರು ವಾಸವದತ್ತೆಯ ವೇಷದಿಂದ ಸಾಗರಿಕೆಯನ್ನು ರಾಜನಲ್ಲಿಗೆ ಕರೆತರಲು ಯೋಚಿಸಿದರು. ಇದನ್ನು ತಿಳಿದು ವಾಸವದತ್ತೆಯು ತಾನೇ ಬಂದಳು. ರಾಜನು ಅವಳನ್ನು ಕತ್ತಲಲ್ಲಿ ಗುರುತಿಸಲಾರದೆ ಸಾಗರಿಕೆಯೆಂದು ತಿಳಿದು ಮಾತನಾಡಿ ಸಿಕ್ಕಿಹಾಕಿಕೊಂಡನು. ಅವಳು ಕಾಲಿಗೆ ಬಿದ್ದರೂ ಒಲಿಯದೆ ಹೊರಟು ಹೋದಳು. ಸಾಗರಿಕೆಯು ವಾಸವದತ್ತೆಯ ವೇಷದಿಂದ ಬಂದು, ರಾಜನು ದೊರೆಯದ್ದರಿಂದ ನಿರಾಶೆಗೊಂಡು ನೇಣುಹಾಕಿಕೊಂಡಳು. ವಾಸವದತ್ತೆಯೇ ಹೀಗೆ ಮಾಡುತ್ತಿದ್ದಾಳೆಂದು ಭಾವಿಸಿ ಕಾಪಾಡಲು ಹೋದ ವತ್ಸರಾಜನು ಅವಳು ಸಾಗರಿಕೆಯೆಂದು ತಿಳಿದು ಬಹಳ ಸಂತೋಷಗೊಂಡನು. ಪುನಃ ಹಿಂದಕ್ಕೆ ಬಂದ ವಾಸವದತ್ತೆ ಈ ಜೋಡಿಯನ್ನು ಕಂಡಳು. ಕಣ್ಣುಮುಚ್ಚಾಲೆಯಂತೆ ನಡೆಯುವ ಈ ಘಟನೆಗಳು ಚಮತ್ಕಾರವಾಗಿವೆ. ನಾಯಕ ನಾಯಿಕೆಯರ ಸಮಾಗಮಕ್ಕೆ ಐಂದ್ರಜಾಲಕನನ್ನು ಚೆನ್ನಾಗಿ ಬಳಸಿಕೊಳ್ಳಲಾಗಿದೆ. ಎರಡೂ ನಾಟಿಕೆಗಳಲ್ಲಿ ಪ್ರಾಣಾಪಾಯಕ್ಕೆ ಗುರಿಯಾಗಿದ್ದ ನಾಯಿಕೆಯರನ್ನು ಕಾಪಾಡುವಂತೆ ರಾಣಿಯೇ ರಾಜನನ್ನು ಕೇಳಿಕೊಳ್ಳುತ್ತಾಳೆ. ಈ ನಾಟಿಕೆಗಳಲ್ಲಿ ಭಾಸ, ಕಾಳಿದಾಸರ ಕೃತಿಗಳಲ್ಲಿ ಪರಿಚಿತರಾದ ಪಾತ್ರಗಳನ್ನೇ ನೋಡುತ್ತೇವೆ. ಪಾತ್ರರಚನೆಯಲ್ಲಿ ಯಾವ ವಿಶೇಷವೂ ಕಂಡುಬರುವುದಿಲ್ಲ. ವತ್ಸರಾಜನು ಧೀರಲಲಿತನಾದ ನಾಯಕ. ಅವನು ಕಲಾಸಕ್ತ, ಸುಖಿ; ಮೃದು. ಅವನ ರಾಜ್ಯರಕ್ಷಣೆ ಮಂತ್ರಿಗಳಧೀನ; ಅವನ ಸಾಹಸ ಪ್ರಣಯಸಂಪಾದನೆಯಲ್ಲಿ. ಈ ನಾಟಿಕೆಗಳ ವಾಸವದತ್ತೆ



ಮುಂಗೋಪಿ, ಕಠಿಣ ಹೃದಯವುಳ್ಳವಳು; ಭಾಸನ ವಾಸವದತ್ತೆಯಂತೆ ಅವಳು ಪ್ರೇಮಮಯಿಯಲ್ಲ. ಪ್ರಿಯದರ್ಶಿಕೆ ಮತ್ತು ರತ್ನಾವಳಿಯರು ಮಾಳವಿಕೆಯ ತಂಗಿಯಂತಿದ್ದಾರೆ. ಈ ನಾಟಿಕೆಗಳಲ್ಲಿ ಚಾತುರ್ಯವಿರುವುದು ನಾಯಕ ನಾಯಿಕೆಯರ ಸಮಾಗಮಕ್ಕಾಗಿ ಸೃಷ್ಟವಾದ ಘಟನೆಗಳಲ್ಲಿಯೇ. ಇವುಗಳ ಶೃಂಗಾರ ಮೋಹ, ಚಾಪಲ್ಯಗಳಿಂದ ಕೂಡಿ ಹಸಿಹಸಿಯಾಗಿದೆ; ಪಾಗಿ ಮಧುರವಾಗಿಲ್ಲ, ಇದು ಉದಾತ್ತವೂ, ಘನವೂ ಆದ ಶೃಂಗಾರವಲ್ಲ.

'ನಾಗಾನಂದ'ವು ಐದು ಅಂಕಗಳ ನಾಟಕ, ಇದು ಅದರ ಕಥೆ :—

ವಿದ್ಯಾಧರ ರಾಜಕುಮಾರನಾದ ಜೀಮೂತವಾಹನನು ಮಲಯ ಪರ್ವತದಲ್ಲಿ ಸಂಚರಿಸುತ್ತಾ ಗೌರೀದೇವಾಲಯದಲ್ಲಿ ಮಲಯವತಿಯನ್ನು ಕಂಡನು. ಇಬ್ಬರೂ ಪರಸ್ಪರ ಅನುರಕ್ತರಾದರು. ವಿಶ್ವಾವಸು ಮಗಳಾದ ಮಲಯವತಿಯನ್ನು ಜೀಮೂತವಾಹನನಿಗೆ ಮದುವೆ ಮಾಡಿಕೊಡುವುದಾಗಿ ಹೇಳಿಕಳುಹಿಸಿದನು. ಗೌರೀ ದೇವಾಲಯದಲ್ಲಿ ಕಂಡಿದ್ದವಳೂ, ಈ ಮಲವತಿಯೂ ಒಬ್ಬಳೆ ಎಂಬುದು ಗೊತ್ತಿಲ್ಲದೆ ಮೊದಲು ಸ್ವಲ್ಪ ರಗಳೆಯಾಗಿ ಕೊನೆಗೆ ಇಬ್ಬರಿಗೂ ಮದುವೆಯಾಯಿತು.

ಜೀಮೂತವಾಹನನು ಸಮುದ್ರದ ದಡದಲ್ಲಿ ಸಂಚರಿಸುತ್ತಾ ಅಲ್ಲಿ ಗರುಡನು ಹಾವುಗಳನ್ನು ತಿಂದು ಬೀಳಿಸಿದ್ದ ಎಲುಬುಗಳ ರಾಶಿಯನ್ನು ಕಂಡು ದುಃಖಗೊಂಡನು. ಅಂದು ಗರುಡನಿಗೆ ಆಹಾರವಾಗಿ ಬಂದಿದ್ದ ಶಂಖಚೂಡನು ಗೋಕರ್ಣೇಶ್ವರನನ್ನು ನೋಡಿಕೊಂಡು ಬರಲು ಹೋಗಿದ್ದಾಗ ಅವನಿಗೆ ಬದಲಾಗಿ ಜೀಮೂತವಾಹನನು ತನ್ನನ್ನು ಗರುಡನಿಗೆ ಅರ್ಪಿಸಿದನು. ಗರುಡನು ಅವನನ್ನು ಕುಕ್ಕಿ ತಿನ್ನುತ್ತಿದ್ದಾಗ ಶಂಖಚೂಡನು ಅಲ್ಲಿಗೆ ಬಂದನು. ಜೀಮೂತವಾಹನನ ತಂದೆ, ತಾಯಿ, ಆಗತಾನೆ ಮದುವೆಯಾಗಿದ್ದ ಹೆಂಡತಿಯೂ ಅವನನ್ನು ಹುಡುಕಿಕೊಂಡು ಅಲ್ಲಿಗೆ ಬಂದರು. ಜೀಮೂತವಾಹನನು ಸತ್ತನು. ಅವನ ಕಡೆಯವರು ಅಗ್ನಿಪ್ರವೇಶ ಮಾಡಬೇಕೆಂದಿದ್ದಾಗ ಗೌರಿಯು ಪ್ರತ್ಯಕ್ಷಳಾಗಿ ಜೀಮೂತವಾಹನನನ್ನು ಬದುಕಿಸಿದಳು. ಗರುಡನು ಸ್ವರ್ಗದಿಂದ ಅಮೃತವನ್ನು ತಂದು ಚಿಮುಕಿಸಿ ಎಲ್ಲಾ ನಾಗಗಳನ್ನೂ ಬದುಕಿಸಿದನು; ಇನ್ನು ಮುಂದೆ ಸರ್ಪಗಳನ್ನು ಕೊಲ್ಲುವುದಿಲ್ಲವೆಂದು ಪ್ರತಿಜ್ಞೆ ಮಾಡಿದನು.

ನಾಗಾನಂದದ ಪ್ರಸ್ತಾವನೆಯಲ್ಲಿ 'ಶ್ರೀಹರ್ಷದೇವೇನಾಪೂರ್ವರಚನಾಲಂಕೃತಂ ವಿದ್ಯಾಧರಜಾತಕಪ್ರತಿಬದ್ಧಂ ನಾಗಾನಂದಂ ನಾಮ ನಾಟಕಂ ಕೃತಂ' ಮತ್ತು 'ಲೋಕೇ ಹಾರಿಚ ಸಿದ್ಧರಾಜ ಚರಿತಂ' ಎಂಬ ಮಾತುಗಳಿವೆ. ಜಾತಕ ಕಥೆಗಳು ಬುದ್ಧನ ಜನ್ಮಾಂತರದ ಪುಣ್ಯ ಚರ್ಯೆಗಳನ್ನು ತಿಳಿಸುತ್ತವೆ. ಉಪಲಬ್ಧವಿರುವ ಜಾತಕ ಕಥೆಗಳಲ್ಲಿ ವಿದ್ಯಾಧರಜಾತಕವೆಂಬ ಕಥೆಯಿಲ್ಲ. ಈ ಹೆಸರಿನ ಒಂದು ಕಥೆಯೋ ಅಥವಾ ಕಥಾಸಂಗ್ರಹವೋ ಇದ್ದು ಅದು ನಮಗೆ ದೊರೆಯದಿರಬಹುದು. ಪೈಶಾಚೀ ಭಾಷೆಯಲ್ಲಿರುವ ಗುಣಾಢ್ಯನ ಬೃಹತ್ಕಥೆಯೂ ಉಪಲಬ್ಧವಿಲ್ಲ. ಅದರ ಆಧಾರದಿಂದ ರಚಿತವಾದ ಸೋಮದೇವನ ಕಥಾಸರಿತ್ಸಾಗರ ಮತ್ತು ಕ್ಷೇಮೇಂದ್ರನ ಬೃಹತ್ಕಥಾಮಂಜರಿಗಳಲ್ಲಿ ಎರಡೆರಡು ಕಡೆ ಭಿನ್ನ ಪ್ರಸಂಗಗಳಲ್ಲಿ ಜೀಮೂತವಾಹನನ





28*

ಕಥೆ ಇದೆ; ಮೊದಲು ಸಂಗಹವಾಗಿಯೂ ಎರಡನೆಯಸಲ ವಿಸ್ತಾರವಾಗಿಯೂ ಬಂದಿದೆ. ಈ ಎರಡು ಕೃತಿಗಳೂ ಈಚಿನವಾದ್ದರಿಂದ ಹರ್ಷನು ಮೂಲ ಬೃಹತ್ಕಥೆಯಿಂದ ವಸ್ತುವನ್ನು ತೆಗೆದುಕೊಂಡಿರಬೇಕು. ಸನ್ನಿವೇಶರಚನೆ, ಪಾತ್ರ ಚಿತ್ರಣ, ರಸಪೋಷಣೆ, ವರ್ಣನೆ ಮುಂತಾದುವು ಕವಿಯ ಪ್ರತಿಭೆಯಿಂದ ನಿರ್ಮಿತವಾದುವು. ಹರ್ಷನ ಕಾಲದಲ್ಲಿ ವೈದಿಕಧರ್ಮ ಮತ್ತು ಬೌದ್ಧಧರ್ಮಗಳಿಗೆ ವೈಷಮ್ಯವಿರಲಿಲ್ಲವೆಂದು ಹಿಂದೆಯೇ ಹೇಳಲಾಗಿದೆ. ನಾಗಾನಂದದಲ್ಲಿ ಬೌದ್ಧ ಪ್ರಾರ್ಥನೆ ಮತ್ತು ತತ್ವಗಳೂ ಇವೆ; ಗೌರೀಪೂಜೆ, ಸೂರ್ಯೋಪಾಸನೆಗಳೂ ಇವೆ. ಕೊನೆಗಾಲದಲ್ಲಿ ಹರ್ಷನು ಬೌದ್ಧನಾದನೆಂಬ ಪ್ರತೀತಿಯೂ ಇದೆ. ಆದ್ದರಿಂದ ಅವನು ಈ ನಾಟಕವನ್ನು ಕೊನೆಗೆ ಬರೆದಿರಬೇಕು. ಶೈಲಿ, ಪಾತ್ರ ಚಿತ್ರಣ, ತಂತ್ರಾದಿಗಳಲ್ಲಿ ಪ್ರಿಯದರ್ಶಿಕೆಗಿಂತ ರತ್ನಾವಳಿಯು ಉತ್ತಮವಾಗಿದೆ. ಆದ್ದರಿಂದ ಪ್ರಿಯದರ್ಶಿಕೆಯು ಅವನ ಪ್ರಥಮ ಕೃತಿಯಾಗಿರಬೇಕು.

ನಾಗಾನಂದದ ಮೊದಲನೆಯ ಮೂರು ಅಂಕಗಳಲ್ಲಿ ನಾಯಕ ನಾಯಿಕೆಯರ ಶೃಂಗಾರ ಚಿತ್ರಣವಿದೆ, ಕೊನೆಯ ಎರಡಂಕಗಳಲ್ಲಿ ನಾಗನಿಗಾಗಿ ನಾಯಕನು ಮಾಡಿದ ಆತ್ಮಾರ್ಪಣ ವೃತ್ತಾಂತವಿದೆ. ವೈರಾಗ್ಯಪರನೂ ತ್ಯಾಗಿಯೂ, ಉದಾರಿಯೂ ಆದ ಜೀಮೂತವಾಹನನಲ್ಲಿ ಇಷ್ಟು ವಿಸ್ತಾರವಾಗಿ ಶೃಂಗಾರವನ್ನು ಚಿತ್ರಿಸಿರುವುದು ಅನುಚಿತವೆನಿಸಬಹುದು. ಪ್ರಿಯದರ್ಶಿಕಾ, ರತ್ನಾವಳೀ ನಾಟಕೆಗಳನ್ನು ಬರೆದ ಕವಿಗೆ ಶೃಂಗಾರವನ್ನು ಸಂಪೂರ್ಣವಾಗಿ ಕೈಬಿಡುವುದು ಸುಲಭವಲ್ಲ. ಅವನ ಕಾಲದಲ್ಲಿ ಶಾಂತಿ, ಸುಭಿಕ್ಷಗಳು ತುಂಬಿದ್ದುದರಿಂದ ಪ್ರಜೆಗಳು ನಿಶ್ಚಿಂತರೂ, ಸುಖಾಸಕ್ತರೂ, ವಿನೋದಪರರೂ ಆಗಿದ್ದರು. ಬಾಣ, ಸುಬಂಧುಗಳ ಶೃಂಗಾರ ಕಾವ್ಯಗಳಿಂದ ಲೋಕವನ್ನು ರಂಜಿಸಿದ್ದರು. ಆದ್ದರಿಂದ ಸನ್ನಿವೇಶವನ್ನೂ ಪ್ರೇಕ್ಷಕರ ಅಭಿರುಚಿಯನ್ನೂ ಗಮನಿಸಿ ನಾಟಕವನ್ನು ಬರೆಯಬೇಕಷ್ಟೆ? ಅಲ್ಲದೆ ಇಲ್ಲಿನ ಶೃಂಗಾರ, ಹಾಸ್ಯಗಳೂ ಮುಂದೆ ಬರುವ ದಾನವೀರರಸಕ್ಕೂ, ಜೀಮೂತವಾಹನನ ಪಾತ್ರಕ್ಕೂ ಪೋಷಕವಾಗಿವೆ.

ಜೀಮೂತವಾಹನನು ಯೌವನವನ್ನು ನಿಂದ್ಯವೆಂದೂ, ರಾಜ್ಯಸುಖವನ್ನು ಕ್ಷಣಿಕವೆಂದೂ ಭಾವಿಸಿ ಕಾಡಿಗೆ ಹೋಗಿ ತಂದೆ ತಾಯಿಗಳ ಸೇವೆಯಲ್ಲಿ ಸುಖವನ್ನು ಕಾಣುತ್ತಿದ್ದನು. ಲೋಕಹಿತದಲ್ಲಿ ಅವನಿಗೆ ಆಸಕ್ತಿ ಇರಲಿಲ್ಲವೆಂದಾಗಲೀ, ಅವನು ರಾಜ್ಯಭಾರಮಾಡಲು ಹೆದರಿದನೆಂದಾಗಲೀ ತಿಳಿಯಬಾರದು, ಅವನು ಮಾಡಬೇಕಾದುದನ್ನೆಲ್ಲಾ ಮಾಡಿ ಮುಗಿಸಿದ್ದನು :—

ನ್ಯಾಯ್ಯೇ ವರ್ತ್ಮನಿ ಯೋಜಿತಾಃ ಪ್ರಕೃತಯಃ ಸಂತಃ ಸುಸಂಸ್ಥಾಪಿತಾಃ
ನೀತೋ ಬಂಧುಜನಸ್ತಥಾ ಸಮತಾಂ ರಾಜ್ಯೇಚ ರಕ್ಷಾ ಕೃತಾ ।
ದತ್ತೋ ದತ್ತಮನೋರಥಾಧಿಕಫಲಃ ಕಲ್ಪದ್ರುಮೋಽಪ್ಯರ್ಥಿನೇ
ಕಿಂ ಕರ್ತವ್ಯಮತಃ ಪರಂ ವದ ಸಖೇ ಯತ್ತೇ ಸ್ಥಿತಂ ಚೇತಸಿ ॥

ಸ್ವಾರ್ಥರಹಿತನೂ, ವಿಷಯ ವಿಮುಖನೂ ಆಗಿದ್ದರೂ ಅವನು ಮಲಯವತಿಯನ್ನು ಕಂಡು ದುರ್ನಿವಾರವಾಗಿ ಮೋಹಗೊಂಡನು ; ಅವಳನ್ನು ಪಡೆಯಲು ಹಂಬಲಿಸಿದನು.



ಮದುವೆಯನಂತರ ಪ್ರಿಯತಮೆಯನ್ನು ಕರೆದುಕೊಂಡು ವಿಹಾರಕ್ಕಾಗಿ ಕುಸುಮಾಕರೋದ್ಯಾನಕ್ಕೆ ಹೋದನು ; ಮಿತ್ರಾವಸು ಕಾರ್ಯಾಂತರದಿಂದ ಕಾಣಲು ಬಂದಾಗ ಬಹು ಸುಲಭವಾಗಿ ಮೋಹದ ಹೆಂಡತಿಯನ್ನು ಬಿಟ್ಟುಬಂದನು ; ಮದುವೆಯಾಗಿ ಹತ್ತು ದಿನಗಳು ಕಳೆಯದಿರುವಾಗಲೇ ಯುವತಿಯೂ, ಸುಂದರಿಯೂ ಆದ ಹೆಂಡತಿಯನ್ನೂ ಸ್ಮರಿಸದೆ ಪರೋಪಕಾರಬುದ್ಧಿಯಿಂದ ಸಾಮಾನ್ಯ ನಾಗನೊಬ್ಬನ ರಕ್ಷಣೆಗಾಗಿ ತನ್ನನ್ನು ಗರುಡನಿಗೆ ಆಹಾರವನ್ನಾಗಿ ಒಪ್ಪಿಸಲು ಮುಂದಾದನು. ಮಲಯಚಂದನರಸವನ್ನು ಹಚ್ಚಿಕೊಂಡ ಮಲಯವತಿಗಿಂತಲೂ ವಧ್ಯಶಿಲೆಯು ಅವನಿಗೆ ಹೆಚ್ಚು ಸುಖಾವಹವಾಗಿ ತೋರಿತು. ಶಂಖಚೂಡನು ವಧ್ಯ ಚಿಯಾಹ್ನೆಗಿ ರಕ್ತ ವಸ್ತ್ರವನ್ನು ಧರಿಸಬೇಕಾಗಿದ್ದಿತು. ಕಂಚುಕಿಯು ತನಗೆ ರಕ್ತವರ್ಣದ ಸಂಕಲಿಕೆ ಪಂಚೆಯನ್ನು ತಂದು ಕೊಟ್ಟಾಗ ಅವನು ಮಲಯವತಿಯನ್ನು ಮದುವೆಯಾದುದು ಈಗ ಸಾರ್ಥಕವಾಯಿತು' ಎಂದು ತಿಳಿದನು. ಶಂಖಚೂಡನು ಗೋಕರ್ಣೇಶ್ವರನ ದರ್ಶನ ಪಡೆದುಬರಲು ಹೋದಾಗ ಜೀಮೂತವಾಹನನು ಅವನಿಗೆ ಬದಲಾಗಿ ತಾನು ವಧ್ಯಶಿಲೆಯಲ್ಲಿ ಕುಳಿತನು. ಗರುಡನು ಅವನನ್ನು ಮಲಯ ಪರ್ವತದ ಕೋಡುಗಲ್ಲಿಗೆ ಎತ್ತಿಕೊಂಡು ಹೋಗಿ ಮಾಂಸಖಂಡವನ್ನು ಕಿತ್ತು ತಿನ್ನುತ್ತಿದ್ದರೆ ಅವನಿಗೆ ವ್ಯಥೆಗೆ ಬದಲಾಗಿ ಹರ್ಷವಾಗುತ್ತದೆ. ಅವನು ಕೊರಗಲಿಲ್ಲ, ನರಳಲಿಲ್ಲ. ಇವನು ಯಾವನೋ ಮಹಾಸತ್ವನಿರಬೇಕೆಂದು ಗರುಡನು ಆಶ್ಚರ್ಯದಿಂದ ತಿನ್ನುವುದನ್ನು ನಿಲ್ಲಿಸಿದಾಗ :—

ಶಿರಾಮುಖೈಃ ಸ್ಯಂದತ ಏವ ರಕ್ತ—
ಮದ್ಯಾಪಿ ದೇಹೇ ಮಮ ಮಾಂಸಮಸ್ತಿ ।
ತೃಪ್ತಿಂ ನ ಪಶ್ಯಾಮಿ ಚ ತೇ ಮಹಾತ್ಮನ್
ಕಿಂ ಭಕ್ಷಣಾತ್ತ್ವಂ ವಿರತೋ ಗರುತ್ಮನ್ ॥

ಎಂದು ಕೇಳಿದ ಧೀರ.

ಅವನು ಧೈರ್ಯಾದಿಗುಣಗಳ ಬೀಡು —

ನಿರಾಧಾರಂ ಧೈರ್ಯಂ ಕಮಿವ ಶರಣಂ ಯಾತು ವಿನಯಃ
ಕ್ಷಮಃ ಕ್ಷಾಂತಿಂ ವೋಢುಂ ಕ ಇಹ ವಿರತಾ ದಾನಪರತಾ ।
ಹತಂ ಸತ್ಯಂ ಸತ್ಯಂ ವ್ರಜತು ಚ ಕೃಪಾ ಕ್ವಾದ್ಯ ಕೃಪಣಾ
ಜಗಜ್ಜಾತಂ ಶೂನ್ಯಂ ತ್ವಯಿ ತನಯ ಲೋಕಾಂತರಗತೇ ॥

ಔದಾರ್ಯವು ಜೀಮೂತವಾಹನನ ಹುಟ್ಟುಗುಣ. ಮತಂಗನು ತನ್ನ ರಾಜ್ಯವನ್ನು ಆಕ್ರಮಿಸಿಕೊಂಡಾಗ ಅವನಿಗೆ ಸಂತೋಷವಾಯಿತು. ಸಂತೋಷವಾದುದು ರಾಜ್ಯದ ಭಾರತಪ್ಪಿದುದರಿಂದಲ್ಲ; ಆಸೆ ಪಟ್ಟವನಿಗೆ ಅದು ದೊರೆತುದರಿಂದ, ದಿನಂಪ್ರತಿ ಒಂದೊಂದು ಸರ್ಪವನ್ನು ಒಪ್ಪಿಸುವುದಾಗಿ ಗರುಡನೊಡನೆ ಕರಾರುಮಾಡಿಕೊಂಡ ನಾಗರಾಜನಾದ ಆದಿಶೇಷನಿಗೆ "ಅವನಿಗೆ ಬದಲಾಗಿ ನನ್ನನ್ನು ತೆಗೆದುಕೋ'' ಎಂದು ಹೇಳಲು ಒಂದು ನಾಲಿಗೆ ಇಲ್ಲವಾಯಿತಲ್ಲಾ ; ಅವನಿಗೆ ಸಾವಿರ ನಾಲಗೆಗಳಿದ್ದೇನು ಫಲ? ಎಂದು ಆಕ್ಷೇಪಿಸಿದನು.

ಜೀಮೂತವಾಹನನ ತಂದೆ, ತಾಯಿ. ಹೆಂಡತಿ ಮೊದಲಾದವರು ಬೆಂಕಿಗೆ ಬೀಳಲು ಸಿದ್ಧರಾದಾಗ ಗೌರಿಯು ಪ್ರತ್ಯಕ್ಷಳಾಗಿ ಅವನನ್ನು ಬದುಕಿಸಿದಳು : ಗರುಡನು ಸ್ವರ್ಗದಿಂದ ಅಮೃತವನ್ನು ಸುರಿಸಿ ಸಕಲ ನಾಗಗಳನ್ನೂ ಬದುಕಿಸಿದನು : ಇನ್ನು ಮುಂದೆ ನಾಗ ಹಿಂಸೆಯು ನಿಂತಿತು.

ಪ್ರಿಯದರ್ಶಿಕೆ, ರತ್ನಾವಳಿಯರಂತೆಯೇ ಮಲಯವತಿಯ ಪ್ರಣಯ ವೃತಾಂತ್ತವೂ ಬೆಳೆದಿದೆ. ನಾಗಾನಂದದಲ್ಲಿ ನಾಯಕ ನಾಯಿಕೆಯರು ಪರಸ್ಪರ ಅನುರಕ್ತರಾಗುತ್ತಾರೆ; ತಪ್ಪು ಕಲ್ಪನೆಯ ಫಲವಾಗಿ ನಿರಾಶೆಗೊಂಡ ಮಲಯವತಿ ಆತ್ಮಹತ್ಯೆಯಲ್ಲಿ ತೊಡಗುತ್ತಾಳೆ: ಜೀಮೂತವಾಹನನೇ ಬಂದು ಅವಳನ್ನು ರಕ್ಷಿಸುತ್ತಾನೆ, ನಂತರ ಮದುವೆಯು ನಡೆಯುತ್ತದೆ. ಮಲಯವತಿಯ ಸೌಂದರ್ಯ ಅಪೂರ್ವವಾದುದು, ಅದು ವಿಷಯ ಸುಖವಿಮುಖನಾದ ಜೀಮೂತವಾಹನನಲ್ಲಿಯೂ ಮೋಹವನ್ನುಂಟುಮಾಡಿತು. ಅವಳು ನೋಡಿದಮೇಲೆ ಮನ್ಮಥನ ಬಾಣ ಪ್ರಯೋಗ ಅನಗತ್ಯ. ನವೋಢಳಾದ ಅವಳ ವಾಮ ವರ್ತನೆಯೂ ಸುಂದರವಾದುದು—

ದೃಷ್ಟಾ ದೃಷ್ಟಿಮಧೋ ದಧಾತಿ ಕುರುತೇ ನಾಲಾಪಮಾಭಾಷಿತಾ
ಶಯ್ಯಾಯಾಂ ಪರಿವೃತ್ಯ ತಿಷ್ಠತಿ ಬಲಾದಾಲಿಂಗಿತಾ ವೇಪತೇ ।
ನಿರ್ಯಾಂತೀಷು ಸಖೀಷು ವಾಸಭವನಾನ್ನಿರ್ಗಂತುಮೇವೇಹತೇ
ಜಾತಾ ವಾಮತಯೈವ ಮೇಽದ್ಯ ಸುತರಾಂ ಪ್ರೀತ್ಯೈನವೋಢಾ ಪ್ರಿಯಾ ॥

ಅವಳ ಪತಿಪ್ರೇಮ ಸ್ಥಿರವಾದುದು, ಪತಿಯು ಸಾಯಲು ಅವಳು ಅನುಮರಣಕ್ಕೂ ಸಿದ್ಧಳಾದಳು. ಅಲ್ಲಿಗೇ ಕಥೆ ಮುಗಿದಿದ್ದರೆ ಕರುಣವು ನಾಟಕದ ಪ್ರಧಾನರಸವಾಗುತ್ತಿದ್ದಿತು. ಕವಿಯು ವಿಟ, ವಿದೂಷಕರ ಮೂಲಕ ತಿಳಿಹಾಸ್ಯವನ್ನೂ ಒದಗಿಸಿದ್ದಾನೆ.

ಭಾಸ, ಕಾಳಿದಾಸರ ಭಾಷೆ, ಶೈಲಿ ವರ್ಣನೆ ಮುಂತಾದುವುಗಳ ಸವಿಯನ್ನು ತಕ್ಕ ಮಟ್ಟಿಗೆ ಹರ್ಷನ ಕೃತಿಗಳಿಂದಲೂ ಪಡೆಯಬಹುದಾಗಿದೆ, ಅದೇ ರೀತಿಯಲ್ಲಿ ಇಲ್ಲಿಯೂ ಓಜಃಪ್ರಸಾದಾದಿಗಳು ರಸಾನುಗುಣವಾಗಿವೆ. ಅನೇಕ ಕಡೆ ಛಂದಸ್ಸು ಅರ್ಥಪೋಷಕವಾಗಿದೆ. ಬಾಣ, ಸಂಬಂಧುಗಳ ಪ್ರಭಾವದಿಂದ ಅಲ್ಲಲ್ಲಿ ವಾಗ್ಜಾಲವೈಚಿತ್ರ್ಯವೂ, ಅಲಂಕಾರ ಪ್ರಿಯಂತೆಯೂ ಕಂಡುಬರುತ್ತವೆ. ಹರ್ಷನ ಭಾಷೆ ಸುಲಭ, ಶೈಲಿ ಸರಳ, ಕ್ಲಿಷ್ಟ ಕೃತಕತೆಗಳಿಲ್ಲ. ಅವನ ನಾಟಕಗಳಲ್ಲಿ ನಗರ, ಅರಮನೆ, ಉದ್ಯಾನ, ಜಲಯಂತ್ರ, ಸಂಜೆ, ಮಧ್ಯಾಹ್ನ, ಸ್ನಾನ ಸಮಯ, ವನ, ಆಶ್ರಮ, ಪರ್ವತ, ಯುದ್ಧ ಮುಂತಾದವುಗಳ ವರ್ಣನೆಗಳು ಮನೋಜ್ಞವಾಗಿವೆ. ಇವುಗಳಲ್ಲಿ ಸಹಜವಾದುವೂ. ಕವಿಸಮಯಾನುಸಾರಿಯಾದವೂ ಇವೆ. ಲಾಕ್ಷಣಿಕರು ತಮ್ಮ ಲಕ್ಷಣಗಳಿಗೆ ನಾಗಾನಂದದಿಂದ ಅನೇಕ ಉದಾಹರಣೆಗಳನ್ನು ಆರಿಸಿಕೊಂಡಿದ್ದಾರೆ. ಕವಿಗಳ ಪಂಕ್ತಿಯಲ್ಲಿ ಹರ್ಷನಿಗೆ ಗಣ್ಯಸ್ಥಾನ ದೊರೆತಿದೆ. ಜಯದೇವನು "ಹರ್ಷೋ ಹರ್ಷೋ ಹೃದಯವಸತಿಃ" ಎಂದು ಅವನನ್ನು ಕೊಂಡಾಡಿದ್ದಾನೆ.



ಪ್ರೇಕ್ಷಾಗ್ರಹದ ವೈಭವ (ಪ್ರಿಯದರ್ಶಿಕಾ) :

ಆಭಾತಿ ರತ್ನಶತಶೋಭಿತಶಾತಕುಂಭ
ಸ್ತಂಭಾವಸಕ್ತ ಪೃಥುಮೌಕ್ತಿಕದಾಮರಮ್ಯಂ ।
ಅಧ್ಯಾಸಿತಂ ಯುವತಿಭಿರ್ವಿಜಿತಾಪ್ಸರೋಭಿಃ
ಪ್ರೇಕ್ಷಾಗೃಹಂ ಸುರವಿಮಾನಸಮಾನಮೇತತ್ ॥

ಸಾಗರಿಕೆಯ ಸೌಂದರ್ಯ (ರತ್ನಾವಳಿ) :

ವಿಧಾಯಪರ್ವಪೂರ್ಣೇಂದುಮಸ್ಯಾ ಮುಖಭೂದ್ಭವಂ ।
ಧಾತಾ ನಿಜಾಸನಾಂಭೋಜವಿನಿಮೀಲನದುಃಸ್ಥಿತಃ ॥

ಚಂದ್ರೋದಯ ವ್ಯರ್ಥ (ರತ್ನಾವಳಿ) :

ಕಿಂ ಪದ್ಮಸ್ಯ ರುಚಿಂ ನ ಹಂತಿ ನಯನಾನಂದಂ ವಿಧತ್ತೇ ನ ಕಿಂ
ವೃದ್ಧಿಂ ವಾ ಝಷಕೇತನಸ್ಯ ಕುರುತೇ ನಾಲೋಕಮಾತ್ರೇಣ ಕಿಂ ।
ವಕ್ತ್ರೇಂದೌ ತವ ಸತ್ಯಯಂ ಯದಪರಃ ಶೀತಾಂಶುರುಜ್ಜೃಂಭತೇ
ದರ್ಪಸ್ಯಾದಮೃತೇನ ಚೇದಿಹ ತದಪ್ಯಸ್ತ್ಯೇವ ಬಿಂಬಾಧರೇ ॥

ಮಿತ್ರಾವಸುವಿನ ಈ ಭರವಸೆಯ ಮಾತಿನಲ್ಲಿ ಶೌರ್ಯ, ಉತ್ಸಾಹಗಳು ತುಂಬಿ ತುಳುಕುತ್ತಿವೆ.

(ನಾಗಾನಂದ) :

ಏಕೇನಾಪಿ ಹಿ ಮಯಾ ರಭಸಾವಕೃಷ್ಟ–
ನಿಸ್ತ್ರಿಂಶದೀಧಿತಿಸಟಾಭರಭಾಸುರೇಣ।
ಆದ್ರೇರ್ವಿಪತ್ಯ ಹರಿಣೇವ ಮಾತಂಗಜೇಂದ್ರ–
ಮಾಜಾ ಮತಂಗಹತಕಂ ಹತಮೇವ ವಿದ್ಧಿ ॥

ತಪೋವನದ ವರ್ಣನೆ (ನಾಗಾನಂದ) :

ವಾಸೋರ್ಥಂ ದಯಯೇವ ನಾತಿಪೃಥವಃ ಕೃತ್ತಾಸ್ತರೂಣಾಂ ತ್ವಚೋ
ಭಗ್ನಾನೇಕಜರತ್ಕಮಂಡಲು ನಭಃ ಸ್ವಚ್ಛಂ ಪಯೋ ನೈರ್ಝರಂ ।
ದೃಶ್ಯಂತೇ ತ್ರುಟಿತೋಜ್ಝಿತಾಶ್ಚ ವಟುಭಿರ್ಮೌಂಜ್ಯಃ ಕ್ವಚಿನ್ಮೇಖಲಾ
ನಿತ್ಯಾಕರ್ಣನಯಾ ಶುಕೇನ ಚ ಪದಂ ಸಾಮ್ನಾಮಿದಂ ಪಠ್ಯತೇ ॥

ಗದ್ಯ (ನಾಗಾನಂದ) :

ಅಹೋನು ಖಲು ಮುದಿತಮುನಿಜನಪ್ರವಿಚಾರ್ಯಮಾ–
ಣಸಂದಿಗ್ಧ ವೇದವಾಕ್ಯವಿಸ್ತರಸ್ಯ ಪಠದ್ಬಹುವಟುಜನಚ್ಛಿದ್ಯಮಾನಾದ್ರಾರ್ದ್ರ–
ಸಮಿಧಸ್ತಾಪಸಕುಮಾರಿಕಾಪೂರ್ಯಮಾಣಬಾಲವೃಕ್ಷಾಲವಾಲಸ್ಯ ಪ್ರಶಾಂತರ
ಮಣೀಯತಾ ತಪೋವನಸ್ಯ ।

ಹರ್ಷನು ಬಹಳಮಟ್ಟಿಗೆ ದೊಡ್ಡವೃತ್ತಗಳನ್ನು ಬಳಸಿದ್ದಾನೆ. ಶಾರ್ದೂಲವಿಕ್ರೀಡಿತವು ಅವನಿಗೆ ಹೆಚ್ಚು ಪ್ರಿಯವಾದುದು.[1] ಸ್ರಗ್ಧರಾ, ಆರ್ಯಾ, ಮಾಲಿನೀ ಮುಂತಾದ ಛಂದಸ್ಸುಗಳನ್ನೂ ಕವಿಯು ಪ್ರಯೋಗಿಸಿದ್ದಾನೆ. 'ನಖಲು ನಖಲು ಮುಗ್ಧೇ ಸಾಹಸಂ ಕಾರ್ಯಮೀದೃಕ್' ನಾಗಾನಂದದ ಈ ಮಾಲಿನೀ ಪ್ರಯೋಗವು 'ನಖಲು ನಖಲು ಬಾಣಃ ಸನ್ನಿಪಾತ್ಯೋಯಮಸ್ಮಿನ್' ಎಂಬ ಶಾಕುಂತಲದ ಮಾಲಿನಿಯಂತೆ 'ಬೇಡ ಬೇಡ ನಿಲ್ಲು' ಎಂದು ತ್ವರೆಯನ್ನು ಸೂಚಿಸಲು ಸಮುಚಿತವಾಗಿದೆ.

1 ಪ್ರಿಯದರ್ಶಿಕಾ—20, ರತ್ನಾವಳಿ— 23, ನಾಗಾನಂದ—39 ಸಲ ಬಂದಿದೆ.

# ಭವಭೂತಿ

## (ಕ್ರಿ. ಶ. ಸು. 700)

ಭವಭೂತಿಯು ಮೂರು ನಾಟಕಗಳನ್ನು ಬರೆದಿದ್ದಾನೆ : ಅವುಗಳ ಪ್ರಸ್ತಾವನೆಯಿಂದ[1] ಅವನ ವಿಚಾರವಾಗಿ ಈ ಅಂಶಗಳು ತಿಳಿದು ಬರುತ್ತವೆ :—

ಭವಭೂತಿಯ ಹೆಸರು ಶ್ರೀಕಂಠ, ಅವನ ತಂದೆ ನೀಲಕಂಠ, ತಾಯಿ ಜತುಕರ್ಣೀ, ತಾತ ಭಟ್ಟಗೋಪಾಲ. ಅವರದು ತೈತ್ತಿರೀಯ ಶಾಖೆ ; ಕಾಶ್ಯಪಗೋತ್ರ ; ಉದುಂಬರವಂಶ. ಈ ವಂಶದವರು. ಶ್ರೋತ್ರಿಯರೂ, ಸೋಮಯಾಜಿಗಳೂ ಆಗಿದ್ದರು. ಈ ವಂಶದಲ್ಲಿ ಭವಭೂತಿಗಿಂತ ಐದು ತಲೆ ಹಿಂದೆ ಇದ್ದವರೊಬ್ಬರು[2] ವಾಜಪೇಯ ಯಾಗವಮಾಡಿದವರೂ, ಮಹಾಕವಿಗಳೂ ಆಗಿದ್ದರು. 'ಜ್ಞಾನನಿಧಿ' ಯು ಅವನ ಗುರು. ನಟರು ಅವನ ಸ್ನೇಹಿತರಾಗಿದ್ದರು. ದಕ್ಷಿಣಾಪಥದಲ್ಲಿರುವ ಪದ್ಮಪುರ[3] ಅವನ ಊರು. ಅವನು ವ್ಯಾಕರಣ,

---

1. ಅಸ್ತಿ ದಕ್ಷಿಣಾಪಥೇ ಪದ್ಮಪುರಂ ನಾಮ ನಗರಂ । ತತ್ರಕೇಚಿತ್ತೈತ್ತಿರೀಯಾಃ ಕಾಶ್ಯಪಾಶ್ಚ ರಣಗುರವಃ ಪಂಕ್ತಿಪಾವನಾಃ ಧೃತವ್ರತಾಃ ಸೋಮಪೀಥಿನ ಉದುಂಬರನಾಮಾನೋ ಬ್ರಹ್ಮವಾದಿನಃ ಪ್ರತಿವಸಂತಿ । ತದಾಮುಷ್ಯಾಯಣಸ್ಯ ತತ್ರಭವತೋ ವಾಜಪೇಯ ಯಾಜಿನೋ ಮಹಾಕವೇಃ ಪಂಚಮಃ ಸುಗ್ನಹೀತನಾಮ್ನೋ ಭಟ್ಟ ಗೋಪಾಲಸ್ಯ ಪೌತ್ರಃ ಪವಿತ್ರ ಕೀರ್ತೇರ್ನೀಲಕಂಠಸ್ಯಾತ್ಮ ಸಂಭವಃ ಶ್ರೀಕಂಠಪದಲಾಂಛನಃ ಪದವಾಕ್ಯ ಪ್ರಮಾ ಣಜ್ಞೋ ಭವಭೂತಿರ್ನಾಮ ಜತುಕರ್ಣೀಪುತ್ರಃ ಕವಿರ್ಮಿತ್ರಧೇಯಮಸ್ಮಾ ಕಮ ಭವಂತೋ ವಿದಾಂಕುರ್ವಂತು.

   ಶ್ರೇಷ್ಠಃ ಪರಮಹಂಸಾನಾಂ ಮಹರ್ಷೀಣಾಂ ಯಥಾಂಗಿರಾಃ ।
   ಯಥಾರ್ಥನಾಮಾ ಭಗವಾನ್ಯ ಸ್ಯ ಜ್ಞಾನನಿಧಿರ್ಗುರುಃ ॥ ಮಹಾವೀರಚರಿತ
   ನಿಸರ್ಗಸೌಹೃದೇನ ಭರತೇಷು ವರ್ತಮಾನಃ—ಮಾಲತೀಮಾಧವ

2. ಒಂದು ಹಸ್ತಪ್ರತಿಯಲ್ಲಿ ಇವನ ಹೆಸರು "ಸಿಂಹಭೂತಿ" ಯೆಂದಿದೆ—A·R·K·

3. ಈ ಪದ್ಮಪುರ ಯಾವುದೆಂದು ನಿರ್ಧರವಾಗಿಲ್ಲ. ಮಾಲತೀಮಾಧವದಲ್ಲಿ ಬರುವ ಪದ್ಮಾ ಈ ಪದ್ಮಪುರವೆಂದು ಕೆಲವರು ಊಹಿಸುತ್ತಾರೆ. ಮಾಲತೀಮಾಧವದ ಕೆಲವು ಪ್ರ ಗಳಲ್ಲಿ ಇದು ವಿದರ್ಭದೇಶದಲ್ಲಿದೆಯೆಂದು ಉಕ್ತವಾಗಿದೆ. ಇದನ್ನು ನಾಗಪುರ ಪ್ರಾಂ ದಲ್ಲಿರುವ "ಚಂದ್ರಪುರ" ಅಥವಾ "ಚಾಂಡಾ" ಗ್ರಾಮವಾಗಿರಬೇಕೆಂದು ಡಾ॥ ಭಂಡಾ ರವರೂ, ಮಧ್ಯಪ್ರಾಂತದ ಭಂಡಾರಜಿಲ್ಲೆಯಲ್ಲಿರುವ "ಪದ್ಮಪುರ" ವೆಂದು ಮತ್ತೆ ಕೆಲ ಅಭಿಪ್ರಾಯಪಡುತ್ತಾರೆ.



ನ್ಯಾಯ. ಮೀಮಾಂಸಾ, ವೇದಾಂತಗಳಲ್ಲಿ ಪಂಡಿತನಾಗಿದ್ದನು. ವೇದ, ಸಾಂಖ್ಯ, ಯೋಗ, ಅಲಂಕಾರ, ಅರ್ಥ, ಕಾಮ, ನೀತಿ ಮುಂತಾದ ಶಾಸ್ತ್ರಗಳ ಪರಿಚಯವೂ ಅವನಿಗಿದ್ದಿತು[1].

ಭವಭೂತಿ, ಶ್ರೀಕಂಠ ಇವುಗಳಲ್ಲಿ ತಂದೆ ತಾಯಿಗಳು ಇಟ್ಟ ಹೆಸರು ಯಾವುದು, ಬಂದ ಬಿರುದು ಯಾವುದು ಎಂಬ ವಿಷಯದಲ್ಲಿ ವಿವಾದವಿದೆ. "ಸಾಂಬಾ ಪುನಾತು ಭವಭೂತಿ ಪವಿತ್ರ ಮೂರ್ತಿಃ" ಎಂಬ ಪದ್ಯವನ್ನು ಬರೆದುದಕ್ಕಾಗಿ ಭವಭೂತಿಯೆಂಬುದು ಅವನಿಗೆ ರಾಜನಿಂದ ಬಂದ ಬಿರುದೆಂಬ ಪ್ರತೀತಿ ಇದೆ. ನೀಲಕಂಠ, ಭಟ್ಟಗೋಪಾಲ ಎಂಬ ಅವನ ಪೂರ್ವಿಕರ ಹೆಸರುಗಳಂತೆ ಶ್ರೀಕಂಠ ಎಂಬುದು ಅವನ ಹುಟ್ಟು ಹೆಸರಾಗಿರುವುದು ಸಂಭವವಾಗಿ ತೋರುತ್ತದೆ.

ಮಾಲತಿಮಾಧವದ ಒಂದು ಹಸ್ತಪ್ರತಿಯಲ್ಲಿ ಅದು 'ಭಟ್ಟಕುಮಾರಿಲಶಿಷ್ಯ ವಿರಚಿತೆ' ವೆಂದೂ (ಅಂಕ 3—ಸಮಾಪ್ತಿವಚನ) 'ಉಂಬೇಕಾಚಾರ್ಯ ವಿರಚಿತ'ವೆಂದೂ (ಅಂಕ 6–ಸಮಾಪ್ತಿ ವಚನ), ಕುಮಾರಿಲ ಶಿಷ್ಯನಾದ ಭವಭೂತಿ ವಿರಚಿತವೆಂದೂ (ಕೊನೆಯಲ್ಲಿ) ಉಕ್ತವಾಗಿದೆ. ಇದರಿಂದ ಭವಭೂತಿಯೂ ಕುಮಾರಿಲನ ಶಿಷ್ಯನಾದ ಉಂಬೇಕಾಚಾರ್ಯನೂ ಒಬ್ಬನೇ ಎಂದು ಅರ್ಥವಾಗುತ್ತದೆ. ಮಿಕ್ಕ ಪ್ರತಿಗಳಲ್ಲಿ ಈ ಅಂಶವಿಲ್ಲ. [2]. ಕೇವಲ ಒಂದು ಪ್ರತಿಯ ಆಧಾರದಿಂದ ನಿರ್ಣಯ ಮುಟ್ಟುವುದು ಅಸಮರ್ಪಕವಾಗುತ್ತದೆ. ಭವಭೂತಿಯು ತನ್ನ ಗುರುವನ್ನು ಜ್ಞಾನನಿಧಿಯೆಂದು ಹೇಳಿಕೊಂಡಿದ್ದಾನೆ.[3] ಕವಿಯು ತನ್ನ ನಾಟಕಗಳಲ್ಲಿ ಮತ್ತೆಲ್ಲಿಯೂ ಭಟ್ಟ ಕುಮಾರಿಲನನ್ನು ಹೆಸರಿಸಿಲ್ಲವಾದ್ದರಿಂದ ಇದು ಯೋಚಿಸಬೇಕಾದ ವಿಷಯ. ಕುಮಾರಿಲ, ಭವಭೂತಿಗಳಿಬ್ಬರೂ ಸುಮಾರು ಒಂದೇ ಕಾಲದಲ್ಲಿದ್ದ ದಾಕ್ಷಿಣಾತ್ಯರು. ಇಷ್ಟರಿಂದಲೇ ಒಬ್ಬರು ಮತ್ತೊಬ್ಬರ ಶಿಷ್ಯರೆಂದು ಊಹಿಸುವುದೂ ತರವಲ್ಲ. ಮೂರು ನಾಟಕಗಳಲ್ಲಿಯೂ

---

1. ಯದ್ವೇದಾಧ್ಯಯನಂ ತಥೋಪನಿಷದಾಂ ಸಾಂಖ್ಯಸ್ಯ ಯೋಗಸ್ಯ ಚ
   ಜ್ಞಾನಂ ತತ್ಕಥನೇನ ಕಿಂ ನಹಿ ತತಃ ಕಶ್ಚಿದ್ಗುಣೋ ನಾಟಕೇ ।
   ಯತ್ಪ್ರೌಢಿತ್ವಮುದಾರತಾ ಚ ವಚಸಾಂ ಯಚ್ಚಾರ್ಥತೋ ಗೌರವಂ
   ತಚ್ಚೇದಸ್ತಿ ತತಸ್ತದೇವ ಗಮಕಂ ಪಾಂಡಿತ್ಯವೈದಗ್ಧ್ಯಯೋಃ. ಮಾಲತೀಮಾಧವ ॥
   ತಪಸ್ವೀ ಕಾಂ ಗತೋಽವಸ್ಥಾಮಿತಿ ಸ್ಮೇರಾನನಾವಿವ ।
   ಗಿರಿಜಾಯಾಃ ಸ್ತನೌ ವಂದೇ ಭವಭೂತಿಸಿತಾನನೌ ॥

ಈ ಶ್ಲೋಕದಿಂದ ಲೋಕ ಅವನನ್ನು ಭವಭೂತಿಯೆಂದು ಕರೆದುದಾಗಿ ಕೆಲವರು ಹೇಳುತ್ತಾರೆ.

ಉಂಬೇಕನು ಕುಮಾರಿಲಭಟ್ಟವಿರಚಿತವಾದ ಶ್ಲೋಕವಾರ್ತಿಕದ ಟೀಕಾಕಾರನಾಗಿ ಪ್ರಸಿದ್ಧನಾಗಿದ್ದಾನೆ. 'ತತ್ವಪ್ರದೀಪಿಕಾ' ವೇದಾಂತ ಗ್ರಂಥದ ವ್ಯಾಖ್ಯಾಕಾರನು ಭವಭೂತಿ ಮತ್ತು ಉಂಬೇಕರಲ್ಲಿ ತಾದಾತ್ಮ್ಯವನ್ನು ಹೇಳಿದ್ದಾನೆ. ಪಿ.ವಿ. ಕಾಣೆಯವರು ಭವಭೂತಿಯೂ ಉಂಬೇಕನೂ ಒಬ್ಬನೇ ಎಂದು ಅಭಿಪ್ರಾಯ ಪಡುತ್ತಾರೆ. ಈ ಭವಭೂತಿಯು ಯಾರೋ ಯೋಚಿಸಬೇಕಾಗುತ್ತದೆ.

ಇದು ಗುರುವಿನ ಇಟ್ಟ ಹೆಸರೋ, ಬಂದ ಉಪಾಧಿಯೋ ನಿರ್ಣಯವಿಲ್ಲ. ಭಟ್ಟಕುಮಾರಿಲನಿಗೆ ಜ್ಞಾನನಿಧಿಯೆಂಬ ಉಪಾಧಿ ಇದ್ದಿರಬಹುದು. ಅಥವಾ ಜ್ಞಾನನಿಧಿ ಭಟ್ಟಕುಮಾರಿಲಬ್ಬರೂ ಭವಭೂತಿಯ ಗುರುಗಳಾಗಿದ್ದಿರಬಹುದು—ಇಂತಹ ಸಂದೇಹಗಳು ಸಹಜವಾಗಿ ಮೂಡುತ್ತವೆ.

ನಾಟಕಾಭಿನಯದ ಸಮಯವನ್ನು 'ಕಾಲಪ್ರಿಯನಾಥಸ್ಯ ಯಾತ್ರಾಯಾಂ' ಎಂದು ಹೇಳಲಾಗಿದೆ. ಈ ಕಾಲಪ್ರಿಯಾನಾಥನ ಗುಡಿಯು ಯಾವುದೆಂಬುದೂ ನಿಶ್ಚಿತವಾಗಿಲ್ಲ.[1]

ಕಾಳಿದಾಸನ ಸಹಾಯದಿಂದ ಭವಭೂತಿಯು ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲಿ ಒಬ್ಬನಾಗಿದ್ದನೆಂದು ಒಂದು ದಂತಕಥೆ ಇದೆ. ಕಾಳಿದಾಸನು ಭವಭೂತಿಯ ಉತ್ತರರಾಮ ಚರಿತವನ್ನು ಕೇಳಿ ಮೆಚ್ಚಿಕೊಂಡು ಅದರ ಒಂದು ಪದ್ಯದಲ್ಲಿದ್ದ 'ರಾತ್ರಿರೇವಂ ವ್ಯರಂಸೀತ್' ಎಂಬುದನ್ನು 'ರಾತ್ರಿರೇವವ್ಯರಂಸೀತ್' ಎಂದು ತಿದ್ದಿದರೆ ಅವನನ್ನು ರಾಜಾಸ್ಥಾನಕ್ಕೆ ಕರೆದು ಕೊಂಡು ಹೋಗುವುದಾಗಿ ಹೇಳಿದನೆಂದೂ, ಭವಭೂತಿಯು ಒಪ್ಪಿ ಅದನ್ನು ತಿದ್ದಿದ್ದರಿಂದ ಅವನನ್ನು ಒಡ್ಡೋಲಗಕ್ಕೆ ಕರೆದುಕೊಂಡು ಹೋಗಿ ನವಮಣಿಗಳಲ್ಲೊಬ್ಬನನ್ನಾಗಿ ಮಾಡಿಸಿದ ನೆಂದೂ ಈ ಕಥೆಯು ತಿಳಿಸುತ್ತದೆ. ಇದು ರುಚಿಭೇದವನ್ನವಲಂಬಿಸಿ ಕಲ್ಪಿತವಾದ ಕಥೆಯೇ ಹೊರತು ಕಾಳಿದಾಸ ಮತ್ತು ಭವಭೂತಿಗಳ ಸಮಕಾಲೀನತೆಗೆ ಪ್ರಮಾಣವಲ್ಲ.

ರಾಜಶೇಖರನು (ಕ್ರಿ. ಶ. ಸು. 900) ತನ್ನನ್ನು ಭವಭೂತಿಯಂತೆ ವಾಲ್ಮೀಕಿಯ ಅಪರಾವತಾರವೆಂದು ಹೇಳಿಕೊಂಡಿದ್ದಾನೆ.[2] ವಾಮನನು (ಕ್ರಿ. ಶ. ಸು. 800) ಮಹಾವೀರ ಚರಿತದಿಂದ ಉದಾಹರಿಸಿದ್ದಾನೆ.[3] ಕಲ್ಹಣನು ಭವಭೂತಿ ವಾಕ್ಪತಿರಾಜರು ಯಶೋವರ್ಮನ ಆಸ್ಥಾನದಲ್ಲಿದ್ದರೆಂದು ಹೇಳಿದ್ದಾನೆ.[4] ಯಶೋವರ್ಮನಕಾಲ ಸುಮಾರು 736. ವಾಕ್ಪತಿ ರಾಜನು ತನ್ನ 'ಗೌಡವಹೋ' ಕಾವ್ಯದಲ್ಲಿ (799) ಭವಭೂತಿಯನ್ನು ಪ್ರಶಂಸಿಸಿದ್ದಾನೆ.[5] ಈ ಪ್ರಶಂಸೆಯಲ್ಲಿರುವ 'ಅದ್ಯಾಪಿ' ಎಂಬ ಪದವನ್ನು ನೋಡಿದರೆ ಭವಭೂತಿಯು ಕ್ರಿ. ಶ. 736ಕ್ಕಿಂತ ಸ್ವಲ್ಪ ಹಿಂದೆಯಾದರೂ ಇದ್ದಿರಬೇಕೆಂದು ತೋರುತ್ತದೆ. ಆದ್ದರಿಂದ ಭವಭೂತಿಯ ಕಾಲವನ್ನು ಕ್ರಿ. ಶ. ಸುಮಾರು 700 ಎಂದು ಹೇಳಬಹುದು.

ಭವಭೂತಿಯ ಆತ್ಮವಿಶ್ವಾಸ ಅಪಾರವಾದುದು. ಕಾಳಿದಾಸನಲ್ಲಿ ವಿನಯವಿದ್ದರೆ ಇವನಲ್ಲಿ ಒಂದು ಬಗೆಯ ಔದ್ಧತ್ಯವಿದೆ—

> ಯಂ ಬ್ರಹ್ಮಾಣಮಿಯಂ ದೇವೀ ವಾಗ್ವಶ್ಯೇವಾನ್ವವರ್ತತ ।
> ಉತ್ತರಂ ರಾಮಚರಿತಂ ತತ್ಪ್ರಣೀತಂ ಪ್ರಯೋಕ್ಷ್ಯತೇ ॥

---

1. ಇದು ಉಜ್ಜಯಿನಿಯ ಪ್ರಸಿದ್ಧವಾದ ಮಹಾಕಾಲನ ಗುಡಿಯಾಗಿರಬಹುದು ಅಥವಾ ಯಮುನಾ ತೀರದಲ್ಲಿರುವ 'ಕಾಲ್ಪಿ' ಯಾಗಿರಬಹುದು.
2. ಬಭೂವ ವಲ್ಮೀಕಭವಃ ಪುರಾಕವಿಸ್ತತಃ ಪ್ರಪೇದೇ ಭುವಿ ಭರ್ತೃಮೇಂಠತಾಂ ।
   ಸ್ಥಿತಃ ಪುನರ್ಯೋ ಭವಭೂತಿ ರೇಖಯಾ ಸ ವರ್ತತೇ ಸಂಪ್ರತಿ ರಾಜಶೇಖರಃ ॥
   ಬಾಲರಾಮಾಯಣ I-16.
3. ಮಹಾವೀರ ಚರಿತ್ರ I—54
4. ಕವಿವಾಕ್ಪತಿರಾಜ ಶ್ರೀ ಭವಭೂತ್ಯಾದಿ ಸೇವಿತಃ ।
   ಜಿತೋ ಯಯೌ ಯಶೋವರ್ಮಾ ತದ್ಗುಣಸ್ತುತಿ ವಂದಿತಾಂ ॥ —ರಾಜತರಂಗಿಣಿ.
5. ಭವಭೂಇ ಜಲಹಿಣಿಗ್ಗದ ಕಬ್ಬಾಮಯ ರಸಕಣಾ ಇವ ಪುರಂತಿ ।
   ಜಸ್ಸ ವಿಸೇಸಾ ಅಜ್ಜವಿ ವಿಯಡೇಸು ಕಹಾಣಿ ವೇಸೇಸು ॥



ಎಂದು ಉತ್ತರರಾಮ ಚರಿತದಲ್ಲಿ ಹೇಳಿಕೊಂಡಿದ್ದಾನೆ. ಮಹಾವೀರ ಚರಿತವನ್ನು 'ವಶ್ಯವಾಚಃ ಕವೇರ್ವಾಕ್ಯಂ' ಎಂದಿದ್ದಾನೆ. ಮಾಲತಿ ಮಾಧವದಲ್ಲಿ ತನ್ನನ್ನು ಟೀಕಿಸುವವರನ್ನು ಹೀಗಳೆದಿದ್ದಾನೆ—

> ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
> ಜಾನಂತಿ ತೇ ಕಿಮಪಿ ತಾನ್ಪ್ರತಿ ನೈಷ ಯತ್ನಃ ।
> ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ
> ಕಾಲೋಹ್ಯಯಂ ನಿರವಧಿರ್ವಿಪುಲಾಚ ಪೃಥ್ವೀ ॥

ಭವಭೂತಿಯ ನಾಟಕಗಳ ಪರಿಶೀಲನೆಯಿಂದ ಅವನ ಸಾಂಸಾರಿಕ ಜೀವನವು ಸುಖಮಯ ವಾಗಿದ್ದಿತೆಂದು ಊಹಿಸುತ್ತಾರೆ.

ಭವಭೂತಿಯು 'ಮಹಾವೀರಚರಿತ', 'ಉತ್ತರರಾಮಚರಿತ' ಎಂಬ ಎರಡು ನಾಟಕ ಗಳನ್ನೂ 'ಮಾಲತೀ ಮಾಧವ' ವೆಂಬ ಒಂದು ಪ್ರಕರಣವನ್ನೂ ಬರೆದಿದ್ದಾನೆ. ಮಹಾವೀರ ಚರಿತವು ಮೊದಲನೆಯ ನಾಟಕವೆಂದೂ, ಉತ್ತರರಾಮ ಚರಿತವು ಕೊನೆಯದೆಂದೂ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಶಾರ್ಙ್ಗಧರ ಪದ್ಧತಿ ಮುಂತಾದ ಸುಭಾಷಿತ ಸಂಗ್ರಹ ಗಳಲ್ಲಿ ಭವಭೂತಿಯ ಹೆಸರಿನಲ್ಲಿರುವ ಕೆಲವು ಪದ್ಯಗಳು ಈ ನಾಟಕಗಳಲ್ಲಿ ದೊರೆಯುವುದಿಲ್ಲ. ಆದ್ದರಿಂದ ಭವಭೂತಿಯು ಬೇರೆ ನಾಟಕಗಳನ್ನೋ, ಕಾವ್ಯಗಳನ್ನೋ ಬರೆದಿರಬಹುದು.

ಮಹಾವೀರಚರಿತ :—

ಈ ನಾಟಕದಲ್ಲಿ ಏಳು ಅಂಕಗಳಿವೆ. ಇದರ ಅಂಕ 5, ಪದ್ಯ 46 ರಿಂದ ಮುಂದಕ್ಕೆ ಮತ್ತೊಂದು 'ಸರ್ವತಃ ಪ್ರಚಲಿತಪಾಠ' ವೂ ಇದೆ. ತೋಪರಮಲ್ಲರು ಈ ಪಾಠದಲ್ಲಿಯೂ ವ್ಯತ್ಯಾಸಗಳನ್ನು ಗುರುತಿಸಿ ಅದನ್ನೂ ಮೂರನೆಯ ಪಾಠವೆಂದು ಅಭಿಪ್ರಾಯಪಡುತ್ತಾರೆ. ಭವಭೂತಿಯು ನಾಟಕವನ್ನು ಮುಗಿಸುವ ಮೊದಲು ಕೆಲವರಿಗೆ ಅದನ್ನು ತೋರಿಸಿರಬೇಕು. ಅವರು ಒಳ್ಳೆಯ ಅಭಿಪ್ರಾಯವನ್ನು ಕೊಟ್ಟಿರಲಾರರು. ಆದ್ದರಿಂದ ಮಹಾವೀರಚರಿತವು V–46 ಕ್ಕೆ ನಿಂತು ಹೋಗಿರಬೇಕು. ನಂತರ ಕವಿಯು ಹಿಂದಿನ ಭಾಗವನ್ನು ಅಲ್ಲಲ್ಲಿ ಪರಿಷ್ಕರಿಸಿ ನಾಟಕವನ್ನು ಮುಗಿಸಿರಬೇಕು. ಅಸಮಾಧಾನಗೊಂಡ ಅವನು ತನ್ನ ಕೋಪವನ್ನು ಮಾಲತೀ ಮಾಧವ ಮತ್ತು ಉತ್ತರರಾಮಚರಿತ್ರಗಳ ಪ್ರಸ್ತಾವನೆಯಲ್ಲಿ ಪ್ರಕಟಿಸಿರಬೇಕು. 'ಸರ್ವತಃ ಪ್ರಚಲಿತ ಪಾಠ'ವು ಭವಭೂತಿಯದಿರಲಾರದು. ಈ ಎರಡನೆಯ ಪಾಠವು ಸುಬ್ರಹ್ಮಣ್ಯ ಕವಿಯಿಂದ ರಚಿತವಾದುದೆಂದು ವೀರರಾಘವವ್ಯಾಖ್ಯಾನದಿಂದ ಗೊತ್ತಾಗುತ್ತದೆ. ಕಾಶ್ಮೀರದ ಒಂದು ಪ್ರತಿಯಲ್ಲಿ ಈ ಭಾಗವು ವಿನಾಯಕ ಭಟ್ಟನದೆಂದಿದೆ. ಎಲ್ಲಾ ಕಡೆ ಪ್ರಚಾರದಲ್ಲಿರುವ ಮತ್ತು ತೋದರಮಲ್ಲ, ಮೆಗ್ಡಾನಲರವರಿಂದ ಅಂಗೀಕೃತವಾದ ಪಾಠದ ಕಥಾ ಸಾರಾಂಶ :—

ವಿಶ್ವಾಮಿತ್ರರು ತಮ್ಮ ಯಜ್ಞದ ಸಹಾಯಕ್ಕಾಗಿ ರಾಮಲಕ್ಷ್ಮಣರನ್ನು ಕರೆತರುತ್ತಾರೆ. ಕುಶಧ್ವಜನು ಸೀತೆ, ಊರ್ಮಿಳೆಯರೊಡನೆ ಯಜ್ಞವನ್ನು ನೋಡಲು ಬರುತ್ತಾನೆ. ರಾವಣನ ಪುರೋಹಿತನಾದ ಸರ್ವಮಾಯನು ತನ್ನ ದೊರೆಗೆ ಸೀತೆಯನ್ನು ಕೇಳಲು ಅಲ್ಲಿಗೆ ಬರುತ್ತಾನೆ.

ಅವನ ಪಾರ್ಥನೆ ನೆರವೇರುವುದಿಲ್ಲ. ಕುಶಧ್ವಜ ವಿಶ್ವಾಮಿತ್ರರು ಸೀತೆ, ಊರ್ಮಿಳೆ, ಮಾಂಡವಿ, ಶ್ರುತಕೀರ್ತಿಯನ್ನು ರಾಮ, ಲಕ್ಷ್ಮಣ, ಭರತ, ಶತ್ರುಘ್ನರಿಗೆ ಮಾತುಕೊಡುತ್ತಾರೆ. ಸರ್ವಮಾಯನು ಈ ವೃತ್ತಾಂತವನ್ನು ಮಾಲ್ಯವಂತನಿಗೆ ತಿಳಿಸುತ್ತಾನೆ. ಮಾಲ್ಯವಂತನು ಪರಶುರಾಮನನ್ನು ಉದ್ರೇಕಗೊಳಿಸಿ ರಾಮನನ್ನು ಶಿಕ್ಷಿಸುವಂತೆ ಪ್ರೇರಿಸುತ್ತಾನೆ ಪರುಶುರಾಮನ ಗರ್ವಭಂಗವಾಗುತ್ತದೆ.

ಮಾಲ್ಯವಂತನ ಸೂಚನೆಯಂತೆ ಶೂರ್ಪಣಖಿಯು ಮಂಥರೆಯಲ್ಲಿ ಆವೇಶವಾಗಿ ಕೈಕಯಿಯು ದಶರಥನಿಂದ ಎರಡು ವರಗಳನ್ನು ಕೇಳುವಂತೆ ಮಾಡುತ್ತಾಳೆ. ಅದರಂತೆ ರಾಮನು ಕಾಡಿಗೆ ಹೋಗುತ್ತಾನೆ. ರಾವಣನಿಂದ ಸೀತಾಪಹರಣವಾಗುತ್ತದೆ. ರಾಮನಿಗೆ ಸುಗ್ರೀವಾದಿಗಳ ಸಖ್ಯವೂ, ವಾಲಿ ವಧೆಯೂ ಆಗುತ್ತವೆ.

ಸೀತಾನ್ವೇಷಣ, ಲಂಕಾದಹನ, ರಾವಣಾದಿವಧೆಗಳಾಗುತ್ತವೆ. ರಾಮಪಟ್ಟಾಭಿಷೇಕದಲ್ಲಿ ನಾಟಕ ಮುಗಿಯುತ್ತದೆ.

ಎರಡನೆಯ ಪಾಠದ ಸಾರಾಂಶ :—

ರಾಮನೊಡನೆ ಯುದ್ಧಕ್ಕೆ ಹೊರಟ ವಾಲಿಯು ಅದೃಶ್ಯನಾಗುತ್ತಾನೆ. ರಾಮನು ಮರದ ಮರೆಯಲ್ಲಿ ನಿಂತು ಹೂಡಿದ್ದ ಬಾಣವನ್ನು ಒಂದು ಜಿಂಕೆಯ ಮೇಲೆ ಬಿಡುತ್ತಾನೆ. ಮೃಗ ದೇಹದಿಂದ ಒಬ್ಬ ದಿವ್ಯ ಪುರುಷನು ಬಂದು ತಾನೇ ವಾಲಿಯೆಂದೂ, ಮತಂಗ ಶಾಪದಿಂದ ಜಿಂಕೆಯಾಗಿ ಮರಣ ಹೊಂದಿದುದಾಗಿಯೂ ಹೇಳಿ ಹೊರಟು ಹೋಗುತ್ತಾನೆ. ಅಗಸ್ತ್ಯರು ಬಂದು ರಾಮನಿಗೆ ರಾಕ್ಷಸರ ಮಾಯೆಯನ್ನು ತಿಳಿಯಲು ದಿವ್ಯ ದೃಷ್ಟಿಯನ್ನು ಕೊಡುತ್ತಾರೆ. ಇದರಿಂದ ರಾಮನಿಗೆ ಲಂಕೆಯ ಕಪಟವೆಲ್ಲಾ ಗೊತ್ತಾಗುತ್ತದೆ. ರಾವಣನ ಸಂಹಾರ, ರಾಮ ಪಟ್ಟಾಭಿಷೇಕಗಳು ನಡೆಯುತ್ತವೆ. ವಸಿಷ್ಠ. ವಿಶ್ವಾಮಿತ್ರ, ದಶರಥ, ಇಂದ್ರ, ಬ್ರಹ್ಮ ಮಹೇಶ್ವರ ಮುಂತಾದವರು ಬಂದು ರಾಮನನ್ನು ಹರಸಿ ಅಭಿನಂದಿಸುತ್ತಾರೆ.

ರಾಮಾಯಣ ಕಥೆಯು ವಿಶ್ವಕ್ಕೆ ಚಿರಪರಿಚಿತವಾದುದು. ವಾಲ್ಮೀಕಿ ರಾಮಾಯಣದಲ್ಲಿಯೂ ಮೂರು ನಾಲ್ಕು ಪಾಠಗಳಿವೆ. ಈ ಪಾಠಗಳ ಮುಖ್ಯ ಭಾಗಗಳಲ್ಲಿ ಗಣ್ಯವಾದ ವ್ಯತ್ಯಾಸವಿಲ್ಲ. ರಾಮಾಯಣದ ಕಥೆಯು ಮಹಾಭಾರತ, ಬ್ರಹ್ಮ, ಗರುಡ, ಸ್ಕಾಂದ, ಅಗ್ನಿ. ಕೂರ್ಮ, ಪದ್ಮ ಭಾಗವತ ಮುಂತಾದ ಪುರಾಣಗಳಲ್ಲಿಯೂ ಇದೆ. ಬೌದ್ಧ. ಜೈನ ರಾಮಾಯಣಗಳೂ ಇವೆ. ಭವಭೂತಿಯು ಯಾವ ಮೂಲದಿಂದ ವಸ್ತುವನ್ನು ತೆಗೆದು ಕೊಂಡಿದ್ದಾನೆಂಬುದನ್ನು ನಿರ್ಧರಿಸುವುದು ಕಷ್ಟ. ಭಾಸನಂತೆ ಭವಭೂತಿಯು ವಾಲ್ಮೀಕಿ ರಾಮಾಯಣದಿಂದ ವಸ್ತುವನ್ನು ತೆಗೆದುಕೊಂಡು ತನ್ನ ಪ್ರತಿಭೆಯಿಂದ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿರುವುದು ಸಂಭವವಾಗಿ ತೋರುತ್ತದೆ.

ಬಾಲಕಾಂಡದ ಸ್ವಲ್ಪ ಭಾಗವನ್ನು ಬಿಟ್ಟು ಉಳಿದ ರಾಮಾಯಣದ ಕಥೆಯೆಲ್ಲವೂ ಮಹಾವೀರ ಚರಿತದಲ್ಲಿದೆ. ಕಥಾ ಸಂಗ್ರಹದಲ್ಲಿ ಒಳ್ಳೆಯ ಕೌಶಲವಿದೆ. ವಿಶ್ವಾಮಿತ್ರರ ಆಶ್ರಮದಲ್ಲಿಯೇ



ಧನುರ್ಭಂಗ ನಡೆಯುತ್ತದೆ, ಮಿಥಿಲೆಯಿಂದಲೇ ರಾಮನು ಕಾಡಿಗೆ ಹೋಗುತ್ತಾನೆ. ಹೆಚ್ಚು ಕಥಾಭಾಗ ನೇಪಥ್ಯ ಮತ್ತು ವಿಷ್ಕಂಭಕಾದಿಗಳಲ್ಲಿ ಅಡಕವಾಗಿದೆ. ರಾಮನು ಕಾಡಿಗೆ ಹೋಗಲು ರಾವಣ ಮತ್ತು ಅವನ ಕಡೆಯವರು ಕಾರಣ, ಕೈಕೆಯಾಗಲೀ ಮಂಥರೆಯಾಗಲೀ ಅಲ್ಲ. ಕೈಕೆಗೆ ದುರಾಸೆ ಇಲ್ಲ; ಶೂರ್ಪಣಖಿ ಮಂಥರೆಯನ್ನು ಪ್ರವೇಶಿಸುತ್ತಾಳೆ, ರಾಮನು ತಾನಾಗಿಯೇ ವನವಾಸವನ್ನು ಬಯಸುತ್ತಾನೆ. ಸೀತಾಪಹರಣವು ಜಟಾಯು ಮತ್ತು ಸಂಪಾತಿಗಳ ಸಂಭಾಷಣೆಯಲ್ಲಿ ಬಂದಿರುವುದರಿಂದ ಸೀತೆ ಲಕ್ಷ್ಮಣನನ್ನೂ ಆಕ್ಷೇಪಿಸುವುದು ಬಿಟ್ಟು ಹೋಗಿದೆ. ಹೀಗೆ ಕೈಕೆ, ಸೀತೆ, ಮಂಥರೆ ಪಾತ್ರಗಳು ಉದಾತ್ತಗೊಂಡಿವೆ. ಅಮಾತ್ಯ ರಾಕ್ಷಸನ ಯೋಜನೆಗಳಂತೆ ಮಾಲ್ಯವಂತನ ಯೋಜನೆಗಳು ನಿಷ್ಫಲವಾಗುತ್ತವೆ. ನಾಟಕದ ಕೊನೆಯಲ್ಲಿ ಇಂದ್ರಾದಿಗಳು ಬಂದು ರಾಮನನ್ನು ಕೊಂಡಾಡುತ್ತಾರೆ, ಆದರೆ ಯಾರೂ ಸೀತೆಯನ್ನು ಸ್ಮರಿಸಿಕೊಳ್ಳುವುದಿಲ್ಲ.

ಈ ನಾಟಕದಲ್ಲಿ 'ಮಹಾಪುರುಷ' ನನ್ನೂ 'ವೀರರಸ' ವನ್ನೂ ಚಿತ್ರಿಸುವುದು ಕವಿಯ ಗುರಿ—

ಮಹಾಪುರುಷಸಂರಂಭೋ ಯತ್ರ ಗಂಭೀರಭೀಷಣಃ
ಪ್ರಸನ್ನಕರ್ಕಶಾ ಯತ್ರ ವಿಪುಲಾರ್ಥಾ ಚ ಭಾರತೀ ।
ಅಪ್ರಾಕೃತೇಷು ಪಾತ್ರೇಷು ಯತ್ರ ವೀರಃ ಸ್ಥಿತೋ ರಸಃ
ಭೇದೈಃ ಸೂಕ್ಷ್ಮೈರಭಿವ್ಯಕ್ತೈಃ ಪ್ರತ್ಯಾಧಾರಂ ವಿಭಜ್ಯತೇ ॥

ಶಿವಧನುರ್ಭಂಗವನ್ನು ತಿಳಿದು ಪರಶುರಾಮನು ಶ್ರೀರಾಮನ ಮೇಲೆರಗಿಬರುತ್ತಾನೆ. ಅವನನ್ನು ವಸಿಷ್ಠ, ವಿಶ್ವಾಮಿತ್ರ, ಶತಾನಂದ, ಜನಕ, ದಶರಥರು ತಡೆಗಟ್ಟುತ್ತಾರೆ. ಜಾಮದಗ್ನ್ಯ ಮತ್ತು ಅವರ ಕಲಹ ಉಜ್ವಲವಾಗಿದೆ. ಕೋಪಿಸಿಕೊಂಡ ಶತಾನಂದನು "ಧಿಗಸ್ತು ತತ್ಪಯಾಮಪಿ ತಪೋ ಧಿಗ್ಬ್ರಾಹ್ಮಣ್ಯಂ ಧಿಗಂಗಿರಸಃ ಕುಲಂ" ಎಂದು ಸಿಟ್ಟಿನಿಂದ ನುಡಿಯುತ್ತಾನೆ. ಬ್ರಹ್ಮಜ್ಞಾನಿಯಾದ ಜನಕನು "ತ್ವರಯಂತಿ ಪುನಃ ಕರ್ಮಣಿ ಕರ್ಮುಕಂ ನಃ" ಎಂದು ಉಚ್ಚರಿಸುತ್ತಾನೆ. ವಿಶ್ವಾಮಿತ್ರನು ತನ್ನ ಒಂದು ಕೈಯಿಂ ಶಾಪೋದಕವನ್ನೂ ಮತ್ತೊಂದು ಕೈಯಿಂ ಚಾಪವನ್ನೂ ಹುಡುಕುತ್ತಿವೆಯೆಂದಾಗ ಪರಶುರಾಮನು 'ಉಗ್ರೇಣ ಭೋ ಸ್ತವತಪಸ್ತಪಸಾ ಜ್ವಲಾಮಿ, ಪಕ್ಷಾಂತರೇ ಚ ಸದೃಶಂ ಪರಶುಃ ಕರೋತು' ಎಂದು ದಿಟ್ಟ ಉತ್ತರವನ್ನು ಕೊಡುತ್ತಾನೆ. ಹೀಗೆ ಈ ನಾಟಕದಲ್ಲಿ ವೀರವನ್ನು ಮಾತುಗಳ ಸರಣಿಯಲಿ ಕಾಣುತ್ತೇವೆ. ಮಹಾಪುರುಷನಾದ ಶ್ರೀರಾಮನ ವೀರವೂ ರಂಗದಲ್ಲಿ ದೃಶ್ಯವಾಗಿಲ್ಲ, ಸಂಭಾಷಣೆಗಳು ಅವನ ವೀರವನ್ನು ನುಂಗಿಬಿಟ್ಟಿವೆ. ನಾಟಕದ ನಾಯಕನಾದ ಶ್ರೀರಾಮನು ಗುರುವಿಧೇಯನೂ ಸಾತ್ವಿಕನೂ ಆದ ರಾಜಕುಮಾರ. ಜಟಾಯು, ಸಂಪಾತಿ ಮುಂತಾದವರ ಮಾತಿನಲ್ಲಿ ಔದ್ಧತ್ಯವಿದೆ. ರಂಗದ ಮೇಲೆ ಯುದ್ಧಾದಿಗಳನ್ನು ತರಕೂಡದೆಂಬ ನಿಯಮಕ್ಕೆ ಕವಿಯು ಕಟ್ಟುಬಿದ್ದಿರುವುದರಿಂದ ನಾಟಕವು ಚಂಪುಸ್ವರೂಪವನ್ನು ಅವಲಂಬಿಸಿದೆ. ದೃಶ್ಯವು ಶ್ರವ್ಯವಾದಾಗ ಕಳೆಯನ್ನು ಕಳೆದುಕೊಳ್ಳುತ್ತದೆ, ರಸಕ್ಕೆ ಕುಂದು ಬರುತ್ತದೆ. ನಾಟಕ ಶಬ್ದಾಡಂಬರದಿಂದ ಬಳಲಿಹೋಗಿದೆ; ಯಥೇಚ್ಛವಾಗಿ ವಾಕ್ಚಾತುರ್ಯ ದೊರೆಯುತ್ತದೆ. ಕವಿಯು ಭರತವಾಕ್ಯದಲ್ಲಿ

ತನ್ನ ಗ್ರಂಥವನ್ನು ಕುರಿತು 'ಸಾರಸ್ವತಸಾರ' 'ಸಂಭವಿತೋದಯ' "ಸಮ್ಯಗ್ಭಾವಿತಸಂವಿಧಾನ ತರಲ" "ಸಂಧಾಸುಂದರ" ಎಂದು ಹೇಳಿಕೊಂಡಿರುವ ಮಾತುಗಳು ಆಲೋಚನೀಯ.

ಇದು ಜಾಮದಗ್ನ್ಯನ ಉಗ್ರವೂ ಶಾಂತವೂ ಆದ ಚಿತ್ರ—

ಜ್ಯೋತಿಜ್ವಾಲಾಪ್ರಚಯಜಟಿಲೋ ಭಾತಿ ಕಂಠೇ ಕುಠಾರ
ಸ್ತೂಣೀರೋಂಽಸೇ ವಪುಷಿ ಚ ಜಟಾಚಾಪಚೀರಾಜಿನಾನಿ ॥
ಪಾಣೌ ಬಾಣಃ ಸ್ಫುರತಿ ವಲಯೀಭೂತಲೋಲಾಕ್ಷಸೂತ್ರಂ
ವೇಷಃ ಶೋಭಾಂ ವ್ಯತಿಕರವತೀಮುಗ್ರಶಾಂತಸ್ತನೋತಿ ॥

ಶ್ರೀರಾಮನ ಶೋಭಾತಿಶಯ—

ತ್ರಾತುಂ ಲೋಕಾನಿವ ಪರಿಣತಃ ಕಾಯವಾನಸ್ತ್ರವೇದಃ
ಕ್ಷಾತ್ರೋ ಧರ್ಮಃ ಶ್ರಿತ ಇವ ತನುಂ ಬ್ರಹ್ಮಕೋಶಸ್ಯ ಗುಪ್ತ್ಯೈ ।
ಸಾಮರ್ಥ್ಯಾನಾಮಿವ ಸಮುದಯಃ ಸಂಚಯೋ ವಾ ಗುಣಾನಾಂ
ಪ್ರಾದುರ್ಭೂಯ ಸ್ಥಿತ ಇವ ಜಗತ್ಪುಣ್ಯನಿರ್ಮಾಣರಾಶಿಃ ॥

ಸಹಜ ಪವಿತ್ರವಾದುದಕ್ಕೆ ಬೇರೆ ಶುದ್ಧಿಯಿಲ್ಲ—

ನಿಸರ್ಗತಃ ಪವಿತ್ರಸ್ಯ ಕಿಮನ್ಯತ್ಪಾವನಂ ತವ ।
ತೀರ್ಥೋದಕಂ ಚ ವಹ್ನಿಶ್ಚ ನಾನ್ಯತಃ ಶುದ್ಧಿಮರ್ಹತಃ ॥

ಉತ್ತರ ರಾಮಚರಿತ —

ಇದರಲ್ಲಿ ಏಳು ಅಂಕಗಳಿವೆ. ಉತ್ತರ ಕಾಂಡದಿಂದ ಕಥೆಯನ್ನು ಆಯ್ದುಕೊಂಡಿರುವುದರಿಂದಲೋ, ಪಟ್ಟಾಭಿಷೇಕದ ತರುವಾಯದ ರಾಮಕಥೆ ಇರುವುದರಿಂದಲೋ, ಮಹಾವೀರಚರಿತಕ್ಕೆ ಪೂರಕವಾಗಿರುವುದರಿಂದಲೋ ಈ ನಾಟಕಕ್ಕೆ ಉತ್ತರರಾಮಚರಿತವೆಂಬ ಹೆಸರು ಬಂದಿರಬಹುದು. ಉತ್ಕೃಷ್ಟವಾದ ರಾಮಚರಿತವೆಂಬ ಅಭಿಪ್ರಾಯವಿದ್ದರೂ ಇರಬಹುದು. ಉತ್ತರ ರಾಮಚರಿತವು ಭವಭೂತಿಯ ನಾಟಕಗಳಲ್ಲಿ ಉತ್ತಮವಾದುದು. "ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ" ಇದು ಅದರ ಕಥಾಸಾರಾಂಶ :—

ಪೂರ್ಣಗರ್ಭಿಣಿಯಾಗಿದ್ದ ಸೀತೆಯ ಸಹಾಯಕ್ಕೆ ರಾಮ ಲಕ್ಷ್ಮಣರನ್ನು ಮನೆಯಲ್ಲಿ ಬಿಟ್ಟು ಉಳಿದವರೆಲ್ಲಾ ಋಷ್ಯಶೃಂಗನ ಆಶ್ರಮಕ್ಕೆ ಯಜ್ಞವನ್ನು ನೋಡಲು ಹೋಗುತ್ತಾರೆ. ರಾಮಾಯಣದ ಚಿತ್ರಗಳನ್ನು ನೋಡುತ್ತಿದ್ದ ಸೀತೆ ಆಯಾಸಗೊಂಡು ರಾಮನ ಎದೆಯಮೇಲೆ ತಲೆಯನ್ನಿಟ್ಟು ನಿದ್ರಿಸುತ್ತಾಳೆ. ಗೂಢಚಾರನಾದ ದುರ್ಮುಖನು ಬಂದು ರಾಮನಿಗೆ ಸೀತಾವಿಷಯಕವಾದ ಲೋಕಾಪವಾದವನ್ನು ತಿಳಿಸುತ್ತಾನೆ. ಚಿತ್ರವನ್ನು ನೋಡುತ್ತಿದ್ದಾಗ ಹೇಗೂ ಸೀತೆ ತಪೋವನವನ್ನು ನೋಡಬೇಕೆಂಬ ತನ್ನ ಬಯಕೆಯನ್ನು ಪ್ರಕಟಿಸಿದ್ದಳು. ರಾಮನು ಸೀತೆಯನ್ನು ಕಾಡಿನಲ್ಲಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಅಪ್ಪಣೆ ಮಾಡುತ್ತಾನೆ. ಎಚ್ಚರಗೊಂಡ ಸೀತೆ ಪ್ರಿಯನು ತನ್ನ ಆಸೆಯನ್ನು ಈಡೇರಿಸಿದನೆಂದೇ ಭಾವಿಸಿ ಕಾಡಿಗೆ ಹೋಗುತ್ತಾಳೆ.



ಲವ ಕುಶರು ವಾಲ್ಮೀಕಿಯ ಆಶ್ರಮದಲ್ಲಿ ಬೆಳೆದು ವಿದ್ಯಾಭ್ಯಾಸ ಮಾಡುತ್ತಾರೆ. ರಾಮನು ಅಶ್ವಮೇಧ ಯಾಗವನ್ನು ಕೈಗೊಳ್ಳುತ್ತಾನೆ. ಲಕ್ಷ್ಮಣನ ಮಗ ಚಂದ್ರಕೇತು ಯಜ್ಞಾಶ್ವದ ಹಿಂದೆ ಹೊರಡುತ್ತಾನೆ. ರಾಮನು ದಂಡಕಾರಣ್ಯಕ್ಕೆ ಹೋಗಿ ಶಂಬೂಕನನ್ನು ವಧಿಸಿ, ಜನಸ್ಥಾನದಲ್ಲಿ ಹಿಂದೆ ತಾನು ಸೀತೆಯೊಡನಿದ್ದುದನ್ನು ಸ್ಮರಿಸಿಕೊಂಡು ದುಃಖಿಸುತ್ತಾನೆ.

ಸೀತೆಯು ತನ್ನ ಮಕ್ಕಳ ಹನ್ನೆರಡನೆಯ ಹುಟ್ಟು ಹಬ್ಬಕ್ಕಾಗಿ ಪಾತಾಳಲೋಕದಿಂದ ಗೋದಾವರಿಯ ಹತ್ತಿರಕ್ಕೆ ಬರುತ್ತಾಳೆ. ರಾಮನೂ ವಿಮಾನದಿಂದ ಅಲ್ಲಿಯೇ ಬಂದಿಳಿಯುತ್ತಾನೆ. ವಾಸಂತಿಯು ಹಿಂದಿನ ಘಟನೆಗಳನ್ನು ರಾಮನ ಗಮನಕ್ಕೆ ತರುತ್ತಾಳೆ. ರಾಮನೂ, ಅದೃಶ್ಯಳಾಗಿದ್ದ ಸೀತೆಯೂ ಆ ಪ್ರೇಮವೃತ್ತಾಂತವನ್ನು ಕೇಳಿ ಪದೇ ಪದೇ ಮೂರ್ಛೆಗೊಳ್ಳುತ್ತಾರೆ. ಸೀತೆ ರಾಮನ ಮೈದಡವಿ ಎಚ್ಚರಗೊಳಿಸುತ್ತಾಳೆ. ರಾಮನು ವಿಮಾನ ಹತ್ತಿ ಹೊರಟು ಹೋಗುತ್ತಾನೆ.

ವಾಲ್ಮೀಕಿಯ ಆಶ್ರಮಕ್ಕೆ ಜನಕ, ವಸಿಷ್ಠ, ಕೌಸಲ್ಯಾದಿಗಳು ಬರುತ್ತಾರೆ. ಅವರು ಲವನಲ್ಲಿ ಸೀತಾರಾಮರ ಸಾದೃಶ್ಯವನ್ನು ಕಂಡು ವಿಸ್ಮಯಗೊಳ್ಳುತ್ತಾರೆ. ಆಶ್ರಮಕ್ಕೆ ಬಂದ ಯಜ್ಞಾಶ್ವವನ್ನು ಲವನು ಕಟ್ಟುತ್ತಾನೆ. ಚಂದ್ರಕೇತು ಮತ್ತು ಲವರಿಗೆ ಯುದ್ಧ ಪ್ರಾರಂಭವಾಗುತ್ತದೆ. ಅಷ್ಟರಲ್ಲಿ ರಾಮನೂ ಅಲ್ಲಿಗೆ ಬರುತ್ತಾನೆ. ಭರತಮುನಿಯ ಆಶ್ರಮದಿಂದ ಕುಶನೂ ಬರುತ್ತಾನೆ. ರಾಮನ ಕೋರಿಕೆಯಂತೆ ಯುದ್ಧ ನಿಲ್ಲುತ್ತದೆ. ಆ ಬಾಲಕರಿಂದ ರಾಮಾಯಣದ ಕೆಲವು ಶ್ಲೋಕಗಳನ್ನು ಕೇಳಿ, ಹಿಂದಿನ ವೃತ್ತಾಂತವನ್ನು ಸ್ಮರಿಸಿಕೊಂಡು ರಾಮನು ದುಃಖಿಸುತ್ತಾನೆ. ರಾಮನಿಗೆ ಅವರಲ್ಲಿ ಬಹಳ ವಾತ್ಸಲ್ಯ ಹುಟ್ಟುತ್ತದೆ. ಕೌಸಲ್ಯಾದಿಗಳು ಬಂದು ಮಗನನ್ನು ಕಾಣುತ್ತಾರೆ.

ವಾಲ್ಮೀಕಿಯು ಗಂಗಾತೀರದಲ್ಲಿ ಸೀತಾಪರಿತ್ಯಾಗದಿಂದ ಮುಂದಿನ ಕಥೆಯ ಪ್ರದರ್ಶನಕ್ಕೆ ಏರ್ಪಡಿಸುತ್ತಾನೆ. ಅದನ್ನು ನೋಡಲು ಸರ್ವಲೋಕದವರೂ ಬಂದು ಸೇರುತ್ತಾರೆ. ಅದರಲ್ಲಿ ಸೀತೆ ಗಂಗೆಯಲ್ಲಿ ಬಿದ್ದು ಪ್ರಸವಿಸುತ್ತಾಳೆ. ಗಂಗಾದೇವಿ, ಭೂದೇವಿಯರು ಅವಳನ್ನು ಪಾತಾಳಕ್ಕೆ ಕರೆದುಕೊಂಡು ಹೋಗುತ್ತಾರೆ. ನಂತರ ಅವರು ಅವಳನ್ನು ಕರೆತಂದು ಅರುಂಧತಿಗೆ ಒಪ್ಪಿಸುತ್ತಾರೆ. ಅವಳು ಸೀತೆಯನ್ನು ಮಹಾಜನರೆದುರಿಗೆ ಪವಿತ್ರಳೆಂದು ಸಾರಿ ರಾಮನಿಗೆ ಒಪ್ಪಿಸುತ್ತಾಳೆ. ವಾಲ್ಮೀಕಿಯು ತಂದೆಗೆ ಮಕ್ಕಳನ್ನು ಒಪ್ಪಿಸುತ್ತಾನೆ. ಶಾಂತಾ, ಋಷ್ಯಶೃಂಗ, ಶತ್ರುಘ್ನ ಮುಂತಾದವರೂ ಬಂದು ಸೇರುತ್ತಾರೆ. ಎಲ್ಲ ಬಂಧುಗಳೂ ಒಟ್ಟುಗೂಡಿ ಸುಖಶಾಂತಿಗಳನ್ನು ಪಡೆಯುತ್ತಾರೆ.

ರಾಮಾಯಣದ ಉತ್ತರಕಾಂಡದಲ್ಲಿ ರಾಮಪಟ್ಟಾಭಿಷೇಕವಾದ ಹತ್ತುಸಾವಿರ ವರ್ಷಗಳ ಮೇಲೆ ಗರ್ಭಿಣಿಯಾದ ಸೀತೆ ಋಷ್ಯಾಶ್ರಮಗಳನ್ನು ನೋಡಲು ಇಚ್ಛಿಸುತ್ತಾಳೆ ; ಭದ್ರನು ರಾಮನಿಗೆ ಲೋಕಾಪವಾದವನ್ನು ತಿಳಿಸುತ್ತಾನೆ ; ಲಕ್ಷ್ಮಣನು ಸೀತೆಯನ್ನು ವಾಲ್ಮೀಕಿಯ ಆಶ್ರಮದ ಹತ್ತಿರ ಕಾಡಿನಲ್ಲಿ ಬಿಡುತ್ತಾನೆ ; ಸೀತೆಯು ಆಶ್ರಮದಲ್ಲಿ ಲವ, ಕುಶರನ್ನು ಹಡೆಯುತ್ತಾಳೆ ; ಲವಣಾಸುರನ ಸಂಹಾರಕ್ಕೆ ಹೊರಟಿದ್ದ ಶತ್ರುಘ್ನ ಆ ದಿನದ ರಾತ್ರಿ

ಅಲ್ಲಿಯೇ ತಂಗಿರುತ್ತಾನೆ ; ಅವನು ಲವಣನನ್ನು ಕೊಂದು ಹನ್ನೆರಡು ವರ್ಷಗಳ ನಂತರ ಮತ್ತೆ ವಾಲ್ಮೀಕ್ಯಾಶ್ರಮದ ಮಾರ್ಗವಾಗಿ ಅಯೋಧ್ಯೆಗೆ ಹೋಗಿ, ಅಲ್ಲಿ ಒಂದು ವಾರ ಇದ್ದು ಮತ್ತೆ ಹಿಂದಿರುಗುತ್ತಾನೆ. ರಾಮನು ನೈಮಿಶಾರಣ್ಯದಲ್ಲಿ ಸುವರ್ಣ ಸೀತೆಯನ್ನಿಟ್ಟುಕೊಂಡು ಮಾಡಿದ ಅಶ್ವಮೇಧಯಾಗಕ್ಕೆ ವಾಲ್ಮೀಕಿಯೊಡನೆ ಬಂದಿದ್ದ ಲವಕುಶರು ರಾಮಾಯಣವನ್ನು ಹಾಡುತ್ತಾರೆ. ರಾಮನು ಸೀತೆಯನ್ನು ಕರೆಸಿ ತನ್ನ ಮನಸ್ಸಿಗೆ ನಂಬಿಕೆ ಹುಟ್ಟುವಂತೆ ಶಪಥ ಮಾಡಲು ಹೇಳುತ್ತಾನೆ. ಸೀತೆ ಭೂಮಿಯನ್ನು ಪ್ರಾರ್ಥಿಸಿ, ಬಾಯಿಬಿಟ್ಟ ಭೂಮಿಯಲ್ಲಿ ಅಡಗಿ ಹೋಗುತ್ತಾಳೆ ; ಕೊನೆಗೆ ರಾಮ ಸರಯೂ ನದಿಯಲ್ಲಿ ತನ್ನ ದೇಹವನ್ನು ತ್ಯಜಿಸಿ ವೈಷ್ಣವ ತೇಜಸ್ಸನ್ನು ಪಡೆದು ವೈಕುಂಠಕ್ಕೆ ಹೋಗುತ್ತಾನೆ.

ರಾಮಾಯಣದ ಕಥೆಯಲ್ಲಿ ಲವಕುಶರ ಕಾಳಗವಿಲ್ಲ ; ಯಜ್ಞಾಶ್ವ ನಾನಾ ದೇಶಗಳಲ್ಲಿ ಸಂಚರಿಸಿದ ವಿವರವೂ ಇಲ್ಲ. ತಂದೆ, ತಾಯಿ, ಮಕ್ಕಳು ವಾಲ್ಮೀಕಿಯ ಆಶ್ರಮದಲ್ಲಿ ಸೇರುವುದಿಲ್ಲ. ಕಥೆಯು ಕರುಣದಲ್ಲಿಯೇ ಮುಗಿಯುತ್ತದೆ. ಪದ್ಮಪುರಾಣದ ಪಾತಾಳ ಖಂಡದಲ್ಲಿ ರಾಮಕಥೆ ಇದೆ. ಅದರಲ್ಲಿ ಲವಕುಶರ ಕಾಳಗವಿದೆ ; ಯಜ್ಞಾಶ್ವ ಸಂಚಾರದ ವಿವರವಿದೆ : ಕಥೆಯು ಮಂಗ ಳಾಂತವಾಗಿ ಮುಗಿಯುತ್ತದೆ. ಆದರೆ ಪದ್ಮಪುರಾಣದಲ್ಲಿ ಭರತನ ಮಗ ಪುಷ್ಕಲನು ಕುದುರೆಯ ಹಿಂದೆ ಹೋಗುತ್ತಾನೆ ; ಅವನ ಜೊತೆಯಲ್ಲಿ ಶತ್ರುಘ್ನ, ಹನುಮಂತ, ಸುಗ್ರೀವಾದಿಗಳಿರುತ್ತಾರೆ ; ರಾಮನು ರಣಭೂಮಿಗೆ ಹೋಗುವುದಿಲ್ಲ ; ಅವನು ಮಕ್ಕಳನ್ನು ನೋಡುವುದು ಅಯೋಧ್ಯೆಯಲ್ಲಿ. ಲವಕುಶರ ವಯಸ್ಸು ಹದಿನಾರು ; ಕುಶನು ಮಹಾಕಾಲಪುರದಿಂದ ಬರುತ್ತಾನೆ ;

ಉತ್ತರರಾಮಚರಿತಕ್ಕೆ ಉತ್ತರಕಾಂಡವು ಆಧಾರವೋ ಬೇರಾವುದಾದರೂ ಗ್ರಂಥ ಆಧಾರವೋ ನಿಶ್ಚಯಿಸುವುದು ಕಷ್ಟ. ಭಾಸಾದಿಗಳಂತೆ ಭವಭೂತಿಯೂ ರಾಮಾಯಣದಿಂದಲೇ ವಸ್ತುವನ್ನು ತೆಗೆದುಕೊಂಡು ತನ್ನ ಪ್ರತಿಭೆಯಿಂದ ರಸಾನುಗುಣವಾಗಿ ಬದಲಾವಣೆಗಳನ್ನು ಮಾಡಿಕೊಂಡಿರುವುದು ಹೆಚ್ಚು ಸಂಭವ. ಉತ್ತರರಾಮಚರಿತದಲ್ಲಿ ಕೆಲವು ಘಟನೆಗಳನ್ನು, ಕೆಲವು ಪ್ರಸಿದ್ಧ ಪಾತ್ರಗಳನ್ನೂ ಬಿಟ್ಟು ಉಳಿದುದೆಲ್ಲಾ ಹೊಸದು. ಹಳೆಯ ಕಥೆ ಕಲೆಯಿಂದ ಹೊಸತನ ಪಡೆದಿದೆ.

ಗುರುಹಿರಿಯರಿಲ್ಲದ ಸಮಯದಲ್ಲಿ ಸೀತಾ ಪರಿತ್ಯಾಗ ನಡೆಯುತ್ತದೆ. ಅವರು ಇದ್ದಿದ್ದರೆ ಇದನ್ನು ಅನುಮೋದಿಸುತ್ತಿರಲಿಲ್ಲವೆಂಬುದು ಕವಿಯ ಆಶಯ. ಅಷ್ಟಾವಕ್ರನು ಋಷ್ಯಶೃಂಗಾ ಶ್ರಮದಿಂದ ಬಂದು ' ಪ್ರಜಾನುರಂಜನೆಯಲ್ಲಿ ತೊಡಗು, ಕೀರ್ತಿಯು ನಿಮ್ಮ ಧನ ' ಎಂಬ ವಸಿಷ್ಠರ ಸಂದೇಶವನ್ನೂ ' ಸೀತೆಯ ಗರ್ಭದೋಹದವನ್ನು ಸರ್ವಥಾ ನೆರವೇರಿಸು' ಎಂಬ ಅರುಂಧತೀ, ರಾಜಮಾತೆಯರ ಆದೇಶವನ್ನೂ ರಾಮನಿಗೆ ತಿಳಿಸುತ್ತಾನೆ. ಆಗ ರಾಮನು

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿ ವಾ ಜಾನಕೀಮಪಿ ।
ಆರಾಧನಾಯ ಲೋಕಸ್ಯ ಮುಂಚತೋ ನಾಸ್ತಿ ಮೇ ವ್ಯಥಾ ॥

ಎಂದು ತಟಕ್ಕನೆ ಹೇಳುತ್ತಾನೆ. ಈ ಮಾತೇ ಮುಂದಿನ ಅನರ್ಥಕ್ಕೆ ನಾಂದಿಯಾಗಿದೆ. ರಾಮನು ಜೃಂಭಕಾಸ್ತ್ರ ಚಿತ್ರದರ್ಶನ ಸಮಯದಲ್ಲಿ, ' ನಿನ್ನ ಮಕ್ಕಳೂ ಈ ಅಸ್ತ್ರಗಳನ್ನು ಪಡೆಯುವರೆಂದು ಸೀತೆಗೆ ಹೇಳಿದ ಮಾತು ಮುಂದೆ ಲವಕುಶರು ಹುಟ್ಟಿ ಆ ದಿವ್ಯಾಸ್ತ್ರಗಳನ್ನು ಪಡೆದುದಕ್ಕೆ ಮುನ್ಸೂಚನೆಯಾಗಿದೆ. ಭಾಗೀರಥೀಚಿತ್ರದರ್ಶನ ಸಮಯದಲ್ಲಿ ' ಅಂಬ, ಸ್ನುಷಾಯಾಮರುಂಧತೀವ ಸೀತಾಯಾಂ ಶಿವಾನುಧ್ಯಾನಾಭವ ' ಎಂದೂ, ಸೀತಾಪರಿತ್ಯಾಗ ಸಮಯದಲ್ಲಿ ' ಭಗವತಿ ವಸುಂಧರೆ, ಸುಶ್ಲಾಘ್ಯಾಂ ದುಹಿತರಮವೇಕ್ಷಸ್ವ ಜಾನಕೀಂ ' ಎಂದೂ ಹೇಳಿದ ಮಾತುಗಳು ಭಾಗೀರಥೀವಸುಂಧರೆಯರಿಗೆ ಕೇಳಿಸಿರಬೇಕೆನಿಸುತ್ತದೆ. ಮುಂದೆ ಅವರಿಬ್ಬರೂ ಸೀತಾರಕ್ಷಣೆಯ ಹೊಣೆಯನ್ನು ಹೊರುತ್ತಾರೆ. ಸಮಾಗಮಪ್ರಸಂಗದಲ್ಲಿ ಈ ಸಂಗತಿಯನ್ನು ತಿಳಿಸುತ್ತಾರೆ, ಹೀಗೆ ಮುಂದಿನ ಕಥೆಯ ಕೊಂಡಿಗಳು ಹಿಂದೆಯೇ ರಚನೆ ಗೊಂಡಿವೆ. ಇದು ಕವಿಗಿರಬೇಕಾದ ವ್ಯಾಪಕದೃಷ್ಟಿ. ಚಿತ್ರದರ್ಶನ ಪ್ರಸಂಗದಿಂದ ಕವಿಯು ರಾಮಾಯಣವನ್ನು ಸಂಗ್ರಹಿಸಿದ್ದಾನೆ. ಚಿತ್ರದರ್ಶನ ಪ್ರಸಂಗದಿಂದ ಸೀತಾಪರಿತ್ಯಾಗಕ್ಕೆ ಕ್ಷೇತ್ರವನ್ನು ಹದಗೊಳಿಸಿ ಅಷ್ಟಾವಕ್ರ ಪಾತ್ರ ಪ್ರವೇಶದಿಂದ ಬೀಜಾವಾಪ ಮಾಡಲಾಗಿದೆ. ದುರ್ಮುಖನ ವರದಿಯಿಂದ ಅದು ಅಂಕುರಿತವಾಗಿ, ಕ್ರಮವಾಗಿ ಹೆಮ್ಮರವಾಗಿ ಬೆಳೆದು ಕರುಣಫಲವನ್ನು ಬಿಡುತ್ತದೆ. ಅಂಕದ ಮುಕ್ಕಾಲು ಭಾಗವನ್ನು ಆಕ್ರಮಿಸಿರುವ ಚಿತ್ರ ದರ್ಶನದಿಂದ ದೃಶ್ಯಕ್ಕೆ ಚ್ಯುತಿ ಬಂದು ಪ್ರೇಕ್ಷಕರಿಗೆ ಬೇಸರವಾಗಬಹುದು.

ಪ್ರೇಯಸಿಯ ದರ್ಶನ, ಸ್ಪರ್ಶಗಳಿಂದ ರಾಮನ ಹೃದಯದಲ್ಲಿ ಮಧುರ ಭಾವಗಳು ಸುಳಿಯುತ್ತವೆ, ಅದು ದೀರ್ಘಕಾಲವಿರಹದ ನಂತರ ದೊರೆತ ಸಮಾಗಮ. ಆ ಸಮಯಕ್ಕೆ ಬಂದ ದುರ್ಮುಖನ ವರದಿ ರಾಮನ ಹೃದಯಕ್ಕೆ ಸಿಡಿಲಾಗಿ ಎರಗುತ್ತದೆ. ಸಾಕಿದ ಪಕ್ಷಿಯನ್ನು ಕಟುಕನಿಗೆ ಕೊಡುವಂತೆ ಅವನು ಪ್ರಾಣಕಾಂತೆಯನ್ನು ಕಾನನಕ್ಕೆ ಅಟ್ಟಬೇಕಾಗಿದೆ. ಅವನು ತನ್ನನ್ನು ' ಅಪೂರ್ವಕರ್ಮಚಾಂಡಾಲ ' ನೆಂದು ನಿಂದಿಸಿಕೊಳ್ಳುತ್ತಾನೆ. ಎದ್ದು ಹೊರಡುವಷ್ಟರಲ್ಲಿ ಲವಣಾಸುರನಿಂದ ಮುನಿಜನರಿಗಾದ ಪೀಡೆಯನ್ನು ಕೇಳಿ ಕೋಪಿಸಿ ಕೊಳ್ಳುತ್ತಾನೆ. ಅರೆಗಳಿಗೆಯಲ್ಲಿ ಮಿಂಚಿನ ವೇಗದಿಂದ ಸುಖ, ದುಃಖ, ಕೋಪಗಳು ಬುಗ್ಗೆಯಂತೆ ಚಿಮ್ಮುತ್ತವೆ. ಸುಖವನ್ನು ದುಃಖವೂ, ದುಃಖವನ್ನು ರೋಷವೂ ತುಳಿದು ನಿಲ್ಲುತ್ತವೆ. ಇಲ್ಲಿ ಶಾಕುಂತಲದಲ್ಲಿ ಸಂತಪ್ತನಾಗಿದ್ದ ದುಷ್ಯಂತನನ್ನು ಮಾತಲಿಯು ಕೆರಳಿಸಿದ ಸಂದರ್ಭವನ್ನು ಸ್ಮರಿಸಿಕೊಳ್ಳಬಹುದು.

ಕ್ರೌಂಚ ಪ್ರಸಂಗದಿಂದ ವಾಲ್ಮೀಕಿಯ ಶೋಕ ಶ್ಲೋಕವಾಗಿ ಪರಿಣಮಿಸಿ ರಾಮಾಯಣದ ರಚನೆಯಾದಂತೆ ಸೀತಾ ಪರಿತ್ಯಾಗ ಪ್ರಸಂಗದಿಂದ ಭವಭೂತಿಯ ಹೃದಯದಲ್ಲಿ ಮೂಡಿದ ಕರುಣರಸದ ಫಲವಾಗಿ ಉತ್ತರರಾಮಚರಿತದ ರಚನೆಯಾಗಿದೆ. ' ಮರ್ಮಾಣೀವ ಪುನಶ್ಛಿನತ್ತಿ ಕರುಣಾ ಸೀತಾಂ ವರಾಕೀಂ ಪ್ರತಿ ' ಎಂಬ ಮಹಾವೀರಚರಿತದ ಮಾತನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದು. ರಸಗಳಿಗೆಲ್ಲಾ ಕರುಣೆಯೇ ಅವನಿಗೆ ಗುರುವಾಗಿ ಕಂಡಿತು—

ಏಕೋ ರಸಃ ಕರುಣ ಏವ ನಿಮಿತ್ತಭೇದಾ
ದ್ಭಿನ್ನಃ ಪೃಥಕ್ಪೃಥಗಿವ ಶ್ರಯತೇ ವಿವರ್ತಾನ್ ।
ಆವರ್ತಬುದ್ಬುದತರಂಗಮಯಾನ್ವಿಕಾರಾ
ನಂಭೋ ಯಥಾ ಸಲಿಲಮೇವ ಹಿ ತತ್ಸಮಸ್ತಂ ॥

ಒಂದೇ ನೀರು ಸುಳಿ, ಗುಳ್ಳೆ, ಅಲೆಯಾಗಿ ವಿಕಾರಗೊಳ್ಳುವಂತೆ ಕರುಣೆಯೊಂದೇ ನಿಮಿತ್ತ ಭೇದದಿಂದ ಶೃಂಗಾರಾದಿ ರಸರೂಪ ಪಡೆಯುತ್ತದೆಂದು ಮನಗಂಡ ಭವಭೂತಿ ಕರುಣರಸ ಪ್ರಧಾನವಾದ ನಾಟಕವನ್ನು ಬರೆದನು. ಇದರಿಂದ ಲಕ್ಷಣಕಾರರ ನಿಯಮ ಮೂಲೆಗೆ ಬಿದ್ದು ಕರುಣಕ್ಕೂ ನಾಟಕದಲ್ಲಿ ಪ್ರಾಧಾನ್ಯ ಸಿಕ್ಕಿತು.

ಈ ನಾಟಕದಲ್ಲಿ ರಾಮ ಸೀತೆಯರ ಸಮಾಗಮವನ್ನು ಸಂಪಾದಿಸಲು ಓಡಾಡುವ ವ್ಯಕ್ತಿಗಳು ತಮಸೆ, ಮುರಲೆ, ಗೋದಾವರಿ, ಭಾಗೀರಥಿ, ವಸುಂಧರೆ, ಸರಯೂ ಮತ್ತು ವಾಸಂತಿಯರು. ಸರಯೂ ಮತ್ತು ಗೋದಾವರಿಯರು ರಂಗದ ಮೇಲೆ ಕಾಣಿಸಿಕೊಳ್ಳುವುದಿಲ್ಲ ; ಅವರು ಹಿನ್ನೆಲೆಯಲ್ಲಿದ್ದು ಸಹಾಯ ಮಾಡುತ್ತಾರೆ. ವಾಸಂತಿಯು ವನದೇವತೆ, ವಸುಂಧರೆ ಭೂದೇವತೆ, ಉಳಿದವರು ನದೀದೇವತೆಗಳು. ಸಚೇತನರು ಔದಾಸೀನ್ಯ ತಾಳಿದರೆ ನದಿ, ವನಗಳು ಕರಗಿ ಕೊರಗುತ್ತವೆ. ಉತ್ತರರಾಮಚರಿತದಲ್ಲಿ ನದಿ ಮುಂತಾದ ಅಚೇತನಗಳು ಮಾನವರಂತೆ ಪಾತ್ರ ಧರಿಸಿ ಓಡಾಡುತ್ತವೆ ; ಸುಖದುಃಖಗಳಲ್ಲಿ ಪಾಲ್ಗೊಳ್ಳುತ್ತವೆ. ಇದು ಪ್ರಬೋಧಚಂದ್ರೋದಯ ಮೊದಲಾದ ನಾಟಕಗಳನ್ನು ಸ್ಮರಣೆಗೆ ತರುತ್ತದೆ.

ಮೂರನೆಯ ಅಂಕ ರಾಮನ ದಾರುಣ ವಿರಹ ಸಂತಾಪವನ್ನು ಚಿತ್ರಿಸಲು ಮೀಸಲಾಗಿದೆ. ಪ್ರಿಯ ಪ್ರೇಯಸಿಯರಾದ ಉದಯನ ವಾಸವದತ್ತೆಯರ ನಡುವೆ ಸ್ವಪ್ನವು ತೆರೆಯಾಗಿ ನಿಂತು ವಿರಹವನ್ನು ಇಮ್ಮಡಿಗೊಳಿಸುವಂತೆ ರಾಮ ಸೀತೆಯ ನಡುವೆ ಸೀತೆಯ ಅಗೋಚರತ್ವವು ತೆರೆಯಾಗಿ ನಿಂತು ರಾಮನ ಸಂತಾಪವನ್ನು ಉಲ್ಬಣಗೊಳಿಸುತ್ತದೆ. ರಾಮನು ಸೀತೆಯ ಸ್ಪರ್ಶಸುಖವನ್ನು ಅನುಭವಿಸುತ್ತಾನೆ ; ಸೀತೆಯು ಅವನಿಗೆ ಕಾಣಿಸುವುದಿಲ್ಲ. ಅವನು ಇದನ್ನು ವಿರಹಭ್ರಾಂತಿಯಾಗಿರಬೇಕೆಂದು ಭಾವಿಸುತ್ತಾನೆ. ಸೀತಾಪರಿತ್ಯಾಗದ ನಂತರ ರಾಮನ ದುಃಖ ಪಾರವಿಲ್ಲದುದು. ಲವಕುಶರು ರಾಮಾಯಣದ ಶ್ಲೋಕಗಳನ್ನು ಹಾಡಿದಾಗ ಸೀತಾವಿರಹ ಮರುಕಳಿಸಿ ರಾಮನ ಸ್ಥಿತಿ ಶೋಚನೀಯವಾಗುತ್ತದೆ.

ಚಂದ್ರಕೇತು ಮತ್ತು ಲವರು ಒಂದೆಡೆ ಸೇರಿದಾಗ ಅವರ ಹೃದಯಗಳಲ್ಲಿ ಅವಿದಿತ ಸ್ನೇಹಭಾವ ಮೂಡುತ್ತದೆ. ರಾಮ ಲವರು ಸಂಧಿಸಿದಾಗಲೂ ಹೀಗೆಯೇ ಆಗುತ್ತದೆ. ಕರುಳು ಕರುಳನ್ನರಿಯುತ್ತದೆ. ಸ್ನೇಹ ಬಾಹ್ಯವಸ್ತುವನ್ನವಲಂಬಿಸುವುದಿಲ್ಲ—

ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತು
ರ್ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ।
ವಿಕಸತಿ ಹಿ ಪತಂಗಸ್ಯೋದಯೇ ಪುಂಡರೀಕಂ
ದ್ರವತಿ ಚ ಹಿಮರಶ್ಮಾವುದ್ಗತೇ ಚಂದ್ರಕಾಂತಃ ॥

ರಾಮನು ವಾಲ್ಮೀಕಿಯ ಆಶ್ರಮದಲ್ಲಿ ಲವಕುಶರಲ್ಲಿ ತನ್ನ ಮತ್ತು ಸೀತೆಯ ಸಾದೃಶ್ಯವನ್ನು ಕಾಣುತ್ತಾನೆ. ಲವನಿಗೆ ಜೃಂಭಕಾಸ್ತ್ರಗಳು ದೊರೆತಿವೆ ; ಇವು ಅಭಿಜ್ಞಾನದ ಕೆಲಸವನ್ನೂ



ಮಾಡುತ್ತವೆ. ವಸಿಷ್ಠ, ಅರುಂಧತಿ, ತಾಯಂದಿರು ಮತ್ತು ಜನಕ ಆಶ್ರಮಕ್ಕೆ ಬಂದಿದ್ದಾರೆ. ರಾಮನು ಜನಕನನ್ನು ನೋಡಲಾರ. ಅಂದಿನ ಆಶ್ರಮದ ವಾತಾವರಣ ರಾಮನಿಗೆ ಬಿಡಿಸಲಾಗದ ಒಗಟಾಗಿದೆ ; ಗೊತ್ತು ಗುರಿಯಿಲ್ಲದೆ ಚಿಂತೆಯು ಹರಿಯುತ್ತದೆ. ಇಲ್ಲಿ ಕವಿಯು ರಾಮನ ಬಾಳಿನಲ್ಲಿ ಬಾಲ ಸೂರ್ಯನ ಮಂದಕಿರಣಗಳು ಚೆಲ್ಲಿ ಕತ್ತಲು ಕರಗುವ ಉಷೆಯನ್ನು ಚೆಲುವಾಗಿ ಚಿತ್ರಿಸಿದ್ದಾನೆ. ರಾಮನು ತನ್ನ ಕಥೆಯನ್ನು ತಾನೇ ನೋಡುವ ಪ್ರಸಂಗ ಬರುತ್ತದೆ. ಕವಿಯು ನಾಟಕದಲ್ಲೊಂದು ನಾಟಕವನ್ನು ಜರುಗಿಸಿ ಲೋಕಪವಾದ, ರಾಮಾನುತಾಪಗಳನ್ನು ಕರಗಿಸಿದ್ದಾನೆ ; ಇದು ಪ್ರಿಯದರ್ಶಿಕಾ ಮತ್ತು ಹ್ಯಾಮ್ಲೆಟ್ ನಾಟಕಗಳನ್ನು ಜ್ಞಾಪಕಕ್ಕೆ ತರುತ್ತದೆ. ತಾಳ್ಮೆ, ತ್ಯಾಗ, ಅನುಕಂಪಗಳಿಂದ ತುಂಬಿದ ಆಶ್ರಮದಲ್ಲಿ ರಾಮನು ಪತ್ನೀ ಪುತ್ರರನ್ನು ಪಡೆಯುತ್ತಾನೆ. ದುಷ್ಯಂತನು ಪತ್ನೀಪುತ್ರರನ್ನೂ ಪಡೆದುದೂ ಆಶ್ರಮದಲ್ಲಿಯೇ. ಶಾಕುಂತಲಕ್ಕೂ ಉತ್ತರರಾಮಚರಿತಕ್ಕೂ ಹಲವು ಅಂಶಗಳಲ್ಲಿ ಸಾದೃಶ್ಯವಿದೆ.

ರಾಜಧರ್ಮ, ಪತಿಧರ್ಮಗಳಲ್ಲಿ ಮೊದಲನೆಯದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಶ್ರೀರಾಮ ಜೀವನ ಪರ್ಯಂತ ಅಸುಖಿಯಾದನು. ರಾಮಸೀತೆಯ ಪ್ರೇಮ ಎಣೆಯಿಲ್ಲದ್ದು. ಸೀತಾಪಹರಣವಾದಾಗ ರಾಮನ ಸ್ಥಿತಿ ಇದು—

" ಜನಸ್ಥಾನೇ ಶೂನ್ಯೇ ವಿಕಲಕರಣೈರಾರ್ಯಚರಿತೈ
ರಪಿ ಗ್ರಾವಾ ರೋದಿತ್ಯಪಿ ದಲತಿ ವಜ್ರಸ್ಯ ಹೃದಯಂ ।

ರಾಮನಿಗೆ ಆಶ್ರಮದ ಅನುಭವವೂ ಇದೆ ; ಸಂಸಾರದ ಅನುಭವವೂ ಇದೆ. ಅರಣ್ಯವಾಸದಲ್ಲಿಯೂ ಸೀತೆ ಅವನ ಜೊತೆಗಿದ್ದಳು. ಈಗ ಸೀತಾ ವಿಯೋಗ ಅವನ ಕರುಳನ್ನು ಹಿಂಡುತ್ತಿದೆ. ಜೊತೆಗೆ ಲೋಕ ಕಂಟಕರನ್ನು ಕೊಂದ ಅವನು ತಪಸ್ವಿಯಾದ ಶಂಭೂಕನನ್ನು ಕೊಲ್ಲಬೇಕಾಗಿದೆ. ಅವನ ಈ ಮಾತು ಅವನ ಹೃದಯದ ಸ್ಥಿತಿಯನ್ನು ಪ್ರಕಟಿಸುತ್ತದೆ—

ಹೇ ಹಸ್ತ ದಕ್ಷಿಣ ಮೃತಸ್ಯ ಶಿಶೋರ್ದ್ವಿಜಸ್ಯ
ಜೀವಾತವೇ ವಿಸೃಜ ಶೂದ್ರಮುನೌ ಕೃಪಾಣಂ ।
ರಾಮಸ್ಯ ಬಾಹುರಸಿ ನಿರ್ಭರಗರ್ಭ ಖಿನ್ನ
ಸೀತಾವಿವಾಸನಪಟೋಃ ಕರುಣಾ ಕುತಸ್ತೇ ॥

ಸೀತೆಯಂತೂ ಅರಣ್ಯವಾಸ, ಅಪಹರಣ, ಲೋಕಾಪವಾದ, ಪರಿತ್ಯಾಗ, ಪುತ್ರವಿರಹಗಳಿಂದ ನೊಂದು ಬೆಂದಿದ್ದಾಳೆ.

ಪಾತ್ರಗಳನ್ನು ಖಚಿತವಾಗಿ ಚಿತ್ರಿಸುವುದರಲ್ಲಿ ಭವಭೂತಿ ಸಮರ್ಥ — ಇದು ಕ್ಷತ್ರಿಯದ್ಯೋತಕನಾದ ಕುಶನ ಪೌರುಷಾತಿಶಯಚಿತ್ರಣ—

ದೃಷ್ಟಿಸ್ತೃಣೀಕೃತಜಗತ್ತ್ರಯಸತ್ತ್ವಸಾರಾ
ಧೀರೋದ್ಧತಾ ನಮಯತೀವ ಗತಿರ್ಧರಿತ್ರೀಂ ।
ಕೌಮಾರಕೇಽಪಿ ಗಿರಿವದ್ಗುರುತಾಂ ದಧಾನೋ
ವೀರೋ ರಸಃ ಕಿಮಯಮಿತ್ಯುತ ದರ್ಪ ಏವ ॥

ಇದು ದಾಂಪತ್ಯ ಜೀವನದ ಉತ್ಕರ್ಷ—

ಅದ್ವೈತಂ ಸುಖದುಃಖಯೋರನುಗತಂ ಸರ್ವಾಸ್ವವಸ್ಥಾಸು ಯ
ದ್ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ ರಸಃ ।
ಕಾಲೇನಾವರಣಾತ್ಯಯಾತ್ಪರಿಣತೇ ಯತ್ಪ್ರೇಮಸಾರೇ ಸ್ಥಿತಂ
ಭದ್ರಂ ತಸ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ಪ್ರಾರ್ಥ್ಯತೇ ॥

ಮಾಲತೀ ಮಾಧವಃ—

ಇದು ಹತ್ತು ಅಂಕಗಳನ್ನುಳ್ಳ ಒಂದು ಪ್ರಕರಣ. ಇದು ಅದರ ಕಥೆ. ಪದ್ಮಾವತೀ ನಗರದಲ್ಲಿ ಮಂತ್ರಿಯಾಗಿದ್ದ ಭೂರಿವಸುವಿಗೆ ಮಾಲತಿಯೆಂಬ ಮಗಳಿದ್ದಳು. ಕುಂಡಿನ ಪುರದಲ್ಲಿ ಮಂತ್ರಿಯಾಗಿದ್ದ ದೇವರಾತನಿಗೆ ಮಾಧವನೆಂಬ ಮಗನಿದ್ದನು. ಭೂರಿವಸು, ದೇವ ರಾತರು ಸಹಾಧ್ಯಾಯಿಗಳಾಗಿದ್ದಾಗ ತಮ್ಮ ಮಕ್ಕಳನ್ನು ಕೊಟ್ಟು ತಂದು ಸಂಬಂಧ ಬೆಳೆಸುವುದಾಗಿ ಪ್ರತಿಜ್ಞೆ ಮಾಡಿಕೊಂಡಿದ್ದರು. ಪದ್ಮಾವತೀರಾಜನು ಮಾಲತಿಯನ್ನು ತನ್ನ ನರ್ಮ ಸಚಿವನಾದ ನಂದನನಿಗೆ ಕೊಡಬೇಕೆಂದು ಕೇಳಿದ್ದನು. ಮಾಧವನು ಪದ್ಮಾವತಿಯಲ್ಲಿ ನ್ಯಾಯ ಶಾಸ್ತ್ರವನ್ನು ಕಲಿಯುತ್ತಿದ್ದನು. ಭೂರಿವಸು ದೇವರಾತರೊಡನೆ ಓದುತ್ತಿದ್ದ ಕಾಮಂದಕಿಯೆಂಬ ಬೌದ್ಧ ಸನ್ಯಾಸಿನಿಯು ಮಾಲತೀಮಾಧವರಲ್ಲಿ ಪ್ರೇಮ ಬೆಳೆಯುವಂತೆ ಮಾಡಿದಳು. ಕುಸುಮಾಕರೋದ್ಯಾನದಲ್ಲಿ ಮಾಲತೀ, ಮಾಧವರಿದ್ದಾಗ ಒಂದು ಹುಲಿಯು ಮಾಲತಿಯ ಸ್ನೇಹಿತಳಾದ ಮದಯಂತಿಕೆಯ ಮೇಲೆ ಬಿದ್ದಿತು. ಮಾಧವನ ಸ್ನೇಹಿತನಾದ ಮಕರಂದನು ಹುಲಿಯನ್ನು ಕೊಂದು ಅವಳನ್ನು ರಕ್ಷಿಸಿದನು.

ಅಘೋರಘಂಟನೆಂಬ ಕಾಪಾಲಿಕ ಮತ್ತು ಅವನ ಶಿಷ್ಯಳಾದ ಕಪಾಲಕುಂಡಲೆಯರು ಮಾಲತಿಯನ್ನು ಹೊತ್ತು ತಂದು ದೇವತೆಗೆ ಬಲಿಕೊಡುವುವರಲ್ಲಿದ್ದಾಗ ಅಲ್ಲಿಗೆ ಬಂದ ಮಾಧವನು ಅಘೋರಘಂಟನನ್ನು ಕೊಂದು ಮಾಲತಿಯನ್ನು ರಕ್ಷಿಸಿದನು.

ನಂದನೊಡನೆ ಮಾಲತಿಯ ಮದುವೆಗೆ ಏರ್ಪಾಡಾಯಿತು. ಕಾಮಂದಕಿಯ ಸಹಾಯದಿಂದ ಮಾಧವನು ಮಾಲತಿಯನ್ನು ಅವಳ ಆಶ್ರಮಕ್ಕೆ ಕರೆದುಕೊಂಡು ಹೋದನು. ಮಕರಂದನು ಮಾಲತಿಯ ವಸ್ತ್ರಾಭರಣಗಳನ್ನು ಧರಿಸಿ ನಂದನನನ್ನು ಮದುವೆಯಾಗಿ ತನ್ನನ್ನು ಪ್ರೀತಿಸುತ್ತಿದ್ದ ಅವನ ತಂಗಿಯಾದ ಮದಯಂತಿಕೆಯನ್ನು ಕರೆದುಕೊಂಡು ಕಾಮಂದಕಿಯ ಆಶ್ರಮಕ್ಕೆ ಹೊರಟು ನಗರ ರಕ್ಷಕರ ಕೈಗೆ ಸಿಕ್ಕಿಕೊಂಡನು. ಮದಯಂತಿಕೆ ತಪ್ಪಿಸಿಕೊಂಡು ಬಂದು ಮಾಲತಿ, ಮಾಧವರಿಗೆ ವಿಚಾರವನ್ನು ತಿಳಿಸಿದಳು. ಮಾಧವನು ಮಿತ್ರನ ಸಹಾಯಕ್ಕೆ ಹೊರಟನು. ರಾಜನು ಅವರನ್ನು ಕ್ಷಮಿಸಿದನು.

ಕಪಾಲಕುಂಡಲೆ ಮಾಲತಿಯನ್ನು ಶ್ರೀಪರ್ವತಕ್ಕೆ ಅಪಹರಿಸಿಕೊಂಡು ಹೋದಳು. ಮಾಧವ, ಮಕರಂದರು ಅವಳನ್ನು ಹುಡುಕಿಕೊಂಡು ಹೊರಟರು. ಕಾಮಂದಕಿಯ ಶಿಷ್ಯಳಾದ



ಸೌದಾಮಿನಿಯು ಮಾಲತಿಯನ್ನು ರಕ್ಷಿಸಿ ಮಾಧವನಿಗೆ ಒಪ್ಪಿಸಿದಳು. ರಾಜನು ಈ ಸಂಗತಿಯನ್ನು ತಿಳಿದು ಸಂತೋಷಗೊಂಡು ವಧೂವರರನ್ನು ಅಭಿನಂದಿಸಿ ಪತ್ರವನ್ನು ಬರೆದನು.

ಪ್ರಕರಣದ ವಸ್ತು ಕವಿಕಲ್ಪಿತವಾದುದು. ಈ ಕಥೆಗೆ ಪ್ರೇರಣೆ ಬೃಹತ್ಕಥೆಯಿಂದ ದೊರೆತಿರಬೇಕೆಂದೂ, ಮಾಧವನ ಪದ್ಮಾವತೀಪ್ರಯಾಣಕ್ಕೆ ಕವಿಯ ಸ್ವಂತ ವೃತ್ತಾಂತ ಆಧಾರವಾಗಿರಬಹುದೆಂದೂ ಕೀತ್, ಬೆಲ್ವಾಳ್ಕರ್ ಮುಂತಾದವರು ಊಹಿಸುತ್ತಾರೆ. ಮಾಲತೀ ಮಾಧವರ ವಿವಾಹ ವೃತ್ತಾಂತದೊಡನೆ ಮದಯಂತಿಕಾ ಮಕರಂದರ ವಿವಾಹ ವೃತ್ತಾಂತವೂ ಬೆರೆತಿದೆ. ಶೃಂಗಾರ ಪ್ರಧಾನರಸ, ಮಕರಂದ, ನಂದನರ ಮದುವೆ ವಿನೋದ ಜನಕವಾಗಿದೆ. ಕಾಪಾಲಿಕ, ವ್ಯಾಘ್ರ ಮುಂತಾದ ವೃತ್ತಾಂತಗಳು ವೀರ, ಕರುಣ, ಅದ್ಭುತ, ಬೀಭತ್ಸ, ಭಯಾನಕ, ರೌದ್ರರಸಗಳನ್ನು ತರುತ್ತವೆ. ಕಥೆ ವಿಸ್ತಾರವಾಗಿಯೂ ತೊಡಕಾಗಿಯೂ ಇದೆ. ಕೆಲವುಕಡೆ ಕಥೆಗಳನ್ನು ಬಲಾತ್ಕಾರವಾಗಿ ಗಂಟುಹಾಕಿರುವಂತೆ ತೋರುತ್ತದೆ. ಪಂಡಿತಕೌಶಿಕಿ ಮತ್ತು ಸಾಂಕೃತ್ಯಾಯನಿಯರಂತೆ ಕಾಮಂದಕಿಯು ಪ್ರಭಾವಶಾಲಿನಿಯಾಗಿ ನಾಟಕದ ಉದ್ದಕ್ಕೂ ಬಂದು ನಾಯಕ ನಾಯಿಕೆಯರ ಸಮಾಗಮಕ್ಕೆ ಕಾರಣಳಾಗುತ್ತಾಳೆ. ಕಾಮ್ಯಾರ್ಥಕ್ಕಾಗಿ ನರಬಲಿಕೊಡುವ ಪ್ರಸಂಗವನ್ನು ನಾಯಕ, ನಾಯಿಕೆಯರ ಪ್ರೇಮಸಂವರ್ಧನೆಗೆ ಬಳಸಿಕೊಳ್ಳಲಾಗಿದೆ. ಕವಿಯು ಪ್ರಸ್ತಾವನೆಯಲ್ಲಿ ಮಾಲತೀಮಾಧವದ ಗುಣಗಳನ್ನು ತಿಳಿಸಿದ್ದಾನೆ—

ಭೂಮ್ನಾ ರಸಾನಾಂ ಗಹನಾಃ ಪ್ರಯೋಗಾಃ
ಸೌಹಾರ್ದಹೃದ್ಯಾನಿ ವಿಚೇಷ್ಟಿತಾನಿ ।
ಔದ್ಧತ್ಯಮಾಯೋಜಿತಕಾಮಸೂತ್ರಂ
ಚಿತ್ರಾಃ ಕಥಾ ವಾಚಿ ವಿದಗ್ಧತಾ ಚ ॥

ಮಾಲತಿಯ ದುಃಸಹವಾದ ಸಂತಾಪ :—

ಮನೋರೋಗಸ್ತೀವ್ರೋ ವಿಷಮಿವ ವಿಸರ್ಪನ್ನವಿರತಂ
ಪ್ರಮಾಥೀ ನಿರ್ಧೂಮೋ ಜ್ವಲತಿ ವಿಧುತಃ ಪಾವಕ ಇವ ।
ಹಿನಸ್ತಿ ಪ್ರತ್ಯಂಗಂ ಜ್ವರ ಇವ ಗರೀಯಾನಿತ ಇತೋ
ನ ಮಾಂ ತ್ರಾತುಂ ತಾತಃ ಪ್ರಭವತಿ ನ ಚಾಂಬಾ ನ ಭವತೀ ॥

ವ್ಯಕ್ತಿಯ ಮಹೋನ್ನತ ಗುಣಗಳನ್ನು ಚಿತ್ರಿಸುವುದರಲ್ಲಿ ಭವಭೂತಿಯು ಪ್ರತಿಭಾವಂತ. ಅವನು ಚಿತ್ರಿಸಿರುವ ಲವ, ಕುಶರು, ಮಕ್ಕಳಿಲ್ಲದ ರಾವಣನ ಮನಸ್ಸನ್ನು ಸೂರೆಗೊಳ್ಳುತ್ತಾರೆ. ಮಿಡಿಯುವ ಹೃದಯದ ಪ್ರೇಮ, ವಾತ್ಸಲ್ಯ, ಸ್ನೇಹ, ಭಕ್ತಿ ಮುಂತಾದ ಭಾವಗಳನ್ನು ಚಿತ್ರಿಸುವುದರಲ್ಲಿ ಯಶಸ್ವಿಯಾಗಿದ್ದಾನೆ. ಜನಕನು ಮಗಳನ್ನು ಮರೆಯಲಾರ : ಕೌಸಲ್ಯೆ ಸೊಸೆಗಾಗಿ ಕಂಬನಿಗರೆಯುತ್ತಾಳೆ. ವಾಸಂತಿ ಸೀತೆಗಾಗಿ ಹಲುಬುತ್ತಾಳೆ ; ಸಾಕಿದ ಆನೆಯ ಮರಿ ಸೀತೆಯ ಹೃದಯವನ್ನು ಸೆಳೆಯುತ್ತದೆ ; ನಯವಿನಯಗಳಿಂದ ವಂದಿಸಿದ ಲವನನ್ನು ಅರುಂಧತಿ

ತೊಡೆಯಲ್ಲಿ ಕುಳ್ಳಿರಿಸಿಕೊಂಡು ತನ್ನ ತೊಡೆಯೂ ತುಂಬಿತು, ಮನೋರಥವೂ ತುಂಬಿತು ಎನ್ನುತ್ತಾಳೆ ; ಪರಿಚಿತ ಗಿರಿತರುಗಳೆಲ್ಲಾ ರಾಮನೊಡನೆ ಆತ್ಮೀಯವಾಗಿ ವ್ಯವಹರಿಸುತ್ತವೆ. ಸ್ನೇಹ ಬಾಳಿಗೆ ಆಧಾರ ; ಇದು ಜಗತ್ತಿನ ತುಂಬ ತುಂಬಿ ಸಚರಾಚರಗಳನ್ನೆಲ್ಲಾ ಒಟ್ಟುಗೂಡಿಸುತ್ತದೆ. ಕವಿಯು ಈ ಜೀವನ ಸತ್ಯವನ್ನು ಸುಂದರವಾಗಿ ಪ್ರತಿಪಾದಿಸಿದ್ದಾನೆ. ಕಾಳಿದಾಸನ ಪ್ರಕೃತಿ ಸಹಜ ಚೆಲುವೆ, ನಿರಾಡಂಬರಸುಂದರಿ ; ಅವಳದು ಮುಗ್ಧಮನೋರಮ ರೂಪ, ಮೃದುಮಧುರಮೂರ್ತಿ. ಭವಭೂತಿಯ ಪ್ರಕೃತಿ ಮುಸಕಿನ ಮೋಹಿನಿ : ಆಡಂಬರೋಜ್ವಲೆ ; ಇವಳ ರೂಪ ಪ್ರೌಢ, ಗಂಭೀರ, ಚತುರ.

ಭವಭೂತಿಯದು ಪಾಂಡಿತ್ಯಪೂರ್ಣವಾದ ಸಾಹಿತ್ಯ. ಗೌಡೀರೀತಿಯು ಅವನಿಗೆ ಒಲಿದಿದೆ. ಅಲ್ಲಲ್ಲಿ ವೈದರ್ಭಿಯನ್ನೂ ಕಾಣಬಹುದು. ಕವಿಗೆ ಭಾಷೆಯ ಮೇಲೆ ಒಳ್ಳೆಯ ಪ್ರಭುತ್ವವಿದೆ. ಗದ್ಯಗಳಾಗಲೀ, ಪದ್ಯಗಳಾಗಲೀ ನಿರರ್ಗಳವಾಗಿ ಹರಿದಿವೆ. ಇವನ ಶೈಲಿ ಪ್ರೌಢ; ಭಾಷೆ ಗಡುಸು. ಇವನ ಕೃತಿಗಳಲ್ಲಿ ಓಜೋಗುಣ ತುಂಬಿದೆ. ಮಾತಿನ ಆಡಂಬರ ಹೆಚ್ಚು. ಶೈಲಿಯು ವ್ಯಕ್ತಿಯ ಪ್ರಕೃತಿಗೆ ದ್ಯೋತಕವೆಂಬ ಮಾತು ಪ್ರಚಾರದಲ್ಲಿದೆ, ಪ್ರಾಯಶಃ ಭವಭೂತಿ ಗಡುಸು ಸ್ವಭಾವದವನಾಗಿರಬೇಕು ; ಪಾಂಡಿತ್ಯ ಮತ್ತು ಆತ್ಮವಿಶ್ವಾಸಗಳಿಂದ ತುಂಬಿದ ಬಿಗುಪು ಅವನಲ್ಲಿದ್ದಿರಬೇಕು.

ಭವಭೂತಿಯು ಭಾವಕ್ಕೆ ತಕ್ಕಂತೆ ಭಾಷೆ ಮತ್ತು ಛಂದಸ್ಸನ್ನು ಬಳಸಲು ಸಮರ್ಥ, ಈ ವಿಷಯದಲ್ಲಿ ನ್ಯೂನತೆಯೂ ಇಲ್ಲದಿಲ್ಲ. ಅಲಂಕೃತವಾದ ಈ ವಾಕ್ಯ ಹಗುರವಾಗಿ ಗಾಳಿಯಲ್ಲಿ ತೇಲಿ ತೇಲಿ ಬೀಳುವ ಕುಸುಮಗಳ ವರ್ಣನೆಗೆ ಅರ್ಹವಾಗಿದೆ—

ತತ್ರ ವರ್ತ್ಯಾತಾಮನಯೋಃ ಪ್ರವೀರಯೋರನವರತಮವಿರಲಮಿಲಿತವಿಕಚಕನಕಕಮನೀಯ ಸಂಹತಿರಮರತರುತರುಣಮಣಿಮುಕುಲನಿಕರಮಕರಂದಸುಂದರಃ ಪುಷ್ಪನಿಪಾತಃ ।

ಭವಭೂತಿ ಶೌರಸೇನೀಪ್ರಾಕೃತವನ್ನು ಬಳಸಿದ್ದಾನೆ. ಪ್ರಾಕೃತಮಾತನಾಡುವ ಪಾತ್ರಗಳು ಸಂಸ್ಕೃತವನ್ನಾಶ್ರಯಿಸಿಯೇ ಪದ್ಯವನ್ನು ಹೇಳುತ್ತಾರೆ. ದೀರ್ಘಸಮಾಸಗಳಿಂದ ಕೂಡಿದ ಪದ್ಯಗಳು ಅಧಿಕವಾಗಿದ್ದು ಶ್ರವಣರಂಜಕವಾಗಿವೆ. ಅನುಷ್ಟುಪ್, ವಸಂತತಿಲಕಾ, ಮಾಲಿನೀ, ಶಿಖರಿಣೀ, ಶಾರ್ದೂಲವಿಕ್ರೀಡಿತ ಮುಂತಾದ ಛಂದಸ್ಸುಗಳು ಬಂದಿವೆ. ಶಿಖರಿಣೀ ಪ್ರಯೋಗದಲ್ಲಿ ಕವಿಯು ಸಿದ್ಧಿ ಪಡೆದಿದ್ದಾನೆ[1] ; ಮಹಾಕವಿಗಳ ಪ್ರಶಂಸೆಗೆ ಪಾತ್ರನಾಗಿದ್ದಾನೆ[2]. ತ್ರಿಪುರಾರಿ, ನಾನ್ಯದೇವ, ಜಗದ್ಧರ, ವೀರರಾಘವ ಮುಂತಾದವರು ಇವನ ನಾಟಕಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

---

1. ಭವಭೂತೇಃ ಶಿಖರಿಣೀ ನಿರರ್ಗಲತರಂಗಿಣೀ ।
   ರುಚಿರಾ ಘನಸಂದರ್ಭೇ ಯಾ ಮಯೂರೀವ ನೃತ್ಯತಿ ॥
2. ಸ್ಪಷ್ಟಭಾವರಸಾ ಚಿತ್ರೈಃ ಪದನ್ಯಾಸೈಃ ಪ್ರವರ್ತಿತಾ।
   ನಾಟಕೇಷು ನಟಸ್ತ್ರೀವ ಭಾರತೀ ಭವಭೂತಿತಃ॥
   —ಧನಪಾಲ



# ಭಟ್ಟನಾರಾಯಣ
## (ಕ್ರಿ.ಶ. 8ನೆಯ ಶತಮಾನ)

ವೇಣೀಸಂಹಾರದ ಕರ್ತೃವಾದ ಭಟ್ಟನಾರಾಯಣನ ಕಾಲ ನಿಶ್ಚಿತವಾಗಿಲ್ಲ. ಬಂಗಾಳದ ದೊರೆಯಾದ ಆದಿಶೂರನು ಕನ್ಯಕುಬ್ಜದಿಂದ ಐವರು ಗೌಡ ಬ್ರಾಹ್ಮಣರನ್ನು ತನ್ನ ಪ್ರಾಂತಕ್ಕೆ ಕರೆಸಿಕೊಂಡನೆಂದೂ, ಭಟ್ಟನಾರಾಯಣನು ಅವರಲ್ಲೊಬ್ಬನೆಂದೂ ಒಂದು ಪ್ರತೀತಿ ಇದೆ. ಈ ಆಧಾರದಿಂದ ಸ್ಟೆನ್‌ಕೋನೋ ಅವರು ಭಟ್ಟನಾರಾಯಣನ ಕಾಲ ಕ್ರಿ.ಶ. 7ನೆಯ ಶತಮಾನದ ಉತ್ತರಾರ್ಧವೆಂದು ಅಭಿಪ್ರಾಯ ಪಟ್ಟಿದ್ದಾರೆ. ಕೇವಲ ಹೇಳಿಕೆಯು ಕಾಲ ನಿರ್ಣಯಕ್ಕೆ ಸಮರ್ಥಪ್ರಮಾಣವಲ್ಲ. ಮಮ್ಮಟ, ಕ್ಷೀರಸ್ವಾಮಿ, ಭೋಜ, ಧನಂಜಯ, ಆನಂದವರ್ಧನ ಮತ್ತು ವಾಮನ[1]ರು ವೇಣೀಸಂಹಾರದಿಂದ ವಾಕ್ಯಗಳನ್ನು ಉದ್ಧರಿಸಿದ್ದಾರೆ. ಇವರಲ್ಲೆಲ್ಲಾ ಪ್ರಾಚೀನನಾದ ವಾಮನನ ಕಾಲ ಕ್ರಿ.ಶ. 800. ಆದ್ದರಿಂದ ಭಟ್ಟನಾರಾಯಣನು ವಾಮನನಿಗಿಂತ ಹಿಂದಿನವನೆಂಬುದು ನಿರ್ವಿವಾದ. ನಾಟಕದ ಪ್ರಸ್ತಾವನೆಯಿಂದ ಅವನಿಗೆ ಮೃಗರಾಜನೆಂಬ ಉಪನಾಮಧೇಯವಿದ್ದಿತೆಂದು ತಿಳಿದುಬರುತ್ತದೆ[2].

ಲಾಕ್ಷಣಿಕರಿಗೂ, ಪಂಡಿತರಿಗೂ, ಪ್ರಿಯವಾದ ವೇಣೀಸಂಹಾರವು ಆರು ಅಂಕಗಳನ್ನುಳ್ಳ ಒಂದು ನಾಟಕ. ಇದರ ಕಥಾಸಾರಾಂಶ :

ಕೃಷ್ಣನು ಸಂಧಿಯನ್ನು ಬಯಸಿ ದುರ್ಯೋಧನನ ಆಸ್ಥಾನಕ್ಕೆ ಹೋದುದನ್ನು ಕೇಳಿ ಕೆರಳಿದ ಭೀಮನು ಆಯುಧಾಗಾರಕ್ಕೆಂದು ಹೊರಟು ದ್ರೌಪದಿಯ ಮನೆಗೆ ಹೋಗಿ ಅವಳನ್ನು ಭಾನುಮತಿಯು ಮೂದಲಿಸಿದ ಸಂಗತಿಯನ್ನು ತಿಳಿಯುತ್ತಾನೆ. ಅವನ ಕೋಪ, ಎಲ್ಲೆ ...ರುತ್ತದೆ ; ದುರ್ಯೋಧನನ ತೊಡೆಯನ್ನು ಮುರಿದು ರಕ್ತದಿಂದ ಒದ್ದೆಯಾದ ಕೈಯಿಂದ ದ್ರೌಪದಿಯ ಮುಡಿಯನ್ನು ಕಟ್ಟುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಕೃಷ್ಣನ ದೌತ್ಯವ್ಯರ್ಥ ...ಗುತ್ತದೆ ; ಯುಧಿಷ್ಠಿರನು ಯುದ್ಧವನ್ನು ಘೋಷಿಸುತ್ತಾನೆ. ಭಾನುಮತಿಗೆ ಕೆಟ್ಟ ಕನಸಾಗು...ದೆ : ಅದರ ಪರಿಹಾರಕ್ಕಾಗಿ ಅವಳು ಕೈಗೊಂಡಿದ್ದ ವ್ರತವನ್ನು ದುರ್ಯೋಧನನು ಭಂಗ...ಗೊಳಿಸುತ್ತಾನೆ. ದ್ರೋಣರ ಮರಣದಿಂದ ಕೋಪಗೊಂಡ ಅಶ್ವತ್ಥಾಮನು ತನ್ನನ್ನು ಸೇನಾಪತಿಯನ್ನಾಗಿ ಮಾಡೆಂದು ಅವನನ್ನು ಕೇಳುತ್ತಾನೆ. ಆ ಪದವಿಯನ್ನು ಕರ್ಣನಿಗೆ ಕೊಡಲು ...ಗಲೇ ನಿರ್ಣಯವಾಗಿದೆಯೆಂದು ಅವನು ತಿಳಿಸುತ್ತಾನೆ. ಅಲ್ಲಿದ್ದ ಕರ್ಣನಿಗೂ ಅಶ್ವತ್ಥಾಮನಿಗೂ

---

1. ಕಾವ್ಯಾಲಂಕಾರ ಸೂತ್ರವೃತ್ತಿ–IV, 3–28–ವಾಮನ
2. ತದಿದಂ ಮೃಗರಾಜ ಲಕ್ಷ್ಮಣೋ ಭಟ್ಟನಾರಾಯಣಸ್ಯ ಕೃತಿಂ ವೇಣೀಸಂಹಾರಂ ನಾಮ ನಾಟಕಂ ಪ್ರಯೋಕ್ತುಮುದ್ಯತಾ ವಯಂ–ವೇಣೀಸಂಹಾರ. ಭಟ್ಟನಾರಾಯಣನಿಗೆ ಈ ಉಪನಾಮಧೇಯವು ಯಾವ ದೊರೆಯಿಂದ ಅಥವಾ ಸಂಸ್ಥೆಯಿಂದ ಬಂದಿತೋ ತಿಳಿಯದು. ಮೃಗರಾಜಶಬ್ದಕ್ಕೆ ಚಂದ್ರನೆಂಬರ್ಥವೊ ಅಥವಾ ಸಿಂಹವೆಂದೋ ಅದೂ ಗೊತ್ತಾಗುವುದಿಲ್ಲ.

ಜಗಳ ನಡೆದು ಕರ್ಣ ಬದುಕಿರುವವರೆಗೆ ತಾನು ಆಯುಧವನ್ನು ಹಿಡಿಯುವುದಿಲ್ಲವೆಂದು ಹೇಳಿ ಅಶ್ವತ್ಥಾಮನು ಹೊರಟುಹೋಗುತ್ತಾನೆ. ಯುದ್ಧದಲ್ಲಿ ಕರ್ಣನು ಮಡಿಯುತ್ತಾನೆ. ದುರ್ಯೋಧನನು ತಾನೇ ಸೇನಾಪತಿಯಾಗಿ ಶತ್ರುಗಳನ್ನು ಕೊಲ್ಲಲು ನಿಶ್ಚಯಿಸುತ್ತಾನೆ. ಸಂಧಿಮಾಡಿಕೊಳ್ಳುವಂತೆ ತಂದೆತಾಯಿಗಳು ಕೊಟ್ಟ ಸಲಹೆಯನ್ನು ಅವನು ಕೇಳುವುದಿಲ್ಲ. ಭೀಮನು ಮರುದಿನ ಸಾಯಂಕಾಲದೊಳಗೆ ಅವನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಕೊಳದಲ್ಲಿ ಅವಿತಿದ್ದ ದುರ್ಯೋಧನನಿಗೂ ಭೀಮನಿಗೂ ಕಾಳಗ ಪ್ರಾರಂಭವಾಗುತ್ತದೆ ದುರ್ಯೋಧನನ ಮಿತ್ರನಾದ ಚಾರ್ವಾಕನೆಂಬ ರಾಕ್ಷಸನು ಋಷಿವೇಷದಿಂದ ಯುಧಿಷ್ಠಿರನ ಸಮೀಪಕ್ಕೆ ಬಂದು ಭೀಮನು ಸತ್ತನೆಂದೂ, ಇನ್ನೇನು ಅರ್ಜುನನೂ ಸತ್ತಿರಬಹುದೆಂದೂ, ತಿಳಿಸುತ್ತಾನೆ. ಅದನ್ನು ಕೇಳಿ ಧರ್ಮರಾಯ ದ್ರೌಪದಿಯರು ಅಗ್ನಿಪ್ರವೇಶಕ್ಕೆ ಸಿದ್ಧರಾಗುತ್ತಾರೆ. ಈ ವೇಳೆಗೆ ದುರ್ಯೋಧನನನ್ನು ಕೊಂದು ಮೈಯೆಲ್ಲಾ ರಕ್ತವಾಗಿ ಭೀಮನು ಅಲ್ಲಿಗೆ ಬರುತ್ತಾನೆ, ಅವರು ಅವನನ್ನು ದುರ್ಯೋಧನನೆಂದು ಭ್ರಮಿಸಿ ಭಯಪಡುತ್ತಾರೆ. ಕೃಷ್ಣಾರ್ಜುನರೂ ಅಲ್ಲಿಗೆ ಬಂದು ಸೇರುತ್ತಾರೆ. ನಿಜವಾದ ಸಂಗತಿಯು ತಿಳಿದುಬರುತ್ತದೆ. ದ್ರೌಪದಿಯ ವೇಣೀಸಂಹಾರವೂ, ಧರ್ಮರಾಯನ ಪಟ್ಟಾಭಿಷೇಕವೂ ನಡೆಯುತ್ತವೆ.

ಕವಿಯು ತನ್ನ ನಾಟಕಕ್ಕೆ ಮಹಾಭಾರತದಿಂದ ವಸ್ತುವನ್ನು ತೆಗೆದುಕೊಂಡಿದ್ದಾನೆ. ಕೃಷ್ಣ ಸಂಧಾನದಿಂದ ಹಿಡಿದು ದುರ್ಯೋಧನಸಂಹಾರದವರೆಗಿನ ಕಥೆ ಈ ನಾಟಕದಲ್ಲಿದೆ. ದುಃಶಾಸನನು ತನ್ನ ಮುಡಿಯನ್ನು ಹಿಡಿದು ಎಳೆದಂದಿನಿಂದ ದ್ರೌಪದಿಯು ಅದನ್ನು ಕಟ್ಟದೆ ಬಿಟ್ಟಿದ್ದಳು. ದುರ್ಯೋಧನಾದಿಗಳ ಸಂಹಾರವಾದ ಮೇಲೆ ಭೀಮನು ಅವಳ ಮುಡಿಯನ್ನು ಕಟ್ಟಿದನು. ವೇಣಿಯ ಸಂಹಾರವು (ಸಂಹರಣ—ಒಟ್ಟುಗೂಡಿಸುವುದು, ಕಟ್ಟುವುದು) ಉಪವರ್ಣಿತವಾಗಿರುವುದರಿಂದ ಈ ನಾಟಕಕ್ಕೆ ವೇಣೀಸಂಹಾರವೆಂಬ ಹೆಸರನ್ನು ಕೊಡಲಾಗಿದೆ. ಈ ವೇಣಿಯು ಕೌರವರ ಸಂಹಾರಕ್ಕೂ ಕಾರಣವಾಯಿತು. ಕವಿಯು ದೊಡ್ಡ ಕಥೆಯನ್ನು ರಸವತ್ತಾಗಿ ಸಂಗ್ರಹಿಸಿದ್ದಾನೆ ; ಪಾತ್ರಗಳನ್ನು ಖಚಿತವೂ, ಉಜ್ವಲವೂ ಆಗಿ ರೂಪಿಸಿದ್ದಾನೆ. ಧನಂಜಯನು ತನ್ನ ದಶರೂಪಕದ ಅನೇಕ ಲಕ್ಷಣಗಳಿಗೆ ಈ ಕೃತಿಯಿಂದ ಉದಾಹರಣೆಗಳನ್ನು ತೆಗೆದುಕೊಂಡಿದ್ದಾನೆ. ಈ ನಾಟಕ ಲಕ್ಷಣಗಳನ್ನು ಮುಂದಿಟ್ಟುಕೊಂಡೇ ಬರೆದಂತಿದೆ.

ಯುಧಿಷ್ಠಿರನು ನಾಟಕದ ನಾಯಕ. ಮೊದಲನೆಯ ಅಂಕದಲ್ಲಿ ಭೀಮ ಮತ್ತು ಸಹದೇವರ ಸಂಭಾಷಣೆಯಿಂದ ಕೌರವರೊಡನೆ ಅವನ ಯುದ್ಧ ಘೋಷಣೆಯನ್ನು ತಿಳಿಯುತ್ತೇವೆ. ಅವನು ಕೊನೆಯದಾದ ಆರನೆಯ ಅಂಕದಲ್ಲಿ ಮಾತ್ರ ರಂಗದಮೇಲೆ ಕಾಣಿಸಿಕೊಳ್ಳುತ್ತಾನೆ. ಚಾರ್ವಾಕನ ಮೋಸಕ್ಕೆ ತುತ್ತಾಗಿ, ಭೀಮನು ಯುದ್ಧದಲ್ಲಿ ಸತ್ತನೆಂದು ತಿಳಿದು ದ್ರೌಪದಿಯೊಡನೆ ಅಗ್ನಿಪ್ರವೇಶಕ್ಕೆ ಸಿದ್ಧನಾಗುತ್ತಾನೆ. ವಿವೇಕ, ಕ್ಷಾತ್ರತೇಜಸ್ಸುಗಳಿಗೆ ಬದಲಾಗಿ ಅವನಲ್ಲಿ ಸಹೋದರ ಪ್ರೇಮವನ್ನು ಕಾಣುತ್ತೇವೆ. ಅವನು ಭೀಮಾರ್ಜುನರ ನೆರಳಿನ ಒಬ್ಬ ಮನುಷ್ಯನೆನಿಸಿಕೊಂಡಿರುವಂತೆ ಭಾಸವಾಗುತ್ತದೆ. ಅವನಲ್ಲಿ ಧೀರೋದಾತ್ತನ ವ್ಯಕ್ತಿ



ಸರಿಯಾಗಿ ರೂಪಿತವಾಗಿಲ್ಲ. ನಾಟಕದ ನಾಯಕ ಯುಧಿಷ್ಠಿರನೋ ಅಥವಾ ಭೀಮನೋ ಎಂಬ ಸಂದೇಹ ಸಹಜವಾಗಿ ಮೂಡುತ್ತದೆ. ನಾಟಕದಲ್ಲಿ ಭೀಮನ ಪಾತ್ರ ಉಜ್ವಲವಾಗಿ ಬಂದಿದೆ. ಕ್ಷಾತ್ರತೇಜಸ್ಸಿನ ಅಪಕರ್ಷ ಅವನಿಗೆ ಹಿಡಿಸದು ; ಶತ್ರುಗಳೊಡನೆ ಸಂಧಿ ಅವನಿಗೆ ಸಮ್ಮತವಲ್ಲ. ಧರ್ಮರಾಯನಿಗೆ "ಅದ್ಯೈಕಂ ದಿವಸಂ ಮಮಾಸಿ ನಗುರುರ್ನಾಹಂ ವಿಧೇಯಸ್ತವ" ಎಂದು ಹೇಳಿ ಕಳುಹಿಸುವುದಕ್ಕೂ ಅವನು ಹಿಂಜರಿಯುವುದಿಲ್ಲ. ಆಯುಧಾಗಾರವೆಂದು ದ್ರೌಪದಿಯ ಮನೆಗೆ ಹೋದುದು ಅವನ ಕೋಪದ ಪರಾಕಾಷ್ಠೆಯನ್ನು ತಿಳಿಸುತ್ತದೆ. ದುಃಶಾಸನನ ಎದೆಯನ್ನು ಬಗೆದು ರಕ್ತವನ್ನು ಕುಡಿಯದೆ, ದುರ್ಯೋಧನನ ತೊಡೆಯನ್ನು ಮುರಿದು ಆ ರಕ್ತವನ್ನು ಸವರಿ ದ್ರೌಪದಿಯ ಮುಡಿಯನ್ನು ಕಟ್ಟದೆ ಭೀಮನ ಕೋಪ ಹಿಂಗದು. "ಮಥ್ನಾಮಿ ಕೌರವಶತಂ ಸಮರೇ ನ ಕೋಪಾತ್, ದುಃಶಾಸನಸ್ಯ ರುಧಿರಂ ನ ಪಿಬಾಮ್ಯುರಸ್ತಃ. ಸಂಚೂರ್ಣಯಾಮಿ ಗದಯಾ ನ ಸುಯೋಧನೋರೂ," ಈ ಮಾತುಗಳು ಅವನ ಕೋಪ, ಆತ್ಮಶ್ಲಾಘನೆ ಮತ್ತು ರುದ್ರಸ್ವಭಾವಗಳನ್ನು ಪ್ರಕಟಿಸುತ್ತವೆ. ಭೀಮನ ಈ ಪ್ರತಿಜ್ಞೆಯು ದುರ್ಯೋಧನನಲ್ಲಿ ಅವನಿಗೆ ರೋಷವೆಷ್ಟಿದೆಯೆಂಬುದನ್ನು ತಿಳಿಸುತ್ತದೆ ! ಇಲ್ಲಿರುವ ಗೌಡೀ[1] ಶೈಲಿಯು ಆ ರೋಷಕ್ಕೆ ಪರಿಪೋಷಕವಾಗಿದೆ.

ಚಂಚದ್ಭುಜಭ್ರಮಿತಚಂಡಗದಾಭಿಘಾತ
ಸಂಚೂರ್ಣಿತೋರುಯುಗಲಸ್ಯ ಸುಯೋಧನಸ್ಯ ।
ಸ್ತ್ಯಾನಾವನದ್ಧಘನಶೋಣಿತಶೋಣಪಾಣಿ
ರುತ್ತಂಸಯಿಷ್ಯತಿ ಕಚಾಂಸ್ತವ ದೇವಿ ಭೀಮಃ ॥

ಅವನಿಗೆ ಭಗವಂತನಾದ ವಾಸುದೇವನಲ್ಲಿ ಬಹಳ ಭಕ್ತಿಯುಂಟು—

ಆತ್ಮಾರಾಮಾ ವಿಹಿತರತಯೋ ನಿರ್ವಿಕಲ್ಪೇ ಸಮಾಧೌ
ಜ್ಞಾನೋದ್ರೇಕಾದ್ವಿಘಟಿತತಮೋಗ್ರಂಥಯಃ ಸತ್ವನಿಷ್ಠಾಃ ।
ಯಂ ವೀಕ್ಷಂತೇ ಕಮಪಿ ತಮಸಾಂ ಜ್ಯೋತಿಷಾಂ ವಾ ಪರಸ್ತಾ
ತ್ತಂ ಮೋಹಾಂಧಃ ಕಥಮಯಮಮುಂ ವೇತ್ತು ದೇವಂ ಪುರಾಣಂ ॥

ದುರ್ಯೋಧನನಲ್ಲಿ ಛಲಲೋಭಾದಿ ದುರ್ಗುಣಗಳು ತುಂಬಿವೆ. ಅವನು ಮೋಹಾಂಧನೂ, ಮದಾಂಧನೂ ಆಗಿ ಕಾಣಿಸಿಕೊಳ್ಳುತ್ತಾನೆ. ದ್ರೋಣನಲ್ಲಿ, ಅಷ್ಟೇಕೆ ಅವನಿಗೆ ಪತ್ನಿಯಲ್ಲಿ ಸಹ ವಿಶ್ವಾಸ ಸಾಲದು. ಕರ್ಣನಲ್ಲಿ ಅವನಿಗೆ ಬಹಳ ಸ್ನೇಹ ವಿಶ್ವಾಸಗಳು. ಪ್ರಸ್ತಾವನೆಯಿಂದಲೇ ಅವನ ಅಪಶಕುನಗಳು ಪ್ರಾರಂಭವಾಗುತ್ತವೆ. ವಿಧಿಯು ಅವನಿಗೆ ಪ್ರತಿಕೂಲ. ಭೀಮನು ಅವನ ಕೋಪದ ಕೇಂದ್ರ. ಭೀಮನು ಅವನನ್ನು ಮೂದಲಿಸಿ ಐವರು ಪಾಂಡವರಲ್ಲಿ ಯಾರನ್ನಾದರೂ ಯುದ್ಧಕ್ಕೆ ಆರಿಸಿಕೋ ಎಂದಾಗ, "ಅಪ್ರಿಯೋಽಪಿ ಪ್ರಿಯೋ ಯೋದ್ಧುಂ ತ್ವಮೇವ ಪ್ರಿಯಸಾಹಸಃ," ಎಂದು ಅವನು ಹೇಳಿದನು. ಪರಾಕ್ರಮಿಯಾದ ಕರ್ಣನು ದುರಾಲೋಚನೆ,

---

1 ಓಜಃ ಪ್ರಕಾಶಕೈರ್ವರ್ಣೈರ್ಬಂಧ ಆಡಂಬರಃ ಪುನಃ ।
ಸಮಾಸಬಹುಲಾ ಗೌಡೀ .................. ॥

—ಸಾಹಿತ್ಯ ದರ್ಪಣ

ದುಷ್ಕೃತ್ಯಗಳಿಗೆ ಪ್ರೋತ್ಸಾಹಕನಾಗಿದ್ದಾನೆ. ಮಹಾವೀರನಾದ ಅಶ್ವತ್ಥಾಮನು ತಂದೆಯ ಮರಣದಿಂದ ದುಃಖಿತನಾಗಿ, ದುರ್ಯೋಧನನಿಂದ ಅವಮಾನಿತನಾಗಿ, ಕರ್ಣನೊಡನೆ ಜಗಳವಾಡಿ ಆಯುಧವನ್ನು ತ್ಯಜಿಸುತ್ತಾನೆ. ಅವನ ಈ ಮಾತು ಅವನ ರೌದ್ರ ಸ್ವಭಾವಕ್ಕೆ ನಿದರ್ಶನ—

ಯೋ ಯಃ ಶಸ್ತ್ರಂ ಬಿಭರ್ತಿ ಸ್ವಭುಜಗುರುಮದಃ ಪಾಂಡವೀನಾಂ ಚಮೂನಾಂ
ಯೋ ಯಃ ಪಾಂಚಾಲಗೋತ್ರೇ ಶಿಶುರಧಿಕವಯಾ ಗರ್ಭಶಯ್ಯಾಂ ಗತೋ ವಾ ।
ಯೋ ಯಸ್ತತ್ಕರ್ಮಸಾಕ್ಷೀ ಚರತಿ ಮಯಿ ರಣೇ ಯಶ್ಚ ಯಶ್ಚ ಪ್ರತೀಪಃ
ಕ್ರೋಧಾಂಧಸ್ತಸ್ಯ ತಸ್ಯ ಸ್ವಯಮಪಿ ಜಗತಾಮಂತಕಸ್ಯಾಂತಕೋಽಹಂ ॥

ಮೊದಲನೆಯ ಅಂಕದ ಭೀಮನ ವೀರಾವೇಶದ ಮಾತುಗಳೂ, ಮೂರನೆಯ ಅಂಕದ ಕರ್ಣಾಶ್ವತ್ಥಾಮರ ಹೋರಾಟವೂ ಆಕರ್ಷಕವಾಗಿವೆ. ಐದನೆಯ ಅಂಕವೇ ನಾಟಕದಲ್ಲೆಲ್ಲಾ ಉತ್ತಮವಾದ ಭಾಗ. ಕವಿಯು ಇದರಲ್ಲಿ ಕರುಣವನ್ನೂ ವೀರವನ್ನೂ ಚೆನ್ನಾಗಿ ಚಿತ್ರಿಸಿದ್ದಾನೆ. ಕುರುಕುಲ ಕಾನನದಲ್ಲಿ ಅಳಿದುಳಿದ ದುರ್ಯೋಧನನನ್ನು ನೋಡಲು ಧೃತರಾಷ್ಟ್ರ ಗಾಂಧಾರಿಯರು ರಣಭೂಮಿಗೆ ಬಂದು, ಮಗನ ಸ್ಥಿತಿಯನ್ನು ಕಂಡು ಮರುಗುತ್ತಾರೆ. ಕರ್ಣನು ಸತ್ತ ವಾರ್ತೆಯೂ ಬರುತ್ತದೆ. ನೂರುಜನ ಸೋದರರನ್ನು ಆಗಲೇ ಕಳೆದುಕೊಂಡಿದ್ದ ಸುಯೋಧನನ ದುಃಖ ಪ್ರವಾಹವಾಗಿ ಹರಿಯುತ್ತದೆ. ಅವನನ್ನು ಹುಡುಕಿಕೊಂಡು ಅವನ ಬಂಧು ಮಿತ್ರರ ನಾಶಕ್ಕೆ ಕಾರಣರಾದ ಭೀಮಾರ್ಜುನರೂ ಅಲ್ಲಿಗೆ ಬರುತ್ತಾರೆ. ದುರ್ಯೋಧನನ ಕೋಪಾಗ್ನಿ ಪ್ರಜ್ವಲಿಸುತ್ತದೆ. ಸಂಜೆಯಾದುದರಿಂದ ಯುಧಿಷ್ಠಿರನ ಆದೇಶದಂತೆ ಭೀಮಾರ್ಜುನರು ಶಿಬಿರಕ್ಕೆ ಹಿಂದಿರುಗುತ್ತಾರೆ. ಅಶ್ವತ್ಥಾಮನು ಪುನಃ ಆಯುಧವನ್ನು ಹಿಡಿದು ದುರ್ಯೋಧನನಿಗೆ ಸಹಾಯ ಮಾಡಲು ಬರುತ್ತಾನೆ. "ಮಮಾಪ್ಯಂತಂ ಪ್ರತೀಕ್ಷಸ್ವಕಃ ಕರ್ಣಃ ಕಃ ಸುಯೋಧನಃ" ಎಂದು ಅವನನ್ನು ದುರ್ಯೋಧನನು ತಿರಸ್ಕರಿಸುತ್ತಾನೆ.

ಇದು ಯುದ್ಧವೀರಪ್ರಧಾನವಾದ ನಾಟಕವಾದರೂ ರಂಗದಮೇಲೆ ಯುದ್ಧ ಬರುವುದಿಲ್ಲ. ಅದು ವರದಿಗಳಲ್ಲಿ ಸತ್ವಹೀನವಾಗಿ ಸೇರಿಹೋಗಿದೆ. ರಸಪೋಷಣೆ, ಪಾತ್ರ ಚಿತ್ರಣಗಳಲ್ಲಿ ಪ್ರತಿಭಾಶಾಲಿಯಾದ ಕವಿಯಾದರೂ ನಾಟಕ ಲಕ್ಷಣಗಳಿಗೆ ಮಾರುಹೋಗಿರುವುದರಿಂದ ನಾಟಕ ಕೀಳಾಗಿ ಪರಿಣಮಿಸಿದೆ. ಎರಡನೆಯ ಅಂಕದಲ್ಲಿ ಯುದ್ಧ ಪ್ರಾರಂಭವಾಗಿ ಭೀಷ್ಮಾದಿಗಳು ಹತರಾಗಿದ್ದರೂ ದುರ್ಯೋಧನನು ಪ್ರಣಯವಿಹಾರಕ್ಕಾಗಿ ಭಾನುಮತಿಯನ್ನು ಹುಡುಕಿಕೊಂಡು ಹೋಗುವುದು ಬಹಳ ವಿರಸವನ್ನುಂಟುಮಾಡುತ್ತದೆ. ಬೇರೆ ಪ್ರಸಂಗವಾಗಿದ್ದರೆ ಇಲ್ಲಿನ ಶೃಂಗಾರ ಚಿತ್ರಣವು ಶ್ಲಾಘ್ಯವೆನಿಸುತ್ತಿದ್ದಿತು. ದುರ್ಯೋಧನನಿಗೆ ಸುಂದರಕನು ಒಪ್ಪಿಸುವ ಯುದ್ಧದ ವರದಿಯು ಇಡೀ ನಾಲ್ಕನೆಯ ಅಂಕವನ್ನು ವ್ಯಾಪಿಸಿಕೊಂಡು ಅಭಿನಯಕ್ಕೆ ಹಾನಿಯನ್ನುಂಟುಮಾಡಿದೆ. ಆರನೆಯ ಅಂಕದಲ್ಲಿ ಭೀಮದುರ್ಯೋಧನರ ಯುದ್ಧ ಪಾಂಚಾಲಕನ ವರದಿಯಲ್ಲಿ ಸೇರಿಹೋಗಿದೆ. ಈ ದೀರ್ಘವರದಿಗಳಿಂದ ನಾಟಕ ನೀರಸವಾಗಿದೆ. ನಾಟಕವನ್ನು ಅದ್ಭುತದಲ್ಲಿ ಮುಗಿಸುವುದಕ್ಕಾಗಿ ಚಾರ್ವಾಕನನ್ನು ಸೃಷ್ಟಿಸಿಕೊಂಡಿರುವುದು ಅತಿಬುದ್ಧಿವಂತಿಕೆಯಾಗಿ ಕಾಣುತ್ತದೆ. ವಾಚಕಾಭಿನಯದ ವೀರಕ್ಕೆ ಕೊರತೆಯಿಲ್ಲ.



ನಾಟಕದ ಭಾಷೆ ಪ್ರೌಢ; ಶೈಲಿ ಗೌಡೀ. ಗೌಡಿಯು ವೀರಕ್ಕೆ ಅನುಕೂಲವಾದುದಾದರೂ ಈ ನಾಟಕದಲ್ಲಿ ಅದನ್ನು ಶೃಂಗಾರ ಚಿತ್ರಣ, ಉದ್ಯಾನ ವರ್ಣನೆ, ಸೂರ್ಯೋದಯ ವರ್ಣನೆ ಮುಂತಾದುವುಗಳಿಗೂ ಬಳಸಲಾಗಿದೆ. ಬಹಳ ಮಟ್ಟಿಗೆ ಗದ್ಯಪದ್ಯಗಳೆರಡೂ ಪೆಡಸಾಗಿವೆ. ಮಾತುಗಳಲ್ಲಿ ಒಳ್ಳೆಯ ಕೌಶಲವಿದೆ. ವಸಂತತಿಲಕಾ (39), ಶಾರ್ದೂಲವಿಕ್ರೀಡಿತ (32), ಶಿಖರಿಣೀ (35), ಸ್ರಗ್ಧರಾ (20) ವೃತ್ತಗಳನ್ನು ಹೆಚ್ಚಾಗಿ ಬಳಸಲಾಗಿದೆ. ಮಾಲಿನೀ, ಪುಷ್ಪಿತಾಗ್ರಾ ಮುಂತಾದ ವೃತ್ತಗಳ ಪ್ರಯೋಗವೂ ಇದೆ. ಕವಿಯ ಭಾಷಾಪ್ರಭುತ್ವ ಮತ್ತು ಪಾಂಡಿತ್ಯಗಳು ಶ್ಲಾಘನೀಯವಾಗಿವೆ.

ಭೀಮನಿಗೆ ರಣವೂ ಒಂದು ಯಜ್ಞ :

ಚತ್ವಾರೋ ವಯಮೃತ್ವಿಜಃ ಸ ಭಗವಾನ್ ಕರ್ಮೋಪದೇಷ್ಟಾ ಹರಿಃ
ಸಂಗ್ರಾಮಾಧ್ವರದೀಕ್ಷಿತೋ ನರಪತಿಃ ಪತ್ನೀ ಗೃಹೀತವ್ರತಾ ।
ಕೌರವ್ಯಾಃ ಪಶವಃ ಪ್ರಿಯಾಪರಿಭವಕ್ಲೇಶೋಪಶಾಂತಿಃ ಫಲಂ
ರಾಜನ್ಯೋಪನಿಮಂತ್ರಣಾಯ ರಸತಿ ಸ್ಫೀತಂ ಯಶೋದುಂದುಭಿಃ ॥

ಉದ್ಯಾನದ ವರ್ಣನೆ :

ಪ್ರಾಲೇಯಮಿಶ್ರಮಕರಂದಕರಾಲಕೋಶೈಃ
ಪುಷ್ಪೈಃ ಸಮಂ ನಿಪತಿತಾ ರಜನೀಪ್ರಬುದ್ಧೈಃ ।
ಅರ್ಕಾಂಶುಭಿನ್ನಮುಕುಲೋದರಸಾಂದ್ರಗಂಧ
ಸಂಸೂಚಿತಾನಿ ಕಮಲಾನ್ಯಲಯಃ ಪತಂತಿ ॥

ಪಂಪ, ರನ್ನರು ತಮ್ಮ ಕಾವ್ಯಗಳಿಗೆ ವೇಣೀಸಂಹಾರವನ್ನು ಪೂರ್ತಿಯಾಗಿ ಉಪಯೋಗಿಸಿಕೊಂಡಿದ್ದಾರೆ. ಇದರಿಂದ ಪಂಪಭಾರತದ ಹದಿಮೂರನೆಯ ಆಶ್ವಾಸಕ್ಕೂ, ಗದಾಯುದ್ಧದ ಬಹುಭಾಗಕ್ಕೂ ಕಳೆಬಂದಿದೆ.

## ರಾಜಶೇಖರ (ಸು. ಕ್ರಿ. ಶ. 900)

ರಾಜಶೇಖರನು ಮಹೇಂದ್ರಪಾಲ (ನಿರ್ಭಯರಾಜ)ನ ಗುರುವಾಗಿದ್ದನೆಂದು ಅವನ ನಾಟಕಗಳಿಂದ ತಿಳಿದುಬರುತ್ತದೆ. ಮಹೇಂದ್ರಪಾಲನು ಸು. ಕ್ರಿ. ಶ. 907ರಲ್ಲಿ ಕನೋಜ್ (ಕನ್ಯಾಕುಬ್ಜ) ನಲ್ಲಿ ಆಳುತ್ತಿದ್ದನು. ರಾಜಶೇಖರನು ತನ್ನ ಕಾವ್ಯಮೀಮಾಂಸೆಯಲ್ಲಿ ಆನಂದವರ್ಧನ (ಸು. ಕ್ರಿ. ಶ. 860)ನ ಅಭಿಪ್ರಾಯವನ್ನು ಅನುವಾದ ಮಾಡಿದ್ದಾನೆ. ಸೋಮದೇವ (950)ನು ತನ್ನ ಯಶಸ್ತಿಲಕಚಂಪುವಿನಲ್ಲಿ ರಾಜಶೇಖರನನ್ನು ನಿರ್ದೇಶಿಸಿದ್ದಾನೆ. ಆದ್ದರಿಂದ ರಾಜಶೇಖರನ ಕಾಲ ಸು. ಕ್ರಿ. ಶ. 900 ಎಂದು ಹೇಳಬಹುದು. ಬಾಲಭಾರತದ ಪ್ರಸ್ತಾವನೆಯಲ್ಲಿ ಮಹೇಂದ್ರಪಾಲನ ಮಗ ಶ್ರೀಮಹೀಪಾಲ (917)ನ ಹೆಸರು ಬಂದಿರುವುದರಿಂದ ಇವನು ಅವನ ಕಾಲದಲ್ಲಿಯೂ ಇದ್ದನೆಂದು ತೋರುತ್ತದೆ.

ರಾಜಶೇಖರನು ಯಾಯಾವರ ವಂಶಕ್ಕೆ ಸೇರಿದವನು; ಅಕಾಲಜಲದ, ಸುರಾನಂದ, ತರಲ, ಕವಿರಾಜ ಮುಂತಾದವರು ಅವನ ಪೂರ್ವಿಕರು; ಅಕಾಲಜಲದ ಅವನ ಮುತ್ತಾತ! ದರ್ದುಕ

(ದುಹಿಕ) ಶೀಲವತಿಯರು ಅವನ ತಂದೆತಾಯಿಗಳು. ಅವನ ತಂದೆ ಮಹಾಮಂತ್ರಿಯಾಗಿದ್ದಂತೆ ಕಾಣುತ್ತದೆ. ಅವಂತಿಸುಂದರಿಯು ಅವನ ಹೆಂಡತಿ. ಅವಳು ವಿದ್ಯಾವತಿಯಾಗಿದ್ದಳೆಂದು ತೋರುತ್ತದೆ. ರಾಜಶೇಖರನು ಪ್ರಾಯಶಃ 'ಶೈವಬ್ರಾಹ್ಮಣ[1]'. ಅವನು ಮಹಾರಾಷ್ಟ್ರದಲ್ಲಿ ಹುಟ್ಟಿ ಬೆಳೆದು, ಕನೂಜಿನಲ್ಲಿ ರಾಜಾಶ್ರಯ ಪಡೆದಂತೆ ಊಹಿಸಲು ಅವಕಾಶವಿದೆ. ಅವನು ತನ್ನನ್ನು 'ಬಾಲಕವಿ', 'ಕವಿರಾಜ' ಎಂದು ಕರೆದುಕೊಂಡಿದ್ದಾನೆ. ಅಲ್ಲದೆ ಅವನು ತನ್ನನ್ನು 'ಸರ್ವಭಾಷಾವಿಚಕ್ಷಣ'ನೆಂದೂ, 'ಸರ್ವರೀತಿನಿಬಂಧಕರ್ತ'ನೆಂದೂ ಹೊಗಳಿಕೊಂಡಿದ್ದಾನೆ. ಅವನು ತನ್ನ ಹಿಂದಿನ ಅನೇಕ ಸಂಸ್ಕೃತ ಕವಿಗಳ ಕೃತಿಗಳನ್ನು ಓದಿ ಘನಪಂಡಿತನಾಗಿದ್ದನು. ಅವನು ಹರ್ಷ, ಭವಭೂತಿಗಳ ನಾಟಕಗಳನ್ನು ಬಹಳ ಮೆಚ್ಚಿಕೊಂಡಿದ್ದಂತೆ ತೋರುತ್ತದೆ. ಇದು ಅವನ ಆತ್ಮಪ್ರಶಂಸೆ.

ಯದ್ವಾ ಕಿಂ ವಿನಯೋಕ್ತಿಭಿಃ ಮಮ ಗಿರಾಂ ಯದ್ಯಸ್ತಿ ಸೂಕ್ತಾಮೃತಂ ।
ಮಾದ್ಯಂತಿ ಸ್ವಯಮೇವ ತತ್ಸುಮನಸೋ ಯಾಜ್ಞಾಪರಂ ದೈನ್ಯಭೂ॥

ರಾಜಶೇಖರನು 'ಬಾಲರಾಮಾಯಣ', 'ಬಾಲಭಾರತ', 'ಕರ್ಪೂರಮಂಜರೀ' 'ವಿದ್ಧಶಾಲಭಂಜಿಕಾ' ಎಂಬ ನಾಲ್ಕು ರೂಪಗಳನ್ನೂ 'ಕಾವ್ಯಮೀಮಾಂಸಾ' ಎಂಬ ಅಲಂಕಾರ ಗ್ರಂಥವನ್ನೂ ಬರೆದಿದ್ದಾನೆ. ಅವನು 'ಹರವಿಜಯ'ವೆಂಬ ಮಹಾಕಾವ್ಯವನ್ನು 'ಭುವನಕೋಶ'ವೆಂಬ ಭೂವಿವರಣೆಯನ್ನೂ ಬರೆದಿದ್ದಂತೆ ತಿಳಿದು ಬರುತ್ತದೆ. 'ಸೂಕ್ತಿಮುಕ್ತಾವಳೀ' ಮುಂತಾದ ಸಂಗ್ರಹ ಗ್ರಂಥಗಳಲ್ಲಿ ರಾಜಶೇಖರನ ಹೆಸರಿನಲ್ಲಿರುವ ಪದ್ಯಗಳು ಈ ನಾಟಕಗಳಲ್ಲಿಲ್ಲ. ಆದ್ದರಿಂದ ಅವನು ಬೇರೆ ಕೆಲವು ಕೃತಿಗಳನ್ನೂ ರಚಿಸಿರಬಹುದು ಅಥವಾ ಸಂಗ್ರಹಕಾರರು ತಪ್ಪುಮಾಡಿರಬಹುದು. ಅವನು ಬಾಲರಾಮಾಯಣದ ಪ್ರಸ್ತಾವನೆಯಲ್ಲಿ ಆರು ನಾಟಕಗಳನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ.

ಬ್ರೂತೇ ಯಃ ಕೋಽಪಿ ದೋಷಂ ಮಹದಿತಿ ಸುಮತಿಃ ಬಾಲರಾಮಾಯಣೇಽಸ್ಮಿನ್
ಪ್ರಷ್ಟವ್ಯೋಸೌ ಪಟೀಯಾನಿಹ ಭಣಿತಿಗುಣೋ ವಿದ್ಯತೇ ನ ವೇತಿ ।
ಯದ್ಯಸ್ತಿ ಸ್ವಸ್ತಿ ತುಭ್ಯಂ ಭವ ಪಠನರುಚಿರ್ವಿದ್ಧಿ ನಃ ಷಟ್‌ಪ್ರಬಂಧಾನ್
ನೈವಂ ಚೇದ್ದೀರ್ಘಮಾಸ್ತಾಂ ನಟವಟುವದನೇ ಜರ್ಜರಾ ಕಾವ್ಯಕಂಥಾ ॥

ಬಾಲರಾಮಾಯಣ :—

ವಿಶ್ವಾಮಿತ್ರನು ತನ್ನ ಯಜ್ಞ ರಕ್ಷಣೆಗಾಗಿ ರಾಮನನ್ನು ಕರೆತರುತ್ತಾನೆ. ಜನಕನು ಮಿಥಿಲೆಯಲ್ಲಿ ಶಿವಧನುಸ್ಸನ್ನು ಬಗ್ಗಿಸಿದವರಿಗೆ ಸೀತೆಯನ್ನು ಕೊಡುವುದಾಗಿ ಘೋಷಿಸುತ್ತಾನೆ. ಪಣದಿಂದ ಹೆಣ್ಣನ್ನು ಪಡೆಯುವುದು ತನಗೆ ಅವಮಾನವೆಂದು ಭಾವಿಸಿ ರಾವಣನು ಸೀತೆಯನ್ನು ಯಾರು ಮದುವೆಯಾಗುವರೋ ಅವರನ್ನು ಕೊಲ್ಲುವನೆಂಬ ಪ್ರತಿಜ್ಞೆ ಮಾಡಿ ಹೋಗುತ್ತಾನೆ. ಭರತ ಮುನಿಯು ಇಂದ್ರನ ಅಪ್ಪಣೆಯಂತೆ ದೇವ ಸಭೆಯಲ್ಲಿ ರಚಿಸಿ ಆಡಿಸಿದ 'ಸೀತಾಸ್ವಯಂವರ'ವನ್ನು ಲಂಕೆಯಲ್ಲಿ ರಾವಣನ ವಿನೋದಕ್ಕಾಗಿ ಆಡಿಸುತ್ತಾನೆ. ರಾಮನಿಂದ ಧನುರ್ಭಂಗವಾದ ಮೇಲೆ ಅವನೊಡನೆ ಪರಶುರಾಮನು ಯುದ್ಧಕ್ಕೆ ಬರುತ್ತಾನೆ. ವಿರಹಿಯಾದ ರಾವಣ ಯಂತ್ರಸೀತೆಯೊಡನೆ ಸರಸವಾಡುತ್ತಾನೆ. ದಶರಥ ಕೈಕೆಯರು ದೇವಲೋಕಕ್ಕೆ ಹೋಗಿದ್ದಾಗ ಮಾಯಾಮಯ, ಶೂರ್ಪಣಖಿಯರು ಅವರ ರೂಪದಿಂದ ಬಂದು ರಾಮನು ಕಾಡಿಗೆ ಹೋಗುವಂತೆ ಮಾಡುತ್ತಾರೆ. ಸೀತೆಯು ಅಪಹರಣವಾಗುತ್ತದೆ. ನಳನು ಸಮುದ್ರಕ್ಕೆ ಸೇತುವೆ ಕಟ್ಟುತ್ತಾನೆ. ಲಂಕೆಯಲ್ಲಿ ಯುದ್ಧ ನಡೆದು ರಾವಣಾದಿಗಳ ಸಂಹಾರವಾಗುತ್ತದೆ. ರಾಮನು ಅಗ್ನಿಶುದ್ಧಳಾದ ಸೀತೆಯೊಡನೆ ಅಯೋಧ್ಯೆಗೆ ಬರುತ್ತಾನೆ. ರಾಮಪಟ್ಟಾಭಿಷೇಕ ನಡೆಯುತ್ತದೆ.

ರಾಜಶೇಖರನು ಮಹೇಂದ್ರಪಾಲನ ಕೋರಿಕೆಯಂತೆ ಬಾಲರಾಮಾಯಣವನ್ನು ರಚಿಸಿದನು. ಈ ನಾಟಕದಲ್ಲಿ ವಿಶ್ವಾಮಿತ್ರನು ಯಜ್ಞಕ್ಕೆ ರಾಮನನ್ನು ಕರೆತರುವುದರಿಂದ ಮೊದಲ್ಗೊಂಡು ರಾಮಾಯಣದ ಪೂರ್ತಿ ಕಥೆ ಇದೆ. ಮಹಾವೀರ ಚರಿತದ ಗುಣದೋಷಗಳೆಲ್ಲಾ ಈ ನಾಟಕದಲ್ಲಿಯೂ ಇವೆ. ಇದರ ಪ್ರಸ್ತಾವನೆಯು ಸುಮಾರು ಒಂದು ಅಂಕದಷ್ಟು ವಿಸ್ತಾರವಾಗಿದೆ. ರಾವಣನಿಗೆ ಮೊದಲಿನಿಂದಲೂ ಸೀತೆಯಲ್ಲಿ ಆಸಕ್ತಿಯಿದ್ದಿತು. ಕೈಕೆ ದಶರಥರು ನಿರಪರಾಧಿಗಳು. ಸೀತಾಸ್ವಯಂವರಾಭಿನಯವನ್ನು ನೋಡಿ, ಯಂತ್ರಸೀತೆಯೊಡನೆ ಸರಸವಾಡಿ ರಾವಣನು ವಿನೋದಪಟ್ಟಿದ್ದು ಬಹಳ ಆಭಾಸವಾಗಿ ಕಾಣುತ್ತದೆ. ಭವಭೂತಿಯ ಅನುಕರಣದ ಫಲವಾಗಿ ಗರ್ಭಾಂಕ ಬಂದಿದೆ. ದೀರ್ಘವರ್ಣನೆಗಳು ಹೆಚ್ಚು; ವಾಕ್ಪ್ರೌಢಿಮೆಗೇ ಪ್ರಾದಾನ್ಯ; ಪ್ರತಿ ಅಂಕಕ್ಕೂ ಒಂದೊಂದು ವಿಷ್ಕಂಭಕವಿದೆ. ಬಹಳ ವಿಷ್ಕಂಭಕಗಳು ಮತ್ತು ಸಂವಾದಗಳಿಂದ ರಸೋತ್ಕರ್ಷಕ್ಕೆ ಚ್ಯುತಿ ಬಂದಿದೆ. ಗದ್ಯ ಕಡಿಮೆ; ಪದ್ಯಗಳು ಹೆಚ್ಚು (741). ಶಾರ್ದೂಲವಿಕ್ರೀಡಿತ (203)[1] ಮತ್ತು ಸ್ರಗ್ಧರಾ (89) ವೃತ್ತಗಳ ಪ್ರಯೋಗ ಅಧಿಕವಾಗಿದೆ. ಜನಕನು ಸೀತೆಗೆ ತಿಳಿಸಿದ ಕುಲವಧೂಧರ್ಮ—

ಅಭ್ಯುತ್ಥಾನಮುಪಾಗತೇ ಗೃಹಪತೌ ತದ್ಭಾಷಣೇ ನಮ್ರತಾ
ತತ್ಪಾದಾರ್ಪಿತದೃಷ್ಟಿರಾಸನವಿಧಿಸ್ತಸ್ಯೋಪಚರ್ಯಾ ಸ್ವಯಂ ।
ಸುಪ್ತೇ ತತ್ರ, ಶಯೀತ ತತ್ಪ್ರಥಮತೋ ಜಹ್ಯಾಚ್ಚ ಶಯ್ಯಾಮಿತಿ
ಪ್ರಾಚ್ಯೈಃ ಪುತ್ರಿ ನಿವೇದಿತಾಃ ಕುಲವಧೂಸಿದ್ಧಾಂತಧರ್ಮಾ ಅಮೀ ॥

ಬಾಲಭಾರತ ಅಥವಾ ಪ್ರಚಂಡ ಪಾಂಡವ :—

ಇದು ಮಹೀಪಾಲನ ಕೋರಿಕೆಯಂತೆ ರಚಿತವಾದ ನಾಟಕ, ಇದರ ಎರಡು ಅಂಕಗಳು ಮಾತ್ರ ದೊರೆತಿವೆ. ಬಾಲರಾಮಾಯಣದಲ್ಲಿ ಸಮಗ್ರ ರಾಮಾಯಣದ ಕಥೆಯನ್ನು ತಂದಿರುವಂತೆ ಇದರಲ್ಲಿ ಸಮಗ್ರ ಭಾರತದ ಕಥೆಯನ್ನು ತರುವ ಉದ್ದೇಶ ರಾಜಶೇಖರನಿಗಿದ್ದಿರಬಹುದು. ಇದನ್ನು ಅವನ ಕೊನೆಯ ನಾಟಕವೆಂದು ಭಾವಿಸಲಾಗಿದೆ.

ನಾಟಕದ ಪ್ರಾರಂಭದಲ್ಲಿ ವ್ಯಾಸ ವಾಲ್ಮೀಕಿಗಳು ಪ್ರವೇಶಿಸುತ್ತಾರೆ; ವ್ಯಾಸರು ತಾವು ಬರೆದ ಭಾರತವನ್ನು ವಾಲ್ಮೀಕಿಗಳಿಗೆ ತೋರಿಸುತ್ತಾರೆ. ಮೊದಲನೆಯ ಅಂಕದಲ್ಲಿ ದ್ರೌಪದಿಯು

1. ಅವನು ಕ್ಷತ್ರಿಯನೆಂಬ ಅಭಿಪ್ರಾಯವೂ ಇದೆ.

1. ಶಾರ್ದೂಲವಿಕ್ರೀಡಿತೈರೇವ ಪ್ರಖ್ಯಾತೋ ರಾಜಶೇಖರಃ—ಕ್ಷೇಮೇಂದ್ರ.

ಸ್ವಯಂವರವೂ, ಎರಡನೆಯದರಲ್ಲಿ ದ್ಯೂತ, ದ್ರೌಪದೀವಸ್ತ್ರಾಪಹರಣ, ಪಾಂಡವರ ವನ ಪ್ರಯಾಣಗಳು ಬಂದಿವೆ. ಪಾತ್ರ ಚಿತ್ರಣ, ವರ್ಣನೆ ಮುಂತಾದುವುಗಳ ವಿಷಯದಲ್ಲಿ ಈ ನಾಟಕ ಬಾಲರಾಮಾಯಣವನ್ನೇ ಹೋಲುತ್ತದೆ. ಅಲ್ಲಲ್ಲಿ ವ್ಯಾಸಭಾರತದ ಪದ್ಯಗಳನ್ನು ಬಳಸಿಕೊಳ್ಳಲಾಗಿದೆ. ಮಧುಪ್ರಿಯನಾದ ಬಲರಾಮನ ಈ ವರ್ಣನೆ ವಿನೋದವಾಗಿದೆ—

ಕಿಂ ಕಿಂ ಕಿಂ ಚು ಚು ಚುಂಬನೈರ್ಮಮ ಮುಧಾ ವಕ್ತ್ರಾಂಬುಜಸ್ಯಾಗ್ರತೋ
ದೇ ದೇ ದೇಹಿ ಪಿ ಪಿ ಪ್ರಿಯೇ ಸು ಸು ಸುರಾಂ ಪಾತ್ರೇತ್ರಿ ರೇ ರೇವತಿ ।
ಮಾ ಮಾ ಮಾ ವಿ ವಿಲಂಬನಂ ಕು ಕು ಕುರು ಪ್ರೇಮ್ಣಾ ಹಲೀ ಯಾಚತೇ
ಯಸ್ಯೇತ್ಥಂ ಮದಘೂರ್ಣಿತಸ್ಯ ತರಸಾ ವಾಚಃ ಸ್ಖಲಂತ್ಯಾಕುಲಾಃ ॥

ವಿದ್ಧಶಾಲಭಂಜಿಕಾ :—

ಇದು ನಾಲ್ಕು ಅಂಕಗಳ ನಾಟಿಕೆ. ಪ್ರಸ್ತಾವನೆಯಲ್ಲಿ 'ಯುವರಾಜದೇವ' ನ ಅಪ್ಪಣೆಯಂತೆ ಇದನ್ನು ಆಡಿದ್ದಾಗಿ ಹೇಳಲಾಗಿದೆ. ಈ ಯುವರಾಜನು ಮಹೀಪಾಲನೋ ಚೇದಿರಾಜ ಕುಮಾರನೋ ತಿಳಿಯದು. ರಾಜಶೇಖರನು ಹರ್ಷನ ರತ್ನಾವಳೀ ಮತ್ತು ಪ್ರಿಯದರ್ಶಿಕೆಗಳನ್ನು ಅನುಕರಿಸಿ ವಿದ್ಧಶಾಲಭಂಜಿಕೆ ಮತ್ತು ಕರ್ಪೂರಮಂಜರಿಗಳನ್ನು ಬರೆದಿದ್ದಾನೆ. ಇದು ವಿದ್ಧಶಾಲಭಂಜಿಕೆಯ ಕಥಾಸಂಗ್ರಹ—

ತ್ರಿಲಿಂಗ ರಾಜನಾದ ವಿದ್ಯಾಧರಮಲ್ಲನಿಗೆ ಮದನವತಿಯೆಂಬ ಹೆಂಡತಿಯಿದ್ದಳು. ಅವಳ ಸೋದರ ಮಾವನಾದ ಚಂದ್ರವರ್ಮನಿಗೆ ಗಂಡು ಮಕ್ಕಳಿರಲಿಲ್ಲ. ಅವನು ತನ್ನ ಮಗಳಾದ ಮೃಗಾಂಕಾವಳಿಯನ್ನು ಗಂಡುವೇಷದಿಂದ ಬೆಳೆಸಿ ಮದನವತಿಯ ಹತ್ತಿರ ಬಿಟ್ಟಿದ್ದನು. ಕುಂತಲ ರಾಜನಾದ ಚಂದ್ರಮಹಾಸೇನನು ತನ್ನ ಮಗಳಾದ ಕುವಲಯಮಾಲೆಯನ್ನು ಗಂಡು ವೇಷದ ಅವಳಿಗೆ ಮದುವೆ ಮಾಡಲು ಇಚ್ಛಿಸಿ ಮದನವತಿಯ ಹತ್ತಿರವೇ ಬಿಟ್ಟಿದ್ದನು.

ಮೃಗಾಂಕಾವಳಿಯನ್ನು ಮದುವೆಯಾದವನು ಚಕ್ರವರ್ತಿಯಾಗುವನೆಂದು ಸಿದ್ಧಾದೇಶವಿದ್ದಿತು. ಇವನ್ನು ತಿಳಿದು ಮಂತ್ರಿಯಾದ ಭಾಗುರಾಯಣನು ಉಪಾಯದಿಂದ ಅವಳನ್ನು ರಾಜನ ಶಯ್ಯಾಗಾರಕ್ಕೆ ಕಳುಹಿಸಿ ಅವನ ಕೊರಳಿಗೆ ಮುತ್ತಿನ ಹಾರವನ್ನು ಹಾಕಿಸಿದನು. ರಾಜನಿಗೆ ಇದು ಸ್ವಪ್ನವೆನಿಸಿತು. ಅವನು ಅವಳು ಉಯ್ಯಾಲೆಯಾಡುತ್ತಿರುವುದನ್ನು ಕಂಡನು; ನಂತರ ಅವಳನ್ನು ಸ್ಫಟಿಕಶಿಲಾ ಮಂದಿರದಲ್ಲಿ ಚಿತ್ರರೂಪವಾಗಿಯೂ, ವಿಗ್ರಹರೂಪವಾಗಿಯೂ, ಚೆಂಡಾಡುವಾಗ ಸಾಕ್ಷಾತ್ತಾಗಿಯೂ ಕಂಡನು. ಮೃಗಾಂಕಾವಳಿ ಗಂಡಸೆಂದೂ, ಅವಳಿಗೆ ಹೆಣ್ಣಿನ ವೇಷಹಾಕಿ ರಾಜನಿಗೆ ಮದುವೆಮಾಡಿ ವಿನೋದ ಪಡಬೇಕೆಂದೂ ರಾಣಿಯು ಸಿದ್ಧತೆ ನಡೆಸಿ ತಾನೇ ಮೋಸಹೋದಳು, ಅವಳು ಅದದ್ದಕ್ಕೆ ಯೋಚಿಸದೆ ಕುವಲಯಮಾಲೆಯನ್ನೂ ತನ್ನ ಗಂಡನಿಗೆ ಮದುವೆಮಾಡಿಸಿದಳು. ವಿದ್ಯಾಧರಮಲ್ಲನು ಚಕ್ರವರ್ತಿಯಾದನು.

ಈ ನಾಟಿಕೆಯಲ್ಲಿ ನಾಯಕನು ರಾಣಿಯ ಸಹಾಯದಿಂದ ಇಬ್ಬರನ್ನು ಮದುವೆಯಾಗುತ್ತಾನೆ. ಮೃಗಾಂಕಾವಳಿಯನ್ನು ಗಂಡುವೇಷದಿಂದ ಬೆಳೆಸಿ, ಹೆಣ್ಣುವೇಷದಿಂದ ಮದುವೆಮಾಡಿಸಿರುವುದು ಚಮತ್ಕಾರವಾಗಿ ಕಂಡರೂ ಅಸಹಜವೂ ಅವಿಶ್ವಾಸ್ಯವೂ ಆಗಿದೆ. ರಾಣಿಯು ತಮಾಷೆಗಾಗಿ



ಚೇಟನಿಗೆ ಹೆಣ್ಣುವೇಷ ಹಾಕಿಸಿ ವಿದೂಷಕನಿಗೆ ಮದುವೆಮಾಡಿಸುತ್ತಾಳೆ; ವಿದೂಷಕನು ರಾಣಿಯ ಚೇಟಿಯನ್ನು ಹೆದರಿಸಿ ತನ್ನ ಕಾಲಕೆಳಗೆ ನುಸಿಯುಂತೆ ಮಾಡುತ್ತಾನೆ. ಈ ಕಲ್ಪನೆಗಳು ಉಚಿತವೂ ಅಲ್ಲ, ಗಂಭೀರವೂ ಅಲ್ಲ. ಪರಾಕ್ರಮಿಯೂ, ಕಲಾಸಕ್ತನೂ, ಮಧುರ ಸ್ವಭಾವದವನೂ ಆದ ವತ್ಸರಾಜನ ಮುಂದೆ ವಿದ್ಯಾಧರಮಲ್ಲನು ಕಾಂತಿಹೀನ ; ವಾಸವದತ್ತೆಯ ಪ್ರೇಮ, ಗಾಂಭೀರ್ಯಗಳು ಮದನವತಿಯಲ್ಲಿಲ್ಲ ; ಭಾಗುರಾಯಣನು ಯೌಗಂಧರಾಯಣನಿಗೆ ಸಾಟಿಯಲ್ಲ. ನಾಯಕನು 'ಕೇಳಿಕೈಲಾಸ' ವೆಂಬ ಸ್ಫಟಿಕಶಿಲಾ ಮಂದಿರದಲ್ಲಿ ವಿಗ್ರಹರೂಪವಾಗಿ ನೋಡುವುದರಿಂದ ನಾಟಿಕೆಗೆ 'ವಿದ್ಧಶಾಲಭಂಜಿಕಾ (ಕಡೆದ ಬೊಂಬೆ)' ಎಂಬ ಹೆಸರು ಬಂದಿದೆ. ಇದು ನಾಟಿಕೆಯ ಮಂಗಳಶ್ಲೋಕ :—

ಕುಲಗುರುರಬಲಾನಾಂ ಕೇಲಿದೀಕ್ಷಾಪ್ರದಾನೇ
ಪರಮಸುಹೃದನಂಗೋ ರೋಹಿಣೀವಲ್ಲಭಸ್ಯ ।
ಅಪಿಕುಸುಮಪೃಷತ್ಕೈರ್ದೇವದೇವಸ್ಯ ಜೇತಾ
ಜಯತಿ ಸುರತಲೀಲಾ ನಾಟಿಕಾ ಸೂತ್ರಧಾರಃ ॥

ಕರ್ಪೂರಮಂಜರೀ :—

ಕರ್ಪೂರಮಂಜರಿಯು ನಾಲ್ಕು ಅಂಕಗಳ ಒಂದು 'ಸಾಟಕ' ಅಥವಾ 'ಸಟ್ಟಕ'. ಈ ಅಂಕಗಳಿಗೆ ಜವನಿಕಾಂತರಗಳೆಂದು ಹೆಸರು. ಸಟ್ಟಕವು ಪ್ರವೇಶಕ, ವಿಷ್ಕಂಭಕಗಳಿಲ್ಲದ ನಾಟಿಕೆ ; ಇದು ಕಥಾವಿಸ್ತಾರವಿಲ್ಲದೆ ನರ್ತಿಸಲು ಯೋಗ್ಯವಾದುದು. ರಾಜಶೇಖರನು ತನ್ನ ಹೆಂಡತಿಯಾದ ಅವಂತಿಸುಂದರಿಯ ಕೋರಿಕೆಯಂತೆ ಇದನ್ನು ರಚಿಸಿದುದಾಗಿ ತಿಳಿದುಬರುತ್ತದೆ. ಇದರ ಕಥಾಸಂಗ್ರಹ ಇದು ——

ಚಂಡಪಾಲರಾಜನು ಮಹಾರಾಣಿಯಾದ ವಿಭ್ರಮಲೇಖೆಯೊಡನೆ ವಸಂತೋತ್ಸವದಲ್ಲಿ ಆನಂದದಿಂದಿದ್ದಾಗ ಭೈರವಾನಂದನೆಂಬ ಸಿದ್ಧನು ಬಂದು ತನ್ನ ಯೋಗಶಕ್ತಿಯಿಂದ ಮಹಾರಾಣಿಯ ಚಿಕ್ಕಮ್ಮನ ಮಗಳಾದ ಕರ್ಪೂರಮಂಜರಿಯನ್ನು ವಿದರ್ಭನಗರದಿಂದ ಬರಮಾಡಿದನು. ವಿಭ್ರಮಲೇಖೆಯು ಅವಳನ್ನು ತನ್ನಲ್ಲಿ ಕೆಲವು ದಿವಸಗಳಕಾಲ ಉಳಿಸಿಕೊಂಡಳು. ವಿದೂಷಕ ಮತ್ತು ಚೇಟಿಯರು ಸಂಚುನಡೆಸಿ ರಾಜ ಮತ್ತು ಕರ್ಪೂರಮಂಜರಿಯಲ್ಲಿ ಪ್ರಯಾಣ ಬೆಳೆಯುವಂತೆ ಅವಕಾಶ ಕಲ್ಪಿಸಿದರು. ರಾಜನು ಕರ್ಪೂರಮಂಜರಿಯನ್ನು ಅವಳ ಕೊಟಡಿಯಿಂದ ಸುರಂಗದ್ವಾರದಮೂಲಕ ಹೊರಕ್ಕೆ ಕರೆದುಕೊಂಡುಹೋಗಿ ಸರಸ ಸಲ್ಲಾಪದಲ್ಲಿ ತೊಡಗಿದ್ದಾಗ ಗುಟ್ಟುರಟ್ಟಾಗಿ ಗದ್ದಲವಾಯಿತು. ಕರ್ಪೂರಮಂಜರಿಯು ಅದೇ ಗುಪ್ತಮಾರ್ಗದಿಂದ ಹಿಂದಿರುಗಿದಳ . ರಾಣಿಯು ಸುರಂಗವನ್ನು ಮುಚ್ಚಿಸಿ ಕಾವಲುಹಾಕಿದಳು.

ಘನಸಾರಮಂಜರಿಯನ್ನು ಮದುವೆಯಾದವನು ಚಕ್ರವರ್ತಿಯಾಗುತ್ತಾನೆಂದು ಭೈರವಾನಂದನು ಹೇಳಿದ್ದರಿಂದ ರಾಣಿಯು ಉದ್ಯಾನದ ಚಾಮುಂಡಿಗುಡಿಯಲ್ಲಿ ತನ್ನ ಗಂಡನ ಮದುವೆಗೆ ಏರ್ಪಡಿಸಿದಳು. ಭೈರವಾನಂದನು ರಹಸ್ಯವಾಗಿ ತಾನು ತೋಡಿಸಿದ್ದ ಸುರಂಗದಿಂದ ಕರ್ಪೂರಮಂಜರಿಯನ್ನು ಬರಮಾಡಿದನು. ಅವಳನ್ನು ಕಂಡು ಸಂದೇಹಗೊಂಡ ರಾಣಿಯು

ಅವಳನ್ನು ನೋಡಲು ಎರಡು ಮೂರು ಸಾರಿ ಅಂತಃಪುರಕ್ಕೆ ಹೋದಳು ; ಕರ್ಪೂರ ಮಂಜರಿಯೂ ಅಷ್ಟು ಸಾರಿ ಸುರಂಗದ ಮೂಲಕ ಹೋಗಿ ಕಾಣಿಸಿಕೊಂಡಳು. ಮದುವೆಯು ನಡೆದಮೇಲೆ ಕರ್ಪೂರಮಂಜರಿಯೇ ಘನಸಾರ ಮಂಜರಿಯೆಂದು ತಿಳಿಯಿತು.

ಕರ್ಪೂರಮಂಜರಿಯಲ್ಲಿ ಸೂತ್ರಧಾರ ಮತ್ತು ಸ್ಥಾಪಕರು ಪ್ರತ್ಯೇಕವಾಗಿ ನಾಂದಿಯನ್ನು ಹೇಳುತ್ತಾರೆ. ಸೌಂದರ್ಯ, ಶೃಂಗಾರಗಳಿಂದ ತುಂಬಿದ ಅಂತಃಪುರದ ಸ್ಮೃದುಮಧುರ ವಾತಾವರಣವನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಸಾಯಂಕಾಲ ಮತ್ತು ರಾತ್ರಿಯ ಬೆಳದಿಂಗಳುಗಳಲ್ಲಿ, ಪ್ರಾಸಾದ ಮತ್ತು ಉದ್ಯಾನಗಳಲ್ಲಿ ಪ್ರಣಯ ವೃತ್ತಾಂತ ನಡೆಯುತ್ತದೆ. ವಸಂತೋತ್ಸವ, ಉಯ್ಯಾಲೆಯಾಟ, ಚರ್ಚರಿಗಳು ನಡೆಯುತ್ತವೆ. ಮೊದಲನೆಯ ಅಂಕದಲ್ಲಿ ವಸಂತೋತ್ಸವ, ಕವಿತಾಸ್ಪರ್ಧೆಗಳೂ, ಎರಡನೆಯದರಲ್ಲಿ ಅನಂಗಲೇಖನ ಅಲಂಕಾರ ಉಯ್ಯಾಲೆ ದೋಹದಗಳೂ, ಮೂರನೆಯದರಲ್ಲಿ ಶೃಂಗಾರಸ್ವಪ್ನ, ಪ್ರೇಮ ಮೀಮಾಂಸೆಗಳೂ, ನಾಲ್ಕನೆಯದರಲ್ಲಿ ನಾಟ್ಯವೂ ಬಂದಿವೆ. ಕಥೆಯ ಬೆಳವಣಿಗೆ ಬಹಳ ಕಡಿಮೆ. ಯೋಗಶಕ್ತಿಯಿಂದ ಕರ್ಪೂರ ಮಂಜರಿಯನ್ನು ಬರಮಾಡಿದಾಗ ಅವಳಿಗಾಗಲೀ, ಅವಳ ತಂದೆ ತಾಯಿಗಳಿಗಾಗಲೀ ಗಾಬರಿಯಾಗದಿರುವುದು ಆಶ್ಚರ್ಯ. ಈ ಕೃತಿಯು ಬಹಳಮಟ್ಟಿಗೆ ರತ್ನಾವಳಿಯಂತಿದೆ : ಅಲ್ಲಿರುವ ಸಿದ್ಧಾದೇಶ, ವಸಂತೋತ್ಸವ, ಇಂದ್ರಜಾಲ, ದೋಹದ ಮುಂತಾದ ಕಾಮತಂತ್ರಗಳು ಇಲ್ಲಿಯೂ ಇವೆ ; ಆದರೆ ಅಲ್ಲಿರುವ ಕಥಾಸಂವಿಧಾನ ಕೌಶಲ, ಪಾತ್ರ ಚಿತ್ರಣ, ರಸಪುಷ್ಟಿಗಳು ಇಲ್ಲಿಲ್ಲ. ರಾಜಶೇಖರನ ಇತರ ನಾಟಕಗಳಿಗಿಂತ ಇದು ಉತ್ತಮವಾಗಿದೆ. ಅಲ್ಲಲ್ಲಿ ಬಂದಿರುವ ಕೆಲವು ವರ್ಣನೆಗಳು ಸುಂದರವಾಗಿವೆ. ಕರ್ಪೂರಮಂಜರಿಯು ಸಂಪೂರ್ಣವಾಗಿ ಪ್ರಾಕೃತದಲ್ಲಿ ದೊರೆತಿರುವ ಪ್ರಾಕೃತ ಸಟ್ಟಕ ಇದೊಂದೇ. ಪ್ರಾಕೃತದಲ್ಲಿ ಬರೆದಿರುವುದಕ್ಕೆ ಕವಿಯು ಈ ಕಾರಣವನ್ನು ಕೊಟ್ಟಿದ್ದಾನೆ—

" ಉಕ್ತಿವಿಶೇಷಃ ಕಾವ್ಯಂ ; ಭಾಷಾ ಯಾ ಭವತಿ ಸಾ ಭವತು "

" ಪರುಷಾಃ ಸಂಸ್ಕೃತಗುಂಫಾಃ ಪ್ರಾಕೃತಗುಂಫೋಽಪಿ ಭವತಿ ಸುಕುಮಾರಃ !
ಪುರುಷಮಹಿಲಾನಾಂ ಯಾವದಿಹಾಂತರಂ ತೇಷು ತಾವತ್ ॥ "

ನಾಯಿಕೆಯ ಉಯ್ಯಾಲೆಯಾಟದ ಈ ವರ್ಣನೆ ರಮಣೀಯವಾಗಿದೆ ; ಛಂದಸ್ಸು ಮತ್ತು ಶಬ್ದಾಲಂಕಾರಗಳಿಂದ ಅರ್ಥಕ್ಕೆ ಪುಷ್ಟಿ ದೊರೆತಿದೆ.

ರಣಂತ ಮಣಿಣೇ ಉರಂ ಝಣಝಣಂತಹಾರಚ್ಛಡಂ
ಕಲಕ್ಕಣಿದ ಕಿಂಕಿಣೀ ಮುಹರ ಮೇಹಲಾಡಂಬರಂ ।
ವಿಲೋಲವಲಆವಲೀ ಜಣಿದ ಮಂಜು ಸಿಂಜಾರವಂ
ಣಕಸ್ಸ ಮಣಮೋಹಣಂ ಸಸಿಮುಹೀಅ ಹಿಂದೋಲಣಂ ॥

ರಾಜಶೇಖರನಲ್ಲಿ ಒಳ್ಳೆಯ ಭಾಷಾ ಸಂಪತ್ತಿದೆ. ಅವನು ಸಂಸ್ಕೃತದಲ್ಲಿಯೂ, ಪ್ರಾಕೃತದಲ್ಲಿಯೂ ಧಾರಾಳವಾಗಿ ಕಾವ್ಯಗಳನ್ನು ರಚಿಸಬಲ್ಲ, ಪ್ರಾಕೃತಕ್ಕೆ ದೊಡ್ಡ ಛಂದಸ್ಸುಗಳನ್ನು ಬಳಸುವ ಸಾಮರ್ಥ್ಯ ಅವನಿಗಿದೆ. ಅವನಲ್ಲಿ ಪಾಂಡಿತ್ಯವಿದ್ದರೂ ಭಾವ ಸಂಪತ್ತಾಗಲಿ, ಜೀ



ವಿಮರ್ಶೆಯಾಗಲಿ ಇಲ್ಲ ; ಶಬ್ದಾಡಂಬರ ಹೆಚ್ಚು. ರಾಜಶೇಖರನಿಗೆ ಕರ್ಣಾಟಕದ ಪರಿಚಯ ವಿದ್ದಂತೆ ತೋರುತ್ತದೆ ; ಅಲ್ಲಲ್ಲಿ ಅದರ ವಿಚಾರಗಳ ಉಲ್ಲೇಖವಿದೆ [1].

## ಕ್ಷೇಮೀಶ್ವರ
## (ಕ್ರಿ. ಶ. 10ನೇ ಶತಮಾನದ ಆದಿ)

' ಚಂಡಕೌಶಿಕ 'ದ ಪ್ರಸ್ತಾವನೆಯಿಂದ ಕ್ಷೇಮೀಶ್ವರ (ಅಥವಾ ಕ್ಷೇಮೇಂದ್ರನ) ವಿಚಾರವಾಗಿ ಈ ಅಂಶಗಳು ದೊರೆಯುತ್ತವೆ. " ಕ್ಷೇಮೀಶ್ವರನು ವಿಜಯ ಪ್ರಕೋಷ್ಠನ ಮರಿಮಗ ; ಮಹೀಪಾಲದೇವನ ಅಪ್ಪಣೆಯಂತೆ ನಾಟಕವನ್ನು ಅಭಿನಯಿಸಲಾಯಿತು ; ಹಿಂದೆ ಚಂದ್ರಗುಪ್ತನಾಗಿ ನಂದರನ್ನು ನಾಶಮಾಡಿದ್ದನು ; ಆ ನಂದರು ಈಗ ಕರ್ನಾಟಕದ ರಾಜರಾಗಿದ್ದುದರಿಂದ ಅವರನ್ನು ನಾಶಮಾಡಲು ತಾನು ಮಹೀಪಾಲದೇವನಾಗಿ ಹುಟ್ಟಿದನು." ರಾಜಶೇಖರನಿಗೆ ಪೋಷಕನಾಗಿದ್ದ ಈ ದೊರೆ ಕನೂಜಿನಲ್ಲಿ ಕ್ರಿ. ಶ. 910 ರಿಂದ 940ರ ವರೆಗೆ ಆಳುತ್ತಿದ್ದನು, ಮಹೀಪಾಲನಿಗೂ ಇಂದ್ರನಿಗೂ (III) ಕ್ರಿ. ಶ. 916ರಲ್ಲಿ ಯುದ್ಧ ನಡೆಯಿತೆಂದು ತಿಳಿದು ಬರುತ್ತದೆ. ಆದ್ದರಿಂದ ಕ್ಷೇಮೀಶ್ವರನ ಕಾಲ ಕ್ರಿ. ಶ. 10 ನೆಯ ಶತಮಾನದ ಆದಿ. ವಿಜಯಪ್ರಕೋಷ್ಠನು ಯಾರೋ ತಿಳಿಯದು.

ಕ್ಷೇಮೀಶ್ವರನು ಚಂಡಕೌಶಿಕ ಮತ್ತು ನೈಷಧಾನಂದವೆಂಬ ಎರಡು ನಾಟಕಗಳನ್ನು ಬರೆದಿದ್ದಾನೆ. ಇವನ 'ಚಿತ್ರ ಭಾರತ' 'ಕನಕಜಾನಕೀ', ಮುಂತಾದ ನಾಟಕಗಳನ್ನೂ ಬರೆದಿರುವುದಾಗಿ ತಿಳಿದು ಬರುತ್ತದೆ ; ಅವು ದೊರಕಿಲ್ಲ.

ಚಂಡಕೌಶಿಕ :

ಈ ನಾಟಕದಲ್ಲಿ ಐದು ಅಂಕಗಳಿವೆ. ಇದು ಅದರ ಕಥಾಸಂಗ್ರಹ :—

ಹರಿಶ್ಚಂದ್ರನು ಉತ್ಪಾತಶಾಂತಿಗಾಗಿ ಒಂದು ವ್ರತವನ್ನು ಆಚರಿಸಿದನು. ಕೌಶಿಕನು ವಿದ್ಯಾತ್ರಯ ಪ್ರಾಪ್ತಿಗಾಗಿ ಉಗ್ರತಪಸ್ಸಿನಲ್ಲಿ ತೊಡಗಿದ್ದನು ; ಅವನ ತಪಸ್ಸನ್ನು ಕೆಡಿಸಲು ವಿಘ್ನೇಶ್ವರನು ಹಂದಿಯ ರೂಪವನ್ನು ತಾಳಿ ರಾಜನನ್ನು ಅವನ ಆಶ್ರಮಕ್ಕೆ ಎಳೆತಂದನು ; ತಪಸ್ಸಿಗೆ ಭಂಗ ಬಂದುದರಿಂದ ವಿದ್ಯೆಗಳು ಕೈ ಬಿಟ್ಟುಹೋದವು. ರಾಜನು ಕೋಪಗೊಂಡ ಅವನನ್ನು ಸಮಾಧಾನಪಡಿಸಿ, ಅವನ ಕೇಳಿಕೆಯಂತೆ ತನ್ನ ರಾಜ್ಯವನ್ನು ಅವನಿಗೆ ದಾನ ಮಾಡಿ ಒಂದು ತಿಂಗಳೊಳಗಾಗಿ ದಕ್ಷಿಣೆಯನ್ನು ಕೊಡುವುದಾಗಿ ಮಾತು ಕೊಟ್ಟು, ಕಾಶಿಗೆ

1. ಅಖಂಡಿತಪ್ರಸರಾ ಹಿ ಪುರುಷಕಾರಾಃ ಕರ್ಣಾಟಾನಾಂ । (ಬಾ । ರಾ)
2. ಕರ್ಣಾಟ್ಯೋ ಯತ್ರ ಯತ್ರೈವ ವಿಕ್ಷಿಪಂತಿ ದೃಶೋ ದಿಶಿ ।
ವಿಕ್ಷೇಪಾಗ್ರೇಸರಃ ಕಾಮಸ್ತತ್ರ ತತ್ರೈವ ಧಾವತಿ ॥ (ಬಾ । ರಾ)
3. ಕರ್ಣಾಟೋ ಯುದ್ಧತಂತ್ರೇ ಚತುರತಮತಿಃ । (ವಿ । ಶಾ)
4. ಸಮರಕರ್ಮಣಿ ನಿಸರ್ಗೋದ್ಭಟಾ ಏವ ಕಾರ್ಣಾಟಾಃ (ವಿ । ಶಾ)

ಹೋದನು. ಕೌಶಿಕನು ರಾಜನನ್ನು ರಾಜ್ಯಚ್ಯುತನನ್ನಾಗಿ ಮಾಡಿದಂತೆ ಸತ್ಯಚ್ಯುತನನ್ನಾಗಿಯೂ ಮಾಡುವುದಾಗಿ ಪ್ರತಿಜ್ಞೆ ಮಾಡಿದನು.

ಕಾಶೀ ಪಟ್ಟಣದಲ್ಲಿ ಹರಿಶ್ಚಂದ್ರನ ಹೆಂಡತಿಯಾದ ಶೈಬ್ಯೆ ತನ್ನನ್ನು ಉಪಾಧ್ಯಾಯನಿಗೆ ಐವತ್ತು ಸಾವಿರ ವರಹಗಳಿಗೆ ಮಾರಿಕೊಂಡಳು, ಹರಿಶ್ಚಂದ್ರನು ತನ್ನನ್ನು ಚಂಡಾಲನಿಗೆ ಮಾರಿಕೊಂಡು ಕೌಶಿಕನಿಗೆ ದಕ್ಷಿಣೆಯ ಹಣವನ್ನು(ಲಕ್ಷವರಹ) ಪೂರ್ತಿಯಾಗಿ ಕೊಟ್ಟನು.

ಹರಿಶ್ಚಂದ್ರನು ಶ್ಮಶಾನದಲ್ಲಿ ಕಾವಲುಗಾರನಾದನು ; ಪ್ರಸನ್ನರಾಗಿ ಬಂದ ವಿದ್ಯೆಗಳನ್ನು ಕೌಶಿಕನ ಹತ್ತಿರಕ್ಕೆ ಕಳುಹಿಸಿದನು ; ತನ್ನ ವಾಕ್ಸಹಾಯದಿಂದ ವಿಘ್ನಗಳನ್ನು ಗೆದ್ದು ಸಿದ್ಧಿ ಪಡೆದ ಕಾಪಾಲಿಕನು ತನಗೆ ಕೊಡಲು ತಂದ ನಿಧಿಯನ್ನು ತನ್ನ ಒಡೆಯನಿಗೆ ಕಳುಹಿಸಿದನು ; ಹಾವು ಕಡಿದು ಸತ್ತ ಮಗನನ್ನು ಶ್ಮಶಾನಕ್ಕೆ ತಂದ ಶೈಬ್ಯೆಯಿಂದ ಮೃತ ಕಂಬಳವನ್ನು ತೆಗೆದು ಕೊಂಡನು. ಪತಿಪತ್ನಿಯರು ನಿರಾಶೆಯಿಂದ ಶೋಕಿಸುತ್ತಿದ್ದಾಗ ಧರ್ಮಪುರುಷನು ಬಂದು ರೋಹಿತಾಶ್ವನನ್ನು ಬದುಕಿಸಿದನು ಪ್ರಸನ್ನನಾದ ವಿಶ್ವಾಮಿತ್ರನು ರಾಜ್ಯವನ್ನು ಹರಿಶ್ಚಂದ್ರನಿಗೆ ಹಿಂದಿರುಗಿಸಿ, ಅವನ ಸತ್ಯಪರೀಕ್ಷೆಗಾಗಿ ತಾನು ಹಾಗೆ ಮಾಡಿದೆನೆಂದು ಹೇಳಿದನು. ಪುರೋಹಿತನು ಮಹೇಶ್ವರನೆಂದೂ, ಚಂಡಾಲನು ಧರ್ಮಪುರುಷನೆಂದೂ ಗೊತ್ತಾಗುತ್ತದೆ. ಬಂದ ಪುಣ್ಯದ ಫಲವಾಗಿ ಹರಿಶ್ಚಂದ್ರನೂ, ಅವನ ಪ್ರಜೆಗಳೂ ಪುಣ್ಯಲೋಕವನ್ನು ಸೇರುತ್ತಾರೆ.

ಹರಿಶ್ಚಂದ್ರನ ಕಥೆ ಬಹಳ ಹಳೆಯದು. ಇದು ಮಹಾಭಾರತದಲ್ಲಿಯೂ ಇದೆ. ಮಹಾಭಾರತವು ಈ ನಾಟಕದ ವಸ್ತುವಿಗೆ ಆಧಾರವಾಗಿರಲಾರದು. ಮಾರ್ಕಂಡೇಯ ಪುರಾಣದ ಪಾಠ ಆಧಾರವಾಗಿರಬಹುದು. ಇದರಲ್ಲಿ ವಸಿಷ್ಠ ವಿಶ್ವಾಮಿತ್ರರ ಜಗಳವಾಗಲಿ, ಹೊಲತಿಯರ ವೃತ್ತಾಂತವಾಗಲಿ, ಚಂದ್ರಮತಿಯ ಮೇಲೆ ಕಾಶೀರಾಜಪುತ್ರನನ್ನು ಕೊಂದಳೆಂಬ ಆರೋಪವಾಗಲಿ ಇಲ್ಲ. ಕವಿಯು ವಿದ್ಯಾಧಿದೇವತೆಗಳು, ವಿಘ್ನೇಶ್ವರ, ವಿಶ್ವೇದೇವತೆಗಳನ್ನು ಸ್ವಲ್ಪ ಬದಲಾವಣೆಯೊಡನೆ ಉಪಯೋಗಿಸಿಕೊಂಡಿದ್ದಾನೆ ಕಾಪಾಲಿಕನು ನಿಧಿಯನ್ನು ತಂದ ಮತ್ತು ವಿದ್ಯೆಗಳು ಒಲಿದ ಘಟನೆಗಳು ಕಲ್ಪಿತವಾಗಿವೆ. ಪುರಾಣದ ವಸ್ತುವನ್ನು ನಾಟಕಕ್ಕೆ ಅಳವಡಿಸಿಕೊಂಡಿರುವುದರಲ್ಲಿ ನೈಪುಣ್ಯವಿದೆ.

ಹರಿಶ್ಚಂದ್ರನ ಕಥೆಯಿದ್ದರೂ ನಾಟಕಕ್ಕೆ ಚಂಡಕೌಶಿಕವೆಂಬ ಹೆಸರನ್ನು ಕೊಡಲಾಗಿದೆ, ಕವಿಯ ದೃಷ್ಟಿಯಲ್ಲಿ ಹರಿಶ್ಚಂದ್ರನ ಸತ್ಯಕ್ಕಿಂತಲೂ ಕೌಶಿಕನ ಚಂಡತೆಯೇ ಪ್ರಧಾನವಾಗಿದೆ. ಬ್ರಹ್ಮರ್ಷಿಯೆನಿಸಿಕೊಂಡಿದ್ದರೂ ಕೌಶಿಕನಿಗೆ ತೃಪ್ತಿಯಿಲ್ಲ. ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಮೀರಿಸಬೇಕೆಂಬ ಅಭಿಲಾಷೆ ಅವನಲ್ಲಿದೆ. ಹರಿಶ್ಚಂದ್ರನು ದಾನ, ರಕ್ಷಣೆ, ಶಿಕ್ಷಣಗಳು ಕ್ಷತ್ರಿಯನ ಧರ್ಮವೆಂದಾಗ ಅವನು ರಾಜ್ಯವನ್ನು ದಾನವಾಗಿ ಪಡೆದು ಜೊತೆಗೆ ಬಹಳ ದಕ್ಷಿಣೆಯನ್ನು ಕೇಳುತ್ತಾನೆ ಹೀಗೆ ಸತ್ಯವಂತನಾದ ಹರಿಶ್ಚಂದ್ರ ಅವನ ಕೈಗೆ ಸಿಕ್ಕಿ ಸರ್ವ ಬೇಕಾಗುತ್ತದೆ. ಮಾತಿನ ಇಕ್ಕಟ್ಟಿನಿಂದ ರಾಜ್ಯವನ್ನು ಕಳೆದುಕೊಂಡು ಹೆಂಡತಿಯನ್ನೂ





ತನ್ನನ್ನೂ ಮಾರಿಕೊಳ್ಳಬೇಕಾಗುತ್ತದೆ. ಅವನ ನಿರ್ದಯ ವರ್ತನೆಯಿಂದ ರಾಜನು ಚಂಡಾಲನ ಸೇವೆಯಲ್ಲಿರಬೇಕಾಗುತ್ತದೆ. ಹರಿಶ್ಚಂದ್ರನ ಸ್ಥಿತಿಯನ್ನು ಕಂಡು ಮರುಗಿದ ವಿಶ್ವೇದೇವತೆಗಳು ಅವನ ಶಾಪಕ್ಕೆ ಗುರಿಯಾಗುತ್ತಾರೆ. ಅವನಲ್ಲಿ ಕೋಪ, ಛಲ, ನಿರ್ದಯಗಳು ನಿವಾಸ ಮಾಡಿಕೊಂಡಿವೆ.

ನಾಟಕದಲ್ಲಿ ವಿಧಿಯ ಕೈ ಎದ್ದು ಕಾಣಿಸುತ್ತದೆ. ಉತ್ಪಾತಗಳ ಶಾಂತಿಯಿಂದ ನಾಟಕ ಪ್ರಾರಂಭವಾಗುತ್ತದೆ. ಹರಿಶ್ಚಂದ್ರನ ಕಷ್ಟಕ್ಕೆ ಕೌಶಿಕ ನಿಮಿತ್ತಮಾತ್ರ. ಶಿವ ಪಾರ್ವತಿಯರ ಸೇವಕನಾದ ಭೃಂಗಿರಿಟಿಗೂ ವಿಧಿಯು ತಪ್ಪಿದ್ದಲ್ಲ. ಮುಂದೆ ಅದು ಅನುಕೂಲವಾಗಿ ಪರಿಣಮಿಸುತ್ತದೆ. ಮಧ್ಯದ ಹಿಂಸೆಯನ್ನು ಅನುಭವಿಸುವುದು ಕಷ್ಟ. ದೇವರಲ್ಲಿ ಭಕ್ತಿ, ಧರ್ಮದಲ್ಲಿ ಶ್ರದ್ಧೆಗಳು ಹಿಮ್ಮುಖವಾಗುತ್ತವೆ. ಜೀವನದಲ್ಲಿ ನಿರಾಶೆಯುಂಟಾಗುತ್ತದೆ. ಎಲ್ಲವನ್ನೂ ತಾಳ್ಮೆಯಿಂದ ಸಹಿಸಿಕೊಂಡಾಗ ಶ್ರೇಯಸ್ಸುಂಟಾಗುತ್ತದೆ.

ಇದು ಧಾರ್ಮಿಕ ನಾಟಕವಾದರೂ ಪ್ರಬೋಧ ಚಂದ್ರೋದಯದಂತೆ ಗುಣ ಧರ್ಮಾದಿಗಳನ್ನು ಪಾತ್ರಗಳನ್ನಾಗಿ ಹೊಂದಿಲ್ಲ. ನಾಗಾನಂದ, ವೇಣೀಸಂಹಾರಗಳಲ್ಲಿರುವಂತೆ ಇದರಲ್ಲಿಯೂ ಮೊದಲು ಶೃಂಗಾರ ಬಂದಿದೆ. ದಾನ, ಧರ್ಮ, ದಯೆಗಳಲ್ಲಿ ಹರಿಶ್ಚಂದ್ರನ ಅಧಿಕ ವೀರವನ್ನು ಕಾಣುತ್ತೇವೆ. ಹೀಗಿದ್ದರೂ ಕರುಣವು ಮೇಲುಗೈ ಪಡೆದಿದೆ. ರಾಜನ ದುರ್ವಿಧಿ ರೂಪವಾಗಿ ನಾಟಕವನ್ನೆಲ್ಲಾ ವ್ಯಾಪಿಸಿ ಕೊಂಡಿರುವುದರಿಂದ ಕೌಶಿಕನೇ ನಾಯಕನೆನಿಸುತ್ತದೆ. ಆದರೆ ಅವನಲ್ಲಿ ಧೀರೋದಾತ್ತನ ಗುಣಗಳಿಲ್ಲ. ಉದ್ಧತನಾದ ಅವನನ್ನು ತನ್ನ ನಡತೆಯಿಂದ ಸೋಲಿಸಿದ ಹರಿಶ್ಚಂದ್ರನೇ ನಾಯಕನೆಂದು ಕವಿಯ ಅಭಿಪ್ರಾಯವಿರಬಹುದು. ಶಿಖರಿಣೀ, ವಸಂತತಿಲಕಾ, ಶಾರ್ದೂಲ ವಿಕ್ರೀಡಿತಗಳ ಪ್ರಯೋಗ ಅಧಿಕವಾಗಿದೆ, ಪದ್ಯಗಳು ಬಹಳ ಹೆಚ್ಚಾಗಿವೆ. ಹಂದಿ, ಬೇಟೆ, ಶ್ಮಶಾನ ಮೊದಲಾದುವುಗಳ ವರ್ಣನೆಗಳು ಹೆಚ್ಚು. ಭಾಷೆ ಸಮಾಸ ಜಟಿಲವೂ, ಕಠಿಣವೂ ಆಗಿದೆ.

ಮತ್ತೊಂದು ನಾಟಕವಾದ ನೈಷಧಾನಂದದಲ್ಲಿ ಏಳು ಅಂಕಗಳಿವೆ. ಪ್ರಸಿದ್ಧವಾದ ನಳನ ಕಥೆಯು ಇದರ ವಸ್ತು. ಕ್ಷೇಮೀಶ್ವರನು ಲೋಕ ಪ್ರಸಿದ್ಧವೂ, ಪ್ರಭಾವಯುತವೂ ಆದ ನಳ, ಹರಿಶ್ಚಂದ್ರರ ಕಥೆಗಳನ್ನು ತೆಗೆದುಕೊಂಡು ನಾಟಕಗಳನ್ನು ಬರೆದಿದ್ದಾನೆ. ಭಾರತೀಯರ ಆಸ್ತಿಕ್ಯ ಜೀವನದ ಪರಿಚಯವಿಲ್ಲದವರಿಗೆ ಈ ನಾಟಕಗಳು ಹಿಡಿಸದೆ ಹೋಗಬಹುದು.

[illegible]ಯ ಮಹತ್ವ :—

ಚಿತ್ತಂ ಪ್ರಸಾದಯತಿ ಲಾಘವಮಾದಧಾತಿ
ಪ್ರತ್ಯಂಗಮುಜ್ಜ್ವಲಯತಿ ಪ್ರತಿಭಾವಿಶೇಷಂ ।
ದೋಷಾನುದಸ್ಯತಿ ಕರೋತಿ ಚ ಧಾತುಸಾಮ್ಯಂ
ಆನಂದಮರ್ಪಯತಿ ಯೋಗವಿಶೇಷಗಮ್ಯಂ ॥

# ಕೃಷ್ಣಮಿಶ್ರ

## (ಕ್ರಿ. ಶ. 11 ನೆಯ ಶತಮಾನ)

ಕೃಷ್ಣಮಿಶ್ರನ 'ಪ್ರಬೋಧ ಚಂದ್ರೋದಯ' ನಾಟಕದ ಪ್ರಸ್ತಾವನೆಯಿಂದ ಚೇದಿರಾಜನಾದ ಕರ್ಣನು ಕೀರ್ತಿವರ್ಮನನ್ನು ಸೋಲಿಸಿ ಅವನ ರಾಜ್ಯವನ್ನು ಆಕ್ರಮಿಸಿದನೆಂದೂ, ಗೋಪಾಲನು ಅವನನ್ನು ಸೋಲಿಸಿ ಕೀರ್ತಿವರ್ಮನನ್ನು ಮತ್ತೆ ಸ್ವರಾಜ್ಯದಲ್ಲಿ ಪ್ರತಿಷ್ಠಿಸಿದನೆಂದೂ, ಯುದ್ಧ ಮುಗಿದಮೇಲೆ ಕೀರ್ತಿವರ್ಮನ ಮುಂದೆ ಶಾಂತರಸ ಪ್ರಧಾನವಾದ ಪ್ರಬೋಧ ಚಂದ್ರೋದಯ ಅಭಿನಯಿಸಲ್ಪಟ್ಟಿತೆಂದೂ ತಿಳಿದುಬರುತ್ತದೆ. ಕೀರ್ತಿವರ್ಮನ ಕಾಲ ಸು. 1098. ಕರ್ಣನಕಾಲ ಸು. 1082. ಗೋಪಾಲನು ಕೀರ್ತಿವರ್ಮನ ಮಿತ್ರನಾದ ಒಬ್ಬ ದೊರೆಯಾಗಿರಬಹುದು; ಆದ್ದರಿಂದ ಕೃಷ್ಣಮಿಶ್ರನ ಕಾಲ 11 ನೆಯ ಶತಮಾನದ ಉತ್ತರಾರ್ಧವೆಂದು ಹೇಳಬಹುದು.

ಕೃಷ್ಣಮಿಶ್ರನು ಒಬ್ಬ ಯತಿಯೆಂದೂ, ಅವನು ವೇದಾಂತ ಹಿಡಿಯುದ ಒಬ್ಬ ಶಿಷ್ಯನಿಗಾಗಿ ಈ ನಾಟಕವನ್ನು ಬರೆದನೆಂದೂ ಪ್ರತೀತಿ ಇದೆ. ಅವನು ಪ್ರಬೋಧ ಚಂದ್ರೋದಯವನ್ನಲ್ಲದೆ ಬೇರಾವ ಗ್ರಂಥಗಳನ್ನು ಬರೆದಿದ್ದನೋ ತಿಳಿಯದು. ಅಶ್ವಘೋಷನ ನಾಟಕಗಳು ದೊರೆಯುವ ತನಕ ಪ್ರಬೋಧಚಂದ್ರೋದಯವನ್ನೇ ಪ್ರಥಮ ಧಾರ್ಮಿಕ ನಾಟಕವೆಂದು ಪರಿಗಣಿಸಲಾಗಿದ್ದಿತು.

ಪ್ರಬೋಧ ಚಂದ್ರೋದಯದಲ್ಲಿ ಆರು ಅಂಕಗಳಿವೆ. ಇದು ಅದರ ಕಥಾಸಂಗ್ರಹ :—

ಈಶ್ವರನಿಗೆ ಅವಿದ್ಯೆಯಲ್ಲಿ ಮನಸ್ಸೆಂಬ ಮಗನು ಹುಟ್ಟಿದನು. ಅವನಿಗೆ ಪ್ರವೃತ್ತಿಯಲ್ಲಿ ಮಹಾಮೋಹಾದಿಗಳೂ, ನಿವೃತ್ತಿಯಲ್ಲಿ ವಿವೇಕಾದಿಗಳೂ ಹುಟ್ಟಿದರು. ಮನಸ್ಸು ಅಹಂಕಾರನನ್ನು ಹಿಂಬಾಲಿಸಿ ಈಶ್ವರನನ್ನು ಬಂಧಿಸಿದನು. ಮಹಾಮೋಹಾದಿಗಳು ಮನಸ್ಸಿನ ಪರವಾಗಿಯೂ, ವಿವೇಕಾದಿಗಳು ಈಶ್ವರನ ಪರವಾಗಿಯೂ ನಿಂತರು. ದಂಭ, ಅಹಂಕಾರ, ಕಾಮ, ಕ್ರೋಧ, ಲೋಭ ಮುಂತಾದವರೊಡನೆ ಮಹಾಮೋಹನೂ. ವಿಷ್ಣುಭಕ್ತಿ, ವೈರಾಗ್ಯ, ಧರ್ಮ, ಶಾಂತಿ, ಸಂತೋಷ ಮುಂತಾದವರೊಡನೆ ವಿವೇಕನೂ ಕಾಳಗಕ್ಕಿಳಿದರು. ವಿವೇಕನಿಗ ಜಯ ಲಭಿಸಿತು; ಮಹಾಮೋಹನು ಎಲ್ಲಿಯೋ ಅಡಗಿಕೊಂಡನು. ಆತ್ಮಹತ್ಯೆಯಲ್ಲಿ ತೊಡಗಿದ ಮನಸ್ಸು ವೈರಾಗ್ಯ, ವಿಷ್ಣುಭಕ್ತಿ ಮುಂತಾದವರ ಪ್ರಭಾವದಿಂದ ಉಪಶಾಂತನಾದನು. ಉಪನಿಷದ್ದೇವಿ ಪುರುಷನೇ ಈಶ್ವರನೆಂದು ತಿಳಿಸಿದಳು. ಧ್ಯಾನನಿರತನಾದ ಪುರುಷನಿಂದ ಪ್ರಬೋಧನು ಹುಟ್ಟಿ ಬಂದು ತಂದೆಯನ್ನು ಆಲಿಂಗಿಸಿದನು. ಬಂಧನ ಕಳೆಯಿತು. ಸಂತೋಷಗೊಂಡ ವಿಷ್ಣುಭಕ್ತಿಯ ಆಶೀರ್ವಾದದಿಂದ ನಾಟಕ ಮುಗಿಯುತ್ತದೆ.



ಈ ನಾಟಕದ ವೈಶಿಷ್ಟ್ಯವೇನೆಂದರೆ ಇಲ್ಲಿಯ ಪಾತ್ರಗಳು ಅಮೂರ್ತಭಾವಗಳಿಗೆ ಮೂರ್ತತ್ವವನ್ನು ಕಲ್ಪಿಸಿದಂಥವು. ಇಂಗ್ಲೀಷಿನಲ್ಲಿ ಈ ಬಗೆಯ ಕೃತಿಗಳಿಗೆ Allegorical Play ಎನ್ನುತ್ತಾರೆ.

ಮಹಾಭಾರತದ ಮಾದರಿಯಲ್ಲಿ, ಅದ್ವೈತ ಸಿದ್ಧಾಂತ ಪ್ರಧಾನವಾದ ಈ ನಾಟಕದ ಘಟನೆಗಳು ರಚಿತವಾಗಿವೆ. ಜೈನ, ಬೌದ್ಧಾದಿ ಅವೈದಿಕ ಮತಗಳು ಮಹಾಮೋಹನ ಸೇವಕರು; ನ್ಯಾಯ, ಯೋಗ, ಮೀಮಾಂಸಾದಿ ವೈದಿಕಮತಗಳು ವಿವೇಕನ ಮಿತ್ರರು. ನಾಟಕದಲ್ಲಿ ವಿಷ್ಣುಭಕ್ತಿಗೆ ಗಣ್ಯ ಸ್ಥಾನವಿದೆ. ಗುಣ, ಧರ್ಮಾದಿಗಳು ಅಮೂರ್ತ ಪಾತ್ರಗಳಾದರೂ ಅವುಗಳನ್ನು ಹೊಂದಿರುವ ಜನರನ್ನು ಪರಿಗ್ರಹಿಸುವುದರಿಂದ ಅಭಿನಯಕ್ಕೆ ಚ್ಯುತಿಯಿಲ್ಲ. ಎರಡನೆಯ ಮೂರನೆಯ ಅಂಕಗಳಲ್ಲಿ ಅಭಿನಯಕ್ಕೆ ಒಳ್ಳೆಯ ಅವಕಾಶವಿದೆ; ಉಳಿದವುಗಳಲ್ಲಿ ಮಾತು ಹೆಚ್ಚು. ಆಳವಾದ ವೇದಾಂತವನ್ನು ರಸಮಯ ನಾಟಕವನ್ನಾಗಿ ರಚಿಸಿದ ಕವಿಯ ಪ್ರತಿಭೆ ಪ್ರಶಂಸನೀಯವಾದುದು. ಪಾತ್ರಗಳು ಖಚಿತವಾಗಿ ರೂಪಿತವಾಗಿವೆ.

ಪ್ರಬೋಧಚಂದ್ರೋದಯವು ಶಾಂತರಸಪ್ರಧಾನವಾದ ನಾಟಕ. ಕಾಮ ರತಿಯರ ಸಂಭಾಷಣೆ ಮುಂತಾದ ದೃಶ್ಯಗಳಲ್ಲಿ ಶೃಂಗಾರವಿದೆ. ವಿದೂಷಕನಿಲ್ಲವಾದರೂ ಸಾಕಷ್ಟು ಹಾಸ್ಯವಿದೆ.

ಇದು ದಂಭನ ಮಾತು :—

ಸದನಮುಪಗತೋಽಹಂ ಪೂರ್ವಮಂಭೋಜಯೋನೇಃ
ಸಪದಿ ಮುನಿಭಿರುಚ್ಚೈರಾಸನೇಷೂಜ್ಝಿತೇಷು ।
ಸಶಪಥಮನುನೀಯ ಬ್ರಹ್ಮಣಾ ಗೋಮಯಾಂಭಃ
ಪರಿಮೃಜಿತನಿಜೋರಾವಾಶು ಸಂವೇಶಿತೋಽಸ್ಮಿ ॥

[illegible]ಚಿನ ರೂಪಕಗಳು ಮತ್ತು ಉಪರೂಪಕಗಳು.

## ನಾಟಕ

### 1. ರಾಮಾಯಣ ನಾಟಕಗಳು

ರಾಮಾಯಣದ ಆಧಾರದ ಮೇಲೆ ಬರೆದ ನಾಟಕಗಳು ಹೇರಳವಾಗಿವೆ; ಆದರೆ ಬೆಲೆ [illegible]ಳ್ಳವು ಕಡಿಮೆ, ಭವಭೂತಿಯನಂತರದ ನಾಟಕಕಾರರು ಬಹಳ ಮಟ್ಟಿಗೆ ಅವನನ್ನು [illegible]ಸರಿಸಿದ್ದಾರೆ. ಅವರಲ್ಲಿ ಒಳ್ಳೆಯ ಪಾಂಡಿತ್ಯವಿದ್ದರೂ ರಸಿಕತೆ ಕಡಿಮೆ.

#### ಕುಂದಮಾಲಾ

ಇದರ ಕರ್ತೃವಿನ ವಿಷಯದಲ್ಲಿ ಬಹಳ ವಿವಾದವಿದೆ. ಕೆಲವರು [illegible]ಇದರ [illegible] 'ದಿಙ್ನಾಗ'[1] ನೆಂದರೆ ಮತ್ತೆ ಕೆಲವರು 'ಧೀರನಾಗ'[2] ನಿರಬಹುದೆಂದು ಅಭಿಪ್ರಾಯ [illegible]ಡುತ್ತಾರೆ. ಭಾವ ಪ್ರಕಾಶನ, ಸಾಹಿತ್ಯದರ್ಪಣ, ಷಡ್ಭಾಷಾ ನಾಟಕಗಳಲ್ಲಿ ಕುಂದಮಾಲೆಯ

1. ಜಯಚಂದ ಶಾಸ್ತ್ರಿ 2. ರಾಮಕೃಷ್ಣ ಕವಿ, ರಾಮನಾಥಶಾಸ್ತ್ರಿ

ಹೆಸರಾಗಲಿ, ವಿಷಯವಾಗಲಿ ಪದ್ಯವಾಗಲಿ ದೊರೆತರೂ ಅದರ ಕರ್ತೃ ದಿಙ್ನಾಗನೆಂಬುವುದಕ್ಕೆ ಆಧಾರವಿಲ್ಲ. ಪ್ರಸಿದ್ಧ ಬೌದ್ಧ ತಾರ್ಕಿಕನಾದ ಅವನು ನಾಟಕಕಾರನಾಗಿದ್ದನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಸುಭಾಷಿತಾವಳಿಯಲ್ಲಿ ಧೀರನಾಗನವೆಂದು ಐದು ಪದ್ಯಗಳಿವೆ; ಅವನ ಹೆಸರಿನ ಮುಂದೆ 'ಭದಂತ' ವೆಂಬ ಉಪಾಧಿಯಿದೆ. ಬೌದ್ಧನಾದ ಇವನು ಯಾರೋ ತಿಳಿಯದು. ಕುಂದಮಾಲೆಯಲ್ಲಿ ಆ ಪದ್ಯಗಳಾಗಲೀ ಯಾವೊಂದು ಬೌದ್ಧತತ್ವ ನಿರೂಪಣೆಯಾಗಲೀ ಇಲ್ಲ. ಅಲ್ಲದೆ ನಾಟಕ ಗಣೇಶ, ಶಿವರ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತದೆ. ನಾಟಕದ ಉದ್ದಕ್ಕೂ ಶ್ರೋತ್ರಿಯ ವಾತಾವರಣವಿದೆ. ನಾಟ್ಯದರ್ಪಣದಲ್ಲಿ 'ವೀರನಾಗ ನಿಬದ್ಧಾಯಾಂ ಕುಂದಮಾಲಾಯಾಂ ಸೀತಾಯಾಸ್ತದಪತ್ಯಯೋಶ್ವ ಪಾಲನಸಂಯೋ ಜನಾಭ್ಯಾಂ ಸ್ವಫಲನಿರಪೇಕ್ಷಸ್ಯ ವಾಲ್ಮೀಕೇಃ' ಎಂಬ ಮಾತು ಬಂದಿದೆ. 'ವೀರನಾಗ' ವೇ ಕ್ರಮೇಣ 'ಧೀರನಾಗ' 'ದಿಙ್ನಾಗ' ಎಂದು ವಿಕಾರಗೊಂಡಿರಬಹುದು. ಆದ್ದರಿಂದ ಸದ್ಯಕ್ಕೆ ಕುಂದಮಾಲೆಯ ಕರ್ತೃ ವೀರನಾಗನೆಂದು ಇಟ್ಟುಕೊಳ್ಳಬಹುದು.

ವೀರನಾಗನು 'ಅರಾರಾಲಪುರ' ದವನೆಂದು ನಾಟಕದ ಸ್ಥಾಪನೆಯಿಂದ ತಿಳಿದು ಬರುತ್ತದೆ. ಆ ಊರು ಯಾವುದೋ ತಿಳಿಯದು, ಅವನ ಕಾಲವೂ ತಿಳಿಯದು. ಭಾಸ ಕಾಳಿದಾಸರ ಅನುಕರಣವಿರುವುದರಿಂದಲೂ ಸರಳತೆ ಸಾಲಭ್ಯಗಳಿರುವುದರಿಂದಲೂ, ಭವಭೂತಿಯ ಪಾಂಡಿತ್ಯ ಸೆಡಸುಗಳಿಲ್ಲದಿರುವುದರಿಂದಲೂ ಕಾಳಿದಾಸನ ನಂತರ ಭವಭೂತಿಯ ಹಿಂದೆ ಸ್ಟು. ಕ್ರಿ. ಶ. ಆರು ಅಥವಾ ಏಳನೆಯ ಶತಮಾನದಲ್ಲಿ ವೀರನಾಗನು ಇದ್ದನೆಂದು ಹೇಳಬಹುದು.

ಆರು ಅಂಕಗಳನ್ನುಳ್ಳ ಕುಂದಮಾಲೆಯಲ್ಲಿ ಉತ್ತರ ರಾಮಾಯಣದ ಕಥೆ ಇದೆ. ಇದು ನಾಟಕದ ಕಥಾಸಂಗ್ರಹ :—

ರಾಮನಿಂದ ಪರಿತ್ಯಕ್ತಳಾದ ಸೀತೆ ವಾಲ್ಮೀಕಿಯ ಆಶ್ರಮದಲ್ಲಿ ಲವಕುಶರನ್ನು ಹಡೆಯುತ್ತಾಳೆ. ಅವರು ರಾಮಾಯಣವನ್ನು ಹಾಡಲು ಕಲಿಯುತ್ತಾರೆ. ರಾಮನು ನೈಮಿಶಾರಣ್ಯದಲ್ಲಿ ಅಶ್ವಮೇಧ ಯಾಗವನ್ನು ಕೈಗೊಳ್ಳುತ್ತಾನೆ. ಪ್ರಸವಸಮಯದಲ್ಲಿ ಹೆದರಿಕೊಂಡಿದ್ದಂತೆ ಸೀತೆ ಗಂಗೆಯನ್ನುಪೂಜಿಸಿ 'ಕುಂದಮಾಲೆ' ಯನ್ನು ತೇಲಿಬಿಟ್ಟಿರುತ್ತಾಳೆ. ರಾಮನು ಆ ಮಾಲೆಯನ್ನು ಕಂಡು ಅದರ ರಚನೆಯು ಸೀತೆಯದೆಂದು ಗುರುತಿಸುತ್ತಾನೆ. ಹೂಕೊಯ್ಯಲು ಬಂದಿದ್ದ ಸೀತೆ ವಿಶ್ರಾಂತಿಗಾಗಿ ಗಿಡಗಳ ಪೊದೆಯ ಹಿಂದೆ ಕುಳಿತಿದ್ದ ರಾಮನನ್ನು ನೋಡಿ ಅವನ ಸಂತಾಪವನ್ನು ಅರಿಯುತ್ತಾಳೆ.

ತಪೋವನದಲ್ಲಿ ಸಂಚರಿಸುತ್ತಾ ರಾಮನು ಕೊಳದ ನೀರಿನಲ್ಲಿ ಸೀತೆಯ ಪ್ರತಿಬಿಂಬವನ್ನು ಕಾಣುತ್ತಾನೆ. ಅವಳು ಮೂರ್ಛೆಗೊಂಡ ಅವನನ್ನು ಆಲಿಂಗಿಸಿಕೊಂಡು ಎಚ್ಚರಗೊಳಿಸುತ್ತಾಳೆ. ಆದರೆ ವಾಲ್ಮೀಕಿಯ ಮಹಿಮೆಯಿಂದ ಅವಳು ಕಾಣಿಸುವುದಿಲ್ಲ.

ವಾಲ್ಮೀಕಿಯ ಅಪ್ಪಣೆಯಂತೆ ಲವಕುಶರು ರಾಮನ ಮುಂದೆ ರಾಮಾಯಣವನ್ನು ಹಾಡು ತ್ತಾರೆ, ಅವರು ತನ್ನ ಮಕ್ಕಳಾಗಿರಬಹುದೆನಿಸಿದರೂ ಅವನಿಗೆ ನಿರ್ಧರಿಸಲು ಸಾಧ್ಯವಾಗಲಿಲ್ಲ.



ಸೀತೆಯನ್ನು ಸ್ವೀಕರಿಸಬೇಕೆಂದು ವಾಲ್ಮೀಕಿಯು ಹೇಳಿದರೂ ರಾಮನಿಗೆ ಒಪ್ಪಿಗೆಯಾಗಲಿಲ್ಲ. ಸೀತೆಯ ಪ್ರಾರ್ಥನೆಯಂತೆ ಭೂದೇವಿಯು ಬಂದು ಅವಳು ಮಹಾಪತಿವ್ರತೆಯೆಂದು ತಿಳಿಸುತ್ತಾಳೆ. ರಾಮನು ಸೀತೆಯನ್ನು ಸ್ವೀಕರಿಸುತ್ತಾನೆ. ಕುಶನಿಗೆ ಪಟ್ಟಾಭಿಷೇಕವಾಗುತ್ತದೆ. ಲವನು ಯುವರಾಜನಾಗುತ್ತಾನೆ.

ಈ ನಾಟಕದಲ್ಲಿ ರಾಮನು ಸೀತೆಯ ಸುವರ್ಣ ಪ್ರತಿಮೆಯನ್ನಿಟ್ಟುಕೊಂಡು ಯಜ್ಞ ಮಾಡಲಿಲ್ಲ. ಅವನಿಗೆ ಸಮಯಕ್ಕೆ ಸರಿಯಾಗಿ ಸೀತೆಯೇ ಒದಗಿದಳು. ಭೂದೇವಿಯು ಸೀತೆಯನ್ನು ಕರೆದುಕೊಂಡು ಹೋಗಲಿಲ್ಲ, ಅವಳು ಪತಿವ್ರತೆಯೆಂದು ಸಾರಿ ಹೊರಟುಹೋದಳು. ರಾಮನು ಪತ್ನಿ ಪುತ್ರರನ್ನು ಪಡೆದನು. ಶಂಭೂಕವಧೆ, ಲವಣಾಸುರ ಸಂಹಾರ, ಲವಕುಶರ ಯುದ್ಧಗಳು ಈ ನಾಟಕದಲ್ಲಿಲ್ಲ. ಸೀತಾ ಪರಿತ್ಯಾಗದವರೆಗಿನ ಕಥೆಯನ್ನು ಹತ್ತು ಶ್ಲೋಕ ಗಳಲ್ಲಿಯೂ, ನಂತರದ ಕಥೆಯನ್ನು ಮೂರು ಶ್ಲೋಕಗಳಲ್ಲಿಯೂ ಸಂಗ್ರಹಿಸಿರುವುದು ಕವಿಯ ಕಥಾಸಂಗ್ರಹ ಸಾಮರ್ಥ್ಯಕ್ಕೆ ನಿದರ್ಶನ. ರಾಮಾಯಣವನ್ನು ಕಲಿತಿದ್ದರೂ ಲವಕುಶರಿಗೆ ಸೀತೆ ರಾಮ ಲಕ್ಷ್ಮಣರ ಪರಿಚಯವಿರಲಿಲ್ಲ. ಸೀತೆ ಮಕ್ಕಳನ್ನು ಬಿಟ್ಟು ಪಾತಾಳಕ್ಕೆ ಹೋಗಲಿಲ್ಲ, ಆದರೆ ಅವಳು ತಾಯಿಯೆಂದು ಅವರಿಗೆ ತಿಳಿಯದು. ಸೀತೆಗೆ ರಾಮನು 'ನಿರನುಕ್ರೋಶ' ನೆನಿಸಿದರೂ ಅವಳ ಪ್ರೇಮಕ್ಕೆ ಚ್ಯುತಿ ಬರಲಿಲ್ಲ. ಸೀತೆಯನ್ನು ತ್ಯಜಿಸಿದ ರಾಮನ ದುಃಖವೂ ಅಪಾರವಾದುದು. ನಾಟಕವು ಕರುಣದಿಂದ ಆರಂಭವಾಗಿ ಅದ್ಭುತದಲ್ಲಿ ಮುಗಿಯುತ್ತದೆ. ಇಡೀ ನಾಟಕ ಹುಟ್ಟಿ ಬೆಳೆದಿರುವುದು ವಾಲ್ಮೀಕಿಯ ಆಶ್ರಮದಲ್ಲಿ. ನಾಟಕದಲ್ಲಿ ಪಾತ್ರಗಳು ಕಡಿಮೆ, ಭಾಷೆ ಸುಲಭ, ಶೈಲಿ ಸರಳ. ಈಚಿನ ರಾಮಾಯಣ ನಾಟಕಗಳಲ್ಲೆಲ್ಲಾ ಇದು ಉತ್ತಮ ವಾದುದು. ಸೀತೆಯು ಪವಿತ್ರ ಗಂಗೆಯನ್ನು ಪೂಜಿಸಿ ತೇಲಿಬಿಟ್ಟ ಕುಂದಮಾಲೆಯು ರಾಮ ಸೀತೆಯರ ಸಮಾಗಮದ ಬಾಗಿಲನ್ನು ತೆರೆಯುತ್ತದೆ.

ನಾಟಕದ ಭಾಷೆ ಮತ್ತು ಶೈಲಿಗಳ ಪರಿಚಯಕ್ಕಾಗಿ ಒಂದೆರಡು ಪದ್ಯಗಳನ್ನಿಲ್ಲಿ ಕೊಡಲಾಗಿದೆ.—

ಏರೇ ರುದಂತಿ ಹರಿಣಾ ಹರಿತಂ ವಿಮುಚ್ಯ
ಹಂಸಾಶ್ಚ ಶೋಕವಿಧುರಾಃ ಕರುಣಂ ರುದಂತಿ ।
ನೃತ್ತಂ ತ್ಯಜಂತಿ ಶಿಖಿನೋಽಪಿ ವಿಲೋಕ್ಯ ದೇವೀಂ
ತಿರ್ಯಗ್ಗತಾ ವರಮಮೀ ನ ಪರಂ ಮನುಷ್ಯಾಃ ॥
ಧರ್ಮೇಣ ಜಿತಸಂಗ್ರಾಮೋ ರಾಮೋ ಶಾಸತಿ ಮೇದಿನೀಂ ।
ಕಥ್ಯತಾಂ ಕಥ್ಯತಾಂ ವತ್ಸೇ ವಿಪದೇಷಾ ಕುತಸ್ತವ ॥

ಮಹಾನಾಟಕಂ

ಮಹಾನಾಟಕ ಅಥವಾ ಹನೂಮನ್ನಾಟಕದಲ್ಲಿ ರಾಮಾಯಣದ ಸಂಪೂರ್ಣ ಕಥೆ ಇದೆ. ಇದರ ಕವಿ, ಕಾಲ, ದೇಶಾದಿಗಳನ್ನು ನಿರ್ಣಯಿಸಲು ಯೋಗ್ಯ ಆಧಾರಗಳಿಲ್ಲ. ಮೂಲ ಗ್ರಂಥ ಎರಡು ಪಾಠಗಳಲ್ಲಿ ದೊರೆಯುತ್ತದೆ. ಒಂದು ಮಧುಸೂದನನಿಂದ ಸಂಕಲಿತವಾದ

ಔತ್ತರೇಯ ಅಥವಾ ಬಂಗಾಳಿ ಪಾಠ ; ಇದರಲ್ಲಿ 9 ಅಥವಾ 10 ಅಂಕಗಳಿವೆ. ಇನ್ನೊಂದು ದಾಮೋದರ ಮಿಶ್ರನಿಂದ ಸಂಕಲಿತವಾದ ದಾಕ್ಷಿಣಾತ್ಯ ಅಥವಾ ನಾಗರಿ ಪಾಠ, ಇದರಲ್ಲಿ 14 ಅಂಕಗಳಿವೆ. ಮುಖ್ಯಪಾಠಗಳು ಎರಡೇ ಆದರೂ ಒಂದು ಮುದ್ರಿತ ಪ್ರತಿಯಂತೆ ಮತ್ತೊಂದಿಲ್ಲ. ಸುಶೀಲ ಕುಮಾರ ದೇ ಅವರಿಗೆ 8 ಹಸ್ತಪ್ರತಿಗಳು ದೊರೆತಿವೆ. ಎಸ್ಟೆಲರ್ ಎಂಬ ಜರ್ಮನ್ ಪಂಡಿತರು 10 ಮಧುಸೂದನ ಹಸ್ತಪ್ರತಿಗಳನ್ನೂ, 23 ದಾಮೋದರ ಹಸ್ತಪ್ರತಿಗಳನ್ನೂ ಪರಿಶೀಲಿಸಿದ್ದಾರೆ. ಒಂದು ಹಸ್ತಪ್ರತಿಯಂತೆ ಮತ್ತೊಂದು ಹಸ್ತ ಪ್ರತಿಯೂ ಇಲ್ಲ. ಸಂಕಲನಕಾರರು ತಮ್ಮ ಕಾಲದಲ್ಲಿ ಪ್ರಸಿದ್ಧವಾಗಿದ್ದ ರಾಮನಾಟಕಗಳಿಂದ ಸಂದರ್ಭೋಚಿತವಾದ ಪದ್ಯಗಳನ್ನು ಆಯ್ದು ಅಲ್ಲಲ್ಲಿ ಸೇರಿಸಿರುವಂತೆ ತೋರುತ್ತದೆ. ವಾಲ್ಮೀಕಿ, ಕಾಳಿದಾಸ, ಭವಭೂತಿ, ಮುರಾರಿ, ರಾಜಶೇಖರ, ಜಯದೇವ ಮುಂತಾದವರ ಪದ್ಯಗಳು ಈ ನಾಟಕದಲ್ಲಿವೆ. ಒಂದು ಪ್ರತಿಯ ಮಂಗಳಪದ್ಯಗಳಲ್ಲಿ 'ಯಂ ಶೈವಾ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ' ಎಂಬ ಪದ್ಯವೂ ಇದೆ.

ಎರಡು ಪಾಠಗಳಲ್ಲಿಯೂ ನಾಟಕದ ಕರ್ತೃ ಹನುಮಂತನೆಂದು ಹೇಳಲಾಗಿದೆ. ಆದ್ದರಿಂದ ಹನುಮನ್ನಾಟಕವೆಂದೂ ಈ ಕೃತಿಗೆ ಹೆಸರು ಬಂದಿದೆ. ಮಹಾನಾಟಕವೆಂಬ ಹೆಸರು ಹೇಗೆ ಬಂದಿತೋ ನಿರ್ಧರಿಸಲಾಗುವುದಿಲ್ಲ. ಪೂರ್ಣ ರಾಮಕಥೆ ಇರುವುದರಿಂದಲೋ, ಹದಿನಾಲ್ಕು ಅಂಕಗಳಿರುವುದರಿಂದಲೋ ಈ ಹೆಸರು ಬಂದಿರಬಹುದು. ನಾಟಕದ ಕರ್ತೃವಿನ ವಿಷಯದಲ್ಲಿ ಒಂದು ದಂತ ಕಥೆ ಇದೆ. ಅದರಂತೆ ಹನುಮಂತನು ಒಂದು ಬಂಡೆಯ ಮೇಲೆ ರಾಮನ ಕಥೆಯನ್ನು ಕೆತ್ತಿದನು ; ಅದು ಅಮೃತಪ್ರಾಯವಾಗಿದ್ದುದರಿಂದ ತನ್ನ ಕಾವ್ಯ ಸಪ್ಪೆಯಾದೀತೆಂದು ಭಾವಿಸಿ ವಾಲ್ಮೀಕಿಯು ಅದನ್ನು ಸಮುದ್ರಕ್ಕೆ ಹಾಕಿಸಿದನು ; ಸೇತು ಬಂಧ ಯಾತ್ರೆಯನ್ನು ಕೈಗೊಂಡಿದ್ದಾಗ ಭೋಜನು ಇಂತಹ ಒಂದು ಶಿಲಾಖಂಡವನ್ನು ಕಂಡನು ; ಅವನು ಅಲ್ಲಿನ ಶಿಲಾಖಂಡಗಳಿಂದ ದೊರೆತಷ್ಟು ಪದ್ಯಗಳನ್ನು ಸಂಗ್ರಹಿಸಿದನು ; ಭೋಜನ ಆಸ್ಥಾನ ವಿದ್ವಾಂಸನಾದ ದಾಮೋದರ ಮಿಶ್ರನು ಕ್ರಮವನ್ನನುಸರಿಸಿ, ಸಂದರ್ಭೋಚಿತವಾಗಿ ಜೋಡಿಸಿ ಅವುಗಳ ಸಂಕಲನ ಪ್ರತಿಯನ್ನು ಸಿದ್ಧಪಡಿಸಿದನು ಈ ಕಥೆಯಿಂದ ಮೂಲ ನಾಟಕವು ಯಾವುದಾದರೊಂದು ಶಿಲಾಶಾಸನದಲ್ಲಿ ಇದ್ದಿರಬೇಕೆಂದು ತೋರುತ್ತದೆ

1. i) ರಮ್ಯಂ ಶ್ರೀರಾಮಚಂದ್ರಪ್ರಬಲಭುಜಬೃಹತ್ತಾಂಡವಂ ಕಾಂಡಶೌಂಡ
ವ್ಯಾಪ್ತಂ ಬ್ರಹ್ಮಾಂಡಭಾಂಡೇ ರಣಶಿರಸಿ ಮಹಾನಾಟಕಂ ಪಾಟವಾಬ್ಧಿಂ ।
ಪುಣ್ಯಂ ಭಕ್ತಾಂಜನೇಯಪ್ರವಿರಚಿತಮಿದಂ ಯಃ ಶೃಣೋತಿ ಪ್ರಸಂಗಾ
ನ್ಮುಕ್ತೋsಪಾ ಸರ್ವಸೌಪಾದರಿಭಟವಿಜಯೀ ರಾಮವತ್ಸಂಗರೇಷು ॥

(ii) ರಚಿತಮನಿಲಪುತ್ರೇಣಾಥ ವಾಲ್ಮೀಕಿನಾಬ್ಧೌ
ನಿಹಿತಮಮೃತಬುದ್ಧ್ಯಾ ಪ್ರಾಙ್ಮಹಾನಾಟಕಂ ಯತ್ ।
ಸಮತಿನೃಪತಿ ಭೋಜೇನೋದ್ಧೃತಂ ತತ್ಕ್ರಮೇಣ
ಗ್ರಥಿತಮವತು ವಿಶ್ವಂ ಮಿಶ್ರದಾಮೋದರೇಣ ॥
— ಹನೂಮನ್ನಾಟಕ, ದಾಮೋದರಮಿಶ್ರನ ಪಾಠ, ಅಂಕ 14 ಪ 94, 96.

(iii) 'ವಾಲ್ಮೀಕೇರುಪದೇಶತಃ ಸ್ವಯಮಹೋ ವಕ್ತಾ ಹನೂಮಾನ್ ಕವಿಃ'
ಮಧುಸೂದನ ಪಾಠ, ಪ್ರಸ್ತಾವನೆ — ಪ 12.



ಶಾರ್ಙ್ಗಧರ ಪದ್ಧತಿಯಲ್ಲಿ ಹನುಮಂತನ ಹೆಸರಿನಲ್ಲಿ ಕೆಲವು ಪದ್ಯಗಳಿವೆ. ಆದ್ದರಿಂದ ಈ ಎರಡು ಪಾಠಗಳೂ ಶಾರ್ಙ್ಗಧರ ಪದ್ಧತಿಗಿಂತ (ಕ್ರಿ. ಶ. 1363) ಹಿಂದೆ ಇದ್ದಿರಬೇಕು. ಭೋಜನ ಕಾಲದಲ್ಲಿಯೂ (ಕ್ರಿ ಶ. 11ನೇಯ ಶತ) ಸಮಗ್ರವಾಗಿಯೋ, ಅಸಮಗ್ರವಾಗಿಯೋ ಇವು ಇದ್ದಿರಬಹುದು. ಈ ನಾಟಕಕ್ಕೆ ಪ್ರಸಿದ್ಧಿ ದೊರೆತಿರುವುದು ಅದರ ವಸ್ತುವಿನಿಂದಲ್ಲ, ವಿಚಿತ್ರ ಸ್ವರೂಪದಿಂದ. ಕೆಲವು ಹಸ್ತಪ್ರತಿಗಳಲ್ಲಿ ಹನುಮಂತನು ಕವಿಯೆಂದಾಗಲೀ, ಅಂಕ ವಿಭಾಗವಾಗಲೀ, ಗದ್ಯವಾಗಲೀ ಇಲ್ಲ. ಮೂಲವು ಹೀಗೆ ಕೇವಲ ಪದ್ಯರೂಪವಾಗಿದ್ದಿರ ಬಹುದೆಂದು ಸುಶೀಲಕುಮಾರ ದೇ ಅವರು ಊಹಿಸುತ್ತಾರೆ. ಹಲವು ಹಸ್ತಪ್ರತಿಗಳಲ್ಲಿ ನಾಂದೀ, ಪ್ರಸ್ತಾವನೆ, ಭರತವಾಕ್ಯ, ಸೂತ್ರಧಾರ ಮುಂತಾದ ನಿರ್ದೇಶನಗಳಿಲ್ಲ ; ಮತ್ತೆ ಕೆಲವು ಪ್ರತಿಗಳಲ್ಲಿ ಸೂತ್ರಧಾರನು ಪ್ರಸ್ತಾವನೆಯ ನಂತರವೂ ಮೊದಲನೆಯ ಅಂಕದ ಕೊನೆಯ ವರೆಗೆ ಬರುತ್ತಾನೆ; ರಂಗ ಸೂಚನೆಗಳು ಮಿಕ್ಕ ನಾಟಕಗಳಲ್ಲಿರುವಂತಿಲ್ಲ ; ಗದ್ಯ ಬಹಳ ಕಡಿಮೆ ; ಇರುವ ಗದ್ಯ ಧೀರ್ಘ ಸಮಾಸ ಭೂಯಿಷ್ಠವಾಗಿ ಚಂಪೂ ಗದ್ಯದಂತಿದೆ. ಅನೇಕ ಕಡೆ ನಾಟಕ ಪಾತ್ರಾನುಗುಣ್ಯವಿರದೆ ಚಂಪುವಿನಂತಿದೆ. ರಾಮಸೀತೆಯರ ನಾಟ್ಯವಿದೆ. ಪ್ರೌಢವೃತ್ತಗಳನ್ನು ಬಳಸಲಾಗಿದೆ. ಶಬ್ದಾಲಂಕಾರಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ.

ಈ ನಾಟಕದ ಸ್ವರೂಪವು ಒಂದು ಸಮಸ್ಯೆಯಾಗಿದೆ. ನಾಟಕದ ಪೂರ್ವರೂಪವಾದ ಪುರಾಣಕಾವ್ಯ, ಓದುವುದಕ್ಕೆ ಮಾಡಿಕೊಂಡ ನಾಟಕದ ರೂಪದ ಶ್ರವ್ಯಕಾವ್ಯ, ಛಾಯಾನಾಟಕ, ಗ್ರಾಂಥಿಕರ ಕಥಾಗ್ರಂಥ—ಹೀಗೆ ಇದನ್ನು ಹಲವರು ಹಲವು ಬಗೆಯಾಗಿ ಊಹಿಸುತ್ತಾರೆ. ಇದು ಯಾತ್ರಾನಾಟಕ, ಬಯಲಾಟ, ಭಾಗವತರಾಟ, ಕಥಕ್ಕಳಿ, ಗೊಂಬೆಯಾಟಗಳಿಗೆ ಹತ್ತಿರ ವಾಗಿದೆ. ಕಾವ್ಯದ ಪರಿಚಯಕ್ಕಾಗಿ ಒಂದೆರಡು ನಿದರ್ಶನಗಳನ್ನಿಲ್ಲಿ ಕೊಡಲಾಗಿದೆ[1].

ಮಂಗಳ ಪದ್ಯ :

ಕಲ್ಯಾಣಾನಾಂ ನಿಧಾನಂ ಕಲಿಮಲಮಥನಂ ಪಾವನಂ ಪಾವನಾನಾಂ
ಪಾಥೇಯಂ ಯನ್ಮುಮುಕ್ಷೋಃ ಸಪದಿ ಪರಪದಪ್ರಾಪ್ತಯೇ ಪ್ರಸ್ಥಿತಸ್ಯ ।
ವಿಶ್ರಾಮಸ್ಥಾನಮೇಕಂ ಕವಿವರವಚಸಾಂ ಜೀವನಂ ಸಜ್ಜನಾನಾಂ
ಬೀಜಂ ಧರ್ಮದ್ರುಮಸ್ಯ ಪ್ರಭವತು ಭವತಾಂ ಭೂತಯೇ ರಾಮನಾಮ ॥

ಶ್ರೀರಾಮನ ಪ್ರಲಾಪ :

ಮಧ್ಯೋsಯಂ ಹರಿಭಿಃ ಸ್ಮಿತಂ ಹಿಮರುಚಾ ನೇತ್ರೇ ಕುರಂಗೀಗಣೈಃ
ಕಾಂತಿಶ್ಚಂಪಕಕುಡ್ಮಲೈಃ ಕಲರವೋ ಹಾಹಾ ಹೃತಃ ಕೋಕಿಲೈಃ ।
ಮಾತಂಗೈರ್ಗಮನಂ ಕಥಂ ಕಥಮಹೋ ಹಂಸೈರ್ವಿಭಜ್ಯಾಧುನಾ
ಕಾಂತಾರೇ ಸಕಲೈರ್ವಿನಾಶ್ಯ ಪಶುವನ್ನೀತಾಸಿ ಭೋ ಮೈಥಿಲಿ ॥

1 'ದೀಪಿಕಾ' ವ್ಯಾಖ್ಯಾನದಿಂದ ಕೂಡಿದ, ದಾಮೋದರ ಮಿಶ್ರನಿಂದ ಸಂಕಲಿತವಾದ ಪಾಠವನ್ನು ಬಳಸಿಕೊಳ್ಳಲಾಗಿದೆ.

ಹನೂಮಂತನು ಕಂಡ ರಾಮವ್ಯಕ್ತಿತ್ವ —

ಲಕ್ಷ್ಮೀಸ್ತಿಷ್ಠತಿ ತೇ ಗೇಹೇ ವಾಚಿ ಭಾತಿ ಸರಸ್ವತೀ ।
ಕೀರ್ತಿಃ ಕಿಂ ಕುಪಿತಾ ರಾಮ ಯೇನ ದೇಶಾಂತರಂ ಗತಾ ॥

ಅರಣ್ಯದ ವರ್ಣನೆ (ಗದ್ಯ ಶೈಲಿ)—

ಗಗನಚುಂಬನಬದ್ಧಲಕ್ಷ್ಯವಿಪುಲಫಲಾಭಾರಾವಲಂಬನಾಲಂಬಿತಾನಂತಜಂತುಸಂತೋಷ ಪೋಷನಿದೋಷಭೂಷಣಾಧ್ಯುಷಿತನಿಃಶೇಷಸವಿಶೇಷಾವೃತವರ್ಷಸ್ಪರ್ಧಿವರ್ಧಿಷ್ಣು ——— ——ದಂಸ್ತರಾವುರಣ್ಯಾನೀಂ ಪರ್ಯಟನ್ ಮಹಾವರಾಹಸ್ಕಂಧಾರೂಢಮಂತ್ಕಟುರಟಂತಂ ಕರಟುಂ ನಾಮಂತೋ ವಿಲೋಕ್ಯ ।

## ಆಶ್ಚರ್ಯ ಚೂಡಾಮಣಿ

ಮಲಬಾರ್ ಪ್ರಾಂತದವನಾದ ಶಕ್ತಿಭದ್ರ (9-10ನೆಯ ಶಕ) ನ ಈ ನಾಟಕದಲ್ಲಿ ಏಳು ಅಂಕಗಳಿವೆ. ಶೂರ್ಪಣಖಿಯ ವೃತ್ತಾಂತದಿಂದ ಹಿಡಿದು ರಾಮನು ಲಂಕೆಯನ್ನು ಬಿಡುವ ವರೆಗಿನ ರಾಮಾಯಣದ ಕಥೆಯು ಇದರಲ್ಲಿದೆ.

ಇದರ ಕಥಾಸಾರಾಂಶ :

ಜನಸ್ಥಾನದಲ್ಲಿ ರಾಕ್ಷಸರ ಬಾಧೆಯನ್ನು ಪರಿಹರಿಸಿದ್ದರಿಂದ ಪ್ರಸನ್ನರಾದ ಋಷಿಗಳು ರಾಮನಿಗೆ ರಾಕ್ಷಸರ ಮಾಯಾವೇಷವನ್ನು ತೊಲಗಿಸುವ 'ಆಶ್ಚರ್ಯ ಚೂಡಾಮಣಿ' 'ಅದ್ಭುತಾಂಗುಲೀಯಕ' 'ಕವಚಗಳನ್ನು ಕೊಟ್ಟರು. ಸೀತೆ ರಾಮ ಲಕ್ಷ್ಮಣರು ಅವುಗಳನ್ನು ಕ್ರಮವಾಗಿ ಧರಿಸಿದರು. ಅವಮಾನಿತಳಾದ ಶೂರ್ಪಣಖಿ ಸೀತೆಯನ್ನು ಅಪಹರಿಸುವಂತೆ ರಾವಣನನ್ನು ಪ್ರೇರಿಸಿದಳು. ಮಾಯಾಮೃಗವು ರಾಮ ಲಕ್ಷ್ಮಣರನ್ನು ಅಗಲಿಸಿತು. ರಾವಣ ಮತ್ತು ಅವನ ಸಾರಥಿ ರಾಮಲಕ್ಷ್ಮಣರ ವೇಷದಿಂದ ಸೀತೆಯನ್ನು ಅಪಹರಿಸಿದರು. ಶೂರ್ಪಣಖಿಯು ಸೀತೆಯ ವೇಷದಿಂದ ರಾಮನನ್ನೂ, ಮಾರೀಚನು ರಾಮನ ವೇಷದಿಂದ ಲಕ್ಷ್ಮಣನನ್ನೂ ಮೋಸಗೊಳಿಸಿದರು. ಚೂಡಾಮಣಿ, ಅಂಗುಲೀಯಕಗಳ ಸ್ಪರ್ಶದಿಂದ ರಾಕ್ಷಸರ ಮಾಯೆ ಬಯಲಾಯಿತು. ರಾವಣಾದಿಗಳ ಸಂಹಾರವಾದ ಮೇಲೆ ರಾಮನು ಸೀತೆಯೊಡನೆ ಅಯೋಧ್ಯೆಗೆ ಪ್ರಯಾಣ ಮಾಡಿದನು.

ಕಥಾಸಂಗ್ರಹದಲ್ಲಿ ಕವಿಗೆ ಕೌಶಲವಿದೆ. ವರ್ಣನೆಗಳು ಕಮ್ಮಿ; ಭಾಷೆ ಸುಲಭ; ಪಾತ್ರಗಳಲ್ಲಿ ಜೀವಕಳೆಯಿದೆ; ವೀರಕ್ಕಿಂತ ಅದ್ಭುತ ಹೆಚ್ಚಾಗಿದೆ. ವಿಶೇಷ ಮಹಿಮೆಯುಳ್ಳ ಚೂಡಾಮಣಿಯ ನಿಮಿತ್ತವಾಗಿ ನಾಟಕಕ್ಕೆ ಆಶ್ಚರ್ಯ ಚೂಡಾಮಣಿಯೆಂಬ ಹೆಸರು ಬಂದಿದೆ



ನಾಟಕದ ಭಾಷೆ, ಶೈಲಿ, ವರ್ಣನೆಗಳ ಪರಿಚಯಕ್ಕಾಗಿ ಒಂದು ಪದವನ್ನಿಲ್ಲಿ ಕೊಡಲಾಗಿದೆ.

ಆಶ್ರಮದ ವರ್ಣನೆ—

ದರ್ಭೈಃ ಸೈಕತಮಂಡಲಾನಿ ಸರಿತಃ ಶ್ಯಾಮಾನಿ ಮಂತ್ರಾಸ್ಸ್ಮೃತೈ
ರಭ್ಯಾಸಾತ್ ಕಲಮಾಹ ಶಾಖಿನಿ ಶುಕೀ ವಾಕ್ಯಾನಿ ವೈಖಾನಸೈಃ ।
ಊಧೋ ಮಾತುರಪಾಸ್ಯ ಮಾಂ ಪ್ರತಿ ಜಟಾಚೀರಾಜಿನಪ್ರತ್ಯಯಾ
ನ್ನೀವಾರಾಂಜಲಿಭಿರ್ಭೃತಾ ಮುನಿಸುತೈರಾಯಾಂತಿ ಬಾಲಾ ಮೃಗಾಃ ॥

ಅನರ್ಘ ರಾಘವ :

ಈ ನಾಟಕದ ಕರ್ತೃವಾದ ಮುರಾರಿಯ ದೇಶಕಾಲಾದಿಗಳು ಸರಿಯಾಗಿ ಗೊತ್ತಿಲ್ಲ. ಅವನು ಕ್ರಿ. ಶ. 9ನೆಯ ಶತಮಾನದಲ್ಲಿ ಮಾಹಿಷ್ಮತಿಯಲ್ಲಿದ್ದಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಅವನದು ಮೌದ್ಗಲ್ಯಗೋತ್ರ; ಅವನ ತಂದೆತಾಯಿಗಳು ಭಟ್ಟವರ್ಧಮಾನ ಮತ್ತು ತಂತುಮತೀ. ಅವನು ತನ್ನನ್ನು 'ಬಾಲ ವಾಲ್ಮೀಕಿ' ಯೆಂದು ಕರೆದುಕೊಂಡಿದ್ದಾನೆ. ಮಧ್ಯ ದೇಶದ 'ಸುಚರಿತ' ನಿಂದ ಪುರುಷೋತ್ತಮನ ಯಾತ್ರೆಯಲ್ಲಿ ಈ ನಾಟಕದ ಪ್ರಯೋಗವಾಯಿತೆಂದು ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ಅನೇಕ ರಾಮಾಯಣ ನಾಟಕಗಳಿರುವಾಗ ತಾನು ಮತ್ತೊಂದು ನಾಟಕ ಬರೆದಿರುವುದಕ್ಕೆ ಅವನು ಕೊಟ್ಟಿರುವ ಸಮಾಧಾನ ಇದು—

ಯದಿ ಕ್ಷುಣ್ಣಂ ಪೂರ್ವೈರಿತಿ ಜಹತಿ ರಾಮಸ್ಯ ಚರಿತಂ
ಗುಣೈರೇತಾವದ್ಭಿರ್ಜಗತಿ ಪುನರನ್ಯೋ ಜಯತಿ ಕಃ ।
ಸ್ವಮಾತ್ಮಾನಂ ತತ್ತದ್ಗುಣಗರಿಮಗಂಭೀರಮಧುರ—
ಸ್ಫುರದ್ವಾಗ್ಬ್ರಹ್ಮಾಣಃ ಕಥಮುಪಕರಿಷ್ಯಂತಿ ಕವಯಃ ॥

ಅನರ್ಘರಾಘವದಲ್ಲಿ ಏಳು ಅಂಕಗಳಿವೆ. ಇದು ಅವರ ಕಥಾಸಂಗ್ರಹ :—

ವಿಶ್ವಾಮಿತ್ರನ ಯಜ್ಞ; ತಾಟಕಾ ಸಂಹಾರ: ಹರಧನುರ್ಭಂಗ; ಪರಶುರಾಮ ಪರಾಜಯ; ರಾಮಾದಿಗಳ ವನಗಮನ ; ಸೀತಾಪಹರಣ ; ವಾಲಿವಧ ; ರಾವಣವಧೆಯ ವರ್ಣನೆ ; ನಂತರ ರಾಮಾದಿಗಳು ವಿಮಾನದಲ್ಲಿ ಅಯೋಧ್ಯೆಗೆ ಹಿಂದಿರುಗುತ್ತಾರೆ.

ಈ ನಾಟಕದಲ್ಲಿ ಶೂರ್ಪಣಖಿಗೆ ಬದಲಾಗಿ ಸಿದ್ಧಶಬರಿಯು ಮಂಥರೆಯನ್ನು ಪ್ರವೇಶಿಸಿ ರಾಮಾದಿಗಳ ಅರಣ್ಯವಾಸಕ್ಕೆ ಕಾರಣಳಾಗುತ್ತಾಳೆ; ಮಾಲ್ಯವಂತನು ಅರ್ಥಶಾಸ್ತ್ರ ಪಂಡಿತನಾದ ಮಂತ್ರಿ. ರಾಮನು ವಾಲಿಯನ್ನು ಧರ್ಮ ಯುದ್ಧದಲ್ಲಿ ಕೊಲ್ಲುತ್ತಾನೆ.

ಮುರಾರಿಯದು ಬಹಳ ಘನಿಷ್ಠವಾದ ಪಾಂಡಿತ್ಯ[1] ಪ್ರಾಯಶಃ ಇಷ್ಟು ಕಠಿಣವಾದ ಬೇರಾವ ಸಂಸ್ಕೃತ ನಾಟಕವೂ ಇಲ್ಲ. ಭಾಷೆಯು ಪ್ರೌಢವೂ ಪಾಂಡಿತ್ಯಪೂರ್ಣವೂ ಆಗಿದೆ. ಪಾತ್ರಗಳ ಮಾತೂ, ವರ್ಣನೆಗಳೂ ಹೆಚ್ಚು. ಎರಡನೆಯ ಅಂಕದಲ್ಲಿ ಪ್ರಾತಃಕಾಲದ

1 (i) ಮುರಾರಿಪದಚಿಂತಾ ಚೇತ್ತದಾ ಮಾಘೇ ಮತಿಂ ಕುರು ।
(ii) " ಮುರಾರಿಪದಚಿಂತಾಯಾಂ ಭವಭೂತೇಸ್ತು ಕಾ ಕಥಾ
ಭವಭೂತಿಂ ಪರಿತ್ಯಜ್ಯ ಮುರಾರಿಮುರರೀಕುರು ॥

ವರ್ಣನೆಗೇ ಹತ್ತು ಪದ್ಯಗಳಿವೆ. ನಾಟಕದಲ್ಲಿ ಅಪೂರ್ವಪದಗಳೂ ಕ್ಲಿಷ್ಟವ್ಯಾಕರಣ ಪ್ರಯೋಗಗಳೂ ಇವೆ. ಶೈಲಿಯು ಜಟಿಲವೂ ಪ್ರೌಢವೂ ಆಗಿದೆ[1]. ವಾಲಿಯನ್ನು 'ವಿಕರ್ತನತನಯ' ಶಿವಧನುಸ್ಸನ್ನು 'ಕಾತ್ಯಾಯನೀಕಾಮುಕಕಾರ್ಮುಕ' ಎಂದರೇ ಅವನಿಗೆ ತೃಪ್ತಿ. ಮುರಾರಿಯು ಮಂಚಿತ ಪ್ರಿಯನಾದ ಕವಿ, 'ಮುರಾರೇಃ ತೃತೀಯಃ ಪಂಥಾಃ' ಎಂಬ ಹೇಳಿಕೆಯಿದೆ. ಈ ಉಕ್ತಿ ಅವನು ಹೇಳಿಕೊಂಡಿರುವ ಅವನ ಮಾತುಗಳ ಗಂಭೀರತೆಯಿಂದಾಗಿ ಹುಟ್ಟಿರಬಹುದು[2]; ಅಥವಾ ಸಹಜವೂ ನೇರವೂ ಸುಲಭವೂ ಆದ ಪದಗಳನ್ನು ಬಿಟ್ಟು ಗಾಢವೂ ಗೂಢವೂ ಸಮಾಸಜಟಿಲವೂ ಆದ ಪದಗಳ ಪ್ರಯೋಗದಿಂದ ಬಂದಿರಬಹುದು, ಇದು ವ್ಯಾಖ್ಯಾಕಾರನಾದ ಹರಹರಿದೀಕ್ಷಿತನ ಅಭಿಪ್ರಾಯ—

ಯೇ ಶಬ್ದಶಾಸ್ತ್ರನಿಷ್ಣಾತಾಃ ಯೇ ಶೀಲಿತನಿಘಂಟವಃ ।
ತೇಷಾಮೇವಾಧಿಕಾರೋಽಸ್ಯ ಗ್ರಂಥಸ್ಯ ಪರಿಶೀಲನೇ ॥

ನಾಟಕದ ಭಾಷೆ ಶೈಲಿಗಳ ಪರಿಚಯಕ್ಕಾಗಿ ಒಂದು ಉದಾಹರಣೆ—

ಮಂಧ್ಯೇ(?)ಕೃತ್ಯ ಘನಂ ಧಿನೋತಿ ಜಲಧಿಃ ಸ್ವೈರಂಬುಭಿರ್ಮೇದಿನೀಂ
ಹಂತಿ ಸ್ವೈಃ ಕಿರಣೈಸ್ತಮಿಸ್ರಮರುಣಂ ಕೃತ್ವಾಂತರಾಲೇ ರವಿಃ ।
ತ್ವಂ ರಾಮಾಂತರಿತಶ್ಚ ಪಾಲಯ ನಿಜೈರೇವ ಪ್ರತಾಪೈಃ ಪ್ರಜಾ
ಮಿದ್ಯಕ್ಕೋಽಪಿ ಪರೋಪಕಾರಸುಹೃದಾಮೇಷ ಸ್ವಭಾವೋ ಹಿ ವಃ ॥

## ಪ್ರಸನ್ನರಾಘವ :

'ಚಂದ್ರಾಲೋಕ' ದ ಕರ್ತೃವಾದ ಜಯದೇವನ (ಸು. ಕ್ರಿ.ಶ. 1200) ಏಳು ಅಂಕಗಳನ್ನುಳ್ಳ 'ಪ್ರಸನ್ನರಾಘವ' ದಲ್ಲಿ ಸೀತಾಸ್ವಯಂವರದಿಂದ ಹಿಡಿದು ರಾಮನು ಅಯೋಧ್ಯೆಗೆ ಹಿಂದಿರುಗುವವರೆಗಿನ ರಾಮಾಯಣದ ಕಥೆ ಇದೆ. ಇದರಲ್ಲಿ ಮಾಲ್ಯವಂತ, ಶೂರ್ಪಣಖಿಯರ ತಂತ್ರವಿಲ್ಲ. ರಾವಣಾಸುರ ಬಾಣಾಸುರರಿಬ್ಬರೂ ಶಿವಧನುಸ್ಸನ್ನು ಎತ್ತುವುದರಲ್ಲಿ ಸೋಲುತ್ತಾರೆ. ಸ್ವಯಂವರಕ್ಕೆ ಮೊದಲೇ ಸೀತಾರಾಮರು ಉದ್ಯಾನದಲ್ಲಿ ಸಂಧಿಸಿ ಪರಸ್ಪರ ಮೆಚ್ಚಿಕೊಂಡಿರುತ್ತಾರೆ. ರಾಮನು ವಿದ್ಯಾಧರರ ಇಂದ್ರಜಾಲದ ಸಹಾಯದಿಂದ ಲಂಕೆಯಲ್ಲಿ ನಡೆಯುವುದನ್ನು ನೋಡುತ್ತಾನೆ.

ನಾಟಕ ದೀರ್ಘವರ್ಣನೆಗಳಿಂದ ತುಂಬಿದೆ. ಇದರಲ್ಲಿ ಮಾತುಗಳ ಚಮತ್ಕಾರವೇ ಮುಖ್ಯವಾದುದು. ನಾಟಕದ ಹೆಸರನ್ನು ಹೇಳುವುದರಲ್ಲಿಯೂ ಚಮತ್ಕಾರವಿದೆ—

ಪ್ರತ್ಯಂಕಮಂಕುರಿತ ಸರ್ವರಸಾವತಾರ
ನ್ನವ್ಯೋಲ್ಲಸತ್ಕುಸುಮ ರಾಜಿವಿರಾಜಿಬಂಧಂ ।
ಘರ್ಮೇತರಾಂಶುರಿವ ವಕ್ರತಯಾತಿರಮ್ಯಂ
ನಾಟ್ಯಪ್ರಬಂಧಮತಿಮಂಜುಲ ಸಂವಿಧಾನಂ ॥

ಈ ಪದ್ಯದ ದೊಡ್ಡ ಅಕ್ಷರಗಳನ್ನು ಸೇರಿಸದರೆ ನಾಟಕದ ಹೆಸರಾಗುತ್ತದೆ.

---

1 "ಕರಿಕುಂಭಕೋಟಕೋಟಿಪ್ರಕಟಕಠೋರನಖಾಂಕುರಂ" "ದಶಕಂಠಕುಂಜರಶಿರಃ ಸಂಚಾರಿಪಂಚಾನನಃ"

2 ಗಂಭೀರೋದಾತ್ತ ವಸ್ತವೇ; ಗಂಭೀರಮನೋಹರಾಣಿ ವಚಾಂಸಿ; ಗಂಭೀರಮಧುರೋದ್ಗಾರಾಃ ಗಿರಾಂ ವ್ಯೂತಯಃ— ಇತ್ಯಾದಿ.



ಸೀತೆಯು ಅಸಹ್ಯವ್ಯಥೆ

ಅಲಮಕರುಣಾಂ ಚೇತಃ ಶ್ರೀಮನ್ನಶೋಕವನಸ್ಪತೇ
ದಹನಕಣಿಕಾಮೇಕಾಂ ತಾವನ್ಮಮ ಪ್ರಕಟೀಕುರು ।
ನನು ವಿರಹಿಣಾಂ ಸಂತಾಪಾಯ ಸ್ಫುಟಿ ಕುರುತೇ ಭವಾನ್
ನವಕಿಸಲಯಶ್ರೇಣೀವ್ಯಾಜಾತ್ ಕೃಶಾನುಶಿಖಾವಲಿಂ ॥

## ಜಾನಕೀಪರಿಣಯ :

ರಾಮಭದ್ರದೀಕ್ಷಿತ(17ನೇ ಶತ)ನ ಜಾನಕೀಪರಿಣಯ ನಾಟಕದಲ್ಲಿ ಏಳು ಅಂಕಗಳಿವೆ ; ರಾಮಪಟ್ಟಾಭಿಷೇಕದ ವರೆಗಿನ ರಾಮಾಯಣದ ಕಥೆಯಿಂದೆ. ಅವನಿಗಿಂತ ಹಿಂದಿದ್ದ ಎಲ್ಲಾ ರಾಮಾಯಣ ನಾಟಕಗಳ ಚಮತ್ಕಾರವನ್ನೂ ಇವರಲ್ಲಿ ನೋಡಬಹುದು.

ಇದರ ಕಥಾ ಸಾರಾಂಶ :

ವಿದ್ಯುಜ್ಜಿಹ್ವ, ರಾವಣ, ಸಾರಣರು ಕ್ರಮವಾಗಿ ವಿಶ್ವಾಮಿತ್ರ, ರಾಮ, ಲಕ್ಷ್ಮಣರ ರೂಪವನ್ನು ಧರಿಸಿ ಜನಕನನ್ನು ವಂಚಿಸಿ ಸೀತೆಯನ್ನು ಪಡೆದುಕೊಂಡು ಹೋಗುವ ಉದ್ದೇಶದಿಂದಮಿಥಿಲೆಗೆ ಬರುತ್ತಾರೆ. ಮಾರೀಚ ಕರಾಳರು ಕಾಶ್ಯಪ ಪಿಂಗಳರ ವೇಷಧರಿಸಿ ಪತಿಯ ವಿರಹ ವ್ಯಥೆಯಿಂದ ಅಗ್ನಿಪ್ರವೇಶಮಾಡಿದ ಮಾಯಾಸೀತೆಯನ್ನು ತೋರಿಸಿ ರಾಮನನ್ನು ಬೆಂಕಿಗೆ ಬೀಳುವಂತೆ ಪ್ರೇರಿಸುತ್ತಾರೆ ರಾಮನು ಬೀಳಬೇಕೆಂದು ಬಂಡೆಯನ್ನು ಹತ್ತಲು ಅದು ಅಹಲ್ಯೆಯಾಗುತ್ತದೆ. ಗಂಧರ್ವನು ರಾಮನಿಗೆ ರಾವಣನ ಮೋಸವನ್ನು ತಿಳಿಸುತ್ತಾನೆ. ಧನುರ್ಭಂಗ ಮತ್ತು ಸೀತಾ ವಿವಾಹಗಳು ನಡೆಯುತ್ತವೆ. ಪರಶುರಾಮನಿಂದ ರಾಮನನ್ನು ಕೊಲ್ಲಿಸುವ ಯತ್ನವೂ ವ್ಯರ್ಥವಾಗುತ್ತದೆ. ವಿದ್ಯುಜ್ಜಿಹ್ವಾದಿಗಳು ಮಂಥರೆ, ಕೈಕೇಯೀ, ದಶರಥರಲ್ಲಿ ಆವೇಶಗೊಂಡು ರಾಮನು ಕಾಡಿಗೆ ಹೋಗುವಂತೆ ಮಾಡುತ್ತಾರೆ. ವಿರಾಧ ಶೂರ್ಪಣಖಿಯರು ರಾಮಸೀತೆಯರ ವೇಷಧರಿಸಿ ಅವರನ್ನು ಹೊತ್ತುಕೊಂಡು ಹೋಗಲು ಬರುತ್ತಾರೆ ; ಆದರೆ ಭ್ರಾಂತಿಯಿಂದ ವಿರಾಧನು ಶೂರ್ಪಣಖಿಯನ್ನೇ ಹೊತ್ತುಕೊಂಡು ಹೋಗುತ್ತಾನೆ. ಲಕ್ಷ್ಮಣನು ವಿರಾಧನನ್ನು ಕೊಂದು ಶೂರ್ಪಣಖಿಯ ಕಿವಿಮೂಗುಗಳನ್ನು ಕೊಯ್ಯುತ್ತಾನೆ

ಸೀತಾಪಹರಣ ವಾಲಿವಧೆಗಳವರೆಗಿನ ಕಥೆಯು ಸೀತಾವಿರಹಿಯಾದ ರಾವಣನ ವಿನೋದಕ್ಕಾಗಿ 'ಅಂತರ್ನಾಟಕ' ವಾಗಿ ಅಭಿನಯಿಸಲ್ಪಡುತ್ತದೆ. ವಿಶ್ವಾಮಿತ್ರನು ಕೊಟ್ಟಿದ್ದ 'ರಾಕ್ಷಸಾಂಧಂಕರಣ' ವೆಂಬ ಕಡಗದ ಮಹಿಮೆಯಿಂದ ಸೀತೆಯು ಆ ನಾಟಕವನ್ನು ನೋಡಿ ರಾಮನ ಸಂತಾಪವನ್ನು ತಿಳಿದುಕೊಳ್ಳುತ್ತಾಳೆ. ರಾಮನು ವಿರಹಿಯಾಗಿ ಪರಿತಪಿಸುತ್ತಾನೆ ; ರಾವಣನ ವಧೆಯಾದ ಮೇಲೆ ಅವನು ಅಯೋಧ್ಯೆಗೆ ಹೊರಡುತ್ತಾನೆ. ಅಷ್ಟರಲ್ಲಿ ಶೂರ್ಪಣಖಿಯು ತಪಸಿಯ ವೇಶದಿಂದ ಬಂದು ಸೀತಾರಾಮಲಕ್ಷ್ಮಣರ ಸಾವನ್ನು ತಿಳಿಸಿ ಭರತ ಶತ್ರುಘ್ನರನ್ನು ಬೆಂಕಿಗೆ ಬೀಳುವಂತೆ ಮಾಡುತ್ತಾಳೆ. ಸಕಾಲದಲ್ಲಿ ಆಂಜನೇಯನು ಬಂದು ಅವರನ್ನು ಉಳಿಸುತ್ತಾನೆ. ರಾಮಪಟ್ಟಾಭಿಷೇಕವಾಗುತ್ತದೆ.

ಅಧಿಕವಾದ ಹಾಸ್ಯಾವೇಶಗಳಿಂದ ಕಥೆ ಅಸಂಭವವಾಗಿ ತೋರುತ್ತದೆ. ಕೃತ್ರಿಮತೆಯಿಂದ ನಾಟಕದ ಸೌಂದರ್ಯ ಕುಂದಿದೆ. ಸಣ್ಣ ವೃತ್ತಗಳನ್ನೂ ಕವಿಯು ಬಳಸಿಕೊಂಡಿರುವುದನ್ನು ಒಂದು ಗುಣವೆನ್ನಬಹುದು. ಭಾಷೆ ಸುಂಭವವಾಗಿದೆ. ಅದರ ಪರಿಚಯಕ್ಕಾಗಿ ಒಂದು ಉದಾಹರಣೆಯನ್ನಿಲ್ಲಿ ಕೊಡಲಾಗಿದೆ. ಮೋಸದಿಂದ ಸೀತೆಯನ್ನು ವಶಪಡಿಸಿಕೊಳ್ಳಲು ಮೊದಲಿಗೆ ರಾವಣನ ಮನಸ್ಸು ಒಪ್ಪದು—

ಯಂಕ್ತ್ವಂ ಕಿಂ ಪರವರ್ಣಿನೀಂ ಪರಯಿತುಂ ಯಾ ನಾನುರಕ್ತಾ ಸ್ವಯಂ
ತಸ್ಯಾಃ ಸಂಪನನಾಯ ಹಂತ ನೃಪತೇಃ ಕಿಂ ಧರ್ಷಣಮರ್ಹಂ ವಪುಃ ।
ಆಬಾಲ್ಯಾದಪಿ ಯಃ ಸಖಾ ಸಮುಚಿತಸ್ತದ್ವಿಪ್ರಲಂಭೋಽಥವಾ
ಕಿಂ ವಾ ಮೇ ವಿನಿಪಾತ್ಯ ಮಾನಯಶಸೀ ಕಾಮೋಽನುರೋದ್ಧುಂ ಕ್ಷಮಃ ।

## ಅದ್ಭುತದರ್ಪಣ

ರಾಮಭದ್ರದೀಕ್ಷಿತನ ಸಮಕಾಲಿಕನಾದ ಮಹಾದೇವಕವಿಯು ಹತ್ತು ಅಂಕಗಳ 'ಅದ್ಭುತ ದರ್ಪಣ 'ವೆಂಬ ನಾಟಕವನ್ನು ಬರೆದಿದ್ದಾನೆ. ಇದರಲ್ಲಿ ಅಂಗದನ ಸಂಧಾನದಿಂದ ಮುಂದಿನ ರಾಮಾಯಣದ ಕಥೆಯಿದೆ. ರಾಮಲಕ್ಷ್ಮಣರು ದೂರದಿಂದಲೇ 'ಅದ್ಭುತದರ್ಪಣ' ದಲ್ಲಿ ತಮ್ಮ ಮಂತ್ರಿ ಶತ್ರುಗಳ ಕಾರ್ಯವನ್ನು ನೋಡುವುದರಿಂದ ನಾಟಕಕ್ಕೆ ಈ ಹೆಸರು ಬಂದಿದೆ ನಾಟಕ ರಾಕ್ಷಸರ ಮಾಯೆಯಿಂದ ತುಂಬಿದೆ. ಸೀತೆಯು ಮುಂದೆ ರಾಮಲಕ್ಷಣರಿಗೂ ರಾಕ್ಷಸರಿಗೂ ನಡೆದ ಯುದ್ಧವನ್ನು ಮಾಯಾನಾಟಕವಾಗಿ ತೋರಿಸುತ್ತಾರೆ. ಸಾರಾಸಾರವಿವೇಕವೂ ಪಾಂಡಿತ್ಯವೂ ಇರುವವರು 'ಕವಿಮಂಡಲೇಶ್ವರ ಮಹಾದೇವ' ನ ವೈದಗ್ಧ್ಯವನ್ನು ಮೆಚ್ಚಿ ಕೊಳ್ಳುತ್ತಾರೆಂದು ಕವಿಯು ಹೇಳಿಕೊಂಡಿದ್ದಾನೆ. ಕಥೆ ಶುಷ್ಕವಾಗಿದೆ. ; ಮಾತಿನ ನಯವಾಗಿಲ್ಲ ; ಪಾತ್ರಗಳಲ್ಲಿ ಸತ್ವವಿಲ್ಲ.

ನಾಂದೀಪದ್ಯ :—

ಶ್ರೇಯಃ ಶ್ರಿಯೋ ರಸಜ್ಞೋ ದದಾತು ಪುರುಷೋತ್ತಮೋ ಭವತಾಂ ।
ಜಾಗರ್ತಿ ಯಃ ಪಯೋಧೌ ತಾದೃಶಶರುಣೇಜಿಘ್ರಕ್ಷಯೇವ ಪುನಃ ॥

ರಾಮನ ಹೃದಯ ವೈಶಾಲ್ಯ :—

ವನಂ ವಾ ರಾಜ್ಯಂ ವಾ ಮಮ ಬಹುಮತಂ ತಾತವಿಹಿತಂ
ನ ತು ತ್ರೈಲೋಕ್ಯಶ್ರೀರಪಿ ಭುಜಜಿತಾ ಮೇ ಬಹುಮತಾ ।
ತದತ್ರಭ್ರಾತೄಣಾಂ ತದಿದಮುಪಭೋಗೋಪಕರಣಂ
ಸಮೃದ್ಧಂ ವೋ ರಾಜ್ಯಂ ನಿಖಿಲಮನುಪಾಲ್ಯಂ ಖಲು ಮಯಾ ॥

ಅದ್ಭುತರಾಘವ, ಅಭಿನವರಾಘವಾನಂದ ಅನಂಗರಾಘವ, ಉದಾತ್ತರಾಘವ, ಉನ್ಮತ್ತ ರಾಘವ, ಅಂಜನಾಪವನಂಜಯ, ಕುಶಲವವಿಜಯ, ಮೈಥಿಲೀಪರಿಣಯ, ಚಲಿತರಾಘವ, ಮುಂತಾದ ಅನೇಕ ರಾಮಾಯಣಕಥಾ ನಾಟಕಗಳಿವೆ.



## 2. ಭಾಗವತ ನಾಟಕಗಳು

ಕೃಷ್ಣನ ಕಥೆಯನ್ನು ತೆಗೆದುಕೊಂಡು ರಚಿತವಾದ ಅನೇಕ ನಾಟಕಗಳಿವೆ. ಇವು ರಾಮಾಯಣದ ನಾಟಕಗಳಷ್ಟು ಉತ್ತಮವೂ, ಜನಪ್ರಿಯವೂ ಆಗಿಲ್ಲ. ಕೇರಳದ ರವಿವರ್ಮ (13ನೆಯಶತ)ನು ರಚಿಸಿರುವ 'ಪ್ರದ್ಯುಮ್ನಾಭ್ಯುದಯ ನಾಟಕ' ದಲ್ಲಿ ಪ್ರದ್ಯುಮ್ನನಿಗೂ ಪ್ರಭಾವತಿಗೂ ನಡೆದ ವಿವಾಹಪ್ರಸಂಗವಿದೆ. ರೂಪಗೋಸ್ವಾಮಿ (15 ನೆಯ ಶತ) ತಲಾ ಹತ್ತು ಅಂಕಗಳನ್ನುಳ್ಳ 'ವಿದಗ್ಧಮಾಧವ' ಮತ್ತು 'ಲಲಿತಮಾಧವ' ಎಂಬ ಎರಡು ನಾಟಕಗಳನ್ನು ಬರೆದಿದ್ದಾನೆ ; ಕೃಷ್ಣಮಹಿಮೆ ಇವುಗಳ ವಸ್ತು. ಶೇಷಕೃಷ್ಣ (16 ನೆಯ ಶತ)ನ 'ಕಂಸವಧ ನಾಟಕ'ದಲ್ಲಿ ಆರು ಅಂಕಗಳಿವೆ.

ಕನ್ಯಾಮಾಧವ, ಕೃಷ್ಣಲೀಲಾ, ಗೋಪೀಚಂದನ, ಜಾಂಬವತೀಕಲ್ಯಾಣ, ಪಾರಿಜಾತಹರಣ, ಮುರಾರಿವಿಜಯ, ರಾಧಾಮಾಧವ, ಸತ್ಯಭಾಮಾಪರಿಣಯ ಮುಂತಾದುವು ಭಾಗವತ ನಾಟಕಗಳು.

## 3. ಭಾರತ ನಾಟಕಗಳು

ಮಹಾಭಾರತವನ್ನಾಧರಿಸಿ ಬರೆದ ಕೆಲವು ನಾಟಕಗಳಿವೆ. ಅರ್ಜುನನಾಟಕ, ಅಶ್ವಮೇಧ ನಾಟಕ, ಘೋಷಯಾತ್ರಾನಾಟಕ, ಚಿತ್ರಭಾರತ, ದ್ರೌಪದೀಪರಿಣಯ, ಸಭಾಪರ್ವನಾಟಕ ಮುಂತಾದುವು ಭಾರತದ ಕಥೆಯನ್ನು ತೆಗೆದುಕೊಂಡು ರಚಿತವಾಗಿವೆ.

## 4. ಪೌರಾಣಿಕ ನಾಟಕಗಳು

ಈ ನಾಟಕಗಳು ಶಿವ, ವಿಷ್ಣು ಮುಂತಾದ ದೇವತೆಗಳು ಮತ್ತು ಅವರ ಪರಿವಾರದವರಿಗೆ ಸಂಬಂಧಿಸಿದ ವಸ್ತುವನ್ನು ಹೊಂದಿವೆ. ಇವುಗಳಲ್ಲಿ ಪ್ರಾಯಿಕವಾಗಿ 'ಪರಿಣಯ' ಮತ್ತು 'ವಿವಾಹ'ಗಳೇ ಹೆಚ್ಚು. ವಾಮನಭಟ್ಟಬಾಣ (15 ನೆಯ ಶತ.)ನು ಬರೆದ 'ಪಾರ್ವತೀ ಪರಿಣಯ'ವೆಂಬ ನಾಟಕದಲ್ಲಿ ಶಿವಪಾರ್ವತಿಯರ ವಿವಾಹವು ಹೃದಯಂಗಮವಾಗಿ ಚಿತ್ರಿತವಾಗಿದೆ.

ಅದಿತಿಕುಂಡಲಾಹರಣ, ಅಮೃತೋದಯನಾಟಕ, ಉಷಾಪರಿಣಯ, ಹರಗೌರೀ ವಿವಾಹ ಲಕ್ಷ್ಮೀಸ್ವಯಂವರ, ಗಣೇಶಪರಿಣಯ, ಅಹಲ್ಯಾಸಂಕ್ರಂದನ ಮುಂತಾದುವು ಈ ಜಾತಿಯ ನಾಟಕಗಳು.

## 5. ಕಥಾ ನಾಟಕಗಳು

ಇತಿಹಾಸ, ಪುರಾಣಗಳ ಕಥೆಗಳಂತೆ ನಳ, ಹರಿಶ್ಚಂದ್ರ, ಉದಯನ ಮುಂತಾದವರ ಕಥೆಗಳೂ ಜನಪ್ರಿಯವಾಗಿವೆ. ಇವುಗಳ ಆಧಾರದಿಂದ ಅನೇಕ ನಾಟಕಗಳು ರಚಿತವಾಗಿವೆ ನರಸಿಂಹ (14 ನೆಯ ಶತ) ಕವಿಯಿಂದ ರಚಿತವಾದ 'ಕಾದಂಬರೀಕಲ್ಯಾಣ' ವೆಂಬ ಎಂಟು ಅಂಗಗಳ ನಾಟಕದಲ್ಲಿ ಕಾದಂಬರಿಯ ಕಥೆಯಿದೆ. ಹರಿಹರ (15 ನೆಯ ಶತ.) ವಿರಚಿತವಾದ

'ಭರ್ತೃಹರಿನಿರ್ವೇದ' ವೆಂಬ ಐದು ಅಂಕಗಳನ್ನುಳ್ಳ ನಾಟಕದಲ್ಲಿ ಭರ್ತೃಹರಿಯು ತನ್ನ ಪತ್ನಿಯ ಪ್ರೇಮವನ್ನು ಪರೀಕ್ಷಿಸಲು ಹೊರಟು ಅವಳು ಸತ್ತದ್ದರಿಂದ ವೈರಾಗ್ಯ ಪಡೆದ ಕಥೆಯಿದೆ. ಶಠಕೋಪಯತಿ (16 ನೆಯ ಶತ.)ಯು ಬರೆದ 'ವಾಸಂತಿಕಾಪರಿಣಯ' ವೆಂಬ ಐದು ಅಂಕಗಳನ್ನುಳ್ಳ ನಾಟಕದಲ್ಲಿ ವನದೇವತೆಯಾದ ವಾಸಂತಿಕೆಯು ನರಸಿಂಹಸ್ವಾಮಿಯನ್ನು ಮದುವೆಯಾದ ಕಥೆ ಇದೆ.

ಉದಯನಚರಿತ, ಕೃತಾರ್ಥಮಾಧವ, ನಲಾನಂದ, ಭೈಮೀ ಪರಿಣಯ, ಭೈರವಾನಂದ, ಲಲಿತಕುವಲಯಾಶ್ವನಾಟಕ, ಶರ್ಮಿಷ್ಠಾವಿಜಯ ನಾಟಕ, ಸತ್ಯಹರಿಶ್ಚಂದ್ರನಾಟಕ ಮುಂತಾದುವು ಈ ಗುಂಪಿನ ನಾಟಕಗಳು.

## 6. ಚರಿತ್ರ ನಾಟಕಗಳು

ಸಂಸ್ಕೃತ ಸಾಹಿತ್ಯದಲ್ಲಿ ಶುದ್ಧವಾದ ಚರಿತ್ರೆಯಿಲ್ಲ. ಚರಿತ್ರೆಯೊಡನೆ ಕವಿಕಲ್ಪನೆ ಬೆರೆತು ಹೋಗಿದೆ. ಇಂತಹ ಮಿಶ್ರವಸ್ತುವನ್ನುಳ್ಳ ಕೆಲವು ನಾಟಕಗಳಿವೆ. ಸಂ.ಕ್ರಿ.ಶ. 14 ನೆಯ ಶತಮಾನದಲ್ಲಿದ್ದ ಅಗಸ್ತ್ಯ (ವಿದ್ಯಾನಾಥ)ನಿಂದ ರಚಿತವಾಗಿ 'ಪ್ರತಾಪರುದ್ರಯಶೋಭೂಷಣ' ವೆಂಬ ಅಲಂಕಾರ ಗ್ರಂಥದಲ್ಲಿ ಸೇರಿಸಲ್ಪಟ್ಟಿರುವ 'ಪ್ರತಾಪರುದ್ರ ಕಲ್ಯಾಣ' ವೆಂಬ ಐದು ಅಂಕಗಳನ್ನುಳ್ಳ ನಾಟಕದಲ್ಲಿ ರಾಜನಾದ ಪ್ರತಾಪರುದ್ರನು ಸಿಂಹಾಸನವನ್ನು ಹತ್ತಿದ ವೃತ್ತಾಂತವಿದೆ. ಶ್ವೇತಾಂಬರ ಜೈನನಾದ ಜಯಸಿಂಹಸೂರಿ (ಕ್ರಿ.ಶ. 13 ನೆಯ ಶತಮಾನ)ಯು ರಚಿಸಿರುವ ಐದು ಅಂಕಗಳನ್ನುಳ್ಳ 'ಹಮ್ಮೀರ ಮರ್ದನ' ಎಂಬ ನಾಟಕದಲ್ಲಿ ಗುಜರಾತಿನ ಮೇಲೆ ಧಾಳಿ ಮಾಡಿದ ಮಹಮ್ಮದೀಯ ದೊರೆಯಾದ ಹಮ್ಮೀರನನ್ನು ವೀರಧವಳನು ಸೋಲಿಸಿದ ವೃತ್ತಾಂತವಿದೆ.

ಅದ್ಭುತಾರ್ಣವ, ಚಂದ್ರಾಭಿಷೇಕ, ಜಯಸಿಂಹಶ್ವಮೇಧೀಯ ಲಲಿತವಿಗ್ರಹರಾಜನಾಟಕ, ಭೋಜಸಚ್ಚರಿತ—ಮುಂತಾದುವು ಚರಿತ್ರ ನಾಟಕಗಳು.

## 7. ದಾರ್ಶನಿಕ ನಾಟಕಗಳು

ಕೃಷ್ಣಮಿಶ್ರನ 'ಪ್ರಬೋಧಚಂದ್ರೋದಯ' ವನ್ನನುಕರಿಸಿ ಹಲವು ದಾರ್ಶನಿಕ ನಾಟಕಗಳು ಹುಟ್ಟಿವೆ. ಈ ಮಾದರಿಯನ್ನನುಸರಿಸದ ದಾರ್ಶನಿಕ ನಾಟಕಗಳೂ ಇವೆ. ಮೋಹಪರಾಜಯವು ಐದು ಅಂಕಗಳನ್ನುಳ್ಳ ಒಂದು ಜೈನ ದಾರ್ಶನಿಕ ನಾಟಕ. ಇದು ಕರ್ತೃ ಯಶಃಪಾಲ (ಕ್ರಿ.ಶ. 13ನೆಯ ಶತಮಾನ) ಕುಮಾರಪಾಲ (1229–32)ನಿಂದ ನಿರ್ಮಿತವಾದ ಕುಮಾರವಿಹಾರದಲ್ಲಿ ಮಹಾವೀರಜಯಂತಿಯ ಸಂದರ್ಭದಲ್ಲಿ ಈ ನಾಟಕ ಪ್ರದರ್ಶನವಾಯಿತೆಂದು ತಿಳಿದುಬರುತ್ತದೆ. ತೀರ್ಥಂಕರರಾದ ಋಷಭ, ಪಾರ್ಶ್ವ, ಮಹಾವೀರರ ಪ್ರಾರ್ಥನೆಯಿಂದ ನಾಟಕ ಪ್ರಾರಂಭವಾಗುತ್ತದೆ. ಇದರಲ್ಲಿ ಗುಜರಾತಿನ ಚಾಳುಕ್ಯರಾಜನಾದ ಕುಮಾರಪಾಲನು ಜೈನಮತಕ್ಕೆ ಸೇರಿದ ವಿಚಾರವಿದೆ. ರಾಜ ಹೇಮಚಂದ್ರ ಮತ್ತು ವಿನೂಷಕರನ್ನು ಬಿಟ್ಟು ಉಳಿದ ವಿವೇಕಚಂದ್ರ, ಪ್ರತಾಪ, ಪುಣ್ಯಕೇತು, ಕೃಪಾಸುಂದರೀ, ಕೀರ್ತಿಮಂಜರೀ ಶಾಂತಿ, ಮುಂತಾದ ಪಾತ್ರಗಳು ಗುಣಗಳೇ ಆಗಿವೆ. ಜೈನ



ಧರ್ಮ ಪ್ರತಿಪಾದನೆಯು ನಾಟಕದ ಗುರಿ. ಮನೋನಗರಿಯನ್ನಾಕ್ರಮಿಸಿದ ಮೋಹನನ್ನು ವಿವೇಕಚಂದ್ರನು ಪರಾಜಯಗೊಳಿಸುತ್ತಾನೆ. ಈ ನಾಟಕದ ಶೈಲಿ ಸರಳ: ಭಾಷೆ ಸುಲಭ : ಪ್ರಾಕೃತದ ಮೇಲೆ ಹೇಮಚಂದ್ರನ ವ್ಯಾಕರಣದ ಪ್ರಭಾವವಿದೆ.

ಸುಪ್ರಸಿದ್ಧ ಪಂಡಿತರಾದ ವೇದಾಂತದೇಶಿಕ (ವೆಂಕಟನಾಥಾಚಾರ್ಯ—ಕ್ರಿ.ಶ. 14ನೆಯ ಶತಮಾನ)ರು ಹತ್ತು ಅಂಕಗಳನ್ನುಳ್ಳ 'ಸಂಕಲ್ಪಸೂರ್ಯೋದಯ' ವೆಂಬ ಒಂದು ನಾಟಕವನ್ನು ಬರೆದಿದ್ದಾರೆ. ಇದರಲ್ಲಿ ಭಗವಂತನ ಸಂಕಲ್ಪವೆಂಬ ಸೂರ್ಯನ ಉದಯದಿಂದ ಜನನ ಮರಣ ರೂಪವಾದ ಅಂಧಕಾರ ತೊಲಗಿ ಜೀವಾತ್ಮನು ಮುಕ್ತನಾಗುವ ವೃತ್ತಾಂತವಿದೆ. ವಿಶಿಷ್ಟಾದ್ವೈತ ವೇದಾಂತದ ನಿರೂಪಣೆಯು ನಾಟಕದ ಗುರಿ. ಪ್ರಬೋಧಚಂದ್ರೋದಯದಂತೆಯೇ ಇರುವ ಈ ನಾಟಕದಲ್ಲಿಯೂ ಶಾಂತರಸವೇ ಪ್ರಧಾನವಾದುದು. ದೃಶ್ಯ ಸಂಪತ್ತು ಕಡಿಮೆಯಾದರೂ ಕಾವ್ಯಗುಣಗಳಿಂದ ಕೂಡಿ ನಾಟಕ ರಮಣೀಯವಾಗಿದೆ.

ಗೋಕುಲನಾಥ (ಕ್ರಿ.ಶ. 16ನೆಯ ಶತಮಾನ)ನ 'ಅಮೃತೋದಯ' ನಾಟಕದಲ್ಲಿ ಸೃಷ್ಟಿಯಿಂದ ಪ್ರಳಯದವರೆಗಿನ ಜೀವಾತ್ಮಚರಿತ್ರೆಯಿದೆ. ಕವಿಕರ್ಣಪೂರ (ಕ್ರಿ.ಶ. 16ನೆಯ ಶತಮಾನ)ನ 'ಚೈತನ್ಯಚಂದ್ರೋದಯ'ದಲ್ಲಿ ಶ್ರೀಕೃಷ್ಣಚೈತನ್ಯರ ಭಕ್ತಿಪಂಥದ ನಿರೂಪಣೆಯಿದೆ ಆನಂದರಾಯ (ಕ್ರಿ.ಶ. 17–18ನೆಯ ಶತಮಾನ)ನ 'ವಿದ್ಯಾಪರಿಣಯ'ದಲ್ಲಿ ಜೀವಾತ್ಮನೊಡನೆ ಅಧ್ಯಾತ್ಮವಿದ್ಯೆಯ ಪರಿಣಯ ಪ್ರತಿಪಾದಿತವಾಗಿದೆ. ವೇದಕವಿಯು ಈ ನಾಟಕ ಆನಂದರಾಯನ ಹೆಸರಿನಲ್ಲಿ ಪ್ರಕಟವಾಗಿದೆಯೆಂಬ ಅಭಿಪ್ರಾಯವೂ ಇದೆ.

ಅನುಮತಿಪರಿಣಯ, ಆನಂದಚಂದ್ರೋದಯ, ಕುಮುದಚಂದ್ರ, ಕ್ಷೇಮಚಂದ್ರ, ಪ್ರಬೋಧ, ಚಿತ್ತವೃತ್ತಿಕಲ್ಯಾಣ, ಚಿತ್ಸೂರ್ಯಾಲೋಕನಾಟಕ, ಜಗನ್ಮೋಹನ, ಜ್ಞಾನಸೂರ್ಯೋದಯ, ಧರ್ಮವಿಜಯ, ಜೀವನ್ಮುಕ್ತಿಕಲ್ಯಾಣ— ಮುಂತಾದ ನಾಟಕಗಳೂ ಇದೇ ಜಾತಿಗೆ ಸೇರಿವೆ.

## 8. ಛಾಯಾ ನಾಟಕಗಳು

ಪರದೆಯ ಮೇಲೆ ಬೊಂಬೆಗಳ ನೆರಳನ್ನು ಬೀಳಿಸಿ ಕಥೆ ತೋರಿಸುವಾಗಲೋ, ಸೂತ್ರದ ಬೊಂಬೆಯಾಟ ಅಥವಾ ಕಥಕಳಿಯಂತಹ ಮೂಕನಾಟ್ಯವನ್ನು ಪ್ರದರ್ಶಿಸುವಾಗಲೋ ಭಾಗವತರು ಆಟದ ಜೊತೆಗೆ ಕಥೆ ಹೇಳುವುದಕ್ಕಾಗಿ ಈ ನಾಟಕಗಳನ್ನು ಬಳಸಿಕೊಳ್ಳುತ್ತಿದ್ದರೆಂದು ತೋರುತ್ತದೆ. ಇವು ನಿಜವಾದ ನಾಟಕಗಳಲ್ಲ, ಇವುಗಳ ಲಕ್ಷಣವೂ ಅಲಂಕಾರ ಗ್ರಂಥಗಳಲ್ಲಿ ಉಕ್ತವಾಗಿಲ್ಲ. ಈ ಜಾತಿಯ ನಾಟಕ ಯಾವ ಕಾಲದಲ್ಲಿ ಹೇಗೆ ಹುಟ್ಟಿಬಂದಿತೆಂಬುದು ತಿಳಿಯದು. ಸುಭಟನ 'ದೂತಾಂಗದ'ವು ಛಾಯಾ ನಾಟಕಗಳಲ್ಲಿ ಪ್ರಸಿದ್ಧವಾದುದು. ಈ ನಾಟಕವನ್ನು ಕುಮಾರಪಾಲರಾಜನ ಸ್ಮೃತಿಗಾಗಿ ಕ್ರಿ.ಶ 1248 ರಲ್ಲಿ ತ್ರಿಭುವನಪಾಲನ ಆಸ್ಥಾನದಲ್ಲಿ ಪ್ರದರ್ಶಿಸಲಾಯಿತೆಂದು ತಿಳಿದು ಬರುತ್ತವೆ.

ಆನಂದತಿಲಕ, ಚಿತ್ರಯಜ್ಞ, ಧರ್ಮಾಭ್ಯುದಯ, ಪಾಂಡವಾಭ್ಯುದಯ, ರಾಮಾಭ್ಯುದಯ, ಸಾವಿತ್ರೀಚರಿತ, ಸುಭದ್ರಾಪರಿಣಯ, ಹರಿದೂತ—ಇವು ಛಾಯಾನಾಟಕಗಳು.

## 9. ಸಂಕೀರ್ಣ ವರ್ಗದ ನಾಟಕಗಳು

ಕಥೆಯಿಲ್ಲದೆ, ರಸವಿಲ್ಲದೆ ಯಾವ ಕಾವ್ಯ ಚಮತ್ಕಾರವೂ ಇಲ್ಲದೆ ವೈದ್ಯ, ವ್ಯಾಕರಣಾದಿ ಶಾಸ್ತ್ರಗಳ ವಿಷಯವನ್ನು ಪ್ರತಿಪಾದಿಸುವ ನಾಟಕಗಳೂ ಇವೆ. ಆನಂದರಾಯನ 'ಜೀವಾನಂದನ'ದಲ್ಲಿ ಜೀವಾತ್ಮನು ಮುಕ್ತನಾಗುವ ವಿಚಾರವಿದೆ. ಇದರೊಡನೆ ಆಯುರ್ವೇದ ಶಾಸ್ತ್ರದ ವಿಚಾರಗಳು ಬೆರೆತಿವೆ. ಜೀವನಿಗೂ ಕ್ಷಯರೋಗಕ್ಕೂ ಹೋರಾಟವಾಗುತ್ತದೆ. ಜೀವನಕಡೆ ಜ್ಞಾನ, ವಿಜ್ಞಾನಾದಿಗಳೂ. ಕ್ಷಯದಕಡೆ ಜ್ವರ, ಉಬ್ಬಸ, ಅತಿಸಾರ ಮುಂತಾದುವೂ ಸೇರುತ್ತವೆ. ಕೊನೆಗೆ ಜೀವನು ನಿತ್ಯಮುಕ್ತನಾಗುತ್ತಾನೆ.

ಅಂತರ್ವ್ಯಾಕರಣ ನಾಟ್ಯಪರಿಶಿಷ್ಟ, ನಗ್ನಭೂಪತಿಗ್ರಹ, ವೃತ್ತಿವಲ್ಲಭ ಮುಂತಾದುವು ಈ ಗುಂಪಿಗೆ ಸೇರಿದ ನಾಟಕಗಳು.

## ಮಹಾಕಾವ್ಯಗಳು

### ಅವತರಣಿಕೆ

ಮಹಾಭಾರತದ ತರುವಾಯ ಅಶ್ವಘೋಷ ಕಾಳಿದಾಸರ ಪರ್ಯಂತವಾಗಿ ಮಧ್ಯಕಾಲದಲ್ಲಿ ರಚಿತವಾದ ಯಾವ ಮಹಾಕಾವ್ಯವೂ ನಮಗೆ ಉಪಲಬ್ಧವಾಗಿಲ್ಲ. ಸಾವಿರಾರು ವರ್ಷಗಳ ಈ ಕಾಲಾವಧಿಯಲ್ಲಿ ಅನೇಕ ಕಾವ್ಯಗಳು ರಚಿತವಾಗಿದ್ದು ಈಗ ನಷ್ಟವಾಗಿರಬೇಕು. ಬಾಣ ಕಾಳಿದಾಸಾದಿಗಳು ಕೆಲವು ಪ್ರಾಚೀನ ಮಹಾಕವಿಗಳನ್ನು ಸ್ಮರಿಸುವುದರಿಂದಲೂ ಸೂಕ್ತಿಮುಕ್ತಾವಳಿ ಮುಂತಾದ ಗ್ರಂಥಗಳಲ್ಲಿ ಪ್ರಾಚೀನಕವಿಕಾವ್ಯಗಳ ನಾಮೋಲ್ಲೇಖವಿರುವುದರಿಂದಲೂ ಈ ಊಹೆ ದೃಢಪಡುತ್ತದೆ. ಅವರ ಗ್ರಂಥಗಳು ಕಾವ್ಯದ ಯಾವ ಪ್ರಕಾರಕ್ಕೆ ಸೇರಿದವುಗಳೆಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲವಾದರೂ ಆ ಕವಿಗಳು ಶ್ರೇಷ್ಠವರ್ಗದವರೆಂದೂ ಆ ಕಾವ್ಯಗಳು ಸುಪ್ರಸಿದ್ಧವಾಗಿದ್ದವೆಂದೂ ಹೇಳಲಡ್ಡಿಯಿಲ್ಲ.

### 1. ಪಾಣಿನಿ (ಕ್ರಿ. ಪೂ. ಸು. 450)

ನಮಿಸಾಧುವು ರುದ್ರಟನ ಕಾವ್ಯಾಲಂಕಾರದ ವ್ಯಾಖ್ಯಾನದಲ್ಲಿ (2-8) 'ಪಾಣಿನಿಯ ಮಹಾಕಾವ್ಯ ಪಾತಾಲವಿಜಯ' ದಿಂದ ಒಂದು ಸಾಲನ್ನು ಉದ್ಧರಿಸಿದ್ದಾನೆ. ಈ ಪಾತಾಲವಿಜಯಕ್ಕೆ 'ಜಾಂಬವತೀವಿಜಯ' ಎಂಬ ಇನ್ನೊಂದು ಹೆಸರಿದ್ದಂತೆ ಕಾಣುತ್ತದೆ. ರಾಜಶೇಖರನು ಕಾವ್ಯಮೀಮಾಂಸೆಯಲ್ಲಿ.

ಸ್ವಸ್ತಿ ಪಾಣಿನಯೇ ತಸ್ಮೈ ಯಸ್ಯ ರುದ್ರಪ್ರಸಾದತಃ ।
ಆದೌ ವ್ಯಾಕರಣಂ ಪ್ರೋಕ್ತಂ ತತೋ ಜಾಂಬವತೀಜಯಂ ॥

ಎಂದು ನುಡಿದು ವೈಯಾಕರಣಪಾಣಿನಿಯು ಕವಿಯಾಗಿದ್ದನೆಂದು ತಿಳಿಸಿದ್ದಾನೆ. ಉಪಜಾತಿ ವೃತ್ತವನ್ನು ರಚಿಸುವುದರಲ್ಲಿ ಪಾಣಿನಿಯು ದಕ್ಷನೆಂದು ಕ್ಷೇಮೇಂದ್ರನು ಸುವೃತ್ತ ತಿಲಕದಲ್ಲಿ ಹೇಳುತ್ತಾನೆ

ಸ್ಪೃಹಣೀಯತ್ವಚರಿತಂ ಪಾಣಿನೇರುಪಜಾತಿಭಿಃ ।
ಚಮತ್ಕಾರೈಕಸಾರಾಭಿರುದ್ಯಾನಸ್ಯೇವ ಜಾತಿಭಿಃ ॥ 3-30



ಪಾಣಿನಿಯ ಹೆಸರಿನಲ್ಲಿ ಉದ್ಧೃತವಾದ ಎಲ್ಲ ಶ್ಲೋಕಗಳೂ ರಮಣೀಯವಾಗಿವೆ. ಇದು ಚಂದ್ರೋದಯದ ವರ್ಣನೆ.

ಉಪೋಢರಾಗೇಣ ವಿಲೋಲತಾರಕಂ
ತಥಾ ಗೃಹೀತಂ ಶಶಿನಾ ನಿಶಾಮುಖಂ ।
ಯಥಾ ಸಮಸ್ತಂ ತಿಮಿರಾಂಶುಕಂ ತಯಾ
ಪುರೋಽಪಿ ರಾಗಾದ್ಗಲಿತಂ ನ ಲಕ್ಷಿತಂ ॥

### 2. ವರರುಚಿ (ಕ್ರಿ.ಪೂ. ಸುಮಾರು 350)

ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ 'ನವರತ್ನ'ಗಳಲ್ಲಿ ವರರುಚಿಯ ಹೆಸರಿದೆ. ಪತಂಜಲಿಯು ಮಹಾಭಾಷ್ಯದಲ್ಲಿ (4-3-191) 'ವಾರರುಚಂ ಕಾವ್ಯಂ' ಎಂದಿದ್ದಾನೆ. ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿ ರಾಜಶೇಖರನ ಹೆಸರಿನಿಂದ ಈ ಪದ್ಯ ಉದ್ಧೃತವಾಗಿದೆ.

ಯಥಾರ್ಥತಾ ಕಥಂ ನಾಮ್ನಿ ಮಾ ಭೂತ್ ವರರುಚೇರಿಹ ।
ವ್ಯಧತ್ತ ಕಂಠಾಭರಣಂ ಯಃ ಸದಾರೋಹಣಪ್ರಿಯಃ ॥

ಇದರಿಂದ ವರರುಚಿಯು ಕಂಠಾಭರಣವೆಂಬ ಕಾವ್ಯವನ್ನು ಬರೆದಂತೆ ತಿಳಿದುಬರುತ್ತದೆ. ವರರುಚಿಮುನಿಯ ಹೆಸರಿಲ್ಲಿ 'ಉಭಯಾಭಿಸಾರಿಕಾ' ಎಂಬ ಬಾಣ ದೊರಕಿದೆ. ಚಾರುಮತಿ ಎಂಬ ಆಖ್ಯಾಯಿಕೆಯನ್ನು ಆತನು ಬರೆದುದಾಗಿಯೂ ತಿಳಿದುಬರುತ್ತದೆ. ಅಷ್ಟಾಧ್ಯಾಯಿಗೆ ವಾರ್ತಿಕಗಳನ್ನು ಬರೆದ ವರರುಚಿಯೇ ಈತನೆಂಬುದು ಸ್ಪಷ್ಟವಾಗಿಲ್ಲ. ಭೋಜದೇವನು ಶೃಂಗಾರಪ್ರಕಾಶದಲ್ಲಿ ಚಾರುಮತಿಯೆಂಬ ಆಖ್ಯಾಯಿಕೆಯಿಂದ ಈ ಶ್ಲೋಕವನ್ನು ಉದಾಹರಿಸಿದ್ದಾನೆ.

ಕನಕಕುಂಡಲಮಂಡಿತಗಂಡಯಾ
ಜಘನದೇಶನಿವೇಶಿತವೀಣಯಾ ।
ಅಮರರಾಜಪುರೀವರಕನ್ಯಯಾ
ತವ ಯಶೋ ವಿಮಲಂ ಪರಿಗೀಯತೇ ॥

### 3. ಪತಂಜಲಿ (ಕ್ರಿ.ಪೂ.ಸು. 150)

ಪತಂಜಲಿಯ ವ್ಯಾಕರಣಮಹಾಭಾಷ್ಯದಲ್ಲಿ ಕೆಲವು ಕಾವ್ಯಪಂಕ್ತಿಗಳು ದೊರೆಯುತ್ತವೆ. ಅವು ಉದಾಹರಣಾರ್ಥವಾಗಿ ಪ್ರಾಚೀನಕಾವ್ಯಗಳಿಂದ ಉದ್ಧೃತವಾದವು.

1. ವರತನು ಸಂಪ್ರವದಂತಿ ಕುಕ್ಕುಟಾಃ (1-3-48)
2. ಬಹೂನಾಮಪ್ಯಚಿತ್ತಾನಾಮೇಕೋ ಭವತಿ ಚಿತ್ತವಾನ್ ।
ಪಶ್ಯ ವಾನರಸೈನ್ಯೇಽಸ್ಮಿನ್ ಯದರ್ಕಮುಪತಿಷ್ಠತೇ ॥
ಮೈವಂ ಮಂಸ್ಥಾಃ ಸಚಿತ್ತೋಽಯಮೇಷೋಽಪಿ ಹಿ ಯಥಾ ವಯಂ ।
ಏತದಪ್ಯಸ್ಯ ಕಾಪೇಯಂ ಯದರ್ಕಮುಪತಿಷ್ಠತಿ ॥ (1-3-25).
3. ನಂದಂತು ಕಠಕಾಲಾಪಾಃ ವರ್ಧಂತಾಂ ಕಠಕೌಥುಮಾಃ ।
ಉದಗಾತ್ ಕಠಕಾಲಾಪು ಪ್ರತ್ಯಷ್ಠಾತ್ ಕಠಕೌಥುಮಂ ॥ 2-4-3

ಪತಂಜಲಿಯಂ

ಭಟ್ಟಿಕಾವ್ಯದಂತಹ ಯಾವುದೋ ಕಾವ್ಯಶಾಸ್ತ್ರದಿಂದ ಮೇಲ್ಕಂಡವುಗಳನ್ನು ಉದ್ಧರಿಸಿದಂತೆ ಕಾಣುತ್ತದೆ.

*ಟಿಪ್ಪಣಿ.

ಇವರ ಗ್ರಂಥಗಳು

ಅಲ್ಲಲ್ಲಿ ಉದಾಹೃತರಾದ ಕೆಲವು ಪ್ರಾಚೀನಕವಿಗಳ ಹೆಸರುಗಳಿವು. ಉಪಲಬ್ಧವಾಗಿಲ್ಲ—

ಧರ್ಮವರ್ಧನ,

ಅಮೃತವರ್ಧನ, ಕರ್ಣೋತ್ಪಲ, ರವಿಗುಪ್ತ, ಹರಿಗಣ, ಗೋಭಟ್ಟ, ಭಟ್ಟಬೀಜಕ, ವಿಕಟನಿತಂಬ, ರಾಜಾನಂವಿಜಯಪಾಲ, ಭಟ್ಟಕಪರ್ದಿ, ಧರ್ಮದಾಸ, ಸಿಂಹದತ್ತ, ಉತ್ಪಲರಾಜ, ಶಕವೃದ್ಧಿ, ಸಿಂಗಾಪಿದಿ, ಸೋಮ, ಪ್ರಹ್ಲಾದನ, ಉತ್ಕಟ, ಅದ್ಭುತಪುಣ್ಯ, ದೇವೇಶ್ವರ, ಜಯಮಾಧವ, ಭದಂತ, ಆದಿತ್ಯದತ್ತ, ಶೀಲಾಭಟ್ಟರಿಕಾ, ಭಟ್ಟಕಲ್ಲಟ, ಭರ್ಮ, ಶಂಖಧರ, ತ್ರಿಲೋಚನ, ಭಟ್ಟೇಂದುರಾಜ, ಪ್ರಕಾಶವರ್ಷ, ಪುಲಿನ, ಅರ್ಗಟ, ಚಂದ್ರಕ, ಕಂಸಮದೇವ, ಕೃಷ್ಣಪಿಲ್ಲ, ಛಿತ್ತಮ, ಶಂಕರಗಣ, ಜೀವಕ, ನಮ್ಮಯ, ವಿಜ್ಜಕಾ, ಶರ್ವವರ್ಮ, ಭಟ್ಟಸೋಮೇಶ್ವರ, ಹರಿಗಣ, ಜಯವರ್ಧನ, ಧೋಯಿ, ದೇವಬೋಧಿ ಭಟ್ಟಪ್ರದ್ಯುಮ್ನ, ಪರಿಮಲ, ಉದಯ, ಕಿಶೋರಕ, ಪುಷ್ಪಾಕರ, ಭಟ್ಟತೌತ, ದೀಪಕ, ಸಾಹಿಲ, ಗಂದಿನಕ, ಭಟ್ಟವಲ್ಲಟ, ಯಶೋವರ್ಮ, ಶ್ರೀಚಕ್ರ, ಮಂಕ್ಷಣ, ಕವಿಪುತ್ರ, ಸಾಮಿಲ ಇತ್ಯಾದಿ

ದಂಡಿಯು ಸರ್ಗಬಂಧ

ಮಹಾಕಾವ್ಯವು ಶ್ರವ್ಯಕಾವ್ಯಗಳ ಒಂದು ಪ್ರಭೇದ. ಇದನ್ನು ವೆಂದು ಕರೆದು ಇದರ ಲಕ್ಷಣವನ್ನು ಹೀಗೆ ಹೇಳಿದಾನೆ; "ಮಹಾಕಾವ್ಯದ ಆರಂಭದಲ್ಲಿ ಆಶೀಃ, ನಮಸ್ಕಾರ ಅಥವಾ ವಸ್ತುನಿರ್ದೇಶ (ಕಥಾಭಾಗದ ಒಂದಂಶದ ಉಪನಿಬಂಧ) ವಿರಬೇಕು. ವರ್ಣನೀಯ ಕಥೆ ಇತಿಹಾಸವನ್ನೋ ಸುಪ್ರಸಿದ್ಧ ವೃತ್ತಾಂತವನ್ನೋ ಆಶ್ರಯಿಸಿರ ಬೇಕು. ಚತುರ್ವರ್ಗ ಫಲವು ಉದ್ದೇಶವಾಗಿದ್ದು ನಾಯಕನು ಚತುರನೂ ಉದಾತ್ತನೂ ಆಗಿರಬೇಕು, ಅದರಲ್ಲಿ ನಗರ, ಸಮುದ್ರ, ಪರ್ವತ, ಋತು, ಚಂದ್ರೋದಯ, ಸೂರ್ಯೋ ದಯ, ಉದ್ಯಾನವಿಹಾರ, ಜಲಕ್ರೀಡೆ, ಮಧುಪಾನ, ಸುರತ, ವಿಪ್ರಲಂಭ, ವಿವಾಹ, ಕುಮಾರೋದಯ, ಮಂತ್ರಾಲೋಚನೆ, ದೂತಪ್ರೇಷಣೆ, ದಂಡಯಾತ್ರೆ, ಯುದ್ಧ, ಪ್ರಧಾನ ನಾಯಕನ ವಿಜಯ ಈ (ಹದಿನೆಂಟು) ವರ್ಣನೆಗಳಿರಬೇಕು. ಅದು ಅಲಂಕಾರಯುಕ್ತವಾಗಿ, ಅತಿಸಂಕ್ಷಿಪ್ತವಾಗದೆ ರಸಭಾವ ನಿರಂತರವಾಗಿಬೇಕು ಹೆಚ್ಚು ದೀರ್ಘವಲ್ಲದ ಸರ್ಗಗಳೂ, ಶ್ರವ್ಯವಾದ ವೃತ್ತಗಳೂ, ಮುಖ ಪ್ರತಿಮುಖಾದಿ ಸಂಧಿಗಳೂ ಇರಬೇಕಲ್ಲದೆ ಪ್ರತಿಯೊಂದು ಸರ್ಗದ ಕಡೆಯಲ್ಲಿ ಭಿನ್ನವೃತ್ತವಿರಬೇಕು. ಇಂತಹ ಲೋಕರಂಜಕವಾದ ಕಾವ್ಯವು ಕಲ್ಪಾಂತರ ಸ್ಥಾಯಿಯಾಗಿರುತ್ತದೆ." (ಕಾವ್ಯ 1-14-19).

'ಮಂತ್ರದೂತ ಪ್ರಯಾಣಾಜಿ

ಭಾಮಹನು ದಂಡಿಯು ಅಷ್ಟಾದಶವರ್ಣನೆಗಳನ್ನು ಹೇಳದೆ ಉಳಿದ ನಾಯಕಾಭ್ಯುದಯೈರ್ನಶ್ಚಯತ್' ಎಂದು ಐದು ವರ್ಣನೆಗಳನ್ನು ಪ್ರಸ್ತಾವಿಸಿದ್ದಾನೆ. ವರ್ಣನೆಗಳಿಗೆ ಇದು ಉಪಲಕ್ಷಣವೆಂದು ತಿಳಿಯುವುದಾದರೆ ದಂಡಿಭಾಮಹರ ತಾತ್ಪರ್ಯ ಒಂದೇ ಆಗುತ್ತದೆ. ಸಾಹಿತ್ಯದರ್ಪಣಕಾರನಾದ ವಿಶ್ವನಾಥನೇ ಮೊದಲಾದವರು ಮಹಾಕಾವ್ಯದ ಈ



ಲಕ್ಷಣವನ್ನೇ ತಮ್ಮ ಇಷ್ಟದಂತೆ ವಿವರಿಸಿದ್ದಾರೆನ್ನಬಹುದು. ವಿಶ್ವನಾಥನು ಬೇಟೆಯನ್ನು ವರ್ಣನೀಯ ವಸ್ತುಗಳಲ್ಲಿ ಸೇರಿಸಿದ್ದಾನೆ. ಈಶಾನಸಂಹಿತೆಯೆಂಬ ಗ್ರಂಥವು ಮಹಾಕಾವ್ಯದಲ್ಲಿ ಸರ್ಗಗಳು 8ಕ್ಕಿಂತ ಕಡಿಮೆ ಇರಬಾರದು, 30ಕ್ಕಿಂತ ಹೆಚ್ಚಿರಬಾರದು; ಎಂದು ನಿಯಮವನ್ನು ಹಾಕಿದೆ. (ಅಷ್ಟಸರ್ಗಾನ್ನತು ನ್ಯೂನಂ ತ್ರಿಂಶತ್ಸರ್ಗಾಚ್ಚ ನಾಧಿಕಂ)

ಈ ವಿಭಿನ್ನ ಲಕ್ಷಣಗಳು ಮಹಾಕಾವ್ಯದ ಪರಿಚಾಯಕಗಳೇ ಹೊರತು ನಿಯಾಮಕಗಳಲ್ಲ. ಕಾಳಿದಾಸನು ತನ್ನ ಎರಡು ಮಹಾಕಾವ್ಯಗಳಲ್ಲಿಯೂ ಚಂದ್ರೋದಯ, ಸೂರ್ಯೋದಯ, ಮಧುಪಾನಗಳನ್ನು ವರ್ಣಿಸಿಲ್ಲ. ಕಿರಾತಾರ್ಜುನೀಯ, ಶಿಶುಪಾಲವಧಗಳಲ್ಲಿ ಕುಮಾರೋ ದಯವಿಲ್ಲ. ನೈಷಧದಲ್ಲಿ ದಂಡಯಾತ್ರೆ ಯುದ್ಧಗಳಿಲ್ಲ, ಹರವಿಜಯಗಳಲ್ಲಿ 30 ಸರ್ಗಗಳ ಪರಮಾವಧಿಯನ್ನು ಮೀರಿದೆ. ಅದರಲ್ಲಿ 50 ಸರ್ಗಗಳಿವೆ.

ಆದ್ದರಿಂದ ಒಂದಾನೊಂದು ಅನುಸ್ಯೂತವಾದ ಕಥಾ ಪ್ರಸಂಗವನ್ನು ಯಥೋಚಿತ ವರ್ಣನೆಗಳಿಂದ ವಿಸ್ತರಿಸಿರುವ ಕಾವ್ಯವನ್ನು ಮಹಾಕಾವ್ಯವೆನ್ನಬಹುದು. ದಂಡಿ ಭಾಮಹರು 'ಸರ್ಗ ಬಂಧೋ ಮಹಾಕಾವ್ಯಂ' ಎಂದು ಹೇಳಿರುವುದನ್ನೂ ಲಾಕ್ಷಣಿಕರು ಹೇಳುವ ಇತರ ಲಕ್ಷಣಗಳನ್ನೂ ಪರಿಶೀಲಿಸಿದರೆ ನಾಟಕವಾಗಲಿ ಗದ್ಯಕಾವ್ಯವಾಗಲಿ ಪಾರಿಭಾಷಿಕವಾಗಿ 'ಮಹಾಕಾವ್ಯ' ವೆನಿಸಲಾರದು. ಸೋಮದೇವಸೂರಿಯು ಯಶಸ್ತಿಲಕಚಂಪುವಿನ ಸಮಾಪ್ತಿ ವಾಕ್ಯಗಳಲ್ಲಿ ಅದನ್ನು 'ಮಹಾಕಾವ್ಯ' ಎಂದು ಕರೆದಿದ್ದಾನೆ.

ಪ್ರಸಿದ್ಧವಾದ ಕೆಲವು ಮಹಾಕಾವ್ಯಗಳನ್ನು ಇಲ್ಲಿ ಪರಾಮರ್ಶಿಸಲಾಗಿದೆ, 'ಪಂಚ ಮಹಾಕಾವ್ಯಗಳು' ಎಂದು ವಿಖ್ಯಾತವಾದ ರಘುವಂಶ, ಕುಮಾರಸಂಭವ, ಕಿರಾತಾರ್ಜುನೀಯ, ಶಿಶುಪಾಲವಧ ಮತ್ತು ನೈಷಧೀಯ ಚರಿತಗಳನ್ನು ಸ್ವಲ್ಪ ವಿಸ್ತಾರವಾಗಿ ಪರಿಚಯಮಾಡಿ ಕೊಡಲಾಗಿದೆ.

## 1. ಬುದ್ಧಚರಿತ (ಕ್ರಿ. ಶ. ೩ನೆಯ ಶತಮಾನ)

ಇದನ್ನು ರಚಿಸಿದ ಅಶ್ವಘೋಷನು ಬೌದ್ಧಕವಿ. ಇವನು ಸುವರ್ಣಾಕ್ಷಿಯ ಪುತ್ರ, ಭಿಕ್ಷು ಮತ್ತು ಆಚಾರ್ಯ[1]. ಬುದ್ಧಚರಿತದಲ್ಲಿ ಅಶ್ವಘೋಷನು ರಚಿಸಿದ ಮೊದಲನೆಯ 14 ಸರ್ಗಗಳು ಉಪಲಬ್ಧವಾಗಿವೆ. ಮುಂದಿನ ಹಸ್ತಪ್ರತಿಯು ದೊರಕದಿದ್ದುದರಿಂದ 4 ಸರ್ಗಗಳನ್ನು (15-18) ತಾನೇ ಬರೆದು ಸೇರಿಸಿರುವುದಾಗಿ 19ನೆಯ ಶತಮಾನದ ಅಮೃತಾನಂದನು ಹೇಳಿಕೊಂಡಿದ್ದಾನೆ. ಕ್ರಿ. ಶ. 414-421 ರಲ್ಲಿ ಚೀನೀ ಮತ್ತು ಟಿಬೆಟನ್ ಭಾಷೆಗಳಿಗೆ ಬುದ್ಧಚರಿತ ಪರಿವರ್ತನೆಗೊಂಡಿದೆ. ಅಪರ ಪ್ರಕಾರ ಅಶ್ವಘೋಷನು ರಚಿಸಿದ ಬುದ್ಧ ಚರಿತದಲ್ಲಿ 28 ಸರ್ಗಗಳಿದ್ದವೆಂದು ತಿಳಿದು ಬರುತ್ತದೆ.

1. ವಿವರಗಳಿಗೆ ಈತನ ಶಾರಿಪುತ್ರ ನಾಟಕದ ಅಡಿಯಲ್ಲಿ ನೋಡಿ.

**ಕಥಾಸಾರಾಂಶ**

ಶಾಕ್ಯಕುಲದಲ್ಲಿ ಹುಟ್ಟಿದ ಶುದ್ಧೋದನರಾಜನ ರಾಜಧಾನಿ ಕಪಿಲವಸ್ತು. ಅವನ ರಾಣಿ ಮಾಯಾದೇವಿ. ಗರ್ಭಿಣಿಯಾದ ಅವಳು ರಾಜನೊಡನೆ ಲುಂಬಿನೀವನಕ್ಕೆ ಬಂದಿರುವಾಗ ಬಾಲಸೂರ್ಯನಂತಿರುವ ಒಬ್ಬ ಮಗನು ಜನಿಸುತ್ತಾನೆ. ಎಲ್ಲೆಲ್ಲಿಯೂ ಶುಭ ಶಕುನ ಗಳಾಗುತ್ತವೆ. ಅಸಿತನೆಂಬ ಋಷಿ ಅಲ್ಲಿಗೆ ಬಂದು 'ಶುದ್ಧೋದನ, ನಿನ್ನ ಮಗನು ಸದ್ಧರ್ಮವನ್ನು ಲೋಕದಲ್ಲಿ ಪ್ರಚಾರಮಾಡಿ ವಿಖ್ಯಾತನಾಗುತ್ತಾನೆ' ಎಂದು ತಿಳಿಸಿ ಹೊರಟು ಹೋಗುತ್ತಾನೆ. ರಾಜನು ಆ ಮಗುವಿಗೆ ಸಿದ್ಧಾರ್ಥನೆಂದು ನಾಮಕರಣ ಮಾಡುತ್ತಾನೆ. ರಾಜಪುತ್ರನು ಯುವಕನಾಗಲು ಯಶೋಧರೆಯೆಂಬ ಸಾಧ್ವೀಮಣಿಯೊಂದಿಗೆ ವಿವಾಹ ವಾಗುತ್ತದೆ. ಆ ದಂಪತಿಗಳಿಗೆ ರಾಹುಲನೆಂಬ ಮಗನು ಜನಿಸುತ್ತಾನೆ.

ಒಂದು ಸಲ ಸಿದ್ಧಾರ್ಥನು ಉದ್ಯಾನವಿಹಾರಕ್ಕೆ ಹೋಗುತ್ತಾನೆ. ಅಲ್ಲಿ ಒಬ್ಬ ಮುದುಕನನ್ನು ಕಂಡಾಗ ಮುಪ್ಪೆಂದರೇನೆಂಬುದು ಅವನ ಅರಿವಿಗೆ ಬಂದು ವ್ಯಥೆಯಾಗುತ್ತದೆ. ಇನ್ನೊಂದು ಸಲ ರೋಗಿಯನ್ನು ಮತ್ತೊಂದು ಸಲ ಹೆಣವನ್ನು ಕಾಣುತ್ತಾನೆ. ಮುಪ್ಪು, ರೋಗ, ಮರಣ ಇವು ಯಾರಿಗೂ ತಪ್ಪಿದ್ದಲ್ಲ ಎಂದು ನಿಶ್ಚಯವಾಗುತ್ತದೆ. ಮನಸ್ಸಿನಲ್ಲಿ ವೈರಾಗ್ಯ ಉದಯಿಸುತ್ತದೆ. ಮಗನ ಈ ವೈರಾಗ್ಯಬುದ್ಧಿಯನ್ನು ಹೋಗಲಾಡಿಸಲು ಶುದ್ಧೋದನನು ಶತಪ್ರಯತ್ನ ಮಾಡುತ್ತಾನೆ. ಯಾವುದೂ ಫಲಿಸುವುದಿಲ್ಲ. ಸಿದ್ಧಾರ್ಥನು ಒಂದು ರಾತ್ರಿ ಯಶೋಧರೆಯನ್ನೂ ರಾಹುಲನನ್ನೂ ತ್ಯಜಿಸಿ ಕಪಿಲವಸ್ತುವಿನಿಂದ ಹೊರಟು ಹೋಗುತ್ತಾನೆ. ಅವನು ಗಂಗೆಯನ್ನು ದಾಟಿ ಮಗಧರಾಜಧಾನಿಯಾದ ರಾಜಗೃಹವನ್ನು ಸೇರುತ್ತಾನೆ. ಅಲ್ಲಿಯ ರಾಜನಾದ ಶ್ರೇಣ್ಯನು (ಬಿಂಬಸಾರ) ಹೇಳಿದ ಉಪದೇಶವನ್ನು ಒಪ್ಪದೆ ಮೋಕ್ಷಾಪೇಕ್ಷೆಯಿಂದ ಹೊರಟು ಅರಾಡಮುನಿಯನ್ನು ಕಾಣುತ್ತಾನೆ. ಅರಾಡ ಮುನಿಯಿಂದ ಸಾಂಖ್ಯದರ್ಶನದ ಸಿದ್ಧಾಂತವನ್ನು ಸಿದ್ಧಾರ್ಥನು ಕಲಿಯುತ್ತಾನೆ.

ಸಿದ್ಧಾರ್ಥನಿಗೆ ಸಾಂಖ್ಯದರ್ಶನದಿಂದ ತೃಪ್ತಿಯಾಗುವುದಿಲ್ಲ. ಅವನು ಗಯೆಯ ಆಶ್ರಮಕ್ಕೆ ಹೋಗಿ ಆರುವರ್ಷ ಯೋಗಾಭ್ಯಾಸ ಮಾಡುತ್ತಾನೆ. ಆಮೇಲೆ ಒಂದು ಅಶ್ವತ್ಥವೃಕ್ಷದ ಕೆಳಗೆ ಕುಳಿತು ಜ್ಞಾನಸಿದ್ಧಿಯಾಗದೆ ಏಳುವುದಿಲ್ಲವೆಂದು ಧ್ಯಾನಾಸಕ್ತನಾಗುತ್ತಾನೆ. ಕಾಮಾಧಿಪ ನಾದ ಮಾರನು ಸಿದ್ಧಾರ್ಥನನ್ನು ಗೆಲ್ಲಲು ಪ್ರಯತ್ನಿಸಿ ತಾನೇ ಸೋತುಹೋಗುತ್ತಾನೆ. ಆಮೇಲೆ ಸಿದ್ಧಾರ್ಥನು ಪರಮಾರ್ಥದ ಧ್ಯಾನದಲ್ಲಿ ಮಗ್ನನಾಗುತ್ತಾನೆ. ಕಡೆಯಲ್ಲಿ ಜ್ಞಾನದ ಸಾಕ್ಷಾತ್ಕಾರವಾಗಿ ಭಗವಾನ್ ಬುದ್ಧನಾಗುತ್ತಾನೆ. ಇದಿಷ್ಟು ಅಶ್ವಘೋಷನು 14 ಸರ್ಗಗಳಲ್ಲಿ ವರ್ಣಿಸಿರುವ ಕಥಾಸಾರ.

ಅಶ್ವಘೋಷನು ಈ ಕಥೆಯನ್ನು ಮನೋಹರವಾಗಿ ವಿಸ್ತರಿಸಿದ್ದಾನೆ. ಮಗನಿಗಾಗಿ ಶುದ್ಧೋದನನ ಹಂಬಲ, ಸಿದ್ಧಾರ್ಥನ ಮನಸ್ಸನ್ನು ಸಂಸಾರಕ್ಕೆ ಆಕರ್ಷಿಸಲು ಅವನು ಒದಗಿಸಿದ ಶೃಂಗಾರಸಾಧನಗಳು, ವಿರಹಿತೆಯಾದ ಯಶೋಧರೆಯ ಶೋಕ, ಬುದ್ಧದೇವನ ಅಚಲನಾದ ಜ್ಞಾನನಿಷ್ಠೆ— ಇವುಗಳ ಪ್ರತಿಪಾದನೆ ಶ್ರೇಷ್ಠರೀತಿಯಲ್ಲಿ ಬಂದಿದೆ. ಅನೇಕ



ಸಂನಿವೇಶಗಳು ರಾಮಾಯಣದ ಅಯೋಧ್ಯಾಕಾಂಡದ ವೃತ್ತಾಂತಕ್ಕೆ ಹೋಲುತ್ತವೆ. ರಾಮಾಯಣದ ಪ್ರಭಾವವು ಈ ಕಾವ್ಯದಲ್ಲಿ ಮೂಡಿದೆ ಎಂಬುದು ವರ್ಣನಾಸಾದೃಶ್ಯದಿಂದಲೂ ವ್ಯಕ್ತವಾಗುತ್ತದೆ.

1. ಪ್ರಾಸಾದದ ಕಿಟಕಿಗಳಿಂದ ಸಿದ್ಧಾರ್ಥನನ್ನು ನೋಡುತ್ತಿದ್ದ ಸ್ತ್ರೀಯರ ಮುಖಗಳು ಪ್ರಾಸಾದವನ್ನಲಂಕರಿಸಿದ ತಾವರೆಯ ಮಾಲೆಯಂತೆ ಹೊಳೆದವು,—

ವಾತಾಯನೇಭ್ಯಸ್ತು ವಿನಿಃಸೃತಾನಿ
ಪರಸ್ಪರಾಯಾಸಿತಕುಂಡಲಾನಿ ।
ಸ್ತ್ರೀಣಾಂ ವಿರೇಜುರ್ಮುಖಪಂಕಜಾನಿ
ಸಕ್ತಾನಿ ಹರ್ಮ್ಯೇಷ್ವಿವ ಪಂಕಜಾನಿ ॥

3—19

2. ರಾಜಕುಮಾರನು ಭಿಕ್ಷುವಾಗಿ ಕಷ್ಟಪಡುವನೆಂದು ಗೌತಮಿ ಕೊರಗುತ್ತಾಳೆ —

ಶುಚೌ ಶಯಿತ್ವಾ ಶಯನೇ ಹಿರಣ್ಮಯೇ
ಪ್ರಬೋಧ್ಯಮಾನೋ ನಿಶಿ ತೂರ್ಯನಿಸ್ವನೈಃ ।
ಕಥಂ ಬತ ಸ್ವಪ್ಸ್ಯತಿ ಸೋಽದ್ಯ ಮೇ ವ್ರತೀ
ಪಟೈಕದೇಶಾಂತರಿತೇ ಮಹೀತಲೇ ॥

8—54

## 2. ಸೌಂದರನಂದ

ಅಶ್ವಘೋಷನ ಇನ್ನೊಂದು ಕೃತಿಯಿದು. ಇದರಲ್ಲಿ 18 ಸರ್ಗಗಳಿವೆ. ಸರ್ವಾರ್ಥನು ಬುದ್ಧದೇವನಾದ ಮೇಲೆ ನಡೆದ ಘಟನೆಗಳೂ ಅವನ ಉಪದೇಶಗಳೂ ಇಲ್ಲಿ ವರ್ಣಿತವಾಗಿವೆ. ಸುಂದರಿ ಮತ್ತು ನಂದ— ಇವರಿಬ್ಬರನ್ನು ಕುರಿತು ಬರೆದ ಕಾವ್ಯ ಸೌಂದರನಂದ.

**ಕಥಾಸಾರಾಂಶ**

ನಂದನು ಬುದ್ಧನ ಬಲತಮ್ಮ. ನಂದನ ಪ್ರೇಯಸಿ ಸುಂದರಿ. ಬುದ್ಧನ ಉಪದೇಶವನ್ನು ಎಲ್ಲರೂ ಮನ್ನಿಸಿದರೂ ನಂದನು ಅದನ್ನು ಲೆಕ್ಕಿಸದೆ ಸೌಂದರ್ಯೋಪಾಸನೆಯಲ್ಲಿ ಮಗ್ನನಾಗಿದ್ದನು. ತಮ್ಮನ ಈ ವರ್ತನೆಯಿಂದ ಚಿಂತೆಗೊಂಡ ಬುದ್ಧನು ಹೇಗಾದರೂ ಅವನನ್ನು ವಿರಕ್ತಿಮಾರ್ಗಕ್ಕೆ ತರಲು ಯತ್ನಿಸುತ್ತಾನೆ. ಪ್ರೇಮಜೀವನದಲ್ಲಿ ಆಸಕ್ತನಾಗಿದ್ದ ನಂದನಿಗೆ ತನ್ನ ವಿಹಾರದಲ್ಲಿ ಬುದ್ಧನು ದಿವ್ಯೋಪದೇಶಮಾಡುತ್ತಾನೆ. ಪರಿಣಾಮವಾಗಿ ನಂದನು ತನ್ನ ಕೇಶಗಳನ್ನು ಕತ್ತರಿಸಿಕೊಂಡು ಕಾಷಾಯವಸ್ತ್ರವನ್ನುಡುತ್ತಾನೆ. ಆದರೆ ಮನಸ್ಸು ಸುಂದರಿಯಲ್ಲಿಯೇ ಆಸಕ್ತವಾಗಿದ್ದು ಮನೆಗೆ ಹೋಗುವ ಹವಣಿಕೆಯಲ್ಲಿ ಇರುತ್ತಾನೆ. ಇದನ್ನರಿತ ಬುದ್ಧನು ಕಾಮಗಳ ಅನಿತ್ಯತೆಯನ್ನು ವರ್ಣಿಸಿ ಸ್ತ್ರೀಯರ ಚಂಚಲಸ್ವಭಾವವನ್ನು ನಿಂದಿಸುತ್ತಾನೆ. ಕಡೆಗೆ ತನ್ನ ದಿವ್ಯಪ್ರಭಾವದಿಂದ ನಂದನನ್ನು ಆಕಾಶಮಾರ್ಗವಾಗಿ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾನೆ. ದಾರಿಯಲ್ಲಿ ಹಿಮಾಲಯದ ಅರಣ್ಯದಲ್ಲಿ ಒಕ್ಕಣ್ಣಿನ ಒಂದು ಹೆಣ್ಣುಕಪಿ ಕಾಣಿಸುತ್ತದೆ. ಬುದ್ಧನು ಅದನ್ನು ನಂದನಿಗೆ ತೋರಿಸಿ 'ನಿನ್ನ ಸುಂದರಿಗಿಂತ ಆ ಕಪಿ

ಸುಂದರವಾಗಿದೆಯಲ್ಲವೆ ? ಎಂದು ಕೇಳುತ್ತಾನೆ. ನಂದನು 'ಎಲ್ಲಾದರೂ ಉಂಟೆ ? ಅವಳೆಲ್ಲಿ ? ಈ ಕಪಿ ಎಲ್ಲಿ ? ಎಂದು ಬಿಡುತ್ತಾನೆ. ಆಮೇಲೆ ಸ್ವರ್ಗದ ನಂದನವನದಲ್ಲಿ ಅಪ್ಸರೆಯರನ್ನು ತೋರಿಸಿ ಹಿಂದಿನ ಪ್ರಶ್ನೆಯನ್ನೇ ಕೇಳಿದಾಗ ನಂದನು ಸುಂದರಿಗಿಂತ ಅಪ್ಸರೆಯರಲ್ಲಿ ಹೆಚ್ಚಿನ ಸೌಂದರ್ಯವಿದೆಯೆಂದು ಒಪ್ಪುತ್ತಾನೆ. ಅವನಿಗೆ ಸುಂದರಿಯ ವ್ಯಾಮೋಹ ತಪ್ಪಿ ಅಪ್ಸರೆಯರಲ್ಲಿ ವ್ಯಾಮೋಹ ಹುಟ್ಟುತ್ತದೆ. 'ನಂದ, ಅಪ್ಸರೆ ಸಿಗಬೇಕಾದರೆ ತೀವ್ರವಾದ ತಪಸ್ಸು ಮಾಡಬೇಕು" ಎನ್ನುತ್ತಾನೆ ಬುದ್ಧ. ನಂದನು ಒಪ್ಪಿ ತಪಸ್ಸಿನಲ್ಲಿ ನಿರತನಾಗುತ್ತಾನೆ. ಕ್ರಮವಾಗಿ ಸ್ವರ್ಗಸುಖವೂ ನಶ್ವರವೆಂದು ಗೊತ್ತಾಗುತ್ತದೆ. ಅಪ್ಸರೆಯರಲ್ಲಿದ್ದ ಮೋಹವೂ ತೊಲಗುತ್ತದೆ. ಬುದ್ಧನು ಜ್ಞಾನೋಪದೇಶಮಾಡುತ್ತಾನೆ.

ಅಶ್ವಘೋಷನು ಉತ್ತಮಶ್ರೇಣಿಗೆ ಸೇರಿದ ಕವಿ. ಹಿತಮಿತವಾದ ಅನುಪ್ರಾಸಗಳನ್ನು ಬಳಸಿದ್ದರೂ ಶಬ್ದಾಡಂಬರದಲ್ಲಿ ಅವನಿಗೆ ನೆಚ್ಚುಇಲ್ಲ. ಸೌಂದರನಂದದ 2ನೆಯ ಸರ್ಗದಲ್ಲಿ ವಿಶೇಷವಾಗಿ ಲುಙ್ ಪ್ರಯೋಗಗಳನ್ನು ಮಾಡಿದ್ದಾನೆ. 'ಗೃಹ್ಯ, ವಿವರ್ಧಯಿತ್ವಾ' ಮುಂತಾದ ವ್ಯಾಕರಣವಿರುದ್ಧ ಶಬ್ದಗಳು ಅಲ್ಲಲ್ಲಿ ಇವೆ. ನಾನಾ ಬಗೆಯ ವೃತ್ತರಚನೆಯಲ್ಲಿ ಕವಿಗೆ ನೈಪುಣ್ಯವಿದೆ.

1. ನಂದನ ಸ್ಥಿತಿ ನೀರಿನ ಅಲೆಗಳ ಮೇಲೆ ತೇಲುವ ರಾಜಹಂಸದಂತಾಯಿತು—

ತಂ ಗೌರವಂ ಬುದ್ಧಗತಂ ಚಕರ್ಷ<br>
ಭಾರ್ಯಾನುರಾಗಃ ಪುನರ್‌ಚಕರ್ಷ ।<br>
ಸೋಽನಿಶ್ಚಯಾನ್ನಾಪಿ ಯಯೌ ನ ತಸ್ಥೌ<br>
ತರಂಸ್ತರಂಗೇಷ್ವಿವ ರಾಜಹಂಸಃ 4—42

ಪಾರ್ವತಿಯ ಸ್ಥಿತಿಯೂ ಹೀಗೆಯೇ ಆಯಿತೆಂದು ಕಾಳಿದಾಸನು ಕುಮಾರಸಂಭವದಲ್ಲಿ 'ಶೈಲಾಧಿರಾಜತನಯಾ ನ ಯಯೌ ನ ತಸ್ಥೌ' (5—85) ಎಂದು ವರ್ಣಿಸಿದ್ದಾನೆ. ಅಶ್ವಘೋಷ ಕಾಳಿದಾಸರ ಕಾವ್ಯಗಳಲ್ಲಿ ಈ ಬಗೆಯ ಅನ್ಯೋನ್ಯ ಸಾದೃಶ್ಯಗಳು ವಿಶೇಷವಾಗಿ ಕಂಡುಬರುತ್ತವೆ. ಅವರಿಬ್ಬರಲ್ಲಿ ಯಾರು ಪ್ರಾಚೀನರೆಂದು ನಿರ್ಣಯವಾಗದ ಹೊರತು ಯಾರ ಪ್ರಭಾವವು ಯಾರ ಮೇಲೆ ಉಂಟಾಗಿದೆಯೆಂದು ನಿಶ್ಚಯಿಸಲಾಗುವುದಿಲ್ಲ.

2. ನಂದಸುಂದರಿಯರ ದಾಂಪತ್ಯ ಚಂದ್ರರಾತ್ರಿಯರ ಸಮ್ಮಿಲನವಿದ್ದಂತೆ—

ತಾಂ ಸುಂದರೀಂ ಚೇನ್ನ ಲಭೇತ ನಂದಃ<br>
ಸಾ ವಾ ನಿಷೇವೇತ ನ ತಂ ನತಭ್ರೂಃ ।<br>
ದ್ವಂದ್ವಂ ಧ್ರುವಂ ತದ್ವಿಕಲಂ ನ ಶೋಭೇ<br>
ತಾನ್ಯೋನ್ಯಹೀನಾವಿವ ರಾತ್ರಿಚಂದ್ರೌ ॥ 4-7

ಇದನ್ನು ರಘುವಂಶದ 'ಪರಸ್ಪರೇಣ ಸ್ಪೃಹಣೀಯಶೋಭಂ' (7-14) ಎಂಬ ಶ್ಲೋಕದೊಡನೆ ಹೋಲಿಸಿ ನೋಡಬಹುದು.



ಈ ಕಾವ್ಯದಲ್ಲಿ ಪ್ರಸಿದ್ಧವಾದ ಉಪಜಾತಿ, ವಂಶಸ್ಥ, ಶಿಖರಿಣೀ, ವೈತಾಲೀಯ, ಶಾರ್ದೂಲವಿಕ್ರೀಡಿತ ಮುಂತಾದವೃತ್ತಗಳನ್ನು ಅಶ್ವಘೋಷನು ಬಳಸಿದ್ದಾನೆ. 12 ಅಕ್ಷರಗಳ ಶಕ್ವರೀ ಛಂದಸ್ಸಿನಲ್ಲಿರುವ ವೃತ್ತದ (12-43, 13-56) ಹೆಸರು ವೃತ್ತರತ್ನಾಕರದಲ್ಲಿಲ್ಲ, ಧೃತಿ ಛಂದಸ್ಸಿನ ಕುಸುಮಿತಲತಾ ಎಂಬ ಅಪೂರ್ವವೃತ್ತವನ್ನು (7-52) ಕವಿಯು ಉಪಯೋಗಿಸಿದ್ದಾನಲ್ಲದೆ, ಸಾಮಾನ್ಯಲಕ್ಷಣಗಳಿಗೆ ನಿಲುಕದ ಗಾಥಾ ಪ್ರಕಾರಗಳನ್ನೂ (ಉಪಸ್ಥಿತಪ್ರಚಲಿತ ?) (2-64,65 ; 3-33) ಬಳಸಿದ್ದಾನೆ.

ಸುಭಾಷಿತ :

1. ಭೇತವ್ಯಂ ನ ತಥಾ ಶತ್ರೋರ್ನಾಗ್ನೇರ್ನಾಹೇರ್ನ ಚಾಶನೇಃ ।<br>
ಇಂದ್ರಿಯೇಭ್ಯೋ ಯಥಾ ಸ್ವೇಭ್ಯಸ್ತೈರಜಸ್ರಂ ಹಿ ಹನ್ಯತೇ ॥ 13—3

2. ಭಾರಸ್ಯೋದ್ವಹನಾರ್ಥಂ ಚ ರಥಾಕ್ಷೋಽಭ್ಯಜ್ಯತೇ ಯಥಾ ।<br>
ಭೋಜನಂ ಪ್ರಾಣಯಾತ್ರಾರ್ಥಂ ತದ್ವದ್ವಿದ್ವಾನ್ನಿಷೇವತೇ ॥ 14—12

3. ಲೋಕೇ ಪ್ರಕೃತಿಭಿನ್ನೇಽಸ್ಮಿನ್ನ ಕಶ್ಚಿತ್ ಕಸ್ಯಚಿತ್ ಪ್ರಿಯಃ ।<br>
ಕಾರ್ಯಕಾರಣಸಂಬದ್ಧಂ ವಾಲುಕಾಮುಷ್ಟಿವಜ್ಜಗತ್ ॥ 15—35

## 1. ರಘುವಂಶ

ಇದೊಂದು ಕಾಳಿದಾಸನ ಶ್ರೇಷ್ಠವಾದ ಮಹಾಕಾವ್ಯ. ಮಹಾಕವಿಯ ಕಾವ್ಯಕಲಾ ಪ್ರಜ್ಞೆಯ ಪೂರ್ಣತೆಯನ್ನಿಲ್ಲಿ ಕಾಣಬಹುದು. ಶಾಸ್ತ್ರಜ್ಞಾನ, ಲೋಕಾನುಭವಗಳು ಪಕ್ವವಾದಾಗ ಕವಿಪ್ರತಿಭೆಯು ಉಲ್ಲಸಿತವಾಗಿ ಎಂತಹ ಭವ್ಯ ನಿರ್ಮಾಣವನ್ನು ಮಾಡುವುದೆಂಬುದಕ್ಕೆ ರಘುವಂಶ ಉದಾಹರಣೆ, ಇದು ಭಾಷಾಲಾಲಿತ್ಯದಿಂದ ಕಾವ್ಯಾಭ್ಯಾಸಿಗಳಿಗೆ ಪಠ್ಯಪುಸ್ತಕವೂ ಆಗಿದೆ; ವಿಷಯ ಸೌಂದರ್ಯದಿಂದ ಪ್ರೌಢರ ಮನಸ್ಸನ್ನು ಸೂರೆಗೊಳ್ಳತಕ್ಕದ್ದೂ ಆಗಿದೆ.

'ರಘೂಣಾಮನ್ವಯಂ ವಕ್ಷ್ಯೇ' ಎಂದಿರುವ ಕಾಳಿದಾಸನು ರಘುವಂಶದ ರಾಜರನ್ನು ತನ್ನ ಕಾವ್ಯದ ನಾಯಕರನ್ನಾಗಿ ಆರಿಸಿಕೊಂಡಿದ್ದಾನೆ. ಅನೇಕ ರಾಜರ ಕಥೆ ಇದ್ದರೂ ಯಾವುದೊಂದು ವರ್ಣನೆಯೂ ಸಹ ಪುನರುಕ್ತವಾಗಿಲ್ಲ. ಒಂದು ಎಳೆಯಲ್ಲಿ ಪೋಣಿಸಿದ ವಿವಿಧ ಮಣಿಗಳಂತೆ ಎಲ್ಲ ವರ್ಣನೆಗಳೂ ಸೇರಿ ಒಂದು ದಿವ್ಯಹಾರವಾಗಿದೆ. ದಿಲೀಪನ ಧೇನುಸೇವೆ, ರಘುವಿನ ದಿಗ್ವಿಜಯ, ಅಜನ ಸ್ವಯಂವರ, ದಶರಥನ ವನವಿಹಾರ ಹೀಗೆ ಎಲ್ಲ ಘಟನೆಗಳೂ ಸೇರಿ ಒಬ್ಬ ನಾಯಕನಿಗೇ ಒದಗಿದ ವಿವಿಧ ಸನ್ನಿವೇಶಗಳೋ ಎಂಬಂತೆ ಕಥಾವಸ್ತುವನ್ನು ಚಾತುರ್ಯದಿಂದ ಕಾಳಿದಾಸನು ಅಳವಡಿಸಿಕೊಂಡಿದ್ದಾನೆ. ಶ್ರೀರಾಮನ ಚರಿತ್ರೆಯು ಮಾತ್ರ ಸಮಗ್ರವಾಗಿ ಬಂದಿದೆ. ಅದು ಹಾರದ ಮಧ್ಯಮಣಿಯಂತೆ ದೊಡ್ಡದಾಗಿಯೂ ತೇಜಃಪುಂಜವಾಗಿಯೂ ಇದೆ.

ರಘುವಂಶದಲ್ಲಿ 19 ಸರ್ಗಗಳಿದ್ದು ಒಟ್ಟು 1509 ಶ್ಲೋಕಗಳಿವೆ, 29 ರಾಜರ ವಿಚಾರವಿದೆ. ಅವರು ಯಾರೆಂದರೆ ದಿಲೀಪ, ರಘು, ಅಜ, ದಶರಥ, ಶ್ರೀರಾಮ, ಕುಶ, ಅತಿಥಿ,

ನಿಷಧ, ನಲ, ನಭ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅಹೀನಗು, ಪಾರಿಯಾತ್ರ, ಶಿಲ, ಉನ್ನಾಭ, ವಜ್ರಣಾಭ, ಶಂಖಣ, ವ್ಯುಷಿತಾಶ್ವ, ವಿಶ್ವಸಹ, ಹಿರಣ್ಯನಾಭ, ಕೌಸಲ್ಯ, ಬ್ರಹ್ಮಿಷ್ಠ, ಪುತ್ರ, ಪುಷ್ಯ, ಧ್ರುವಸಂಧಿ, ಸಂದರ್ಶನ, ಮತ್ತು ಅಗ್ನಿವರ್ಣ.

ಕುಶನವರೆಗಿನ ವಂಶಾನುಕ್ರಮವು ವಾಲ್ಮೀಕಿರಾಮಾಯಣದಲ್ಲಿಯೂ, ಅತಿಥಿ ಮೊದಲಾದವರ ಹೆಸರು ಪುರಾಣಾಂತರಗಳಲ್ಲಿಯೂ ದೊರೆಯುತ್ತವೆ. ಕಾಳಿದಾಸನು ಹೇಳುವ ಅನುಕ್ರಮವು ಇವೆಲ್ಲವುಗಳಿಗಿಂತಲೂ ವಿಭಿನ್ನವಾಗಿದೆ. ಆದರೂ ಇದು ವಿಷ್ಣುಪುರಾಣದ ವಂಶವರ್ಣನೆಗೆ ಸಮೀಪವಾಗಿದೆಯೆನ್ನಬಹುದು.

ರಘುವಂಶ ಮಹಾಕಾವ್ಯಕ್ಕೆ 33 ವ್ಯಾಖ್ಯಾನಗಳಿರುವುದಾಗಿ ತಿಳಿದು ಬಂದಿದೆ. ಪ್ರಸಿದ್ಧನಾದ ಮಲ್ಲಿನಾಥಸೂರಿಯ ವ್ಯಾಖ್ಯಾನ ಇದಕ್ಕೂ ಇದೆ. ಮಲ್ಲಿನಾಥನಿಗೆ ದಕ್ಷಿಣಾವರ್ತನಾಥ ಮುಂತಾದವರು ಬರೆದ ವ್ಯಾಖ್ಯಾನಗಳು ಉಪಲಬ್ಧವಾಗಿದ್ದವು. ಅವನು

ತಥಾಪಿ ದಕ್ಷಿಣಾವರ್ತನಾಥಾದ್ಯೈಃ ಕ್ಷುಣ್ಣವರ್ತ್ಮಸು ।
ವಯಂ ಚ ಕಾಲಿದಾಸೋಕ್ತಿಷ್ವವಕಾಶಂ ಲಭೇಮಹಿ ॥

ಎಂದಿದ್ದಾನೆ. ಹಿಂದೆ ಕೆಲವು ದುರ್ವ್ಯಾಖ್ಯಾನಗಳಿಂದ ಕಾಳಿದಾಸನ ಕಾವ್ಯದ ಸೊಬಗು ಮಾಸಿ ಹೋಗಿತ್ತು ಎಂಬ ಅಭಿಪ್ರಾಯವನ್ನು ಮಲ್ಲಿನಾಥನು* ಕೊಡುತ್ತಾನೆ :

ಭಾರತೀ ಕಾಲಿದಾಸಸ್ಯ ದುರ್ವ್ಯಾಖ್ಯಾವಿಷಮೂರ್ಛಿತಾ ।
ಏಷಾ ಸಂಜೀವಿನೀವ್ಯಾಖ್ಯಾ ತಾಮದ್ಯೋಜ್ಜೀವಯಿಷ್ಯತಿ ॥

*ಟಿಪ್ಪಣಿ: ಈತನು ಆಂದ್ರಪ್ರದೇಶದವನು. ಕೋಲಾಚಲನಿವಾಸಿ. ಪಂಚಮಹಾಕಾವ್ಯಗಳಿಗೂ ವ್ಯಾಖ್ಯಾನವನ್ನು ಬರೆದ ದೊಡ್ಡ ವಿದ್ವಾಂಸ. ವಿದ್ಯಾಧರನ "ಏಕಾವಳಿ" ಎಂಬ ಅಲಂಕಾರ ಗ್ರಂಥಕ್ಕೆ ವಿಸ್ತೃತ ವ್ಯಾಖ್ಯಾನವನ್ನೂ ಈತ ಬರೆದಿದ್ದಾನೆ. ಅಲ್ಲದೆ ಅಮರಕೋಶ, ತಂತ್ರವಾರ್ತಿಕ, ಪ್ರಶಸ್ತಪಾದಭಾಷ್ಯ, ಲಘುಶಬ್ದೇಂದುಶೇಖರ— ಮುಂತಾದ ಗ್ರಂಥಗಳಿಗೂ ವ್ಯಾಖ್ಯಾನವನ್ನು ಬರೆದಂತೆ ತಿಳಿದುಬಂದಿದೆ. ಉದಾರಕಾವ್ಯ, ರಘುವೀರಚರಿತಕಾವ್ಯ, ವೈದ್ಯಕಲ್ಪತರು, ವೈದ್ಯರತ್ನಮಾಲ— ಇವು ಈತನ ಸ್ವತಂತ್ರವಾದ ಕೃತಿಗಳು. 'ಮಲ್ಲಿನಾಥ' ಎಂಬ ಹೆಸರಿನ ಅನೇಕರಿದ್ದರೂ ಇರಬಹುದು. ಇವನ ಕಾಲ ಬಹುಶಃ 14ನೆಯ ಶತಕದ ಉತ್ತರಾರ್ಧ. ನ್ಯಾಯ, ವೈಶೇಷಿಕ, ವೇದಾಂತ, ಮೀಮಾಂಸಾ, ವ್ಯಾಕರಣಶಾಸ್ತ್ರಗಳಲ್ಲಿ ಈತನಿಗೆ ಅಪ್ರತಿಮ ಪಾಂಡಿತ್ಯವಿತ್ತೆಂದು ಈ ಶ್ಲೋಕದಿಂದ ಗೊತ್ತಾಗುತ್ತದೆ—

ವಾಣೀಂ ಕಾಣಭುಜೀಮಜೀಗಣದವಾಶಾಸೀಚ್ಚ ವೈಯಾಸಿಕೀಂ
ಅಂತಸ್ತಂತ್ರಮರಂಸ್ತ ಪನ್ನಗಗವೀಗುಂಫೇಷು ಚಾಜಾಗರೀತ್ ।
ವಾಚಾಮಾಚಕಲದ್ರಹಸ್ಯಮಖಿಲಂ ಯಶ್ಚಾಕ್ಷಪಾದಸ್ಫುರಾಂ
ಲೋಕೇಽಭೂದ್ಯದುಪಜ್ಞಮೇವ ವಿದುಷಾಂ ಸೌಜನ್ಯಜನ್ಯಂ ಯಶಃ ॥



ಕಥಾಸಾರಾಂಶ

ಸೂರ್ಯಪುತ್ರನಾದ ಮನುವಿನ ವಂಶದಲ್ಲಿ ದಿಲೀಪನೆಂಬ ರಾಜೇಂದ್ರ ಉದಯಿಸಿದನು. ಅವನ ಪತ್ನಿ ಸುದಕ್ಷಿಣೆ. ಸಂತತಿಯಿಲ್ಲದರಿಂದ ಆ ದಂಪತಿಗಳು ಕುಲಗುರುಗಳಾದ ವಸಿಷ್ಠರ ಬಳಿಗೆ ಹೋಗಿ ಅವರ ಆಜ್ಞೆಯಂತೆ ನಂದಿನೀಧೇನುವನ್ನು ಸೇವಿಸಿದರು. ಅದರ ಫಲವಾಗಿ ದಿಲೀಪನಿಗೆ 'ರಘು' ಎಂಬ ಶೂರನಾದ ಮಗನು ಜನಿಸಿದನು. ದಿಲೀಪನು 99 ಅಶ್ವಮೇಧ ಯಾಗಗಳನ್ನು ಮಾಡಿ ರಘುವಿಗೆ ರಾಜ್ಯಭಾರವನ್ನು ವಹಿಸಿ ಪತ್ನಿಯೊಡನೆ ಅರಣ್ಯಕ್ಕೆ ಹೋಗಿ ವಾನಪ್ರಸ್ಥನಾದನು. 'ಗಲಿತವಯಸಾಮಿಕ್ಷ್ವಾಕೂಣಾಮಿದಂ ಹಿ ಕುಲವ್ರತಂ.'

ರಘುರಾಜನು ದಿಗ್ವಿಜಯವನ್ನು ಮುಗಿಸಿ 'ವಿಶ್ವಜಿತ್' ಎಂಬ ಯಾಗವನ್ನು ನಡೆಸಿದನು. ಯಾಗದಲ್ಲಿ ಸಕಲವನ್ನೂ ಸಹ ದಾನಮಾಡಿ ರಿಕ್ತನಾಗಿರುವಾಗ ಕೌತ್ಸನೆಂಬ ವರತಂತುಮುನಿ ಶಿಷ್ಯನು ಬಂದು ಗುರುದಕ್ಷಿಣೆಗಾಗಿ ಹಣವನ್ನು ಯಾಚಿಸಿದನು. ರಘುರಾಜನು ಹಣಕ್ಕಾಗಿ ಕುಬೇರನ ಮೇಲೆ ದಂಡಯಾತ್ರೆಗೆ ಹೊರಡಲು ಸಿದ್ಧನಾದಾಗ ಆತನ ಕೋಶಾಗಾರದಲ್ಲಿ ಸುವರ್ಣವೃಷ್ಟಿಯಾಯಿತು. ಅದನ್ನು ಆತ ಕೌತ್ಸನಿಗೆ ಅರ್ಪಿಸಿದನು.

ರಘುವಿನ ಮಗ ಅಜಕುಮಾರ. ವಿದರ್ಭರಾಜನಾದ ಭೋಜನ ಸೋದರಿ ಇಂದುಮತಿಯು ಸ್ವಯಂವರದಲ್ಲಿ ಅವನನ್ನು ವರಿಸಿದಳು. ಸ್ವಯಂವರಕ್ಕೆ ಆಗಮಿಸಿದ್ದ ಇತರ ರಾಜರು ಅಸೂಯೆಯಿಂದ ಅಜಕುಮಾರನ ಮೇಲೆ ಯುದ್ಧಕ್ಕೆ ಬಂದರು. ಅಜನು ಅವರೆಲ್ಲರನ್ನೂ ಸೋಲಿಸಿ ಪತ್ನಿಯೊಡನೆ ರಾಜಧಾನಿಗೆ ಹಿಂದಿರುಗಿ ಬಂದನು. ರಘುರಾಜನು ಮಗನ ವಿಜಯವಾರ್ತೆಯನ್ನು ಕೇಳಿ ಬಹುಸಂತುಷ್ಟನಾದನು. ಅನಂತರ ಅಜಕುಮಾರನಿಗೆ ರಾಜ್ಯವನ್ನು ವಹಿಸಿ ರಘುರಾಜನು ಸಂನ್ಯಾಸವನ್ನು ಸ್ವೀಕರಿಸಿ ನಗರದ ಹೊರಗೆ ವಾಸಿಸುತ್ತಾ ತಪೋನಿಷ್ಠನಾದನು.

---

ಮಲ್ಲಿನಾಥನ ಕವಿತಾಶಕ್ತಿಗೆ ಮೇಲ್ಕಂಡ ಶ್ಲೋಕ ಉದಾಹರಣೆ, ಅಲ್ಲದೆ ರಘುವಂಶದ ಪ್ರತಿಯೊಂದು ಸರ್ಗದ ವ್ಯಾಖ್ಯಾನದ ಆದಿಯಲ್ಲಿಯೂ ಸುಂದರವಾದ ಮಂಗಳಶ್ಲೋಕವನ್ನು ರಚಿಸಿದ್ದಾನೆ. ಪ್ರಸಿದ್ಧವಾದ ಈ ಶ್ಲೋಕ ಮಲ್ಲಿನಾಥನದು—

ಶಾರದಾ ಶಾರದಾಂಭೋಜವದನಾ ವದನಾಂಬುಜೇ ।
ಸರ್ವದಾ ಸರ್ವದಾಸ್ಮಾಕಂ ಸನ್ನಿಧಿಃ ಸನ್ನಿಧಿಂ ಕ್ರಿಯಾತ್ ।

(ರಘು. 4)

ಮಲ್ಲಿನಾಥನು ವ್ಯಾಖ್ಯಾನಮಾಡುವ ಪ್ರಕಾರ ಸರಳವಾದುದು. ಅನಾವಶ್ಯಕವಾಗಿ ಆತನು ಸ್ವಲ್ಪವೂ ವಿಸ್ತರಿಸುವುದಿಲ್ಲ. ತನ್ನ ವ್ಯಾಖ್ಯಾನ ಕ್ರಮವನ್ನು ಹೀಗೆ ಹೇಳಿಕೊಂಡಿದ್ದಾನೆ.

ಇಹಾನ್ವಯಮುಖೇನೈವ ಸರ್ವಂ ವ್ಯಾಖ್ಯಾಯತೇ ಮಯಾ ।
ನಾಮೂಲಂ ಲಿಖ್ಯತೇ ಕಿಂಚಿತ್ ನಾನಪೇಕ್ಷಿತಮುಚ್ಯತೇ ॥

ಟಿಪ್ಪಣಿ

ಕೆಲವು ಕಾಲದ ಮೇಲೆ ರಘು ಯೋಗಸಮಾಧಿಯಿಂದ ದೇಹವನ್ನು ವಿಸರ್ಜಿಸಿ ಸಾಯುಜ್ಯವನ್ನು ಪಡೆದನು. ಅಜನು ಆತನಿಗೆ ಯತಿಯೋಗ್ಯವಾದ ನೈಷ್ಠಿಕವಿಧಿಯನ್ನು ಆಚರಿಸಿದನು.

ಅಜನು ಧರ್ಮದಿಂದ ರಾಜ್ಯಭಾರಮಾಡುತ್ತಾ ಒಂದು ದಿನ ಪತ್ನಿಯೊಡನೆ ವಿಹರಿಸುವುದಕ್ಕಾಗಿ ನಗರೋಪವನಕ್ಕೆ ಹೋಗಿದ್ದನು. ಆಗ ಗಗನದಲ್ಲಿ ಯದೃಚ್ಛೆಯಿಂದ ಹೋಗುತ್ತಿದ್ದ ನಾರದಮುನಿಗಳ ವೀಣೆಯನ್ನು ಅಲಂಕರಿಸಿದ್ದ ಪುಷ್ಪಮಾಲೆಯು ಕಳಚಿ ಇಂದುಮತಿಯ ಮೇಲೆ ಬಿದ್ದಿತು. ಅದೇ ನೆವವಾಗಿ ಒಡನೆಯೇ ಇಂದುಮತಿ ಮೃತಳಾದಳು, ಅಜನು ದುಃಖದಿಂದ ಗೋಳಾಡಿದನು.

ಅವನ ದುಃಖ ಶಾಂತವಾಗಲೇ ಇಲ್ಲ, ವಸಿಷ್ಠರ ಉಪದೇಶವೂ ಫಲಕಾರಿಯಾಗಲಿಲ್ಲ. ದಿನೇ ದಿನೇ ಸೊರಗುತ್ತ ರೋಗಕ್ಕೆ ಗುರಿಯಾದನು. ಮಗನಾದ ದಶರಥನು ಇನ್ನೂ ಚಿಕ್ಕವನೆಂಬ ಚಿಂತೆಯಿಂದ ಹೇಗೋ 8 ವರ್ಷಗಳನ್ನು ಕಳೆದನು. ಕಡೆಗೆ 'ಪ್ರಾಯೋಪವೇಶಮತಿರ್ನೃಪತಿರ್ಬಭೂವ', ಆನಂತರ ಗಂಗಾಸರಯೂ ನದಿಗಳ ಸಂಗಮ ಪ್ರದೇಶದಲ್ಲಿ ದೇಹವನ್ನು ತ್ಯಜಿಸಿ. ಅಮರರಲ್ಲಿ ಸೇರಿ—

'ಪೂರ್ವಾಕಾರಾಧಿಕತರರುಚಾ ಸಂಗತಃ ಕಾಂತಯಾಸೌ ।
ಲೀಲಾಗಾರೇಷ್ವರಮತ ಪುನರ್ನಂದನಾಭ್ಯಂತರೇಷು ॥'

ಇಲ್ಲಿಗೆ 8 ಸರ್ಗಗಳು ಮುಗಿಯುತ್ತವೆ. ಆಮೇಲೆ ದಶರಥನ ರಾಜ್ಯಭಾರ, ಅವನ ಮೃಗಯಾವಿಹಾರ, ಋಷಿಕುಮಾರನ ಹತ್ಯೆ, ಪುತ್ರಶೋಕದಿಂದ ಮರಣವಾಗಲೆಂದು ದಶರಥನಿಗೆ ಬಂದ ಶಾಪ 9ನೆಯ ಸರ್ಗದ ವೃತ್ತಾಂತ. ಅನಂತರ ಪ್ರಸಿದ್ಧವಾದ ರಾಮಾಯಣದ ಕಥೆ, ಸೀತಾಪರಿತ್ಯಾಗ, ಲವಕುಶಜನನ, ಸೀತೆಯ ಭೂಗರ್ಭಪ್ರವೇಶ, ಶ್ರೀರಾಮನ ಮಹಾಪ್ರಸ್ಥಾನ ಇವು 6 ಸರ್ಗಗಳಲ್ಲಿ ಬಂದಿವೆ. ಇಲ್ಲಿಗೆ 15 ಸರ್ಗಗಳು ಕಳೆಯುತ್ತವೆ.

ಕುಶನು ಕುಶಾವತಿಯಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಅಯೋಧ್ಯಾಧಿದೇವತೆಯು ಸ್ತ್ರೀರೂಪದಲ್ಲಿ ಕಾಣಿಸಿಕೊಂಡು ಅಯೋಧ್ಯಾನಗರವು ಹಾಳುಬಿದ್ದಿರುವುದನ್ನು ತಿಳಿಸಿದಳು. ಆನಂತರ ಕುಶನು ಅಯೋಧ್ಯೆಗೆ ಹೋಗಿ ನೆಲಸಿದನು. ಸರಯೂನದಿಯಲ್ಲಿ ಜಲಕ್ರೀಡೆಯಾಡುತ್ತಿರುವಾಗ ಕುಶನು ಕೈಯಲ್ಲಿ ಧರಿಸಿದ್ದ ಸುವರ್ಣಜೈತ್ರಾಭರಣವು ಕಳಚಿ ನೀರಲ್ಲಿ ಬಿದ್ದು ಹೋಯಿತು. ಕುಮುದನೆಂಬ ನಾಗನು ಅದನ್ನು ಅಪಹರಿಸಿದನು. ಕುಶನು ಅದನ್ನು ವಶಪಡಿಸಿಕೊಳ್ಳುವುದಕ್ಕಾಗಿ ಗರುಡಾಸ್ತ್ರವನ್ನು ಧನುಸ್ಸಿಗೆ ಹೂಡಿದನು. ಕುಮುದನು ಹೆದರಿ ಆಭರಣವನ್ನು ತಂದುಕೊಟ್ಟನು, ಕುಮುದನ ಪ್ರಾರ್ಥನೆಯಂತೆ ಅವನ ತಂಗಿಯಾದ ಕುಮುದ್ವತಿಯನ್ನು ಕುಶನು ವಿವಾಹವಾದನು. ಅವಳಲ್ಲಿ ಕುಶನಿಗೆ ಅತಿಥಿ ಎಂಬ ಮಗನು ಜನಿಸಿದನು. ಕುಶನು ದೇವೇಂದ್ರನ ಸಹಾಯಾರ್ಥವಾಗಿ ದುರ್ಜಯನೆಂಬ ದೈತ್ಯನೊಡನೆ ಯುದ್ಧಮಾಡಿ ಅವನನ್ನು ಸಂಹರಿಸಿ ತಾನೂ ಸಹ ಹತನಾದನು. ಕುಮುದ್ವತಿ ಸಹಗಮನ ಮಾಡಿದಳು.

ಮಂತ್ರಿಗಳು ಕುಶನ ಮಗನಾದ ಅತಿಥಿಗೆ ಪಟ್ಟವನ್ನು ಕಟ್ಟಿದರು. ಅವನು ಮಹಾಪರಾಕ್ರಮಿಯೂ, ಧರ್ಮನಿಷ್ಠನೂ ಆಗಿದ್ದನು. ಇಲ್ಲಿಗೆ 17 ಸರ್ಗಗಳು ಮುಗಿಯುತ್ತವೆ.



18ನೆಯ ಸರ್ಗದಲ್ಲಿ ಅತಿಥಿಯ ಪುತ್ರನಾದ ನಿಷಧನಿಂದ ಸುದರ್ಶನವರೆವಿಗೆ 21 ರಾಜರ ಒಂದು ಸೂಕ್ಷ್ಮದರ್ಶನವನ್ನು ಕವಿ ಮಾಡಿಸಿದ್ದಾನೆ. 19ನೆಯ ಸರ್ಗದಲ್ಲಿ ಅಗ್ನಿವರ್ಣನ ಕಾಮುಲೋಲುಪತೆ ವರ್ಣಿತವಾಗಿದೆ. ರಘುವಂಶದ ರಾಜರ ಭವ್ಯ ಆದರ್ಶಗಳೆಲ್ಲವನ್ನೂ ತೂರಿಹಾಕಿದ ಕುಲಾಂಗಾರ ಅಗ್ನಿವರ್ಣ. ಪ್ರಜೆಗಳು ದರ್ಶನವನ್ನು ಬಯಸಿದರೆ ಅಂತಃಪುರದ ಕಿಟಕಿಯಿಂದ ಕಾಲನ್ನು ಚಾಚಿ ತೋರಿಸುತ್ತಿದ್ದ ದುರ್ಮತಿ, ಅವನು ವಿಷಯಾಸಕ್ತಿಯಿಂದ ಕ್ಷಯರೋಗಕ್ಕೆ ಬಲಿಯಾಗಿ ಮೃತನಾಗುತ್ತಾನೆ.

ಅನಂತರ ಮಂತ್ರಿಗಳು ಗರ್ಭಿಣಿಯಾಗಿದ್ದ ಅವನ ರಾಣಿಗೆ ಪಟ್ಟಗಟ್ಟುತ್ತಾರೆ. 'ರಾಜ್ಞೀ ರಾಜ್ಯಂ ವಿಧಿವದಶಿಷತ್ ಭರ್ತುರವ್ಯಾಹತಾಜ್ಞಾ' ಎಂಬುದಾಗಿ ಕಾಳಿದಾಸನು ಗ್ರಂಥವನ್ನು ಸಮಾಪ್ತಿಗೊಳಿಸುತ್ತಾನೆ.

ಅಗ್ನಿವರ್ಣನ ಮಗ ಶೀಘ್ರಗನೆಂದೂ ಅವನ ಮಗ ಮರು ಎಂದೂ ವಿಷ್ಣುಪುರಾಣದಲ್ಲಿ ಹೇಳಿದೆ. ರಾಮಾಯಣದಲ್ಲಿ ಈ ಮೂವರು ಶ್ರೀರಾಮನ ಪೂರ್ವಜರಾಗಿದ್ದಾರೆ. ಕುಲಪರಂಪರೆಯಲ್ಲಿ ಒಂದೇ ಹೆಸರಿನ ಅನೇಕ ರಾಜರಿರುವುದೂ ಸಂಭವ.

ಈ ವಿಶಾಲವಾದ ಕಥಾಭಿತ್ತಿಯಲ್ಲಿ ತನ್ನ ಪ್ರತಿಭಾಕುಂಚಿಕೆಯಿಂದ ಮಹಾಕವಿ ಕಾಳಿದಾಸನು ಭವ್ಯಮನೋಹರ ಚಿತ್ರಗಳನ್ನು ರಚಿಸಿದ್ದಾನೆ. ಇವು ಎಂದೆಂದಿಗೂ ಮಾಸದ ನವನವೋನ್ಮೇಷಗಳು. ಕವಿಯು ತಾನು 'ತನುವಾಗ್ವಿಭವಃ, ಮಂದಃ ಕವಿಯಶಃ ಪ್ರಾರ್ಥೀಗಮಿಷ್ಯಾಮ್ಯುಪಹಾಸ್ಯತಾಂ' ಎಂದಿರುವುದು ವಿನಯಪೂರ್ಣವಾದ ಅವನ ಕೋಮಲ ಸ್ವಭಾವವನ್ನು ಮಾತ್ರ ವ್ಯಕ್ತಪಡಿಸುತ್ತದೆ.

ಭಾರತೀಯ ಆದರ್ಶಗಳ ಒಂದು ಉಜ್ವಲ ಪರಂಪರೆಯನ್ನು ಚಿತ್ರಿಸುವುದು ಕಾಳಿದಾಸನ ಉದ್ದೇಶವಾಗಿತ್ತೆಂದು ಕಾಣಿಸುತ್ತದೆ. ಪ್ರಖ್ಯಾತವಾದ ಸೂರ್ಯವಂಶದ ದೊರೆಗಳ ಚರಿತ್ರೆಯನ್ನಾರಿಸಿಕೊಂಡು 'ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ' ಎಂದುಕೊಂಡು ಅವನು ರಘುವಂಶ ಮಹಾಕಾವ್ಯವನ್ನು ರಚಿಸಿದ್ದಾನೆ. ಈ ದೊರೆಗಳಾದರೋ ಆಜನ್ಮಶುದ್ಧರು. ಕೆಲಸವನ್ನು ಫಲಪರ್ಯಂತವಾಗಿ ಮಾಡತಕ್ಕವರು. ಆಸಮುದ್ರಕ್ಷಿತೀಶರು, ಯಥಾವಿಧಿಯಾಗಿ ಆಹುತಾಗ್ನಿಗಳು, ಅರ್ಥಿಗಳಿಗೆ ಇಷ್ಟವಾದ್ದನ್ನರ್ಪಿಸಿ ಅರ್ಚಿಸುವವರು. ಅಪರಾಧಕ್ಕೆ ತಕ್ಕಂತೆ ದಂಡಿಸತಕ್ಕವರು. ಯಥಾಕಾಲದಲ್ಲಿ ಎಚ್ಚರಿಕೆಯಿಂದ ಪ್ರಬೋಧಗೊಳ್ಳತಕ್ಕವರು. ತ್ಯಾಗಕ್ಕಾಗಿ ಗಳಿಸತಕ್ಕವರು. ಸತ್ಯದ ರಕ್ಷಣೆಗಾಗಿ ಮಿತಭಾಷಿಗಳು. ಯಶಸ್ಸಿಗಾಗಿ ಗೆಲ್ಲಲು ಬಯಸುವವರು. ಸಂತತಿಗಾಗಿ ಗೃಹಸ್ಥರು, ಬಾಲ್ಯದಲ್ಲಿ ವಿದ್ಯಾಭ್ಯಾಸ, ಯೌವನದಲ್ಲಿ ಭೋಗಪ್ರವೃತ್ತಿ, ವಾರ್ಧಕ್ಯದಲ್ಲಿ ಮುನಿವೃತ್ತಿ, ಕಡೆಗೆ ಪರಮಾತ್ಮನ ಧ್ಯಾನಮಾಡುತ್ತಾ ದೇಹತ್ಯಾಗ—ಇವು ಅವರ ಆದರ್ಶಗಳು. ಇವು ರಾಜವೃತ್ತಿಗಳಾದರೂ ಯಥಾಯೋಗ್ಯವಾಗಿ ಪ್ರಜಾಧರ್ಮಗಳೂ ಹೌದು. ಪ್ರಜೆಗಳಿಗೆ ಶಿಕ್ಷಣವನ್ನಿತ್ತು ಆಪತ್ಕಾಲದಲ್ಲಿ ರಕ್ಷಿಸಿ ಪೋಷಿಸುತ್ತಿದ್ದ ರಾಜನನ್ನು ಪ್ರಜೆಗಳು ತಂದೆಯೆಂದೇ ಭಾವಿಸಿದ್ದರು. 'ಪಿತರಸ್ತಾಸಾಂ ಕೇವಲಂ ಜನ್ಮಹೇತವಃ'

ಹೀಗಿರುವಾಗ, ರಾಜನ ಆಜ್ಞೆಯನ್ನು ಪ್ರಜೆಗಳು ತಪ್ಪದೆ ಪಾಲಿಸುತ್ತಿದ್ದರೆಂದು ಹೇಳ
ಬೇಕಾದ್ದೇ ಇಲ್ಲ. 'ನ ವ್ಯತೀಯುಃ ಪ್ರಜಾಸ್ತಸ್ಯ ನಿಯಂತುರ್ನೇಮಿವೃತ್ತಯಃ'. ರಾಜಪ್ರಜೆಗಳ
ಇಂತಹ ಮಧುರಬಾಂಧವ್ಯವನ್ನು ಕವಿ ವರ್ಣಿಸಿ ಧರ್ಮದ ಶ್ರೇಷ್ಠತೆಯನ್ನೂ, ಅದರಿಂದಲೇ
ಅರ್ಥ ಕಾಮಗಳ ಸಿದ್ಧಿ ಎಂಬುದನ್ನೂ ವಿವಿಧ ಸಂದರ್ಭಗಳಲ್ಲಿ ಕಾಂತಾಸಮ್ಮಿತಿಯಿಂದ
ಬೋಧಿಸುತ್ತ ಹೋಗಿದ್ದಾನೆ.

ರಘುವಂಶದ ರಾಜರ ಮಧ್ಯದಲ್ಲಿ ಕಾಳಿದಾಸನ ಮುಖ್ಯದೃಷ್ಟಿಯಿರುವುದು ಶ್ರೀರಾಮನ
ಚರಿತೆಯನ್ನು ವರ್ಣಿಸುವುದರಲ್ಲಿ. ತನ್ನ ಕಾವ್ಯದಲ್ಲಿ 552 ಶ್ಲೋಕಗಳು ಎಂದರೆ ಮೂರನೇ
ಒಂದು ಭಾಗಕ್ಕಿಂತ ಅಧಿಕವಾದ ಭಾಗ ರಾಮಾಯಣಕ್ಕಾಗಿ ಮೀಸಲು. ಶ್ರೀರಾಮನು
ವಿಷ್ಣುವಿನ ಅವತಾರವೆಂದು ಕವಿಯು ದೃಢವಾಗಿ ನಂಬಿದ್ದಾನೆ. 'ಅಥವಾ ಕೃತವಾಗ್ದ್ವಾರೇ
ವಂಶೇऽಸ್ಮಿನ್ ಪೂರ್ವಸೂರಿಭಿಃ' ಎನ್ನುವಾಗ ವಾಲ್ಮೀಕಿಮುನಿಗಳೇ ಕವಿಯ ಲಕ್ಷ್ಯದಲ್ಲಿದ್ದಿರ
ಬೇಕು. ವಾಲ್ಮೀಕಿರಾಮಾಯಣವು ಕಣ್ಣುಮುಂದಿರುವಾಗ ಅದೇ ಕಥಾವಸ್ತುವನ್ನು ಸಂಕ್ಷೇಪಿಸಿ
ಚೇತೋಹಾರಿಯಾಗುವಂತೆ ಪ್ರಕಾರಾಂತರದಿಂದ ವರ್ಣಿಸುವುದು ಕಾಳಿದಾಸನಂತಹ ವರಕವಿಗೆ
ಮಾತ್ರ ಸಾಧ್ಯ.

**ರಘುವಂಶದಲ್ಲಿ ಭರತಖಂಡ** :—ಕಾಳಿದಾಸನು ಭರತಖಂಡವೆಲ್ಲವನ್ನೂ ಸಂಚರಿಸಿ
ವಿವಿಧ ಪ್ರಾಂತಗಳ ಜನರನ್ನೂ, ನದೀಪರ್ವತಾದಿಗಳನ್ನೂ ಪ್ರತ್ಯಕ್ಷವಾಗಿ ನೋಡಿರಬೇಕು. ರಘು
ವಂಶದ 4,6ಮತ್ತು 13ನೆಯ ಸರ್ಗಗಳಲ್ಲಿ ಈ ವಿಚಾರವಾಗಿ ಕೆಲವು ವಿವರಗಳು ದೊರಕುತ್ತವೆ.
4ನೆಯ ಸರ್ಗದಲ್ಲಿ ರಘುರಾಜನು ಅಯೋಧ್ಯೆಯಿಂದ ಪೂರ್ವಕ್ಕೆ ಹೊರಟು ಪ್ರದಕ್ಷಿಣಾಕಾರ
ವಾಗಿ ಭರತಖಂಡವನ್ನು ಸುತ್ತಿ ದಿಗ್ವಿಜಯವನ್ನು ನಡೆಸಿದ ವರ್ಣನೆ ಇದೆ. ಪೂರ್ವದಿಕ್ಕಿನಲ್ಲಿ
ಕೆಲವು ಜನಪದಗಳಾದ ಮೇಲೆ ಸುಹ್ಮ, ವಂಗದೇಶಗಳು ಸಿಗುತ್ತವೆ. ಕಪಿಶಾನದಿ, ಉತ್ಕಲದೇಶ,
ಮಹೇಂದ್ರಪರ್ವತ, ಕಲಿಂಗದೇಶಗಳಾದ ಮೇಲೆ ದಕ್ಷಿಣದಿಕ್ಕಿನಲ್ಲಿ ಕಾವೇರೀ, ತಾಮ್ರಪರ್ಣೀ
ನದಿಗಳೂ, ಸಹ್ಯಪರ್ವತವೂ ಬರುತ್ತವೆ. ಕೇರಳ, ಮುರಲಾನದಿ, ತ್ರಿಕೂಟ (ಸುವೇಲಪರ್ವತ),
ಅಪರಾಂತದೇಶಗಳು ಸಿಗುತ್ತವೆ. ಆಮೇಲೆ ಪಶ್ಚಿಮದಲ್ಲಿ ಪಾರಸೀಕ, ಹೂಣ, ಕಾಂಭೋಜ
ದೇಶಗಳೂ, ಉತ್ತರದಲ್ಲಿ ಹಿಮಾಲಯವೂ ವರ್ಣಿತವಾಗಿವೆ. ಹಿಮಾಲಯದಲ್ಲಿ
ಉತ್ಸವಸಂಕೇತ ಮುಂತಾದ (ಏಳು) ಕಿರಾತಗಣಗಳೊಡನೆ ರಘುರಾಜನು ಯುದ್ಧ
ಮಾಡಿದನೆಂದು ಹೇಳಿದೆ. ಅನಂತರ ಪ್ರಾಗ್ಜ್ಯೋತಿಷೇಶ್ವರನನ್ನೂ ಕಾಮರೂಪದ ರಾಜನನ್ನೂ
ಜಯಿಸಿ ರಘುರಾಜನು ಅಯೋಧ್ಯೆಗೆ ಹಿಂದಿರುಗಿದನೆಂದು ವರ್ಣಿಸಲ್ಪಟ್ಟಿದೆ.

6ನೆಯ ಸರ್ಗದಲ್ಲಿ ಇಂದುಮತೀಸ್ವಯಂವರಕ್ಕಾಗಿ ವಿದರ್ಭರಾಜಧಾನಿಯಾದ
ಕುಂಡಿನಪುರಕ್ಕೆ ಅನೇಕ ರಾಜರು ಆಗಮಿಸುತ್ತಾರೆ ಅಲ್ಲಿ ಮಗಧ, ಅಂಗ, ಅವಂತಿ, ಅನೂಪ,
ಶೂರಸೇನ, ಕಲಿಂಗ, ಪಾಂಡ್ಯ ಮತ್ತು ಉತ್ತರ ಕೋಸಲಗಳ ನಾಮನಿರ್ದೇಶ ಉಂಟು.
13ನೆಯ ಸರ್ಗದಲ್ಲಿ ಲಂಕೆಯಿಂದ ಅಯೋಧ್ಯವರೆಗಿನ ವರ್ಣನೆಗಳಲ್ಲಿ ಮಾಲ್ಯವತ್ ಪರ್ವತ,
ಪಂಪಾಸರಸ್ಸು, ಗೋದಾವರೀ, ಚಿತ್ರಕೂಟಗಿರಿ, ಯಮುನಾ, ಸರಯೂಗಳ ಹೆಸರು ಬರುತ್ತದೆ.



ವಿವಿಧ ದೇಶದ ಉಡುಗೆ ಜನರ ತೊಡುಗೆಗಳನ್ನೂ ಅಲ್ಲಲ್ಲಿ ಪ್ರಸಿದ್ಧವಾದ ಆನೆ, ಕುದುರೆ ಮುಂತಾದ ಪ್ರಾಣಿಗಳನ್ನೂ, ತಾಳೆ, ಖರ್ಜೂರ, ಶ್ರೀಗಂಧ, ಕೇದಿಗೆ, ಕುಂಕುಮಕೇಸರಿ, ಮೆಣಸು, ಏಲಕ್ಕಿ, ಕಬ್ಬು, ಭತ್ತ—ಮೊದಲಾದುವನ್ನೂ ಆಯಾ ದೇಶಗಳಿಗೆ ಸಂಬಂಧಿಸಿದಂತೆ ಕಾಳಿದಾಸನು ವರ್ಣಿಸಿದ್ದಾನೆ.

ಕಾಳಿದಾಸನು ಕೊಡುವ ಉಪಮಾನಗಳು ಎಷ್ಟು ಅನುರೂಪವಾಗಿರುತ್ತವೆಯೆಂಬುದಕ್ಕೆ ಕೆಲವು ನಿದರ್ಶನಗಳನ್ನೀಯಬಹುದು. ಆತ ಉಪಮಾನದೊಂದಿಗೇ ಗ್ರಂಥವನ್ನಾರಂಭಿಸುತ್ತಾನೆ—

1. ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥ 1

ಪಾರ್ವತೀಪರಮೇಶ್ವರರು ವಾಗರ್ಥಗಳಂತೆ ಅವಿನಾಭಾವದಿಂದ ಕೂಡಿದ್ದಾರೆ. 'ನಿತ್ಯಃ ಶಬ್ದಾರ್ಥಸಂಬಂಧಃ' ಎಂಬ ದರ್ಶನವನ್ನು ಕವಿಯು ಅಂಗೀಕರಿಸಿದ್ದಾನೆ. ಅರ್ಧನಾರೀಶ್ವರರಿಗೆ ಇದಕ್ಕಿಂತ ಅನುರೂಪವಾದ ಇನ್ನೊಂದು ಹೋಲಿಕೆ ದುರ್ಲಭ.

ಕಾವ್ಯಾರಂಭದಲ್ಲಿಯೇ '**ವಾಕ್**' ಎಂದು ಸರಸ್ವತಿಯ ಸ್ಮರಣೆಮಾಡಿರುವ **ಜಾಣ್ಮೆ**ಯನ್ನು ಅವಲೋಕಿಸಬೇಕು. ಮುದನೆಯ **ಉದ್ದೇಶ** '**ವಾಗರ್ಥಪ್ರತಿಪತ್ತಿ**' 'ಶಬ್ದಾರ್ಥೌ ಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ' ಎಂಬ ಮಾಘನ ನುಡಿಯನ್ನು ಗಮನಿಸಿದಾಗ ಈ ಉದ್ದೇಶ ಎಷ್ಟು ಔಚಿತ್ಯಪೂರ್ಣವಾಗಿದೆಯೆಂದು ತಿಳಿಯುತ್ತದೆ.

2. ಮಾವಿನ ಹೂವಿನ ಕಾಲ **ಕಳೆದು ಹಣ್ಣು ಬಿಟ್ಟಾಗ** ಎಲ್ಲರಿಗೂ ಹಣ್ಣಿನಲ್ಲಿ ಕುತೂಹಲ. ಹೂವಿನಲ್ಲಿ ಅವರ ಚಿಂತೆಯಿರುವುದಿಲ್ಲ. **ಹಾಗೆ ದಿಲೀಪನ ಕಾಲ** ಕಳೆದು ರಘು ಸಿಂಹಾಸನವನ್ನೇರಿದಾಗ ಪ್ರಜೆಗಳಿಗೆ ಅವನಲ್ಲಿ ಪ್ರೀತಿ—

ಮಂದೋತ್ಕಂಠಾಃ ಕೃತಾಸ್ತೇನ ಗುಣಾಧಿಕತಯಾ ಗುರೌ ।
ಫಲೇನ ಸಹಕಾರಸ್ಯ ಪುಷ್ಪೋದ್ಗಮ ಇವ ಪ್ರಜಾಃ ॥ 4–9

3. ರಘುವಿನ ಮಗನಾದ ಅಜಕುಮಾರನು ತಂದೆಯಂತೆಯೇ ತೇಜಸ್ವಿ, ಅವನಂತೆಯೇ ಪರಾಕ್ರಮಿ, ಯಾವ ನ್ಯೂನತೆಯೂ ಇಲ್ಲ—

ಪ್ರವರ್ತಿತೋ ದೀಪ ಇವ ಪ್ರದೀಪಾತ್ ॥ 5–37

4. ಮಗನಿಗೆ ರಾಜ್ಯವನ್ನು ವಹಿಸಿಕೊಟ್ಟ ಮೇಲೆ ರಘುವಿಗೆ ರಾಜಲಕ್ಷ್ಮಿಯು ಸೊಸೆಯಂತಾದಳು. ಅವನ ಮನಸ್ಸು ವಿಚಲಿತವಾಗಲಿಲ್ಲ.

ಸಮಪಾಸ್ಯತ ಪುತ್ರಭೋಗ್ಯಯಾ ಸ್ನುಷಯೇವಾವಿಕೃತೇಂದ್ರಿಯಃ ಶ್ರಿಯಾ । 8–14

5. ಒಬ್ಬನೇ ಮಹಾವಿಷ್ಣು ದಶರಥಪತ್ನಿಯರ ಗರ್ಭಗಳಲ್ಲಿ ವಿಭಕ್ತನಾಗಿ ನೆಲಸಿದನು. ತಿಳಿನೀರಿನಲ್ಲಿ ಚಂದ್ರನ ಪ್ರತಿಬಿಂಬಗಳಂತೆ—

ವಿಭಕ್ತಾತ್ಮಾ ಪ್ರಭುಸ್ತಾಸಾಂ ಏಕಃ ಕುಕ್ಷಿಷ್ವನೇಕಧಾ ।
ಉವಾಸ ಪ್ರತಿಮಾಚಂದ್ರಃ ಪ್ರಸನ್ನಾನಾಮಪಾಮಿವ ॥ 10–65

6. ಶಿಶುವಾದ ರಾಮನು ತಾಯಿಯ ಬಳಿ ಮಲಗಿದ್ದನು. ಬಾಣಂತಿಯಾದ ಕೌಸಲ್ಯೆ ಕಮಲದಿಂದೊಡಗೂಡಿದ ಜಾಹ್ನವಿಯಂತೆ ಕಾಣಿಸಿದಳು—

ಶಯ್ಯಾಗತೇನ ರಾಮೇಣ ಮಾತಾ ಶಾತೋದರೀ ಬಭೌ ।
ಸೈಕತಾಂಭೋಜಬಲಿನಾ ಜಾಹ್ನವೀವ ಶರತ್ಕೃಶಾ ॥ 10-69

ಜಾಹ್ನವಿಯಲ್ಲಿ ಜನಿಸಿದ ತಾವರೆ ಜಾಹ್ನವಿಗೇ ಅರ್ಪಿತವಾಗಿದೆ "ಶಾತೋದರಿ" ಎಂಬ ವಿಶೇಷಣದಲ್ಲಿ ಎಷ್ಟು ಔಚಿತ್ಯವಿದೆಯೆಂಬುದನ್ನು ಗಮನಿಸಬೇಕು.

7. ಜಾನಕಿಯನ್ನು ಅರಸುತ್ತ ಬಂದ ಆಂಜನೇಯನಿಗೆ ಅಶೋಕವನದಲ್ಲಿ ರಾಕ್ಷಸೀ ಪರಿವೃತಳಾದ ಸೀತೆ ಗೋಚರಿಸಿದಳು —

ಜಾನಕೀ ವಿಷವಲ್ಲೀಭಿಃ ಪರೀತೇವ ಮಹೌಷಧಿಃ । 12-61

8. ಸೂರ್ಯದೇವತಾಕವಾದ ಸ್ವರಸಂಸ್ಕೃತ ಗಾಯತ್ರೀಮಂತ್ರವನ್ನು ಸೂರ್ಯನಿಗೆ ಅರ್ಪಿಸುವಂತೆ ಸೀತೆಯನ್ನು ಶ್ರೀರಾಮನಿಗೆ ಅರ್ಪಿಸಲು ವಾಲ್ಮೀಕಿಮುನಿಗಳು ಬಂದರು—

ಸ್ವರಸಂಸ್ಕಾರವತ್ಯಾಸೌ ಪುತ್ರಾಭ್ಯಾಮಥ ಸೀತಯಾ ।
ಋಚೇವೋದರ್ಚಿಷಂ ಸೂರ್ಯಂ ರಾಮಂ ಮುನಿರುಪಸ್ಥಿತಃ । 15-76

ಅಜವಿಲಾಪ, ಸೀತಾಪರಿತ್ಯಾಗ—ಇವು ಕರುಳನ್ನು ಕೊರೆಯುವ ಎರಡು ಶೋಕದೃಶ್ಯಗಳು, ಇಂದುಮತಿಯ ಮರಣದಿಂದ ಅಜಕುಮಾರನಿಗೆ ಸರ್ವಸ್ವವೂ ನಾಶವಾಯಿತು—

ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ ।
ಕರುಣಾವಿಮುಖೇನ ಮೃತ್ಯುನಾ ಹರತಾ ತ್ವಾಂ ವದ ಕಿಂ ನ ಮೇ ಹೃತಂ॥ 8-67

ವಸಿಷ್ಠರು ಶಿಷ್ಯನ ಮೂಲಕ ಹೇಳಿಕಳಿಸಿದ ಸಾಂತ್ವನೆಯು ಫಲಕಾರಿಯಾಗಲಿಲ್ಲ. ಅವರ ಉಪದೇಶವು ಆ ಶಿಷ್ಯನೊಡನೆ ಗುರುಗಳ ಬಳಿಗೆ ಹಿಂದಿರುಗಿ ಹೋಯಿತು ।

ತದಲಬ್ಧಪದಂ ಹೃದಿ ಶೋಕಘನೇ ಪ್ರತಿಯಾತಮಿವಾಂತಿಕಮಸ್ಯ ಗುರೋಃ ।
8-91

ಅಜನ ವಿಷಯದಲ್ಲಿ ಉಪದೇಶವು ವಿಡಂಬನೆಯೇ ಆಯಿತೆಂಬುದನ್ನು ಚಿತ್ರಿಸಲು ತೋಟಕ ವೃತ್ತವು ಎಷ್ಟು ಸಹಕಾರಿಯಾಗಿದೆಯೆಂಬುದನ್ನು ಗಮನಿಸಬೇಕು. ಪತ್ನೀಮರಣದಿಂದ ಪತಿಯು ಶೋಕಿಸುವುದು, ಕಡೆಗೆ ಪ್ರಾಣವನ್ನೇ ತೊರೆಯುವುದು ಕಾವ್ಯಸೃಷ್ಟಿಯಲ್ಲಿ ಒಂದು ಅಪೂರ್ವಪ್ರಯೋಗ.

ಅಜನ ವಿಲಾಪ ದುರಂತಗಳನ್ನು ಕೇಳಿ ಓದುಗರ ಹೃದಯವು ದುಃಖ ಭಾರದಿಂದ ಕುಸಿಯುತ್ತದೆ. ಸೂಕ್ಷ್ಮವೇದಿಯಾದ ಕವಿ ಇದನ್ನು ಬಲ್ಲನು, ಸಹಾನುಭೂತಿಯಿಂದ ಓದುಗರನ್ನು ಸಂತೈಸುತ್ತ ದ್ರುತವಿಲಂಬಿತವೃತ್ತ, ಯಮಕಗಳಿಂದ ನೂತನವಾದ ಇನ್ನೊಂದು ಪ್ರಪಂಚಕ್ಕೆ ಅವರನ್ನು ಕರೆದೊಯ್ಯುವ ಜಾಣ್ಮೆಯನ್ನು ಮುಂದಿನ ಸರ್ಗದಲ್ಲಿ ಕಾಣಬಹುದು—

ಪಿತುರನಂತರಮುತ್ತರಕೋಸಲಾನ್ ಸಮಧಿಗಮ್ಯ ಸಮಾಧಿಜಿತೇಂದ್ರಿಯಃ।
ದಶರಥಃ ಪ್ರಶಶಾಸ ಮಹಾರಥೋ ಯಮವತಾಮವತಾಂ ಚ ಧುರಿ ಸ್ಥಿತಃ ॥ 9-1



ನಂದಿಗ್ರಾಮದ ಬಳಿ ಶ್ರೀರಾಮನೊಡನೆ ಬಂದಿಳಿದ ಸೀತಾದೇವಿಯ ಪಾದಕ್ಕೆ ಜಟಾಧಾರಿಯಾದ ಭರತನು ತಲೆಬಾಗಿ ನಮಸ್ಕರಿಸಿದ್ದಾನೆ. ಪ್ರೇಮಯಾಚನೆಗಾಗಿ ಲಂಕೇಶ್ವರನು ಕಾಲಿಗೆ ನಮಸ್ಕರಿಸಿದಾಗ 'ಚರಣೇನಾಪಿ ಸವ್ಯೇನ ನ ಸ್ಪೃಶಾಮಿ ನಿಶಾಚರಂ' ಎಂದು ಧಿಕ್ಕರಿಸಿದ ದೇವಿಯ ಚರಣಯುಗಳ, ಅಣ್ಣನಿಗಾಗಿ ಹದಿನಾಲ್ಕು ವರ್ಷ ವ್ರತನಿಷ್ಠನಾಗಿದ್ದ ಭರತನ ಜಟೆ ಪವಿತ್ರತೆಯಲ್ಲಿ ಯಾವುದು ಅಧಿಕ ?

ಲಂಕೇಶ್ವರಪ್ರಣತಿಭಂಗದೃಢವ್ರತಂ ತತ್
ವಂದ್ಯಂ ಯುಗಂ ಚರಣಯೋರ್ಜನಕಾತ್ಮಜಾಯಾಃ ।
ಜ್ಯೇಷ್ಠಾನುವೃತ್ತಿಜಟಿಲಂ ಚ ಶಿರೋಽಸ್ಯ ಸಾಧೋಃ
ಅನ್ಯೋನ್ಯಪಾವನಮಭೂದುಭಯಂ ಸಮೇತ್ಯ ॥ 13—78

ಕಾಳಿದಾಸನ ಒಂದು ವಸ್ತುಕಥನವೂ ಮನೋಜ್ಞವಾದ ಕಾವ್ಯವಾಗುತ್ತದೆ.

ರಾಮ ಇತ್ಯಭಿರಾಮೇಣ ವಪುಷಾ ತಸ್ಯ ಚೋದಿತಃ ।
ನಾಮಧೇಯಂ ಗುರುಶ್ಚಕ್ರೇ ಜಗತ್ಪ್ರಥಮಮಂಗಲಂ ॥

'ಜಗತ್ಪ್ರಥಮಮಂಗಲಮ್', ಎಂಬುದು ಎಷ್ಟು ಸೊಗಸಾದ ಪದರಚನೆ! 5ನೆಯ ಸರ್ಗದ ಕಡೆಯಲ್ಲಿ ವೈತಾಲಿಕರು ಪಠಿಸುವ ಸುಪ್ರಭಾತಶ್ಲೋಕಗಳು ವೈದರ್ಭೀರೀತಿಯ ಪ್ರಥಮೋದಾಹರಣೆಗಳು. ಪದಲಾಲಿತ್ಯ, ಅರ್ಥಸೌಂದರ್ಯ, ಪ್ರಕೃತಿಯ ಸೂಕ್ಷ್ಮವೀಕ್ಷಣೆಗಳಿಂದ ಮನೋಹರವಾಗಿವೆ. ರಘುವಂಶವೆಂಬ ದಿವ್ಯಸೌಧದ ಸುವರ್ಣಕಲಶಗಳು ಇವು.

ಸುಭಾಷಿತಗಳು :—

1. ಪ್ರತಿಬಧ್ನಾತಿ ಹಿ ಶ್ರೇಯಃ ಪೂಜ್ಯಪೂಜಾವ್ಯತಿಕ್ರಮಃ । 1—79
2. ಅಭಿತಪ್ತಮಯೋಽಪಿ ಮಾರ್ದವಂ ಭಜತೇ ಕೈವ ಕಥಾ ಶರೀರಿಷು । 8-43
3. ಪರಲೋಕಜುಷಾಂ ಸ್ವಕರ್ಮಭಿರ್ಗತಯೋ ಭಿನ್ನಪಥಾ ಹಿ ದೇಹಿನಾಂ । 8—45
4. ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವಿತಮುಚ್ಯತೇ ಬುಧೈಃ । 8—87
5. ಅವ್ಯಾಕ್ಷೇಪೋ ಭವಿಷ್ಯಂತ್ಯಾಃ ಕಾರ್ಯಸಿದ್ಧೇರ್ಹಿ ಲಕ್ಷಣ । 10—6
6. ತೇಜಸಾಂ ಹಿ ನ ವಯಃ ಸಮೀಕ್ಷ್ಯತೇ । 11—1
7. ಕಾಲೇ ಖಲು ಸಮಾರಬ್ಧಾಃ ಫಲಂ ಬಧ್ನಂತಿ ನೀತಯಃ । 12—69
8. ಯಶೋಧನಾನಾಂ ಹಿ ಯಶೋ ಗರೀಯಃ । 14—35

ಕವಿಪ್ರಶಂಸೆ

ನಿರ್ಗತಾಸು ನ ವಾ ಕಸ್ಯ ಕಾಲಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರಸಾರ್ದ್ರಾಸು ಮಂಜರೀಷ್ವಿವ ಜಾಯತೇ ॥—ಬಾಣ.

ಕವಯಃ ಕಾಲಿದಾಸಾದ್ಯಾಃ ಕವಯೋ ವಯಮಪ್ಯಮೀ ।
ಪರ್ವತೇ ಪರಮಾಣೌ ಚ ಪದಾರ್ಥತ್ವಂ ಪ್ರತಿಷ್ಠಿತಂ ॥

ಪುರಾ ಕವೀನಾಂ ಗಣನಾಪ್ರಸಂಗೇ ಕನಿಷ್ಠಿಕಾಧಿಷ್ಠಿತಕಾಲಿದಾಸಾ ।
ಅದ್ಯಾಪಿ ತತ್ತುಲ್ಯಕವೇರಭಾವಾತ್ ಅನಾಮಿಕಾ ಸಾರ್ಥವತೀ ಬಭೂವ ॥
—ಹರಿಹರಾವಳಿ

ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ ॥

—ಜಯದೇವ (ಪ್ರಸನ್ನರಾಘವ)

ಕಾಲಿದಾಸಗಿರಾಂ ಸಾರಂ ಕಾಲಿದಾಸಃ ಸರಸ್ವತೀ ।
ಚತುರ್ಮುಖೋಽಥವಾ ಸಾಕ್ಷಾತ್ ವಿದುರ್ನಾನ್ಯೇತು ಮಾದೃಶಾಃ ॥

—ಮಲ್ಲಿನಾಥ

The final proof that the Dynasty of Raghu is a very neat poem, is this: no one who once reads it can have it alone there after.

—Prof. A. W. Ryder.

## 2. ಕುಮಾರಸಂಭವ

ಇದು ಕಾಳಿದಾಸನ ಇನ್ನೊಂದು ಮಹಾಕಾವ್ಯ. ಈ ಕಾವ್ಯದಲ್ಲಿ 17 ಸರ್ಗಗಳೂ, 1096 ಶ್ಲೋಕಗಳೂ ಇವೆ. ಕಥೆ ಪೌರಾಣಿಕ. ಪಾರ್ವತೀಪರಮೇಶ್ವರರ ವಿವಾಹ, ಕುಮಾರಸ್ವಾಮಿಯ ಜನನ, ತಾರಕಾಸುರವಧೆ—ಕಥಾವಸ್ತು. ಈ ವೃತ್ತಾಂತವು ರಾಮಾಯಣ, ಮಹಾಭಾರತ, ಶಿವಪುರಾಣ, ಸ್ಕಾಂದಪುರಾಣ, ಬ್ರಹ್ಮಪುರಾಣ—ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿದೆ.

ಇವುಗಳಲ್ಲಿ ಕುಮಾರಸಂಭವ ಶಿವಪುರಾಣಗಳ ಪ್ರಕೃತ ಕಥಾಸಂಗತಿಗಳಲ್ಲಿ ಹೆಚ್ಚಿನ ಸಾಮ್ಯವಿದೆ. ಅಲ್ಲದೆ ಪದಪ್ರಯೋಗಗಳಲ್ಲಿಯೂ ಗಮನೀಯವಾದ ಸಾದೃಶ್ಯ ಉಂಟು. ನಾಲ್ಕು ನಿದರ್ಶನಗಳನ್ನು ಕೆಳಗೆ ಕೊಟ್ಟಿದೆ :

| | ಕುಮಾರಸಂಭವ | ಶಿವಪುರಾಣ |
|---|---|---|
| 1. | ಸ್ಥಿತಃ ಪೃಥಿವ್ಯಾ ಇವ ಮಾನದಂಡಃ | ಮಾನದಂಡ ಇವ ಕ್ಷಿತೇಃ |
| 2. | ಉಮೇತಿ ಮಾತ್ರಾ ತಪಸೋ ನಿಷಿದ್ಧಾ | ಉಮೇತಿ ತಪಸೋ ಮಾತ್ರಾ ನಿಷಿದ್ಧಾ |
| 3. | ವಿಷವೃಕ್ಷೋಽಪಿ ಸಂವರ್ಧ್ಯ<br>ಸ್ವಯಂ ಛೇತ್ತುಮಸಾಂಪ್ರತಂ | ವಿಷವೃಕ್ಷೋಽಪಿ ಸಂವರ್ಧ್ಯ<br>ಸ್ವಯಂ ಛೇತ್ತುಮಸಾಂಪ್ರತಂ |
| 4. | ಅದ್ಯಪ್ರಭೃತ್ಯವನತಾಂಗಿ ತವಾಸ್ಮಿ ದಾಸಃ | ಅದ್ಯಪ್ರಭೃತಿ ತೇ ದಾಸಃ |

ಈ ಹೋಲಿಕೆ ಆಕಸ್ಮಿಕವಾದುದಲ್ಲ. ಶಿವಪುರಾಣದ ಈ ಭಾಗವು ಪ್ರಕ್ಷಿಪ್ತವಾದುವೆಂದೂ ಪ್ರಕ್ಷೇಪಕಾರನು ಕಾಳಿದಾಸನ ಕೃತಿಯಿಂದ ಇದನ್ನು ಆಯ್ದು ಸೇರಿಸಿದ್ದಾನೆಂದೂ ವಿದ್ವಾಂಸರು ನಿಶ್ಚಯಿಸಿದ್ದಾರೆ.

ಎಂಟು ಸರ್ಗಗಳು ಮಾತ್ರ ಕಾಳಿದಾಸನ ರಚನೆಯೆಂದು ಅಂಗೀಕರಿಸಿದರೂ, ಇದೊಂದು ಮಹಾಕಾವ್ಯವೆನ್ನಲು ಅಡ್ಡಿಯಿಲ್ಲ. ಈಶಾನಸಂಹಿತಾ ಎಂಬ ಗ್ರಂಥದಲ್ಲಿ ಎಂಟು ಸರ್ಗಗಳಿದ್ದರೂ ಮಹಾಕಾವ್ಯವೆನಿಸುತ್ತದೆಯೆಂಬ ಲಾಕ್ಷಣಿಕ ಸಮ್ಮತಿಯನ್ನು ಹಿಂದೆ ತಿಳಿಸಿದೆ.

ಅದು ಮಾತ್ರವೇ ಅಲ್ಲ. ಕುಮಾರಸಂಭವವು ಮಧುರಭಾವಗಳ ಆಕರ. ಇದಕ್ಕೆ ಸರಿದೂಗುವ ಇನ್ನೊಂದು ಲಲಿತಮನೋಜ್ಞಕಾವ್ಯ ದೊರೆಯದು. ಶ್ರೀ ಅರವಿಂದರು



ಕುಮಾರಸಂಭವದಲ್ಲಿ ಭವ್ಯತೆಯೊಡನೆ ರಮ್ಯತೆಯೂ, ಭಾವೋನ್ನತಿಯೊಡನೆ ನಾದದ ಸೊಗಸೂ, ಸ್ಫುಟವಾದ ವರ್ಣನಾವಿನ್ಯಾಸದೊಡನೆ ಇಂದ್ರಿಯಾರ್ಥಗಳ ರಮ್ಯತೆಯೂ ಮಿಲನಗೊಂಡು ಪೂರ್ಣತೆಯು ಪರಾಕಾಷ್ಠೆಯನ್ನು ಮುಟ್ಟಿದೆ. ಅದರ ಮಟ್ಟಕ್ಕೇರುವುದು ಕಾಳಿದಾಸನಿಂದ ಹಿಂದೆಯೇ ಆಗಲಿ ಅನಂತರವೇ ಆಗಲಿ ಮತ್ತಾರಿಗೂ ಸಾಧ್ಯವಾಗಿಲ್ಲ" ಎಂದಿದ್ದಾರೆ. ಡಾ॥ ಕೀತ್ ಅವರು "ಕುಮಾರಸಂಭವದಲ್ಲಿ ಮೇಘದೂತಕ್ಕಿಂತ ಹೆಚ್ಚಿನ ವೈವಿಧ್ಯವೂ, ಕಲ್ಪನಾಶಕ್ತಿಯ ಉಜ್ಜ್ವಲತೆಯೂ, ಗಾಢವಾದ ಭಾವಮಾಧುರ್ಯವೂ ನೆಲಸಿವೆ" ಎಂದಿದ್ದಾರೆ.

ಉತ್ತಮದೇವತೆಗಳಲ್ಲಿ ಏಕಾಂತವಿಹಾರದ ವರ್ಣನೆ ಅನುಚಿತವೆಂದೂ ಅದು ಅಶ್ಲೀಲತಾ ದೋಷವಾಗುವುದೆಂದೂ ಕಾವ್ಯಮೀಮಾಂಸಕರು ಹೇಳಿದ್ದಾರೆ. ಈ ದೃಷ್ಟಿಯಲ್ಲಿ ಪಾರ್ವತೀಪರಮೇಶ್ವರರ ಶೃಂಗಾರದ ವರ್ಣನೆ ಅನುಚಿತವಾಗುತ್ತದೆ. ವ್ಯಾಖ್ಯಾಕಾರರಾದ ದಕ್ಷಿಣಾವರ್ತನಾಥ, ಜೀವಾನಂದ, ಮಾಧವ ಪಂಡಿತರು ಇದಕ್ಕಾಗಿ ಕಾಳಿದಾಸನನ್ನು ಆಕ್ಷೇಪಿಸಿದ್ದಾರೆ. ಅರುಣಗಿರಿನಾಥನು ಈ ಆಕ್ಷೇಪವನ್ನೊಪ್ಪುವುದಿಲ್ಲ. ಅವನು "ಮಹಾನಟರಾದ ಉಮಾಮಹೇಶ್ವರರು ಲೌಕಿಕ ನಾಯಕನಾಯಿಕೆಯರ ವ್ಯವಹಾರವನ್ನು ನಟಿಸಿದ್ದಾರೆ, ಅದರಲ್ಲಿ ಪರಮಾರ್ಥಬುದ್ಧಿಯನ್ನಿಟ್ಟವರಿಗೆ ದೋಷವಾಗಿ ಕಾಣುತ್ತದೆ. ಹಾಗಿಲ್ಲದೆ ಅದು ಲೀಲಾಮಾತ್ರವೆಂದು ಭಾವಿಸಿದವರಿಗೆ ಈ ವರ್ಣನೆಯು ಉಮಾಮಹೇಶ್ವರಸ್ತೋತ್ರವೆನಿಸುತ್ತದೆ" ಎಂದಿದ್ದಾನೆ. ಮಲ್ಲಿನಾಥನು ತಟಸ್ಥನಾಗಿದ್ದಾನೆ. ಆನಂದವರ್ಧನಾಚಾರ್ಯನು ಈ ಬಗೆಯ ಶೃಂಗಾರವರ್ಣನೆಗಳಲ್ಲಿ ಅನೌಚಿತ್ಯವಿದೆಯೆಂದೂ ಆದರೆ ಮಹಾಕವಿಗಳ ಪ್ರತಿಭಾಶಕ್ತಿಯಿಂದ ತಿರಸ್ಕೃತವಾಗಿ ಅದು ಗೋಚರಿಸುವುದಿಲ್ಲವೆಂದೂ, ಹೇಳುತ್ತಾನೆ. ಕಾಳಿದಾಸನ ಅನಂತರದಲ್ಲಿ ಲಕ್ಷಣಕಾರರು ಹಾಕಿಕೊಂಡ ನಿಯಮಗಳಿವು. ರಾಮಾಯಣ, ಭಾರತ, ಭಾಗವತ ಮುಂತಾದ ಪುರಾಣಗಳಲ್ಲಿ ದೇವತಾವಿಷಯಕವಾದ ಶೃಂಗಾರಭಾವದ ವರ್ಣನೆಯಿದೆಯೆಂಬುದನ್ನು ಗಮನಿಸಬಹುದು.

**ಕಥಾಸಾರಾಂಶ** : 1ನೆಯ ಸರ್ಗದಲ್ಲಿ ಹಿಮಾಲಯದ ವರ್ಣನೆ ಇದೆ. ಹಿಮಾಲಯನು ಪರ್ವತಾತ್ಮನಾಗಿ ಪೂರ್ವಾಪರತೋಯನಿಧಿಗಳನ್ನು ವ್ಯಾಪಿಸಿ ಪೃಥಿವಿಯನ್ನಳೆಯಲು ಹೊರಟಿರುವ ಅಳತೆಗೋಲಿನಂತೆ ಇದ್ದಾನೆ. ಅವನು ದೇವತೆಗಳ ವಿಹಾರಭೂಮಿಯಾಗಿದ್ದಾನಲ್ಲದೆ ದೇವತಾತ್ಮನಾಗಿ ಗೃಹಸ್ಥನಾಗಿದ್ದಾನೆ. ಅವನ ಪತ್ನಿ ಮೇನಾ, ಮೈನಾಕನು ಮಗ, ಸತೀದೇವಿಯು ದಕ್ಷಯಜ್ಞದಲ್ಲಿ ದೇಹತ್ಯಾಗ ಮಾಡಿ ಮೇನೆಯ ಗರ್ಭದಿಂದ ಅವತರಿಸಿ ಪಾರ್ವತಿ, ಉಮಾ ಎಂಬ ಹೆಸರುಗಳನ್ನು ಪಡೆಯುತ್ತಾಳೆ. ಸತೀವಿರಹವಾದ ಮೇಲೆ ಪರಮೇಶ್ವರನು ಹಿಮಾಲಯದ ಒಂದು ಶಿಖರದಲ್ಲಿ 'ಕೇನಾಪಿ ಕಾಮೇನ ತಪಶ್ಚಚಾರ' ದಿವ್ಯಸುಂದರಿಯಾಗಿ ಬೆಳೆದ ಉಮೆಯನ್ನು ಕಂಡು ಒಮ್ಮೆ ನಾರದಮುನಿಗಳು 'ಈಕೆ ಮುಂದೆ ಪ್ರೇಮದಿಂದ ಹರನ ಶರೀರಾರ್ಧಹರೆಯಾಗುವಳು' ಎಂದು ಹಿಮವಂತನಿಗೆ ತಿಳಿಸುತ್ತಾರೆ. ತಾನಾಗಿ ಹೋಗಿ ಆ ದೇವದೇವನನ್ನು ಯಾಚಿಸಿದರೆ ಅವನು ಪಾರ್ವತಿಯನ್ನು ವಿವಾಹವಾಗಲು ಸಮ್ಮತಿಸದಿರಬಹುದೆಂಬ ಶಂಕೆಯಿಂದ ಹಿಮವಂತನು ಆ ವಿಷಯದಲ್ಲಿ ತಟಸ್ಥನಾಗುತ್ತಾನೆ. ಆದರೂ ಅಂತರಂಗದ

ಒಂದು ಆಸೆಯಿಂದಲೋ ಏನೋ, ಶಿವನ ತಪಶ್ಚರಣೆಗೆ ಸಹಾಯಕಳಾಗಿರುವಂತೆ ಮಗಳನ್ನು ನಿಯಮಿಸುತ್ತಾನೆ. ಆಕೆ ಶಿವನಿಗಾಗಿ ಹೂಗಳನ್ನು ಬಿಡಿಸಿಕೊಡುತ್ತ, ನೆಲವನ್ನು ಸಾರಿಸುತ್ತ ನೀರನ್ನು, ದರ್ಭೆಗಳನ್ನು ತರುತ್ತ ಭಕ್ತಿಯಿಂದ ಈಶ್ವರನನ್ನು ಸೇವಿಸುತ್ತಾಳೆ—

ಅವಚಿತಬಲಿಪುಷ್ಪಾ ವೇದಿಸಮ್ಮಾರ್ಗದಕ್ಷಾ
ನಿಯಮವಿಧಿಜಲಾನಾಂ ಬರ್ಹಿಷಾಂ ಚೋಪನೇತ್ರೀ ।
ಗಿರಿಶಮುಪಚಚಾರ ಪ್ರತ್ಯಹಂ ಸಾ ಸುಕೇಶೀ
ನಿಯಮಿತಬಲಿಖೇದಾ ತಚ್ಛಿರಶ್ಚಂದ್ರಪಾದೈಃ ॥ 1-60.

2ನೇ ಸರ್ಗದಲ್ಲಿ ತಾರಕಾಸುರನಿಂದ ಪೀಡಿತರಾದ ದೇವತೆಗಳು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಸ್ತುತಿಸುತ್ತಾರೆ. ಆತನು ಪ್ರತ್ಯಕ್ಷನಾಗಿ ಶಿವನ ಅಂಶದಿಂದ ಜನಿಸುವ ಸೇನಾನಿ ತಾರಕನನ್ನು ಸಂಹರಿಸಬಲ್ಲನೆಂದೂ, ಆದ್ದರಿಂದ ಸಂಯಮಸ್ತಿಮಿತನಾದ ಶಿವನ ಮನಸ್ಸು ಉಮೆಯ ಸೌಂದರ್ಯಕ್ಕೆ ಮುಗ್ಧವಾಗುವಂತೆ ಮಾಡಿರೆಂದೂ ಹೇಳುತ್ತಾನೆ. ಅದಕ್ಕಾಗಿ ದೇವೇಂದ್ರನು ಮನ್ಮಥನನ್ನು ಸ್ಮರಿಸಿಕೊಳ್ಳಲು, ಅವನು ರತಿ ವಸಂತರೊಡನೆ ಆಗಮಿಸುತ್ತಾನೆ. 3ನೆಯ ಸರ್ಗದಲ್ಲಿ ಇಂದ್ರನ ಕೋರಿಕೆಯಂತೆ ಮನ್ಮಥನು ತನ್ನ ಪ್ರತಾಪವನ್ನು ಮೆರೆಸಲು ಪರಮೇಶ್ವರನ ತಪೋವನಕ್ಕೆ ತೆರಳುತ್ತಾನೆ. ವಸಂತಋತುವು ವಿಜೃಂಭಿಸುತ್ತದೆ. ಪಾರ್ವತಿಯು ಶಿವನ ಸೇವೆಯಲ್ಲಿ ತೊಡಗಿರುವಾಗ ಸಮಯವನ್ನು ಕಾದು ಮನ್ಮಥನು ಶಿವನ ಮೇಲೆ ಪುಷ್ಪಬಾಣವನ್ನು ಹೂಡುತ್ತಾನೆ. ಹರನ ಮನಸ್ಸು ಸ್ವಲ್ಪ ವಿಕೃತವಾಗುತ್ತದೆ. ಈ ವಿಕಾರಕ್ಕೆ ಕಾರಣವೇನೆಂದು ಸುತ್ತಲೂ ನೋಡುತ್ತಿರಲು ಹರನ ದೃಷ್ಟಿ ಮನ್ಮಥನ ಮೇಲೆ ಬೀಳುತ್ತದೆ. ಒಡನೆಯೇ ಅವನ ತೃತೀಯ ನೇತ್ರದಿಂದ ಅಗ್ನಿಯು ಸಿಡಿದು ಮನ್ಮಥನನ್ನು ಬೂದಿಮಾಡುತ್ತದೆ. ಈಶ್ವರನು ಅಂತರ್ಧಾನ ಹೊಂದುತ್ತಾನೆ. ಐರಾವತವು ಕೋರೆದಾಡೆಯಲ್ಲಿ ತಾವರೆಬಳ್ಳಿಯನ್ನು ಎತ್ತಿಕೊಂಡು ಹೋಗುವಂತೆ ಖಿನ್ನಳಾದ ಪಾರ್ವತಿಯನ್ನು ಹಿಮಾಲಯನು ಎತ್ತಿಕೊಂಡು ಮನೆಗೆ ಬರುತ್ತಾನೆ—

ಸಪದಿ ಮುಕುಲಿತಾಕ್ಷೀಂ ರುದ್ರಸಂರಂಭಭೀತ್ಯಾ
ದುಹಿತರಮನುಕಂಪ್ಯಾಮದ್ರಿರಾದಾಯ ದೋರ್ಭ್ಯಾಂ ।
ಸುರಗಜ ಇವ ಬಿಭ್ರತ್ ಪದ್ಮಿನೀಂ ದಂತಲಗ್ನಾಂ
ಪ್ರತಿಪಥಗತಿರಾಸೀತ್ ವೇಗದೀರ್ಘೀಕೃತಾಂಗಃ ॥ 3-76

4ನೆಯ ಸರ್ಗದಲ್ಲಿ ರತಿವಿಲಾಪ, ವಸಂತನಿಂದ ಸಾಂತ್ವನ. ಮುಂದೆ ಶಿವಪಾರ್ವತಿಯರ ವಿವಾಹವಾದಾಗ ಮನ್ಮಥನು ಉಜ್ಜೀವಿತನಾಗುವನೆಂದು ಅಶರೀರವಾಣಿಯ ಆಶ್ವಾಸನೆಗಳು ವರ್ಣಿತವಾಗಿವೆ. 5ನೆಯ ಸರ್ಗದಲ್ಲಿ ಪಾರ್ವತಿಯು ಕಠೋರ ತಪಸ್ಸಿನಲ್ಲಿ ಮಗ್ನಳಾಗುತ್ತಾಳೆ. ಈಶ್ವರನು ವಟುವಿನ ರೂಪದಲ್ಲಿ ಬಂದು ಅವಳ ಮನೋನಿಶ್ಚಯವನ್ನು ಪರೀಕ್ಷಿಸುತ್ತಾನೆ. ಶಿವನು ಉಮೆಗೆ ಅನುರೂಪನಾದ ವರನಲ್ಲವೆಂದು ವಟುವಿನ ವಿಡಂಬನಾಪೂರ್ವಕವಾದ ಪ್ರತಿಪಾದನೆ ಹಾಸ್ಯಪೂರ್ಣವಾಗಿ ಬಹು ಮನೋಜ್ಞವಾಗಿದೆ. ಅವನ ವಿಡಂಬನೆಗೆ ತಕ್ಕ



ಪ್ರತ್ಯುತ್ತರವನ್ನು ಪಾರ್ವತಿ ಕೊಡುತ್ತಾಳೆ. ಅವಳ ಮನಸ್ಸು ದೃಢವಾಗಿ ಶಿವನಲ್ಲಿಯೇ ಅನುರಕ್ತವಾಗಿರುತ್ತದೆ. ಆಗ ವಟು ನಿಜರೂಪದಿಂದ ಪ್ರತ್ಯಕ್ಷನಾಗಿ ನಗುತ್ತ 'ಪಾರ್ವತಿ, ತಪಸ್ಸಿನಿಂದ ನನ್ನನ್ನು ಕೊಂಡುಕೊಂಡಿದ್ದೀಯೆ' ಎನ್ನುತ್ತಾನೆ. ತನ್ನ ಕಠೋರಶ್ರಮಕ್ಕೆ ಫಲವು ದೊರಕಿತೆಂದು ದೇವಿ ಸಂತುಷ್ಟಳಾಗುತ್ತಾಳೆ—

ಅಹ್ನಾಯ ಸಾ ನಿಯಮಜಂ ಕ್ಲಮಮುತ್ಸಸರ್ಜ ।
ಕ್ಲೇಶ : ಫಲೇನ ಹಿ ಪುನರ್ನವತಾಂ ವಿಧತ್ತೇ ॥ 5-86.

6ನೆಯ ಸರ್ಗದಲ್ಲಿ ಪರಮೇಶ್ವರನ ಕೋರಿಕೆಯಂತೆ ಸಪ್ತರ್ಷಿಗಳು ಹಿಮಾಲಯನನ್ನು ಕಂಡು ಶಿವನ ಅಪೇಕ್ಷೆಯನ್ನು ತಿಳಿಸುತ್ತಾರೆ. ಹಿಮಾಲಯನು ಮಗಳನ್ನು ಶಿವನಿಗೆ ಪಾಣಿಗ್ರಹಣ ಮಾಡಿಕೊಡಲು ಒಪ್ಪುತ್ತಾನೆ. ಈ ಪ್ರಸಂಗವೆಲ್ಲವನ್ನೂ ಕವಿಯು ಮನೋಜ್ಞವಾಗಿ ಚಿತ್ರಿಸಿದ್ದಾನೆ. 7ನೆಯ ಸರ್ಗದಲ್ಲಿ ಓಷಧಿಪ್ರಸ್ಥಕ್ಕೆ ಈಶ್ವರನು ದಿಬ್ಬಣ ಸಹಿತವಾಗಿ ಆಗಮಿಸುತ್ತಾನೆ.

ಬ್ರಹ್ಮನ ಪೌರೋಹಿತ್ಯದಲ್ಲಿ ಪಾರ್ವತೀಪರಮೇಶ್ವರರ ಮದುವೆ ಸಂಭ್ರಮದಿಂದ ನಡೆಯುತ್ತದೆ. ಅನಂತರ ಆ ದಿವ್ಯದಂಪತಿಗಳು ಪುರೋಹಿತನಾದ ಬ್ರಹ್ಮನನ್ನು ವಂದಿಸುತ್ತಾರೆ. ಬ್ರಹ್ಮನು ವಧುವನ್ನು ನೋಡಿ "ಕಲ್ಯಾಣಿ—ವೀರಪ್ರಸವಾ ಭವ" ಎಂದು ಹರಸುತ್ತಾನೆ. ಆದರೆ ಅಷ್ಟಮೂರ್ತಿಯಾದ ವರನಿಗೆ ಏನೆಂದು ಆಶೀರ್ವದಿಸುವುದು ! ಬ್ರಹ್ಮನು ವಾಗೀಶ್ವರನಾದರೂ ಅವನಿಗೆ ಯಾವ ಶಬ್ದವೂ ಹೊಳೆಯಲಿಲ್ಲ. ಪರಮೇಶ್ವರನ ವಿಷಯದಲ್ಲಿ "ಆಶಾಸ್ಯಚಿಂತಾ ಸ್ತಿಮಿತೋ ಬಭೂವ."

8ನೆಯ ಸರ್ಗದಲ್ಲಿ ಪಾರ್ವತೀಪರಮೇಶ್ವರರ ಏಕಾಂತವಿರಾಮದ ವರ್ಣನೆ ಇದೆ. ಮುಂದಿನ ಸರ್ಗಗಳಲ್ಲಿ ಕುಮಾರಸ್ವಾಮಿಯ ಜನನ, ಅವನ ಬಾಲಲೀಲೆ, ತಾರಕನನ್ನು ವಧಿಸಲು ಕುಮಾರನನ್ನು ಕಳಿಸಿಕೊಡಬೇಕೆಂದು ಶಿವನಲ್ಲಿ ಇಂದ್ರನ ಪ್ರಾರ್ಥನೆ, ಶಿವನ ಆಜ್ಞೆಯಂತೆ ಷಣ್ಮುಖನು ದೇವಸೇನಾಪತಿಯಾಗಿ ಯುದ್ಧಕ್ಕೆ ತೆರಳುವುದು, ತಾರಕಾಸುರನಿಗೂ ಷಣ್ಮುಖನಿಗೂ ಘೋರ ಯುದ್ಧ, ತಾರಕಾಸುರನ ಸಂಹಾರ—ಇವು ವರ್ಣಿತವಾಗಿವೆ. ಇಂದ್ರನು ಸ್ವರ್ಗರಾಜ್ಯವನ್ನು ಪಡೆದು ವಿರಾಜಿಸುತ್ತಾನೆ—

ಬಲರಿಪುರಥ ನಾಕಸ್ಯಾಧಿಪತ್ಯಂ ಪ್ರಪದ್ಯ
ವ್ಯಜಯತ ಸುರಚೂಡಾರತ್ನಘೃಷ್ಟಾಗ್ರಪಾದಃ ॥ 17-55.

ಕಾಳಿದಾಸನು ಈ ಕಾವ್ಯದ ಮೊದಲ 8 ಸರ್ಗಗಳನ್ನು ಮಾತ್ರ ರಚಿಸಿದ್ದಾನೆಂದೂ ಉಳಿದ ಒಂಬತ್ತು ಸರ್ಗಗಳನ್ನು ಬೇರೆ ಯಾವನೋ ಒಬ್ಬ ಕವಿ ಬರೆದು ಸೇರಿಸಿದ್ದಾನೆಂದೂ ವಿದ್ವಾಂಸರಲ್ಲಿ ವಾದವಿದೆ. ಇದಕ್ಕೆ ಅವರು ಕೊಡುವ ಕಾರಣಗಳಿವು.

1. ಹಸ್ತಪ್ರತಿಗಳು ದೊರೆತಾಗಲೆಲ್ಲ ಮೊದಲನೆ ಏಳು ಸರ್ಗಗಳು ಮಾತ್ರ ಇರುತ್ತಿದ್ದವು. ಆಮೇಲೆ ಎಂಟನೆಯ ಸರ್ಗ ದೊರಕಿತು. ಕಡೆಯ ಒಂಬತ್ತು ಸರ್ಗಗಳು ಬಹುಕಾಲದವರೆಗೆ ದೊರಕಲಿಲ್ಲ

2. ಮಲ್ಲಿನಾಥ, ದಕ್ಷಿಣಾವರ್ತನಾಥ—ಮುಂತಾದ ಪ್ರಸಿದ್ಧ ವ್ಯಾಖ್ಯಾತೃಗಳು 8 ಸರ್ಗಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾರೆ.

3. ಮುಂದಿನ ಒಂಬತ್ತು ಸರ್ಗಗಳಲ್ಲಿ ಕಾಳಿದಾಸೋಚಿತವಾದ ಪ್ರತಿಭೆ ಕಾಣಸಿಗುವುದಿಲ್ಲ. ಕಾವ್ಯವು ಬಹುಮಟ್ಟಿಗೆ ನೀರಸವಾಗಿದೆ.

4. ಈ ಸರ್ಗಗಳಲ್ಲಿ ಅನೇಕ ಛಂದೋದೋಷಗಳಿವೆ. ಪಾದಪೂರಣಕ್ಕಾಗಿ 'ಸದ್ಯಃ, ಅಲಂ, ಉಚ್ಚೈಃ' ಮುಂತಾದ ಶಬ್ದಗಳನ್ನು ಸೇರಿಸಲಾಗಿದೆ. ಅವ್ಯಯೀಭಾವಸಮಾಸಗಳು ಅಧಿಕ ಪುನರುಕ್ತಿಗಳುಂಟು. ಇವು ಕಾಳಿದಾಸನ ಕಾವ್ಯಗಳಲ್ಲಿ ಸಹಜವಲ್ಲ.

5. ಪ್ರಸಿದ್ಧರಾದ ಅಲಂಕಾರಿಕರು ಮೊದಲನೆಯ 8 ಸರ್ಗಗಳಿಂದ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಈ ಒಂಬತ್ತು ಸರ್ಗಗಳಿಂದ ಉದಾಹರಿಸಿಲ್ಲ—ಇತ್ಯಾದಿ.

ಆದರೆ "ಕುಮಾರಸಂಭವ" ಎಂಬ ಹೆಸರು ಹೇಗೆ ಸಾರ್ಥಕವಾಗುತ್ತದೆ ? ಕುಮಾರನ ಉತ್ಪತ್ತಿ ಈ 8 ಸರ್ಗಗಳಲ್ಲಿ ಬರುವುದಿಲ್ಲ ಎಂಬ ಪ್ರಶ್ನೆಗೆ ಅವರು ಹೇಳುವುದೇನೆಂದರೆ 8 ನೆಯ ಸರ್ಗದಲ್ಲಿ ಉಮಾಸುರತವರ್ಣನೆ ಇರುವುದರಿಂದ ಕುಮಾರೋತ್ಪತ್ತಿಯ ಸೂಚನೆ ಬಂದಿದೆ. ಮತ್ತು 'ಸಂಭವ' ಶಬ್ದಕ್ಕೆ 'ಸಮಾಗಮ' ಎಂಬ ಪ್ರಾಚೀನ ಅರ್ಥ ಉಂಟು, ಕುಮಾರಾರ್ಥವಾಗಿ ದಂಪತಿಗಳ ಸಮಾಗಮವೇ 'ಕುಮಾರಸಂಭವ'.

ಇದಕ್ಕೆ ಪ್ರತಿಯಾಗಿ 17 ಸರ್ಗಗಳೂ ಕಾಳಿದಾಸರಚಿತವೆಂದು ವಾದಿಸತಕ್ಕವರು ಈ ಕಾರಣಗಳನ್ನು ಕೊಡುತ್ತಾರೆ.

1. ಕಡೆಯ 9 ಸರ್ಗಗಳು ಹಿಂದಿನವುಗಳಷ್ಟು ರಸವತ್ತಾಗಿಲ್ಲವೆಂಬುದು ನಿಜ. ಆದುದರಿಂದಲೇ ಹಸ್ತಪ್ರತಿ ಮಾಡತಕ್ಕವರು ಸಾಮಾನ್ಯವಾಗಿ ಅವನ್ನು ಉಪೇಕ್ಷಿಸಿರಬಹುದು ಈ ಕಾರಣದಿಂದಲೇ ಕೆಲವು ವ್ಯಾಖ್ಯಾನಕಾರರು ಆ ಸರ್ಗಗಳಿಗೆ ವ್ಯಾಖ್ಯಾನ ಮಾಡದೆ ಕೈಬಿಟ್ಟಿರಬಹುದು.

2. ಒಂದು ಮಹಾಕೃತಿಯಲ್ಲಿ ಆದ್ಯಂತವಾಗಿ ಒಂದೇ ಶೈಲಿ ಇರಬೇಕೆಂದೂ, ಎಲ್ಲ ಭಾಗದಲ್ಲಿಯೂ ಸಮಾನಪ್ರತಿಭೆ ಹರಿಯಬೇಕೆಂದೂ ನಿರೀಕ್ಷಿಸುವುದು ಸರಿಯಲ್ಲ. ಅಲ್ಲದೆ ಕಡೆಯ ಸರ್ಗಗಳಲ್ಲಿ ಮುಖ್ಯವಾಗಿ ತಾರಕವಧಪ್ರಸಂಗವಿದೆ. ಯುದ್ಧಪ್ರಸ್ತಾಪದಲ್ಲಿ ಕಥೆಯ ಸಂಘಟನೆ ಪ್ರಧಾನವಾಗುತ್ತದೆಯೇ ಹೊರತು ವರ್ಣನೆಯಲ್ಲ.

3. ದೇವತೆಗಳು ಪ್ರಾರ್ಥಿಸಿದ್ದು ತಾರಕವಧೆಯನ್ನು, ಅದನ್ನು ಕವಿಯು ವರ್ಣಿಸದಿದ್ದಲ್ಲಿ ಕಾವ್ಯಕ್ಕೆ ನ್ಯೂನತೆ ಬರುತ್ತದೆ—ಇತ್ಯಾದಿ.

17 ಸರ್ಗಗಳಿರುವ ಕುಮಾರಸಂಭವ ಬಹುಕಾಲದ ಈಚೆಗೆ ದೊರೆಯಿತು. ಬಲಿದ್ವೀಪದಲ್ಲಿಯೂ 17 ಸರ್ಗಗಳಿರುವ ಹಸ್ತಪ್ರತಿ ದೊರಕಿದೆಯೆಂದು ಹಿಲ್‌ಬ್ರಾಂಟ್ (Hillebrandt) ಎಂಬ ಶೋಧಕರು ಹೇಳಿದ್ದಾರೆ. ಕಾಳಿದಾಸನು ಬರೆದ ಈ ಕಾವ್ಯದಲ್ಲಿ 22 ಸರ್ಗಗಳಿದ್ದವೆಂಬ ಐತಿಹ್ಯವಿದೆಯೆಂದು ಗ್ರಿಫಿತ್ ಪಂಡಿತನು ತಿಳಿಸಿದ್ದಾನೆ.



ವ್ಯಾಖ್ಯಾನಕಾರರು :

ಕುಮಾರಸಂಭವಕ್ಕೆ ಇದುವರೆಗೆ 37 ವ್ಯಾಖ್ಯಾನಗಳು ದೊರೆತಿವೆ. ಅವುಗಳಲ್ಲಿ 2 ವ್ಯಾಖ್ಯಾನಗಳ ಕರ್ತೃಗಳು ಯಾರೆಂದು ತಿಳಿದುಬಂದಿಲ್ಲ. ಇವುಗಳಲ್ಲದೆ ಜಗದ್ಧರ, ದಿವಾಕರ ಎಂಬಿಬ್ಬರು ವಿಸ್ತೃತ ಟೀಕೆಗಳನ್ನು ಬರೆದಿದ್ದರೆಂದು ಕೃಷ್ಣಪತಿಶರ್ಮನ ವ್ಯಾಖ್ಯಾನವನ್ನು ನೋಡಿದರೆ ತಿಳಿದುಬರುತ್ತದೆ. ವಿಂಧ್ಯೇಶ್ವರೀ ಪ್ರಸಾದನು ತನ್ನ ಟೀಕೆಯಲ್ಲಿ ಶಿವದಾಸನೆಂಬ ಟೀಕಾಕಾರನ ಹೆಸರನ್ನು ಹೇಳುತ್ತಾನೆ. ಮಲ್ಲಿನಾಥನ ಸಂಜೀವಿನೀ ವ್ಯಾಖ್ಯಾನವು ಪ್ರಸಿದ್ಧವಾದದ್ದು. ಈತನು ಮೊದಲನೆಯ 8 ಸರ್ಗಗಳಿಗೆ ಮಾತ್ರ ವ್ಯಾಖ್ಯಾನ ಮಾಡಿದ್ದಾನೆ. ಸೀತಾರಾಮ ಕವಿಯು 'ಸಂಜೀವಿನೀ' ಎಂಬ ಹೆಸರಿನ ಟೀಕೆಯನ್ನು 8 ರಿಂದ 17 ಸರ್ಗಗಳಿಗೆ ಬರೆದಿದ್ದಾನೆ. ಮಲ್ಲಿನಾಥನು ಬರೆಯದೆ ಉಳಿಸಿದುದನ್ನು ಪೂರ್ಣಮಾಡುವುದು ಅವನ ಉದ್ದೇಶ. ಸೀತಾರಾಮನಿಗೆ 8 ನೆಯ ಸರ್ಗದ ಮಲ್ಲಿನಾಥನ ವ್ಯಾಖ್ಯಾನ ದೊರೆತಿರಲಿಲ್ಲ.

ಟೀಕಾಸಪ್ತಸು ಮಲ್ಲಿನಾಥಕೃತಿನಾ ಸಂಜೀವಿನೀ ಸಂಜ್ಞಿಕಾ
ಯಾ ಸರ್ಗೇಷು ಕುಮಾರಸಂಭವಮಹಾಕಾವ್ಯಸ್ಯ ಚಕ್ರೇ ಪುರಾ

ಎಂಬುದರಿಂದ ಇದು ಸ್ಪಷ್ಟವಾಗುತ್ತದೆ. ಸೀತಾರಾಮ ಕವಿಯ ತಾಯಿ ಸುಹೀರಾ. ತಂದೆ ಲಕ್ಷ್ಮಣ. ವ್ಯಾಖ್ಯಾನವನ್ನು ಬರೆದು ಆತ ಮುಗಿಸಿದುದು 1823 ರಲ್ಲಿ.

## ಕುಮಾರ ಸಂಭವದಲ್ಲಿ ವರ್ಣನೆ

1. ಹಿಮಾಲಯವನ್ನು ಕವಿ 17 ಪದ್ಯಗಳಲ್ಲಿ ವರ್ಣಿಸಿದ್ದಾನೆ. ಅಲ್ಲಿ ಆನೆ, ಸಿಂಹ, ಚಮರೀ, ನವಿಲು ಮುಂತಾದ ಪ್ರಾಣಿಗಳಿವೆ. ಭೂರ್ಜ, ದೇವದಾರು ಮೊದಲಾದ ವೃಕ್ಷಗಳೂ ದಿವ್ಯೌಷಧಿಗಳೂ ಇವೆ. ಸಕಲ ಶ್ರೇಷ್ಠವಸ್ತುಗಳಿಗೂ ಅದು ಆಕರ. ಹಿಮವು ದೋಷವೆನಿಸಿದರೂ ಚಂದ್ರನಲ್ಲಿರುವ ಕಳಂಕದಂತೆ ಗಣನೀಯವಲ್ಲ—

ಅನಂತರತ್ನಪ್ರಭವಸ್ಯ ಯಸ್ಯ ಹಿಮಂ ನ ಸೌಭಾಗ್ಯವಿಲೋಪಿ ಜಾತಂ ।
ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ 1-3.

2. ನವಯೌವನ ಬಂದಾಗ ಪಾರ್ವತಿಯ ದೇಹಯಷ್ಟಿ ಕುಂಚದಿಂದ ಬಿಡಿಸಿದ ಚಿತ್ರದಂತಾಯಿತು. ಸೂರ್ಯಕಿರಣಗಳಿಂದರಳಿದ ತಾವರೆಯಂತಾಯಿತು—

ಉನ್ಮೀಲಿತಂ ತೂಲಿಕಯೇವ ಚಿತ್ರಂ ಸೂರ್ಯಾಂಶುಭಿರ್ಭಿನ್ನಮಿವಾರವಿಂದಂ ।
ಬಭೂವ ತಸ್ಯಾಶ್ಚತುರಸ್ರಶೋಭಿ ವಪುರ್ವಿಭಕ್ತಂ ನವಯೌವನೇನ ॥ 1-32.

3. ತಾರಕಾಸುರನ ರಾಜಧಾನಿಯಲ್ಲಿ ಬಿಸಿಲಿನ ಬೇಗೆ ಇಲ್ಲ. ಸೂರ್ಯನು ಅಲ್ಲಿ ಹೆದರುತ್ತಾನೆ. ಆದರೆ ತಾವರೆಗಳನ್ನು ಮಾತ್ರ ಅರಳಿಸಬೇಕು !

ಪುರೇ ತಾವಂತಮೇವಾಸ್ಯ ತನೋತಿ ರವಿರಾತಪಂ ।
ದೀರ್ಘಿಕಾಕಮಲೋನ್ಮೇಷೋ ಯಾವನ್ಮಾತ್ರೇಣ ಸಾಧ್ಯತೇ ॥ 2-3.

4. ಹರನು ಸಮಾಧಿಯಿಂದ ಬಹಿರ್ಮುಖನಾಗಿದ್ದಾನೆ. ದಿವ್ಯಸುಂದರಿಯಾದ ಉಮೆಯು ಅವನ ಸೇವೆಗಾಗಿ ಹೂಗಳನ್ನು ಬಿಡಿಸಿ ತಂದು ಎದುರಿಗಿರಿಸಿದಳು. ಇದೇ ಸಮಯವೆಂದು ಮನ್ಮಥನು ತನ್ನ ಸಂಮೋಹನಾಸ್ತ್ರವನ್ನು ಹೂಡಿದನು. ಚಂದ್ರೋದಯದ ಆರಂಭದಲ್ಲಿ ಸಮುದ್ರವು ಸ್ವಲ್ಪ ಚಲಿಸಿದಂತೆ ಶಿವನ ಮನಸ್ಸು ಸ್ವಲ್ಪ ಚಲಿಸಿತು. ಉಮೆಯ ಮುಖವನ್ನು ಆಸಕ್ತಿಯಿಂದ ನೋಡಿದನು—

ಹರಸ್ತು ಕಿಂಚಿತ್ ಪರಿವೃತ್ತಧೈರ್ಯಶ್ಚಂದ್ರೋದಯಾರಂಭ ಇವಾಂಬುರಾಶಿಃ ।
ಉಮಾಮುಖೇ ಬಿಂಬಫಲಾಧರೋಷ್ಠೇ ವ್ಯಾಪಾರಯಾಮಾಸ ವಿಲೋಚನಾನಿ ॥ 3-67.

5. ಮನ್ಮಥನು ಭಸ್ಮವಾಗಲು ರತಿಗೆ ಸಹಗಮನವೇ ಯುಕ್ತವೆನಿಸುತ್ತದೆ. ಬೆಳದಿಂಗಳು ಚಂದ್ರನೊಡನೆ, ಮಿಂಚು ಮೇಘದೊಡನೆ ಅಡಗುವುದಲ್ಲವೇ ?

ಶಶಿನಾ ಸಹಯಾತಿ ಕೌಮುದೀ ಸಹ ಮೇಘೇನ ತಡಿತ್ ಪ್ರಲೀಯತೇ ।
ಪ್ರಮದಾಃ ಪತಿವರ್ತ್ಮಗಾ ಇತಿ ಪ್ರತಿಪನ್ನಂ ಹಿ ವಿಚೇತನೈರಪಿ ॥ 4-33.

6. ಕೋಮಲೆಯಾದ ಪಾರ್ವತಿ ಕಠೋರ ತಪೋನಿಯಮವನ್ನು ಸಹಿಸಿಕೊಂಡಾಳೆ ? ಶಿರೀಷಪುಷ್ಪವು ದುಂಬಿಯ ಭಾರವನ್ನು ಸಹಿಸಿಕೊಂಡೀತು ; ಒಂದು ಹಕ್ಕಿಯೇ ಅದರ ಮೇಲೆ ಕುಳಿತರೆ ಹೇಗೆ ? ಎಂದು ಅವಳ ತಾಯಿ ಅಭಿಪ್ರಾಯ ಪಡುತ್ತಾಳೆ—

ಪದಂ ಸಹೇತ ಭ್ರಮರಸ್ಯ ಪೇಲವಂ ಶಿರೀಷಪುಷ್ಪಂ ನ ಪುನಃ ಪತತ್ರಿಣಃ 5-4.

7. ಮಳೆಗಾಲದಲ್ಲಿಯೂ ಉಮಾದೇವಿ ಸ್ಥೈರ್ಯದಿಂದ ತಪಸ್ಸು ಮಾಡಿದಳು ಮಳೆ ಹನಿ ಅವಳ ದೇಹದ ಮೇಲೆ ಉದುರಿದವು—

ಸ್ಥಿತಾಃ ಕ್ಷಣಂ ಪಕ್ಷ್ಮಸು ತಾಡಿತಾಧರಾಃ ಪಯೋಧರೋತ್ಸೇಧನಿಪಾತಚೂರ್ಣಿತಾಃ ।
ವಲೀಷು ತಸ್ಯಾಃ ಸ್ಖಲಿತಾಃ ಪ್ರಪೇದಿರೇ ಚಿರೇಣ ನಾಭಿಂ ಪ್ರಥಮೋದಬಿಂದವಃ ॥ 5-24.

ಈ ಶ್ಲೋಕದಲ್ಲಿ ಕಾಳಿದಾಸನು ದೇವಿಯ ಸೌಂದರ್ಯವನ್ನೂ ತಪಃಕಾಲದ ಸ್ಥಿರತೆಯನ್ನೂ ಎಷ್ಟು ಸುಂದರವಾಗಿ ವ್ಯಂಜಿಸಿದ್ದಾನೆಂಬುದನ್ನು ಅಪ್ಪಯ್ಯದೀಕ್ಷಿತರು ಚಿತ್ರಮೀಮಾಂಸೆಯಲ್ಲಿ ವಿವರಿಸಿದ್ದಾರೆ.

8. ದೇವರ್ಷಿಗಳು ಹಿಮಾಲಯನೊಡನೆ ಪಾರ್ವತಿಯ ಮದುವೆಯ ಪ್ರಸ್ತಾಪವನ್ನು ಮಾಡಿದ್ದಾರೆ. ತಂದೆಯ ಬಳಿ ಇದ್ದ ಪಾರ್ವತಿ ಏನೆಂದಳು ? ತಲೆಬಗ್ಗಿಸಿ ತಾವರೆಯ ದಳಗಳನ್ನು ಎಣಿಸಿದಳು—

ಏವಂ ವಾದಿನಿ ದೇವರ್ಷೌ ಪಾರ್ಶ್ವೇ ಪಿತುರಧೋಮುಖೀ ।
ಲೀಲಾಕಮಲ ಪತ್ರಾಣಿ ಗಣಯಾಮಾಸ ಪಾರ್ವತೀ ॥ 6-84

9. ಶಿವನಿಗೆ ಮಗಳನ್ನು ಕೊಡಲು ಹಿಮವಂತನಿಗೆ ಪೂರ್ಣಸಮ್ಮತಿ ಇದೆ. ಆದರೂ ಮಡದಿಯ ಮುಖವನ್ನು ನೋಡಿದನು. ಪತ್ನಿಯ ಒಪ್ಪಿಗೆ ಇಲ್ಲದೆ ಮಗಳ ಮದುವೆಯನ್ನು ನಿಶ್ಚಯಿಸಲಾದೀತೇ ?



ಶೈಲಃ ಸಂಪೂರ್ಣಕಾಮೋಽಪಿ ಮೇನಾಮುಖಮುದೈಕ್ಷತ ।
ಪ್ರಾಯೇಣ ಗೃಹಿಣೀನೇತ್ರಾಃ ; ಕನ್ಯಾರ್ಥೇಷು ಕುಟುಂಬಿನ 8-85.

10. ಈ ಚಂದ್ರೋದಯದ ವರ್ಣನೆ ಮನೋಹರವಾಗಿದೆ. ಚಂದ್ರನು ರಜನೀಮುಖವನ್ನು ಚುಂಬಿಸುವಂತೆ ಕಾಣಿಸುತ್ತದೆ !

ಅಂಗುಲೀಭಿರಿವ ಕೇಶಸಂಚಯಂ ಸಂನಿಗೃಹ್ಯ ತಿಮಿರಂ ಮರೀಚಿಭಿ : ।
ಕುಡ್ಮಲೀಕೃತಸರೋಜಲೋಚನಂ ಚುಂಬತೀವ ರಜನೀಮುಖಂ ಶಶೀ ॥ 8-63.

ಕುಮಾರಸಂಭವದ ಪ್ರತಿಯೊಂದು ಶ್ಲೋಕವೂ ಉದಾಹರಣಯೋಗ್ಯವಾದುದು. ದೇವತೆಗಳು ಬ್ರಹ್ಮನನ್ನು ಸ್ತುತಿ ಮಾಡಿರುವುದು ಸಹ ಕಾವ್ಯದೃಷ್ಟಿಯಿಂದ ಮನೋಜ್ಞವಾಗಿದೆ. ಪಾರ್ವತಿಯ ಸೌಂದರ್ಯವರ್ಣನೆ ಕಣ್ಣುಕಟ್ಟುವಂತೆ ಇದೆ. ಸಹಜ ಯೌವನಾರಂಭದಲ್ಲಿ, ಶಿವನನ್ನು ಸೇವಿಸುವಲ್ಲಿ, ವಿವಾಹ ಸಮಯದಲ್ಲಿ ಹೀಗೆ ಮೂರುಬಾರಿ ಔಚಿತ್ಯವನ್ನನುಸರಿಸಿ ಕವಿ ದೇವಿಯನ್ನು ವರ್ಣಿಸಿದ್ದಾನೆ. ಬ್ರಹ್ಮನು ದೇವತೆಗಳನ್ನು ಮಾತನಾಡಿಸುವ ರೀತಿ, ತಾರಕಾಸುರನು ಲೋಕವನ್ನು ಪೀಡಿಸುವ ಬಗೆ, ದೇವಿಯ ತಪಸ್ಸು, ವಟುವೇಷಧಾರಿಯಾದ ಶಿವನಸಂಭಾಷಣೆ, ಸಪ್ತರ್ಷಿಗಳು ಹಿಮಾಲಯನೊಡನೆ ನಡೆಸಿದ ವಿವಾಹಸಂಧಾನ—ಎಲ್ಲವೂ ಕಾಳಿದಾಸನ ಅನನ್ಯ ಸಾಧಾರಣಪ್ರತಿಭೆಯ ನಿದರ್ಶನಗಳು, ರತಿವಿಲಾಸವು ಕರುಣರಸದ ಪ್ರವಾಹವಾಗಿದೆ. ಕರುಣಕ್ಕೆ ಉಚಿತವಾದ 'ವಿಯೋಗಿನೀ' ವೃತ್ತವನ್ನು ಕವಿ ಆರಿಸಿಕೊಂಡಿದ್ದಾನೆ.

## ಸುಭಾಷಿತಗಳು

1. ಕ್ಷುದ್ರೇಽಪಿ ನೂನಂ ಶರಣಂ ಪ್ರಪನ್ನೇ ಮಮತ್ವಮುಚ್ಚೈಃ ಶಿರಸಾಂಸತೀವ । 1-12
2. ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ । 1-59
3. ಶಾಮ್ಯೇತ್ ಪ್ರತ್ಯುಪಕಾರೇಣ ನೋಪಕಾರೇಣ ದುರ್ಜನಃ । 2-40
4. ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ । 2-55
5. ಪ್ರಿಯೇಷು ಸೌಭಾಗ್ಯಫಲಾ ಹಿ ಚಾರುತಾ । 5-1
6. ಕ ಈಪ್ಸಿತಾರ್ಥಸ್ಥಿರನಿಶ್ಚಯಂ ಮನಃ ಪಯಶ್ಚ ನಿಮ್ನಾಭಿಮುಖಂ ಪ್ರತೀಪಯೇತ್ ॥
7. ನ ರತ್ನಮನ್ವಿಷ್ಯತಿ ಮೃಗ್ಯತೇ ಹಿ ತತ್ । 15-5
8. ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ । 5-46
9. ಕ್ರಿಯಾಣಾಂ ಖಲು ಧರ್ಮ್ಯಾಣಾಂ ಸತ್ಪತ್ನ್ಯೋ ಮೂಲಕಾರಣಂ । 5-86
10. ಅಶೋಚ್ಯಾ ಹಿ ಪಿತುಃ ಕನ್ಯಾ ಸದ್ಭರ್ತೃಪ್ರತಿಪಾದಿತಾ । 6-13
6-79

## 3. ಪದ್ಯಚೂಡಾಮಣಿ (ಕ್ರಿ. ಶ. 5ನೆಯ ಶತಮಾನ)

ಈ ಕಾವ್ಯವನ್ನು ರಚಿಸಿದವನು ಬುದ್ಧಘೋಷ. ಈತನು ತನ್ನ ಪರಿಚಯವೇನನ್ನೂ ಕೊಟ್ಟಿಲ್ಲ. ಬುದ್ಧ ಘೋಷ ಎಂಬ ಹೆಸರು ಬೌದ್ಧರ ಪಾಳಿಸಾಹಿತ್ಯದಲ್ಲಿ ಪ್ರಸಿದ್ಧವಾದದ್ದು. ಈ ಹೆಸರಿನ ಆಚಾರ್ಯನು ವಿಖ್ಯಾತ ಬ್ರಾಹ್ಮಣವಿದ್ವಾಂಸನಾಗಿದ್ದು ಬೌದ್ಧಮತಕ್ಕೆ ಸೇರಿದನೆಂದೂ ಸಿಂಹಳದ್ವೀಪದಲ್ಲಿದ್ದ ಬೌದ್ಧಪಿಟಕಗಳನ್ನು ತರಲು ಅಲ್ಲಿಗೆ ಹೋಗಿದ್ದನೆಂದೂ ತಿಳಿದು ಬರುತ್ತದೆ. ಅಲ್ಲಿ 'ವಿಶುದ್ಧಿಮಗ್ಗ' ಎಂಬ ಗ್ರಂಥವನ್ನು ರಚಿಸಿ ಅನೇಕ ಪಾಳಿಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದನು. ಜೇಮ್ಸ್‌ಗ್ರೇ ಪಂಡಿತನು ತನ್ನ ಶೋಧನೆಯ ಫಲವಾಗಿ, ಈ ಬುದ್ಧಘೋಷಾಚಾರ್ಯನು ಕ್ರಿ. ಶ. 387 ರಲ್ಲಿ ಸಿಂಹಳಕ್ಕೆ ಹೋದನೆಂದು ಬರೆದಿದ್ದಾರೆ. ಜಾನ್‌ಸೇನಾಪರತ್ನೆಯವರು ಅದನ್ನೊಪ್ಪದೆ ಕ್ರಿ. ಶ. 483 ರಲ್ಲಿ ಎಂದು ಹೇಳುತ್ತಾರೆ. ಬುದ್ಧಘೋಷನ ಸಮಂತಪಾಸಾದಿಕಾ ಎಂಬ ಗ್ರಂಥವು ಕ್ರಿ. ಶ. 488 ರಲ್ಲಿ ಚೀನೀ ಭಾಷೆಗೆ ಪರಿವರ್ತಿತವಾಗಿದೆಯೆಂದು ಗೊತ್ತಾಗಿದೆ.

ಪದ್ಯಚೂಡಾಮಣಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಕವಿಗೆ ಅಶ್ವಘೋಷನ ಬುದ್ಧಚರಿತವೂ ಕಾಳಿದಾಸನ ರಘುವಂಶವೂ ಪರಿಚಿತವಾಗಿದ್ದುವೆಂದು ಸ್ಪಷ್ಟವಾಗುತ್ತದೆ. ವರ್ಣನೆಗಳಲ್ಲಿಯೂ ಶಬ್ದರಚನೆಯಲ್ಲಿಯೂ ಇವುಗಳಿಗೆ ಅತ್ಯಂತ ಸಾದೃಶ್ಯವುಂಟು. ಬುದ್ಧಚರಿತ ಮತ್ತು ರಘುವಂಶಗಳ ಉತ್ತರಕಾಲದಲ್ಲಿ ಈ ಕಾವ್ಯವು ರಚಿತವಾಗಿದೆಯೆಂದು ವಿದ್ವಾಂಸರು ನಿಶ್ಚಯಿಸಿದ್ದಾರೆ. ಈ ಎಲ್ಲ ಕಾರಣಗಳಿಂದ ಬುದ್ಧಘೋಷಾಚಾರ್ಯನು ಕ್ರಿ.ಶ. 5ನೇ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ಹೇಳಬಹುದು. ಪಾಳೀವಿದ್ವಾಂಸನಾದ ಈ ಬೌದ್ಧಾಚಾರ್ಯನು ಪ್ರಕೃತ ಕಾವ್ಯದ ಕವಿಯಾಗಿರಬೇಕು.

ಈ ಕಾವ್ಯದಲ್ಲಿ 8 ಸರ್ಗಗಳೂ 841 ಶ್ಲೋಕಗಳೂ ಇವೆ. ಕಥಾವಸ್ತು ಗೌತಮಬುದ್ಧನ ಚರಿತೆ. ಬುದ್ಧನು ಮಾರನನ್ನು ಜಯಿಸಿದನೆಂಬಲ್ಲಿಯವರೆಗೆ ಕಥೆ ವರ್ಣಿತವಾಗಿದೆ. ನಗರ, ಸಿದ್ಧಾರ್ಥನ ಯೌವನ, ಋತು, ಉದ್ಯಾನವಿಹಾರ, ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ, ಮಾರನ ಯುದ್ಧ—ಮುಂತಾದ ವರ್ಣನೆಗಳು ಸುಂದರವಾಗಿವೆ. ಕ್ವಾಚಿತ್ಕವಾದ ದೀರ್ಘಸಮಾಸಗಳನ್ನು ಬಿಟ್ಟರೆ ಕಾಳಿದಾಸನ ಮೋಹಕವಾದ ವೈದರ್ಭಶೈಲಿಯನ್ನಿಲ್ಲಿ ಕಾಣಬಹುದು. ಬುದ್ಧಘೋಷನು ಉತ್ತಮಶ್ರೇಣಿಯ ಪ್ರತಿಭಾಶಾಲಿಯಾದ ಕವಿ.

1. ಶರತ್ಕಾಲದಲ್ಲಿ ದಿಗಂಗನೆಯರು ಸ್ನಾನಮಾಡಿ ದುಕೂಲವನ್ನುಟ್ಟು ಚಂದನವನ್ನು ಲೇಪಿಸಿಕೊಂಡು ಹಾರವನ್ನು ಧರಿಸಿದರು—

> ಕೃತಾಭಿಷೇಕಾಃ ಪ್ರಥಮಂ ಘನಾಂಬುಭಿಃ
> ಧೃತೋತ್ತರೀಯಾಃ ಶರದಭ್ರಸಂಚಯೈಃ ।
> ವಿಲಿಪ್ತಗಾತ್ರಾಃ ಶಶಿರಶ್ಮಿಚಂದನೈಃ
> ದಿಶೋ ದಧುಸ್ತಾರಕಹಾರಯಷ್ಟಿಕಾಂ ॥



2. ಉರಿಯುವ ದೀಪಗಳು ನಿಶಾಂಗನೆಯು ಧರಿಸಿದ ಸಂಪಿಗೆ ಹೂಗಳಂತಿದ್ದವು, ಅಂಧಕಾರಗಳೆಲ್ಲವೂ ಸೇರಿ ಸೆರೆಹಿಡಿದಿಟ್ಟಿರುವ ಸೂರ್ಯನ ಕಿರಣಗಳಂತಿದ್ದವು—

> ವಿಭಾವರೀಚಂಪಕಕರ್ಣಪೂರಾ
> ಬಭಾಸಿರೇ ವೇಶ್ಮಸು ದೀಪಲೇಖಾಃ ।
> ಪಲಾಯಮಾನಸ್ಯ ರವೇಃ ಪಟಿಷ್ಠೈಃ
> ಬಂದೀಕೃತಾ ಭಾಸ ಇವಾಂಧಕಾರೈಃ ॥ 8-21

## 4. ಹಯಗ್ರೀವವಧ (ಕ್ರಿ. ಶ. 5ನೆಯ ಶತಮಾನ)

ಈ ಕಾವ್ಯವು ಉಪಲಬ್ಧವಿಲ್ಲವಾದರೂ ಇದರ ಕವಿಯಾದ ಮೇಂಠ ಅಥವಾ ಭರ್ತೃಮೇಂಠನು ಕವಿಗೋಷ್ಠಿಯಲ್ಲಿ ಪ್ರಸಿದ್ಧನಾಗಿದ್ದಾನೆ. ಸೂಕ್ತಿಮುಕ್ತಾವಳಿಯಲ್ಲಿ ಜಲ್ಹಣನು ರಾಜಶೇಖರನದೆಂದು ಈ ಶ್ಲೋಕವನ್ನು ಉದಾಹರಿಸಿದ್ದಾನೆ—

> ವಕ್ರೋಕ್ತ್ಯಾ ಮೇಂಠರಾಜಸ್ಯ ವಹಂತ್ಯಾ ಸೃಣಿರೂಪತಾಂ ।
> ಆವಿದ್ಧಾ ಇವ ಧುನ್ವಂತಿ ಮೂರ್ಧಾನಂ ಕವಿಕುಂಜರಾಃ ॥

ಮೇಂಠಶಬ್ದಕ್ಕೆ ಮಾವುತ ಎಂಬ ಅರ್ಥವಿದೆ. ಆದ್ದರಿಂದ ಸುಭಾಷಿತ ಸಂಗ್ರಹಕಾರರು 'ಹಸ್ತಿಪಕ'ನದೆಂದು ಉದಾಹರಿಸುವ ಶ್ಲೋಕಗಳು ಭರ್ತೃಮೇಂಠನವೇ ಆಗಿರಬಹುದು. ಈ ಮೇಂಠನು ಕಾಶ್ಮೀರದ ಮಾತೃಗುಪ್ತರಾಜನ ಆಸ್ಥಾನದಲ್ಲಿದ್ದನೆಂದು ಕಲ್ಹಣನು ಹೇಳಿದ್ದಾನೆ. ಮೇಂಠನು ಹಯಗ್ರೀವವಧವೆಂಬ ಮಹಾಕಾವ್ಯವನ್ನು ರಚಿಸಿ ಮಾತೃಗುಪ್ತನಿಗೆ ತೋರಿಸಿದನೆಂದೂ ರಾಜನು ಅದನ್ನು ಮೆಚ್ಚಿ ಕಾವ್ಯದ ಲಾವಣ್ಯರಸವು ಸುರಿದು ಹೋದೀತೆಂದು ಸುವರ್ಣಪಾತ್ರೆಯಲ್ಲಿ ಆ ಪುಸ್ತಕವನ್ನು ಇರಿಸಿದನೆಂದೂ ಅದರಿಂದ ಮೇಂಠನು ಸಂತುಷ್ಟನಾದನೆಂದೂ ಕಲ್ಹಣನು ರಾಜತರಂಗಿಣಿಯಲ್ಲಿ ಹೇಳಿದ್ದಾನೆ.

> ಹಯಗ್ರೀವವಧಂ ಮೇಂಠಸ್ತದಗ್ರೇ ದರ್ಶಯನ್ನವಂ ।
> ಆಸಮಾಪ್ತಿ ತತೋ ನಾಪತ್ ಸಾಧ್ವಸಾಧ್ವಿತಿ ವಾ ವಚಃ ॥
> ಅಥ ಗ್ರಥಯಿತುಂ ತಸ್ಮಿನ್ ಪುಸ್ತಕಂ ಪ್ರಸ್ತುತೇ ನ್ಯಧಾತ್ ।
> ಲಾವಣ್ಯನಿರ್ಯಾಣಭಿಯಾ ತದಧಃ ಸ್ವರ್ಣಭಾಜನಂ ॥
> ಅಂತರಜ್ಞತಯಾ ತಸ್ಯ ತಾದೃಶ್ಯಾ ಕೃತಸತ್ಕೃತಿಃ ।
> ಭರ್ತೃಮೇಂಠಃ ಕವಿರ್ಮೇನೇ ಪುನರುಕ್ತಂ ಶ್ರಿಯೋಽರ್ಪಣಂ ॥

ರಾಜ. 3-260 2

ಈ ಮಾತೃಗುಪ್ತನು ಕ್ರಿ. ಶ. 430ರಲ್ಲಿದ್ದನೆಂದು ಇತಿಹಾಸಕಾರರು ಊಹಿಸಿದ್ದಾರೆ. ಶೂದ್ರಕನ ಮೃಚ್ಛಕಟಿಕದಲ್ಲಿ ಉಪಲಬ್ಧವಾಗುವ 'ಲಿಂಪತೀವ ತಮೋಽಂಗಾನಿ' ಎಂಬ ಪ್ರಸಿದ್ಧ

ಶ್ಲೋಕವು ಮೇಂಠ–ವಿಕ್ರಮಾದಿತ್ಯರದೆಂದು ಶಾರ್ಙ್ಗಧರ ಪದ್ಧತಿಯಲ್ಲಿ ಉದ್ಧೃತವಾಗಿದೆ. ಇದರಿಂದ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಮೇಂಠನಿದ್ದನೆಂದು ಊಹಿಸಬೇಕಾಗುವುದು. ಆದರೆ ಕಲ್ಹಣನ ಸ್ಪಷ್ಟವಾದ ಹೇಳಿಕೆಯಿಂದ ಮಾತೃಗುಪ್ತನ ಆಸ್ಥಾನದಲ್ಲಿ ಮೇಂಠನಿದ್ದನೆಂದೂ ಕ್ರಿ. ಶ. 5ನೆಯ ಶತಮಾನವೇ ಅವನ ಕಾಲವೆಂದೂ ಹೇಳುವುದು ಯುಕ್ತ.

ಹಯಗ್ರೀವವಧ ಕಾವ್ಯವು ದೊರಕಿಲ್ಲ. ಪ್ರಾಯಶಃ ಅದರಲ್ಲಿ ಮೊದಲನೆಯದಾಗಿರಬಹುದಾದ ಈ ಶ್ಲೋಕವನ್ನು ರಾಜಶೇಖರನು ಕಾವ್ಯಮೀಮಾಂಸೆಯಲ್ಲಿಯೂ ಕ್ಷೇಮೇಂದ್ರನು ಸುವೃತ್ತತಿಲಕದಲ್ಲಿಯೂ ಉದಾಹರಿಸಿದ್ದಾರೆ:

ಆಸೀದ್ದೈತ್ಯೋ ಹಯಗ್ರೀವಃ ಸುಹೃದ್ವೇಶ್ಮಸು ಯಸ್ಯ ತಾಃ ।
ಪ್ರಥಯಂತಿ ಬಲಂ ಬಾಹ್ವೋಃ ಸಿತಚ್ಛತ್ರಸ್ಮಿತಾಃ ಶ್ರಿಯಃ ॥

ಅಭಿಜ್ಞಾನ ಶಾಕುಂತಲದ ವ್ಯಾಖ್ಯಾನದಲ್ಲಿ ರಾಘವಭಟ್ಟನು ಇದನ್ನು ಉದಾಹರಿಸಿದ್ದಾನೆ:

ಯಂ ಪ್ರೇಕ್ಷ್ಯ ಚಿರರೂಢಾಪಿ ನಿವಾಸಪ್ರೀತಿರುಜ್ಝಿತಾ ।
ಮದೇನೈರಾವಣಮುಖೇ ಮಾನೇನ ಹೃದಯೇ ಹರೇಃ ॥

ಮಮ್ಮಟನು ಕಾವ್ಯಪ್ರಕಾಶದಲ್ಲಿ ವಾಚ್ಯಚಿತ್ರಕ್ಕೆ ಉದಾಹರಣೆಯಾಗಿ ಕೊಟ್ಟಿರುವ 'ವಿನಿರ್ಗತಂ ಮಾನದಮಾತ್ಮಮಂದಿರಾತ್...' ಎಂಬುದು ಹಯಗ್ರೀವವಧದ ಶ್ಲೋಕವೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ, ಹೀಗೆಯೇ ಭೋಜರಾಜನು ಮೇಂಠನದೆಂದು ಕೆಲವು ಶ್ಲೋಕಗಳನ್ನು ಉದ್ಧರಿಸಿದ್ದಾನೆ.

ಮಂಖನು ತನ್ನ ಶ್ರೀಕಂಠಚರಿತದಲ್ಲಿ ಮೇಂಠನನ್ನು ಸ್ತುತಿಸಿದ್ದಾನೆ. ರಾಜಶೇಖರನು ಭರ್ತೃಮೇಂಠನನ್ನು ವಾಲ್ಮೀಕಿಯ ಅವತಾರವೆಂದೂ, ಆಮೇಲೆ ಭವಭೂತಿ ಮತ್ತು ತಾನು ಮುಂದಿನ ಅವತಾರಗಳೆಂದೂ ಹೇಳಿಕೊಂಡಿದ್ದಾನೆ.

ಬಭೂವ ವಲ್ಮೀಕಭವಃ ಪುರಾ ಕವಿಃ
ತತಃ ಪ್ರಪೇದೇ ಭುವಿ ಭರ್ತೃಮೇಂಠತಾಂ ।
ಸ್ಥಿತಃ ಪುನರ್ಯೋ ಭವಭೂತಿರೇಖಯಾ
ಸ ವರ್ತತೇ ಸಂಪ್ರತಿ ರಾಜಶೇಖರಃ

ಈ ಮಾತಿನಿಂದ ಮೇಂಠನು ರಾಮಾಯಣ ಕಾವ್ಯವನ್ನು ಬರೆದಿದ್ದನೆಂದು ಊಹಿಸಲು ಅವಕಾಶವಿದೆ. ಅವನು 100 ಸರ್ಗಗಳ ರಾಮಚರಿತವನ್ನು ರಚಿಸಿದ್ದನೆಂಬ ಕಿಂವದಂತಿಯೂ ಇದೆ.

## 5. ಜಾನಕೀಹರಣ (ಕ್ರಿ. ಶ. 6ನೇ ಶತಮಾನ)

ಇದರ ಕವಿಯಾದ ಕುಮಾರದಾಸನು ಸಿಂಹಳದ ರಾಜ. ಇವನ ತಂದೆ ಕುಮಾರಮಣಿಯು ಯುದ್ಧದಲ್ಲಿ ಮೃತನಾದ ದಿನವೇ ಕುಮಾರದಾಸನು ಜನಿಸಿದನು. ಶ್ರೀಮೇ



ಅಗ್ರಬೋಧಿಗಳೆಂಬ ಇಬ್ಬರು ಸೋದರಮಾವಂದಿರು ಈತನನ್ನು ಪ್ರೀತಿಯಿಂದ ಪೋಷಿಸಿದರು ಎಂದು ಒಂದು ಹಸ್ತಪ್ರತಿಯ ಕಡೆಯ ಶ್ಲೋಕಗಳಿಂದ ತಿಳಿದು ಬರುತ್ತದೆ. ಮಹಾವಂಶವೆಂಬ ಸಿಂಹಳದ ಬೌದ್ಧಗ್ರಂಥದಲ್ಲಿ ಮೊಗ್ಗಳನ ಮಗ ಕುಮಾರಧಾತು ಸೇನನು ಕ್ರಿ.ಶ. 515—24 ರಲ್ಲಿ ರಾಜನಾಗಿದ್ದನೆಂದು ಹೇಳಿದೆ. ಪೂಜಾವಳಿ, ನಿಕಾಯಸಗ್ರಹ—ಮೊದಲಾದ ಗ್ರಂಥಗಳಲ್ಲಿ ಮೊಗ್ಗಳನ ಮಗ ಕುಮಾರದಾಸನೆಂದೂ ಅವನು ವಿದ್ವಾಂಸನೂ ಕವಿಯೂ ಆಗಿದ್ದನೆಂದೂ ವರ್ಣಿಸಿದೆ. ಕ್ರಿ.ಶ. 15ನೇ ಶತಮಾನದ ಒಂದು ಸಿಂಹಳೀಯ ಗ್ರಂಥದಲ್ಲಿ ಈತನೇ ಜಾನಕೀಹರಣವನ್ನು ಬರೆದನೆಂದೂ ಹೇಳಿದೆ.

ಕಾಳಿದಾಸನೂ ಕುಮಾರದಾಸನೂ ಸ್ನೇಹಿತರೆಂದು ಕಥೆ ಇದೆ. ಒಮ್ಮೆ ಕುಮಾರದಾಸನು ತನ್ನ ಅರಮನೆಯ ಗೋಡೆಯ ಮೇಲೆ

ಕಮಲೇ ಕಮಲೋತ್ಪತ್ತಿಃ ಶ್ರೂಯತೇ ನ ಚ ದೃಶ್ಯತೇ ।

ಎಂಬ ಶ್ಲೋಕಾರ್ಧವನ್ನು ಬರೆದು ಅದನ್ನು ಪೂರ್ಣ ಮಾಡಿದವರಿಗೆ ದೊಡ್ಡ ಪಾರಿತೋಷಿಕವನ್ನು ಕೊಡುವುದಾಗಿ ಪ್ರಕಟಿಸಿದನಂತೆ. ಅಕಸ್ಮಾತ್ತಾಗಿ ಅದನ್ನು ಕಂಡ ಕಾಳಿದಾಸನು ಅದರ ಕೆಳಗೆ

ಬಾಲೇ ತವ ಮುಖಾಂಭೋಜೇ ದೃಷ್ಟಮಿಂದೀವರದ್ವಯಂ ॥

ಎಂದು ಬರೆದು ಶ್ಲೋಕವನ್ನು ಪೂರ್ತಿಮಾಡಿದನಂತೆ. ಕುಮಾರದಾಸನ ಒಬ್ಬ ವೇಶ್ಯೆ ಇದನ್ನು ತಿಳಿದುಕೊಂಡು ವಂಚನೆಯಿಂದ ಕಾಳಿದಾಸನನ್ನು ಕೊಂದು, ತಾನೇ ಆ ಶ್ಲೋಕವನ್ನು ಪೂರ್ತಿಮಾಡಿರುವುದಾಗಿ ರಾಜನಿಗೆ ತಿಳಿಸಿದಳಂತೆ. ರಾಜನು ಅವಳ ಮಾತನ್ನು ನಂಬದೆ ಕೂಲಂಕಷವಾಗಿ ತನಿಖೆ ಮಾಡಿಸಿದನು. ಮಿತ್ರನಾದ ಕಾಳಿದಾಸನಿಗೆ ಸಂಭವಿಸಿದ ದುರಂತವನ್ನರಿತು ಶೋಕತಪ್ತನಾಗಿ ರಾಜನು ಕಾಳಿದಾಸನ ಚಿತೆಯಲ್ಲಿ ಬಿದ್ದು ಪ್ರಾಣವನ್ನು ನೀಗಿದನಂತೆ.

ಇದು ವಿಶ್ವಾಸಾರ್ಹವಾದ ಕಥೆಯಲ್ಲವಾದರೂ ಕಾಳಿದಾಸನ ರಘುವಂಶದ ಅನುಕರಣೆ ಜಾನಕೀಹರಣದಲ್ಲಿ ಸ್ಫುಟವಾಗಿ ಕಾಣುತ್ತದೆಯಾದ್ದರಿಂದ ಕುಮಾರದಾಸನು ಕಾಳಿದಾಸನ ಅನಂತರದವನೆಂಬುದು ಸ್ಪಷ್ಟವಾಗಿದೆ.

ರಾಜಶೇಖರನ ಈ ಶ್ಲೋಕವೂ ಇದನ್ನೇ ಸಮರ್ಥಿಸುತ್ತದೆ:

ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ ।
ಕವಿಃ ಕುಮಾರದಾಸಶ್ಚ ರಾವಣಶ್ಚ ಯದಿ ಕ್ಷಮಃ ॥

ಮೇಲೆ ಹೇಳಿದ ಅನೇಕ ಸಿಂಹಳಗ್ರಂಥಗಳ ಒಮ್ಮುಖವಾದ ಹೇಳಿಕೆಯನ್ನು ನಂಬುವುದಾದರೆ ಜಾನಕೀಹರಣವನ್ನು ಮೊಗ್ಗಳನ ಮಗ ಕುಮಾರದಾಸನು ಬರೆದಿದ್ದಾನೆಂದೂ ಇವನ ಕಾಲ 6ನೆಯ ಶತಮಾನವೆಂದೂ ಹೇಳಬಹುದು.

ಆದರೆ ಹಿಂದೆ ತಿಳಿಸಿದ ಹಸ್ತಪ್ರತಿಯ ಪ್ರಕಾರ ಕುಮಾರಮಣಿಯ ಮಗ ಕುಮಾರದಾಸ. ಮಹಾವಂಶದ ಪ್ರಕಾರ ಮೊಗ್ಗಳನ ಮಗ ಕುಮಾರಧಾತುಸೇನ. ಅಲ್ಲದೆ ಕ್ರಿ. ಶ. 7ನೆಯ ಶತಮಾನದಲ್ಲಿ ರಚಿತವಾದ ಕಾಶಿಕಾವೃತ್ತಿ ಎಂಬ ವ್ಯಾಕರಣಗ್ರಂಥದಲ್ಲಿ ಉದಾಹರಿಸಿದ ಶಬ್ದಗಳನ್ನು

ಜಾನಕೀಹರಣದಲ್ಲಿ ಕಾಣಬಹುದು. ಆದ್ದರಿಂದ ಕುಮಾರಧಾತುಸೇನನು ಜಾನಕೀಹರಣದ ಕರ್ತೃವಲ್ಲವೆಂದೂ ಕುಮಾರದಾಸನು 7ನೆಯ ಶತಕದವನಿರಬಹುದೆಂದೂ ಕೆಲವು ವಿದ್ವಾಂಸರ ಅಭಿಮತ.*

### ಕಾವ್ಯ ಪರಿಚಯ

ಜಾನಕೀಹರಣದಲ್ಲಿ 20 ಸರ್ಗಗಳಿವೆ. ಹೆಸರೇ ಸೂಚಿಸುವಂತೆ ರಾಮಾಯಣ ಕಥಾವಸ್ತು. ಕಥೆ ಹಳೆಯದಾದರೂ ಕವಿಯ ವರ್ಣನಾಶಕ್ತಿ ಪ್ರಶಂಸನೀಯವಾದದ್ದು. 9ನೆಯ ಸರ್ಗದಲ್ಲಿ ದಶರಥನು ರಾಮನಿಗೆ ಪಟ್ಟಾಭಿಷೇಕ ಮಾಡಲು ಉದ್ದೇಶಿಸಿ ಕೆಲವು ರಾಜನೀತಿಗಳನ್ನು ಉಪದೇಶಿಸುತ್ತಾನೆ. ಮುಂದೆ ಕಥೆ ಬೇಗ ಬೇಗ ಓಡುತ್ತದೆ. 15ನೆಯ ಸರ್ಗದಲ್ಲಿ ರಾವಣನ ಬಳಿಗೆ ಹೋದ ಅಂಗದನ ರಾಯಭಾರದ ವೃತ್ತಾಂತವಿದೆ. ಉಳಿದ ಕಥಾಭಾಗದಲ್ಲಿ ವಿಶೇಷ ವಿಲ್ಲವಾದರೂ ಸೂರ್ಯೋದಯ, ಸೂರ್ಯಾಸ್ತ, ರಾತ್ರಿ, ಋತು, ಪರ್ವತಗಳ ವರ್ಣನೆ ಸುಂದರವಾಗಿದೆ. ಕುಮಾರದಾಸನಿಗೆ ವ್ಯಾಕರಣಶಾಸ್ತ್ರದಲ್ಲಿ ನೈಪುಣ್ಯವಿತ್ತೆಂದು ಹೇಳಬಹುದು. ಪಶ್ಯತೋಹರ, ಭಿದೇಲಿಮ ಮುಷ್ಟಿಂಧಯ, ಶಾಯಿಕಾ, ಸೌಖರಾತ್ರಿಕ—ಮುಂತಾದ ವಿಶಿಷ್ಟ ಪ್ರಯೋಗಗಳನ್ನು ಮಾಡಿದ್ದಾನೆ. ದ್ರುತವಿಲಂಬಿತ, ಪ್ರಮಿತಾಕ್ಷರಾ, ವೈತಾಲೀಯ ಮೊದಲಾದವನ್ನು ಸರ್ಗವೃತ್ತಗಳನ್ನಾಗಿ ಬಳಸಿದ್ದಾನೆ. ಶಬ್ದಾಲಂಕಾರಗಳು ಪರಿಮಿತ. ಕುಮಾರದಾಸನು ಕಾವ್ಯಮರ್ಮವನ್ನು ಬಲ್ಲ ಉತ್ತಮಶ್ರೇಣಿಯ ಕವಿ.

1. ಮುಗ್ಧಕಿಶೋರನಾದ ರಾಮನ ಬಾಲಲೀಲೆ ಇದು : "ರಾಮನು ಇಲ್ಲಿಲ್ಲ. ಎಲ್ಲಿ ಹೋದ ? ಎಂದು ಸ್ತ್ರೀಯರು ಹುಡುಕಿದಾಗ, ಆ ಬಾಲಕನು ಕೈಯಿಂದ ಮುಖವನ್ನು ಮುಚ್ಚಿಕೊಂಡು 'ತಾನು ಇಲ್ಲ' ಎಂದು ಸೂಚಿಸಿದನಂತೆ"—

> ನ ಸ ರಾಮ ಇಹ ಕ್ವಯಾತ ಇ—
> ತ್ಯನುಯುಕ್ತೋ ವನಿತಾಭಿರಗ್ರತಃ ।
> ನಿಜಹಸ್ತಪುಟಾ ವೃತಾನನೋ
> ವಿದಧೇऽಲೀಕನಿಲೀನಮರ್ಭಕಃ ॥

2. ಚಳಿಗಾಲ ಕಳೆದು ವಸಂತಕಾಲ ಬರಲಾಗಿ ರಾತ್ರಿ ಬೇಗನೆ ಕ್ಷಯಿಸಿತು, ಹಗಲು ದೀರ್ಘ ವಾಯಿತು ಎನ್ನುವಾಗ ಉಪಯೋಗಿಸಿರುವ ಈ ಉತ್ಪ್ರೇಕ್ಷೆಗಳು ಎಷ್ಟು ಸೊಗಸಾಗಿ ಹೊಂದಿಕೊಂಡಿವೆ—

* ಟಿಪ್ಪಣಿ :

ಒಬ್ಬನಿಗೇ ಕುಲ, ರೂಢಿ, ಬಿರುದು ಮುಂತಾದ ಕಾರಣಗಳಿಂದ ಅನೇಕ [ಹೆಸರುಗಳಿರುವುದು ಸಂಭವ ಜಾನಕೀಹರಣದಲ್ಲಿರುವ ಮರ್ಮಾವಿತ್, ಸತ್ಯಾಪಯತಿ, ಅಚಕಮತ–ಮೊದಲಾದ ವಿಶಿಷ್ಟ ಶಬ್ದಗಳು ಪರಂಪರೆಯಿಂದ ಬಂದ ವ್ಯಾಕರಣೋದಾಹರಣೆಗಳೆನ್ನಬಹುದು. ಕಾಶಿಕಾಕಾರನೇ ಅವನ್ನು ನಿರ್ಮಿಸಿದನೆಂದು ಹೇಳಲು ಆಧಾರ ಸಾಲದು.



> ಪ್ರಾಲೇಯಕಾಲಪ್ರಿಯವಿಪ್ರಯೋಗ
> ಗ್ಲಾನೇವ ರಾತ್ರಿಃ ಕ್ಷಯಮಾಸಸಾದ ।
> ಜಗಾಮ ಮಂದಂ ದಿವಸೋ ವಸಂತ
> ಕ್ರೂರಾತಪಾಕ್ರಾಂತ ಇವ ಕ್ರಮೇಣ ॥

3. ಗಂಡನ ಮೇಲೆ ಕೋಪ ಬಂದರೂ ಕುಲಸ್ತ್ರೀಯರು ಪರುಷವಚನವನ್ನಾಡುವುದಿಲ್ಲ. ಮಾತನಾಡದಿರುವುದೇ ಅವನನ್ನು ದಂಡಿಸಲು ಸರಿಯಾದ ಸಾಧನ—

> ಗತಾಪಿ ಭರ್ತ್ರೇ ಪರಿಕೋಪಮಾಯತಂ
> ಗಿರಂ ಕೃಥಾ ಮಾ ಪರುಷಾರ್ಥವಾದಿನೀಂ ।
> ಕುಲಸ್ತ್ರಿಯೋ ಭರ್ತೃಜನಸ್ಯ ಭರ್ತ್ಸನೇ
> ವದಂತಿ ಮೌನಂ ಪರಮಂ ಹಿ ಸಾಧನಂ ॥

## ಭಾರವಿ—ಕಿರಾತಾರ್ಜುನೀಯ

### (ಕ್ರಿ.ಶ. 6ನೆಯ ಶತಮಾನ)

ಕ್ರಿ.ಶ. 634ರಲ್ಲಿ ಪ್ರತಿಷ್ಠಿತವಾದ ಐಹೊಳೆಯ ಶಾಸನದಲ್ಲಿ ಈ ಪದ್ಯವಿದೆ :

> ಯೇನಾಯೋಜಿ ನವೇऽಶ್ಮಸ್ಥಿರಮರ್ಥವಿಧೌ **ವಿವೇಕಿನಾ ಜಿನವೇಶ್ಮ** ।
> ಸ ವಿಜಯತಾಂ ರವಿಕೀರ್ತಿಃ **ಕವಿತಾಶ್ರಿತಕಾಲಿದಾಸಭಾರವಿಕೀರ್ತಿಃ** ॥

ಭಾರವಿಯು ಕಾಳಿದಾಸನಂತೆ ಉಪಮಾನಯೋಗ್ಯನಾಗುವಷ್ಟು ಕೀರ್ತಿಯನ್ನು ಗಳಿಸ ಬೇಕಾದರೆ, ಶಾಸನಸ್ಥಾಪನೆಗೆ ಒಂದು ಶತಕದಷ್ಟಾದರೂ ಹಿಂದಿನವನಾಗಿರಬೇಕು. ಜಯಾದಿತ್ಯನು 'ಪ್ರಕಾಶನ ಸ್ಥೇಯಾಖ್ಯಯೋಶ್ಚ' ಎಂಬ ಪಾಣಿನಿಸೂತ್ರವನ್ನು (1–3–24) ವ್ಯಾಖ್ಯಾನಿಸುವಾಗ ಕಾಶಿಕಾವೃತ್ತಿಯಲ್ಲಿ 'ಸಂಶಯ್ಯ ಕರ್ಣಾದಿಷು ತಿಷ್ಠತೇ ಯಃ' ಎಂಬ ಕಿರಾತಾರ್ಜುನೀಯದ ಶ್ಲೋಕಪಾದವನ್ನು ಉದಾಹರಿಸಿದ್ದಾನೆ. ಜಯಾದಿತ್ಯನು ಕ್ರಿ.ಶ. 660ಕ್ಕಿಂತ ಈಚಿನವನಲ್ಲವೆಂದು ಪ್ರೊ॥ ಮ್ಯಾಕ್ಸ್‌ಮುಲ್ಲರ್ ಹೇಳಿದ್ದಾರೆ. ಶ್ರೀ ಬೆಲ್ವಾಲ್ಕರ್ ರವರು 'Systems of Sanskrit Grammar' ಎಂಬ ತಮ್ಮ ಪುಸ್ತಕದಲ್ಲಿ ಇದೇ ಕಾಲವನ್ನು ಒಪ್ಪಿದ್ದಾರೆ. ಭಾರವಿಯ ಕಿರಾತಾರ್ಜುನೀಯವು ವಿದ್ವಾಂಸರ ಗೌರವವನ್ನು ಪಡೆದು ವ್ಯಾಕರಣ ಶಾಸ್ತ್ರದಲ್ಲಿ ಉದಾಹರಣೆಗೆ ಯೋಗ್ಯವಾಗಬೇಕಾದರೆ, ಕಾಶಿಕಾವೃತ್ತಿಗಿಂತ ಒಂದು ಶತಕದಷ್ಟಾದರೂ ಪ್ರಾಚೀನವಾಗಿರಬೇಕು. ಅಲ್ಲದೆ ಭಾರವಿಯನ್ನು ಅನುಕರಿಸಿ ಸ್ಪರ್ಧೆಯಿಂದ 'ಶಿಶುಪಾಲವಧ' ವನ್ನು ರಚಿಸಿದ ಮಾಘನು ಕ್ರಿ.ಶ. 7ನೇ ಶತಮಾನಕ್ಕಿಂತ ಈಚಿನವನಲ್ಲ. ಆದುದರಿಂದ ಭಾರವಿಯು ಕ್ರಿ.ಶ. 6ನೆಯ ಶತಮಾನಕ್ಕಿಂತ ಅರ್ವಾಚೀನನಲ್ಲ ಎಂದು ಹೇಳಬಹುದು.

ದಂಡಿಯುದೆಂದು ಹೇಳಲಾದ 'ಅವಂತಿಸುಂದರೀಕಥೆ'ಯಲ್ಲಿ ಭಾರವಿಗೆ ಸಂಬಂಧಿಸಿದ ಒಂದು ವೃತ್ತಾಂತ ಬಂದಿದೆ. ಅದರ ಪ್ರಕಾರ ಭಾರವಿಯ ಜನ್ಮನಾಮ ದಾಮೋದರ, ತಂದೆ ನಾರಾಯಣಸ್ವಾಮಿ.

ಈತನು ಕೌಶಿಕಗೋತ್ರದ ಬ್ರಾಹ್ಮಣ. ಈ ವಂಶದವರು ಭಾರತವರ್ಷದ ಪಶ್ಚಿಮೋತ್ತರ ದಿಗ್ಭಾಗದಲ್ಲಿದ್ದ ಆನಂದಪುರದಿಂದ ದಕ್ಷಿಣಾಪಥಕ್ಕೆ ವಲಸೆ ಬಂದವರು. ದಾಮೋದರನು ತನ್ನ ಅನುಪಮಪ್ರತಿಭೆಯಿಂದ ಕೀರ್ತಿಯನ್ನು ಗಳಿಸಿ 'ಭಾರವಿ' ಎಂದು ವಿಖ್ಯಾತನಾದನು. ಇವನು ಚಾಲುಕ್ಯರಾಜನಾದ ವಿಷ್ಣುವರ್ಧನನ ಗೆಳೆಯ. ಭಾರವಿ ಕೆಲವು ಕಾಲ ಗಂಗ ದುರ್ವಿನೀತನ ಆಸ್ಥಾನದಲ್ಲಿಯೂ, ಪಲ್ಲವರಾಜನಾದ ಸಿಂಹವಿಷ್ಣುವಿನ ಆಸ್ಥಾನದಲ್ಲಿಯೂ ನೆಲಸಿದನು. ಇದರಲ್ಲಿ ಭಾರವಿಯನ್ನು 'ಮಹಾಶೈವ,' 'ಮಹಾಪ್ರಭಾವ,' 'ಪ್ರದೀಪ್ತಭಾಸ' ಎಂದು ಉಲ್ಲೇಖಿಸಿದೆ. ಈ ಕಥೆಯಲ್ಲಿ ಬರುವ ಪಲ್ಲವ ಸಿಂಹವಿಷ್ಣು, ಚಾಲುಕ್ಯ ವಿಷ್ಣುವರ್ಧನ ಮತ್ತು ಗಂಗ ದುರ್ವಿನೀತರು ಸಮಕಾಲಿಕರೆಂದು ಇತಿಹಾಸ ನಿಶ್ಚಯಿಸಿದೆ. ಕೆಲವು ಶಾಸನಗಳು ದುರ್ವಿನೀತರಾಜನನ್ನು 'ಕಿರಾತಾರ್ಜುನೀಯಪಂಚದಶಸರ್ಗಟೀಕಾಕಾರ'ನೆಂದು ಬಣ್ಣಿಸಿವೆ. ಇವನ ಕಾಲ ಕ್ರಿ.ಶ. 6ನೆಯ ಶತಮಾನದ ಕಡೆಯ ಭಾಗ 'ಅವಂತಿಸುಂದರೀಕಥೆ'ಯಲ್ಲಿ ಅಲಂಕಾರಿಕನಾದ ದಂಡಿಯನ್ನು ಭಾರವಿಯ ಪ್ರಪೌತ್ರನೆಂದು ಹೇಳಲಾಗಿದೆ. ಆದುದರಿಂದ ಭಾರವಿಯು ಕ್ರಿ.ಶ. 6ನೆಯ ಶತಮಾನದಲ್ಲಿ ಇದ್ದನೆಂದು ಹೇಳಬಹುದು.

ಭಾರವಿಗೆ 'ಶತಪುಷ್ಪ' ಎಂಬ ಇನ್ನೊಂದು ಹೆಸರು ಇದ್ದಿತೆಂದು ತಾರಾನಾಥ ತರ್ಕವಾಚಸ್ಪತಿಗಳ ನಿಘಂಟುವಿನಲ್ಲಿ ಬರೆದಿದೆ. ಈ ಕವಿಗೆ 'ಛತ್ರಭಾರವಿ,' 'ಆತಪತ್ರಭಾರವಿ' ಎಂಬ ಸೋಪಾಧಿಕವಾದ ಹೆಸರು ಈ ಕೆಳಗಿನ ಶ್ಲೋಕದಿಂದ ಬಂದಿತೆಂದು ಹೇಳುತ್ತಾರೆ—

ಉತ್ಫುಲ್ಲಸ್ಥಲನಲಿನೀವನಾದಮುಷ್ಮಾತ್
ಉದ್ಧೂತಃ ಸರಸಿಜಸಂಭವಃ ಪರಾಗಃ ।
ವಾತ್ಯಾಭಿರ್ವಿಯತಿ ವಿವರ್ತಿತಃ ಸಮಂತಾತ್
ಆಧತ್ತೇ ಕನಕಮಯಾತಪತ್ರಲಕ್ಷ್ಮೀಂ ॥ ಕಿರಾ. 5, 39

ಭಾರವಿಯ ವಿಷಯವಾಗಿ ಒಂದು ದಂತಕಥೆ ಇದೆ;

ಈತನು ಚಿಕ್ಕವಯಸ್ಸಿನಲ್ಲಿಯೇ ವ್ಯಾಕರಣಾದಿ ಸಕಲಶಾಸ್ತ್ರಸಂಪನ್ನನಾಗಿ ಉತ್ತಮವಾದ ಕವಿತಾಶಕ್ತಿಯನ್ನು ಪಡೆದಿದ್ದನು. ವಿದ್ವಾಂಸರು ಈತನ ತಂದೆಯ ಬಳಿ ಮಗನ ಕವಿತಾಸಾಮರ್ಥ್ಯವನ್ನೂ, ಶಾಸ್ತ್ರಪಾಂಡಿತ್ಯವನ್ನೂ ವರ್ಣಿಸುತ್ತಿದ್ದರು. ಆದರೆ ತಂದೆಯು ಮಾತ್ರ ಮಗನನ್ನು ಹೊಗಳದೆ ಎದುರಿಗೆ ನಿಂದಿಸುತ್ತಿದ್ದನು. ಇದರಿಂದ ಭಾರವಿಗೆ ತಂದೆಯ ಮೇಲೆ ಕೋಪ ಹುಟ್ಟಿತು. ತಂದೆ ಭೋಜನಕ್ಕೆ ಕುಳಿತಾಗ ಅವನ ತಲೆಯ ಮೇಲೆ ಕಲ್ಲನ್ನುರುಳಿಸಿ ಕೊಂದುಹಾಕಬೇಕೆಂದು ಒಂದು ದಿನ ಹೊಂಚುಹಾಕಿ ಕುಳಿತಿದ್ದನು. ಆ ಸಮಯದಲ್ಲಿ ತಂದೆ ತಾಯಿಗಳಿಗೆ ನಡೆದ ಸಂಭಾಷಣೆಯಿಂದ ತಂದೆಗೆ ಭಾರವಿಯ ಮೇಲೆ ನಿರತಿಶಯವಾತ್ಸಲ್ಯ



ವಿದೆಯೆಂದೂ, ತನ್ನ ಪಾಂಡಿತ್ಯ, ಪ್ರತಿಭೆಗಳನ್ನು ಕಂಡು ಸಂತುಷ್ಟನಾಗಿದ್ದಾನೆಂದೂ, ಆದರೆ ಮಗನನ್ನು ಎದುರಿಗೆ ಹೊಗಳುವುದು ಸರಿಯಲ್ಲವೆಂದೂ, ಬೇಕೆಂತಲೇ ನಿಂದಿಸುತ್ತಾನೆಂಬೂ ಗೊತ್ತಾಯಿತು. ಇದರಿಂದ ಭಾರವಿಗೆ ಬಹಳ ಪಶ್ಚಾತ್ತಾಪವಾಯಿತು. ಅವನು ಏನನ್ನು ಅರಿಯದವನಂತೆ ತಂದೆಯನ್ನು ಸಮೀಪಿಸಿ, ನಿಷ್ಕಾರಣವಾಗಿ ಪಿತೃಹತ್ಯೆ ಮಾಡಲೆಳಸಿದ ಪುತ್ರನಿಗೆ ದಂಡನೆಯೇನೆಂದು ಕೇಳಿದನು. ಭಾರವಿಯ ಉದ್ದೇಶವನ್ನರಿಯದೆ ಆತನು "ಅಂತಹ ಪುತ್ರನು ಆರುತಿಂಗಳವರೆಗೆ ಮಾವನ ಮನೆಯಲ್ಲಿ ವಾಸಮಾಡಬೇಕು" ಎಂದು ತಿಳಿಸಿದನು. ಆಗ ಭಾರವಿಯು ತನ್ನ ಅಪರಾಧವನ್ನು ತಿಳಿಸಿ ಕ್ಷಮೆಯನ್ನು ಬೇಡಿದನಲ್ಲದೆ ಪ್ರಾಯಶ್ಚಿತ್ತಾರ್ಥವಾಗಿ ತನ್ನ ಪತ್ನಿಯೊಡನೆ ಮಾವನ ಮನೆಗೆ ಹೊರಟುಹೋದನು.

ಅಲ್ಲಿ ಕೆಲವು ಕಾಲ ಸುಖವಾಗಿ ಕಳೆಯಿತು. ಹೊರಡುವ ಆಲೋಚನೆಯೇ ಇಲ್ಲದ ಅಳಿಯನ ವಿಷಯದಲ್ಲಿ ಕ್ರಮೇಣ ಉಪೇಕ್ಷೆ, ಅನಾದರಗಳು ಪ್ರಾರಂಭವಾದವು. ಆಮೇಲೆ ಮಾವನ ಹೊಲವನ್ನು ಕಾಯಲು ಹೋಗಬೇಕೆಂದು ಭಾರವಿಗೆ ಆಜ್ಞೆಯಾಯಿತು.

ಕವಿಯು ದುಃಖಿತನಾಗಿ :—

ಶ್ವಶುರಗೃಹನಿವಾಸಃ ಸ್ವರ್ಗತುಲ್ಯೋ ನರಾಣಾಂ
ಯದಿ ವಸತಿ ದಿನಾನಿ ತ್ರೀಣಿ ಪಂಚಾಥ ಸಪ್ತ ।
ದಧಿಮಧುಘೃತಭಕ್ಷ್ಯಕ್ಷೀರಸಾರಪ್ರವಾಹಃ
ತದುಪರಿ ನಿವಸೇಚ್ಚೇತ್ ಪಾದರಕ್ಷಾಪ್ರಯೋಗಃ ॥

ಎಂದು ಹೇಳಿಕೊಳ್ಳುತ್ತಾ ಮಾವನ ಹೊಲವನ್ನು ಕಾಯುತ್ತಿದ್ದನು. ಹೀಗಿರುವಾಗ 'ಕಿರಾತಾರ್ಜುನೀಯ'ವನ್ನು ಬರೆಯಲಾರಂಭಿಸಿದನು. ಹೆಂಡತಿಯು ಹೊಲಕ್ಕೆ ಊಟವನ್ನು ತರುತ್ತಿದ್ದಳು. ಅವಳ ವಿಷಯದಲ್ಲಿಯೂ ತವರುಮನೆಯವರಿಗೆ ತಿರಸ್ಕಾರ ಭಾವನೆಯುಂಟಾಗಿತ್ತು. ಅವಳು ತನ್ನ ದುಃಖವನ್ನು ಪತಿಯೆದುರಿಗೆ ತೋಡಿಕೊಂಡಳು. ಭಾರವಿಯು ಆಕೆಯನ್ನು ಸಮಾಧಾನಪಡಿಸುತ್ತ, ಆಗತಾನೇ ತಾನು ಬರೆದಿದ್ದ 3ನೇ ಸರ್ಗದ—

ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂ ಪದಂ ।
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ (3-30)

ಎಂಬ ಶ್ಲೋಕವನ್ನು ಒಂದು ಪತ್ರದಲ್ಲಿ ಬರೆದುಕೊಟ್ಟು ಅದನ್ನು ಮಾರಿದರೆ ಹಣವು ದೊರೆಯುವುದೆಂದೂ, ಅದನ್ನು ತನ್ನ ಉಡಿಗೆತೊಡಿಗೆಗಳಿಗೆ ಉಪಯೋಗಿಸಿಕೊಳ್ಳಬಹುದೆಂದೂ ಪತ್ನಿಗೆ ಹೇಳಿದನು. ಒಬ್ಬ ವರ್ತಕನು ನೂರು ಸುವರ್ಣ ನಾಣ್ಯಗಳನ್ನು ಕೊಟ್ಟು ಅದನ್ನು ಕೊಂಡುಕೊಂಡನು. ಭಾರವಿಯು ಆರುತಿಂಗಳು ಮಾವನ ಮನೆಯಲ್ಲಿ ವಾಸಮಾಡಿ ಮಹಾಪಾಪದಿಂದ ಪರಿಶುದ್ಧನಾಗಿ ಪತ್ನಿಯೊಡನೆ ತನ್ನ ಮನೆಗೆ ಹಿಂದಿರುಗಿದನು.

ಭಾರವಿಯ ಕಾವ್ಯ ಕಿರಾತಾರ್ಜುನೀಯ. ಈತನು ಕಿರಾತಾರ್ಜುನೀಯವನ್ನು ಬಿಟ್ಟು ಬೇರೆ ಯಾವುದಾದರೂ ಗ್ರಂಥವನ್ನು ಬರೆದಿದ್ದಾನೋ, ಇಲ್ಲವೋ ತಿಳಿಯದು, ಸದುಕ್ತಿಕರ್ಣಾಮೃತದಲ್ಲಿ

ಕಿರಾತಾರ್ಜುನೀಯದಲ್ಲಿಲ್ಲದ 2 ಶ್ಲೋಕಗಳು ಭಾರವಿಯ ಹೆಸರಿನಿಂದ ಉದ್ಧೃತವಾಗಿವೆ[1].

ಕಿರಾತಾರ್ಜುನೀಯವು 18 ಸರ್ಗಗಳಿರುವ ಮಹಾಕಾವ್ಯ. ಇದರಲ್ಲಿ 1040 ಶ್ಲೋಕಗಳಿವೆ. "ಅರ್ಜುನನು ಶಿವನನ್ನು ಮೆಚ್ಚಿಸುವುದಕ್ಕಾಗಿ ಇಂದ್ರಕೀಲದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಪರೀಕ್ಷಾರ್ಥವಾಗಿ ಶಿವನು ಕಿರಾತವೇಷಧಾರಿಯಾಗಿ ಬಂದನು. ಅವರಿಬ್ಬರಿಗೂ ಯುದ್ಧ ನಡೆಯಿತು. ಕಡೆಯಲ್ಲಿ ಪರಮೇಶ್ವರನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಿದನು" ಎಂಬ ಮಹಾಭಾರತದ ಕಥೆ ಇಲ್ಲಿ ವರ್ಣಿತವಾಗಿದೆ. ಮಹಾಕಾವ್ಯಕ್ಕೆ ಉಚಿತವಾದ ಸಾಂಪ್ರದಾಯಿಕ ವರ್ಣನೆಗಳಿಂದ ಕವಿ ಈ ಕಥಾಭಾಗವನ್ನು ವಿಸ್ತರಿಸಿದ್ದಾನೆ.

‘ಪ್ರಕೃತಿಮಧುರಾ ಭಾರವಿಗಿರಃ’ ಎಂಬ ಪ್ರಶಂಸೆ ಭಾರವಿಗೆ ಸಲ್ಲತಕ್ಕದ್ದಾದರೂ ಕಿರಾತಾರ್ಜುನೀಯದ ಮೊದಲ ಮೂರು ಸರ್ಗದ ಭಾಷಾಶೈಲಿ ಪೆಡುಸಾಗಿದೆ. ಇದನ್ನು "ಪಾಷಾಣತ್ರಯೀ" ಎಂದು ಹೇಳುವುದುಂಟು. ಮುಖ್ಯವಾಗಿ ರಾಜನೀತಿಯ ಪ್ರಸ್ತಾಪ ಇಲ್ಲಿ ಬಂದಿದೆ. ಪಾಂಡವರು ವನವಾಸದಲ್ಲಿದ್ದ ಸಮಯದಲ್ಲಿ ಧರ್ಮರಾಜನಿಂದ ನಿಯುಕ್ತನಾದ ಒಬ್ಬ ಗುಪ್ತಚಾರನು ದುರ್ಯೋಧನನರಾಜ್ಯವೃತ್ತಾಂತವನ್ನೂ, ಅವನ ಉದ್ಯಮವನ್ನೂ ಅರಿತುಬಂದು ಧರ್ಮರಾಜನಿಗೆ ತಿಳಿಸುತ್ತಾನೆ. ಅನಂತರ ಪಾಂಡವರಲ್ಲಿ ಮಂತ್ರಾಲೋಚನೆ ನಡೆಯುತ್ತದೆ. ಮಾತನಾಡತಕ್ಕವರು ಧರ್ಮರಾಜ, ಭೀಮಸೇನ, ದ್ರೌಪದಿ—ಈ ಮೂವರೇ. ಅನಂತರ ವ್ಯಾಸರ ಆಗಮನ. ಅವರಿಂದ ಹಿತಬೋಧನೆ. ಅರ್ಜುನನಿಗೆ ಮಂತ್ರೋಪದೇಶ, ತಪಶ್ಚರಣೆಗಾಗಿ ಇಂದ್ರಕೀಲಕ್ಕೆ ಅರ್ಜುನನ ನಿರ್ಗಮನ. 4ನೆಯ ಸರ್ಗದಿಂದ ಎಲ್ಲವೂ ಅರ್ಜುನನನ್ನೇ ಕೇಂದ್ರೀಕರಿಸಿದ ಕಥಾವಿಸ್ತಾರ. ಮುಂದೆ ಯುದ್ಧ ಪ್ರಸಂಗದಲ್ಲಿ ಬರುವ ಶಬ್ದಚಿತ್ರಗಳನ್ನು ಬಿಟ್ಟರೆ ಭಾರವಿಯ ಶೈಲಿ ಎಲ್ಲೆಡೆ ಮಧುರವಾಗಿದೆ; ರಸವತ್ತಾಗಿದೆ

ಕಿರಾತಾರ್ಜುನೀಯಕ್ಕೆ ಪ್ರಕಾಶವರ್ಷ, ಜೋನರಾಜ, ಏಕನಾಥ, ಧರ್ಮವಿಜಯ, ವಿನಯಸುಂದರ, ನರಹರಿ, ಮಲ್ಲಿನಾಥ—ಮೊದಲಾದವರು ವ್ಯಾಖ್ಯಾನವನ್ನು ಬರೆದಿದ್ದಾರೆ. ಇವುಗಳಲ್ಲಿ ಮಲ್ಲಿನಾಥನ ‘ಘಂಟಾಪಥ’ ವ್ಯಾಖ್ಯಾನವು ಪ್ರಸಿದ್ಧವಾದುದು. ಈ ಕಾವ್ಯವನ್ನು ನಾರಿಕೇಳಪಾಕಕ್ಕೆ ಉದಾಹರಣೆಯಾಗಿ ಹೇಳುವುದುಂಟು. ವ್ಯಾಖ್ಯಾನಕಾರನಾದ ಮಲ್ಲಿನಾಥನು

ನಾರಿಕೇಲಫಲಸಮ್ಮಿತಂ ವಚೋ
ಭಾರವೇಃ ಸಪದಿ ತದ್ವಿಭಜ್ಯತೇ ।
ಸ್ವಾದಯಂತು ರಸಗರ್ಭನಿರ್ಭರಂ
ಸಾರಮಸ್ಯ ರಸಿಕಾ ಯಥೇಪ್ಸಿತಂ ॥

ಎಂದಿದ್ದಾನೆ. ‘ಸ ನಾರಿಕೇಲಪಾಕಃ ಸ್ಯಾದಂತರ್ಗೂಢರಸೋದಯಃ —(ಪ್ರ.ರ.)

---

1. (ಅ) ಯೇನ ಧ್ವಸ್ತಮನೋಭವೇನ.............................”
(ಅ) ಸೋದ್ವೇಗಃ ಕರಿಕೃತ್ತವಾಸಸಿ ..........................” ಸುಭಾಷಿತಾವಳಿಯಲ್ಲಿ ಮೊದಲನೆಯದನ್ನು "ಕಸ್ಯಾಪಿ" ಎಂದೂ, ಸೂಕ್ತಿ ಮುಕ್ತಾವಳಿಯಲ್ಲಿ ಚಂಡಕನಿಯದೆಂದೂ ಹೇಳಿದೆ.



‘ಭಾರವೇರರ್ಥಗೌರವಂ’ ಎಂದು ವಿದ್ವಾಂಸರು ಹೇಳುವುದುಂಟು. ಭಾರವಿಯೇ ‘ಸ್ಫುಟತಾನ ಪದೈರಪಾಕೃತಾ ನ ಚ ನ ಸ್ವೀಕೃತಮರ್ಥಗೌರವಂ’ (ಕಿರಾ. 2–27) ಎಂದು ಈ ಶಬ್ದವನ್ನು ಬಳಸಿದ್ದಾನೆ. ‘ಅರ್ಥಭೂಯಸ್ತ್ವಂ’ ಎಂದು ಮಲ್ಲಿನಾಥನು ಅದಕ್ಕೆ ಅರ್ಥವನ್ನು ಬರೆದಿದ್ದಾನೆ. ವಾಕ್‌ಸಂಪತ್ತು ಹೇಗಿರಬೇಕೆಂಬುದನ್ನು ಭಾರವಿಯು 11ನೇ ಸರ್ಗದ 38, 39, 40 ನೆಯ ಶ್ಲೋಕಗಳಲ್ಲಿ ನಿರೂಪಿಸಿದ್ದಾನೆ. ಕವಿಯ ನುಡಿಯಲ್ಲಿಯೇ ಹೇಳುವುದಾದರೆ ಆತನ ವಾಣಿ ‘ಪ್ರಸನ್ನ ಗಂಭೀರಪದಾ’ ‘ವಿವಿಕ್ತವರ್ಣಾಭರಣಾ’ ‘ಪ್ರಸಾದಯಂತೀ ಹೃದಯಾನ್ಯಪಿ ದ್ವಿಷಾಂ’ ಆಗಿದೆ.

ಭಾರವಿಯು ರಾಜನೀತಿಯಲ್ಲಿ ಉತ್ತಮವಾದ ತತ್ತ್ವವನ್ನು ನಿರೂಪಿಸಿದ್ದಾನೆ, ಕಾವ್ಯಾರಂಭದಲ್ಲಿಯೇ ‘ಶ್ರಿಯಃ ಕುರೂಣಾಮಧಿಪಸ್ಯ ಪಾಲನೀಂ ಪ್ರಜಾಸು ವೃತ್ತಿಂ’ ಎಂದಿದ್ದಾನೆ. "ರಾಜನು ಪ್ರಜೆಗಳ ವಿಷಯದಲ್ಲಿ ಸದ್ಭಾವನೆಯಿಂದ ವರ್ತಿಸಿದರೆ ಆವರ್ತನೆಯೇ ಅವನ ರಾಜ್ಯಾಧಿಕಾರವನ್ನು ಉಳಿಸುವುದು. ವಿಪರೀತವರ್ತನೆ ಅಧಿಕಾರವನ್ನು ಅಳಿಸುವುದು" ಎಂಬ ಶ್ರೇಷ್ಠ ವಾದ ನೀತಿಯ ನಿರೂಪಣೆ ಇಲ್ಲಿದೆ. ‘ದುರ್ಯೋಧನನು ಪ್ರಜೆಗಳನ್ನು ಹೇಗೆ ಪಾಲಿಸುತ್ತಿದ್ದಾನೆ? ಆತನ ವಿಷಯವಾಗಿ ಪ್ರಜೆಗಳ ಅಭಿಪ್ರಾಯವೇನು ?’ ಎಂಬುದನ್ನರಿಯಲು ವನವಾಸದಲ್ಲಿದ್ದ ಯುಧಿಷ್ಠಿರನು ಗೂಢಚಾರನನ್ನು ಕಳಿಸಿದ್ದನು. ರಾಜಾಧಿಕಾರದ ಭದ್ರತೆಗೆ ಪ್ರಜೆಗಳೇ ಮೂಲ ಕಾರಣವೆಂಬ ಅಂಶ ಇಲ್ಲಿ ಪ್ರಕಟವಾಗಿದೆ. ಮುಂದೆ ವನೇಚರನಾಡುವ ಮಾತುಗಳಿಂದ ದುರ್ಯೋಧನನು ಪ್ರಜಾರಂಜನೆಯ ತತ್ತ್ವವನ್ನು ಅವಲಂಬಿಸಿದ್ದನೆಂದು ಗೊತ್ತಾಗುತ್ತದೆ. ಮುಂದೆ ಧರ್ಮರಾಜ, ಭೀಮಸೇನ, ದ್ರೌಪದಿಯರ ಮಾತುಗಳಲ್ಲಿ ರಾಜನೀತಿಯ ವಿವಿಧಮುಖಗಳನ್ನು ಕವಿಯು ಶಾಸ್ತ್ರೀಯವಾಗಿ ವಿವೇಚಿಸಿದ್ದಾನೆ.

ಕಠೋರ ತಪಸ್ಸಿಗಾಗಿ ಇಂದ್ರಕೀಲಕ್ಕೆ ಹೊರಡಲು ಸಿದ್ಧನಾದ ಅರ್ಜುನನನ್ನು ದ್ರೌಪದಿಯು ಬೀಳ್ಕೊಡುವ ಸನ್ನಿವೇಶವನ್ನೂ, ಸಮಯೋಚಿತವಾಗಿ ದ್ರೌಪದಿಯು ಆಡುವ ಮಾತುಗಳನ್ನೂ ಕವಿಯು ರಮಣೀಯವಾಗಿ ಚಿತ್ರಿಸಿದ್ದಾನೆ. ಹಿಮಾವೃತ ನೀಲೋತ್ಪಲಗಳಂತೆ ಅವಳ ನೇತ್ರಗಳು ಬಾಷ್ಪಾವೃತವಾದವು. ಕಂಬನಿಯ ಹನಿ ಕೆಳಗೆ ಬಿದ್ದರೆ ಅಮಂಗಳವೆಂದು ಅವಳು ರೆಪ್ಪೆಯನ್ನು ಮುಚ್ಚಲಿಲ್ಲವಂತೆ—

ತುಷಾರರೇಖಾಕುಲಿತೋತ್ಪಲಾಭೇ ಪರ್ಯಶ್ರುಣೀ ಮಂಗಲಭಂಗಭೀರುಃ ।
ಅಗೂಢಭಾವಾಪಿ ವಿಲೋಕನೇ ಸಾ ನ ಲೋಚನೇ ಮೀಲಯಿತುಂ ವಿಷೇಹೇ ॥
(3–36)

ಪ್ರೇಮರಸಪೂರ್ಣವಾದ ದ್ರೌಪದಿಯ ಒಂದು ನೋಟವೇ ಅರ್ಜುನನಿಗೆ ಪಾಥೇಯ (ಬುತ್ತಿ) ವಾಯಿತು—

ಅಕೃತ್ರಿಮಪ್ರೇಮರಸಾಭಿರಾಮಂ ರಾಮಾರ್ಪಿತಂ ದೃಷ್ಟಿವಿಲೋಭಿ ದೃಷ್ಟಂ ।
ಮನಃಪ್ರಸಾದಾಂಜಲಿನಾ ನಿಕಾಮಂ ಜಗ್ರಾಹ ಪಾಥೇಯಮಿವೇಂದ್ರಸೂನುಃ ॥
(3–37)

ಕಿರಾತಾರ್ಜುನೀಯದಲ್ಲಿ ವೀರರಸವು ಪ್ರಧಾನ. ಶೃಂಗಾರಾದಿ ರಸಗಳು ಆನುಷಂಗಿಕ. ಕವಿ ಅತಿರೇಕಕ್ಕೆ ಹೋಗದೆ ಶೃಂಗಾರವನ್ನು ಗಂಭೀರವಾಗಿ ವರ್ಣಿಸುತ್ತಾನೆ. ಅಪ್ಸರೆಯರ ಜಲಕ್ರೀಡೆಯಾದಮೇಲೆ ನದೀಜಲವನ್ನು ಶಯನೀಯಕ್ಕೆ ಹೋಲಿಸಿರುವುದು ಮನೋಹರವಾಗಿದೆ. ಅದನ್ನು ವರ್ಣಿಸುವ ಪದ್ಯವು ಹೀಗಿದೆ :—

ಸಂಕ್ರಾಂತಚಂದನರಸಾಹಿತವರ್ಣಭೇದಂ
ವಿಚ್ಛಿನ್ನಭೂಷಣಮಣಿಪ್ರಕರಾಂಶುಚಿತ್ರಂ ।
ಬದ್ಧೋರ್ಮಿನಾಕವನಿತಾಪರಿಭುಕ್ತಮುಕ್ತಂ
ಸಿಂಧೋರ್ಬಭಾರ ಸಲಿಲಂ ಶಯನೀಯಲಕ್ಷ್ಮೀಂ ॥ (8–57)

ವೀರರಸವನ್ನು ವರ್ಣಿಸುವುದರಲ್ಲಿ ಭಾರವಿ ನಿಃಸೀಮ. ವಿಪ್ರ ವೇಷದಿಂದ ಬಂದ ಇಂದ್ರ ಮತ್ತು ಅರ್ಜುನರ ಸಂಭಾಷಣೆ ಸುಂದರವಾಗಿದೆ. ಅರ್ಜುನನ ಅದಮ್ಯವಾದ ಉತ್ಸಾಹವನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ. ಪಾರ್ಥನ ನಿಶ್ಚಯ ಇದು—

ವಿಚ್ಛಿನ್ನಾಭ್ರವಿಲಾಯಂ ವಾ ವಿಲೀಯೇ ನಗಮೂರ್ಧನಿ !
ಆರಾಧ್ಯ ವಾ ಸಹಸ್ರಾಕ್ಷಮಯಶಃ ಶಲ್ಯಮುದ್ಧರೇ ॥ (11–79)

ಕಿರಾತಸೇನೆ ತನ್ನನ್ನು ಆಕ್ರಮಿಸಲು ನುಗ್ಗಿ ಬರುವಾಗ ಅದನ್ನು ಅರ್ಜುನನು ವೀಕ್ಷಿಸಿದ ವೈಖರಿ ಇದು—

ಸರೋಷಮುಲ್ಕೇವ ಪಪಾತ ಭೀಷಣಾ
ಬಲೇಷು ದೃಷ್ಟಿರ್ವಿನಿಪಾತ ಶಂಸಿನೀ । (14–49)

ಸುತ್ತಲೂ ಮುತ್ತಿದ್ದ ಪ್ರಮಥಗಣಗಳು ಏಕಾಕಿಯಾಗಿ ಎದುರಿಸುತ್ತಿದ್ದ ಅರ್ಜುನನನ್ನೇ ಕಣ್ಣಿಟ್ಟು ನೋಡುತ್ತಿದ್ದರು.

ತಮೇಕದೇಶಸ್ಥಮನೇಕದೇಶಗಾಃ ನಿದಧ್ಯುರರ್ಕಂ ಯುಗಪತ್ ಪ್ರಜಾ ಇವ–(14–58)

'ಉಪಮಾ ಕಾಲಿದಾಸಸ್ಯ' ಎಂಬ ಉಕ್ತಿ ಪ್ರಸಿದ್ಧವಾಗಿದೆ. ಭಾರವಿಯ ಉಪಮಾನದ ಸೌಂದರ್ಯವೇನೂ ಕಡಿಮೆಯಿಲ್ಲ. ನದೀಜಲದ ಮೇಲೆ ಮೂಡಿದ ರತ್ನಪ್ರಭೆಯು ತಳದಲ್ಲಿರುವ ರತ್ನರಾಶಿಯನ್ನು ಸೂಚಿಸುತ್ತಿತ್ತು, ಮುಖ ವಿಕಾರವು ಮನುಷ್ಯನ ಮನೋಗತವಾದ ಭಾವವನ್ನು ತಿಳಿಸುವಂತೆ, 'ಆಗ್ನೇಯಾಸ್ತ್ರದಿಂದ ಉಂಟಾದ ಅಗ್ನಿಯ ಛಟಛಟ ಶಬ್ದವು' ವಿದೀರ್ಯಮಾಣಾಶ್ಮನಿನಾದಧೀರ' ವಾಗಿತ್ತು. ಪಾರ್ಥನು ಶಿವನ ಮೇಲೆ ಪ್ರಯೋಗಿಸಿದ ವಿವಿಧಾಸ್ತ್ರಗಳು 'ಪ್ರತಿಕೂಲವಾದ ದೈವದ ಎದುರಿಗೆ ಮನುಷ್ಯನ ಪ್ರಯತ್ನಗಳಂತೆ' ವ್ಯರ್ಥವಾದವು. ವರ್ಷಾಕಾಲದಲ್ಲಿ ಮಳೆಸುರಿಸಿ ನೀರಿನಿಂದ ಕೆರೆಯನ್ನು ತುಂಬಿಸುವ ಸೂರ್ಯನು ಮೊದಲು ಬೇಸಿಗೆಯಲ್ಲಿ ನೀರನ್ನು ಹೀರುವಂತೆ ಮುಂದೆ ಪಾಶುಪತಾಸ್ತ್ರವನ್ನೀಯುವ ಪರಮೇಶ್ವರನು ಅರ್ಜುನನ ವಿವಿಧಾಸ್ತ್ರಗಳನ್ನು ಅಪಹರಿಸಿದನು. ಬೇಸಿಗೆಯಲ್ಲಿ ಜನರು ಕಷ್ಟದಿಂದ ತಂದ ಸ್ವಲ್ಪ ನೀರಿನಿಂದಲೇ



ಜೀವಿಸುವಂತೆ, ಪಾರ್ಥನು ಬರಿಯ ಭುಜಬಲದಿಂದಲೇ ಶಿವನೊಡನೆ ಯುದ್ಧಮಾಡಬಯಸಿದನ
ಪಾರ್ಥನ ಶರವೃಷ್ಟಿಯಿಂದ ಕತ್ತಲೆ ಮುಸುಕಲಾಗಿ ಕಿರಾತ ಸೈನ್ಯವು "ರಾತ್ರಿಯಲ್ಲಿ ವ
ಸುರಿಯುತ್ತಿರಲಾಗಿ ದಿಕ್ಕುತೋಚದೆ ನಿಂತಿರುವ ಗೋವುಗಳ ಮಂದೆಯಂತೆ" ಇದ್ದಿತು.

ಈಶ್ವರನು ಅರ್ಜುನನ ಕವಚವನ್ನು ಅಪಹರಿಸಿದಾಗ ಕವಿಯು ಮಾಲೋಪಮೆಯಿಂ
ವರ್ಣಿಸಿರುವುದು ಚೇತೋಹಾರಿಯಾಗಿದೆ. "ಮುಕ್ತಕಂಚುಕನಾದ ಅರ್ಜುನನು ಮೇ
ನಿರ್ಮುಕ್ತನಾದ ಸೂರ್ಯನಂತೆಯೂ, ಒರೆಯಿಂದೆಳೆದ ಖಡ್ಗದಂತೆಯೂ, ಪೊರೆಯನ್ನು ಬಿ
ಸರ್ಪದಂತೆಯೂ, ಶತ್ರುಗಜದೆದುರಿಗೆ ಆವರಣವನ್ನು ಕಿತ್ತೆಸೆದ ಯುದ್ಧೋದ್ಯ
ಗಜದಂತೆಯೂ, ಮೇಘಗರ್ಜನೆಯನ್ನು ಕೇಳಿ ಪರ್ವತಗುಹೆಯಿಂದ ಹೊರಬಂದ ಚಂಡಕೇಸ
ಯಂತೆಯೂ, ಹೊಗೆಯಿರದೆ ಜ್ವಲಿಸುವ ಅಗ್ನಿಯಂತೆಯೂ ಶೋಭಿಸಿದನು. (17–45–46

ಅರ್ಜುನನು ಶಿವನ ಎದೆಯ ಮೇಲೆ ಅಪ್ಪಳಿಸಲು, ಭಕ್ತನ ಈ ಅಪರಾಧವನ್ನು ಶಿವನ
"ಮಗುವಿನ ತಪ್ಪನ್ನು ತಂದೆ ಮನ್ನಿಸುವಂತೆ" ಮನ್ನಿಸಿದನು.

ಜನಕ ಇವ ಶಿಶುತ್ವೇ ಸುಪ್ರಿಯಸ್ಯೈಕಸೂನೋಃ
ಅವಿನಯಮಪಿ ಸೇಹೇ ಪಾಂಡವಸ್ಯ ಸ್ಮರಾರಿಃ ॥ (17–64)

ಕವಿಯು 15 ನೆಯ ಸರ್ಗದಲ್ಲಿ ಶಬ್ದಾಲಂಕಾರಗಳನ್ನೂ, ಚಿತ್ರಬಂಧಗಳನ್ನೂ ಪ್ರದರ್ಶಿ
ಸಿದ್ದಾನೆ. ಮಾದರಿಗಾಗಿ ಎರಡು ಉದಾಹರಣೆಗಳು—

1. ವೇತ್ರಶಾಕಕುಜೇ ಶೈಲೇ ಲೇಶೈಜೇಕಂಕಶಾತ್ರವೇ ।
ಯಾತ ಕಿಂ ವಿದಿಶೋ ಜೇತುಂ ತುಂಜೇಶೋ ದಿವಿ ಕಿಂ ತಯಾ ॥ (15—

ಇದು ಪ್ರತಿಲೋಮಾನುಲೋಮಪಾದ. 1—3ನೇ ಪಾದಗಳನ್ನು ಹಿಂದುಮುಂದಾಗಿ
ಓದಿದರೆ ಅನುಕ್ರಮವಾಗಿ 2—4 ನೆಯ ಪಾದಗಳಾಗುತ್ತವೆ. ಇಂದ್ರಕೀಲ ಪರ್ವತದಲ್ಲಿ
ಅರ್ಜುನನಿಗೂ ಪ್ರಮಥಗಣಗಳಿಗೂ ಯುದ್ಧ ನಡೆಯುತ್ತದೆ. ಆಗ ಪ್ರಮಥರು ಭಗ್ನರಾಗಿ
ಓಡಲಾರಂಭಿಸುತ್ತಾರೆ.

ಅವರನ್ನು ತಡೆದು ಹುರಿದುಂಬಿಸುವುದಕ್ಕಾಗಿ ಷಣ್ಮುಖನು ಹೇಳುವ ವಾಕ್ಯವಿದು—ದಿವಿ
ಸ್ವರ್ಗದಲ್ಲಿ ; ತುಂಜೇಶಃ = ತುಂಜ—ದೈತ್ಯರನ್ನು, ಈಶಃ = ಗೆಲ್ಲಲು ಸಮರ್ಥರಾದ ಎಲೈ
ಪ್ರಮಥರೇ; ವೇತ್ರಶಾಕಕುಜೇ = ವೇತ್ರ—ಬೆತ್ತದರೂಪವಾಗಿಯೂ, ಶಾಕ = ಒರಟಾಗಿಯೂ
ಇರುವ ;ಕುಜೇ—ಗಿಡಗಳಿರುವ ಮತ್ತು ಅಲೇಶೈಜೇ = ಸ್ವಲ್ಪವೂ ಅಲ್ಲಾಡದಿರುವ ; ಮತ್ತು
ಅಕಂಕಶಾತ್ರವೇ = (ನಿಮ್ಮನ್ನು) ಹಿಡಿಯಲು ಅಸಮರ್ಥನಾದ ಶತ್ರುವಿರುವ ; ಶೈಲೇ = ಈ
ಪರ್ವತದಲ್ಲಿ ; ಕಿಂತಯಾ = ನಿಂದೆಯಿಂದಯುಕ್ತರಾಗಿ ವಿದಿಶಃ = ದಿಕ್ಕಿನ ಮೂಲೆಗಳನ್ನು
ಜೇತುಂ = ಗೆಲ್ಲಲು, ಯಾತಕಿಂ = ಹೋಗುತ್ತಿರುವಿರಾ ?— ಸ್ವರ್ಗದಲ್ಲಿಯೂ ಹೋರಾಡಿ

ದೈತ್ಯರನ್ನು ಜಯಿಸಿರುವ ನೀವು ಒಬ್ಬ ಕ್ಷುದ್ರ ಶತ್ರುವಿಗಾಗಿ ಹೆದರಿ ದಿಕ್ಕುದಿಕ್ಕಿಗೆ ಓಡುತ್ತಿರುವುದು ನಿಂದಾಸ್ಪದ. ಇದು ಯುಕ್ತವಲ್ಲ ಎಂದು ತಾತ್ಪರ್ಯ.

2. ನನೋ ನನುನ್ನೋ ನುನ್ನೋನೋ ನಾನಾ ನಾನಾನನಾ ನನು ।
ನುನ್ನೋಽನುನ್ನೋ ನನುನ್ನೇನೋ ನಾನೇನಾ ನುನ್ನನುನ್ನನುತ್ ॥(15—)

ಇದು ಏಕಾಕ್ಷರ ಶ್ಲೋಕ, ಕಡೆಯ ವರ್ಣ ತಕಾರವಾದರೂ 'ನಾಂತ್ಯವರ್ಣಸ್ತು ಭೇದಕಃ' ಎಂದು ಲಾಕ್ಷಣಿಕರು ಹೇಳಿರುವುದರಿಂದ ದೋಷವಿಲ್ಲ.

ಭಾರವಿಯು ಪ್ರಸಿದ್ಧ ವೃತ್ತಗಳನ್ನು ಮಾತ್ರವಲ್ಲದೆ ಜಲಧರಮಾಲಾ, ಕ್ಷಮಾ, ಪ್ರಭಾ, ಜಲೋದ್ಧತಗತಿ, ವಂಶಪತ್ರಪತಿತ, ಉದ್ಗತಾ, ಮತ್ತಮಯೂರ ಮುಂತಾದ ಕಠಿಣ ವೃತ್ತಗಳನ್ನು ಲೀಲೆಯಿಂದ ಹೆಣೆದಿದ್ದಾನೆ. ಛಂದಸ್ಸು ಪ್ರವಾಹದಂತೆ ಓಡುತ್ತದೆ. ಅಂತರ್ಗಿರಿ, ಉಪಜನು, ಅನುಸಾನು, ಉಪಧೇನು, ಅಭಿರಶ್ಮಿಮಾಲ—ಮೊದಲಾದ ಅವ್ಯಯೀಭಾವಸಮಾಸವನ್ನು ಕವಿಯು ವಿಶೇಷವಾಗಿ ಬಳಸಿದ್ದಾನೆ. ಧೃತಿ ಎಂಬ ಶಬ್ದವನ್ನು ಪ್ರೀತಿ ಎಂಬ ಅರ್ಥದಲ್ಲಿ ಬಳಸುವುದು ಈತನ ಒಂದು ವೈಶಿಷ್ಟ್ಯ. ಧೃತಿ ಶಬ್ದಕ್ಕೆ ಸಂತೋಷ ಎಂಬ ಅರ್ಥವೇನೋ ಉಂಟು. "ಧೃತಿರ್ಯೋಗಾಂತರೇ ಧೈರ್ಯೇ ಧಾರಣಾಧ್ವರತುಷ್ಟಿಷು" ಎಂದು ವಿಶ್ವಕೋಶದಲ್ಲಿ ಹೇಳಿದೆ—ಉದಾ. (5-19-35), (6-7-11), (8-3), (9-30-40), (11-23), ಕಾವ್ಯದ ಆರಂಭದಲ್ಲಿ "ಶ್ರೀ" ಶಬ್ದವನ್ನು ಪ್ರಯೋಗಿಸಿದ ಈ ಕವಿ ಪ್ರತಿಯೊಂದು ಸರ್ಗದ ಕಡೆಯ ಶ್ಲೋಕದಲ್ಲಿ 'ಲಕ್ಷ್ಮೀ' ಶಬ್ದವನ್ನು ಪ್ರಯೋಗಿಸಿದ್ದಾನೆ. ಅನದ್ಯತನಪರೋಕ್ಷಭೂತ ಕಾಲದಲ್ಲಿ ಪ್ರಯೋಗಿಸಬೇಕಾದ 'ಲಿಟ್' ಲಕಾರವನ್ನು ಈತನು ಶಾಸ್ತ್ರೀಯ ರೀತಿಯಲ್ಲಿ ಬಳಸಿದ್ದಾನೆ. ಇನ್ನಾರೂ ಇಷ್ಟು ನಿಯಮಬದ್ಧವಾಗಿ ಪ್ರಯೋಗಿಸಿರುವುದು ಕಾಣುವುದಿಲ್ಲ. "ಭಾರವಿಃ ಸಾರವಿದ್ಯಃ" ಎನ್ನುವುದು ಸತ್ಯ.

## ಸುಭಾಷಿತಗಳು

1. ಹಿತಂ ಮನೋಹಾರಿ ಚ ದುರ್ಲಭಂ ವಚಃ
2. ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂಪದಂ ।
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ
3. ಸುಕೃತಃ ಪರಿಶುದ್ಧ ಆಗಮಃ ಕುರುತೇ ದೀಪ ಇವಾರ್ಥದರ್ಶನಮ್
4. ರಮ್ಯಾಣಾಂ ವಿಕೃತಿರಪಿ ಶ್ರಿಯಂ ತನೋತಿ.
5. ದುಃಖಿತೇ ಮನಸಿ ಸರ್ವಮಸಹ್ಯಂ
6. ಸುಲಭಾ ರಮ್ಯತಾ ಲೋಕೇ ದುರ್ಲಭಂ ಹಿ ಗುಣಾರ್ಜನಮ್
7. ಸತಾಂ ಹಿ ವಾಣೀ ಗುಣಮೇವ ಭಾಷತೇ
8. ವೃತ್ತಾಭಿರಕ್ಷಾ ಹಿ ಸತಾಂ ಅಲಂಕ್ರಿಯಾ
9. ಜನ್ಮಿನೋ ಮಾನಹೀನಸ್ಯ ತೃಣಸ್ಯ ಚ ಸಮಾಗತಿಃ
10. ನ ಮಹಾನಿಚ್ಛತಿ ಭೂತಿಮನ್ಯತಃ



## ಭಟ್ಟಿಕಾವ್ಯ—ರಾವಣವಧ (ಕ್ರಿ. ಶ. 6ನೇಯ ಶತಮಾನ)

ಮಹಾವೈಯಾಕರಣನಾದ ಭಟ್ಟಿಯ ರಾವಣವಧವು ಭಟ್ಟಿಕಾವ್ಯವೆಂದು ಪ್ರಸಿದ್ಧವಾಗಿದೆ. ವ್ಯಾಖ್ಯಾನಕಾರರಲ್ಲಿ ಕಲವರು ಕವಿಯನ್ನು ಭಟ್ಟಿಯೆಂದೂ, ಕೆಲವರು ಭರ್ತೃಹರಿಯೆಂದೂ, ಇತರರು ಭರ್ತೃಸ್ವಾಮಿಯೆಂದೂ ವ್ಯವಹರಿಸಿದ್ದಾರೆ. ರಾವಣವಧವನ್ನು ಭರ್ತೃಕಾವ್ಯವೆಂದೂ ಕೆಲವರು ಕರೆದಿದ್ದಾರೆ. ಕವಿಯ ಪೂರ್ಣವಾದ ಹೆಸರು ಭರ್ತೃಹರಿ ಅಥವಾ ಭರ್ತೃಸ್ವಾಮಿ ಎಂದಿದ್ದು ರೂಢಿಯಲ್ಲಿ ಭಟ್ಟಿ ಎಂದಾಗಿರಬೇಕು. ವಾಕ್ಯಪದೀಯಕರ್ತನಾದ ವೈಯಾಕರಣ. ಭರ್ತೃಹರಿಯೇ ಈ ಕಾವ್ಯವನ್ನು ರಚಿಸಿದನೆಂಬ ಹೇಳಿಕೆಯೂ ಇದೆ.

ಕಾವ್ಯದ ಕಡೆಯಲ್ಲಿ ಈ ಶ್ಲೋಕವಿದೆ—

ಕಾವ್ಯಮಿದಂ ವಿಹಿತಂ ಮಯಾ ವಲಭ್ಯಾಂ
ಶ್ರೀಧರಸೇನನರೇಂದ್ರಪಾಲಿತಾಯಾಂ ।
ಕೀರ್ತಿರತೋ ಭವತಾನ್ನೃಪಸ್ಯ ತಸ್ಯ
ಪ್ರೇಮಕರಃ ಕ್ಷಿತಿಪೋ ಯತಃ ಪ್ರಜಾನಾಂ ॥

ವಲಭಿಯು ಸೌರಾಷ್ಟ್ರದ ರಾಜಧಾನಿಯಾಗಿತ್ತು. ಅಲ್ಲಿ ಧರಸೇನ ಎಂಬ ನಾಲ್ವರು ರಾಜ್ಯವಾಳಿದರೆಂದು ಶಿಲಾಪ್ರಶಸ್ತಿಗಳಿಂದ ತಿಳಿದು ಬರುತ್ತದೆ. ಇವರಲ್ಲಿ ಯಾವ ಧರಸೇನನ ಕಾಲದಲ್ಲಿ ಭಟ್ಟಿ ಇದ್ದನೆಂದು ಹೇಳಲು ಆಧಾರ ದೊರಕಿಲ್ಲ. ಭಾಮಹನ ಕಾವ್ಯಾಲಂಕಾರ ಮತ್ತು ಭಟ್ಟಿಯ ಕಾವ್ಯಗಳಲ್ಲಿರುವ ಈ ಶ್ಲೋಕಗಳ ಹೋಲಿಕೆ ಗಮನೀಯವಾಗಿದೆ—

| ಭಾಮಹ | ಭಟ್ಟಿ |
|---|---|
| ಕಾವ್ಯಾನ್ಯಪಿ ಯದೀಮಾನಿ ವ್ಯಾಖ್ಯಾಗಮ್ಯಾನಿ ಶಾಸ್ತ್ರವತ್ । ಉತ್ಸವಃ ಸುಧಿಯಾಮೇವ ಹಂತ ದುರ್ಮೇಧಸೋ ಹತಾಃ ॥ 2-30 | ವ್ಯಾಖ್ಯಾಗಮ್ಯಮಿದಂ ಕಾವ್ಯಮುತ್ಸವಃ ಸುಧಿಯಾಮಲಂ । ಹತಾ ದುರ್ಮೇಧಸಶ್ಚಾಸ್ಮಿನ್ ವಿದ್ವತ್ ಪ್ರಿಯತಯಾ ಮಯಾ ॥ 23-34 |
| ದೂರ್ವಾಕಾಂಡಮಿವ ಶ್ಯಾಮಂ ತನ್ವೀ ಶ್ಯಾಮಾ ಲತಾ ಯಥಾ॥ 2-31 | ದೂರ್ವಾಕಾಂಡಮಿವ ಶ್ಯಾಮಾನ್ಯ ಗ್ರೋಧ ಪರಿಮಂಡಲಾ ॥ 5-18 |

ಅಲ್ಲದೆ ಭಾಮಹನು ಹೇಳಿರುವ ಎಲ್ಲ ಶಬ್ದಾರ್ಥಾಲಂಕಾರಗಳನ್ನೂ ಭಟ್ಟಿಯು ಸ್ವಲ್ಪ ಹೆಚ್ಚುಕಡಿಮೆ ಅದೇ ಕ್ರಮದಿಂದ 10ನೆಯ ಸರ್ಗದಲ್ಲಿ ಪ್ರಯೋಗಿಸಿದ್ದಾನೆ. ಭಾಮಹನು ತಿರಸ್ಕರಿಸಿರುವ ಸ್ವಭಾವೋಕ್ತಿ, ಹೇತು, ಸೂಕ್ಷ್ಮ, ಲೇಶಗಳನ್ನು ಭಟ್ಟಿಯು ಅಲಂಕಾರಗಳೆಂದು ಗಣಿಸಿದ್ದಾನೆ. ಭಾಮಹನ ಗ್ರಂಥವನ್ನು ಭಟ್ಟಿಯು ಪರಿಶೀಲಿಸಿರಬೇಕೆಂದೂ ಅವನ ಕಾಲ ಕ್ರಿ.ಶ. 6ನೆಯ ಶತಮಾನ ಇರಬಹುದೆಂದೂ ವಿದ್ವಾಂಸರು ಊಹಿಸಿದ್ದಾರೆ.

ಭಟ್ಟಿಕಾವ್ಯಕ್ಕೆ ಮಲ್ಲಿನಾಥ, ಶ್ರೀಧರ, ಹರಿಹರ, ಭರತಮಲ್ಲಿಕ ಮೊದಲಾದವರು ಬರೆದ ಸುಮಾರು 16 ವ್ಯಾಖ್ಯಾನಗಳು ಉಪಲಬ್ಧವಾಗಿವೆ. ಇವುಗಳಲ್ಲಿ ಸುಪ್ರಸಿದ್ಧವಾದ

ಜಯಮಂಗಲಾ ಟೀಕೆಯನ್ನು ಜಯಮಂಗಲನು ಬರೆದಿದ್ದಾನೆ. ಈತನಿಗೆ ಜಟೇಶ್ವರ, ಜಯದೇವ ಎಂಬ ಇನ್ನೆರಡು ಹೆಸರುಗಳಿದ್ದವು.

ಭಟ್ಟಿಯ ರಾವಣವಧದಲ್ಲಿ ವಾಲ್ಮೀಕಿರಾಮಾಯಣವೇ ಕಥಾವಸ್ತು. ಶ್ರೀರಾಮನ ಪಟ್ಟಾಭಿಷೇಕದವರೆಗಿನ ಕಥೆಯನ್ನು 22 ಸರ್ಗಗಳಿಂದ ಕವಿಯು ವರ್ಣಿಸಿದ್ದಾನೆ. ವ್ಯಾಕರಣಶಾಸ್ತ್ರದ ನಾನಾ ಶಬ್ದವೈಚಿತ್ರ್ಯಗಳನ್ನೂ, ಅಲಂಕಾರಶಾಸ್ತ್ರದ ಉದಾಹರಣೆಗಳನ್ನೂ ಪ್ರದರ್ಶಿಸುವುದು ಭಟ್ಟಿಯ ಮುಖ್ಯ ಉದ್ದೇಶವಾಗಿದೆ. ಪ್ರಸನ್ನ ಕಾಂಡವೆಂದು ಅಂಕಿತವಿರುವ 10, 11, 12, 13ನೆಯ ಸರ್ಗಗಳಲ್ಲಿ ಕಾವ್ಯಲಕ್ಷಣಗಳಿಗೂ ಉಳಿದ ಸರ್ಗಗಳಲ್ಲಿ ವ್ಯಾಕರಣಲಕ್ಷಣಗಳಿಗೂ ಲಕ್ಷ್ಯಗಳನ್ನು ಜೋಡಿಸಿದ್ದಾನೆ. 'ವ್ಯಾಕರಣಬಲ್ಲವರಿಗೆ ಈ ಕಾವ್ಯ ದೀಪವಿದ್ದಂತೆ, ಉಳಿದವರು ಕುರುಡರಂತೆ ತಡವರಿಸಬೇಕಾದೀತು !' ಎಂದು ಕವಿಯೇ ಎಚ್ಚರಿಕೆ ಕೊಟ್ಟಿದ್ದಾನೆ—

ದೀಪತುಲ್ಯಃ ಪ್ರಬಂಧೋಽಯಂ ಶಬ್ದಲಕ್ಷಣಚಕ್ಷುಷಾಂ ।
ಹಸ್ತಾಮರ್ಷ ಇವಾಂಧಾನಾಂ ಭವೇದ್ ವ್ಯಾಕರಣಾದೃತೇ ॥ 22–33

ಇದು ವ್ಯುತ್ಪಾದಕವಾದ ಪದ್ಯಕಾವ್ಯ. ಶಬ್ದಕಟುತ್ವ ಅರ್ಥಕ್ಲೇಶಗಳು ಈ ಬಗೆಯ ಕಾವ್ಯದಲ್ಲಿ ಅಪರಿಹಾರ್ಯ. ಪ್ರಸನ್ನಕಾಂಡದಲ್ಲಿ (10–13ಸರ್ಗಗಳು) ಈ ದೋಷಗಳೂ ಇಲ್ಲ, ಭಟ್ಟಿಯಲ್ಲಿ ಕಾವ್ಯೋಚಿತ ಪ್ರತಿಭೆಯುಂಟು. ಅವನ ನಿರೂಪಣೆಯಲ್ಲಿ ಅರ್ಥಪುಷ್ಟಿ ಇದೆ; ಸೌಂದರ್ಯವಿದೆ. ವ್ಯಾಕರಣ ಪ್ರಕ್ರಿಯೆ ಇರುವ ನಾನಾ ಶಬ್ದಗಳನ್ನು ಕಾವ್ಯದಲ್ಲಿ ಪ್ರಯೋಗಿಸಬೇಕೆಂಬ ಸಾಹಸ ಕಾರ್ಯದಲ್ಲಿ ಅವನು ವಿಜಯಿಯಾಗಿದ್ದಾನೆ. ಭಟ್ಟಿಯು ವೈಯಾಕರಣ ರಸಿಕ. ಅವನ ಕಾವ್ಯದಲ್ಲಿ ಬಿಡಿಬಿಡಿ ವಾಕ್ಯಗಳೇ ಅಧಿಕ. ದೀರ್ಘಸಮಾಸಗಳು ವಿರಳ,

1. ರಾವಣನು ಸೀತೆಯನ್ನಪಹರಿಸಿದಾಗ ಕ್ರುದ್ಧನಾದ ಶ್ರೀರಾಮನ ರೋಷೋಕ್ತಿಗಳಿವು

ರುಣಧ್ಮಿ ಸವಿತುರ್ಮಾರ್ಗಂ ಭಿನದ್ಮಿ ಕುಲಪರ್ವತಾನ್ ॥
ರಿಣಚ್ಮಿ ಜಲಧೇಸ್ತೋಯಂ ವಿವಿನಚ್ಮಿ ದಿವಃ ಸುರಾನ್ ।
ಕ್ಷುಣದ್ಮಿ ಸರ್ಪಾನ್ ಪಾತಾಲೇ ಛಿನದ್ಮಿ ಕ್ಷಣದಾಚರಾನ್ ॥
ಯಮಂ ಯುನಜ್ಮಿ ಕಾಲೇನ ಸಮಿಂಧಾನೋಽಸ್ತ್ರಕೌಶಲಂ ।
ಶುಷ್ಕಪೇಷಂ ಪಿನಷ್ಮ್ಯುರ್ವೀಮಖಿಂದಾನಃ ಸ್ವತೇಜಸಾ ॥
ಭೂತಿಂ ತೃಣದ್ಮಿ ಯಕ್ಷಾಣಾಂ ಹಿನಸ್ಮೀಂದ್ರಸ್ಯ ವಿಕ್ರಮಂ ।
ಭನಜ್ಮಿ ಸರ್ವಮರ್ಯಾದಾಸ್ತನಚ್ಮಿ ವ್ಯೋಮ ವಿಸ್ತೃತಂ ॥ 6. 35–38.

2. ಶರತ್ಕಾಲದ ವರ್ಣನೆ :

ನ ತಜ್ಜಲಂ ಯನ್ನ ಸುಚಾರುಪಂಕಜಂ
ನ ಪಂಕಜಂ ತದ್ಯದಲೀನಷಟ್ಪದಂ ।
ನ ಷಟ್ಪದೋಽಸೌ ನ ಜುಗುಂಜ ಯಃ ಕಲಂ
ನ ಗುಂಜಿತಂ ತನ್ನ ಜಹಾರ ಯನ್ಮನಃ



3. ಅಂಗನೆಯರ ಮುಖಚಂದ್ರನಿಗಿರುವ ಕಟಾಕ್ಷಗಳೂ, ವಿಲಾಸ ವಚನಗಳೆಲ್ಲಿವೆ ? ಸ್ತ್ರೀಯರು ನಿದ್ರೆಯಿಂದೇಳುವುದರೊಳಗೆ ನಾನು ಪಲಾಯನ ಮಾಡುವುದು ಯೋಗ್ಯ ! ಎಂದು ತಿಳಿದು ಚಂದ್ರನು ಅಸ್ತಂಗತನಾದನು.

ಕ್ವ ತೇ ಕಟಾಕ್ಷಾಃ ಕ್ವ ವಿಲಾಸವಂತಿ
ಪ್ರೋಕ್ತಾನಿ ವಾ ತಾನಿ ಮಮೇತಿ ಮತ್ವಾ !
ಲಂಕಾಂಗನಾನಾಮಪ ಬೋಧಕಾಲೇ
ತುಲಾಮನಾರುಹ್ಯ ಗತೋಽಸ್ತಮಿಂದುಃ ॥ 11–3

ಭಟ್ಟಿಯು ತನ್ನ ಕಾವ್ಯದಲ್ಲಿ ಉಪಜಾತಿ, ವಂಶಸ್ಥ, ಪುಷ್ಪತಾಗ್ರ ಮುಂತಾದ ಪ್ರ... ವೃತ್ತಗಳನ್ನಲ್ಲದೆ ಅಶ್ವಲಲಿತ (8131), ಪ್ರಹರಣಕಲಿಕಾ (12,86,87)ಮುಂತಾದ ... ವಿಶೇಷಗಳನ್ನೂ ಬಳಸಿದ್ದಾನೆ. 13ನೆಯ ಸರ್ಗದಲ್ಲಿ ಆರ್ಯಾಗೀತಿಗಳೇ ಇವೆ.

## ಮಾಘ-ಶಿಶುಪಾಲವಧ

### (ಕ್ರಿ. ಶ. 7ನೇ ಶತಮಾನ)

ಈತನ ಮಹಾಕಾವ್ಯ ಶಿಶುಪಾಲವಧ. ಇದು ಮಾಘಕಾವ್ಯವೆಂದೇ ಪ್ರಸಿದ್ಧವಾಗಿದೆ. ... ಕಾವ್ಯದ ಸಮಾಪ್ತಿಯಲ್ಲಿ ಹೇಳಿಕೊಂಡ ಸಂಗತಿಗಳಿಂದ ಕವಿಯ ವಿಷಯವಾಗಿ ಈ ಅಂಶಗ... ತಿಳಿದುಬರುತ್ತವೆ. ಸುಪ್ರಭದೇವನು ಶ್ರೀವರ್ಮಲನೆಂಬ ರಾಜನ ಬಳಿ ಸರ್ವಾಧಿಕಾರಿಯಾಗಿದ್ದನ... ಆತನ ಮಗ ದತ್ತಕ. ದತ್ತಕನ ಆತ್ಮಜನಾದ ಕವಿ "ಸುಕವಿಕೀರ್ತಿ ದುರಾಶೆ" ಯಿಂದ ... ಶಿಶುಪಾಲವಧವನ್ನು ರಚಿಸಿದನು.

ಶ್ರೀವರ್ಮಲಾತನು ಗುರ್ಜರದೇಶದ ರಾಜನೆಂದು ತಿಳಿದುಬರುತ್ತದೆ. ಇದರಿಂದಲ... ಲೋಕಪ್ರತೀತಿಯಿಂದಲೂ ಮಾಘನು ಗುಜರಾತಿನವನೆಂದು ಹೇಳುತ್ತಾರೆ. ಬಲ್ಲಾಳ ಪಂಡಿತ... ಭೋಜಪ್ರಬಂಧ, ಮೇರುತುಂಗಾಚಾರ್ಯನ ಪ್ರಬಂಧಚಿಂತಾಮಣಿ, ಪ್ರಭಾಚಂದ್ರ... ಪ್ರಭಾವಕಚರಿತ್ರೆಗಳಲ್ಲಿ ಮಾಘನು ಭೋಜರಾಜನ ಆಸ್ಥಾನದಲ್ಲಿದ್ದವನೆಂದು ಹೇಳಲಾಗಿದೆ. ಈ ಹೇಳಿಕೆ ವಿಶ್ವಾಸಾರ್ಹವಲ್ಲ. ಭೋಜನ ಕಾಲ ಕ್ರಿ. ಶ. 11ನೇ ಶತಮಾನದ ಉತ್ತರಾರ್ಧ... ಮಾಘನು ಇನ್ನೂ ಹಿಂದೆಯೇ ಇದ್ದನೆಂಬುದಕ್ಕೆ ಆಧಾರವಿದೆ.

ಕ್ರಿ. ಶ. 9ನೇ ಶತಮಾನದಲ್ಲಿದ್ದ ಆನಂದವರ್ಧನನು ಶಿಶುಪಾಲವಧದಲ್ಲಿರುವ "ತ್ರಾಸಾಕುಲ... ...ರಿಪತನ್" (5–26), "ರಮ್ಯಾ ಇತಿ ಪ್ರಾಪ್ತವತೀಃ" (3—53) ಎಂಬ ಶ್ಲೋಕಗಳನ್ನು ...ನ್ಯಾಲೋಕದಲ್ಲಿ ಉದಾಹರಿಸಿದ್ದಾನೆ. ಕ್ರಿ ಶ. 8ನೇಶತಮಾನದವನಾದ ವಾಮನನು "ಕಂಥೇನ... ...ಗೇಂದ್ರಮಿವೇಂದ್ರವಾಹನಂ" (1—8) ಮುಂತಾದ ಶ್ಲೋಕಗಳನ್ನು ಮಾಘಕಾವ್ಯದಿಂದ ಉದ್ಧರಿಸಿದ್ದಾನೆ. ಭಾರವಿಗಿಂತ ಮಾಘನು ಅರ್ವಾಚೀನನಾದುದರಿಂದ ಈತನ ಕಾಲ...

ಕ್ರಿ.ಶ. 7ನೇ ಶತಮಾನವಾಗುತ್ತದೆ. 'ಉಜ್ಜ್ವಲದತ್ತನು ಅರ್ಚಿಶುಚಿ.........' (2-109) ಎಂಬ ಉಣಾದಿ ಸೂತ್ರದ ವ್ಯಾಖ್ಯಾನದಲ್ಲಿ ವಾರುಣೀಮುದವಿಶಂಕಮಂಥಾವಿಶ್ಚಕ್ಷುಷೋಽಭವದಸಾವಿವರಾಗಃ (10—19) ಎಂಬುದನ್ನು ಅನುಲಕ್ಷಿಸಿ "ಮಾಘೇ ವ್ಯವಹಿತ ಪ್ರಯೋಗಃ ಪ್ರಮಾದಜಃ ಇತಿ ಭಾಗವೃತ್ತಿಃ" ಎಂದು ಬರೆದಿದ್ದಾನೆ. ಭಾಗವೃತ್ತಿಯನ್ನು ಬರೆದವನು ಭರ್ತೃಹರಿಯೆಂದೂ ಆತನು ಕ್ರಿ. ಶ. 650ರಲ್ಲಿ ಮೃತನಾದನೆಂದೂ ಹೇಳತಕ್ಕವರ ಅಭಿಪ್ರಾಯದಲ್ಲಿ ಮಾಘನ ಕಾಲವನ್ನು ಇನ್ನೂ ಹಿಂದಕ್ಕೆ ಹಾಕಬೇಕಾಗುವುದು. ಅವನು ಭಾರವಿಯ ಸಮಕಾಲಿಕನೋ ಸ್ವಲ್ಪ ಅರ್ವಾಚೀನನೋ ಆಗಬೇಕಾಗುತ್ತದೆ. ಮಾಘನು "ಅನುತ್ಸೂತ್ರಪದನ್ಯಾಸಾ" (2—112) ಎಂದು ನ್ಯಾಸವೆಂಬ ವ್ಯಾಕರಣ ಗ್ರಂಥವನ್ನು ನಿರ್ದೇಶಿಸಿದ್ದಾನೆ. ಅದನ್ನು ಬರೆದ ಜಿನೇಂದ್ರಬುದ್ಧಿ ಸುಮಾರು ಕ್ರಿ.ಶ. 7ನೇ ಶತಮಾನದವನು.

ಆದ್ದರಿಂದ ಕವಿ ಅದಕ್ಕಿಂತ ಈಚಿನವನೆಂದು ಕೆಲವರು ಊಹಿಸುತ್ತಾರೆ. ಆದರೆ ಬಾಣನು ಹರ್ಷಚರಿತ್ರೆಯಲ್ಲಿ 'ಕೃತಗುರುಪದನ್ಯಾಸಾಲೋಕ ಇವ ವ್ಯಾಕರಣೇಽಪಿ' ಎಂದು ನ್ಯಾಸವನ್ನು ಹೆಸರಿಸಿರುವುದರಿಂದ ಆ ಊಹೆ ಸಂಗತವಲ್ಲವೆನ್ನುತ್ತಾರೆ. ವಲ್ಲಭದೇವನ ಸುಭಾಷಿತಾವಳಿಯಲ್ಲಿ ಮಾಘನ ಹೆಸರಿನಲ್ಲಿ 2 ಪದ್ಯಗಳು ಉದ್ಧೃತವಾಗಿವೆ. ಅವು ಶಿಶುಪಾಲವಧದಲ್ಲಿ ಇಲ್ಲ.

ಕಾವ್ಯಪ್ರಕಾಶದ ವ್ಯಾಖ್ಯಾಕಾರನಾದಭೀಮಸೇನನು 'ಕಾವ್ಯಂ ಯಶಸೇಽರ್ಥಕೃತೇ...' ಎಂಬ ಕಾರಿಕೆಯನ್ನು ವಿವರಿಸುವಾಗ ಮಾಘನೆಂಬ ವೈಶ್ಯನು ಶಿಶುಪಾಲವಧವನ್ನು ತನ್ನ ಹೆಸರಿನಲ್ಲಿ ಬರೆಯಿಸಿ ಕವಿಗೆ ಅಪಾರ ಧನವನ್ನು ಕೊಟ್ಟನೆಂದು ಹೇಳಿದ್ದಾನೆ. ಬಲ್ಲಾಳಪಂಡಿತನ ಭೋಜಪ್ರಬಂಧನದಲ್ಲಿ ಒಂದು ಕಥೆ ಇದೆ:

ಭೋಜರಾಜನು ಸಿಂಹಾಸನಾರೂಢನಾಗಿರುವಾಗ ದ್ವಾರಪಾಲಕನು ಬಂದು "ಮಹಾರಾಜ, ಗುರ್ಜರದೇಶದಿಂದ ಮಾಘನೆಂಬ ಪಂಡಿತವರೇಣ್ಯನು ದುರ್ಭಿಕ್ಷದಿಂದ ಬಳಲಿ ಈ ನಗರದ ಹೊರಗಡೆ ಬಂದಿಳಿದಿರುವನು. ಮಹಾರಾಜನ ದರ್ಶನಕ್ಕಾಗಿ ಆತನ ಪತ್ನಿ ಬಂದು ಅರಮನೆಯ ಬಾಗಿಲಲ್ಲಿ ಕಾದಿದ್ದಾಳೆ" ಎಂದು ತಿಳಿಸಿದನು. ಅನಂತರ ರಾಜನ ಅನುಮತಿಯಂತೆ ಮಾಘಪತ್ನಿಯು ಒಳಗೆ ಪ್ರವೇಶಿಸಿ ಮಾಘನು ಬರೆದ ಒಂದು ಪತ್ರವನ್ನು ಅರ್ಪಿಸಿದಳು. ಅದರಲ್ಲಿ ಪ್ರಭಾತವನ್ನು ವರ್ಣಿಸುವ ಈ ಶ್ಲೋಕವಿತ್ತು:

ಕುಮುದವನಮಪಶ್ರಿ ಶ್ರೀಮದಂಭೋಜಷಂಡಂ
ತ್ಯಜತಿ ಮುದಮುಲೂಕಃ ಪ್ರೀತಿಮಾಂಶ್ಚಕ್ರವಾಕಃ ।
ಉದಯಮಹಿಮರಶ್ಮಿರ್ಯಾತಿ ಶೀತಾಂಶುರಸ್ತಂ
ಹತವಿಧಿಲಸಿತಾನಾಂ ಹೀ ವಿಚಿತ್ರೋ ವಿಪಾಕಃ ॥ (11-64)

ಭೋಜರಾಜನು ಸಂತುಷ್ಟನಾಗಿ ಮೂರು ಲಕ್ಷ ನಾಣ್ಯಗಳನ್ನು ಮಾಘನ ಪತ್ನಿಗೆ ಬಹುಮಾನವಾಗಿ ಕೊಟ್ಟು ಮರುದಿನ ಪ್ರಾತಃಕಾಲ ಮಾಘಕವಿಯನ್ನು ತಾನೇ ಬಂದು ಸಂದರ್ಶನ ಮಾಡುವುದಾಗಿ ಹೇಳಿದನು. ಮಾಘನ ಪತ್ನಿಯು ಹಿಂದಿರುಗಿ ಬರುವಾಗ ಮಾಘಕವಿಯ ಕೀರ್ತಿಯನ್ನು



ಹೊಗಳುತ್ತಾ ಕೆಲವು ಭಿಕ್ಷುಕರು ಬಂದರು. ರಾಜನು ಕೊಟ್ಟ ಹಣವೆಲ್ಲವನ್ನೂ ಆಕೆ ಅ
ದಾನಮಾಡಿದಳು. ಈ ವೃತಾಂತವನ್ನು ಅವಳು ತನ್ನ ಪತಿಗೆ ತಿಳಿಸಲು, ಆತನು ಪತ್ನಿ
ಔದಾರ್ಯಕ್ಕೆ ಮೆಚ್ಚಿ ಸಂತುಷ್ಟನಾದನು. ಅಷ್ಟರಲ್ಲಿ ಇನ್ನೂ ಕೆಲವು ಭಿಕ್ಷುಕರು ಬಂದ
ಅವರಿಗೆ ಕೊಡಲು ಏನೂ ಇಲ್ಲದ್ದರಿಂದ ಬಹು ವ್ಯಥೆಗೊಂಡ ಮಾಘನು ಪತ್ನಿಯನ್ನು ಕು

"ನ ಭಿಕ್ಷಾ ದುರ್ಭಿಕ್ಷೇ ಪತತಿ ದುರವಸ್ಥಾ ಕಥಮೃಣಂ
ಲಭಂತೇ ಕರ್ಮಾಣಿ ದ್ವಿಜಪರಿವೃಢಾನ್ ಕಾರಯತಿ ಕಃ ।
ಅದತ್ತ್ವೈವ ಗ್ರಾಸಂ ದ್ವಿಜಪತಿರಸಾವಸ್ತಮಯತೇ
ಕ್ವ ಯಾಮಃ ಕಿಂ ಕುರ್ಮೋ ಗೃಹಿಣಿ ಗಹನೋ ಜೀವನವಿಧಿಃ ॥

ಎಂದು ಹೇಳಿದನು.

ಇದನ್ನು ಕೇಳಿ ಯಾಚಕರೆಲ್ಲರೂ ಹೊರಟುಹೋದರು. ಅದರಿಂದ ಖಿನ್ನನಾದ ಮಾಘ
"ಅಯ್ಯೋ, ಪ್ರಾಣವೇ, ನೀನೂ ಈಗಲೇ ಹೊರಟುಹೋಗು! ಅರ್ಥಿಗಳು ನಿರಾಶರ
ಹೋಗುವಾಗ ನೀನೇಕಿರುವೆ? ಹೇಗಿದ್ದರೂ ಒಂದಲ್ಲ ಒಂದು ದಿನ ನೀನು ಹೊಗಲೇಬೇಕ
ಎನ್ನುತ್ತಾ ಗೋಳಾಡಿದನು. ಅವನ ಪ್ರಾಣಪಕ್ಷಿ ಹಾರಿಹೋಯಿತು. ಮಾಘನ ಪತ್ನಿಯ
ದುಃಖಿಸುತ್ತಾ—

'ಸೇವಂತೇ ಸ್ಮ ಗೃಹಂ ಯಸ್ಯ ದಾಸವದ್ ಭೂಭುಜಃ ಪುರಾ ।
ಹಾದ್ಯ ಭಾರ್ಯಾಸಹಾಯೋಽಯಂ ಮ್ರಿಯತೇ ವೈ ಮಾಘಪಂಡಿತಃ ॥

ಎಂದು ಉದ್ಗರಿಸಿದಳು.

ಮಾಘನ ಮರಣವಾರ್ತೆಯನ್ನು ಕೇಳಿದ ಭೋಜರಾಜನು ಬರಿಗಾಲಿನಿಂದ ನಡೆಯುತ್ತ ಅಲ್ಲಿ
ಬಂದನು. ಮಾಘನ ಪತ್ನಿಗೆ ಸಮಾಧಾನವನ್ನು ಹೇಳಿ, ಮಾಘನ ಕಳೇಬರವನ್ನು ನರ್ಮದ
ತೀರಕ್ಕೆ ಸಾಗಿಸಿ ಅಗ್ನಿಸಂಸ್ಕಾರ ಮಾಡಿದನು. ಮಾಘನ ಪತ್ನಿಯು ಸಹಗಮನ ಮಾಡಿದಳು
ಭೋಜರಾಜನು ಮಗನಂತೆ ಅವರ ಉತ್ತರಕ್ರಿಯೆಯನ್ನು ಆಚರಿಸಿದನು. ಮಾಘಪಂಡಿತನ
ಮರಣದ ದುಃಖದಿಂದ ದಿನೇದಿನೇ ಕೃಶನಾಗಿ ಪ್ರತಿಪಚ್ಚಂದ್ರನಂತಾದನು.

ಪ್ರಬಂಧಚಿಂತಾಮಣಿಯಲ್ಲಿ ಸ್ವಲ್ಪಭೇದದಿಂದ ಈ ಕಥೆ ಬಂದಿದೆ ಕುಮುದವನಮಪಶ್ರಿ...
ಎಂಬ ಶ್ಲೋಕದಲ್ಲಿರುವ "ಹೀ" ಶಬ್ದವು ಸಮಯೋಚಿತವಾಗಿ ಅಪೂರ್ವರೀತಿಯಲ್ಲಿ ಪ್ರಯುಕ್ತ
ವಾಗಿದೆಯೆಂದು ಆತನು ಮೆಚ್ಚಿಕೊಂಡನೆಂದು ಹೇಳಿದೆ.

ಶಿಶುಪಾಲವಧದ ಎಂಟು ವ್ಯಾಖ್ಯಾನಗಳು ಇದುವರೆಗೆ ದೊರಕಿವೆ. ಇವುಗಳಲ್ಲಿ ವಲ್ಲಭದೇವನ
'ಸಂದೇಹವಿಷೌಷಧ' ಮಲ್ಲಿನಾಥನ 'ಸರ್ವಂಕಷಾ ಟೀಕೆಗಳು' ಪ್ರಸಿದ್ಧವಾಗಿವೆ. ಮಲ್ಲಿನಾಥನ
ಈ ಪದ್ಯದಲ್ಲಿ ಕಾವ್ಯದ ನಾಯಕ ರಸ ಮೊದಲಾದವು ಸಂಗೃಹೀತವಾಗಿವೆ:—

ನೇತಾಸ್ಮಿನ್ ಯದುನಂದನಃ ಸ ಭಗವಾನ್ ವೀರಃ ಪ್ರಧಾನೋ ರಸಃ
ಶೃಂಗಾರಾದಿಭಿರಂಗವಾನ್ ವಿಜಯತೇ ಪೂರ್ಣಾ ಪುನರ್ವರ್ಣನಾ ।
ಇಂದ್ರಪ್ರಸ್ಥಗಮಾದ್ಯುಪಾಯವಿಷಯಶ್ಚೈದ್ಯಾವಸಾದಃ ಫಲಂ
ಧನ್ಯೋ ಮಾಘಕವಿರ್ವಯಂ ತು ಕೃತಿನಸ್ತತ್ಸೂಕ್ತಿಸಂಸೇವನಾತ್ ॥

ಕಥಾಭಾಗವು ಮಹಾಭಾರತದಿಂದ ತೆಗೆದುಕೊಂಡಿದ್ದು, “ಶ್ರೀಕೃಷ್ಣನಿಗೆ ನಾರದರು ಶಿಶುಪಾಲನ ದುರುಳತನವನ್ನು ಹೇಳುವುದು, ಉದ್ಧವ–ಬಲರಾಮರೊಡನೆ ಮಂತ್ರಾಲೋಚನೆ ಯನ್ನು ಮಾಡಿ ಶ್ರೀಕೃಷ್ಣನು ಯುಧಿಷ್ಠಿರನ ರಾಜಸೂಯಯಾಗಕ್ಕೆ ಬರುವುದು, ಅಲ್ಲಿ ಶಿಶುಪಾಲನು ಶ್ರೀ ಕೃಷ್ಣನನ್ನು ನಿಂದಿಸಿ ಯುದ್ಧಕ್ಕೆ ಸಜ್ಜಾಗುವುದು, ‘ಶಿಶುಪಾಲನ ಸಂಹಾರ’ ಇದಿಷ್ಟು ಕಥಾವಸ್ತು. ಇದನ್ನು ಮಾಘನು 20 ಸರ್ಗಗಳಲ್ಲಿ 1633 ಶ್ಲೋಕಗಳಲ್ಲಿ ವಿಸ್ತರಿಸಿದ್ದಾನೆ.

ಭಾರವಿಯನ್ನು ಸ್ಪರ್ಧಿಸುವುದಕ್ಕಾಗಿಯೇ ಮಾಘನು ಈ ಕಾವ್ಯವನ್ನು ಬರೆದಂತೆ ಕಾಣುತ್ತದೆ. ಕಿರಾತಾರ್ಜುನೀಯದಂತೆ ಶಿಶುಪಾಲವಧವೂ “ಶ್ರೀ” ಶಬ್ದದಿಂದ ಆರಂಭ ವಾಗುತ್ತದೆ. ಎರಡರ ಆರಂಭದ ಶ್ಲೋಕಗಳೂ ವಂಶಸ್ಥವೃತ್ತಗಳು. ಭಾರವಿಯು ಸರ್ಗಾಂತ ದಲ್ಲಿ ಲಕ್ಷ್ಮೀಶಬ್ದವನ್ನಿಟ್ಟರೆ ಈತನು “ಶ್ರೀ” ಶಬ್ದವನ್ನು ಇಟ್ಟಿದ್ದಾನೆ. ಎರಡರಲ್ಲಿಯೂ ಎರಡನೆಯ ಸರ್ಗವು ರಾಜನೀತಿಯ ಚರ್ಚೆಗೆ ಮೀಸಲಾಗಿದೆ. ಉಭಯತ್ರ ಯುದ್ಧವರ್ಣನೆ ಯಲ್ಲಿ ಗತಪ್ರತ್ಯಾಗತಾ, ಏಕಾಕ್ಷರಿ, ದ್ವ್ಯಕ್ಷರೀ ಮುಂತಾದ ಶಬ್ದಾಲಂಕಾರಗಳು ಹೇರಳವಾಗಿವೆ. ಪರ್ವತವರ್ಣನೆ, ಋತುವರ್ಣನೆ, ಸೂರ್ಯೋದಯ, ಸೂರ್ಯಾಸ್ತ, ಜಲಕ್ರೀಡೆ—ಇವೆಲ್ಲವೂ ಭಾರವಿಯ ಕ್ರಮದಲ್ಲಿಯೇ ಮಾಘನಲ್ಲಿ ಬಂದಿದೆ. ಈ ಸ್ಪರ್ಧೆಯಲ್ಲಿ ಮಾಘನೇ ಜಯಶಾಲಿ ಯಾಗಿದ್ದಾನೆಂದು ವಿದ್ವಾಂಸರ ಅಭಿಮತ—

ತಾವದ್ಭಾ ಭಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ
ಉದಿತೇ ತು ಪುನರ್ಮಾಘೇ ಭಾರವೇರ್ಭಾ ರವೇರಿವ ॥

ಕಥಾಭಾಗವು 3ನೇ ಸರ್ಗದಿಂದ ಮುಗ್ಗರಿಸುತ್ತದೆ. ಶ್ರೀಕೃಷ್ಣನು ದ್ವಾರಕೆಯಿಂದ ಹೊರಡುತ್ತಿದ್ದ ಹಾಗೆಯೇ ಅತಿಸಮೀಪದಲ್ಲಿರುವ ರೈವತಕ ಗಿರಿಯಲ್ಲಿ ತಂಗುತ್ತಾನೆ. ರೈವತಕ ವರ್ಣನೆ, ಸೂರ್ಯಾಸ್ತ, ವನವಿಹಾರ—ಮುಂತಾದುವುಗಳು ಮನೋಹರವಾಗಿದ್ದರೂ ಸಂದರ್ಭೋಚಿತಗಳೆನ್ನಲಾಗುವುದಿಲ್ಲ. ಶಿಶುಪಾಲನ ದೂತನು ಶ್ರೀಕೃಷ್ಣನಿಗೆ ನಿಂದಾಸ್ತುತಿಯುಕ್ತ ವಾದ ಶ್ಲೇಷೋಕ್ತಿಯನ್ನಾಡುತ್ತಾನೆ. ರಾಜದೂತನ ನುಡಿ ನಿಷ್ಕೃಷ್ಟವಾದ ಸಂದೇಶವನ್ನೀಯುದ ಎಂದರ್ಥ ಉಳ್ಳದ್ದಾಗಿದೆ.

ಕಾವ್ಯದ ನಾಯಕನಾದ ಶ್ರೀಕೃಷ್ಣನ ಮಾತು ಪರಿಮಿತ. ಉದ್ಧವ-ಬಲರಾಮರ ವಿಮರ್ಶೆಗೆ ಆತನು ಸೂತ್ರಪ್ರಾಯವಾದ ಅವತರಣಿಕೆಯನ್ನು ನೀಡುತ್ತಾನೆ. ಏಕೆಂದರೆ ‘ಮಹೀಯಾಂಸಃ ಪ್ರಕೃತ್ಯಾ ಮಿತಭಾಷಿಣಃ.’ ಶಿಶುಪಾಲನ ದೂತನಿಗೆ ಶ್ರೀಕೃಷ್ಣನ ಪರವಾಗಿ ಸಾತ್ಯಕಿ ಉತ್ತರ ಕೊಡುತ್ತಾನೆ. ಕಿರಾತಾರ್ಜುನೀಯದಲ್ಲಿ ಭೀಮನಿದ್ದಂತೆ ಮಾಘಕಾವ್ಯದಲ್ಲಿ ಬಲರಾಮ. ಅವನು ಯುದ್ಧಪ್ರಿಯ. ಅವನ ಮಾತುಗಳು ರೌದ್ರದ ರಸಘಟ್ಟಗಳು. ಓಜಸ್ವಿಯಾದ ವಾಗ್ವಿಲಾಸ. “ಧರ್ಮರಾಜನು ಯಾಗ ಮಾಡಿದರೆಷ್ಟು ? ಬಿಟ್ಟರೆಷ್ಟು ? ತಮ್ಮ ಏಳಿಗೆ, ಪರರ ಹಾನಿ—ಇವೆರಡೇ ರಾಜನೀತಿಯ ಮೂಲಭೂತವಾದ ತತ್ತ್ವ. ವೈರಿಯನ್ನು ಉಪೇಕ್ಷಿಸುವುದೂ



ಒಂದೇ ; ಹುಲ್ಲಿನ ರಾಶಿಗೆ ಬೆಂಕಿಯಿಟ್ಟು ಅದಕ್ಕೆ ಮೈ ಆನಿಸುವುದೂ ಒಂದೇ. ಉದ್ಧತನಾದ ಶಿಶುಪಾಲ ಸಾಮೋಪಾಯಕ್ಕೆ ಬಗ್ಗುವುದಿಲ್ಲ ದಂಡೆಯಾತ್ರೆಯೇ ನಮ್ಮ ಕರ್ತವ್ಯ. ಆದ್ದರಿಂದ—

“ಪ್ರಾಪ್ಯತಾಂ ವಿದ್ಯುತಾಂ ಸಂಪತ್ ಸಂಪರ್ಕಾದರ್ಕರೋಚಿಷಾಂ ।
ಶಸ್ತ್ರೈರ್ದ್ವಿಷಚ್ಛಿರಶ್ಛೇದಪ್ರೋಚ್ಛಲಚ್ಛೋಣಿತೋಕ್ಷಿತೈಃ ॥” (2–66)

ಎನ್ನುತ್ತಾನೆ. ರಣರಂಗದಲ್ಲಿ ಹೋರಾಡುವ ಯೋಧನ ಕತ್ತಿವರಸೆ ಇದ್ದಂತೆ ಬಲರಾಮನ ವಾಗ್ವಿಜೃಂಭಣೆ. ಅವನ ರೋಷೋಕ್ತಿಗಳು ಸಭಾಭವನದಲ್ಲಿ ಪ್ರತಿಧ್ವನಿಸಿದಾಗ, ಗೋಡೆಯ ಮೇಲೆ ಚಿತ್ರಿಸಿದ್ದ ನಾನಾ ದೇವತೆಗಳು ಭೀತರಾಗಿ ಅವನು ಹೇಳಿದಂತೆಯೇ ಹೇಳುತ್ತಾ ‘ಹೌದು, ಹೌದು’ ಎಂದು ಕೂಗಿಕೊಳ್ಳುವಂತೆ ಕಾಣಿಸಿತಂತೆ !

‘ಇತಿ ಸಂರಂಭಿಣೋ ವಾಣೀರ್ಬಲಸ್ಯಾಲೇಖ್ಯದೇವತಾಃ ।
ಸಭಾಭಿತ್ತಿಪ್ರತಿಧ್ವಾನೈರ್ಭಯಾದನ್ವವದನ್ನಿವ ॥ (2–67)

ಪ್ರತಿನಾಯಕನಾದ ಶಿಶುಪಾಲನ ಕ್ರೋಧಭಾವದ ಚಿತ್ರಣವೂ ರಂಜಕವಾಗಿದೆ. ಈ ಸಂದರ್ಭ ದಲ್ಲಿ ಕವಿಯು ಬಳಸಿರುವ ಉದ್ಗತಾವೃತ್ತವು ಇದಕ್ಕೆ ಚೆನ್ನಾಗಿ ಒಪ್ಪುತ್ತದೆ. ಧರ್ಮರಾಜನು ಸಭಾಮಧ್ಯದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನಿತ್ತುದು ಶಿಶುಪಾಲನಿಗೆ ಸಹ್ಯವಾಗಲಿಲ್ಲ, ಏಕೆಂದರೆ ‘ಪರವೃದ್ಧಿಮತ್ಸರಿ ಮನೋ ಹಿ ಮಾನಿನಾಂ.’ ಅವನು ಧರ್ಮರಾಜನನ್ನೂ, ಭೀಷ್ಮನನ್ನೂ ನಿಂದಿಸಿ ಶ್ರೀಕೃಷ್ಣನನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ, ಗುಣಹೀನನಿಗ ಪೂಜೆ ಏಕೆ ? ಬೋಳುತಲೆಗೆ ಬಾಚಣಿಗೆ ಏಕೆ ?

“ತ್ವಯಿ ಪೂಜನಂ ಜಗತಿ ಜಾಲ್ಮ ಕೃತಮಿದಮಪಾಕೃತೇ ಗುಣೈಃ ।
ಹಾ ಸ ಕರಮುಘಟತೇ ನಿತರಾಂ ಶಿರಸೀವ ಕಂಕತಮಪೇತಮೂರ್ಧಜೇ ॥ (15–33)

ಮಾಘನ ಕಾವ್ಯವನ್ನೋದಿ ಮುಗ್ಧರಾದ ಸಹೃದಯರು—

“ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಂ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

ಎಂದು ಉದ್ಗರಿಸಿದ್ದಾರೆ. ಪದಲಾಲಿತ್ಯ, ಅರ್ಥಗೌರವವನ್ನು ಕಾವ್ಯದ ಉದ್ದಕ್ಕೂ ಕಾಣಬಹುದು. ಉಪಮೆಗಳಿಗಿಂತ ಉತ್ಪ್ರೇಕ್ಷೆಗಳೇ ಅಧಿಕ.

ಪದಲಾಲಿತ್ಯಕ್ಕೆ ಒಂದು ಉದಾಹರಣೆ—

“ಮಧುರತಯಾ ಮಧುಬೋಧಿತಮಾಧವೀಮಧುಸಮೃದ್ಧಿಸಮೇಧಿತಮೇಧಯಾ
ಮಧುಕರಾಂಗನಯಾ ಮುಹುರುನ್ಮದಧ್ವನಿಭೃತಾ ನಿಭೃತಾಕ್ಷರಮುಜ್ಜಗೇ॥” (6–20)

ಕವಿಯ ಉತ್ಪ್ರೇಕ್ಷೆಗಳಲ್ಲಿ ಕಾಣುವ ಕಲ್ಪನಾವಿಲಾಸವು ಚೇತೋಹಾರಿ. ಸ್ತ್ರೀಯರು ಜಲಕೇಳಿ ಯನ್ನು ಮುಗಿಸಿ ಒದ್ದೆ ಬಟ್ಟೆಯನ್ನುಳಿದು ಮಿರುಗುವ ಶುಭ್ರವಸ್ತ್ರವನ್ನು ಧರಿಸಿದರು. ಉಟ್ಟ ಬಟ್ಟೆ ನಗುವಂತೆಯೂ, ಬಿಟ್ಟ ಬಟ್ಟೆ ಕಣ್ಣೀರು ಸುರಿಸುವಂತೆಯೂ ಕಾಣಿಸಿತಂತೆ !—

“ವಾಸಾಂಸಿ ನ್ಯವಸತ ಯಾನಿ ಯೋಷಿತಸ್ತಾಃ
ಶುಭ್ರಾಭ್ರದ್ಯುತಿಭಿರಹಾಸಿ ತೈರ್ಮುದೇವ ।
ಅತ್ಯಾಕ್ಷುಃ ಸ್ನಪನಗಲಜ್ಜಲಾನಿ ಯಾನಿ
ಸ್ಥೂಲಾಶ್ರುಸ್ರುತಿಭಿರರೋದಿ ತೈಃ ಶುಚೇವ ॥” (8–66)

ಇಲ್ಲಿ ಧ್ವನಿತವಾಗುವ ಸ್ತ್ರೀಲಾವಣ್ಯವು ಸಹೃದಯೈಕಗೋಚರ. ಈ ಸೂರ್ಯೋದಯ ವರ್ಣನೆ ಮೋಹಕವಾಗಿದೆ. ಬೆಳಿಗ್ಗೆ ದಿಗಂಗನೆಯರು ಕಿರಣಗಳೆಂಬ ಹಗ್ಗಗಳಿಂದ ಪಕ್ಷಿಗಳ ಕೂಗೆಂಬ ಕಲಕಲಧ್ವನಿಯೊಡನೆ ಬಂಗಾರದ ಬಿಂದಿಗೆಯಾದ ಸೂರ್ಯನನ್ನು ಸಮುದ್ರವೆಂಬ ಬಾವಿಯಿಂದ ಸೇದಿಕೊಳ್ಳುತ್ತಿದ್ದಾರೆ—

"ವಿತತಪೃಥುವರತ್ರಾತುಲ್ಯರೂಪೈರ್ಮಯೂಖೈಃ
ಕಲಶ ಇವ ಗರೀಯಾನ್ ದಿಗ್ಭಿರಾಕೃಷ್ಯಮಾಣಃ ।
ಕೃತಚಪಲ ವಿಹಂಗಾಲಾಪ ಕೋಲಾಹಲಾಭಿಃ
ಜಲನಿಧಿಜಲಮಧ್ಯಾದೇಷ ಉತ್ತಾರ್ಯತೇಽರ್ಕಃ ॥" (11-44)

ಗಜಶಾಲೆಯಲ್ಲಿದ್ದ ಸಲಗವು ಸ್ವಭಾವೋಕ್ತಿಯನ್ನು ಮಾಘನು ಚೆನ್ನಾಗಿ ಚಿತ್ರಿಸುತ್ತಾನೆ. ಬಳಿಯಲ್ಲಿರುವ ಹೆಣ್ಣಾನೆಯನ್ನೂ ಮುಂದಿರಿಸಿದ ಕಬ್ಬಿನ ಜಲ್ಲೆಯನ್ನು ತಿನ್ನುತ್ತಿಲ್ಲ. ನೋಡುತ್ತಿಲ್ಲ. ಕಣ್ಣುಮುಚ್ಚಿಕೊಂಡು ತನ್ನ ಹಿಂದಿನ ಸ್ವತಂತ್ರ ವನವಿಹಾರವನ್ನು ಸ್ಮರಿಸಿಕೊಳ್ಳುತ್ತಾ ಇದೆ—

"ಕ್ಷಿಪ್ತಂ ಪುರೋ ನ ಜಗೃಹೇ ಮುಹುರಿಕ್ಷುಕಾಂಡಂ
ನಾಪೇಕ್ಷತೇ ಸ್ಮ ನಿಕಟೋಪಗತಾಂ ಕರೇಣುಮ್ ।
ಸಸ್ಮಾರ ವಾರಣಪತಿಃ ಪರಿಮೀಲಿತಾಕ್ಷಂ
ಇಚ್ಛಾವಿಹಾರವನವಾಸಮಹೋತ್ಸವಾನಾಂ ॥" (5-50)

ಮಾಘನಿಗೆ ರಾಜನೀತಿ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. 3ನೆಯ ಸರ್ಗದಲ್ಲಿ ಬರುವ ಉದ್ಧವ-ಬಲರಾಮರ ಭಾಷಣ ರಾಜನೀತಿಯ ಉತ್ತಮ ನಿದರ್ಶನ. ಭಾರವಾಹಣ ಮಾ ಜೀವನ್ ಅಜನನಿ (2-45). ಅವಚಸ್ಕರಿರೇ(5-63), ವಿರಿಬ್ಧ (11-41), ರಾಜಸೂಯಂಕೀ (14-33), (12-34), ಅಘಟತೇ (15-33), ಉದಶಿಶ್ವಸತ್(9-34), ಅರ್ಧಪ್ರಲಾಯಿಂತೆ (5-10), ಮುಂತಾದ ಪ್ರಯೋಗಗಳು ವ್ಯಾಕರಣ ಪಾಂಡಿತ್ಯಕ್ಕೆ ನಿದರ್ಶನ. ಅಶ್ವಶಾಸ್ತ್ರ ಪುರುಷಕ-ಶ್ರೀವೃಕ್ಷಕ (5-56), ವಲ್ಗಾ, ಧಾರಾ, ವೀಥೀ (5-60) ಮುಂತಾದವು ಗಜಶಾಸ್ತ್ರದಲ್ಲಿಯೂ ದಲ್ಲಿಯೂ, ಗಂಭೀರವೇದಿ, ಮಂದ (5-49) ಮೊದಲಾದವು ಅಲಂಕಾರಿಕರು ಅವನ ಪಾಂಡಿತ್ಯವನ್ನು ಪ್ರದರ್ಶಿಸುತ್ತವೆ. 9-10ನೆಯ ಸರ್ಗಗಳಲ್ಲಿ ಕಾಮಶಾಸ್ತ್ರದ ವಿಚಾರ ಹೇಳುವ ನಾಯಿಕಾ ಪ್ರಭೇದಾದಿಗಳನ್ನೂ, ಅವರ ವಿಲಾಸಗಳನ್ನೂ, ಅಕ್ಷಯವಾದ ವನ್ನೂ ಪ್ರದರ್ಶಿಸಿದ್ದಾನೆ, ಶಬ್ದಗಳಿಗಾಗಿ ಮಾಘನು ತಡವರಿಸುವುದೇ ಇಲ್ಲ. ಶಬ್ದ ಭಾಂಡಾಗಾರವೇ ಅವನ ವಶದಲ್ಲಿವೆ. "ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ" ಎಂಬ ಪ್ರಶಂಸೋಕ್ತಿ ಅವನಿಗುಂಟು. ಶಬ್ದಶಕ್ತಿಯಿಂದ ಅರ್ಥಾಂತರವನ್ನು ವ್ಯಂಜಿಸುವುದರಲ್ಲಿ ಮಾಘನು ಸಿದ್ಧಹಸ್ತ. (ಉದಾ : 3-53, 4-19,29,59) ಶಬ್ದಗುಂಫನದಲ್ಲಿ ಎಂತಹ ಚಮತ್ಕಾರಗಳನ್ನು ತೋರಿಸಿದ್ದಾನೆಂದರೆ, ಇವನೊಬ್ಬ ಐಂದ್ರಜಾಲಿಕನೆಂದು ಹೇಳಬೇಕಾಗುತ್ತದೆ.



ರಸಪುಷ್ಟಿಗೆ ಕೊರತೆಯಾಗದಂತೆ ನಾನಾ ಬಗೆಯ ಯಮಕಗಳನ್ನು ಜೋಡಿಸುತ್ತಾನೆ. ಒಂದು ಉದಾಹರಣೆ :

"ನವಪಲಾಶ ಪಲಾಶವನಂ ಪುರಃ ಸ್ಫುಟಪರಾಗ ಪರಾಗತ ಪಂಕಜಂ ।
ಮೃದು ಲತಾಂತಲತಾಂತಮಲೋಕಯತ್-ಸ ಸುರಭಿಂ ಸುರಭಿಂ
ಸುಮನೋಭರೈಃ ॥" (6-2)

19ನೆಯ ಸರ್ಗದಲ್ಲಿ ಏಕಾಕ್ಷರ, ದ್ವ್ಯಕ್ಷರ, ಸರ್ವತೋಭದ್ರ, ಮುರಜ ಮುಂತಾದ ಕ್ಲೇಶಸಾಧ್ಯ ಬಂಧಗಳು ನಮ್ಮನ್ನು ಚಕಿತಗೊಳಿಸುತ್ತವೆ. "ಮಾಘೇ ಮೇಘೇ ಗತಂ ವಯಃ" ಎಂದು ವ್ಯಾಖ್ಯಾಕಾರನಾದ ಮಲ್ಲಿನಾಥ ಹೇಳಿದನಂತೆ! ಪ್ರಧಾನರಸವು ವೀರವೆಂದು ಮಲ್ಲಿನಾಥನು ಹೇಳಿದ್ದಾನೆ. ಕವಿಗೆ ಶೃಂಗಾರದಲ್ಲಿ ಒಲವು ಅಧಿಕ, ಶಿಶುಪಾಲವಧದಲ್ಲಿ ಮಾಘನು ಸುಮಾರು 36 ಬಗೆಯ ವೃತ್ತಗಳನ್ನು ಬಳಸಿದ್ದಾನೆ. ಕಾವ್ಯಪದ್ಧತಿಯಲ್ಲಿ ಹೆಚ್ಚು ಬಳಕೆಯಲ್ಲಿಲ್ಲದ ಜಲೋದ್ಧತಗತಿ, ಕುರರೀ ಅತಿಶಾಯಿನೀ, ಉದ್ಗತಾ, ಮಹಾಮಾಲಿನೀ, ಪಂಚಕಾವಲೀ, ಮತ್ತಮಯೂರ—ಮೊದಲಾದ ವೃತ್ತರಚನೆಯಲ್ಲಿ ಕವಿಗೆ ನಿರರ್ಗಳವಾದ ಪ್ರಭುತ್ವವಿದ್ದೆ ಕವಿಯು ಕಾವ್ಯಸಮಾಪ್ತಿಯಲ್ಲಿ—'ಲಕ್ಷ್ಮೀಪತೇಶ್ಚರಿತಕೀರ್ತನಮಾತ್ರಚಾರು' ಎಂದು ವಿನಯವನ್ನು ಪ್ರದರ್ಶಿಸಿದ್ದಾನೆ.—

**ಕವಿಯ ಪ್ರಶಂಸೆ :**

1. ತಾವದ್ಭಾ ಭಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ
   ಉದಿತೇ ತು ಪುನರ್ಮಾಘೇ ಭಾರವೇರ್ಭಾ ರವೇರಿವ ॥
2. ಮಾಘೇನ ವಿಘ್ನಿತೋತ್ಸಾಹಾಃ ನ ಕ್ರಮಂತೇ ಪದಕ್ರಮೇ
   ಸ್ಮರಂತೋ ಭಾರವೇರೇವ ಕವಯಃ ಕಪಯೋ ಯಥಾ ॥
3. ಮುರಾರಿಪದಚಿಂತಾ ಚೇತ್ತದಾ ಮಾಘೇ ಮತಿಂ ಕುರು ।
   ಮುರಾರಿಪದಚಿಂತಾ ಚೇತ್ತದಾ ಮಾಘೇ ಮತಿಂ ಕುರು ॥

**ಕವಿಯ ಸುಭಾಷಿತಗಳು :**

1. ಗೃಹಾನುಪೈತುಂ ಪ್ರಣಯಾದಭೀಪ್ಸವೋ ಭವಂತಿ ನಾಪುಣ್ಯಕೃತಾಂ ಮನೀಷಿಣಃ (1—14
2. ಶ್ರೇಯಸಿ ಕೇನ ತೃಪ್ಯತೇ (1—29
3. ಮಹೀಯಾಂಸಃ ಪ್ರಕೃತ್ಯಾ ಮಿತಭಾಷಿಣಃ । (2—13
4. ತೇಜಸ್ವಿಮಧ್ಯೇ ತೇಜಸ್ವೀ ದವೀಯಾನಪಿ ಗಣ್ಯತೇ । (2—51
5. ಉಪಾಯಮಾಸ್ಥಿತಸ್ಯಾಪಿ ನಶ್ಯಂತ್ಯರ್ಥಾಃ ಪ್ರಮಾದ್ಯತಃ । (2—80

6. ನಾಲಂಬತೇ ದ್ವೈಷ್ಟಿಕತಾಂ ನ ನಿಷೀದತಿ ಪೌರುಷೇ ॥
ಶಬ್ದಾರ್ಥೌ ಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ ॥ (2—86)

7. ಕ್ಷಣೇ ಕ್ಷಣೇ ಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಯಾಃ (4—17)

8. ಶಾಸ್ತ್ರಂ ಹಿ ನಿಶ್ಚಿತಧಿಯಾಂ ಕ್ವ ನ ಸಿದ್ಧಿಮೇತಿ । (5—47)

9. ನ ಪರಿಚಯೋ ಮಲಿನಾತ್ಮನಾಂ ಪ್ರಧಾನಂ ॥ (7—61)

10. ಅಪದೋಷತೈವ ವಿಗುಣಸ್ಯ ಗುಣಃ । (9—12)

—0—

## ಪೂರ್ವಪುರಾಣ ಅಥವಾ ಆದಿಪುರಾಣ (ಕ್ರಿ.ಶ. 9ನೆಯ ಶತಮಾನ)

ಇದನ್ನು ರಚಿಸಿದ ದಿಗಂಬರ ಜೈನಾಚಾರ್ಯ ಜಿನಸೇನನು ರಾಷ್ಟ್ರಕೂಟ ರಾಜನಾದ ಅಮೋಘವರ್ಷನಿಗೆ (ನೃಪತುಂಗ) ಗುರುವಾಗಿದ್ದನು. ಅಮೋಘವರ್ಷನ ಕಾಲ ಕ್ರಿ.ಶ. 815—877. ಕವಿಯು ಕ್ರಿ.ಶ 753ರಲ್ಲಿ ಜನಿಸಿ 838ರಲ್ಲಿ ನಿರ್ವಾಣಹೊಂದಿದನೆಂದೂ ಆತನ ಜೀವಿತಕಾಲ 85 ವರ್ಷಗಳೆಂದೂ ಹೇಳುತ್ತಾರೆ. ಜಿನಸೇನನು ವೀರಸೇನಾಚಾರ್ಯನ ಶಿಷ್ಯ. ಪೂರ್ವಪುರಾಣದಲ್ಲಿ ಜಿನಸೇನನು ವಜ್ರಸೂರಿ, ಮಹಾಸೇನ, ರವಿಷೇಣ, ಕುಮಾರಸೇನ, ವೀರಸೇನ—ಮುಂತಾದ ಅನೇಕ ಪ್ರಾಚೀನ ಕವಿಗಳನ್ನು ಸ್ಮರಿಸಿದ್ದಾನೆ. ಅವರಲ್ಲಿ ರವಿಷೇಣನ ಪದ್ಮಪುರಾಣವು (ಕ್ರಿ.ಶ. 7ನೇ ಶತಮಾನ) ಉಪಲಬ್ಧವಾಗಿದೆ. ಹರಿವಂಶ ಪುರಾಣವನ್ನು ಬರೆದ ಜಿನಸೇನನು ಬೇರೊಬ್ಬನು.

ಜಿನಸೇನಾಚಾರ್ಯನ ಇನ್ನೊಂದು ಕೃತಿ ಪಾರ್ಶ್ವಾಭ್ಯುದಯ. ಅದರ ಒಂದೊಂದು ಪದ್ಯದಲ್ಲಿಯೂ ಕಾಳಿದಾಸನ ಮೇಘದೂತದ ಪ್ರತಿ ಶ್ಲೋಕದ ಪಾದವನ್ನೂ ಸೇರಿಸಲಾಗಿದೆ. ಅವನು ಬರೆದಿರುವನೆನ್ನಲಾದ ಜಿನಸ್ತುತಿಯೂ ವರ್ಧಮಾನ ಪುರಾಣವೂ ದೊರಕಿಲ್ಲ. ಇವನ ಸಮಕಾಲಿಕನಾದ ಅಸಗನ ವರ್ಧಮಾನ ಪುರಾಣ ದೊರಕಿದೆ.

ತ್ರಿಷಷ್ಟಿ (63) ಶಲಾಕಾಪುರುಷರ ವಿಷಯವಾಗಿ ಮಹಾಪುರಾಣವನ್ನು ರಚಿಸುವ ಉದ್ದೇಶದಿಂದ ಜಿನಸೇನನು ಈ ಗ್ರಂಥವನ್ನಾರಂಭಿಸಿದನು. ಅದು ಪೂರ್ಣವಾಗದೆ ವೃಷಭಸ್ವಾಮಿ, ಭರತ ಚಕ್ರವರ್ತಿಗಳಿಬ್ಬರ ಕಥಾವರ್ಣನೆಯಲ್ಲಿ ನಿಂತಿತು. ಅಲ್ಲಿಗೆ 42 ಪರ್ವಗಳಾದವು. ಮುಂದಿನ 5 ಪರ್ವಗಳನ್ನು ಶಿಷ್ಯನಾದ ಗುಣಭದ್ರಾಚಾರ್ಯನು ಬರೆದನು. ಇದೇ ಪೂರ್ವಪುರಾಣ ಅಥವಾ ಆದಿಪುರಾಣ. ಉಳಿದ 61 ಶಲಾಕಾ ಪುರುಷರ ಚರಿತೆಯನ್ನೂ ಗುಣಭದ್ರನೇ ರಚಿಸಿದ್ದಾನೆ. ಅದು ಉತ್ತರಪುರಾಣ. ಕನ್ನಡದಲ್ಲಿ ಪಂಪನ ಆದಿಪುರಾಣವು ಪೂರ್ವಪುರಾಣವನ್ನವಲಂಬಿಸಿ ಬರೆದದ್ದು.



**ಕಾವ್ಯಪರಿಚಯ** :—ಕಥಾಮುಖ, ಉಪೋದ್ಘಾತ, ಪೀಠಿಕೆಗಳ ತರುವಾಯ 4ನೆಯ ಪರ್ವದಲ್ಲಿ ಕಥಾರಂಭವಾಗುತ್ತದೆ. ಮಹಾವೀರನಿಂದ ಉಪದಿಷ್ಟನಾದ ಗೌತಮಗಣಧರನು ಶ್ರೇಣಿಕ ಮಹಾಮಂಡಲೇಶ್ವರನಿಗೆ ಈ ಚರಿತೆಯನ್ನು ಹೇಳುತ್ತಾನೆ. ಆದಿತೀರ್ಥಂಕರನಾದ ವೃಷಭದೇವ. ಅತಿಬಲಮಹಾಬಲರೆಂಬ ವಿದ್ಯಾಧರರಾಜರು, ಮಹಾಮತಿ, ಸಂಭಿನ್ನಮತಿ, ಶತಮತಿ ಮೊದಲಾದ ಮಂತ್ರಿಗಳ ಪರಮಾರ್ಥಜಿಜ್ಞಾಸೆ, ವಜ್ರಜಂಘ—ಶ್ರೀಮತಿಯರ ವೃತ್ತಾಂತ, ನಾಭಿರಾಜನ ಜನ್ಮಾಭಿಷೇಕಾದಿ. ಭರತ ಚಕ್ರವರ್ತಿಯ ವೃತ್ತಾಂತ ಮುಂತಾದವು ಕಥಾವಸ್ತು. ಇದನ್ನು ಪುರಾಣವೆಂದು ಕರೆದಿದ್ದರೂ ರಾಮಾಯಣದಂತೆ ಉತ್ತಮಕಾವ್ಯ ಗುಣಗಳಿರುವುದರಿಂದ ಮಹಾಕಾವ್ಯವೆಂದು ಗಣಿಸಬಹುದು. 42 ಪರ್ವಗಳಲ್ಲಿ 10979 ಪದ್ಯಗಳಿವೆ.

ಪೂರ್ವಪುರಾಣದಲ್ಲಿ ಅನುಷ್ಟುಪ್ ಶ್ಲೋಕಗಳೇ ಅಧಿಕ. ಸರ್ಗಾಂತ್ಯದಲ್ಲಿ ಮಾಲಿನೀ, ಭುಜಂಗಪ್ರಯಾತ. ಸ್ರಗ್ಧರಾ ಮುಂತಾದ ವಿವಿಧ ವೃತ್ತ ಜಾತಿಗಳುಂಟು. ಜೈನತತ್ವಗಳ ಪ್ರತಿಪಾದನೆಗೆ ಪ್ರಾಶಸ್ತ್ಯವಿದ್ದರೂ ವರ್ಣನಾಪ್ರಸಂಗದಲ್ಲಿ ಕಾವ್ಯ ಕೌಶಲವು ಶ್ಲಾಘನೀಯವಾಗಿದೆ. ಜಿನಸೇನಾಚಾರ್ಯನು ವಿದ್ವದಗ್ರಣಿಯಾಗಿರುವಂತೆ ಸಹೃದಯ ಶಿರೋಮಣಿಯೂ ಆಗಿದ್ದಾನೆ. ಈ ಕಾವ್ಯದಲ್ಲಿ ಕಾಳಿದಾಸನ ಪ್ರಭಾವ ಮುದ್ರಿತನಾಗಿರುವುದನ್ನು ಎಲ್ಲೆಡೆಯೂ ಕಾಣಬಹುದು. ಒಂದನೆಯ ಪರ್ವದಲ್ಲಿ ಭಾಮಹನ ವಿಚಾರಸರಣಿಯನ್ನು ಗುರುತಿಸಬಹುದು. ಉದಾಹರಣೆಗೆ—

ಕೇಚಿದರ್ಥಸ್ಯ ಸೌಂದರ್ಯಮಪರೇ ಪದಸೌಷ್ಠವಂ ।
ವಾಚಮಲಂಕ್ರಿಯಾಮಾಹುಸ್ತದ್ವಯಂ ನೋ ಮತಂ ಮತಂ ॥ (1—95)

ಎಂದು ಶಬ್ದಾರ್ಥಾಲಂಕಾರಗಳೆರಡನ್ನೂ ಮಾನ್ಯ ಮಾಡಿರುವುದು. ಭಾಮಹನ

ರೂಪಕಾದಿಮಲಂಕಾರಂ ಬಾಹ್ಯಮಾಚಕ್ಷತೇ ಪರೇ ।
ಸುಪಾಂ ತಿಙಾಂ ಚ ವ್ಯುತ್ಪತ್ತಿಂ ವಾಚಾಂ ವಾಂಛಂತ್ಯಲಂಕೃತಿಂ ॥
......................
ಶಬ್ದಾಭಿಧೇಯಾಲಂಕಾರಭೇದಾದಿಷ್ಟಂ ದ್ವಯಂ ತು ನಃ ॥ (1—14, 15)

ಈ ಶ್ಲೋಕಗಳ ಅಭಿಪ್ರಾಯವೇ ಆಗಿದೆ.

'ಕ್ವ ಸೂರ್ಯ ಪ್ರಭವೋ ವಂಶಃ.........' (ರಘು 1-2) ಎಂಬ ಕಾಳಿದಾಸನ ನುಡಿಯ ಅನುಸರಣೆಯನ್ನು,

ಕ್ವ ಗಂಭೀರಾ ಪುರಾಣಾಬ್ಧಿಃ ಕ್ವ ಮಾದೃಗ್ಬೋಧದುರ್ವಿಧಃ ।
ಸೋಽಹಂ ಮಹೋದಧಿಂ ದೋರ್ಭ್ಯಾಂ ತಿತೀರ್ಷುರ್ಯಾಮಿ ಹಾಸ್ಯತಾಂ ॥ 1-28

ಎಂಬಲ್ಲಿ ಕಾಣಬಹುದು,

ಆದರೂ ಜಿನಸೇನನ ಕಾವ್ಯಪ್ರತಿಭೆ ಅಸಾಧಾರಣವೇ ಸರಿ. ವಾಮನನು ಹೇಳುವ ಶಬ್ದಗುಣ ಅರ್ಥಗುಣಗಳೆಲ್ಲವನ್ನೂ ಪೂರ್ವಪುರಾಣದಲ್ಲಿ ನೋಡಬಹುದು. ಕಾಳಿದಾಸನಂತೆ ಇವನಿಗೆ ಉಪಮಾಲಂಕಾರದಲ್ಲಿ ಪ್ರೀತಿ.

1. ವಜ್ರಜಂಘನ ಅಲಂಕಾರದ ವರ್ಣನೆ ಇದು. ಕೊರಳಿನಲ್ಲಿದ್ದ ಮುತ್ತಿನಸರ ಅವನ ಮುಖಚಂದ್ರನ ಸೇವೆಗೆ ಬಂದ ನಕ್ಷತ್ರಗಣದಂತೆ ಶೋಭಿಸಿತು—

ಉಪಕಂಠಮಸ್ಯೌಷ್ಠದಧ್ರೇ ಹಾರಂ ನೀಹಾರಸಚ್ಛವಿಂ ।
ತಾರಾನಿಕರಮಾಸ್ಯೇಂದುರಿವ ಸೇವಾರ್ಥಮಾಗತಂ ॥ 6–35

2. ಆತನ ವಿಶಾಲವಕ್ಷಃಸ್ಥಲದಲ್ಲಿ ಲಿಪ್ತವಾದ ಚಂದನವು ಮೇರುತಟದ ಮೇಲೆ ಹರಡಿದ ಚಂದ್ರಿಕೆಯಂತೆ ಕಂಗೊಳಿಸಿತು—

ವಕ್ಷಃಸ್ಥಲೇನ ಪೃಥುನಾ ಸೋಽಧಾಚ್ಚಂದನಚರ್ಚಿಕಾಂ ।
ಮೇರುರ್ನಿಜತಟೀ ಲಗ್ನಾಂ ಶಾರದೀಮಿವ ಚಂದ್ರಿಕಾಂ ॥ 6–36

3. ತೋಟಗದ್ದೆಗಳ ಸರಳವಾದ ಪ್ರಕೃತಿಚಿತ್ರಣ ಮನೋಹರವಾಗಿದೆ. ಫಲಭರಿತವಾದ ತೋಟಗಳು ಕೋಗಿಲೆಗಳ ಮಂಜುಳ ಧ್ವನಿಯಿಂದ ದಾರಿಗರನ್ನು ಕರೆಯುವಂತಿವೆ—

ಯತ್ರಾರಾಮಾಃ ಸದಾ ರಮ್ಯಾಸ್ತರುಭಿಃ ಫಲಶಾಲಿಭಿಃ ।
ಪಥಿಕಾನಾಹ್ವಯಂತೀವ ಪರಪುಷ್ಟಕಲಸ್ವನೈಃ ॥

4. ಹೊಲಗದ್ದೆಗಳು ಧರ್ಮಕಾರ್ಯಗಳಂತೆ ಸದಾ ಫಲಶಾಲಿಗಳು—

ಯಸ್ಯಸೀಮಾವಿಭಾಗೇಷು ಶಾಲ್ಯಾದಿಕ್ಷೇತ್ರಸಂಪದಃ ।
ಸದೈವ ಫಲಶಾಲಿನ್ಯೋ ಭಾಂತಿ ಧರ್ಮ್ಯಾ ಇವ ಕ್ರಿಯಾಃ ॥

5. ಬತ್ತದ ಗದ್ದೆಗೆ ಇಳಿಬೀಳುವ ಗಿಳಿಹಿಂಡು ತೋರಣಮಾಲೆಯಂತೆ ಕಾಣುತ್ತದೆ. ಅದರ ಸೌಂದರ್ಯದಿಂದ ಮುಗ್ಧರಾದ ಹೊಲಕಾಯುವ ಹೆಂಗಸರು ಗಿಳಿಹಿಂಡನ್ನೋಡಿಸುವುದೇ ಇಲ್ಲ—

ಯತ್ರ ಶಾಲಿವನೋಪಾಂತೇ ಖಾತ್ಪತಂತೀಂ ಶುಕಾವಲೀಂ ।
ಶಾಲಿಗೋಪ್ಯೋಽನುಮನ್ಯಂತೇ ದಧತೀಂ ತೋರಣಶ್ರಿಯಂ ॥ 4–59–61

6. ಲಲಿತಪದಗಳ ಶ್ರುತಿಮಧುರಬಂಧಕ್ಕೆ ಒಂದು ··· ನಿದರ್ಶನ ಅಚ್ಯುತೇಂದ್ರನ ಮನಸ್ಸನ್ನು ದೇವಸ್ತ್ರೀಯರು ಅಪಹರಿಸಿದರು—

ಲಲಿತಪದವಿಹಾರೈರ್ಭ್ರೂವಿಕಾರೈರುದಾರೈಃ
ನಯನಯುಗವಿಲಾಸೈರಂಗಲಾಸ್ಯೈಃ ಸಹಾಸ್ಯೈಃ ।
ಪ್ರಕಟಿತ ಮೃದುಭಾವೈಃ ಸಾನುಭಾವೈಶ್ಚ ಭಾವೈಃ
ಜಗೃಹುರಥ ಮನೋಽಸ್ಯಾಬ್ಜೋಪಮಾಸ್ಯಾ ವಯಸ್ಯಾಃ 10–206

## ಉತ್ತರ ಪುರಾಣ

ಮಹಾಪುರಾಣದ 43ನೆಯ ಪರ್ವದಿಂದ 76ನೆಯ ಪರ್ವದವರೆಗೆ ಜಿನಸೇನಾಚಾರ್ಯರ ಶಿಷ್ಯ ಗುಣಭದ್ರಾಚಾರ್ಯನು ಬರೆದಿದ್ದಾನೆ. 48ನೆಯ ಸರ್ಗದಲ್ಲಿ ಭರತನ ಕಥೆ ಪೂರ್ಣವಾಗುತ್ತದೆ. ಅಲ್ಲಿಂದ ಮುಂದಿನ ಭಾಗವನ್ನು ಉತ್ತರ ಪುರಾಣವೆನ್ನುವುದು ಸಾಂಪ್ರದಾಯಿಕ.



ಇದರಲ್ಲಿ 61 ಶಲಾಕಾಪುರುಷರ ವೃತ್ತಾಂತವು ಬರುತ್ತದೆ. ಕಥಾಭಾಗವೇ ಅಧಿಕವಾದ್ದರಿಂ ಗುಣಭದ್ರನು ವರ್ಣನಾಂಶವನ್ನು ಮೊಟಕುಗೊಳಿಸಿದ್ದಾನೆ. ಇವನ ಶೈಲಿ ಸ್ವಲ್ಪ ಬಿಗಿಯಾಗಿ ಉತ್ತಮ ಕಾವ್ಯ ಗುಣಗಳುಂಟು. ತನ್ನ ಗುರುವನ್ನು ವಿಶೇಷವಾಗಿ ಸ್ತುತಿಸಿ

ಕವಿರೇವ ಕವಿರ್ವೇತ್ತಿ ಕಾಮಂ ಕಾವ್ಯಪರಿಶ್ರಮಂ ।
ವಂಧ್ಯಾ ಸ್ತನಂಧಯೋತ್ಪತ್ತಿವೇದನಾಮಿವ ನಾಕವಿಃ ॥

ಎನ್ನುತ್ತಾನೆ. 43–24

1. ಗಂಡಾನದಿ ಸಮುದ್ರದಲ್ಲಿ ಸೇರಿ ತನ್ಮಯೀಭಾವವನ್ನು ಹೊಂದುತ್ತಾಳೆ. ಪ್ರೇಮವೆಂದರೆ ಹೀಗೆ. ಇದರಿಂದ ಸಮುದ್ರದ ಲಾವಣ್ಯವೂ ಸಫಲ ।

ಸಂಗಮೇ ತನ್ಮಯೀ ಜಾತಾ ಪ್ರೇಮ ನಾಮೇದೃಶಂ ಸ್ಮೃತಂ ।
ಸಾಫಲ್ಯಮೇತಯಾ ನಿತ್ಯಮೇತಿ ಲಾವಣ್ಯಮಂಬುಧೇಃ ॥ 45–165

## ವರ್ಧಮಾನಪುರಾಣ (ಕ್ರಿ. ಶ. 853)

ಇದನ್ನು ಬರೆದ ಅಸಗನು ಗ್ರಂಥಸಮಾಪ್ತಿಯಲ್ಲಿ ಸಂವತ್ಸರ 910ರಲ್ಲಿ (ಸಂವತ್ಸರೇ ದಶ ನವೋತ್ತರ ವರ್ಷಯುಕ್ತೇ) ಇದನ್ನು ರಚಿಸಿದನೆಂದು ಹೇಳಿದ್ದಾನೆ. ಇದು ವಿಕ್ರಮಶಕವಾದಲ್ಲಿ ಕ್ರಿ. ಶ. 853, ಶಾಲಿವಾಹನಶಕವಾದಲ್ಲಿ ಕ್ರಿ. ಶ. 988 ಆಗುತ್ತದೆ. ಕ್ರಿ. ಶ. 950ರಲ್ಲಿದ್ದ ಕನ್ನಡ ಕವಿ ಪೊನ್ನನು ತನ್ನ ಶಾಂತಿಪುರಾಣದಲ್ಲಿ,

"ಕನ್ನಡಕವಿತೆಯೊಳಸಗಂ । ಗನ್ನೂರ್ಮಡಿ," ಎಂದು ಹೇಳಿಕೊಂಡಿರುವುದರಿಂದ ಅಸಗನು ಪೊನ್ನನಿಗಿಂತ ಪ್ರಾಚೀನನೆಂದೂ ಅವನು ಹೇಳಿದ ಸಂವತ್ಸರ 910 ವಿಕ್ರಮ ಶಕಕ್ಕೆ ಅನ್ವಯಿಸುವುದೆಂದೂ ಹೇಳಬಹುದಾಗಿದೆ. *ಆದ್ದರಿಂದ ಅಸಗನ ಕಾಲ ಕ್ರಿ. ಶ. 853.

ಅಸಗನ ಇನ್ನೊಂದು ಗ್ರಂಥವಾದ ಶಾಂತಿಪುರಾಣದ ಪ್ರಶಸ್ತಿಪದ್ಯಗಳ ಪ್ರಕಾರ ಇವನ ತಂದೆ ಪಟುಮತಿ, ತಾಯಿ ವೈರೇತಿ. 'ಶಬ್ದಸಮಯಾರ್ಣವಪಾರಗ' ನಾದ ನಾಗನಂದ್ಯಾಚಾರ್ಯನು ಇವನ ಗುರು; ಜಿನಾಪನೆಂಬುವನು ಸ್ನೇಹಿತ. ವರ್ಧಮಾನಪುರಾಣದ ಸಮಾಪ್ತಿ ವಾಕ್ಯದಲ್ಲಿ ಅಸಗನು ಶ್ರೀನಾಥರಾಜ್ಯದ ಮೌದ್ಗಲ್ಯಪರ್ವತದ ನಿವಾಸಿಯಾದ ಭಾವಕೀರ್ತಿ ಬಳಿ ವಿದ್ಯೆಯನ್ನು ಕಲಿತೆನೆಂದೂ ಚೋಳದೇಶದ ವಿರಳಾನಗರದಲ್ಲಿದ್ದು ಜಿನೋಪದಿಷ್ಟವಾದ 8 ಗ್ರಂಥಗಳನ್ನು ರಚಿಸಿದೆನೆಂದೂ ಹೇಳಿಕೊಂಡಿದ್ದಾನೆ.

ಕನ್ನಡಕವಿಗಳಾದ ಪೊನ್ನ (ಸು. 950), ದುರ್ಗಸಿಂಹ (ಸು. 1025), ನಯಸೇನ (1112)ರೂ, ಕೇಶಿರಾಜನೂ (ಸು. 1260) ಅಸಗನನ್ನು ಉಲ್ಲೇಖಿಸಿದ್ದಾರೆ. ಕ್ರಿ.ಶ. 10ನೆಯ ಶತಮಾನದಲ್ಲಿದ್ದ ಧವಲನೆಂಬ ಕವಿ ಅಪಭ್ರಂಶಭಾಷೆಯ ಹರಿವಂಶಪುರಾಣದಲ್ಲಿ ಅಸಗನನ್ನು ಸ್ಮರಿಸಿದ್ದಾನೆ. ಕ್ರಿ. ಶ. 900ರಲ್ಲಿ ಇದ್ದಿರಬಹುದಾದ ಜಯಕೀರ್ತಿಯು ತನ್ನ ಛಂದೋನುಶಾಸನದಲ್ಲಿ

*ಕರ್ಣಾಟಕ ಕವಿಚರಿತ್ರೆ, 1961, ಪು. 22

'ಅಸಗಾಖ್ಯಕವಿನಾ ಪ್ರತಿಪಾದಿತಂ ನನು ಕರ್ಣಾಟಕುಮಾರಸಂಭವಕಾವ್ಯೇ ' ಎಂದು ಹೇಳಿರುವುದರಿಂದಲೂ ನಾಗವರ್ಮನ ಕಾವ್ಯಾವಲೋಕನ (ಸು. 1145)ದಲ್ಲಿ ಕನ್ನಡ ಕುಮಾರಸಂಭವದ ಕಥಾಂಶಗಳನ್ನು ತಿಳಿಸುವ ಕೆಲವು ಕನ್ನಡಪದ್ಯಗಳು ಉದ್ಧೃತವಾಗಿರುವುರಿಂದಲೂ ಅಸಗನು ಕನ್ನಡದಲ್ಲಿಯೂ ಗ್ರಂಥರಚನೆ ಮಾಡಿದ್ದನೆಂದು ತಿಳಿದುಬರುತ್ತದೆ.

ಅಸಗನ ವರ್ಧಮಾನಪುರಾಣ ಮತ್ತು ಹರಿಚಂದನಜೀವಂಧರಚಂಪುಗಳಲ್ಲಿ ಅನ್ಯೋನ್ಯ ಶಬ್ದಾರ್ಥಸಾದೃಶ್ಯಗಳಿರುವ ಪದ್ಯಗಳು ದೊರೆಯುತ್ತವೆ. ಉದಾಹರಣೆಗೆ—

ವಿದ್ಯುಲ್ಲತೇವಾಭಿನವಾಂಬುವಾಹಂ ಚೂತದ್ರುಮಂ ನೂತನಮಂಜರೀವ ।
ಸ್ಫುರತ್ಪ್ರಬೇವಾಮಲಪದ್ಮರಾಗಂ ವಿಭೂಷಯಾಮಾಸ ತಮಾಯತಾಕ್ಷೀ । ವ. ಪು. 1-44

ಸೌದಾಮಿನೀವ ಜಲದಂ ನವಮಂಜರೀವ ಚೂತದ್ರುಮಂ ಕುಸುಮಸಂಪದಿವಾದ್ಯ ಮಾಸಂ ।
ಜ್ಯೋತ್ಸ್ನೇವ ಚಂದ್ರಮಸಮಚ್ಛವಿಭೇವ ಸೂರ್ಯಂ ತಂ ಭೂಮಿಪಾಲಕಮಭೂಷಯ ದಾಯತಾಕ್ಷೀ ॥ ಜೀ. ಚಂ. 1-27

ಇದೇ ರೀತಿ ಈ ಎರಡು ಗ್ರಂಥಗಳಿಗೆ ಹೋಲಿಕೆ ಇರುವ 12 ಸ್ಥಳಗಳನ್ನು ನಿರ್ದೇಶಿಸಬಹುದು. ಹೀಗೇಯೇ ಅಸಗನ ವರ್ಧಮಾನಪುರಾಣದಲ್ಲಿ ರಘುವಂಶ, ಕುಮಾರಸಂಭವ, ಶಿಶುಪಾಲವಧ, ಪೂರ್ವಪುರಾಣ, ಧರ್ಮಶರ್ಮಾಭ್ಯುದಯ, ಚಂದ್ರಪ್ರಭಚರಿತಗಳ ನಕಲು ಕಂಡುಬರುತ್ತದೆ*

### ಕಾವ್ಯಪರಿಚಯ

ಇದರಲ್ಲಿ 18 ಸರ್ಗಗಳಿದ್ದು ಮಹಾವೀರ ತೀರ್ಥಂಕರನ (ವರ್ಧಮಾನ) ವೃತ್ತಾಂತವನ್ನು ವರ್ಣಿಸಲಾಗಿದೆ. ಪುರೂರವನೆಂಬ ವ್ಯಾಧನು 37 ಜನ್ಮಗಳನ್ನೆತ್ತಿ ಮಹಾವೀರನಾದನೆಂಬುದು ಕಥಾವಸ್ತು. ಜನ್ಮಾಂತರ ವಿವರಣ ಪ್ರಸಂಗದಲ್ಲಿ ನಗರ, ಉದ್ಯಾನ, ರಾಜನೀತಿ, ಯುದ್ಧ ಮುಂತಾದ ಮಹಾಕಾವ್ಯೋಚಿತ ವರ್ಣನೆಗಳು ಬರುತ್ತವೆ. ಜೈನಧರ್ಮದ ಪ್ರತಿಪಾದನೆ ಸರಳ ಭಾಷೆಯಲ್ಲಿದೆ. ನಾನಾವೃತ್ತಗಳನ್ನು ಕವಿ ಬಳಸಿದ್ದಾನೆ ವರ್ಣನೆಯಲ್ಲಿ ಶಬ್ದಾಡಂಬರವಿಲ್ಲ. ಶೈಲಿ ಲಲಿತವಾಗಿಯೂ ರಸವತ್ತಾಗಿಯೂ ಇದೆ. ರಘುವಂಶಾದಿ ಕಾವ್ಯಗಳನ್ನು ಅಸಗನು ಸ್ಪಷ್ಟವಾಗಿ ಅನುಕರಿಸಿದ್ದರೂ ಸ್ವತಂತ್ರವಾದ ಕಲ್ಪನೆಯೂ ಪ್ರತಿಭೆಯೂ ಅವನಲ್ಲಿವೆ.

---

*ಅಸಗನೇ ಜೀವಂಧರ ಚಂಪುವಿನಿಂದ ನಕಲು ಮಾಡಿದ್ದಾನೆಂದು ಹೇಳಿದರೆ, ಆ ಚಂಪುವಿನ ಕಾಲವನ್ನು ಅಸಗನ ಕಾಲಕ್ಕಿಂತ ಒಂದು ಶತಕದಷ್ಟಾದರೂ ಹಿಂದಕ್ಕೆ ಹಾಕಬೇಕಾಗುವುದು. ಈ ಪಕ್ಷದಲ್ಲಿ ಹರಿಚಂದನ ಜೀವಂಧರ ಚಂಪು ಕ್ರಿ. ಶ. 8ನೆಯ ಶತಕಕ್ಕೆ ಸೇರಿದ್ದು, ಆದೇ ಸಂಸ್ಕೃತ ವಾಙ್ಮಯದಲ್ಲಿ ಮೊದಲನೆಯ ಚಂಪು, ತ್ರಿವಿಕ್ರಮಭಟ್ಟನ ನಳಚಂಪುವಲ್ಲವೆನ್ನಬೇಕಾಗುತ್ತದೆ.



1. ನಯಮಾರ್ಗದಲ್ಲಿ ನಡೆಯಂತಕ್ಕವನಿಗೆ ವೈರಿ ಇರುವುದಿಲ್ಲ ; ಪಥ್ಯಭೋಜಿಗೆ ರೋಗ ಬರುವುದಿಲ್ಲ—

ನಯುವರ್ತ್ಮನಿ ಯಃ ಸುನಿಶ್ಚಿತಂ
ಯತತೇ ತಸ್ಯ ನ ವಿದ್ಯತೇ ರಿಪುಃ।
ನನು ಪಥ್ಯಭುಜಂ ಕಿಮಾಮಯಃ
ಪ್ರಭವತ್ಯಲ್ಪಮಪಿ ಪ್ರಬಾಧಿತುಂ ॥ 7-26

2. ಸೂರ್ಯಾಸ್ತವರ್ಣನೆ : ಜಗತ್ತನ್ನು ಉಗ್ರಕಿರಣಗಳಿಂದ ಪೀಡಿಸಿದೆನಲ್ಲ ಎಂಬ ಪಶ್ಚಾತ್ತಾಪದಿಂದಲೋ ಎಂಬಂತೆ ಸೂರ್ಯನು ಅಧೋಮುಖನಾದನು—

ತಪ್ತಮೇವ ಹಿ ಮಯಾ ಜಗದೇತತ್
ರಶ್ಮಿಭಿಸ್ತತ ದವಾನಲಕಲ್ಪೈಃ ।
ಕಷ್ಟಮಿತ್ಯನುಶಯಾದಿವ ಭಾಸ್ವಾನ್
ತತ್ಕ್ಷಣಂ ಭೃಶಮಧೋವದನೋಽಭೂತ್ ॥ 13—33

## ಹರವಿಜಯ (ಕ್ರಿ.ಶ. 9 ನೆಯ ಶತಮಾನ)

ರಾಜಾನಕರತ್ನಾಕರನು ಈ ಮಹಾಕಾವ್ಯವನ್ನು ರಚಿಸಿದ್ದಾನೆ. ಈ ಕವಿಗೆ ವಾಗೀಶ್ವರ, ವಿದ್ಯಾಧಿಪತಿಯೆಂದು ಎರಡು ಬಿರುದುಗಳಿದ್ದವು. ತಂದೆ ಅಮೃತಭಾನು. ತಾನು ಬಾಲಬೃಹಸ್ಪತಿಯ ಅನುಜೀವಿಯೆಂದು ರತ್ನಾಕರನು ಹೇಳಿಕೊಂಡಿದ್ದಾನೆ. ಕ್ರಿ.ಶ. 9ರ ಆದಿಭಾಗದಲ್ಲಿ ಬೃಹಸ್ಪತಿಯೆಂಬ ನಾಮಾಂತರವಿದ್ದ ಚಿಪ್ಪಟಜಯಾಪೀಡನು ಕಾಶ್ಮೀರದ ರಾಜನಾಗಿದನೆಂದು ಕಲ್ಹಣನು ರಾಜತರಂಗಿಣಿಯಲ್ಲಿ ಹೇಳಿದ್ದಾನೆ. ಆದರೆ ಕಲ್ಹಣನು—

ಮುಕ್ತಾಕಣಃ ಶಿವಸ್ವಾಮೀ ಕವಿರಾನಂದವರ್ಧನಃ ।
ಪ್ರಥಾಂ ರತ್ನಾಕರಶ್ಚಾಗಾತ್ ಸಾಮ್ರಾಜ್ಯೇಽವಂತಿವರ್ಮಣಃ ॥

(ರಾಜ. 5—39)

ಎಂದು ಹೇಳಿದ್ದಾನೆ. ಅವಂತಿವರ್ಮನು ಕ್ರಿ. ಶ. 855-884 ರಲ್ಲಿ ಕಾಶ್ಮೀರವನ್ನಾಳಿದನೆಂದು ಇತಿಹಾಸ ಪ್ರಸಿದ್ಧವಾಗಿದೆ. ಇದೆ ರತ್ನಾಕರನ ಕಾಲವಾಗಿರಬೇಕು. ಈತನು ಆನಂದವರ್ಧನನ ಸಮಕಾಲಿಕ ; ಕಾಶ್ಮೀರದೇಶದವನು.

ಹರನು ಅಂಧಕಾಸುರನನ್ನು ಸಂಹರಿಸಿದನೆಂಬ ಕಥಾವಸ್ತುವನ್ನು ರತ್ನಾಕರನು ಅತಿವಿಸ್ತಾರವಾಗಿ ವರ್ಣಿಸಿದ್ದಾನೆ. ಹರವಿಜಯದಲ್ಲಿ 50 ಸರ್ಗಗಳಿದ್ದು 4321 ಶ್ಲೋಕಗಳಿವೆ ! ಮಹಾಕಾವ್ಯದ ಲಕ್ಷಣಗಳೆಲ್ಲವನ್ನೂ ಇದರಲ್ಲಿ ತರಲು ಕವಿ ಯತ್ನಿಸಿದ್ದಾನೆ. ರಾಜಾನಕ ಅಲಕನು

ವಿಷಮಪದೋದ್ಯೋತವೆಂಬ ಟೀಕೆಯನ್ನು ಇದಕ್ಕೆ ಬರೆದಿದ್ದಾನೆ. ಕಡೆಯನಾಲ್ಕು ಸರ್ಗಗಳ ಟೀಕೆ ಸಿಕ್ಕಿಲ್ಲ. ಅಲಕನು ಮಮ್ಮಟನ ಕಾವ್ಯಪ್ರಕಾಶದ ಪರಿಕರಾಲಂಕಾರದಿಂದ ಮುಂದಿನ ಭಾಗವನ್ನು ಬರೆದು ಪೂರ್ತಿಮಾಡಿದನೆಂದು ತಿಳಿದು ಬರುತ್ತದೆ.

ಹರವಿಜಯಕಾವ್ಯದ ಒಂದು ದೋಷವೆನ್ನುವುದಾದರೆ ಅದರ ಅತಿವಿಸ್ತಾರ. ಪ್ರೌಢಶೈಲಿಯಲ್ಲಿ ಇಷ್ಟು ದೀರ್ಘವಾಗಿರುವ ಕಾವ್ಯವನ್ನು ತಾಳ್ಮೆಯಿಂದ ಓದತಕ್ಕ ಸಹೃದಯರು ವಿರಳ. ಕವಿ ತನ್ನ ಕಾವ್ಯವನ್ನು ಸಮಾಪ್ತಿಯಲ್ಲಿ ಹೀಗೆ ಪ್ರಶಂಸೆ ಮಾಡಿಕೊಂಡಿದ್ದಾನೆ—

ಹರವಿಜಯಮಹಾಕವೇಃ ಪ್ರತಿಜ್ಞಾಂ
ಶೃಣುತ ಕೃತಪ್ರಣಯೋ ಮಮ ಪ್ರಬಂಧೇ ।
ಅಪಿ ಶಿಶುರಕವಿಃ ಕವಿಃ ಪ್ರಭಾವಾತ್
ಭವತಿ ಕವಿಶ್ಚ ಮಹಾಕವಿಃ ಕ್ರಮೇಣ ॥

ಹರವಿಜಯದಲ್ಲಿ ವಸಂತತಿಲಕವೃತ್ತಗಳು ಅಧಿಕ. ಸುಂದರವಾದ ವರ್ಣನೆಗಳಿಗೆ ಕೊರತೆಯೇನೂ ಇಲ್ಲ. ಯಮಕ, ಅನುಪ್ರಾಸ. ವಿವಿಧಚಿತ್ರಬಂಧಗಳ ವಿಜೃಂಭಣೆ ಅದ್ಭುತವಾಗಿದೆ. ಶಬ್ದಾಡಂಬರಗಳ ಪ್ರೌಢಿಯಲ್ಲಿ ಇದನ್ನು ಮೀರಿಸುವ ಇನ್ನೊಂದು ಕಾವ್ಯ ಸಂಸ್ಕೃತದಲ್ಲಿ ಉಪಲಬ್ಧವಿಲ್ಲ.

ರತ್ನಾಕರನು ವಕ್ರೋಕ್ತಿಪಂಚಾಶಿಕಾ, ಧ್ವನಿಗಾಥಾಪಂಜಿಕಾ—ಎಂಬ ಇನ್ನೆರಡು ಗ್ರಂಥಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ.

ಕವಿಪ್ರಶಂಸೆ :—

1. ಮಾ ಸ್ಮ ಸಂತು ಹಿ ಚತ್ವಾರಃ ಪ್ರಾಯೋ ರತ್ನಾಕರಾ ಇಮೇ ।
ಇತೀವ ಸ ಕೃತೋ ಧಾತ್ರಾ ಕವಿರತ್ನಾಕರೋಽಪರಃ ॥
—ರಾಜಶೇಖರ.

2. ರತ್ನಾಕರಸುಕವಿಗಿರಾಂ ಮೇರುಲಕ್ಷಂ ಸ್ವಮೂಲ್ಯಂ ।
—ಸದಾಶಿವ ಶಂಕರಶಾಸ್ತ್ರಿ ದ್ರವಿಡ.

ಮಾಘನನ್ನು ಸ್ಪರ್ಧಿಸಲು ರತ್ನಾಕರನು ಹರವಿಜಯವನ್ನು ಬರೆದನೆಂದು ಈ ಸುಭಾಷಿತದಿಂದ ಸೂಚಿತವಾಗುತ್ತದೆ—

ಮಾಘಃ ಶಿಶುಪಾಲವಧಂ
ವಿದಧತ್ ಕವಿಮದವಧಂ ವಿದಧೇ ।
ರತ್ನಾಕರಃ ಸ್ವವಿಜಯಂ
ಹರವಿಜಯಂ ವರ್ಣಯನ್ ವ್ಯವೃಣೋತ್ ॥



## ಕಪ್ಪಿಣಾಭ್ಯುದಯ (ಕ್ರಿ. ಶ. 9ನೆಯ ಶತಮಾನ)

20 ಸರ್ಗಗಳಿರುವ ಈ ಕಾವ್ಯವನ್ನು ಕಾಶ್ಮೀರದ ಶಿವಸ್ವಾಮಿ ಬರೆದಿದ್ದಾನೆ. ಇವನು ಭಟ್ಟ ಅರ್ಕಸ್ವಾಮಿಯ ಮಗ. ಕವಿಯು ರತ್ನಾಕರ, ಆನಂದವರ್ಧನಾದಿಗಳ ಸಮಕಾಲಿಕನೆಂದೂ ಅವಂತಿವರ್ಮನ (ಕ್ರಿ. ಶ. 855–883) ಆಸ್ಥಾನ ಕವಿಯೆಂದೂ ಕಲ್ಹಣನ ರಾಜತರಂಗಿಣಿಯ ಈ ಪದ್ಯದಿಂದ ತಿಳಿದು ಬರುತ್ತದೆ—

ಮುಕ್ತಾಕಣಃ ಶಿವಸ್ವಾಮೀ ಕವಿರಾನಂದವರ್ಧನಃ ।
ಪ್ರಥಾಂ ರತ್ನಾಕರಶ್ಚಾಗಾತ್ ಸಾಮ್ರಾಜ್ಯೇಽವಂತಿವರ್ಮಣಃ ॥
5–34,

ಚಂದ್ರಮಿತ್ರನೆಂಬ ಬೌದ್ಧಭಿಕ್ಷುವಿನ ಕೋರಿಕೆಯಂತೆ ಈ ಕಾವ್ಯವನ್ನು ರಚಿಸಿರುವುದಾಗಿ ಶಿವಸ್ವಾಮಿ ಹೇಳಿಕೊಂಡಿದ್ದಾನೆ. ಬೌದ್ಧರ ಅವದಾನಶತಕದಲ್ಲಿ ಕಪ್ಫಿಣಾಭ್ಯುದಯದ ಕಥಾವಸ್ತು ದೊರೆಯುತ್ತದೆ. ಕಥಾಸಂಕ್ಷೇಪ ಹೀಗಿದೆ; "ನರ್ಮದಾನದೀತೀರದಲ್ಲಿದ್ದ ಲೀಲಾವತೀ ನಗರದ ರಾಜ ಕಪ್ಫಿಣ, ಕೋಸಲದ ಶ್ರಾವಸ್ತಿಯಲ್ಲಿ ರಾಜನಾಗಿದ್ದ ಪ್ರಸೇನಜಿತು ತನ್ನ ವೈರಿಯೆಂದು ಕಪ್ಫಿಣನು ಗೂಢಚಾರನ ಮೂಲಕ ತಿಳಿದು ಅವನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಪ್ರಸೇನಜಿತು ಪರಾಜಿತನಾಗಿ ಬುದ್ಧನನ್ನು ಸ್ಮರಿಸುತ್ತಾನೆ. ಬುದ್ಧನ ಮಹಿಮೆಯಿಂದ ದಿಗ್ಭ್ರಾಂತನಾದ ಕಪ್ಫಿಣನು ಬುದ್ಧನಿಗೆ ಶರಣಾಗುತ್ತಾನೆ. ಬುದ್ಧನು ಅವನಿಗೆ ಧರ್ಮೋಪದೇಶವನ್ನು ಮಾಡುತ್ತಾನೆ''.

ಮಹಾಕಾವ್ಯದ ಲಕ್ಷಣಗಳನ್ನು ತರುವುದಕ್ಕಾಗಿ ಕವಿ ಋತುವರ್ಣನೆ ಮುಂತಾದುವನ್ನು ಸೇರಿಸಿದ್ದಾನೆ. ಕಾವ್ಯದ ಸ್ವರೂಪ ಕವಿಯ ಈ ಸಮಾಪ್ತಿಪದ್ಯದಿಂದಲೇ ಗೊತ್ತಾಗುತ್ತದೆ—

ವಿದಿತಬಹುಕಥಾರ್ಥಶ್ಚಿತ್ರಕಾವ್ಯೋಪದೇಷ್ಟಾ
ಯಮಕಕವಿರಗಮ್ಯಶ್ಚಾರುಸಂದಾಭಾಣೇ ।
ಅನುಕೃತರಘುಕಾರೋಽಭ್ಯಸ್ತಮೇಂಠಪ್ರಚಾರೋ
ಜಯತಿ ಕವಿರುದಾರೋ ದಂಡಿದಂಡಃ ಶಿವಾಂಕಃ ॥

ಪ್ರತಿಯೊಂದು ಸರ್ಗದ ಕಡೆಯ ಪದ್ಯದಲ್ಲಿ 'ಶಿವ' ಶಬ್ದವನ್ನು ಜೋಡಿಸಿರುವುದರಿಂದ ಇವನು ಶೈವನಾಗಿರಬಹುದು. 'ಅನುಸೃತ ರಘುಕಾರಃ' ಎಂದು ಹೇಳಿಕೊಂಡಿದ್ದರೂ ಕವಿಯ ಶೈಲಿ ಗೌಡೀರೀತಿಯದು. ಹರವಿಜಯ ಮತ್ತು ಶಿಶುಪಾಲವಧಗಳ ಪ್ರಭಾವವನ್ನು ಈ ಕಾವ್ಯದಲ್ಲಿ ಕಾಣಬಹುದು, 6 ಮತ್ತು 18ನೆಯ ಸರ್ಗಗಳಲ್ಲಿ ಶಬ್ದಚಿತ್ರವಿಶೇಷಗಳುಂಟು.

ಚಂಡಪಟ್ಟಿಶಕುಂತಾಸಿಫಲತ್ತೋಮರಭಾಸುರೇ ।
ತುರಂಗಕುಂಜರಾವಿದ್ಧೇ ಸಂಬದ್ಧೋಭೀಮಸಂಗರೇ ।  18–128

ಎಂಬ ಪದ್ಯದಲ್ಲಿ 'ಭಾಷಾಷಟ್ಕಸಮಾವೇಶ' ವಿದೆಯಂತೆ. 19ನೆಯ ಸರ್ಗವೆಲ್ಲವೂ ಸಂಸ್ಕೃತ ಪ್ರಾಕೃತ ಶಬ್ದಸಮಾವೇಶವುಳ್ಳದ್ದು.

ಮಮ್ಮಟನು (ಕ್ರಿ. ಶ. ಸು, 1100) ಕಾವ್ಯಪ್ರಕಾಶದಲ್ಲಿ ಕೆಳಗಿನ ನಾಲ್ಕು ಪದ್ಯಗಳನ್ನು, ಕಾವ್ಯದ ಹೆಸರನ್ನು ಹೇಳದೆ, ಕಪ್ಫಿಣಾಭ್ಯುದಯದಿಂದ ಉದ್ಧರಿಸಿದ್ದಾನೆ.

1. ಉಲ್ಲಾಸ್ಯಕಾಲ ಕರವಾಲಮಹಾಂಬುವಾಹಂ (1–24)
2. ದರ್ಪಾಂಧಗಂಧಗಜಕುಂಭಕವಾಟಕೂಟ (1–37)
3. ಭದ್ರಾತ್ಮನೋದುರಧಿರೋಹತನೋರ್ವಿಶಾಲ (1–38)
4. ಆತ್ಯಾಯತೈರ್ನಿಯಮಕಾರಿಭಿರುದ್ಧತಾನಂ (1–39)

ಇವುಗಳಲ್ಲಿ ಮೊದಲನೆಯ ಮೂರು ಪದ್ಯಗಳು ಧ್ವನಿ ಪ್ರಪಂಚಕ್ಕೂ ನಾಲ್ಕನೆಯದು ಉಪಮಾಲಂಕಾರಕ್ಕೂ ಉದಾಹರಣೆಗಳು. ಕಾವ್ಯದ ಗಭೀರತೆಗೂ ಸೌಂದರ್ಯಕ್ಕೂ ಇದು ನಿದರ್ಶನ.

ಕವೀಂದ್ರ ವಚನಸಮುಚ್ಚಯದಲ್ಲಿ ಉದ್ಧೃತವಾದ 'ವಾಕ್ಯಾನಿ ದ್ವಿಪದೀಯುತಾನ್ಯಥ ......
....................................................................................
....................................................................................

ವಿಶ್ರಾಮ್ಯತ್ಯಧುನಾಪಿ ನಾತಿಶಯಿತಾ ವಾಣೀ ಶಿವಸ್ವಾಮಿನಃ' ಎಂಬ ಶ್ಲೋಕದಿಂದ, ಶಿವಸ್ವಾಮಿ ಇನ್ನೂ **ಕೆಲವು** ಮಹಾಕಾವ್ಯಗಳನ್ನೂ ಸ್ತೋತ್ರಗಳನ್ನೂ ನಾಟಕಗಳನ್ನೂ ರಚಿಸಿದ್ದಾನೆಂದು ತಿಳಿದುಬರುತ್ತದೆ.

## ರಾಮಚರಿತ (ಕಿ. ಶ. 9ನೆಯ ಶತಮಾನ)

ಅಭಿನಂದನೆಂಬ ಮಹಾಕವಿ ಈ ಕಾವ್ಯವನ್ನು ರಚಿದ್ದಾನೆ. ಈತನು ಕವಿಗೋಷ್ಠಿಯಲ್ಲಿ ಕಾಳಿದಾಸನಂತೆ ಪ್ರಸಿದ್ಧ. ಕವೀಂದ್ರವಚನಸಮುಚ್ಚಯ (ಕಿ. ಶ. 11ನೆಯ ಶತಮಾನ), ಶ್ರೀಧರದಾಸನ ಸದುಕ್ತಿಕರ್ಣಾಮೃತ (13 ನೆಯ ಶತಕ), ಜಲ್ಹಣನ ಸೂಕ್ತಿಮುಕ್ತಾವಲಿ (13 ನೆಯ ಶತಕ) ಗಳಲ್ಲಿ ರಾಮಚರಿತಕಾವ್ಯದ ಶ್ಲೋಕಗಳು ಅಭಿನಂದನ ಹೆಸರಿನಲ್ಲಿ ಉದ್ಧೃತವಾಗಿವೆ. ಭೋಜದೇವನ (11 ನೆಯ ಶತಕ) ಶೃಂಗಾರ ಪ್ರಕಾಶ, ಸರಸ್ವತೀಕಂಠಾಭರಣಗಳಲ್ಲಿಯೂ ರಾಮಚರಿತದ ಉಲ್ಲೇಖವಿದೆ. ಮಹಿಮಭಟ್ಟ, ಮಮ್ಮಟ, ಕ್ಷೇಮೇಂದ್ರ, ಉಣಾದಿಸೂತ್ರವೃತ್ತಿಯನ್ನು ಬರೆದ ಉಜ್ವಲದತ್ತ, ಅಮರಕೋಶವ್ಯಾಖ್ಯಾನವನ್ನು ಬರೆದ



ಶರ್ವಾನಂದ ಮತ್ತು ರಾಮಮುಕುಟ—ಇವರೆಲ್ಲರೂ ಅಭಿನಂದನ ರಾಮಚರಿತ ಶ್ಲೋಕಗಳನ್ನು ಉಲ್ಲೇಖಿಸಿದ್ದಾರೆ. ಸೊಡ್ಡಲನು (11ನೆಯ ಶತಕ) ಉದಯಸುಂದರೀಕಥೆಯೆಂಬ ಚಂಪೂ ಪ್ರಬಂಧದಲ್ಲಿ—

ವಾಗೀಶ್ವರಂ ಹಂತ ಭಜೇಽಭಿನಂದಮರ್ಥೇಶ್ವರಂ ವಾಕ್ಪತಿರಾಜಮೀಡೇ ।
ರಸೇಶ್ವರಂ ನೌಮಿ ಚ ಕಾಲಿದಾಸಂ ಬಾಣಂ ತಂ ಸರ್ವೇಶ್ವರಮಾನತೋಽಸ್ಮಿ ॥

ಎಂದು ಅಭಿನಂದನನ್ನು ಪ್ರಶಂಸೆಮಾಡಿದ್ದಾನೆ. ಸೂಕ್ತಿಮುಕ್ತಾವಳಿಯಲ್ಲಿ—

ಕವಿರಮರಃ ಕವಿರಚಲಃ ಕವಿರಭಿನಂದಶ್ಚ ಕಾಲಿದಾಸಶ್ಚ ।
ಅನ್ಯೇ ಕವಯಃ ಕಪಯಶ್ಚಾಪಲಮಾತ್ರಂ ಪರಂ ದಧತಿ ॥

ಎಂದು ಈ ಕವಿಯ ಪ್ರಶಂಸೆ ದೊರೆಯುತ್ತದೆ. ರಾಜಶೇಖರನು (10ನೆಯ ಶತಮಾನ) ಕಾವ್ಯಮೀಮಾಂಸೆಯಲ್ಲಿ

ಮಂದ್ಯಃಸ ವಿದ್ವಾನಭಿನಂದನಾಮಾ ಮಿಸ್ರಂಭಪಾತ್ರಂ ವಚಸೋಽಧಿದೇವ್ಯಾಃ ಎಂದು ಅಭಿನಂದನನ್ನು **ಹೊಗಳಿದ್ದಾನೆ**. ಶಾರ್ಙ್ಗಧರ ಪದ್ಧತಿಯಲ್ಲಿ ಉದಾಹರಿಸಿದ ನಾಲ್ಕು ಶ್ಲೋಕಗಳು ರಾಮಚರಿತ ಕಾವ್ಯದಲ್ಲಿ ದೊರೆಯುವುದಿಲ್ಲ. ಆದ್ದರಿಂದ ಅಭಿನಂದನು ಬೇರೊಂದು ಕೃತಿಯನ್ನೂ ರಚಿಸಿದ್ದಾನೆಂದು ಊಹಿಸಲು ಅವಕಾಶವಿದೆ.

ಅಭಿನಂದನು ತನ್ನ ರಾಮಚರಿತಕಾವ್ಯದಲ್ಲಿ ಶ್ರೀಪಾಲಿತ, ಕಾಳಿದಾಸ, ಬಾಣಕವಿಗಳನ್ನು ಸ್ಮರಿಸಿದ್ದಾನೆ. ತನ್ನ ಆಶ್ರಯದಾತನು ಶ್ರೀಹಾರವರ್ಷಭೂಪಾಲನೆಂದು ಹೇಳಿ, ಅವನನ್ನು ಪಾಲವಂಶ ಪ್ರದೀಪನೆಂದೂ ಯುವರಾಜನೆಂದೂ ಶ್ರೀವಿಕ್ರಮಶೀಲಜನ್ಮನೆಂದೂ ಕರೆದಿದ್ದಾನೆ. ಬಂಗಾಳವನ್ನಾಳಿದ ಪಾಲವಂಶದ ರಾಜರಲ್ಲಿ ಧರ್ಮಪಾಲನಿಗೆ ವಿಕ್ರಮಶೀಲನೆಂಬ ಬಿರುದು ಇದ್ದಂತೆ ತಿಳಿದು ಬಂದಿದೆ. ಆತನ ಮಗ ದೇವಪಾಲನು ಶೂರನೆಂದೂ ವಿದ್ವಾಂಸರಿಗೆ ಆಶ್ರಯವನ್ನು ನೀಡಿದ್ದನೆಂದೂ ಗೊತ್ತಾಗಿದೆ. ಆದ್ದರಿಂದ ದೇವಪಾಲನೇ ಶ್ರೀಹಾರವರ್ಷನೆಂದು ಇತಿಹಾಸಜ್ಞರ ನಿರ್ಣಯವಿದೆ. ಈತನ ಕಾಲ ಕ್ರಿ. ಶ. 9ನೆಯ ಶತಕ. ಕವಿಯ ಕಾಲವೂ ಇದೇ ಎಂದು ಹೇಳಬಹುದು.

### ಕಾವ್ಯಪರಿಚಯ

ರಾಮಚರಿತದಲ್ಲಿ 40 ಸರ್ಗಗಳಿವೆ ಕಡೆಯ ನಾಲ್ಕು ಸರ್ಗಗಳಿಗೆ (37–40)ವಿಭಿನ್ನವಾದ ಎರಡು ಬಗೆಯ ಪಾಠಗಳು ದೊರೆಯುತ್ತವೆ. ಒಂದು ಪಾಠದಲ್ಲಿ 'ಶ್ರೀಮದಭಿನಂದಕಾವ್ಯೇ ಮಹಂ ಶ್ರೀಭೀಮಕೃತೌ' ಎಂದು ಸಮಾಪ್ತಿ ವಾಕ್ಯವಿದೆ. ಈ ನಾಲ್ಕು ಸರ್ಗಗಳಲ್ಲಿಯೂ ಕವಿಯು ತನ್ನ ಹೆಸರನ್ನು ಭೀಮಕವಿಯೆಂದು ಹೇಳಿಕೊಂಡಿದ್ದಾನೆ. ಇನ್ನೊಂದು ಅಪೂರ್ಣವಾಗಿದೆ. ಎರಡು ಪಾಠಗಳು ದೊರೆಯುವುದರಿಂದಲೂ ಇವರಡೂ ಪೂರ್ವತನ ಸರ್ಗಗಳಿಗಿಂತ ಶೈಲಿಯಲ್ಲಿ ಭಿನ್ನವಾಗಿರುವುದರಿಂದಲೂ ಅಭಿನಂದನು ಇವನ್ನು ಬರೆದಿಲ್ಲವೆಂದೂ ಮೊದಲನೆಯ

36 ಸರ್ಗಗಳು ಮಾತ್ರ ಅಭಿನಂದನ ಕೃತಿಯೆಂದೂ ಹೇಳಬಹುದು. ಕುಂಭನಿಕುಂಭರ ವಧೆಯನ್ನು 36ನೆಯ ಸರ್ಗದಲ್ಲಿ ವರ್ಣಿಸಿದೆ. ಈ ಕಾವ್ಯಕ್ಕೆ ವ್ಯಾಖ್ಯಾನ ದೊರಕಿಲ್ಲ.

ವಾಲ್ಮೀಕಿರಾಮಾಯಣದ ಕಥೆ ಕಾವ್ಯದ ವಸ್ತು. ವಿಶೇಷವೇನೆಂದರೆ, ಕಿಷ್ಕಿಂಧಾಕಾಂಡದ ಮಧ್ಯಭಾಗದಿಂದ ಕಾವ್ಯದ ಆರಂಭವಾಗುತ್ತದೆ.

ಅಥ ಮಾಲ್ಯವತಃ ಪ್ರಸ್ಥೇ ಕಾಕುತ್ಸ್ಥಸ್ಯ ವಿಯೋಗಿನಃ ।
ದುರ್ನಿವಾರಾಶ್ರುಸಂವೇಗೋ ಜಗಾಮ ಜಲದಾಗಮಃ ॥

ಎಂದು ಪ್ರಧಾನಕಥೆಯನ್ನು ನಾಟಕೀಯವಾಗಿ ಆರಂಭಿಸಿರುವುದು ಸಂಸ್ಕೃತಕಾವ್ಯಪರಂಪರೆಯಲ್ಲಿ ಒಂದು ಅಪೂರ್ವಪ್ರಯೋಗ. ಎರಡನೆಯ ಶ್ಲೋಕದಲ್ಲಿಯೇ

ಶಶಾಮ ವೃಷ್ಟಿರ್ಮೇಘಾನಾಮುತ್ಸಂಗೇ ತಸ್ಯ ಭೂಭೃತಃ ।
ವಿರರಾಮ ನ ರಾಮಸ್ಯ ಧಾರಾಸಂತತಿರಶ್ರುಣಃ ॥

'ಮಳೆ ನಿಂತರೂ ಶ್ರೀರಾಮನ ಕಣ್ಣೀರಿನ ಮಳೆ ನಿಲ್ಲಲಿಲ್ಲ' ಎಂದಿರುವುದು ಕವಿಯ ರಸೈಕ ದೃಷ್ಟಿಗೆ ಪ್ರಥಮನಿದರ್ಶನ.

ವಾಲ್ಮೀಕಿರಾಮಾಯಣವು ಮೂಲಸ್ರೋತವಾದರೂ ಕವಿಯು ಅಲ್ಲಲ್ಲಿ ಕಥಾವಸ್ತುವನ್ನು ಪರಿವರ್ತಿಸಿದ್ದಾನೆ. ಮುಖ್ಯವಾದ ಪರಿವರ್ತನೆ ಅಥವಾ ನೂತನ ವಿಷಯಗಳು ಇವು—

1. ಮಳೆಗಾಲ ಕಳೆದಮೇಲೆ ಸುಗ್ರೀವನನ್ನು ಎಚ್ಚರಿಸಲು ಲಕ್ಷ್ಮಣನು ಕಿಷ್ಕಿಂಧೆಗೆ ಹೋಗುವುದಿಲ್ಲ, ಸುಗ್ರೀವನು ತಾನಾಗಿಯೇ ಬರುತ್ತಾನೆ.

2. ಶ್ರೀರಾಮನು ಮುದ್ರೆಯುಂಗುರದೊಡನೆ ಸೀತೆಯ ನೂಪುರವನ್ನೂ ಸ್ತನೋತ್ತರೀಯವನ್ನೂ ಅಭಿಜ್ಞಾನವಾಗಿ ಹನುಮಂತನೊಡನೆ ಕಳಿಸಿ, ತನ್ನ ವಂಶಜರ ಪೂರ್ವವೃತ್ತವನ್ನು ತಿಳಿಸುತ್ತಾನೆ.

3. ಮಂಡೋದರಿಯು ರಾವಣನಿಗೆ ಬುದ್ಧಿವಾದ ಹೇಳುತ್ತಾಳೆ.

4. ವಿಭೀಷಣನು ತನ್ನ ಸೋದರನಾದ ಕುಬೇರನೊಟನೆ ಸಮಾಲೋಚಿಸಿ ಶ್ರೀರಾಮನ ಪಕ್ಷವನ್ನು ಸೇರುತ್ತಾನೆ.

**ಕಾವ್ಯಶೈಲಿ :**

ಅಭಿನಂದನು ಗೌಡದೇಶದವನಾದರೂ ಅವನ ಕಾವ್ಯದಲ್ಲಿ ವೈದರ್ಭೀರೀತಿಯೇ ಪ್ರಧಾನವಾಗಿದೆ. ಸರಳವೂ ಶ್ರುತಿಮನೋಹರವೂ ಮಾಧುರ್ಯಾದಿ ಗುಣಪೂರ್ಣವೂ ಆದ ಶೈಲಿಯನ್ನು ಕವಿಯು ಅನುಸರಿಸಿದ್ದಾನೆ. ವಿಸ್ತೃತವಾದ ಈ ಕಾವ್ಯದಲ್ಲಿ ಶ್ಲೇಷೋದಾಹರಣೆಯೇ ವಿರಳ : ಇಲ್ಲವೆಂದರೂ ಸಲ್ಲುವುದು. ಶಬ್ದಚಮತ್ಕಾರದ ಕಡೆಗೆ ಕವಿಗೆ ಒಲವಿಲ್ಲ. ರಸಭಾವಗಳ ಪೋಷಣೆಯಲ್ಲಿಯೇ ಅವನ ಪೂರ್ಣಗಮನ ಹರಿದಿದೆ. ವರ್ಣನೆ ಹೃದಯಂಗಮವಾಗಿದೆ. ಉಕ್ತಿಪ್ರತ್ಯುಕ್ತಿಗಳಿಂದ ದೀರ್ಘಸಂಭಾಷಣೆಗೆ ಸೊಗಸನ್ನು ತರುವುದರಲ್ಲಿ ಕವಿಯು ನಿಪುಣ, ಸಂಭಾಷಣೆಯ ಶೈಲಿ ಅರ್ಥಪುಷ್ಟವಾದರೂ ಸರಳವಾಗಿದೆ. ಅಂಜನೇಯ ರಾವಣ



ಸಂವಾದ, ಅಂಗದದೌತ್ಯ, ಮಂಡೋದರಿಯ ಬುದ್ಧಿವಾದ, ನಾಗಪಾಶದಿಂದ ರಾಮಲಕ್ಷ್ಮಣರನ್ನು ಬಂಧಿಸಿದ ಮೇಘನಾದನ ವೀರಾಲಾಪಗಳಲ್ಲಿ ಕವಿಯ ವಾಗ್ಮಿತೆಯನ್ನು ಕಾಣಬಹುದು.

ಅಭಿನಂದನು ದ್ರುತವಿಲಂಬಿತ, ರುಚಿರಾ, ಮಂಜುಭಾಷಿಣಿ, ಹರಿಣೀ, ಪ್ರಮಿತಾಕ್ಷರಾ, ತಾಮರಸ, ದೋಧಕ, ಅಪರವಕ್ತ್ರ—ಮುಂತಾದ ವೃತ್ತಗಳನ್ನು ಬಳಸಿದ್ದಾನೆ. 14ನೆಯ ಸರ್ಗ ವೃತ್ತ ಭದ್ರವಿರಾಟ್, ಇದೊಂದು ಅಪೂರ್ವಪ್ರಯೋಗ, ಉದಾಹರಣೆಗೆ—

ವೇಗೋಽಯಮನಾದಿಮೋಹಜನ್ಮಾ ತತ್ತ್ವಜ್ಞೈರಪಿ ಜೀಯತೇ ನ ವತ್ಸಾಃ ।
ಗಚ್ಛನ್ ಪುನರೇವಮೇವ ಕಾಲ ಶೋಕೋರ್ಮೀನುದಿತಾನ್ ಮೃದೂಕರೋತಿ ॥
14—35

ಜಟಾಯುವಿನ ಮರಣ ವಾರ್ತೆಯನ್ನು ಕೇಳಿ ದುಃಖಿಸಿದ ಸಂಪಾತಿ ಚೇತರಿಸಿಕೊಂಡು ವಾನರರಿಗೆ ಮೇಲ್ಕಂಡ ಮಾತನ್ನು ಹೇಳುತ್ತಾನೆ : "ಮಕ್ಕಳೆ, ಅನಾದಿಮೋಹದಿಂದ ಹೀಗೆ ದುಃಖವೇಗ ಹುಟ್ಟುತ್ತದೆ. ತತ್ತ್ವಜ್ಞರಿಗೂ ಇದನ್ನು ಗೆಲ್ಲುವುದು ಸಾಧ್ಯವಾಗದು. ಹೀಗೆಯೇ ದಿನಗಳು ಕಳೆದಮೇಲೆ ಕಾಲವೇ ಶೋಕದ ಅಲೆಗಳ ರಭಸವನ್ನು ಮೆದುಮಾಡುತ್ತದೆ."

1. ಸೀತಾವಿಯೋಗದಿಂದ ಶೋಕಾಕುಲನಾದ ಶ್ರೀರಾಮನ ಕಪೋಲದಮೇಲೆ ಕಣ್ಣೀರು ಹರಿಯುತ್ತಿದೆ. ಅಣ್ಣನ ದುರವಸ್ಥೆಯನ್ನು ಕಂಡು ಲಕ್ಷ್ಮಣನ ಕಣ್ಣುಗಳಿಂದ ಬಾಷ್ಪ ಸುರಿಯುತ್ತಿದೆ. ಶ್ರೀರಾಮನು ತಲೆ ಎತ್ತಿ ತಮ್ಮನನ್ನು ನೋಡಿದಾಗ, ಕನ್ನಡಿ ಇಲ್ಲದೆ ತನ್ನ ಪ್ರತಿಬಿಂಬವನ್ನು ನೋಡಿದಂತಾಯಿತು—

ಇತೀರಿತಾಂತರ್ಗತಮನುಮಶ್ರುಣಃ
ಸೃಜಂತಮಚ್ಛಿನ್ನರಯಾಸ್ತರಂಗಿಣೀಃ ।
ದದರ್ಶ ರಾಮೋಽನುಜಸಂಜ್ಞಮಂತಿಕಾತ್
ಅದರ್ಪಣಸ್ಥಂ ಪ್ರತಿಬಿಂಬಮಾತ್ಮನಃ ॥ 4—68

2. ಹನುಮಂತನು ಸೀತೆಗೆ ಶ್ರೀರಾಮನ ವಿರಹಾವಸ್ಥೆಯನ್ನು ಹೇಳುತ್ತಿದ್ದಾನೆ—

ನಲಿನೀಷ್ವನಿದ್ರನಲಿನಾಸು ನಿಃಶ್ವಸಿ—
ತ್ಯಲಿನೀಷು ಮಂಜುಮಣಿತಾಸು ಮುಹ್ಯತಿ ।
ರಜನೀಷು ಚಂದ್ರಧವಲಾಸು ಧಾವತಿ
ಸ್ಫುಟಮತ್ರ ತತ್ರಭವತೀಂ ವಿಲೋಕಯನ್ ॥
20—48

'ಅರಳಿದ ತಾವರೆಬಳ್ಳಿಯನ್ನು ನೋಡಿದಾಗ ನಿಟ್ಟುಸಿರುಬಿಡುವನು. ದುಂಬಿಗಳ ಗುಂಜಾರವನ್ನು ಕೇಳಿದಾಗ ಮೂರ್ಛೆಗೊಳ್ಳುವನು, ರಾತ್ರಿ ಬೆಳದಿಂಗಳು ಹರಡಿದಾಗ ನಿನ್ನನ್ನೇ ಕಂಡಂತಾಗಿ ಓಡುವನು.' ಇಲ್ಲಿ ಅಭಿವ್ಯಕ್ತವಾಗುವ ಧ್ವನಿಪರಂಪರೆ ಸಹೃದಯಸಂವೇದ್ಯ

3. ರಾಕ್ಷಸರಿಂದ ತುಂಬಿದ ರಾವಣಸಭೆ ಇದು—

ಸಜ್ವಾಲಮಿವ ಕೈಶ್ಯಾಭಿಃ ಸವ್ಯಾಲಮಿವ ಬಾಹುಭಿಃ !
ಸಜ್ಯೋತ್ಸ್ನಮಿವ ದಂಷ್ಟ್ರಾಭಿಃ ಸವಿದ್ಯುದಿವ ದೃಷ್ಟಿಭಿಃ ॥ ( 21 – 12)
( ಕೈಶ್ಯಾ ≐ ( ರಾಕ್ಷಸರ ) ಕೇಶರಾಶಿ )

4. ಎರಡು ರತ್ನಪೀಠಗಳ ಮೇಲೆ ಕಾಲೂರಿದ್ದ ರಾವಣನು ಶೀಲಶಮಗಳನ್ನು ತುಳಿದು ಕುಳಿತಿದ ಂತೆ ಕಾಣಿಸಿತು.

ದತ್ತಾಂಘ್ರೀ ಶ್ರೀಲಶಮಯೋರಿವೋರ್ಧ್ವಂ ರತ್ನಪೀಠಯೋಃ ॥ (21—60)

5. ಅಶೋಕವನವನ್ನು ಭಂಗಿಸಿದ ಹನುಮಂತನನ್ನು ನೋಡಿ ರಾವಣನಾಡುವ ಕೀವಿಯ ಮಾತುಗಳಿವು—

(1) ಅಲೀನಾಂ ಕೋಕಿಲಾನಾಂ ಚ ತನ್ಮೇ ಸಾಧಾರಣಂ ವನಂ ।
ತತ್ರ ಕಶ್ಚಿನ್ನ ವಿಶತೋ ದೋಷಃ ಶಾಖಾಮೃಗಸ್ಯ ತೇ ॥

(2) ಸ್ತೇನವತ್ ಕಿಂ ಪ್ರವಿಷ್ಟೋಽಸಿ ಧಾರ್ಷ್ಟ್ಯಮಸ್ತಿ ರಣೇಷು ಚೇತ್ ॥
ಚರಂತೀತ್ವಂ ಗೃಹಚ್ಛಿದ್ರಾಣ್ಯಾಖವೋ ನ ವಲೀಮುಖಾಃ ॥

ಗೃಹಚ್ಛಿದ್ರಗಳನ್ನು ಹುಡುಕತಕ್ಕವು ಇಲಿಗಳು, ಕಪಿಗಳಲ್ಲ ।

(3) ಭೂಯಿಷ್ಠಂ ತವ ಜಿಘ್ರಾಮೋ ವಾನರೇ ನರಸಂಗತಿಂ ।
ಕಥಯ ಸ್ಫುಟಮಸ್ಮಾಸು ನಿಹ್ನವೇ ದಂಡಮರ್ಹಸಿ ॥

• ವಾನರನಾದ ನಿನಗೆ ಮನುಷ್ಯರ ಸ್ನೇಹವಾಗಿದೆಯೆಂದು ನಮಗೆ ಚೆನ್ನಾಗಿ ವಾಸನೆ ಬರುತ್ತಿದೆ । '

ಅಶೋಕವನದಲ್ಲಿ ಹನುಮಂತನು ಕಂಡ ಸೀತೆಗೆ 34 ಉಪಮಾನಗಳನ್ನು ಕವಿಯು ಕೊಟ್ಟಿದ್ದಾನೆ. ನಿಜವಾದ ಕಾವ್ಯಪ್ರತಿಭೆಯುಳ್ಳವನು ಅಭಿನಂದ—

ಕಿಂ ಶೀಧುಭಿರ್ಭವತು ಫಾಣಿತಶರ್ಕರಾದ್ಯೈಃ
ಕಿಂ ವಾ ಸಿತಾಸಹಚರೈಃ ಕ್ವಥಿತೈಶ ದುಗ್ಧೈಃ ।
ದುಗ್ಧಾಬ್ಧಿಲಬ್ಧಸುಧಯಾ ಚ ಕಿಮನ್ಯದೇವ
ಯತ್ರಾಭಿನಂದಸುಕವೇರ್ವಿಚರಂತಿ ವಾಚಃ ॥

ಎಂಬ ಆತ್ಮಪ್ರಶಂಸೆಯಲ್ಲಿ ಸತ್ಯವಿದೆ.

## ಧರ್ಮಶರ್ಮಾಭ್ಯುದಯ (ಕ್ರಿ. ಶ. 9—10ನೆಯ ಶತಮಾನ)

ಇದನ್ನು ರಚಿಸಿದ ಹರಿಚಂದ್ರನು ಜೀವಂಧರಚಂಪುವನ್ನು ಬರೆದ ಹರಿಚಂದ್ರನೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ನಿಶ್ಚಿತವಾಗಿಲ್ಲ. ಕವಿಯೇ ತಿಳಿಸಿರುವಂತೆ ಈತನು ಸೋಮಕ ವಂಶದ ಕಾಯಸ್ಥ. ತಂದೆ ಆರ್ದ್ರದೇವ, ತಾಯಿ ರಥ್ಯಾದೇವಿ. ತಮ್ಮ ಲಕ್ಷ್ಮಣ, ತಾನು ಮಹಾಕವಿಯೆಂದೂ, ಈ ಕಾವ್ಯವು 'ಕರ್ಣಪೀಯೂಷರಸಪ್ರವಾಹ 'ವೆಂದೂ ಪಂಡಿತರಿಗೆ 'ಕರ್ಣದ್ವಯೀಭೂಷಣ' ವೆಂದೂ ಹೇಳಿಕೊಂಡಿದ್ದಾನೆ. ಹರಿಚಂದ್ರನು ದಿಗಂಬರ ಜೈನ ಪಂಥಕ್ಕೆ ಸೇರಿದವನು.

ಧರ್ಮಶರ್ಮಾಭ್ಯುದಯದ 'ಅಸಂಭೃತಂ ಮಂಡನಮಂಗಯಷ್ಟೇಃ' (4—59) ಎಂಬ ಶ್ಲೋಕಪಾದವು ಕುಮಾರಸಂಭವದ ಒಂದು ಶ್ಲೋಕಪಾದಕ್ಕೆ (1—31) ಸಮಾನವಾಗಿದೆ. ಹೀಗೆಯೇ, ಈ ಕಾವ್ಯದಲ್ಲಿ ಕಾಳಿದಾಸ, ಭಾರವಿ, ಮಾಘಕಾವ್ಯಗಳ ಮತ್ತು ಭರ್ತೃಹರಿಯ ಶತಕತ್ರಯದ ಶಬ್ದಾರ್ಥಚ್ಛಾಯೆಗಳನ್ನು ಅಲ್ಲಲ್ಲಿ ಕಾಣಬಹುದು. ರಾಜಶೇಖರನು ಕರ್ಪೂರಮಂಜರಿಯಲ್ಲಿ ಒಬ್ಬ ಹರಿಚಂದ್ರಕವಿಯನ್ನು ಪರಾಮರ್ಶಿಸಿದ್ದಾನೆ. ಆದ್ದರಿಂದ ಇವನ ಕಾಲ 9 ಅಥವಾ 10ನೆಯ ಶತಕವಾಗಬಹುದು.

**ಕಾವ್ಯ ಪರಿಚಯ** : ಇದರಲ್ಲಿ ಹದಿನೈದನೆಯ ತೀರ್ಥಂಕರ ಧರ್ಮನಾಥನ ಚರಿತೆಯನ್ನು 21 ಸರ್ಗಗಳಲ್ಲಿ ವರ್ಣಿಸಲಾಗಿದೆ. ರತ್ನಪುರಾಧಿಪತಿಯಾದ ಮಹಾಸೇನನ ಮಡದಿ ಸುವ್ರತೆ. ಆ ದಂಪತಿಗಳಿಗೆ ಸಂತಾನವಿರಲಿಲ್ಲ. ರಾಜನು ಒಬ್ಬ ದಿಗಂಬರ ಜೈನಮುನಿಯನ್ನು ಸಂದರ್ಶಿಸಿ ತನ್ನ ಚರಿತೆಯನ್ನು ಹೇಳಿಕೊಳ್ಳಲು ಆ ಮುನಿ "ತೀರ್ಥಂಕರನಾದ ಧರ್ಮನಾಥನು ನಿನಗೆ ಮಗನಾಗಿ ಜನಿಸುವನು " ಎಂಬ ಭವಿಷ್ಯವನ್ನು ನುಡಿಯುತ್ತಾನೆ. " ವತ್ಸದೇಶದ ಸುಸೀಮಾ ನಗರದಲ್ಲಿ ದಶರಥನೆಂಬ ರಾಜನಿದ್ದನು. ಅವನು ಚಂದ್ರಗ್ರಹಣವನ್ನು ನೋಡಿ ವಿರಕ್ತನಾಗಿ ತಪಶ್ಚರ್ಯೆಯಿಂದ ದಿವ್ಯತೆಯನ್ನು ಪಡೆದನು. ಅವನೇ ಧರ್ಮನಾಥನಾಗಿ ಅವತರಿಸುವನು" ಎಂದು ತಿಳಿಸುತ್ತಾನೆ.

ಅನಂತರ ಸುವ್ರತೆಯ ಗರ್ಭದಲ್ಲಿ ಧರ್ಮನಾಥನ ಜನನ. ದೇವೇಂದ್ರನು ಸುಮೇರು ಪರ್ವತದಲ್ಲಿ ಆ ಮಗುವಿಗೆ ಅಭಿಷೇಕ ಮಾಡುವುದು, ಧರ್ಮನಾಥನ ಬಾಲ್ಯ, ವಿದ್ಯಾಭ್ಯಾಸ, ವಿದರ್ಭರಾಜಪುತ್ರಿಯೊಡನೆ ವಿವಾಹ, ಮಹಾಸೇನನ ವೈರಾಗ್ಯ, ಧರ್ಮನಾಥನಿಗೆ ಪಟ್ಟಾಭಿಷೇಕ ರಾಜ್ಯಪಾಲನೆ, ಸೇನಾಪತಿ ಸುಷೇಣನು ಶತ್ರುರಾಜರೊಡನೆ ಯುದ್ಧಮಾಡಿ ಜಯವನ್ನು ಗಳಿಸುವುದು, ಉಲ್ಕಾಪಾತವನ್ನು ಕಂಡು ಧರ್ಮನಾಥನ ವಿರಕ್ತಿ, ತಪಶ್ಚರಣೆ, ಜಿನಧರ್ಮೋಪದೇಶ—ಇದು ಕಾವ್ಯವಸ್ತು.

ಕಥಾಬಂಧವು ಸಾಂಪ್ರದಾಯಿಕವಾಗಿದ್ದು ಕುತೂಹಲಕರವಾದ ರಚನೆಯೇನೂ ಇಲ್ಲ. ಮಹಾಕಾವ್ಯಲಕ್ಷಣ ಸಂಪಾದನೆಗಾಗಿ ಋತು, ಪುಷ್ಪಾಪಚಯ, ಜಲಕ್ರೀಡೆ, ಚಂದ್ರೋದಯ, ಪಾನಗೋಷ್ಠಿ—ಮುಂತಾದವುಗಳ ವರ್ಣನೆಯನ್ನು ಹರಿಚಂದ್ರನು ತಂದಿದ್ದಾನೆ. ಯುದ್ಧ ಪ್ರಸಂಗವಂತೂ ಕೃತಕ. ಕಥಾನಾಯಕನು ಯುದ್ಧಮಾಡುವುದಿಲ್ಲ, ಯುದ್ಧವಾರ್ತೆಯನ್ನು ಕೇಳುತ್ತಾನೆ. ಮಾಘಾದಿಕವಿಗಳ ಮಟ್ಟಕ್ಕೆ ಹರಿಚಂದ್ರನು ಏರಲಾರನಾದರೂ ಇವನ ಕಾವ್ಯದಲ್ಲಿ ಪದಲಾಲಿತ್ಯವಿದೆ. ನಿರರ್ಗಳವಾದ ಛಂದಸ್ಸಿನ ಓಟವಿದೆ. ಉಪಮೆಯ ಕಡೆಗೆ ಕವಿಯ ಒಲವು ಅಧಿಕ. ಶ್ಲೇಷದ ಚಮತ್ಕಾರವೂ ಉಂಟು. 19ನೆಯ ಸರ್ಗದಲ್ಲಿ ಏಕಾಕ್ಷರ, ದ್ವ್ಯಕ್ಷರ, ಗೋಮೂತ್ರಿಕಾದಿ ಚಿತ್ರಬಂಧಗಳನ್ನು ರಚಿಸಿದ್ದಾನೆ.

1. ದಿಗಂಬರ ಮುನಿಯನ್ನು ವಂದಿಸಲು ಹೊರಟಾಗ ಸಂಚಾರಿಭಾವಗಳು ರಸವನ್ನು ಅನುಸರಿಸುವಂತೆ, ಸಾಮಂತರಾಜರು ಮಹಾಸೇನನನ್ನು ಹಿಂಬಾಲಿಸಿದರು—

ನೃಪಾಃ ಸಂಚಾರಿಣಃ ಸರ್ವೇ ತಮಮಾವಿಷ್ಕೃತಸಾತ್ತ್ವಿಕಂ ।
ಮುನೀಂದ್ರವಂದನಾರೂಢಂ ರಸಂ ಭಾವಾ ಇವಾನ್ವಯುಃ ॥ (3-9)

2. ರಾಜನು ಮುನಿಗೆ ಹೇಳುವ ಈ ಮಾತು ಚಮತ್ಕಾರಿಯಾಗಿದೆ. ಯುಷ್ಮತ್ ಪದ ಪ್ರಯೋಗವಿದ್ದಾಗ ಮಧ್ಯಮಪುರುಷ ಬರುವುದು ಸಹಜ. ಆದರೆ ಇಲ್ಲಿ ಯುಷ್ಮತ್ ಪದ ಪ್ರಯೋಗದಿಂದ (ನಿಮ್ಮ ಚರಣಸಂಸರ್ಗದಿಂದ) ಉತ್ತಮಪುರುಷ !

ಯುಷ್ಮತ್ ಪದಪ್ರಯೋಗೇಣ ಪುರುಷಃ ಸ್ಯಾದ್ಯದುತ್ತಮಃ ।
ಅರ್ಥೋಽಯಂ ಸರ್ವಥಾ ನಾಥ ಲಕ್ಷಣಸ್ಯಾಪ್ಯಗೋಚರ ॥ (3—52)

3. ಬಿದ್ದುಹೋದ ಯೌವನರತ್ನವನ್ನು ಹುಡುಕುವುದಕ್ಕೋ ಎಂಬಂತೆ ಮುದುಕನು ಬಗ್ಗಿ ನೋಡುತ್ತ ಸಂಚರಿಸುತ್ತಾನೆ !

ಅಸಂಭೃತಂ ಮಂಡನಮಂಗಯಷ್ಟೇಃ ನಷ್ಟಂ ಕ್ವ ಮೇ ಯೌವನರತ್ನಮೇತತ್ ।
ಇತೀವ ವೃದ್ಧೋ ನತಪೂರ್ವಕಾಯಃ ಪಶ್ಯನ್ನಧೋಽಧೋ ಭುವಿ ಬಂಭ್ರಮೀತಿ ॥
(4—59)

4. ಸುವ್ರತೆ ಧರ್ಮಾರ್ಥನನ್ನು ಗರ್ಭದಲ್ಲಿ ಧರಿಸಿದ್ದಳು—

ಸಾ ಭಾರತೀವ ಚತುರಾಶಿಗಭೀರಮರ್ಥಂ
ವೇಲೇವ ಗೂಢಮಣಿಮಂಡನಮಂಬುರಾಶೇಃ ।
ಪೌರಂದರೀ ದಿಗಿವ ಮೇರುತಿರೋಹಿತೇಂದುಂ
ಗರ್ಭಂ ತದಾ ನೃಪವಧೂರ್ದಧತೀ ರರಾಜ ॥ (6—1)

## ಯಶೋಧರಚರಿತ (ಕ್ರಿ. ಶ. 11ನೆಯ ಶತಮಾನ)

ಇದನ್ನು ರಚಿಸಿದ ಜೈನಾಚಾರ್ಯ ವಾದಿರಾಜನು ಜಗದೇಕಮಲ್ಲ ಜಯಸಿಂಹನ II(ಕ್ರಿ. ಶ. 1018—1042) ಆಸ್ಥಾನದಲ್ಲಿ ಸಮ್ಮಾನಿತನಾಗಿದ್ದನು. ಇವನಿಗೆ 'ಜಗದೇಕಮಲ್ಲವಾದಿ, ಸ್ಯಾದ್ವಾದವಿದ್ಯಾಪತಿ, ಷಟ್ತರ್ಕಷಣ್ಮುಖ' ಎಂಬ ಬಿರುದುಗಳಿದ್ದುವು. ಯಶೋಧರಚರಿತಕ್ಕೂ ಮೊದಲು ಈತನು ಕ್ರಿ. ಶ. 1050ರಲ್ಲಿ 12 ಸರ್ಗಗಳಿರುವ ಪಾರ್ಶ್ವನಾಥಚರಿತವನ್ನು ಬರೆದಿದ್ದಾನೆ. ವಾದಿರಾಜನ ಇತರ ಗ್ರಂಥಗಳು ನ್ಯಾಯನಿಶ್ಚಯವಿವರಣ, ಪ್ರಮಾಣನಿರ್ಣಯ —ಮುಂತಾದವು. ಈತನ ವಾಸಸ್ಥಳ ತಮಿಳುನಾಡಿನ ಸಿಂಹಪುರ. ಆದರೂ ವಾದಿರಾಜನ ಕಾರ್ಯಕ್ಷೇತ್ರವು ವಿಶೇಷವಾಗಿ ಕರ್ಣಾಟಕ ದೇಶವಾಗಿತ್ತು.*

* ವಿವರಗಳಿಗೆ ಡಾ॥ ಕೆ. ಕೃಷ್ಣಮೂರ್ತಿಗಳು ಸಂಪಾದಿಸಿರುವ ಯಶೋಧರಚರಿತದ ಆಂಗ್ಲ ಭಾಷೆಯ ಉಪೋದ್ಘಾತವನ್ನು ನೋಡಬಹುದು.



ಕನ್ನಡ ಕವಿ ಜನ್ನನು ತನ್ನ ಯಶೋಧರ ಚರಿತವನ್ನು (1209) ರಚಿಸಲು ವಾದಿರಾಜನ ಕಾವ್ಯದಿಂದ ಹೆಚ್ಚಿನ ನೆರವನ್ನು ಪಡೆದಿದ್ದಾನೆ. ಕನ್ನಡಿಗರಲ್ಲಿ ನಾಗವರ್ಮನು (ಸು. 12ನೆಯ ಶತಮಾನ) ಕಾವ್ಯಾವಲೋಕನದಲ್ಲಿಯೂ, ಶಾಂತಿನಾಥನು (11ನೆಯ ಶತಮಾನ) ಸುಕುಮಾರ ಚರಿತದಲ್ಲಿಯೂ, ಬ್ರಹ್ಮಶಿವನು (ಸು. 1100) ಸಮಯಪರೀಕ್ಷೆಯಲ್ಲಿಯೂ ವಾದಿರಾಜನನ್ನು ಸ್ಮರಿಸಿದ್ದಾರೆ.

ಯಶೋಧರಚರಿತೆಗೆ ಚಿಕ್ಕಣ್ಣನ ಮಗ ಲಕ್ಷ್ಮಣನು ವ್ಯಾಖ್ಯಾನವನ್ನು ಬರೆದಿದ್ದಾನೆ. ಇವನು ಕ್ಷೇಮಪುರ (ಗೇರುಸೊಪ್ಪೆ, ಉ.ಕ. ಜಿಲ್ಲೆ) ನಿವಾಸಿಯಾದ ಕನ್ನಡಿಗ, ಸುಮಾರು 16ನೆಯ ಶತಮಾನದವನು.

**ಕಾವ್ಯಪರಿಚಯ :**—ಯಶೋಧರ, ಅವನ ತಾಯಿ ಚಂದ್ರಮತಿ, ಹೆಂಡತಿ ಅಮೃತಮತಿ ಇವರನ್ನು ಕುರಿತದ್ದು ಕಥಾವಸ್ತು. *

ಇದರಲ್ಲಿ ನಾಲ್ಕು ಸರ್ಗಗಳಿದ್ದು ಅನುಷ್ಟುಪ್, ಉಪಜಾತಿ, ಸ್ವಾಗತಾವೃತ್ತಗಳನ್ನು ಮುಖ್ಯವಾಗಿ ಕವಿಯು ಬಳಸಿದ್ದಾನೆ. ಉಪಮೆ, ಉತ್ಪ್ರೇಕ್ಷೆ, ಅರ್ಥಾಂತರನ್ಯಾಸಾಲಂಕಾರಗಳು ಪ್ರಧಾನವಾಗಿವೆ. ಶೈಲಿಯು ಲಲಿತವಾಗಿದ್ದು ಸತ್ತ್ವಯುತವಾಗಿದೆ. ಕಾವ್ಯವು ಚಿಕ್ಕದಾದರೂ ಪ್ರಭಾವಶಾಲಿ.

1. ಕ್ಷಯಿಸುವ ಚಂದ್ರಮಂಡಲವನ್ನು ತ್ಯಜಿಸಿ ಚಂದ್ರಕಾಂತಿ ಯಶೋಧರನ ಮುಖದಲ್ಲಿ ನೆಲೆಸಿತು—

ವಿಮುಚ್ಯ ಕಾಂತಿಃ ಶರದಿಂದುಬಿಂಬಂ
ಭೂಯಃ ಕ್ಷಯಾಪತ್ತಿಭಯಾತುರೇವ ।
ತಸ್ಯಾಕ್ಷಯಶ್ರೀನಿಲಯಸ್ಯ ವಕ್ತ್ರಂ
ವ್ಯಾಕೋಶನೇತ್ರೋತ್ಪಲಮಧ್ಯುವಾಸ ॥ (2-6)

2. ಅಮೃತಮತಿಯ ಪ್ರೇಮಕ್ಕೆ ಪಾತ್ರನಾದ ಕುರೂಪಿ ಮಾವುತನ ವರ್ಣನೆ ಇದು—

ಆಸ್ಯಂ ಪುನರ್ವಾಯಸತುಂಡಕೃಷ್ಣಂ
ದಂತಾಶ್ಚ ಕೇಚಿದ್ಬಹಿರಂತರನ್ಯೇ ।
ಕರಾವಜಸ್ರಂ ಕರಿಮೂತ್ರದಗ್ಧೌ
ದಗ್ಧವ್ರಣಕ್ಲೇದಯುತಸ್ತು ಕುಕ್ಷಿಃ ॥ (2-40)

3. ಅರಣಿಯಲ್ಲಿ ಅಗ್ನಿಯಿರುವಂತೆ ದೇಹದಲ್ಲಿ ಜೀವಾತ್ಮನಿದ್ದಾನೆಂದು ಅಕಂಪನಾಚಾರ್ಯನು ಹೇಳುತ್ತಾನೆ—

* ವಿವರಗಳಿಗೆ ಯಶಸ್ತಿಲಕಚಂಪೂ ಶೀರ್ಷಿಕೆಯಲ್ಲಿ ನೋಡಬಹುದು.

ಮುನಿರ್ಬಭಾಷೇ ಶೃಣು ಚೋತ್ತರತ್ರಯಂ
ತರೌ ಕೃಶಾನುರ್ದಲಿತೇಽಪಿ ಖಂಡಶಃ ।
ನ ದೃಶ್ಯತೇ ಸೋಽರಣಿಮಂಥನಾದೃತೇ
ತಥಾ ಶರೀರೇ ಸಮುಪೇಹಿ ನಿಶ್ಚಯಂ ॥ (4–18)

## ಶ್ರೀಕಂಠಚರಿತ (ಕಿ. ಶ. 12ನೆಯ ಶತಮಾನ)

ಇದರ ಕವಿ ಮಂಖ ಅಥವಾ ಮಂಖಕ. ಸುಸ್ಸಲನ ಮಗನಾದ ಜಯಸಿಂಹನು ಕಾಶ್ಮೀರವನ್ನಾಳುತ್ತಿದ್ದಾಗ (ಕ್ರಿ.ಶ. 1127–1149), ಅಲಂಕಾರನು ಅವನ ಸಂಧಿವಿಗ್ರಹಿ ಮತ್ತು ಸಾಮಂತಶಿಖಾಮಣಿಯಾಗಿದ್ದನು. ಅಲಂಕಾರನ ತಮ್ಮ ಮಂಖ. ಇವನ ತಂದೆ ವಿಶ್ವವರ್ತ. ಮೃತನಾದ ತಂದೆ ಸ್ವಪ್ನದಲ್ಲಿ ಕಾಣಿಸಿಕೊಂಡು ಸೂಚನೆ ಮಾಡಿದಂತೆ ಮಂಖನು ಶ್ರೀಕಂಠಚರಿತವನ್ನು ರಚಿಸಿದನು. ಈತನು ತನ್ನ ಕಾವ್ಯದಲ್ಲಿ ಮೇಂಠ, ಸುಬಂಧು, ಭಾರವಿ ಮತ್ತು ಬಾಣ ಕವಿಗಳನ್ನು ಸ್ತುತಿಸಿದ್ದಾನೆ (2–53). ಕವಿಯು ಶಿವಭಕ್ತ. ಮನುಷ್ಯರನ್ನು ಸ್ತುತಿಸತಕ್ಕವನಲ್ಲ. ತನ್ನ ಧನ್ಯತೆಯನ್ನು ಹೀಗೆ ಹೇಳಿಕೊಂಡಿದ್ದಾನೆ—

ಮನುಷ್ಯಜನ್ಮ ವೈದುಷ್ಯಂ ವಿವೇಕಃ ಕಾವ್ಯಚಾತುರೀ ।
ಶ್ರೀಕಂಠೇ ಚಾಟುಕಾರಿತ್ವಮಹೋ ಪುಣ್ಯಪರಂಪರಾ ॥ (25–7)

ಮಂಖನು ಪ್ರಸಿದ್ಧ ಆಲಂಕಾರಿಕನೂ 'ಅಲಂಕಾರ ಸರ್ವಸ್ವ'ದ ಕರ್ತೃವೂ ಆದ ರುಯ್ಯಕನ ಶಿಷ್ಯ.

ಶ್ರೀ ಕಂಠಚರಿತದಲ್ಲಿ 25 ಸರ್ಗಗಳೂ 1653 ಶ್ಲೋಕಗಳೂ ಇವೆ. ಶಿವನು ತ್ರಿಪುರಾಸುರನನ್ನು ಸಂಹರಿಸಿದನೆಂಬ ಪೌರಾಣಿಕ ಕಥೆ ಕಾವ್ಯವಸ್ತು. ಹರವಿಜಯದಲ್ಲಿರುವಂತೆ ಇದರಲ್ಲಿ ಮಹಾಕಾವ್ಯ ಲಕ್ಷಣಗಳು ಬರಲೆಂದೇ ಸೂರ್ಯೋದಯಾದಿ ವರ್ಣನೆಗಳನ್ನು ಸೇರಿಸಲಾಗಿದೆ. ಆದರೆ ಮಂಖನು ಚಿತ್ರಬಂಧಗಳಿಗೂ ಶಬ್ದಾಲಂಕಾರಗಳಿಗೂ ಗಮನವನ್ನು ಕೊಡದೆ. ಅರ್ಥಾಲಂಕಾರಗಳಿಗೂ, ರಸಕ್ಕೂ ಪ್ರಾಧಾನ್ಯವನ್ನು ಕೊಟ್ಟಿದ್ದಾನೆ. ರಸವಿಲ್ಲದ ಉತ್ತಮ ಕಾವ್ಯವೇ ಆಗದೆಂದು ಹೇಳಿದ್ದಾನೆ—

ತೈಸ್ತೈರಲಂಕೃತಿಶತೈರವತಂಸಿತೋಽಪಿ
ರೂಢೋ ಮಹತ್ಯಪಿ ಪದೇ ಧೃತಸೌಷ್ಠವೋಽಪಿ ।
ನೂನಂ ವಿನಾ ಘನರಸಪ್ರಸರಾಭಿಷೇಕಂ
ಕಾವ್ಯಾಧಿರಾಜಪದಮರ್ಹತಿ ನ ಪ್ರಬಂಧಃ ॥ (2–32)

'ವಾಕ್' ಎಂಬ ಕಬ್ಬನ್ನು ಹಿಂಡಿ ಹಿಂಡಿ ಮಹಾಕವಿಗಳು ಅದರ ಸಾರವನ್ನು ತೆಗೆದುಬಿಟ್ಟಿದ್ದಾರೆ! ಈಗಿನ ಕವಿಗಳಿಗೆ ಉಳಿದಿರುವುದು ಅನುಪ್ರಾಸಾದಿಗಳೆಂಬ ಚರಟ ಮಾತ್ರವೇ ।



ಜಾಯಂತೇಽದ್ಯ ಯಥಾಯಥಂ ತು ಕವಯಸ್ತೇ ತತ್ರ ಸಂತನ್ವತೇ ।
ಯೇಽನುಪ್ರಾಸಕಠೋರಚಿತ್ರಯಮಕಶ್ಲೇಷಾದಿಶಲ್ಕೋಚ್ಚಯಂ ॥ (2–42)

ಮಂಖನು ಸಾಂಪ್ರದಾಯಿಕ ಕ್ರಮದಿಂದ ಕಾವ್ಯವನ್ನು ರಚಿಸಿದ್ದರೂ ಅವನ ವಸ್ತು ವರ್ಣನೆಗಳಲ್ಲಿ ನವೀನತೆಯುಂಟು. ಅವನು ಅನುಕರಣ ಕವಿಯಲ್ಲ. ಸುಜನದುರ್ಜನವರ್ಣನೆ ರಂಜಕವಾಗಿದೆ. ಮನೋಹರವಾದ ದೇಶವಂಶಾದಿಗಳ ವರ್ಣನೆಯಲ್ಲಿ ಇತಿಹಾಸೋಪಯುಕ್ತವಾದ ವಿಷಯಗಳುಂಟು. ಕಡೆಯ 25ನೆಯ ಸರ್ಗದಲ್ಲಿ ಅಣ್ಣನಾದ ಅಲಂಕಾರನ ಸಭೆಯಲ್ಲಿ ಉಪಸ್ಥಿತರಾದ ವಿದ್ವತ್ಕವಿಗಳನ್ನು ಮಂಖನು ಪರಿಚಯ ಮಾಡಿಕೊಟ್ಟಿರುವುದು ಕುತೂಹಲಕರವಾಗಿದೆ.*

ಶ್ರೀಕಂಠಚರಿತಕ್ಕೆ ಜೋನರಾಜನ ವ್ಯಾಖ್ಯಾನವಿದೆ.

1. ಹಿಮಾಲಯದ ವರ್ಣನೆ—

ಶಶಿಶುಭ್ರಾಃ ಕಿರನ್ ಭಾಸೋ ಹಾಸೋ ಧನಪತೇರ್ದಿಶಃ ।
ಗಿರಿರಸ್ತೀಹ ಕೈಲಾಸೋ ನಿವಾಸೋ ವೃಷಲಕ್ಷ್ಮಣಃ ॥ (4–1)

2. ವಸಂತಕಾಲವಲ್ಲಿ ಮಾವಿನಮರದ ಬಳಿ ಸುತ್ತಾಡುತ್ತಿದ್ದ ಭ್ರಮರಸಮೂಹವು ಆದಕ್ಕೆ ಆರತಿ ಎತ್ತುವಂತೆ ಕಾಣಿಸಿತು—

ಸಪಕ್ಷಪಾತಾ ನಿರುಪಾಧಿಬಂಧೋಃ
ಚಿರಾಯ ವೇಗಾದುಪರಿ ಭ್ರಮಂತೀ ।
ಅಕಲ್ಪಯಚ್ಚೂತತರೋಃ ಸ್ವದೇಹಂ
ಅರಾತ್ರಿಕಾಯೇವ ಮಧುವ್ರತಾಲೀ ॥ (6–25)

---

*ಲಂಕಕನ (ಅಲಂಕಾರನ) ಆಸ್ಥಾನದಲ್ಲಿ ಕವಿಯು ಇವರನ್ನು ಸಂದರ್ಶಿಸಿದನು. ಕವಿಯ ಗುರು ರುಯ್ಯಕ, ಇಷ್ಟಸಿದ್ಧಿಯ ವಿವರಣಕಾರ ರಮ್ಯದೇವ, ಷಡ್ಭಾಷಾವಿದನಾದ ಲೋಷ್ಟದೇವ, ಪ್ರಭಾಕರ ಶಾಸ್ತ್ರವನ್ನು ಬಲ್ಲ ಶ್ರೀಗರ್ಭ, ಶ್ರೀಗರ್ಭನ ಮಗನೂ ಕವಿಯ ಮಿತ್ರನೂ ಆದ ಮಂಡನ ವೃದ್ಧನಾದ ಗರ್ಗಕವಿ, ವಿಷ್ಣುಭಕ್ತನಾದ ದೇವಧರ, ಧ್ವನಿಕವಿಯೆನಿಸಿದ ಆಲಂಕಾರ (ಕವಿಯ ಅಣ್ಣ), ತರ್ಕಶತರ್ಕವನ್ನೂ ಕವಿಕರ್ಮವನ್ನೂ ಬಲ್ಲ ತ್ರೈಲೋಕ್ಯ, ಮೀಮಾಂಸಕ ಜಿಂದುಕ, ಮಹಾಕವಿ ಜಲ್ಲಣ, ವಿದ್ವಾಂಸನಾದ ಗೋವಿಂದ, ಆಲಕದತ್ತನಿಂದ ಸಂಮಾನಿತನಾದ ಕಲ್ಯಾಣ, ಕಾವ್ಯಕಲಾ ಕೋಶಗಳೆನಿಸಿ ಸಹಾಧ್ಯಾಯಿಗಳಾದ ಭುಡ್ಡ ಮತ್ತು ಶ್ರೀವತ್ಸ, ತರ್ಕವಿದ್ಯಾಪರಿಣತ ಆನಂದ, ವೈದರ್ಭಮಾರ್ಗನಿಪುಣನಾದ ಪದ್ಮರಾಜ, ಅಹಿತಾಗ್ನಿಯೂ ಮೀಮಾಂಸಕನೂ ಆದ ಗುಣ್ಣಪಂಡಿತ, ವೈದಿಕಶಿರೋಮಣಿ ಲಕ್ಷ್ಮೀದೇವ, ಭಿಷಗ್ವರ ಆನಂದ, ಅವನ ತಮ್ಮ ಸುಹಲನೆಂಬ ವೈದ್ಯ, ವೈಯಾಕರಣನಾದ ಸುಹಲ, ಉಪಾಧ್ಯಾಯ ಜೋಗರಾಜ, ವಾದಿವಿಜೇತನೂ ಕೊಂಕಣೇಶ್ವರ ಪ್ರೇಷಿತನೂ ಆದ ತೇಜಕಂಠ ಮತ್ತು ಮಹಾಕವಿ ವಾಗೀಶ್ವರ.

# ಶ್ರೀಹರ್ಷ-ನೈಷಧೀಯ ಚರಿತ

## (12ನೇ ಶತಕದ ಉತ್ತರಾರ್ಧ)

ಪಂಚಮಹಾಕಾವ್ಯಗಳಲ್ಲಿ ಗಣಿತವಾಗಿ
ಶ್ರೀಹರ್ಷನ ನೈಷಧೀಯ ಚರಿತ ಅಥವಾ ನೈಷಧವು ಮಾಮಲ್ಲದೇವಿ.
ವಿದ್ವಜ್ಜನಪ್ರಿಯವಾಗಿದೆ. ಶ್ರೀಹರ್ಷನ ತಂದೆ ಶ್ರೀಹೀರ. ತಾಯಿ ಕಾನ್ಯಕುಬ್ಜದ
ಶ್ರೀಹೀರನು ವಿಜಯಚಂದ್ರನೆಂಬ ರಾಜನ ಆಸ್ಥಾನವಿದ್ವಾಂಸ. ಈ ರಾಜನು ರಾಜ್ಯ
ದೊರೆಯೆಂದೂ, ಕಾಶಿಯ ದೊರೆಯೆಂದೂ ಮತಭೇದವಿದೆ. ಪ್ರಾಯಶಃ ಈ ಎರಡು
ಗಳೂ ಅವನ ಆಳ್ವಿಕೆಗೆ ಒಳಪಟ್ಟಿದ್ದವು.

ಜಯಂತಚಂದ್ರನ ಆಸ್ಥಾನದಲ್ಲಿದ್ದನು.
ಶ್ರೀಹರ್ಷನು ವಿಜಯಚಂದ್ರನ ಮಗನಾದ ಸಂಯುಕ್ತೆಯ ತಂದೆಯೂ
ಜಯಂತಚಂದ್ರನೇ ಇತಿಹಾಸಪ್ರಸಿದ್ಧನಾದ ಪೃಥ್ವೀರಾಜನ ಮಾವನೂ, ರವರೆಗೆ ಆಳಿದನು.
ಆದ ಜಯಚಂದ್ರ, ಈತನು ಕಾನ್ಯಕುಬ್ಜವನ್ನು 1169 ರಿಂದ 1190 ಎಂದು ಶ್ರೀಹರ್ಷನು
'ತಾಂಬೂಲದ್ವಯಮಾಸನಂ ಚ ಲಭತೇ ಯಃ ಕಾನ್ಯಕುಬ್ಜೇಶ್ವರಾತ್' ನಿಶಿತಪ್ರಜ್ಞ
ಹೇಳಿಕೊಂಡಿದ್ದಾನೆ. ಈತನು ತರ್ಕವೇದಾಂತಾದಿಶಾಸ್ತ್ರಗಳಲ್ಲಿ ಉದ್ದಾಮಪಂಡಿತ.
ನಾದ ಪ್ರೌಢಕವಿ.

ನೈಷಧದ ಕೆಲವು ಸರ್ಗಗಳ ಅಂತಿಮ ಪದ್ಯಗಳಲ್ಲಿ ತಾನು ಬರೆದಿರುವ ಇತರ ಗ್ರಂಥಗಳ
ಹೆಸರನ್ನು ಹೇಳಿದ್ದಾನೆ. ಸ್ಥೈರ್ಯವಿಚಾರಪ್ರಕರಣ, ಶ್ರೀವಿಜಯಪ್ರಶಸ್ತಿ, ಖಂಡನಖಂಡಖಾದ್ಯ,
ಗೌಡೋರ್ವೀಶಕುಲಪ್ರಶಸ್ತಿ, ಅರ್ಣವವರ್ಣನ, ನವಸಾಹಸಾಂಕಚರಿತ, ಛಿಂದಪ್ರಶಸ್ತಿ, ಶಿವಶಕ್ತಿ
ಸಿದ್ಧಿ—ಇವು ಆ ಗ್ರಂಥಗಳು. ಖಂಡನಖಂಡಖಾದ್ಯವು ತಾರ್ಕಿಕ ಮತವನ್ನು ಖಂಡಿಸುವ
ಪ್ರೌಢಗ್ರಂಥ. ಉಳಿದವು ದೊರಕಿಲ್ಲ. ಛಿಂದಪ್ರಶಸ್ತಿಯು ಗಯೆಯ ದೊರೆಯಾದ ಛಿಂದನ
ಪ್ರಶಸ್ತಿ ಎನ್ನುತ್ತಾರೆ. ಛಂದಃಪ್ರಶಸ್ತಿ ಎಂದೂ ಪಾಠಾಂತರವಿದೆ. 'ಈಶ್ವರಾಭಿಸಂಧಿ
ಎಂಬ ಗ್ರಂಥವನ್ನು ಈತನು ಬರೆದಿರುವುದಾಗಿ 'ಖಂಡನಖಂಡಖಾದ್ಯ'ದಿಂದ ಗೊತ್ತಾಗುತ್ತದೆ.

ಶ್ರೀಹರ್ಷನ ವಿಷಯವಾಗಿ ಕೆಲವು ಕಥೆಗಳುಂಟು.

1. ಈತನ ತಂದೆಯಾದ ಶ್ರೀಹೀರನು ಪ್ರಖ್ಯಾತನಾದ ಉದಯನಾಚಾರ್ಯನಿಂದ
ವಾದದಲ್ಲಿ ಪರಾಜಿತನಾದನು. ಶ್ರೀಹರ್ಷನು ತಂದೆಯ ಪರಾಜಯವನ್ನು ಸಹಿಸಲಾರದೆ
ಉದಯನಾಚಾರ್ಯನನ್ನು ಸೋಲಿಸಬೇಕೆಂದು ತೀವ್ರವಾಗಿ ಶಾಸ್ತ್ರಗ್ರಂಥಗಳನ್ನು ಅಧ್ಯಯನ
ಮಾಡಿದನು. ಅವನ ಬುದ್ಧಿಶಕ್ತಿ ಮೊದಲೇ ಪ್ರಖರವಾಗಿತ್ತು. ಚಿಂತಾಮಣಿಮಂತ್ರವನ್ನು ಜಪಿಸಿ
ತ್ರಿಪುರಾದೇವಿಯನ್ನು ಒಲಿಸಿಕೊಂಡನು. ನೈಷಧಕಾವ್ಯವು 'ಚಿಂತಾಮಣಿಮಂತ್ರಚಿಂತನಫಲ'
ಎಂದು ಕವಿಯೇ ಹೇಳಿಕೊಂಡಿದ್ದಾನೆ. ತ್ರಿಪುರಾದೇವಿಯ ವರದಿಂದ ಅವನ ಬುದ್ಧಿ ಎಷ್ಟು



ತೀಕ್ಷ್ಣವಾಯಿತೆಂದರೆ, ಅವನು ಹೇಳುವ ಶಾಸ್ತ್ರವಾಕ್ಯಾರ್ಥಗಳನ್ನು ಅರ್ಥಮಾಡಿಕೊಳ್ಳಲೂ ವಿದ್ವಾಂಸರಿಗೆ ಸಾಧ್ಯವಾಗಲಿಲ್ಲ! ಶ್ರೀಹರ್ಷನು ಮತ್ತೆ ತ್ರಿಪುರಾದೇವಿಯನ್ನು ಸಾಕ್ಷಾತ್ಕರಿಸಿಕೊಂಡು "ತಾಯಿ, ನನ್ನ ಮಾತು ಜನರಿಗೆ ಅರ್ಥವಾಗುವಂತೆ ನನ್ನ ಬುದ್ಧಿಶಕ್ತಿಯನ್ನು ತಗ್ಗಿಸು!" ಎಂದು ಪ್ರಾರ್ಥಿಸಿಕೊಂಡನು. ಆಗ ದೇವಿ "ವತ್ಸ, ಒಂದು ವರ್ಷದವರೆಗೆ ತೊಂಡೆಬಳ್ಳಿಯ ಚಪ್ಪರದ ಕೆಳಗೆ ಮಲಗುತ್ತಿರು. ಮೊಸರನ್ನು ಹೆಚ್ಚಾಗಿ ಬಳಸು. ಆಹಾರದಲ್ಲಿ ವಿಶೇಷವಾಗಿ ಉದ್ದನ್ನು ಉಪಯೋಗಿಸು" ಎಂದು ಹೇಳಿದಳು. ಶ್ರೀಹರ್ಷನು ಕೇವಲ ಉದ್ದನ್ನು ತಿನ್ನುತ್ತಿರುವುದನ್ನು ಕಂಡು ಅವನ ಸೋದರಮಾವನು ಅದೇನೆಂದು ಕೇಳಿದಾಗ ಶ್ರೀಹರ್ಷನು 'ಅಶೇಷಶೇಮುಷೀಮೋಷಮಾಷಾನಶ್ನಾಮಿ' ಎಂದು ಉತ್ತರಿಸಿದನು. ಅನಂತರ ವಿದ್ವದಗ್ರಣಿಯಾಗಿ ಕೀರ್ತಿಗಳಿಸಿದ ಶ್ರೀಹರ್ಷನು ಮೇಲ್ಕಂಡ ವಿವಿಧ ಗ್ರಂಥಗಳನ್ನು ರಚಿಸಿ ಕಾನ್ಯಕುಬ್ಜೇಶ್ವರನ ಸಭೆಗೆ ಹೋದನು. ಅಲ್ಲಿ ರಾಜನನ್ನು ನೋಡಿ—

ಗೋವಿಂದನಂದನತಯಾ ಚ ವಪುಃಶ್ರಿಯಾ ಚ
ಮಾಸ್ಮಿನ್ನೃಪೇ ಕುರುತ ಕಾಮಧಿಯಂ ತರುಣ್ಯಃ ।
ಅಸ್ತ್ರೀಕರೋತಿ ಜಗತಾಂ ವಿಜಯೇ ಸ್ಮರಃ ಸ್ತ್ರೀಃ
ಅಸ್ತ್ರೀಜನಃ ಪುನರನೇನ ವಿಧೀಯತೇ ಸ್ತ್ರೀ ॥

ಎಂದನಂತೆ. ವಿಜಯಚಂದ್ರರಾಜನು ಗೋವಿಂದಚಂದ್ರನ ಮಗ. ಈ ಶ್ಲೋಕವನ್ನು ಕೇಳಿ ಸಭಾಸದರೆಲ್ಲರೂ ವಿಸ್ಮಿತರಾದರು. ಆಮೇಲೆ ಸಭೆಯಲ್ಲಿದ್ದ ಉದಯನಾಚಾರ್ಯನನ್ನು ನೋಡಿ—

ಸಾಹಿತ್ಯೇ ಸುಕುಮಾರವಸ್ತುನಿ ದೃಢನ್ಯಾಯಗ್ರಹಗ್ರಂಥಿಲೇ ।
ತರ್ಕೇ ವಾ ಮಯಿ ಸಂವಿಧಾತರಿ ಸಮಂ ಲೀಲಾಯತೇ ಭಾರತೀ ॥

ಎಂದು ನುಡಿದು ಶಾಸ್ತ್ರಚರ್ಚೆಗೆ ಆಹ್ವಾನಿಸಿದನು. ಉದಯನನು ಶ್ರೀಹರ್ಷನ ಪಾಂಡಿತ್ಯವನ್ನು ಕೊಂಡಾಡಿದನು. ರಾಜನು ಶ್ರೀಹರ್ಷನನ್ನು ಸಂತೈಸಿ ಅವರಿಬ್ಬರಿಗೂ ರಾಜಿ ಮಾಡಿಸಿದನು.

2. ಶ್ರೀಹರ್ಷನು ವಿಜಯಚಂದ್ರನ ಆಸ್ಥಾನಕವಿಯಾಗಿದ್ದು 'ನೈಷಧೀಯಚರಿತ'ವನ್ನು ರಚಿಸಿದನು. ಅದನ್ನು ಕಾಶ್ಮೀರದ ಶಾರದಾ ಪೀಠಕ್ಕೆ ತೆಗೆದುಕೊಂಡು ಹೋಗಿ ವಿದ್ವಾಂಸರೆದುರಿಗೆ ಮಂಡಿಸಿದನು. ಶಾರದೆ ಪ್ರಸನ್ನಳಾದಳು. ವಿದ್ವಜ್ಜನರು ತಲೆದೂಗಿದರು. ಆದರೆ ಕಾಶ್ಮೀರ ರಾಜನ ಸಂದರ್ಶನವಾಗಲಿಲ್ಲ. ಅರಮನೆಯ ಪಂಡಿತರು ಅಸೂಯೆಯಿಂದ ರಾಜನದರ್ಶನ ವಾಗದಂತೆ ತಡೆದರು. ಶ್ರೀಹರ್ಷನು ನಿರ್ವಿಣ್ಣನಾಗಿ ಒಂದು ನದೀತೀರದಲ್ಲಿ ಕುಳಿತಿರುವಾಗ ಇಬ್ಬರು ಗ್ರಾಮೀಣ ಸ್ತ್ರೀಯರಲ್ಲಿ ದೊಡ್ಡ ಜಗಳವಾಯಿತು. ದೂರು ದೊರೆಗೆ ಮುಟ್ಟಿತು. ದೊರೆ ನ್ಯಾಯವನ್ನು ವಿಮರ್ಶಿಸುತ್ತಾ "ನೀವು ಜಗಳವಾಡುವಾಗ ಅಲ್ಲಿ ಯಾರು ಇದ್ದರು ? ಸಾಕ್ಷಿ ಯಾರು ?" ಎಂದು ಕೇಳಿದನು. ಆ ಸ್ತ್ರೀಯರು ಸಮೀಪದಲ್ಲಿ ಒಬ್ಬ ಬ್ರಾಹ್ಮಣನು ಕುಳಿತಿದ್ದ

ನೆಂದು ಹೇಳಿದರು. ರಾಜಾಜ್ಞೆಯಂತೆ ದೂತರು ಶ್ರೀಹರ್ಷನನ್ನು ರಾಜನೆದುರಿಗೆ ಕರೆದೊಯ್ದರು. ಶ್ರೀಹರ್ಷನು "ಮಹಾರಾಜ, ನಾನು ಪರದೇಶದಿಂದ ಬಂದಿದ್ದೇನೆ. ಈ ದೇಶದ ಭಾಷೆ ನನಗೆ ತಿಳಿಯದು. ಆದರೆ ಈ ಸ್ತ್ರೀಯರು ಏನೇನು ಹೇಳಿ ಜಗಳವಾಡಿದರೆಂದು ಆ ವಾಕ್ಯಗಳನ್ನೇ ಉಚ್ಚರಿಸಬಲ್ಲೆ" ಎಂದು ತಿಳಿಸಿ ಕ್ರಮವಾಗಿ ಆ ವಾಕ್ಯಗಳನ್ನು ಉಚ್ಚರಿಸಿದನು. ರಾಜನು ಆತನ ಮೇಧಾಶಕ್ತಿಗೆ ಚಕಿತನಾಗಿ, ಪೂರ್ವಾಪರಗಳನ್ನು ವಿಚಾರಿಸಿ ಅವನನ್ನು ಸಮ್ಮಾನಿಸಿದನು.

3. ಶ್ರೀಹರ್ಷನು ನೈಷಧವನ್ನು ಪ್ರಸಿದ್ಧ ಆಲಂಕಾರಿಕನಾದ ಮಮ್ಮಟಭಟ್ಟನಿಗೆ ತೋರಿಸಿ ಆತನ ಅಭಿಪ್ರಾಯವನ್ನು ಕೇಳಿದನಂತೆ. ಮಮ್ಮಟನು ಸಾವಧಾನವಾಗಿ ಅವಲೋಕಿಸಿ "ನಾನು ನನ್ನ ಕಾವ್ಯಪ್ರಕಾಶದಲ್ಲಿ ದೋಷ ಪ್ರಕರಣವನ್ನು ಬರೆದಿದ್ದೇನೆ. ದೋಷದ ಉದಾಹರಣೆಗಳಿಗಾಗಿ ಅನೇಕ ಗ್ರಂಥಗಳನ್ನು ಹುಡುಕ ಬೇಕಾಯಿತು. ಮೊದಲೇ ಈ ಕಾವ್ಯ ದೊರೆತಿದ್ದರೆ ಹುಡುಕುವ ಶ್ರಮ ತಪ್ಪುತ್ತಿತ್ತು!" ಎಂದು ಉದ್ಗರಿಸಿದನಂತೆ.

4. ವಿಜಯಚಂದ್ರನ ತರುವಾಯ ಅವನ ಮಗ ಜಯಂತಚಂದ್ರನು ಕಾನ್ಯಕುಬ್ಜದ ಅರಸನಾಗಿದ್ದನು. ಅವನ ಆಸ್ಥಾನದಲ್ಲಿಯೂ ಶ್ರೀಹರ್ಷನಿದ್ದನು. ಆತನಿಗೆ 'ನರಭಾರತೀ' ಎಂಬ ಪ್ರಶಸ್ತಿ ಇತ್ತು. ಜಯಂತಚಂದ್ರನ ಹೆಂಡತಿ ಸೂಹವದೇವಿಗೆ "ಕಲಾಭಾರತಿ" ಎಂಬ ಬಿರುದು ಇತ್ತು. ಅವಳು ಅಸೂಯೆಯಿಂದ ಶ್ರೀಹರ್ಷನಿಗೆ ಕಿರುಕುಳವನ್ನು ಕೊಡುತ್ತಿದ್ದಳು. ಅವನು ಬೇಸರಗೊಂಡು ರಾಜಸಾನಿಧ್ಯವನ್ನು ತೊರೆದು ಸಂನ್ಯಾಸಿಯಾಗಿ ಗಂಗಾತೀರದಲ್ಲಿ ನೆಲೆಸಿದನು.

ಶ್ರೀಹರ್ಷನು ನೈಷಧದಲ್ಲಿ ತನ್ನನ್ನು "ಜಿತೇಂದ್ರಿಯಚಯ"ನೆಂದೂ "ಯಃ ಸಾಕ್ಷಾತ್ಕುರುತೇ ಸಮಾಧಿಷು ಪರಂ ಬ್ರಹ್ಮ ಪ್ರಮೋದಾರ್ಣವಂ" ಎಂದೂ ವಿಶೇಷಿಸಿಕೊಂಡಿದ್ದಾನೆ. "ಕಶ್ಮೀರೈಃ ಮಹಿತೇ" ಎಂದು ಹೇಳಿರುವುದರಿಂದ ಕಾಶ್ಮೀರದ ವಿದ್ವಾಂಸರು ಈ ಕಾವ್ಯವನ್ನು ಮೆಚ್ಚಿದರೆಂದು ತಿಳಿದುಬರುತ್ತದೆ.

ನಿಷಧರಾಜನಾದ, ನಳನಿಗೂ, ವಿದರ್ಭರಾಜನಾದ ಭೀಮನ ಕುಮಾರಿ ದಮಯಂತಿಗೂ ಸ್ವಯಂವರ ವಿಧಾನದಿಂದ ನಡೆದ ವಿವಾಹವು ಕಾವ್ಯದ ಕಥಾವಸ್ತು. ರಾಜಹಂಸವು ಅವರೀರ್ವರ ನಡುವೆ ದೂತನ ಪಾತ್ರವನ್ನು ವಹಿಸುತ್ತದೆ. ಸ್ವಯಂವರಸಭೆಯಲ್ಲಿ ಸರಸ್ವತಿಯೇ ಬಂದು ನೆರೆದ ರಾಜರ ಪರಿಚಯವನ್ನು ದಮಯಂತಿಗೆ ಮಾಡಿಸುತ್ತ ಹೋಗುತ್ತಾಳೆ. ಇಂದ್ರ, ಅಗ್ನಿ, ಯಮ, ವರುಣರು ದಮಯಂತಿಯಲ್ಲಿ ಅನುರಕ್ತರಾಗಿ ನಳನ ರೂಪವನ್ನು ಧರಿಸಿ, ಕುಳಿತಿರುತ್ತಾರೆ. ಅವರ ಪಕ್ಕದಲ್ಲಿ ನಳನಿರುತ್ತಾನೆ. ಸರಸ್ವತಿ ಶ್ಲೇಷೋಕ್ತಿಯಿಂದ ಗೂಢವಾಗಿ ಆ "ಪಂಚನಳ"ರನ್ನೂ ಪರಿಚಯ ಮಾಡಿಸುತ್ತಾಳೆ. ಕಡೆಗೆ ಆ ದೇವತೆಗಳ ಅನುಗ್ರಹದಿಂದ ನಿಜವಾದ ನಳನು ಯಾರೆಂದು ದಮಯಂತಿಗೆ ತಿಳಿಯುತ್ತದೆ. ಅವಳು ನಳನನ್ನು ವರಿಸುತ್ತಾಳೆ. ಈ ವೃತ್ತಾಂತವನ್ನು ತಿಳಿದು ಕಲಿಪುರುಷನು ಅಸೂಯೆಯಿಂದ ನಳನನ್ನು ಪೀಡಿಸಲು ಆಗಮಿಸುತಾನೆ. ನಳದಮಯಂತಿಯರ ಏಕಾಂತವಿಹಾರ, ನಳನ ದಿನಚರ್ಯೆಗಳೊಡನೆ ಕಥೆ ಮುಗಿಯುತ್ತದೆ.



ನಳದಮಯಂತಿಯರದು ಪ್ರಸಿದ್ಧವಾದ ಸುಂದರ ಕಥೆ. ನೈಷಧದಲ್ಲಿ ಇದು ಅರ್ಧದಲ್ಲಿಯೇ ನಿಂತುಹೋಗಿದೆ. ಕಾರಣವನ್ನು ಹೇಳುವುದು ಕಷ್ಟ. ಉಪಲಬ್ಧವಾಗಿರುವ ನೈಷಧದಲ್ಲಿ 22 ಸರ್ಗಗಳೂ, 2804 ಶ್ಲೋಕಗಳೂ ಇವೆ. ಇದು 60 ರಿಂದ 120 ಸರ್ಗಗಳವರೆಗಿದ್ದ ಬಹು ವಿಸ್ತೃತವಾದ ಮಹಾಕಾವ್ಯವಾಗಿತ್ತೆಂದೂ ಉಳಿದ ಸರ್ಗಗಳು ನಷ್ಟವಾಗಿವೆಯೆಂದೂ ಕಿಂವದಂತಿ ಇದೆ*. ವಿವಾಹೋತ್ತರ ಘಟನೆಗಳಲ್ಲಿ ಹೃದಯಸ್ಪರ್ಶಿಯಾದ ಸನ್ನಿವೇಶವನ್ನು ಚಿತ್ರಿಸಲು ಮಹಾಕವಿಗೆ ವಿಪುಲವಾದ ಅವಕಾಶವುಂಟು. ಆದರೆ ಶ್ರೀಹರ್ಷನು ತನ್ನ ಅಸಾಧಾರಣವಾದ ಪ್ರತಿಭಾಪಾಂಡಿತ್ಯಗಳನ್ನು ಪೂರ್ವಕಥೆಯಲ್ಲಿಯೇ ಅಳತೆಗೆಟ್ಟು ವಿನಿಯೋಗಿಸಿದ್ದಾನೆ. ದಮಯಂತೀ ಸ್ವಯಂವರವನ್ನು ವರ್ಣಿಸಲು 5 ಸರ್ಗಗಳಲ್ಲಿ 500 ಕ್ಕಿಂತಲೂ ಹೆಚ್ಚು ಶ್ಲೋಕಗಳನ್ನು ಬಳಸಿದ್ದಾನೆ. 7ನೆಯ ಸರ್ಗದಲ್ಲಿ ನಳನು ದಮಯಂತಿಯ ಅಂತಃಪುರವನ್ನು ಪ್ರವೇಶಿಸಿ ದೂರದಲ್ಲಿ ನಿಂತು ಆಕೆಯ ಸೌಂದರ್ಯವನ್ನು ಸುಮಾರು 100 ಶ್ಲೋಕಗಳಿಂದ ವರ್ಣಿಸುತ್ತಾನೆ.

ಶೃಂಗಾರದ ವರ್ಣನೆ ಕೆಲವೆಡೆ ಸಭ್ಯತೆಯ ಸೀಮೆಯನ್ನು ಉಲ್ಲಂಘಿಸಿದೆ. ಕಾಮಶಾಸ್ತ್ರದಲ್ಲಿಯೂ ತನಗೆ ಪಾಂಡಿತ್ಯವುಂಟೆಂದು ತೋರಿಸುವುದು ಕವಿಯ ಉದ್ದೇಶವಾಗಿರಬೇಕು. ಅಯುಕ್ತವೆನಿಸುವ ಕೆಲವು ಸಂದರ್ಭಗಳನ್ನು ಬಿಟ್ಟರೆ ಉಳಿದ ಭಾಗದಲ್ಲಿ ಕವಿಯ ಪ್ರತಿಭೆ, ಪಾಂಡಿತ್ಯ, ಕಲ್ಪನಾಶಕ್ತಿಗಳ ಪರಾಕಾಷ್ಠೆಯನ್ನು ಕಾಣಬಹುದು. ತರ್ಕ, ವ್ಯಾಕರಣ, ವೇದಾಂತಾದಿ ಶಾಸ್ತ್ರಗಳ ಪ್ರಕ್ರಿಯೆ ಕವಿಗೆ ಕರತಲಾಮಲಕ. ಆ ಪ್ರಕ್ರಿಯೆಯನ್ನು ಕಾವ್ಯದಲ್ಲಿ ಉಪಯೋಗಿಸಿಕೊಂಡು ವರ್ಣಿಸುವ ಒಂದು ವೈಚಿತ್ರ್ಯ ಶ್ರೀಹರ್ಷನದು. ಪುರಾಣಗಳೆಲ್ಲ ಅವನ ವಶವರ್ತಿಗಳು. ಸ್ವಯಂವರಪ್ರಸಂಗದಲ್ಲಿ ವಿವಿಧ ದೇಶದ ರಾಜರನ್ನು ವರ್ಣಿಸುವಾಗ ವಿಷ್ಣು ಪುರಾಣೋಕ್ತ ಕ್ರಮವು ಕಂಡುಬರುತ್ತದೆ. 17ನೆಯ ಸರ್ಗದಲ್ಲಿ ನಾಸ್ತಿಕಮತದ ತಿರುಳನ್ನು ಚಮತ್ಕಾರವಾಗಿ ಪ್ರತಿಪಾದಿಸಿದ್ದಾನೆ.

ನೈಷಧವು ಪ್ರಸನ್ನ ರಮಣೀಯವೂ ಹೌದು; ಗಭೀರಭೀಷಣವೂ ಹೌದು. ಕೆಲವೆಡೆ ಪದಲಾಲಿತ್ಯ, ಛಂದಸ್ಸಿನ ಓಟ, ಅರ್ಥಮಾಧುರ್ಯ, ಭಾವಪುಷ್ಟಿ, ಚಮತ್ಕಾರಿಯಾದ ಸಂಭಾಷಣೆಗಳು ಮನಸೆಳೆಯುತ್ತವೆ. ಕೆಲವೆಡೆ ಶಬ್ದಕರ್ಕಶತೆ, ದುರೂಹವಾದ ಕಲ್ಪನೆ, ಅರ್ಥಕ್ಲಿಷ್ಟತೆ, ಶ್ಲೇಷ ವಿಜೃಂಭಣೆಗಳು ಪಂಡಿತರಲ್ಲದೆ ಓದುಗರನ್ನು ವಿಮುಖಗೊಳಿಸುತ್ತವೆ. ಈ ಕಾವ್ಯದಲ್ಲಿ ಗ್ರಂಥ ಗ್ರಂಥಿಯನ್ನು ಬೇಕೆಂದೇ ತಾನು ಇರಿಸಿದ್ದೇನೆಂದೂ, ಗುರುಸೇವೆ ಮಾಡಿ ವಿದ್ವಾಂಸನಾಗಿರುವ ಪರಿಷ್ಕೃತಮತಿಯು ಮಾತ್ರ ಇದನ್ನೋದಿ ಆನಂದಿಸಬಹುದೆಂದೂ ಕವಿ ಹೇಳುತ್ತಾನೆ–

ಗ್ರಂಥಗ್ರಂಥಿರಿಹ ಕ್ವಚಿತ್ ಕ್ವಚಿದಪಿ ನ್ಯಾಸಿ ಪ್ರಯತ್ನಾನ್ಮಯಾ
ಪ್ರಾಜ್ಞಂಮನ್ಯಮನಾ ಹಠೇನ ಪಠಿತೀ ಮಾಸ್ಮಿನ್ ಖಲಃ ಖೇಲತು ।
ಶ್ರದ್ಧಾರಾದ್ಧಗುರುಶ್ಲಥೀಕೃತದೃಢಗ್ರಂಥಿಃ ಸಮಾಸಾದಯ–
ತ್ವೇತತ್ಕಾವ್ಯರಸೋರ್ಮಿಮಜ್ಜನಸುಖವ್ಯಾಸಜ್ಜನಂ ಸಜ್ಜನಃ ॥

* 'ವಂದಾರುಭಟ್ಟ' ಎಂಬುವನು ಉತ್ತರನೈಷಧವೆಂಬ 16 ಸರ್ಗಗಳ ಕಾವ್ಯವನ್ನು ಬರೆದಿದ್ದಾನೆ. ಇದು ಶ್ರೀಹರ್ಷನ ಕಾವ್ಯದ ಪೂರ್ತಿಗಾಗಿ ಬರೆದಿದ್ದು. ಈ ಕವಿ ಕೊಚ್ಚಿನ್ ದೊರೆಯ ಆಶ್ರಯದಲ್ಲಿದ್ದನು. ಕಾಲ ಸುಮಾರು 1825. ಬಾಲಾಮಂತ್ರವನ್ನು ಜಪಿಸಿ ಸಿದ್ಧಿಯನ್ನು ಪಡೆದು ಈ ಕಾವ್ಯವನ್ನು ಬರೆದನಂತೆ ಶ್ರೀಹರ್ಷನ ಶೈಲಿಯನ್ನು ಅನುಕರಿಸಿದ್ದಾನೆ.

ಶ್ರೀಹರ್ಷನಿಗೆ ಸ್ವಭಾವವೋಕ್ತಿಗಿಂತ ಶ್ಲೇಷ–ಉತ್ಪ್ರೇಕ್ಷೆ–ಅತಿಶಯೋಕ್ತಿ ಮುಂತಾದವು ಪ್ರಿಯ, ಕಣ್ಣುಕೋರೈಸುವ ವಸ್ತ್ರಭೂಷಣಗಳಿಂದ ಕಾವ್ಯವನಿತೆಯನ್ನು ಅಲಂಕರಿಸುತ್ತಾನೆ. ಅವನ ವರ್ಣನಾ ವಿಲಾಸಗಳಿಗೂ, ನೂತನ ಶಬ್ದಜಾಲಗಳಿಗೂ ಅಂತ್ಯವೇ ಇಲ್ಲ. ಪ್ರೌಢನಾದ ಈ ವಿದ್ವತ್ಕವಿಯಲ್ಲಿ ಪರಿಹಾಸಪ್ರಿಯತೆ ಒಂದು ವಿಶೇಷಗುಣ. ಕಲ್ಪನಾಜಟಿಲತೆಯಲ್ಲಿಯೂ ಹಾಸ್ಯ... ಮಿನುಗುತ್ತದೆ. ಮಹಾಕಾವ್ಯದಲ್ಲಿ ಸಾಂಪ್ರದಾಯಿಕವಾದ ಜಲಕ್ರೀಡೆ. ಯುದ್ಧ– ಮುಂತಾದುವುಗಳ ವರ್ಣನೆ ಇಲ್ಲ. ಪ್ರಧಾನವಾದದ್ದು ಶೃಂಗಾರ. ಕವಿಯೇ ಹೇಳಿರುವಂತೆ ನೈಷಧವು 'ಅತಿನವ್ಯ - 'ಕವಿಕುಲಾದೃಷ್ಟಾಧ್ವಪಾಂಥ', 'ಮಹಾಚಾರು'. *

ವ್ಯಾಖ್ಯಾನಕಾರರು :

ನೈಷಧಕ್ಕೆ ಸುಮಾರು 30 ವ್ಯಾಖ್ಯಾನಗಳು ದೊರಕಿವೆ, ಮಲ್ಲಿನಾಥನ "ಜೀವಾತು', ನಾರಾಯಣಭಟ್ಟನ ' ನೈಷಧಪ್ರಕಾಶ ' ಗಳು ಮುದ್ರಿತವಾಗಿವೆ. ಜೀವಾತು "ದಂಡಾನ್ವಯ" ದಲ್ಲಿ ಮಾಡಿದ ಸರಳ ವ್ಯಾಖ್ಯಾನ. ನೈಷಧಪ್ರಕಾಶವು " ಖಂಡಾನ್ವಯ "ದಲ್ಲಿ ಬರೆದ ವಿಸ್ತೃತ ಟೀಕೆ.

1. ಹಂಸ ದಮಯಂತಿಯರ ಸಂಭಾಷಣೆ ಮನೋಹರವಾಗಿದೆ, ಚಾತುರ್ಯಪೂರ್ಣವಾಗಿದೆ. ಪ್ರಕಟವಾಗಿ ತೋರುವ ಅರ್ಥ ಒಂದು, ಗೂಢವಾದ ಆಶಯ ಇನ್ನೊಂದು.

ದಮಯಂತಿ :

ಕಾ ನಾಮ ಬಾಲಾ ದ್ವಿಜರಾಜಪಾಣಿಗ್ರಹಾಭಿಲಾಷಂ ಕಥಯೇದಭಿಜ್ಞಾ (3-59)

(ಅ) ಎಲೈ ಹಂಸವೇ, ಯಾವ ಬುದ್ಧಿವಂತೆಯಾದ ಬಾಲೆ ಚಂದ್ರನನ್ನು ಕೈಯಲ್ಲಿ ಹಿಡಿದುಕೊಳ್ಳಬೇಕೆಂಬ ಅಭಿಲಾಷೆಯನ್ನು ಲಜ್ಜೆ ಇಲ್ಲದೆ ಹೇಳಿಯಾಳು ? (ಪ್ರಕಟ)

(ಆ) ನಳರಾಜನನ್ನು ಮದುವೆಯಾಗಬೇಕೆಂಬ ಇಚ್ಛೆಯನ್ನು ಯಾವ ಬುದ್ಧಿವಂತಳಾದ ಬಾಲೆ ಲಜ್ಜೆಯಿಲ್ಲದೆ ತಿಳಿಸಿಯಾಳು ? (ಗೂಢ)

ಹಂಸ :

ರಾಜಪುತ್ರಿ, ನಿನ್ನ ಬಯಕೆ ಎಷ್ಟೇ ದುರ್ಲಭವಾಗಿರಲಿ. ಸರ್ವಪ್ರಪಂಚದಲ್ಲಿರುವ ಲಂಕೆಯ ವಿಷಯವಾಗಿರಲಿ, ಹೇಳು, ಸಾಧಿಸಿಕೊಡುತ್ತೇನೆ.

* ನಳಕಥಾಸಾಹಿತ್ಯ :—ಕಾಳಿದಾಸನದೆನ್ನಲಾಗುವ ನಳೋದಯ, ವಾಮನಭಟ್ಟ ಬಾಣನ ನಳಾಭ್ಯುದಯ, ಚಕ್ರಕವಿಯ ದಮಯಂತೀಪರಿಣಯ, ಹರದತ್ತನ ರಾಘವನೈಷದೀಯ, ಘನ ಶ್ಯಾಮನ ... ಅಬೋಧಾಕರ, ನಾರಾಯಣಶಾಸ್ತ್ರಿಯ ಕಲಿವಿಡಂಬನ, ವಂದಾರುಭಟ್ಟನ ಉತ್ತರನೈಷಧ, ವಿದ್ಯಾಧರನ ... ಮುಖ್ಯವಾದ ಕಾವ್ಯಗಳು. ತ್ರಿವಿಕ್ರಮನ ... ಪ್ರತಿನೈಷಧ, ಕೃಷ್ಣಾನಂದನ ಸಹೃದಯಾನಂದ—ಇವು ... ನಳಚಂಪುವನ್ನು ಬರೆದಿದ್ದಾನೆ. ಕೆಲವು ನಾಟಕಗಳೂ ಇವೆ. ನೀಲಕಂಠನ ನಳಚರಿತ, ವೆಂಕಟರಂಗನಾಥನ ಮಂಜುಲನೈಷಧ, ರಾಮಶಾಸ್ತ್ರಿಯ ಭೈಮೀಪರಿಣಯ, ಜೀವಬುಧನ ನಳಾನಂದ, ರಾಮಚಂದ್ರನ ನಳವಿಲಾಸ, ಕಾಳಿಪಾದತರ್ಕಾಚಾರ್ಯನ ನಳದಮಯಂತೀಯ, ಸುದರ್ಶನಾಚಾರ್ಯನ ಅನರ್ಘ... ಚರಿತ್ರಮಹಾನಾಟಕ—ಇತ್ಯಾದಿ. ನೈಷಧದ ಪ್ರಭಾವದಿಂದ ಈ ರೀತಿಯಲ್ಲಿ ಉತ್ತರಕಾಲದ ಸಾಹಿತ್ಯ ವಿಪುಲವಾಗಿ ಬೆಳೆಯುವಂತಾಯಿತು.



ದಮಯಂತಿ :—ಚೇತೋ ನ ಲಂಕಾಮಯತೇ ಮದೀಯಂ ನಾನ್ಯತ್ರ
ಕುತ್ರಾಪಿ ಚ ಸಾಭಿಲಾಷಂ ॥

(ಅ) ಮದೀಯಂ ಚೇತಃ ಲಂಕಾಂ ನ ಅಯತೇ (ಪ್ರಕಟ)

(ಆ) ಮದೀಯಂ ಚೇತಃ ನಲು ಕಾಮಯತೇ ।
ಅಪೇಕ್ಷೆ ನೆರವೇರದಿದ್ದಲ್ಲಿ—ಅನಲಂ ಕಾಮಯತೇ । (ಗೂಢ)

2. ನಳನು ಯಾಚಕರಿಗೆ 'ಇಲ್ಲ' ಎಂದು ಹೇಳುವುದೇ ಇಲ್ಲ. ಅವನು 'ನ' ಕಾರವನು ಕಲಿತೇ ಇಲ್ಲ. ಅಥವಾ ಕಲಿತದ್ದು ಮರೆತುಹೋಗಿರಬಹುದು !

ಅಕ್ಷರಾಣಿ ಪಠತಾ ಕಿಮಪಾಠಿ ಪ್ರಸ್ಮೃತಃ ಕಿಮಥವಾ ಪಠಿತೋಽಪಿ ।
ಇತ್ಥಮರ್ಥಿಜನಸಂಶಯದೋಲಾಖೇಲನಂ ಖಲು ಚಕಾರ ನಕಾರಃ ॥ (5–121)

3. ವಿಚಿತ್ರಕಲ್ಪನೆಗೆ ಇದು ಉದಾಹರಣೆ—ಬ್ರಹ್ಮನು ಚಂದ್ರನ ಸಾರವಾದ ಮಧ್ಯ ಭಾಗವನ್ನು ಕಿತ್ತು ಅದರಿಂದ ದಮಯಂತಿಯ ಮುಖವನ್ನು ನಿರ್ಮಿಸಿರಬಹುದು ! ಆದುದರಿಂದಲೇ ಚಂದ್ರಮಂಡಲದಲ್ಲಿ ರಂಧ್ರವಾಗಿ ಹಿಂಬದಿಯ ನೀಲಿಯ ಆಕಾಶವು ಕಾಣುತ್ತದೆ!

ಹೃತಸಾರಮಿವೇಂದುಮಂಡಲಂ ದಮಯಂತೀವದನಾಯ ವೇಧಸಾ ।
ಕೃತಮಧ್ಯಬಿಲಂ ವಿಲೋಕ್ಯತೇ ಧೃತಗಂಭೀರಖನೀಖನೀಲಿಮ ॥ (2–25)

4. ಇದು ಸೂರ್ಯೋದಯದ ವರ್ಣನೆ. ಸೂರ್ಯನೆಂಬ ವ್ಯಾಧನು ಕತ್ತಲೆಯೆಂಬ ಕಾಗೆಗಳನ್ನು ಕೊಲ್ಲುತ್ತ ಬಂದನು. ತನ್ನ ಮೊಲವನ್ನು ಕೊಂದುಬಿಟ್ಟಾನೆಂದು ಹೆದರಿ ಚಂದ್ರನು ಪಶ್ಚಿಮದಿಕ್ಕಿಗೆ ಓಡಿದನು ! ತಾರೆಗಳೆಂಬ ಪಾರಿವಾಳಗಳು ಹಾರಿಹೋದವು—

ನಭಸಿ ಮಹಸಾಂ ಧ್ವಾಂತಧ್ವಾಂಕ್ಷಪ್ರಮಾಪಣಪತ್ರಿಣಾಂ
ಇಹ ವಿಹರಣೈಃ ಶ್ಯೈನಂಪಾತಾಂ ರವೇರವಧಾರಯನ್ ।
ಶಶವಿಶಸನತ್ರಾಸಾದಾಶಾಮಯಾಚ್ಚರಮಾಂ ಶಶೀ
ತದಧಿಗಮನಾತ್ತಾರಾಪಾರಾವತೈರುದಡೀಯತ ॥ (19–12)

5. ಸ್ವಯಂವರಮಂಟಪದಲ್ಲಿ ನೆರೆದಿದ್ದ ರಾಜರನ್ನು ವರ್ಣಿಸಿ ಹೇಳಲು ಸಾಕ್ಷಾತ್ ಸರಸ್ವತಿಯೇ ದಮಯಂತಿಯ ನೆರವಿಗೆ ಬಂದಳು—

ಮಧ್ಯೇಸಭಂ ಸಾವತತಾರ ಬಾಲಾ ಗಂಧರ್ವವಿದ್ಯಾಧರಕಂಠನಾಲಾ ।
ತ್ರಯೀಮಯೀ ಭೂತವಲೀವಿಭಂಗಾ ಸಾಹಿತ್ಯನಿರ್ವರ್ತಿತ ದೃಕ್‌ತರಂಗಾ ॥
(10-74)

ಸರಸ್ವತಿಯಿಂದಲೇ ನುಡಿಸಲು ಹೊರಟಾಗ ಕವಿಯ ಜವಾಬ್ದಾರಿ ಹೆಚ್ಚುತ್ತದೆ. ತನ್ನ ವೈದುಷ್ಯವನ್ನು ಶ್ರೀಹರ್ಷನು ಈ ಪ್ರಸಂಗದಲ್ಲಿ ಮೆರೆಸಿದ್ದಾನೆ. ರಾಜರನ್ನು ವರ್ಣಿಸಿದ ಮೇಲೆ ನಳನ ಬಳಿಗೆ ದಮಯಂತಿಯನ್ನು ಸರಸ್ವತಿ ಕರೆತರುತ್ತಾಳೆ. ಇಂದ್ರ, ಅಗ್ನಿ, ಯಮ, ವರುಣರು ನಳನ ರೂಪವನ್ನು ಧರಿಸಿ ಕುಳಿತಿದ್ದಾರೆ. ಐದನೆಯವನು ನಳನೇ, ಇಲ್ಲಿ ಸರಸ್ವತಿಗೆ ಇಕ್ಕಟ್ಟಿನ ಪ್ರಸಂಗ ಬರುತ್ತದೆ. ಇವರು ಇಂದ್ರಾದಿ ದೇವತೆಗಳೆಂದು ಹೇಳಿಬಿಟ್ಟರೆ ಅವರಿಗೆ ಅಸಮಾಧಾನ

ವಾಗುತ್ತದೆ. ನಳನೆಂದರೆ ಸುಳ್ಳಾಗುತ್ತದೆ! ಇದರಿಂದ ಪಾರಾಗಲು ಅವಳು ಅರ್ಥದ್ವಯವನ್ನು ಇಟ್ಟು ಮಾತನಾಡುತ್ತಾಳೆ. ಒಂದು ಆಯಾ ದೇವತೆಗಳ ಪರ, ಇನ್ನೊಂದು ನಳನ ಪರ. ಕಡೆಗೆ ನಿಜವಾದ ನಳನ ಬಳಿಗೆ ಬಂದಾಗ ಈ ಬಿಕ್ಕಟ್ಟು ತೀವ್ರವಾಗುತ್ತದೆ. ಅವನು ನಳನೆಂದೂ ತಿಳಿಸಬೇಕು. ನಾಲ್ವರು ದೇವತೆಗಳ ಪರವಾಗಿಯೂ ಹೇಳಬೇಕು. ಅವರನ್ನು ವರಿಸಬೇಡ, ಈ ನಳನನ್ನೇ ವರಿಸು ಎಂದೂ ತಿಳಿಸಬೇಕು. ವ್ಯಾಖ್ಯಾನಕಾರರು ಆರು ಪ್ರಕಾರವಾಗಿ ಅರ್ಥ ಹೇಳಿರುವ ಶ್ಲೋಕ ಇದು :—

ದೇವಃ ಪತಿರ್ವಿದುಷಿ ನೈಷಧರಾಜಗತ್ಯಾ
ನಿರ್ಣೀಯತೇ ನ ಕಿಮು ನ ವ್ರಿಯತೇ ಭವತ್ಯಾ ।
ನಾಯಂ ನಲಿಃ ಖಲು ತವಾತಿಮಹಾನಲಾಭೋ
ಯದ್ಯೇನಮುಜ್ಝಸಿ ನರಃ ಕತರಃ ಪರಸ್ತೇ ॥ (13–34)

ಕಠಿನ ಪದಗಳ ದೀರ್ಘಸಮಾಸವೇನೂ ಇಲ್ಲದಿರುವುದೊಂದು ವಿಶೇಷ. ಈ ಶ್ಲೋಕದ ಅರ್ಥ ಹೀಗಿದೆ :—

**(ಇಂದ್ರನ ಪರವಾಗಿ)** :—ವಿದುಷಿ = ವಿದುಷಿಯಾದ ಹೇ ದಮಯಂತಿ; ಏಷಃ ನಾ = ಈ ಪುರುಷನು ; ಧರಾಜಗತ್ಯಾಃ = ಭೂಲೋಕದ ; ಪತಿಃ = ಒಡೆಯನೆಂದು ; ನ ನಿಶ್ಚೀಯತೇ = ನಿಶ್ಚಯಿಸಲ್ಪಡುವುದಿಲ್ಲ ; (ಈತನ) ದೇವಃ ಪತಿಃ = ದೇವತೆಗಳ ಒಡೆಯನು—ದೇವೇಂದ್ರನು ; ಭವತ್ಯಾ = ನಿನ್ನಿಂದ ; ಕಿಮು = ಏಕೆ; ನ ವ್ರಿಯತೇ = ವರಿಸಲ್ಪಡುವುದಿಲ್ಲ ? ಅಯಂ = ಇವನು ; ಖಲು = ನಿಶ್ಚಯವಾಗಿಯೂ; ನ ನಲಃ = ನಳರಾಜನಲ್ಲ; ಅತಿಮಹಾಃ = ಅತ್ಯಂತ ತೇಜಸ್ವಿಯಾದ ಈತನು; ತವ = ನಿನಗೆ ; ನಲಾಭಃ ನಳನಂತೆ ತೋರುತ್ತಾನೆ; ಅ = ವಿಷ್ಣುವಿಗೆ ; ಇನಂ = ಅಗ್ರಜನಾದ ಇವನನ್ನು ; ಯದಿ ಉಜ್ಝಸಿ = ನೀನು ತ್ಯಜಿಸುವುದಾದರೆ ; ತೇ = ನಿನಗೆ, ಕತರಃ = ಇನ್ನು ಯಾವ; ಪರಃ = ಅನ್ಯನು ; ವರಃ = ಪತಿಯಾದಾನು ?

ಈತನನ್ನು ವರಿಸಬೇಡವೆಂಬ ಅರ್ಥವೂ ಇದರಲ್ಲುಂಟು. ಹೇಗೆಂದರೆ : ಹೇ ವಿದುಷಿ, ನೈಷಧರಾಜಗತ್ಯಾ = ನಳನನ್ನೇ ಗತಿಯಾಗಿ ಆಶ್ರಯಿಸಿದ; ಭವತ್ಯಾ, ದೇವಃ = ಈ ದೇವತೆಯು ಪತಿಃ = ಪತಿಯೆಂದು; ನ ನಿರ್ಣೀಯತೇ = ನಿರ್ಣಯಿಸಲ್ಪಡುವುದಿಲ್ಲವೇ ?—ಆದ್ದರಿಂದಲೇ ನ ವ್ರಿಯತೇ = ವರಿಸಲ್ಪಡುವುದಿಲ್ಲ; ಅಯಂ ತವ ನಲಃ ನ ಖಲು = ಇವನು ನಿನಗೆ ಬೇಕಾದ ನಳನಲ್ಲ; (ಇವನನ್ನು ಮದುವೆಯಾದರೆ) ಅತಿಮಹಾನ್ ಅಲಾಭಃ = ಬಹಳ ದೊಡ್ಡ ನಷ್ಟವೇ ಸರಿ ! ಯದ್ಯೇನಮುಜ್ಝಸಿ = ಈತನನ್ನು ತ್ಯಜಿಸಿದರೆ; ಕತರಃ = ಕ—ಸುಖದಲ್ಲಿ ; ತರಃ = ತೇಲತಕ್ಕ ; ಪರಃ = ಶ್ರೇಷ್ಠನಾದ ನಳನು ; ತೇ = ನಿನಗೆ ; ವರಃ = ವರನಾಗುವನು.

(ಅಗ್ನಿ) : ಏಷಃ = ಈತನು; ಧರ = ವಾಹನವಾದ; ಅಜ = ಮೇಕೆಯ; ಗತ್ಯಾ = ಗತಿಯಿಂದ ಕೂಡಿದ; ದೇವಃ—ದೇವನಾದ ಅಗ್ನಿ, ಉಳಿದ ಅರ್ಥದ ಯೋಜನೆ ಎಲ್ಲವೂ ಹಿಂದಿನಂತೆ.

(ಯಮ) :—ಧರಾ = ಭೂಮಿಯನ್ನು; ಅಜ = ಕೊಂಬಿನಿಂದಲೂ, ಗೊರಸಿನಿಂದಲೂ ಕಿತ್ತೆಸೆಯುವ ಕೋಣನಲ್ಲಿ; ಗತ್ಯಾ = ಗಮನದಿಂದ ಕೂಡಿದ ; ದೇವಃ = ಯಮದೇವನು



ಅತಿಮಹ = ಅತ್ಯಂತ ಪೂಜೆಯನ್ನು ; ಪಡೆಯತಕ್ಕ ; ಅನಲಾಭಃ = ಅಗ್ನಿ ಸಮಾನ ಅಥವಾ ಅತ್ಯಂತ ಮಹತ್ತರಗಳಾದ ; ಅನ = ಪ್ರಾಣಗಳ ; ಲಾಭಃ = ಲಾಭವುಳ್ಳವನು.

(ವರುಣ) : ಧರಾಜ = ಭೂಮಿಯಲ್ಲಿ ಜನಿಸುವ ಪ್ರಾಣಿಗಳ ; ಗತ್ಯಾಃ = ಜೀವನವಾದ ಜಲದ ; ಪತಿಃ = ಒಡೆಯನು ; ಅಥವಾ ಧರ = ಜಗತ್‌ಪೋಷಕನಾದ ; ಅಜ = ವಿಷ್ಣುವಿನ ; ಗತ್ಯಾಃ = ಆಶ್ರಯವಾದ ಸಮುದ್ರನ ; ಪತಿಃ = ಒಡೆಯ ; ಅನಲ = ಬೆಂಕಿಯ ; ಅಭಾ = ನಾಶವು ಯಾರಿಂದಲೋ ಅಂಥವನು.

(ನಳ) : ನೈಷಧರಾಜಗತ್ಯಾ = ನೈಷಧರಾಜನಾದ ನಳನೆಂಬ ಜ್ಞಾನದಿಂದ ; ಏಷಃ ದೇವಃ = ಈ ರಾಜನು ; ಪತಿಃ = ಪತಿಯಾಗಿ ; ಕಿಮು ನ ನಿರ್ಣೀಯಂತೇ ? ಕಿಮು ನ ವ್ರಿಯಂತೇ ! ಅಯಂ ನಾ = ಈ ಪುರುಷನು ; ಖಲು = ನಿಶ್ಚಯವಾಗಿಯೂ ; ನಲಃ = ನಳರಾಜನು ; ತವ = ನಿನಗೆ ; ಅತಿಮಹ = ಅತ್ಯಂತ ಉತ್ಸವಕಾರಿಯಾದ ; ಅನಲಾಭಃ = ಅಗ್ನಿಯಂತೆ ತೇಜಸ್ವಿಯಾದವನು ; ಯದ್ಯೇನಂ............ = ಇವನನ್ನು ಬಿಟ್ಟರೆ ; ಇನ್ನು ಯಾವನು ನಿನಗೆ ಯೋಗ್ಯ ವರನಾದಾನು ? ಅಥವಾ ಇವನನ್ನು ತ್ಯಜಿಸಿದರೆ ; ನಿನಗೆ ಅತಿಮಹಾನ್ ಅಲಾಭಃ ವಸ್ತು, ಧರಾಜ = ಪ್ರಾಣಿಗಳ ; ಗತ್ಯಾ = ಗತಿಯಾದ ; ಸನಿಮಿಷನೇತ್ರತ್ವ, ಧರಾಸ್ಪರ್ಶಿತ್ವರೂಪ ಚಿಹ್ನೆಯಿಂದ ; ದೇವಃನ = ದೇವತೆಯಲ್ಲವೆಂದು, ಕಿಮಿತಿ ನ ನಿರ್ಣೀಯತೇ ?

17ನೆಯ ಸರ್ಗದಲ್ಲಿ ಕಲಿಪುರುಷನ ಸಂದರ್ಭವು ವಿನೋದಪೂರ್ಣ. ಸಾಂಪ್ರದಾಯಿಕ ವಿಧಾನವನ್ನು ಉಲ್ಲಂಘಿಸಿ ತಮಗೆ ತೋಚಿದಂತೆ ಶಾಸ್ತ್ರವಚನಗಳಿಗೆ ಅರ್ಥ ಹೇಳತಕ್ಕವರನ್ನು ವ್ಯಂಗ್ಯವಾಗಿ ಟೀಕಿಸಿದ್ದಾನೆ ಶ್ರೀಹರ್ಷ.

1. ಪಾಪಕಾರ್ಯವನ್ನು ಬಲಾತ್ಕಾರದಿಂದ ಮಾಡಿರಿ ! ಬಲಾತ್ಕಾರದಿಂದ ಮಾಡಿದ ಕೃತ್ಯವು ದೋಷಾವಹವಲ್ಲ—

ಬಲಾತ್ಕುರುತ ಪಾಪಾನಿ ಸಂತು ತಾನ್ಯಕೃತಾನಿ ವಃ ।
ಸರ್ವಾನ್ ಬಲಕೃತಾನ್ ದೋಷಾನ್ ಅಕೃತಾನ್ ಮನುರಬ್ರವೀತ್ ॥ 49

2. ನಪುಂಸಕನು ಮಾತ್ರ ಮೋಕ್ಷಕ್ಕೆ ಅಧಿಕಾರಿಯೆಂದು ಪಾಣಿನಿ ಹೇಳಿದ್ದಾನೆ !

ಉಭಯೀ ಪ್ರಕೃತಿಃ ಕಾಮೇ ಸಜ್ಜೇದಿತಿ ಮುನೇರ್ಮತಂ ।
ಅಪವರ್ಗೇ ತೃತೀಯೇತಿ ಭಣತಃ ಪಾಣಿನೇರಪಿ ॥ 70

ಕೆಲವೆಡೆ ಲಲಿತಪದಗಳ ಶಯ್ಯೆ ಮನೋಜ್ಞವಾಗಿದೆ —

1. ಯಾಚಮಾನ ಜನಮಾನಸವೃತ್ತೇಃ ಪೂರಣಾಯ ಬತ ಜನ್ಮ ನ ಯಸ್ಯ
ತೇನ ಭೂಮಿರತಿಭಾರವತೀಯಂ ನ ದ್ರುಮೈರ್ನ ಗಿರಿಭಿರ್ನ ಸಮುದ್ರೈಃ ॥ (5–88)

2. ಸಸ್ಮಾರ ಸಸ್ಮರಮನಾಃ ಪ್ರಿಯದೂತಭೂತಂ
ತತ್ರಾಮರಾಲಯಮರಾಲಮರಾಲಕೇಶೀ ॥ (13–40)

## ಕಾವ್ಯಪ್ರಶಂಸೆ

1. ನೈಷಧಂ ವಿದ್ವದೌಷಧಮ್ ।
2. ಉದಿತೇ ನೈಷಧೇ ಕಾವ್ಯೇ ಕ್ವ ಮಾಘಃ ಕ್ವ ಚ ಭಾರವಿಃ ॥

## ಸುಭಾಷಿತಗಳು

1. ತ್ಯಜಂತ್ಯಸೂನ್ ಶರ್ಮ ಚ ಮಾನಿನೋ ವರಂ
ತ್ಯಜಂತಿ ನ ತ್ವೇಕಮಯಾಚಿತವ್ರತಂ । (1—50)
2. ಹ್ರದೇ ಗಭೀರೇ ಹೃದಿ ಚಾವಗಾಢೇ ಶಂಸಂತಿ ಕಾರ್ಯಾವತರಂ ಹಿ ಸಂತಃ। (3–53)
3. ಬ್ರುವತೇ ಹಿ ಫಲೇನ ಸಾಧವೋ ನ ತು ಕಂಠೇನ ನಿಜೋಪಯೋಗಿತಾಂ ।(12–48)
4. ಪಿತ್ತೇನ ದೂನೇ ರಸನೇ ಸಿತಾಪಿ ತಿಕ್ತಾಯತೇ ಹಂಸಕುಲಾವತಂಸಃ । (3–94)
5. ಜನ್ಮಾಂತರಾಧಿಗತಕರ್ಮವಿಪಾಕಜನ್ಮೈವೋನ್ಮೀಲತಿ ಕ್ವಚನ ಕಸ್ಯಚನಾನುರಾಗಃ । (13–39)
6. ಅಪಾಂ ಹಿ ತೃಪ್ತಾಯ ನ ವಾರಿಧಾರಾ ಸ್ವಾದುಃ ಸುಗಂಧಿಃ ಸ್ವದತೇ ತುಷಾರಾ । (3–93)

———

## ಸಹೃದಯಾನಂದ (ಕ್ರಿ. ಶ. 13ನೆಯ ಶತಮಾನ)

ಇದರ ಕವಿ ಕೃಷ್ಣಾನಂದನು ಪುರಿಯ ನಿವಾಸಿ. ಕಪಿಂಜಲವಂಶದ ಕಾಯಸ್ಥ. ತಾನು ಮಹಾಪಾತ್ರನೆಂದು ಹೇಳಿಕೊಂಡಿದ್ದಾನೆ. ಪ್ರಾಯಶಃ ಸ್ಥಳೀಯ ರಾಜನ ಮಂತ್ರಿಯಾಗಿದ್ದಿರಬಹುದು. 14ನೆಯ ಶತಮಾನದ ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ (ನಿ. ಸಾ. ಪ್ರೆಸ್. ಪು. 429) ಇವನನ್ನು ಉಲ್ಲೇಖಿಸಿರುವುದರಿಂದ, ಈ ಕವಿ 13ನೆಯ ಶತಮಾನದವನಿರಬಹುದು.

**ಕಾವ್ಯಪರಿಚಯ :**

ಸಹೃದಯಾನಂದವು ಪ್ರಸಿದ್ಧವಾದ ನಳದಮಯಂತಿಯರ ಕಥೆಯನ್ನು ವರ್ಣಿಸುವ 15 ಸರ್ಗಗಳ ಕಾವ್ಯ. ಶ್ರೀಹರ್ಷನ ನೈಷಧದಂತೆ ಇದು 'ವಿದ್ವದೌಷಧ' ವಾಗಿಲ್ಲ. ವೈದರ್ಭಶೈಲಿಯಲ್ಲಿ ಹಿತಮಿತವರ್ಣನೆಗಳೊಂದಿಗೆ ನಳನ ಕಥೆ ಪೂರ್ತಿಯಾಗಿ ನಿರೂಪಿತವಾಗಿದೆ. ವ್ಯಾಸರು ಮಹಾಭಾರತದಲ್ಲಿ ನಳಚರಿತೆಯನ್ನು ವರ್ಣಿಸಿರುವಾಗ ತಾನು ಅದನ್ನು ಮತ್ತೆ ವರ್ಣಿಸುವುದು ಅವರೊಡನೆ ಸ್ಪರ್ಧೆಯಿಂದಲ್ಲ. ವ್ಯಾಸರೆದುರಿಗೆ ತಾನು ಮಿಂಚುಹುಳುವಿದ್ದಂತೆ ಎಂದು ಕೃಷ್ಣಾನಂದನು ಹೇಳಿಕೊಂಡಿದ್ದಾನೆ—

ನ ಸ್ಪರ್ಧಯಾ ವ್ಯೋಮ್ನಿ ಸಹಸ್ರಧಾಮ್ನಃ
ಖದ್ಯೋತಕಃ ಸ್ವಾಂ ದ್ಯುತಿಮಾತನೋತಿ ॥ (1–7)

ಕಾಳಿದಾಸನ ಕಾವ್ಯನಾಟಕಗಳ ಪ್ರಭಾವ ಸಹೃದಯಾನಂದದಲ್ಲಿ ಕೆಲವೆಡೆ ಅಭಿವ್ಯಕ್ತವಾಗಿದೆ.



ಉದಾಹರಣೆಗೆ :—

1. ಕೇದಗೆಯ ಸೌರಭದಿಂದ ಆಕೃಷ್ಟವಾದ ದುಂಬಿ, ಮುಳ್ಳಿರುವುದರಿಂದ ಹೂವನ್ನು ಚುಂಬಿಸಲಾರದು; ಬಿಡಲೂ ಆರದು—

ನಿರಾಕೃತಃ ಕಂಟಕಮಾಲಯಾ ಬಹಿಃ
ಸಮಾಹೃತಃ ಸೌರಭಸಂಪದಾಂತಿಕಂ ।
ಬಭೂವ ರೋಲಂಬಯುವಾ ನ ಚುಂಬಿತುಂ
ಪ್ರಭುರ್ವಿಯೋಕ್ತುಂ ಚ ಸುವರ್ಣಕೇತಕೀಂ ॥ (2–78)

ಇದನ್ನು ಶಾಕುಂತಲನಾಟಕದ 'ಭ್ರಮರ ಇವ ವಿಭಾತೇ ಕುಂದಮಂತಸ್ತುಷಾರಂ, ನ ಚ ಖಲು ಪರಿಭೋಕ್ತುಂ ನೈವ ಶಕ್ನೋಮಿ ಹಾತುಂ' ಎಂಬುದರೊಡನೆ ಹೋಲಿಸಬಹುದು.

2. ಇಂದ್ರಾದಿದೇವತೆಗಳು ಬೇಡಿಕೊಂಡರೂ ದಮಯಂತಿಯು ಅವರನ್ನು ಮದುವೆಯಾಗಲು ಒಪ್ಪದಿದ್ದಲ್ಲಿ, ಅಪ್ಸರೆಯರು ಅವರನ್ನು ಅಪಹಾಸ್ಯ ಮಾಡದಿರುವರೆ ?

ಅಭ್ಯರ್ಥನಾಭಂಗಪರಾಭವೇಣ
ನವಾವತಾರೇಣ ವಿಲಜ್ಜಮಾನಾನ್ ।
ಪ್ರತಿಪ್ರಯಾತಾನನವಾಪ್ಯ ಭೈಮೀಂ
ವಕ್ಷ್ಯಂತಿ ಕಿಂ ಕಿಂ ಸುರಸುಭ್ರುವೋ ನಃ ॥ (5–36)

ಇದನ್ನು ಕುಮಾರಸಂಭವದ 'ಅಭ್ಯರ್ಥನಾಭಂಗಭಯೇನ ಸಾಧುಃ, ಮಾಧ್ಯಸ್ಥ್ಯಮಿಷ್ಟೇಽಪ್ಯವಲಂಬತೇಽರ್ಥೇ' ಎಂಬುದರೊಡನೆ ಹೋಲಿಸಬಹುದು.

ಸಹೃದಯಾನಂದದಲ್ಲಿ ನಳನು ಹಂಸವನ್ನು ಹಿಡಿಯುವುದಿಲ್ಲ. ಹಿಡಿಯಲು ಉದ್ದೇಶಿಸಿದಾಗ ಅದೇ ಹತ್ತಿರ ಬಂದು ನಳನ ಸ್ನೇಹವನ್ನು ಮಾಡಿಕೊಳ್ಳುತ್ತದೆ. ದಮಯಂತಿಯ ಸೌಂದರ್ಯವನ್ನು ಇಂದ್ರನ ಸಭೆಯಲ್ಲಿ ನಾರದರ ಬಾಯಿಂದ ಕೇಳಿರುತ್ತದೆ. ದಮಯಂತೀಸ್ವಯಂವರವು ಸರಳವಾಗಿ ಬೇಗನೆ ನಡೆದುಹೋಗುತ್ತದೆ. ಇಂದ್ರಾದಿದೇವತೆಗಳು ಸ್ವಯಂವರ ಮಂಟಪಕ್ಕೆ ಆಗಮಿಸುವುದಿಲ್ಲ. ದಮಯಂತಿಗೆ ತಮ್ಮಲ್ಲಿ ಅಪೇಕ್ಷೆ ಇಲ್ಲವೆಂಬುದನ್ನು ತಿಳಿದು ಅವರೇ ಹೊರಟುಹೋಗುತ್ತಾರೆ.

ಕೃಷ್ಣಾನಂದನು ಶ್ಲೇಷಪ್ರಿಯನಲ್ಲ. ಅವನಲ್ಲಿ ಶಬ್ದಾಡಂಬರವಿಲ್ಲ. ಅವನ ಕಾವ್ಯ ಲಲಿತ ಮನೋಹರವಾಗಿದೆ. 'ಸಹೃದಯಾನಂದ' ಎಂಬ ಕಾವ್ಯನಾಮ ಅನ್ವರ್ಥ.

ದಮಯಂತಿಯ ಮೃದುಳವಾದ ಕೈ, ಕೆಳಮುಖವಾಗಿ ಹರಡಿದ ಕಮಲಿನಿಯಂತೆ ಇದ್ದಿತು—

ತದೀಯಮಾಲೋಹಿತಪಾಣಿಪಲ್ಲವಂ
ಶಿರೀಷಮಾಲಾಮೃದುಲಂ ಭುಜದ್ವಯಂ ।
ವಿಡಂಬಯದ್ಭಾತಿ ಮೃಣಾಲಕಾಂಡಯೋಃ
ಅಧೋಮುಖಸ್ಮೇರಸರೋಜಯೋಃ ಶ್ರಿಯಂ ॥ (2-55)

ಸಹೃದಯಾನಂದದ ಮೊದಲನೆಯ ಆರು ಸರ್ಗಗಳಿಗೆ ಶ್ರೀರಂಗದ ಶಠಕೋಪಾಚಾರ್ಯರು ವ್ಯಾಖ್ಯಾನವನ್ನು ಬರೆದಿದ್ದಾರೆ.

* * * *

## ನರನಾರಾಯಣಾನಂದ (ಕ್ರಿ.ಶ. 13ನೆಯ ಶತಮಾನ)

ಇದರ ಕವಿ ವಸ್ತುಪಾಲನು ಗುಜರಾತಿನ ಧೋಲ್ಕಸಂಸ್ಥಾನದ ದೊರೆ ಚಾಲುಕ್ಯ ಚಕ್ರವರ್ತಿ ವೀರಧವಳನ ಮಂತ್ರಿ. ದೊರೆಗಿಂತ ಮಂತ್ರಿಯೇ ಇತಿಹಾಸದಲ್ಲಿ ವಿಖ್ಯಾತನಾಗಿದ್ದಾನೆ. ವಸ್ತುಪಾಲನು ಅತ್ಯಂತ ಶೂರನೂ, ದಾನಧರ್ಮಗಳಲ್ಲಿ ನಿರತನೂ ಆಗಿದ್ದನಲ್ಲದೆ ಸ್ವತಃ ವಿದ್ವಾಂಸನೂ, ಕವಿಯೂ ಆಗಿ ವಿದ್ವಾಂಸರಿಗೆ ಆಶ್ರಯವನ್ನಿತ್ತಿದ್ದನು. ಇವನಿಗೆ ಲಘುಭೋಜ ರಾಜ, ಕವಿಕುಂಜರ, ಕವಿಚಕ್ರವರ್ತಿ—ಇತ್ಯಾದಿ ಬಿರುದುಗಳಿದ್ದವು. ಮೂರು ದೊಡ್ಡ ಪುಸ್ತಕ ಭಂಡಾರಗಳನ್ನು ಸ್ಥಾಪಿಸಿದ್ದನು. ವಿದ್ವತ್ಕವಿಗಳನ್ನು ಪ್ರೋತ್ಸಾಹಿಸಿ ಗ್ರಂಥಗಳನ್ನು ಬರೆಯಿಸು ತ್ತಿದ್ದನು. ನರಚಂದ್ರಸೂರಿಯ ಕಥಾರತ್ನಸಾಗರ, ನರೇಂದ್ರಪ್ರಭನ ಅಲಂಕಾರಮಹೋದ ಮುಂತಾದವು ವಸ್ತುಪಾಲನ ಪ್ರೇರಣೆಯಿಂದ ರಚಿತವಾದವು. ಸೋಮೇಶ್ವರ, ಹರಿಹರ, ಅರಿಸಿಂಹ, ದಾಮೋದರ, ನಾನಕ, ಜಯದೇವ, ಮದನ, ವೀಕಲ, ಕೃಷ್ಣಸಿಂಹ, ಶಂಕರ ಸ್ವಾಮಿ—ಮೊದಲಾದ ಕವಿಗಳಿಗೆ ವಸ್ತುಪಾಲನು ಆಶ್ರಯವನ್ನಿತ್ತಿದ್ದನು. ಸೋಮೇಶ್ವರನು ವಸ್ತುಪಾಲನನ್ನು ಕುರಿತು ಕೀರ್ತಿಕೌಮುದಿಯೆಂಬ ಕಾವ್ಯವನ್ನೂ, ಜಿನಪಾಲನು ವಸ್ತುಪಾಲ ಚರಿತವನ್ನೂ ರಚಿಸಿದ್ದಾರೆ. ಜಲ್ಹಣ, ಮೇರುತುಂಗ, ರಾಜಶೇಖರ ಮೊದಲಾದವರು ವಸ್ತುಪಾಲನನ್ನು ಸ್ಮರಿಸಿದ್ದಾರೆ.

ವಸ್ತುಪಾಲನ ತಂದೆ ಅಶ್ವರಾಜ. ತಾಯಿ ಕುಮಾರದೇವಿ ಕವಿಯು ಜೈನಮತದವನೆಂದು ಕಾಣುತ್ತದೆ. ಎಲ್ಲ ಮತಗಳ ವಿಷಯದಲ್ಲಿಯೂ ಈತನಿಗೆ ಸದ್ಭಾವನೆ ಇತ್ತು. ಈತನ ಆಶ್ರಯ ದಲ್ಲಿ 500ಜನ ದ್ವಿಜರು ವೇದಾಧ್ಯಯನ ಮಾಡುತ್ತಿದ್ದರೆಂದೂ, ಈತನು 63 ಮಸೀದಿಗಳನ್ನು ಮುಸಲ್ಮಾನರಿಗೆ ಕಟ್ಟಿಸಿಕೊಟ್ಟನೆಂದೂ ಜಿನಪ್ರಭನು (ಕ್ರಿ.ಶ. 1329) ವಸ್ತು ಪಾಲಸಂಕೀರ್ತನ ದಲ್ಲಿ ಹೇಳಿದ್ದಾನೆ. ಸಂವತ್ 1277(ಕ್ರಿ.ಶ. 1221)ರಲ್ಲಿ ವಸ್ತುಪಾಲನು ಆಬು ಪರ್ವತಕ್ಕೆ ಯಾತ್ರೆ ಮಾಡಿದನೆಂದು ಮೇರುತುಂಗನ ಪ್ರಬಂಧಚಿಂತಾಮಣಿಯಲ್ಲಿ ಹೇಳಿದೆ. ಈತನ ಮರಣ ಕ್ರಿ.ಶ. 1242ರಲ್ಲಿ.

**ಕಾವ್ಯ ಪರಿಚಯ :**

ನರನಾರಾಯಣಾನಂದವು ಅರ್ಜುನ ಮತ್ತು ಶ್ರೀಕೃಷ್ಣರ ಸ್ನೇಹವನ್ನೂ, ಅರ್ಜುನನು ಸುಭದ್ರೆಯನ್ನು ಅಪಹರಿಸಿ ವಿವಾಹವಾದ ವೃತ್ತಾಂತವನ್ನೂ ವರ್ಣಿಸುವ 16 ಸರ್ಗಗಳ ಕಾವ್ಯ. ರೈವತಕಪರ್ವತ, ಚಂದ್ರೋದಯ, ಋತು—ಮುಂತಾದ ಕಾವ್ಯೋಚಿತವಸ್ತುಗಳನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. 14ನೆಯ ಸರ್ಗದಲ್ಲಿ ಏಕಾಕ್ಷರ, ಅಪುನರ್ವರ್ಗ, ಅಪುನರ್ಧಾಗ ಮುಂತಾದ ಚಿತ್ರಬಂಧಗಳಿವೆ.



ನರನಾರಾಯಣಾನಂದದ ಶೈಲಿ ಮಾಘನ ಕಾವ್ಯವನ್ನು ಸ್ಮರಣೆಗೆ ತರುತ್ತದೆ. ಆದರೆ ವಸ್ತುಪಾಲನ ವರ್ಣನಾವಿಧಾನವು ಹೊಸತು, ಅವನು ಯಾರನ್ನೂ ಅನುಕರಿಸಿಲ್ಲ, ಸ್ವತಂತ್ರ ವಾದ ಕಾವ್ಯಪ್ರತಿಭೆ ಅವನಲ್ಲಿದೆ. ಪುಷ್ಪಿತಾಗ್ರ, ವಸಂತತಿಲಕಾ, ಪ್ರಮಿತಾಕ್ಷರಾ, ದ್ರುತ ವಿಲಂಬಿತ, ಶಾಲಿನೀ, ರಥೋದ್ಧತಾ, ಲಲಿತಾ ಮುಂತಾದ ವೃತ್ತಗಳಲ್ಲಿ ಕಾವ್ಯಚಾತುರ್ಯವನ್ನು ಮೆರೆಸಿದ್ದಾನೆ.

1. ಶ್ರೀಕೃಷ್ಣನು ಬಲರಾಮನೆದುರಿಗೆ ಅರ್ಜುನನನ್ನು ಪ್ರಶಂಸೆ ಮಾಡುತ್ತಾನೆ—

ಹರಃ ಪರ ಇವೈಶ್ವರ್ಯೇ ಶಾಸ್ತ್ರೇ ಗುರುರಿವಾಪರಃ ।
ಸ್ಮರೋಽನ್ಯ ಇವ ಸೌಂದರ್ಯೇ ಶೌರ್ಯೇ ಕಿಂತು ಸ ಏವ ಸಃ ॥ (12-79)

ಶೌರ್ಯದಲ್ಲಿ ಅರ್ಜುನನೆಂದರೆ ಅರ್ಜುನನೇ !

2. ಮದುವೆಯ ಸಂದರ್ಭದಲ್ಲಿ ಸುಭದ್ರೆ ಅಗ್ನಿಯಲ್ಲಿ ಲಾಜವನ್ನು ಹಾಕಿ ಶಿಷ್ಟಾಚಾರ ದಂತೆ ಹೊಗೆಯನ್ನು ಆಘ್ರಾಣಿಸಿದಳು.—

ಶಿಥಿಲಕರಸರೋಜಾ ಲಜ್ಜಮಾನಾ ವಿಕೀರ್ಯ
ಜ್ವಲಿತಹುತವಹಾಂತರ್ಲಾಜಮುಷ್ಟಿಂ ಸುಭದ್ರಾ ।
ಅಕುರುತ ಗುರುವಾಚಾ ಕಿಂಚಿದಾಚಾರಧೂಮ
ಗ್ರಹಣಮಥ ಮುಖಾಬ್ಜೋತ್ಸಂಗಭೃಂಗಾಯಮಾನಂ ॥ (15-36)

3. ಕವಿಯ ಪೂರ್ವಜನೂ, ಸಿದ್ಧರಾಜನ ಮಂತ್ರಿಯೂ ಆದ ಚಂಡಪ್ರಾಸಾದನ ವರ್ಣನೆ ಇದು—

ಪುಸ್ಫೂರ್ಜ ಗುರ್ಜರಧರಾಧವಸಿದ್ಧರಾಜ
ರಾಜತ್ಸಭಾಜನಸಭಾಜನಭಾಜನಸ್ಯ ।
ದುರ್ಮಂತ್ರಿಮಂತ್ರಿತದವಾನಲವಿಪ್ಲವೇ ಯಾಂ
ಶ್ರೀಖಂಡಖಂಡನನಿಭಾ ಭುವಿ ಯಸ್ಯ ಕೀರ್ತಿಃ ॥ (16-15)

## ಉಷಾಹರಣ (ಕ್ರಿ.ಶ. 13ನೆಯ ಶತಮಾನ)

ಇದನ್ನು ಬರೆದ ತ್ರಿವಿಕ್ರಮಪಂಡಿತನು ಮೊದಲು ಅದ್ವೈತಿಯಾಗಿದ್ದು ಕಡೆಗೆ ಮಾಧ್ವ ಮತವನ್ನು ಸ್ವೀಕರಿಸಿ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯನಾದನು. ಮಧ್ವಾಚಾರ್ಯರ ಜೀವಿತ ಕಾಲವು ಕ್ರಿ.ಶ. 1198–1278 ಎಂದೂ, ಕ್ರಿ.ಶ. 1223–1318 ಎಂದೂ ಮತಭೇದವಿದೆ. ಕೆಲವರು ಕ್ರಿ.ಶ. 1160–1239 ಎಂದು ಹೇಳಿದ್ದಾರೆ. ತ್ರಿವಿಕ್ರಮಪಂಡಿತನು ದಕ್ಷಿಣಕನ್ನಡ ಜಿಲ್ಲೆಯ ಕುಂಬಳೆ ಪ್ರಾಂತದವನು. ಪೇಜತಾಯ ಕುಲದ ಸುಬ್ರಹ್ಮಣ್ಯ ಸೂರಿಯ ಮಗ. ಈತನು ಉಷಾಹರಣವನ್ನಲ್ಲದೆ ಮಾಧ್ವಭಾಷ್ಯಕ್ಕೆ ತತ್ತ್ವಪ್ರದೀಪವೆಂಬ ವ್ಯಾಖ್ಯಾನವನ್ನೂ, ಕೆಲವು ಸ್ತುತಿಗಳನ್ನೂ ರಚಿಸಿದ್ದಾನೆ.

ಬಾಣಾಸುರನ ಮಗಳಾದ ಉಷೆಯನ್ನು ಶ್ರೀಕೃಷ್ಣನ ಪೌತ್ರನಾದ ಅನಿರುದ್ಧನು ಮದುವೆ ಯಾದನೆಂಬುದು ಕಥಾವಸ್ತು. ಆರಂಭದಲ್ಲಿ ರುಕ್ಮಿಣೀಪರಿಣಯ ಪರ್ಯಂತವಾದ ಶ್ರೀಕೃಷ್ಣನ

ಚರಿತೆಯನ್ನು ಸಂಕ್ಷೇಪವಾಗಿಯೂ, ಉಷಾಪ್ರಸಂಗವನ್ನು ಸ್ವಲ್ಪ ವಿಸ್ತೃತವಾಗಿಯೂ ವರ್ಣಿಸಿದ್ದಾನೆ. ಹರಿವಂಶವು ಕಥೆಯ ಆಕರ. ಈ ಕಾವ್ಯದಲ್ಲಿ 9 ಸರ್ಗಗಳಿದ್ದು ಪ್ರಶಂಸನೀಯವಾದ ಕಾವ್ಯಗುಣಗಳನ್ನು ಇದು ಪಡೆದಿದೆ. 8ನೆಯ ಸರ್ಗದಲ್ಲಿ ದ್ವ್ಯಕ್ಷರ, ಅರ್ಧಭ್ರಮಕಾದಿ ಚಿತ್ರಬಂಧಗಳಿವೆ ಇದಕ್ಕೆ ಸುಮತೀಂದ್ರತೀರ್ಥಯತಿ ವಿರಚಿತವಾದ ರಸಿಕರಂಜನೀ ವ್ಯಾಖ್ಯಾನವಿದೆ.

ಕಥಾರಚನೆಯಲ್ಲಾಗಲಿ ವರ್ಣನಾವಿಧಾನದಲ್ಲಾಗಲಿ ನವೀನತೆ ಏನೂ ಇಲ್ಲದೆ ಸಾಂಪ್ರದಾಯಿಕ ಕ್ರಮವನ್ನೇ ಕವಿಯು ಅನುಸರಿಸಿದ್ದರೂ ಪದಬಂಧ, ಅರ್ಥವ್ಯಕ್ತಿಗಳು ಸುಂದರವಾಗಿ ಬಂದಿವೆ ಆರಂಭದಲ್ಲಿಯೇ ಬರುವ ಸಮುದ್ರವರ್ಣನೆ, ವಿಷ್ಣುಸ್ತುತಿ ಮುಂತಾದವು ಮನೋಜ್ಞವಾಗಿವೆ.

1. ಕಾವ್ಯದ ಮಂಗಳಶ್ಲೋಕವೇ ಮನೋಹರ—

ಲಕ್ಷ್ಮೀಲಾವಣ್ಯಪೀಯೂಷಪಾನಪಾತ್ರಾಯಿತೇಕ್ಷಣಃ ।
ಸನೀರನೀರದಶ್ಯಾಮಃ ಪಾತು ವೋ ಭಗವಾನ್ ಹರಿಃ ॥

2. ಅನಿರುದ್ಧನ ಮುಖಲಾವಣ್ಯದ ವರ್ಣನೆ ಇದು—

ತದನು ಮಕರಕೇತೋಸ್ತಾರಸಸ್ಯೋರಕೀರ್ತೇಃ
ಅವಿಕಲರುಚಿರೋದ್ಯದ್ಯೌವನ ಪೌತ್ರಜಾಸ್ಯ ।
ಯದುಕುಲವನಿತಾನಾಮಾಕುಲಭ್ರೂಲತಾನಾಂ
ನಯನಸುಖವಿಲಾಸಸ್ಥಾನಮಾಸೀನ್ಮುಖಶ್ರೀಃ ॥ (4-57)

## ರಘುವೀರಚರಿತ (ಕ್ರಿ.ಶ. 14ನೆಯ ಶತಮಾನ ?)

ಶ್ರೀರಾಮನ ವನವಾಸದಿಂದ ಪಟ್ಟಾಭಿಷೇಕದವರೆಗೆ ರಾಮಾಯಣದ ಕಥೆ ಇದರಲ್ಲಿ ಚಿತ್ರಿತವಾಗಿದೆ. 17 ಸರ್ಗಗಳಿರುವ ಈ ಕಾವ್ಯಕ್ಕೆ ವ್ಯಾಖ್ಯಾನ ದೊರಕಿಲ್ಲ. ಇದನ್ನು ರಚಿಸಿದ ಕವಿ ಮಲ್ಲಿನಾಥನೆಂದು Dr. Aufrecht ಅವರು ಹೇಳಿದ್ದಾರೆ. ವ್ಯಾಖ್ಯಾನಕಾರನಾಗಿ ಪ್ರಸಿದ್ಧನಾದ ಕೋಲಾಚಲ ಮಲ್ಲಿನಾಥನೇ ಇವನಾದರೆ, ಕಾಲ ಕ್ರಿ.ಶ. 14ನೆಯ ಶತಮಾನವಾಗುತ್ತದೆ. ಏಕಾವಳಿಯ ತರಲ ವ್ಯಾಖ್ಯಾನದಲ್ಲಿ ಮಲ್ಲಿನಾಥನು ಎಲ್ಲಿಯೂ ಈ ಕಾವ್ಯದಿಂದ ಉದಾಹರಿಸಿಲ್ಲ. ಆ ವ್ಯಾಖ್ಯಾನವನ್ನು ರಚಿಸಿದ ಮೇಲೆ ಈ ಕಾವ್ಯವನ್ನು ಆತನು ರಚಿಸಿದ್ದರೂ ಇರಬಹುದು.

ಶೈಲಿ ಪ್ರಸನ್ನರಮಣೀಯವಾಗಿದ್ದು ಕಾಳಿದಾಸನ ರಘುವಂಶವನ್ನು ಸ್ಮರಣೆಗೆ ತರುತ್ತದೆ. ಹನುಮಂತನು ರಾಮಾಂಗುಲೀಯಕವನ್ನು ಸೀತೆಗೆ ಅರ್ಪಿಸಿದಾಗ, ಸೀತೆಯ ಸಂಭ್ರಮದ ಹರ್ಷೋದ್ಗಾರವಿದು :—

ಅಂಗುಲೀಕಿಸಲಯೇ ಧೃತಂ ಪ್ರಭೋಃ
ಭೂಷಣಸ್ಯ ಜಗತಾಂ ವಿಭೂಷಣಂ ।
ಏತದೇತದೃಷಿಭಿಃ ಸಮಾಗತೈಃ
ಸ್ಪರ್ಶಿತಂ ಖರವಧಪ್ರಮೋದಿಭಿಃ ॥ (13-47)

ಏತದೇತತ್—ಎಂಬ ದ್ವಿರುಕ್ತಿ ಸೀತೆಯ ಸ್ಮೃತಿಹರ್ಷಸಂಭ್ರಮಗಳನ್ನು ಎಷ್ಟು ಮನೋಜ್ಞವಾಗಿ ವ್ಯಂಜಿಸುತ್ತದೆ! ಈ ಕಾವ್ಯಕ್ಕೆ ವ್ಯಾಖ್ಯಾನ ದೊರಕಿಲ್ಲ.



## ಯಾದವಾಭ್ಯುದಯ (ಕಿ. ಶ. 14ನೆಯ ಶತಮಾನ)

ಶ್ರೀವೈಷ್ಣವಮತದ ಸುಪ್ರಸಿದ್ಧ ಆಚಾರ್ಯರೂ, ವೇದಾಂತದೇಶಿಕರೆಂದು ಪ್ರಖ್ಯಾತರೂ ಆದ ವೇಂಕಟನಾಥರು ಈ ಕಾವ್ಯವನ್ನು ರಚಿಸಿದ್ದಾರೆ. ಕಾಂಚೀಪುರದ ಸಮೀಪದಲ್ಲಿರುವ ತೂಪ್ಪಿಲ್ ಎಂಬ ಗ್ರಾಮ ಇವರ ಜನ್ಮಸ್ಥಳ. ತಂದೆ ಅನಂತಸೂರಿ. ತಾಯಿ ತೋತಾರಮ್ಮ. ಕ್ರಿ. 1270-1369 ಶ್ರೀದೇಶಿಕರ ಜೀವಿತಕಾಲವೆಂದು ತಿಳಿದುಬರುತ್ತದೆ. ವೇಂಕಟನಾಥರಿಗೆ ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರ ಎಂಬ ಅನ್ವರ್ಥ ಬಿರುದುಗಳಿದ್ದವು. ವಿಶಿಷ್ಟಾದ್ವೈತ ಮತಾನುಸಾರವಾಗಿ ಅನೇಕ ವೇದಾಂತಗ್ರಂಥಗಳನ್ನೂ, ಸ್ತೋತ್ರಗ್ರಂಥಗಳನ್ನೂ ವಿರಚಿಸಿದ್ದಾರೆ. ಯಾದವಾಭ್ಯುದಯ, ಸುಭಾಷಿತನೀವಿ, ಹಂಸಸಂದೇಶ, ಸಂಕಲ್ಪಸೂರ್ಯೋದಯಗಳು ಇವರ ಕಾವ್ಯಪ್ರಬಂಧಗಳು.

ಕುವಲಯಾನಂದಾದಿ ಗ್ರಂಥಕರ್ತರೂ, ಸುಪ್ರಸಿದ್ಧರೂ ಆದ ಅಪ್ಪಯ್ಯದೀಕ್ಷಿತರು ಯಾದವಾಭ್ಯುದಯಕ್ಕೆ ವಿಶದವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಚಿನ್ನತಿಮ್ಮರಾಜನ ಪ್ರೇರಣೆಯಿಂದ ಈ ವ್ಯಾಖ್ಯಾನವನ್ನು ರಚಿಸಿರುವುದಾಗಿ ಅವರೇ ಹೇಳಿಕೊಂಡಿದ್ದಾರೆ.

### ಕಾವ್ಯಪರಿಚಯ :

ಯಾದವಾಭ್ಯುದಯವು ಹರಿವಂಶಾನುಸಾರವಾಗಿ ಶ್ರೀಕೃಷ್ಣನ ಚರಿತೆಯನ್ನು ನಿರೂಪಿಸುವ 24 ಸರ್ಗಗಳಿರುವ ಮಹಾಕಾವ್ಯ. ಶ್ರೀಕೃಷ್ಣನ ಜನ್ಮದಿಂದಾರಂಭಿಸಿ ಆತನು ನಡೆಸಿದ ಎಲ್ಲ ಮಹಿಮಾನ್ವಿತ ಕಾರ್ಯಗಳನ್ನೂ ವೇಂಕಟನಾಥರು ಮನೋಹರವಾಗಿ ವರ್ಣಿಸಿದ್ದಾರೆ. ಕಡೆಯಲ್ಲಿ ಶ್ರೀಕೃಷ್ಣನು ರುಕ್ಮಿಣೀ ಮುಂತಾದ ಪತ್ನಿಯರೊಂದಿಗೆ ವಿಹರಿಸುತ್ತಿದ್ದನು ಎಂಬ ವರ್ಣನೆಯೊಂದಿಗೆ ಕಾವ್ಯವು ಸಮಾಪ್ತವಾಗುತ್ತದೆ.

ಪ್ರಥಮ ಸರ್ಗದಲ್ಲಿರುವ ಅನುಷ್ಟುಪ್ ಶ್ಲೋಕಗಳು, ಯದುವಂಶ—ವಸುದೇವರ ವರ್ಣನೆ, ಕಥೆಯ ಓಟ, ಮುಂತಾದವನ್ನು ಗಮನಿಸಿದರೆ ಕಾಳಿದಾಸನ ರಘುವಂಶದ ಸ್ಮರಣೆಯಾಗುತ್ತದೆ. ವೇದಾಂತ ದೇಶಿಕರ ಶೈಲಿ ಅವರ ಸ್ತೋತ್ರಗ್ರಂಥಗಳಲ್ಲಿ ಪೆಡಸಾಗಿದ್ದರೂ ಯಾದವಾಭ್ಯುದಯದಲ್ಲಿ ಲಲಿತವಾಗಿದೆ. ವರ್ಣನೆಗಳು ಪ್ರಸನ್ನಮಧುರವಾಗಿವೆ. ಅಪ್ಪಯ್ಯದೀಕ್ಷಿತರು ಈ ಕಾವ್ಯವನ್ನು ಪ್ರಶಂಸೆಮಾಡುತ್ತಾ—

ಇತ್ಥಂ ವಿಚಿಂತ್ಯಾಃ ಸರ್ವತ್ರ ಭಾವಾಃ ಸಂತಿ ಪದೇ ಪದೇ ।
ಕವಿತಾರ್ಕಿಕಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ ॥ ಎಂದಿದ್ದಾರೆ. (1—9 ವ್ಯಾ.)

1. ಕದಂಬವೃಕ್ಷದ ಕೆಳಗೆ ಕೊಳಲನ್ನು ನುಡಿಸುತ್ತಲಿದ್ದ ಕೃಷ್ಣನ ವರ್ಣನೆ ಇದು.

ಅವಸ್ಥಿತಂ ಕ್ವಾಪಿ ಕದಂಬಮೂಲೇ
ವಲ್ಗುಸ್ಮಿತಂ ವಾದಿತಮಂಜುವೇಣುಂ ।
ಸಾಚೀಕೃತಾಕ್ಷಂ ದದೃಶುಸ್ತರುಣ್ಯಃ
ಸ್ವಾದ್ಯಂ ಸತಾಂ ಸ್ವಸ್ತಿಕಚಾರುಜಂಘಂ ॥ (6-62)

2. ಸೂರ್ಯೋದಯ ಸಮಯದಲ್ಲಿ ಕಮಲಿನಿಯು ನೀರಲ್ಲಿ ನಿಂತು ಭೃಂಗನಾದವೆಂಬ ಮಂತ್ರವನ್ನು ಜಪಿಸುತ್ತ ತನ್ನ ಕರಪದ್ಮದಿಂದ ಮಕರಂದವೆಂಬ ಅರ್ಘ್ಯವನ್ನು ಸೂರ್ಯನಿಗೆ ಅರ್ಪಿಸುವಂತೆ ಕಾಣಿಸಿತು !

ಅರ್ಚ್ಯಸ್ಯ ಸಂಪ್ರತಿ ಸತಾಮವಗಾಢತೀರ್ಥಾ
ಮನ್ಯೇ ಪ್ರಗೃಹ್ಯ ನಲಿನೀಮಕರಂದಮರ್ಘ್ಯಂ ।
ವ್ಯಕ್ತದ್ವಿರೇಫನಿನದಾ ವಿಹಿತಾಭಿಮುಖ್ಯಾ
ಪತ್ಯುಸ್ತ್ವಿಷಾಂ ಪ್ರಣಯತೀವ ಕರಪ್ರಸಾದಂ ॥

3. ಚಂದ್ರನೆಂಬ ಸಿಂಹನು ತುಂಡರಿಸಿದ ಕತ್ತಲೆಗಳೆಂಬ ಆನೆಗಳ ಅಂಗಗಳು ಮರಗಳ ಕೆಳಗೆ ಹೊರಳಾಡುವಂತೆ ಕಾಣಿಸಿದವು !

ತಲೇಷ್ವವೇಪಂತ ಮಹೀರುಹಾಣಾಂ
ಛಾಯಾಸ್ತದಾ ಮಾರುತಕಂಪಿತಾನಾಂ ।
ಶಶಾಂಕಸಿಂಹೇನ ತದಾ ಗಜಾನಾಂ
ಲೂನಾಕೃತೀನಾಮಿವ ಗಾತ್ರಖಂಡಾಃ ॥

ಈ ಶ್ಲೋಕವನ್ನು ಅತಿಶಯೋಕ್ತಿರೂಪಕೋತ್ಪ್ರೇಕ್ಷೆಗಳ ಸಂಕರಕ್ಕೂ, 'ಅತಿಯಂಜೀತ ನಿಜಾಂ ಯದಿ ದೇವತಾಂ' (6–58) ಎಂಬುದನ್ನು ಪರಿಕರಾಲಂಕಾರಕ್ಕೂ ಉದಾಹರಣೆಯಾಗಿ ಅಪ್ಪಯ್ಯದೀಕ್ಷಿತರು ಕುವಲಯಾನಂದದಲ್ಲಿ ಉದಾಹರಿಸಿದ್ದಾರೆ.

ಯಾದವಾಭ್ಯುದಯದ 6ನೆಯ ಸರ್ಗದಲ್ಲಿ ವಿವಿದ ಶಬ್ದಾಲಂಕಾರಗಳನ್ನು ವೇಂಕಟನಾಥರು ಪ್ರದರ್ಶಿಸಿದ್ದಾರೆ. ವಿಶೇಷವೇನೆಂದರೆ. 'ನಾನಾನಾನಾ.........' ಎಂದಿರುವ ಏಕಾಕ್ಷರ ಶ್ಲೋಕದಲ್ಲಿ 32 'ನಾ'ಗಳಿವೆ. ದ್ವ್ಯಕ್ಷರಶ್ಲೋಕವು 'ನಯಾ ನಯಾನಯಾ......' ಎಂದು ಕೇವಲ ನಯಾ'ಗಳಿಂದಲೇ ತುಂಬಿದೆ ! ಇನ್ನೊಂದರಲ್ಲಿ 'ಯಾನಯಾನಯಾನ......' ಎಂದು ಕೇವಲ ಯಾನ'ಗಳಿವೆ. ಸ್ವರಭೇದವೂ ಇಲ್ಲದಂತೆ ರಚಿಸಿರುವ ಈ ಬಗೆಯ ಏಕಾಕ್ಷರ. ದ್ವ್ಯಕ್ಷರ ಶ್ಲೋಕಗಳು ಸಂಸ್ಕೃತಕಾವ್ಯಗಳಲ್ಲಿ ಇನ್ನೆಲ್ಲಿಯೂ ಕಂಡುಬಂದಿಲ್ಲ. ವೇಂಕಟನಾಥರ ಈ ನಿರ್ಮಾಣ ಕಾರ್ಯವೂ ಈ ಶ್ಲೋಕಗಳಿಗೆ ಪ್ರಕರಣಾನುರೋಧವಾಗಿ ಅರ್ಥವನ್ನು ಹೇಳಿರುವ ಅಪ್ಪಯ್ಯದೀಕ್ಷಿತರ ಪಾಂಡಿತ್ಯವೂ ವಿಸ್ಮಯಕಾರಿ.

## ಶಂಕರದಿಗ್ವಿಜಯ (ಕ್ರಿ. ಶ. 14ನೆಯ ಶತಮಾನ ?)

ಈ ಗ್ರಂಥದ ಪ್ರತಿಯೊಂದು ಸರ್ಗದ ಸಮಾಪ್ತಿಯಲ್ಲಿಯೂ 'ಇತಿ ಶ್ರೀಮಾಧವೀಯೇ' ಎಂದು ಆರಂಭವಾಗುವ ಪುಷ್ಪಿಕೆಯಿದೆಯಾದ್ದರಿಂದ ಕಾವ್ಯದ ಕರ್ತೃ ಮಾಧವನೆಂದು ನಿಶ್ಚಯಿಸಬಹುದು. ಶ್ರೀವಿದ್ಯಾರಣ್ಯಸ್ವಾಮಿಗಳ ಪೂರ್ವಾಶ್ರಮದ ಹೆಸರು ಮಾಧವಾಚಾರ್ಯ ರೆಂದು ಪ್ರಸಿದ್ಧವಾಗಿದೆ. ಆದ್ದರಿಂದ ವಿದ್ಯಾರಣ್ಯರೇ ಇದನ್ನು ಬರೆದರೆಂದು ಪರಂಪರಾಗತವಾದ



ನಂಬಿಕೆ ಇದೆ. ಆದರೆ ಮುಂದೆ ಹೇಳುವ ಕಾರಣಗಳಿಂದ ಶಂಕರದಿಗ್ವಿಜಯವನ್ನು ಬರೆದವನು ಬೇರೊಬ್ಬ ಮಾಧವಕವಿಯೆಂದು ಹೇಳಬೇಕಾಗುತ್ತದೆ. —

1. ಗ್ರಂಥಕರ್ತನು 'ಪ್ರೌಢೋಽಯಂ ನವಕಾಲಿದಾಸಕವಿತಾಸಂತಾನಸಂತಾನಕಃ' (1–9) ವಿವಾಗೇಷಾ ನವಕಾಲಿದಾಸವಿದುಷಃ' (1–10) — ಎಂಬುದಾಗಿ ತನ್ನನ್ನು ಹೊಗಳಿಕೊಂಡಿದ್ದಾನೆ ವಿದ್ಯಾರಣ್ಯರಿಗೆ ನವಕಾಲಿದಾಸನೆಂಬ ಬಿರುದು ಇದ್ದುದಕ್ಕೆ ಆಧಾರವೇನೂ ಇಲ್ಲ.

2. ಶೃಂಗೇರಿಯ ಪೀಠಾಧ್ಯಕ್ಷರಾಗಿದ್ದ ಶ್ರೀಸಚ್ಚಿದಾನಂದಭಾರತೀಸ್ವಾಮಿಗಳ ಆದೇಶದಂತೆ ಕಾಶೀಲಕ್ಷ್ಮಣಶಾಸ್ತ್ರಿಗಳೆಂಬುವರು ಗುರುವಂಶಕಾವ್ಯವನ್ನು ರಚಿಸಿದ್ದಾರೆ. ಅದರಲ್ಲಿರುವ ಶಂಕರಾಚಾರ್ಯಚರಿತೆಗೂ, ಪ್ರಕೃತಗ್ರಂಥದ ಚರಿತೆಯ ವಿವರಗಳಿಗೂ, ವ್ಯತ್ಯಾಸಗಳೂ, ವಿರೋಧಗಳೂ ಇವೆ. ಶೃಂಗೇರಿಮಠದ ಆಚಾರ್ಯರಾಗಿದ್ದ ವಿದ್ಯಾರಣ್ಯರು ಬರೆದ ಚರಿತ್ರೆಗೆ ವಿರುದ್ಧವಾಗಿ ಶೃಂಗೇರಿಮಠದವರು ಇನ್ನೊಂದು ಗ್ರಂಥವನ್ನು ಬರೆಸಿದರೆಂಬುದು ವಿಶ್ವಾಸಾರ್ಹವಲ್ಲ.

3. ಮಾಧವಕವಿಯು 'ಪ್ರಾಚೀನಶಂಕರಜಯೇ ಸಾರಃ ಸಂಗೃಹ್ಯತೇಸ್ಫುಟಂ' ಎಂದು ಆರಂಭದಲ್ಲಿಯೇ ಹೇಳಿಕೊಂಡಿದ್ದಾನೆ. ಈ ಗ್ರಂಥದಲ್ಲಿ ವ್ಯಾಸಾಚಲರಚಿತವೆಂದು ಪ್ರಕಟವಾಗಿರುವ ಶಂಕರವಿಜಯದ 520 ಶ್ಲೋಕಗಳೂ, ರಾಜಚೂಡಾಮಣಿದೀಕ್ಷಿತನ ಶಂಕರಾಭ್ಯುದಯದಲ್ಲಿರುವ 24 ಶ್ಲೋಕಗಳೂ ಯಥಾವತ್ತಾಗಿ ದೊರಕುತ್ತವೆ. ವ್ಯಾಸಾಚಲನ ಕಾಲ ತಿಳಿದಿಲ್ಲ ರಾಜಚೂಡಾಮಣಿದೀಕ್ಷಿತನು 17ನೆಯ ಶತಮಾನದವನೆಂದು ನಿಶ್ಚಿತವಾಗಿದೆ. ವಿದ್ಯಾರಣ್ಯರು 14ನೆಯ ಶತಮಾನದವರು.

4. ಇತಿಹಾಸವಿರುದ್ಧವಾದ ಹಲವಾರು ವಿಷಯಗಳು ಮಾಧವನ ಶಂಕರದಿಗ್ವಿಜಯದಲ್ಲಿವೆ. ಶಂಕರಾಚಾರ್ಯರಿಗಿಂತ ಪ್ರಾಚೀನರೂ, ಅರ್ವಾಚೀನರೂ ಆಗಿ ವಿಭಿನ್ನಕಾಲಗಳಲ್ಲಿದ್ದ ಬಾಣ, ದಂಡಿ, ಮಯೂರರೊಡನೆಯೂ ಶ್ರೀಹರ್ಷ, ಭಟ್ಟಭಾಸ್ಕರ, ಉದಯನರೊಡನೆಯೂ ಆಚಾರ್ಯರು ವಾದಮಾಡಿದರೆಂದು ಇವರಲ್ಲಿ ಬರೆದಿದೆ. ಕಾಶ್ಮೀರದವರೆಂದು ನಿಶ್ಚಿತರಾದ ಅಭಿನವಗುಪ್ತರು ಕಾಮರೂಪದಲ್ಲಿದ್ದರೆಂದು ಹೇಳಿದೆ. ವಿದ್ಯಾರಣ್ಯರು ಇತಿಹಾಸಪ್ರಜ್ಞೆ ಇಲ್ಲದ ಈ ಬಗೆಯ ಕಲ್ಪನೆಯನ್ನು ಮಾಡಿದ್ದಾರೆಂದು ನಂಬುವುದು ಕಷ್ಟ.

ಶಂಕರದಿಗ್ವಿಜಯಕ್ಕೆ ಧನಪತಿಸೂರಿಯು ಡಿಂಡಿಮ ಎಂಬ ವ್ಯಾಖ್ಯಾನವನ್ನು ವಿಕ್ರಮಶಕ 1855ರಲ್ಲಿ ಎಂದರೆ ಕ್ರಿ.ಶ. 1799ರಲ್ಲಿ ಬರೆದಿದ್ದಾನೆ. ಅಲ್ಲಿಯವರೆಗೆ ಯಾವ ವ್ಯಾಖ್ಯಾನವೂ ರಚಿತವಾಗಿರಲಿಲ್ಲವೆಂದೂ ಅವನು ಹೇಳಿದ್ದಾನೆ, ರಾಜಚೂಡಾಮಣಿ ದೀಕ್ಷಿತನು ಕ್ರಿ.ಶ. 1636 ರಲ್ಲಿ ಜೈಮಿನಿಸೂತ್ರಗಳಿಗೆ ತಂತ್ರಶಿಖಾಮಣಿ ಎಂಬ ವ್ಯಾಖ್ಯೆಯನ್ನು ರಚಿಸಿದ್ದಾನೆ. ಅವನ ಶಂಕರಾಭ್ಯುದಯದ ಶ್ಲೋಕಗಳು ಶಂಕರದಿಗ್ವಿಜಯದಲ್ಲಿ ದೊರೆಯುವುದರಿಂದ ಇದು 1636–1799ರ ಕಾಲಾವಧಿಯಲ್ಲಿ ರಚಿತವಾಗಿದೆಯೆಂದು ಕೆಲವರು ಹೇಳುತ್ತಾರೆ. ಆದರೆ ರಾಜಚೂಡಾಮಣಿದೀಕ್ಷಿತನೇ ಇವನಿಂದ ಪದ್ಯಗಳನ್ನು ಸ್ವೀಕರಿಸಿದ್ದರೂ ಇರಬಹುದು, ಸಂಪ್ರದಾಯದಂತೂ ಇದು ವಿದ್ಯಾರಣ್ಯಕೃತವೆಂದೇ ನಂಬುತ್ತದೆ.

ಮಾಧವನು ಹೇಳುವ 'ಪ್ರಾಚೀನಶಂಕರವಿಜಯ' ಯಾವುದೆಂದು ನಿಶ್ಚಿತವಿಲ್ಲ. ಕವಿಯು ಧನ್ಯೋವ್ಯಾಸಾಚಲಕವಿಪರಸ್ತತ್ಕೃತಿಜ್ಞಾಶ್ಚಧನ್ಯಾಃ' (1–17) ಎಂದು ವ್ಯಾಸಾಚಲಕವಿಯನ್ನು ಪರಾಮರ್ಶಿಸಿದ್ದಾನೆ, ವ್ಯಾಸಾಚಲರಚಿತವಾದ ಶಂಕರವಿಜಯವೂ ದೊರೆಯುತ್ತದೆ. ಪ್ರಾಚೀನ ಶಂಕರವಿಜಯವೆಂಬ— ಇನ್ನೊಂದು ಗ್ರಂಥವೂ ದೊರೆಯುತ್ತದೆ. ಆದರೆ ಅನೇಕ ಸ್ಥಳಗಳಲ್ಲಿ ಅವುಗಳೆರಡಕ್ಕೂ ವಿರುದ್ಧವಾದ ಸಂಗತಿಯನ್ನು ಮಾಧವನು ಬರೆದಿದ್ದಾನೆ. ಕವಿಗೆ ದೊರಕಿದ ಅನೇಕ ಗ್ರಂಥಗಳಿಂದ ತನಗೆ ಬೇಕಾದದ್ದನ್ನು ಈತನು ಸಂಗ್ರಹಿಸಿಕೊಂಡಿದ್ದಾನೆಂದು ಹೇಳಬಹುದು.

ಮಾಧವನ ಶಂಕರದಿಗ್ವಿಜಯದಂತೆ ಆಚಾರ್ಯರ ಚರಿತ್ರೆಯನ್ನು ಕಾವ್ಯರೀತಿಯಲ್ಲಿ ವರ್ಣಿಸಿರುವ 18 ಗ್ರಂಥಗಳು ಉಪಲಬ್ಧವಾಗಿವೆ. ಮಾಧವೀಯಶಂಕರದಿಗ್ವಿಜಯಕ್ಕೆ ಡಿಂಡಿಮ ವ್ಯಾಖ್ಯಾನವನ್ನು ಬರೆದ ಧನಪತಿಸೂರಿಯು ಸಾರಸ್ವತಜಾತಿಯವನು. ರಾಜಕಂಪಾರನ ಸೂನು ಕ್ರಿ. ಶ. 1824 ರಲ್ಲಿ ಅಚ್ಯುತನೆಂಬುವನು ಅದ್ವೈತರಾಜ್ಯಲಕ್ಷ್ಮೀ ಎಂಬ ವ್ಯಾಖ್ಯೆಯನ್ನು ಬರೆದಿದ್ದಾನೆ.

**ಕಾವ್ಯಪರಿಚಯ :**

ಇದರಲ್ಲಿ 16 ಸರ್ಗಗಳಿವೆ. ಶಂಕರಾಚಾರ್ಯರು ಶಿವನ ಅವತಾರವೆಂದು ವರ್ಣಿಸಿದೆ. ಕೇರಳದ ಕಾಲಟಿಯೆಂಬ ಗ್ರಾಮದಲ್ಲಿ ಶಿವಗುರು–ಸತೀ ಎಂಬ ದಂಪತಿಗಳಿಗೆ ಪುತ್ರನಾಗಿ ಜನನ. ವಿದ್ಯಾಭ್ಯಾಸ. ಬಾಲಸಂನ್ಯಾಸ, ಗೋವಿಂದಭಗವತ್ಪಾದರಿಂದ ಅನುಗ್ರಹ. ಭಾಷ್ಯಾದಿ ಗ್ರಂಥಗಳ ನಿರ್ಮಾಣ. ಪದ್ಮಪಾದನೇ ಮೊದಲಾದ ಶಿಷ್ಯರ ಆಗಮನ. ಕುಮಾರಿಲಭಟ್ಟನ ಸಂದರ್ಶನ, ಮಂಡನಮಿಶ್ರನೊಡನೆ ವಾದ, ಉಭಯಭಾರತಿಯೊಡನೆವಾದ, ಭರತಖಂಡವನ್ನೆಲ್ಲ ಸಂಚರಿಸಿ ವಿವಿಧಮತಖಂಡನೆ, ಅದ್ವೈತಸಿದ್ಧಾಂತಪ್ರಚಾರ, ಕಾಶ್ಮೀರದಲ್ಲಿ ಸರ್ವಜ್ಞ ಪೀಠಾರೋಹಣ ಮೊದಲಾದ ವೃತ್ತಾಂತಗಳನ್ನು ಕವಿಯು ಮನೋಜ್ಞವಾಗಿ ವರ್ಣಿಸಿದ್ದಾನೆ. ಕವಿಗೆ ದರ್ಶನಶಾಸ್ತ್ರದಲ್ಲಿ ಶ್ರೇಷ್ಠವಾದ ಪಾಂಡಿತ್ಯವಿದೆ. 9 ಮತ್ತು 10ನೇ ಸರ್ಗಗಳಲ್ಲಿ ಮಂಡನಮಿಶ್ರ ಮತ್ತು ಭಟ್ಟಭಾಸ್ಕರರು ಶಂಕರಾಚಾರ್ಯರೊಡನೆ ನಡೆಸಿದ ಶಾಸ್ತ್ರವಾಕ್ಯಾರ್ಥದ ವರ್ಣನೆ ಮಾಧವಕವಿಯ ಉತ್ಕೃಷ್ಟಪಾಂಡಿತ್ಯಕ್ಕೆ ನಿದರ್ಶನ ಆಚಾರ್ಯರು ಮಂಡನಪಂಡಿತನನ್ನು ಕಂಡಾಗ ಅವರಿಬ್ಬರಿಗೂ ನಡೆದ ಮಾತು ತುಂಬಾ ಚಮತ್ಕಾರಿಯಾಗಿದೆ ಆದರೆ ಕವಿಯು ಔಚಿತ್ಯವನ್ನು ಮರೆತು ಭೂಷಣವಲ್ಲದ ಪರಸ್ಪರ ನಿಂದಾತ್ಮಕವಾದ ಮಾತನ್ನಾಡಿಸಿದ್ದಾನೆ.

ಈ ಕಾವ್ಯದಲ್ಲಿ ಮಾಧವನು ಪ್ರಮಿತಾಕ್ಷರಾ, ಶಿಖರಿಣೀ, ಶಾಲಿನೀ, ಮಾಲಿನೀ, ಹರಿಣೀ, ವಿಯೋಗಿನೀ, ಸ್ರಗ್ಧರಾ, ವಸಂತತಿಲಕ, ದ್ರುತವಿಲಂಬಿತ, ಉಪಜಾತಿ–ಮುಂತಾದ ವೃತ್ತಗಳನ್ನು ಬಳಸಿದ್ದಾನೆ. ಕವಿಗೆ ಪ್ರಶಂಸನೀಯವಾದ ಕವಿತಾಶಕ್ತಿಯುಂಟು ವಾಗ್ವೈಖರೀ ಶಬ್ದಝರಿಗಳು ಸ್ಪಷ್ಟವಾಗಿ ಗೋಚರಿಸುತ್ತವೆ ಶಂಕರಾಚಾರ್ಯರಲ್ಲಿ ಕವಿಗೆ ಅತಿಶಯವಾದ ಭಕ್ತಿ ಇದೆ.



1. ಶಂಕರಭಾಷ್ಯವು ವಿದ್ವಾಂಸರ ತಪಸ್ಸಿನ ಫಲ ; ಶ್ರುತಿವಧು ಮುಡಿದಿರುವ ಮಲ್ಲಿಕಾ ಮಾಲೆ; ವ್ಯಾಸಸೂತ್ರಗಳ ಪುಣ್ಯೋದಯ ; ವಾಗ್ದೇವಿಯ ಭಂಡಾರ—

ವಿದ್ವಜ್ಜಾಲತಪಃಫಲಂ ಶ್ರುತಿವಧೂಧಮ್ಮಿಲ್ಲಮಲ್ಲಿಸ್ರಜಂ
ಸದ್ವೈಯಾಸಿಕಸೂತ್ರಮುಗ್ಧ ಮಧುರಾಗಣ್ಯಾತಿಪುಣ್ಯೋದಯಂ ।
ವಾಗ್ದೇವೀಚಿರಭೋಗ್ಯಭಾಗ್ಯವಿಭವಪ್ರಾಗ್ಭಾರಕೋಶಾಲಯಂ
ಭಾಷ್ಯಂ ತೇ ನಿಪಿಬಂತಿ ಹಂತ ನ ಪುನರ್ಯೋಷಾಂ ಭವೇಽಸಂಭವಃ ॥ (6–105)

2. ಆಚಾರ್ಯರು ಮಾಹಿಷ್ಮತಿಗೆ ಬಂದು ಮಂಡನಪಂಡಿತನ ಮನೆ ಯಾವುದೆಂದು ಕೇಳಿದಾಗ ದಾರಿಯಲ್ಲಿ ಹೋಗುತ್ತಿದ್ದ ಸ್ತ್ರೀಯರು ಉತ್ತರ ಹೇಳಿದರು :

" ಯಾರ ಮನೆಯ ಬಾಗಿಲಲ್ಲಿ ಪಂಜರದ ಗಿಳಿಗಳು 'ಸ್ವತಃಪ್ರಮಾಣ, ಪರತಃ ಪ್ರಮಾಣ ' ಎಂದು ಹೇಳಿಕೊಳ್ಳುತ್ತಿರುತ್ತವೆಯೋ ಅದೇ ಮಂಡನಪಂಡಿತರ ಮನೆ ! "

ಸ್ವತಃ ಪ್ರಮಾಣಂ ಪರತಃ ಪ್ರಮಾಣಂ ಕೀರಾಂಗನಾ ಯತ್ರ ಗಿರಂ ಗಿರಂತಿ ।
ದ್ವಾರಸ್ಥನೀಡಾಂತರಸಂನಿರುದ್ಧಾ ಜಾನೀಹಿ ತನ್ಮಂಡನಪಂಡಿತೌಕಃ ॥

(8–6)

## ಸುಮಧ್ವವಿಜಯ (ಕ್ರಿ. ಶ. 14ನೆಯ ಶತಮಾನ)

ಇದರ ಕವಿ ನಾರಾಯಣನು ತ್ರಿವಿಕ್ರಮಭಟ್ಟನ ಮಗ. ತ್ರಿವಿಕ್ರಮಭಟ್ಟನು ಮೊದಲು ಅದ್ವೈತಿಯಾಗಿದ್ದು ಶ್ರೀಮಧ್ವಾಚಾರ್ಯರೊಡನೆ ವಾದಮಾಡಿ ಕಡೆಯಲ್ಲಿ ದ್ವೈತಮತವನ್ನವಲಂಬಿಸಿದನೆಂದು ತಿಳಿದು ಬರುತ್ತದೆ. ಮಧ್ವಾಚಾರ್ಯರ ಜೀವನಾವಧಿ ಕ್ರಿ. ಶ. 1198—1278, ಕೆಲವರು ಕ್ರಿ. ಶ. 1223—1318 ಎನ್ನುತ್ತಾರೆ. ಕವಿಯ ತಂದೆಯು ಮಧ್ವಾಚಾರ್ಯರ ಸಮಕಾಲಿಕನಾದ್ದರಿಂದ ಆಚಾರ್ಯರ ಜೀವಿತೋತ್ತರಕಾಲದ ಅಲ್ಪಾವಧಿಯಲ್ಲಿ ಈ ಗ್ರಂಥ ರಚನೆಯಾಗಿರಬೇಕು. ಆದ್ದರಿಂದ ಇದರ ಕಾಲ 14 ನೆಯ ಶತಮಾನದ ಪೂರ್ವಾರ್ಧವೆನ್ನಬಹುದು. ನಾರಾಯಣನು ಸುಮಧ್ವವಿಜಯವನ್ನಲ್ಲದೆ ಅಣುಮಧ್ವವಿಜಯ, ಮಣಿಮಂಜರಿ, ಪಾರಿಜಾತಹರಣವೆಂಬ ಯಮಕಕಾವ್ಯ, ವಿಷ್ಣುಸ್ತುತಿ, ಸಂಗ್ರಹರಾಮಾಯಣಗಳನ್ನು ರಚಿಸಿದ್ದಾನೆ.

ಈ ಗ್ರಂಥಕ್ಕೆ ಛಲಾರಿನರಸಿಂಹಾಚಾರ್ಯನ ಶಿಷ್ಯ ಶೇಷಾಚಾರ್ಯನು ಮಂದೋಪಕಾರಿಣಿಯೆಂಬ ಟೀಕೆಯನ್ನು ಬರೆದಿದ್ದಾನೆ.

**ಕಾವ್ಯಪರಿಚಯ :**

ದ್ವೈತಮತಸ್ಥಾಪಕರಾದ ಮಧ್ವಾಚಾರ್ಯರ ಚರಿತೆಯನ್ನು 16 ಸರ್ಗಗಳಲ್ಲಿ ವರ್ಣಿಸಲಾಗಿದೆ. ರಜತಪೀಠಪುರದ (ಉಡುಪಿ) ಬಳಿಯಲ್ಲಿರುವ ಶಿವರೂಪ್ಯ (ಬೆಳ್ಳೆ) ಗ್ರಾಮದಲ್ಲಿ ಮಧ್ಯಗೇಹರ

ಭಟರ ಮಗನಾಗಿ ಆಚಾರ್ಯರು ಜನಿಸಿದರು. ವಾಸುದೇವನೆಂದು ನಾಮಕರಣವಾಯಿತು. ವಾಯುವು ತ್ರೇತಾಯುಗಗಳಲ್ಲಿ ಹನುಮಂತನಾಗಿಯೂ, ದ್ವಾಪರದಲ್ಲಿ ಭೀಮನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಅವತರಿಸಿದನೆಂದು ಕವಿ ಹೇಳಿದ್ದಾನೆ. ಶಂಕರಾಚಾರ್ಯರ ಮಾಯಾವಾದವನ್ನು ಖಂಡಿಸುವುದಕ್ಕಾಗಿಯೇ ವಾಯುದೇವನು ಅವತರಿಸಿದನೆಂದು ಕವಿಯ ಹೇಳಿಕೆ.

ಆಚಾರ್ಯರ ಬಾಲ್ಯ, ವಿದ್ಯಾಭ್ಯಾಸ, ಅಚ್ಯುಪ್ರೇಕ್ಷಕರ ಬಳಿ ಸಂನ್ಯಾಸ ಸ್ವೀಕಾರ. ವಿವಿಧ ಶಾಸ್ತ್ರಗಳ ಪಾಂಡಿತ್ಯ, ಅದ್ವೈತಮತದ ಖಂಡನೆ, ಭಾಷ್ಯಾದಿಗ್ರಂಥಗಳ ರಚನೆ, ದ್ವೈತಮತದ ಪ್ರಚಾರಕ್ಕಾಗಿ ಭರತಖಂಡದಲ್ಲಿ ಸಂಚಾರ, ಅನೇಕ ಪವಾಡಗಳ ಪ್ರದರ್ಶನ, ಉಡುಪಿಯಲ್ಲಿ ಶ್ರೀಕೃಷ್ಣವಿಗ್ರಹದ ಸ್ಥಾಪನೆ ಮುಂತಾದವು ಕಾವ್ಯವಸ್ತು. ಆಚಾರ್ಯರ ಸ್ತುತಿಯೊಡನೆ ಕಾವ್ಯವು ಸಮಸ್ತವಾಗುತ್ತದೆ. ವಾಸುದೇವನಿಗೆ ಸಂನ್ಯಾಸಸ್ವೀಕಾರವಾದ ಮೇಲೆ ಪೂರ್ಣಪ್ರಜ್ಞ, ಮಧ್ವಾಚಾರ್ಯ, ಆನಂದತೀರ್ಥ ಎಂದು ಕವಿಯು ವ್ಯವಹರಿಸಿದ್ದಾನೆ. ಆಚಾರ್ಯರು ತಾರ್ಕಿಕರ ಅನುಮಾನ ಪ್ರಮಾಣದಲ್ಲಿ ಗಟ್ಟಿಗರಾದ್ದರಿಂದ ಅನುಮಾನತೀರ್ಥ ಎಂದೂ ಪ್ರಸಿದ್ಧಿಯಾಯಿತಂತೆ (5—7).

ಕಥಾನಾಯಕರಾದ ಮಧ್ವಾಚಾರ್ಯರ ದೃಢವಾದ ಮೈಕಟ್ಟನ್ನೂ ಜೀರ್ಣಶಕ್ತಿಯನ್ನೂ ಪವಾಡಗಳನ್ನೂ ವರ್ಣಿಸುವುದರಲ್ಲಿ ಕವಿಗೆ ಹೆಚ್ಚಿನ ಆಸಕ್ತಿ. ನೂರಾರು ಜನರಿಂದ ಉರುಳಿಸಲಾರದ ಒಂದು ಬಂಡೆಯನ್ನು ಆಚಾರ್ಯರು ಸುಲಭವಾಗಿ ಎತ್ತಿದರೆಂದೂ, ಒಂದು ಹುಲಿಯನ್ನು ಕೈಯಿಂದ ಗುದ್ದಿ ಕೊಂದರೆಂದೂ, ಗೋವೆಯಲ್ಲಿ ದಪ್ಪನೆಯ ನಾಲ್ಕುಸಾವಿರ ಬಾಳೆಹಣ್ಣುಗಳನ್ನು ತಿಂದು ಮೂವತ್ತು ಕೊಡ ಹಾಲನ್ನು ಕುಡಿದು ಸುಲಭವಾಗಿ ಜೀರ್ಣಿಸಿಕೊಂಡರೆಂದೂ (ಸರ್ಗ 10) ಹೇಳಿದ್ದಾನೆ. ಬಾಲ್ಯದಲ್ಲಿ ಕುಸ್ತಿಯಾಡುವಾಗ ದೊಡ್ಡವರನ್ನು ಸೋಲಿಸುತ್ತಿದ್ದರು ಬರೆಯುತ್ತಾನೆ. ಆಚಾರ್ಯರು ಭೀಮನ ಅವತಾರವೆಂದು ಸ್ಪಷ್ಟಪಡಿಸುವುದೇ ಕವಿಯ ಉದ್ದೇಶವಾಗಿದೆ.

ಈ ಗ್ರಂಥದಲ್ಲಿ ನಾರಾಯಣನು ವಸಂತತಿಲಕಾ, ದ್ರುತವಿಲಂಬಿತ, ವಂಶಸ್ಥವಿಲ, ರಥೋದ್ಧತಾ, ಮಂಜುಭಾಷಿಣೀ, ಆರ್ಯಾ—ಮುಂತಾದ ವೃತ್ತಗಳನ್ನು ಬಳಸಿದ್ದಾನೆ. 10ನೆಯ ಸರ್ಗದಲ್ಲಿ ಏಕಾಕ್ಷರಾದಿ ಚಿತ್ರಬಂಧಗಳ ರಚನೆಯಲ್ಲಿ ತನಗಿರುವ ಪ್ರೌಢಿಯನ್ನು ತೋರಿಸಿದ್ದಾನೆ. ಕವಿಯು ತರ್ಕಶಾಸ್ತ್ರದಲ್ಲಿ ವಿದ್ವಾಂಸ, ಶ್ಲೋಕರಚನೆಯಲ್ಲಿ ನಿಪುಣ. ತನ್ನ ಗ್ರಂಥವನ್ನು 'ಮಹಾಕಾವ್ಯ'ವೆಂದು ಕರೆದುಕೊಂಡಿದ್ದಾನೆ. ಸಜಾತೀಯ ಪ್ರಾಣಿವರ್ಗದಲ್ಲಿ ಬಳಸುವ ಕುಲ ಶಬ್ದವನ್ನು ಅನ್ಯತ್ರ ಪ್ರಯೋಗಿಸಿದ್ದಾನೆ. (ಉದಾ : ಕುಲಿತ್ಥಕುಲ, ಲಿಪಿಕುಲ). ರಾವಣನನ್ನು ದಶಕ (ದಶಕಂಠ) ಎಂದಿದ್ದಾನೆ. (1—17) ಶಂಕರಾಚಾರ್ಯನನ್ನು ಮಣಿಮಂತನೆಂಬ ರಾಕ್ಷಸನ ಅವತಾರವೆಂದೂ, ಸಂಕರತೆಯನ್ನು ಮಾಡಿದ ಸಂಕರನೆಂದೂ, ಮಹಾತಸ್ಕರನೆಂದೂ ಅದ್ವೈತ ಸಿದ್ಧಾಂತವನ್ನು ಮಾಯಿಮತವೆಂದೂ ಕರೆದು ಹೀನೋಪಮೆಗಳಿಂದ ಪರಾಮರ್ಶಿಸಿದ್ದಾನೆ.



ನಾರಾಯಣ ಕವಿಯ ಶೈಲಿ ಪೆಡಸಾಗಿದ್ದರೂ ಕೆಲವೆಡೆ ಲಲಿತವಾಗಿದೆ. ಅವನಿಗೆ ಮಧುರ ಪದರಚನೆಯ ಶಕ್ತಿಯುಂಟು.

1. ಇದು ವೈಕುಂಠದ ವರ್ಣನೆ—

ಸವಿಲಾಸಲಾಸಪರಿತುಷ್ಟದೃಶೋ
ಮೃದುಗೀತವಾದ್ಯಮುದಿತಶ್ರವಣಾಃ ।
ಅನುರಂಜಯಂತಿ ನವಕಂಜದೃಶೋ
ರಮಣಾ ಅಮೀ ಸ್ವರಮಣೀಸ ರಣೀಃ ॥ (11—26)

2. ಮಧ್ವಾಚಾರ್ಯರು ವಿಷ್ಣುವನ್ನು ಶ್ರೀಗಂಧ, ತುಳಸಿ, ಪುಷ್ಪ, ಪಲ್ಲವಗಳಿಂದ ಪೂಜಿಸಿದರು—

ವಿಮಲಮಲಯಜಾಂಭೋಬಿಂದುಭಿಶ್ಚರ್ಚಿತಾರ್ಚೋ
ನವಲಲಿತುಲಸ್ಯಾ ಪುಷ್ಪರಾಜ್ಯಾರ್ಚಯತ್ ಸಃ ।
ಸ್ಥಲಜಜಲಜವಲ್ಲೀವೃಕ್ಷವೀರುತ್‌ಸಮಸ್ತ
ಪ್ರಸವವಿಜಯಲಕ್ಷ್ಮ್ಯಾ ಮೂರ್ತಯೇಮೇಂದಿರೇಶಂ ॥ (14—35)

## ರುಕ್ಮಿಣೀಶವಿಜಯ (ಕ್ರಿ. ಶ. 16ನೆಯ ಶತಮಾನ)

ಮಧ್ವಮತದ ಆಚಾರ್ಯರಾದ ಶ್ರೀವಾದಿರಾಜರು ಇದನ್ನು ರಚಿಸಿದ್ದಾರೆ. ಕುಂದಾಪುರ ತಾಲ್ಲೂಕಿನ ಹೂವಿನಕೆರೆಗ್ರಾಮ ಇವರ ಜನ್ಮಸ್ಥಳ. ತಂದೆ ದೇವಭಟ್ಟ, ತಾಯಿ ಗೌರಿ. ಪೂರ್ವಾಶ್ರಮದ ಹೆಸರು ವರಾಹಮೂರ್ತಿ. ಕ್ರಿ. ಶ. 1480ರಲ್ಲಿ ಜನನ. ಇವರು 120 ವರ್ಷ ಜೀವಿಸಿದ್ದರೆಂದು ಹೇಳುತ್ತಾರೆ. ಬಾಲ್ಯದಲ್ಲಿಯೇ ಶ್ರೀವಾಗೀಶತೀರ್ಥರಿಂದ ಸಂನ್ಯಾಸವನ್ನು ಸ್ವೀಕರಿಸಿದರು. ಶ್ರೀವ್ಯಾಸರಾಯರ ಬಳಿ ವಿದ್ಯಾಭ್ಯಾಸಮಾಡಿದರು. ಸಿರಸಿ ತಾಲ್ಲೂಕು ಸೋದೆಯಲ್ಲಿ ಶ್ರೀವಾದಿರಾಜರ ಸಮಾಧಿ ಇದೆ.

ಇವರು ರುಕ್ಮಿಣೀಶವಿಜಯವನ್ನಲ್ಲದೆ ತೀರ್ಥಪ್ರಬಂಧವನ್ನೂ ಮತ್ತಿತರ ಸ್ತೋತ್ರಗ್ರಂಥಗಳನ್ನೂ ರಚಿಸಿದ್ದಾರೆ. ಲಕ್ಷ್ಮೀಪತಿಭಟ್ಟಾಚಾರ್ಯನ ಮಗ ನಾರಾಯಣಚಾರ್ಯನು ಈ ಕಾವ್ಯಕ್ಕೆ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

ಕಾವ್ಯಪರಿಚಯ :

ಭಾಗವತದಶಮಸ್ಕಂಧದಲ್ಲಿರುವ ಶ್ರೀಕೃಷ್ಣಚರಿತೆ ಇದರ ಕಥಾವಸ್ತು. ಶ್ರೀಕೃಷ್ಣನ ಜನನ, ಬಾಲ್ಯ, ತೃಣಾವರ್ತಾದಿಗಳ ಸಂಹಾರ, ಗೋಪಿಕಾವಿಹಾರ, ಕಂಸವಧೆ, ಜರಾಸಂಧನ

ಪರಾಜಯ, ರುಕ್ಮಿಣೀಹರಣ, ಪ್ರದ್ಯುಮ್ನಾದಿಗಳ ಉತ್ಪತ್ತಿ—ಇವು 19 ಸರ್ಗಗಳಲ್ಲಿ ವರ್ಣಿತವಾಗಿವೆ. ಎಲ್ಲ ಸರ್ಗಗಳ ಸಮಾಪ್ತಿಯಲ್ಲಿಯೂ

ಸಂಜಾತೇ ಭುವಿ ರುಕ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಾದ್ಯೋ ಮುದಾಂ

ಈ ಪ್ರಕಾರವಾಗಿ ಮುದ್ರಾಂಕನವಿದೆ, ಮಾಧ್ವಮತಾನುಗುಣವಾಗಿ ಹರಿಸರ್ವೋತ್ತಮತ್ವ ಮುಂತಾದ ವಿಷಯಗಳೂ ಅಲ್ಲಲ್ಲಿ ಪ್ರಸ್ತುತವಾಗಿವೆ. ಉದಾಹರಣೆಗೆ, ಪೂತನೆ ಬಾಲಕೃಷ್ಣನಿಗೆ ಸ್ತನ್ಯಪಾನಮಾಡಿಸಲು ಬಂದು ಮೃತಳಾದಾಗ ಈ ಶ್ಲೋಕವಿದೆ :—

ಮುಕುಂದವಿದ್ವೇಷವಿಷಾನುಷಂಗಾದ್ವಿಯೋಜಿತಾಂಗೀಕಿಲಪೂತನೈಕಾ ।
ಪಪಾತ ಧನ್ಯಾ ಲಲನಾಗ್ರಗಣ್ಯಾ ಜಗಾಮ ಚಾನ್ಯಾಮರಲೋಕಲೋಕಂ ॥(2—41)

'ಕೃಷ್ಣದ್ವೇಷದಿಂದ ಹತಳಾದ ಪೂತನೆ ನರಕ ಪತಿತಳಾದಳು. ಆ ದೇಹದಲ್ಲಿದ್ದ ಊರ್ವಶಿ ಸ್ವರ್ಗಕ್ಕೆ ಹೋದಳು ' ಎಂದು ಇದರ ತಾತ್ಪರ್ಯ. ಇದನ್ನೇ ವಾದಿರಾಜರು ಮುಂದಿನ ಶ್ಲೋಕಗಳಲ್ಲಿ ಸಮರ್ಥನೆಮಾಡಿದ್ದಾರೆ. ಒಂದು ದೇಹದಲ್ಲಿ ಅನೇಕ ಜೀವಿಗಳು ನೆಲಸಬಹುದೆಂದೂ ಕಂಸ, ಶಿಶುಪಾಲರ ಪರಿಸ್ಥಿತಿಯೂ ಹೀಗೆಯೇ ಎಂದೂ ಹೇಳಿದ್ದಾರೆ.

ಶ್ರೀವಾದಿರಾಜರ ಶೈಲಿ ಸರಳವಾದದ್ದು. ಏಕಾಕ್ಷರ, ದ್ವ್ಯಕ್ಷರಾದಿ ಚಿತ್ರಬಂಧಗಳುಂಟು. ಅನುಪ್ರಾಸಯಮಕಗಳು ವಿಪುಲವಾಗಿ ಬಂದಿವೆ. 17ನೆಯ ಸರ್ಗದಲ್ಲಿ ವಿಷ್ಣುವಿನ ಅವತಾರಗಳಿಗೂ, ಶ್ರೀಕೃಷ್ಣನಿಗೂ ಅನ್ವಿತವಾಗುವಂತೆ ಶ್ಲೇಷದಿಂದ ಮಾಡಿದ ವರ್ಣನೆ ಇದೆ. ಅಲ್ಲಲ್ಲಿ ಭಕ್ತಿ ಪೂರ್ಣವಾದಸ್ತುತಿಗಳಿವೆ.

1. ಇದು ಬಾಲಕೃಷ್ಣನ ಒಂದು ಲೀಲೆ ನಿದ್ರಿಸಬೇಕೆಂದು ತಾಯಿ ಮಗುವಿಗೆ ಹೇಳಿದಾಗ ಅವರಿಬ್ಬರ ಸಂಭಾಷಣೆ—

ನಿದ್ರಾಮಾಶ್ರಯ, ಕಿಂ ತದಾಶ್ರಯಫಲಂ ಭುಕ್ತಂ ಪ್ರಜೇಜ್ಜೀರ್ಣತಾಂ
ನಿದ್ರಾ ಕಾಂಬ, ನಿಮೀಲಿತಾಕ್ಷಿಯುಗಲಃ ಪ್ರಾಜ್ಞಂ ಯದಾಲಿಂಗತಿ ।
ಅಸ್ತ್ವೇವಂ ತ್ವಿತಿ ಮುದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತತ್
ಸರ್ವಂಜೀರ್ಣಮಥೋ ದಿಶೇತಿ ಜನನೀಂ ಶಂಸನ್ನಜಂ ಸೋಽವತಾತ್ ॥ (3—12)

2. ಶ್ರೀಕೃಷ್ಣನ ಮಂದಸ್ಮಿತ—

ಚಂದ್ರೋಪಮಂ ಶ್ರೀರಮಣಸ್ಯ ಸೌಖ್ಯ
ಸಂದೋಹದಂ ರಂಜಿತಮೋಷ್ಠಭಾಸಾ ।
ಸೌಂದರ್ಯದುಗ್ಧಾಂಬುಧಿಫೇನಕಲ್ಪಂ
ಮಂದಸ್ಮಿತಂ ಮಂದಯತಾದಘಂ ನಃ ॥ (18—50)

ಈ ಕಾವ್ಯದಲ್ಲಿ ಗೋಪಿಕೆಯರ ಮತ್ತು ರುಕ್ಮಿಣಿಯ ಸಂಬಂಧವಾಗಿ ಶೃಂಗಾರದ ವರ್ಣನೆ ವಿಸ್ತೃತವಾಗಿದೆ ವ್ಯಾಖ್ಯಾನಕಾರನು ರುಕ್ಮಿಣೀಶವಿಜಯವನ್ನು ಚಿತ್ರಾಲಂಕಾರರಮ್ಯ, ನವರಸಭರಿತ, ಲೋಕಾಶ್ಚರ್ಯ ಪ್ರಬಂಧ ಎಂದು ಹೊಗಳಿದ್ದಾನೆ.





ನೀಲಕಂಠವಿಜಯಚಂಪುವನ್ನು ಬರೆದ ನೀಲಕಂಠದೀಕ್ಷಿತನ ಕೃತಿಯಿದು *.

ಕಾವ್ಯಪರಿಚಯ : ಶಿವಲೀಲಾರ್ಣವ 22 ಸರ್ಗಗಳಿರುವ ಮಹಾಕಾವ್ಯ. ಸ್ಕಾಂದ ಪುರಾಣದ 45ನೆಯ ಖಂಡದಲ್ಲಿ ಬರುವ ಹಾಲಾಸ್ಯಮಾಹಾತ್ಮ್ಯದಲ್ಲಿ ವರ್ಣಿಸಿರುವ ಶಿವನ 64 ಲೀಲೆಗಳೇ ಈ ಕಾವ್ಯದ ಕಥಾವಸ್ತು. ಕಲ್ಯಾಣನಗರದ ಕುಲಶೇಖರನೆಂಬ ಪಾಂಡ್ಯರಾಜನಿಗೆ ಸ್ವಪ್ನದಲ್ಲಿ ಶಿವನ ದರ್ಶನವಾಗಿ, ಅರಣ್ಯದಲ್ಲಿದ್ದ ಸುಂದರನಾಥಲಿಂಗದ ವಿಚಾರ ತಿಳಿಯುತ್ತದೆ. ಶಿವನ ಆಜ್ಞೆಯಂತೆ ಕುಲಶೇಖರನು ಲಿಂಗದಬಳಿ ಮಧುರಾ ನಗರವನ್ನು ನಿರ್ಮಿಸಿ ರಾಜಧಾನಿಯನ್ನಾಗಿ ಮಾಡಿಕೊಳ್ಳುತ್ತಾನೆ. ಅವನ ಮಗ ಮಲಯಧ್ವಜನು ಅಗಸ್ತ್ಯಮುನಿಗಳ ಆದೇಶದಂತೆ ಯಾಗವನ್ನು ಮಾಡಲಾಗಿ, ಯಜ್ಞವೇದಿಯಿಂದ ಪಾರ್ವತಿ ಮಗುವಾಗಿ ಅವತರಿಸಿ ಬರುತ್ತಾಳೆ. ರಾಜದಂಪತಿಗಳು ಅವಳನ್ನು ಪುತ್ರಿಯೆಂದು ಸ್ವೀಕರಿಸಿ " ತಟಾತಕಾ " ಎಂದು ನಾಮಕರಣ ಮಾಡುತ್ತಾರೆ. ಮಲಯಧ್ವಜನು ಗತಿಸಿದಮೇಲೆ ತಟಾತಕೆ ರಾಜ್ಯಭಾರವನು ನಿರ್ವಹಿಸುತ್ತಾಳೆ. ಶಿವನು ಮನುಷ್ಯರೂಪದಿಂದ ಬಂದು ಅವಳನ್ನು ಮದುವೆಯಾಗಿ ಸುಂದರಪಾಂಡ್ಯನೆಂಬ ಹೆಸರಿನಿಂದ ರಾಜ್ಯಭಾರಮಾಡಿ ಧರ್ಮಸ್ಥಾಪನೆ ಮಾಡುತ್ತಾನೆ. ತಟಾತಕೆ ಮೀನಾಕ್ಷಿಯೆಂದು ಖ್ಯಾತಳಾಗುತ್ತಾಳೆ. ಷಣ್ಮುಖನು ಉಗ್ರಪಾಂಡ್ಯನೆಂಬ ಹೆಸರಿನಿಂದ ಅವರಿಗೆ ಪುತ್ರನಾಗಿ ಜನಿಸುತ್ತಾನೆ. ಆತನಿಗೆ ರಾಜ್ಯಭಾರವನ್ನು ವಹಿಸಿ ಸುಂದರಪಾಂಡ್ಯ ಮೀನಾಕ್ಷಿಯರು ಮಧುರೆಯಲ್ಲಿದ್ದ ತಮ್ಮ ಅರ್ಚಾಮೂರ್ತಿಗಳಲ್ಲಿ ಅಂತರ್ಹಿತರಾಗುತ್ತಾರೆ. ಪಾಂಡ್ಯರಾಜಸಂತತಿ ಬೆಳೆಯುತ್ತದೆ. ಶಿವನು ವಿವಿಧರೂಪಗಳಲ್ಲಿ ಕಾಣಿಸಿಕೊಂಡು ತನ್ನ ಲೀಲೆಗಳನ್ನು ಪ್ರಕಟಿಸುತ್ತಾನೆ.

ಈಗಲೂ ಮಧುರೆಯ ದೇವಸ್ಥಾನದಲ್ಲಿ ಈ ಲೀಲೆಗಳಿಗೆ ಸಂಬಂಧಿಸಿದಂತೆ 64 ಉತ್ಸವಗಳು ನಡೆಯುತ್ತವೆ.

ಸುಂದರಪಾಂಡ್ಯಮೀನಾಕ್ಷಿಯರ ವೃತ್ತಾಂತವು ಒಂದು ಕಥೆ ಎನ್ನಬಹುದಾದಷ್ಟು ವಿಸ್ತೃತವಾಗಿದೆ. ಉಳಿದವು ಚಿಕ್ಕ ಚಿಕ್ಕ ಪ್ರಕರಣಗಳು. ಈ ಕಾವ್ಯಕ್ಕೆ ಯಾವ ವ್ಯಾಖ್ಯಾನವೂ ದೊರಕಿಲ್ಲ.

ನೀಲಕಂಠದೀಕ್ಷಿತನಿಗೆ ವಕ್ರೋಕ್ತಿ-ಹಾಸ್ಯ ವಚನಗಳು ಸಹಜವಾದವು. ಅವನ ಶೈಲಿ ಲಲಿತ ಮನೋಹರ. ಸಾಂಪ್ರದಾಯಿಕವಾದ ಜಾಡನ್ನು ಬಿಟ್ಟು ಏನಾದರೊಂದು ನೂತನತೆಯನ್ನು ತನ್ನ ವರ್ಣನೆಗಳಲ್ಲಿ ತರುತ್ತಾನೆ. ವಿವರಣಸಾಪೇಕ್ಷವಾದ ವೇದಾಗಮಗಳ ಕೆಲವು ರಹಸ್ಯಗಳನ್ನು ಅಲ್ಲಲ್ಲಿ ಸೂಚಿಸಿದ್ದಾನೆ. ಅವನ್ನು ಬಿಟ್ಟರೆ ವ್ಯಾಖ್ಯಾನದ ಅಪೇಕ್ಷೆ ಇಲ್ಲದಷ್ಟು ಭಾಷೆ ಸರಳವಾಗಿದೆ. ಪ್ರಥಮಸರ್ಗದ ಕಾವ್ಯಮುಖದಲ್ಲಿ ಕವಿತೆಗೆ ಸಂಬಂಧಿಸಿದಂತೆ ಹೇಳಿರುವ ಕೆಲವು ಚಮತ್ಕಾರೋಕ್ತಿಗಳು ಉದ್ಧರಣ ಯೋಗ್ಯವಾಗಿವೆ.

* ಕವಿಯ ಕಾಲಾದಿಗಳನ್ನು ಚಂಪೂವಿಭಾಗದಲ್ಲಿ ನೋಡಬಹುದು.

1. ಶಬ್ದಾರ್ಥರೂಪವಾದ ಕಾವ್ಯ ಈಶ್ವರನ ಮಂಗಳಶರೀರ. ಪುಣ್ಯಹೀನರಿಗೆ ಅದು ದುರ್ಲಭ—

ಸವ್ಯಂ ವಪುಃ ಶಬ್ದಮಯಂ ಪುರಾರೇಃ
ಅರ್ಥಾತ್ಮಕಂ ದಕ್ಷಿಣಮಾಮನಂತಿ ।
ಅಂಗಂ ಜಗನ್ಮಂಗಲಮೈಶ್ವರಂ ತತ್
ಅರ್ಹಂತಿ ಕಾವ್ಯಂ ಕಥಮಲ್ಪಪುಣ್ಯಾಃ ॥ (1—15)

2. ಕವಿಗಳ ಮಾರ್ಗವೇ ಲೋಕವಿಲಕ್ಷಣ—

ವಕ್ರೋಕ್ತಯೋ ಯತ್ರ ವಿಭೂಷಣಾನಿ
ವಾಕ್ಯಾರ್ಥಬಾಧಃ ಪರಮಃ ಪ್ರಕರ್ಷಃ ।
ಅರ್ಥೇಷು ಬೋಧ್ಯೇಷ್ವಭಿಧೈವ ದೋಷಃ
ಸಾ ಕಾಚಿದನ್ಯಾ ಸರಣಿಃ ಕವೀನಾಂ ॥

3. ಕಾವ್ಯರಚನಾನೈಪುಣ್ಯವು ಕ್ರಮವಾಗಿ ಕ್ಷೀಣಿಸುತ್ತಿದೆ !

ಕೃತೇ ಯುಗೇ ವ್ಯಂಜನಯಾವತೀರ್ಣಂ
ತ್ರೇತಾಯುಗೇ ಸೈವ ಗುಣೀಬಭೂವ ।
ಆಸೀತ್ತೃತೀಯೇ ತು ಯುಗೇಽರ್ಥಚಿತ್ರಂ
ಯುಗೇ ತುರೀಯೇ ಯಮಕಪ್ರಪಂಚಃ ॥ (1—38)

4. ರಸಜ್ಞನಾದ ಸಹೃದಯನಿಗೂ ಶುಷ್ಕತಾರ್ಕಿಕನಿಗೂ ಇರುವ ಅಂತರ ದೊಡ್ಡದು. ಅವರು ಕಾವ್ಯಸೌಂದರ್ಯವನ್ನು ಸವಿಯುವ ವಿಧಾನವೇ ವಿಭಿನ್ನ ।

ವಾಚಂ ಕವೀನಾಮುಪಲಾಲಯನ್ ಯಾಂ
ಭುಂಕ್ತೇ ರಸಜ್ಞೋ ಯುವತಿಂ ಯುವೇವ ।
ತಾಮೇವ ಭುಂಕ್ತೇ ನನು ತಾರ್ಕಿಕೋಽಪಿ
ಪ್ರಾಣಾನ್ ಹರನ್ ಭೂತ ಇವ ಪ್ರವಿಷ್ಟಃ ॥ (1—69)

5. ಸುಂಕದವರನ್ನು ಸಂತೈಸುವಂತೆ ಆಲಂಕಾರಿಕರನ್ನು ಹೇಗಾದರೂ ಸಮಾಧಾನಗೊಳಿಸಬಹುದು. ಕರಡಿಗಳಂತೆ ಮೇಲೆ ಬೀಳುವ ತಾರ್ಕಿಕರನ್ನು ಎದುರಿಸುವುದು ಕಷ್ಟ !

ಘಟ್ಟೋಪವಿಷ್ಟಾನಿವ ವಾಗ್ಭಿರರ್ಥೈಃ
ಕಾವ್ಯಾಗಮಜ್ಞಾನುಪಸಾಂತ್ವಯಾಮಃ ।
ಆಪ್ಲುತ್ಯ ಭಲ್ಲೂಕವದಾಪತಂತಃ
ಕಥಂನು ಜಯ್ಯಾ ಇಹ ಗೌತಮೀಯಾಃ ॥ (1—71)



ಕವಿಯ ಹಾಸ್ಯಪ್ರಿಯತೆಗೆ ಇನ್ನೆರಡು ನಿದರ್ಶನಗಳನ್ನು ಕೊಡಬಹುದು.

6. ಮೇರುಪರ್ವತದಲ್ಲಿ ಸಕಲವೂ ಸುವರ್ಣಮಯವಾದ್ದರಿಂದ ಅಲ್ಲಿರುವ ದೇವಸ್ತ್ರೀಯರಿಗೆ ಚಿನ್ನದ ಒಡವೆಗಳೆಂದರೆ ಬೇಸರ. ಅವರು ಮಣ್ಣಿನ ಒಡವೆ ಮಾಸಿಕೊಳ್ಳುವುದಕ್ಕಾಗಿ ಕುಂಬಾರನ ಬಳಿಗೆ ಹೋಗುತ್ತಾರೆ ।

ಕಾಂಚನೇ ಯತ್ರ ಮೃದ್ಭೂತೇ ಕಾಮಿನ್ಯಸ್ತ್ರಿದಿವೌಕಸಾಂ ।
ಕುತೂಹಲಿನ್ಯೋ ಭೂಷಾಸು ಕುಲಾಲಾನ್ ಪರ್ಯುಪಾಸತೇ ॥ (14-17)

7. ಮದುವೆಯ ಔತಣದಲ್ಲಿ ಜನರು ನಾನಾ ಭಕ್ಷ್ಯಭೋಜ್ಯಗಳನ್ನು ಸವಿಯುತ್ತಿದ್ದರು. ಅದನ್ನು ನೋಡಿ ದೇವತೆಗಳು 'ಅಯ್ಯೋ, ನಮಗೆ ಸವಿಂತ್ಸುಚರುಗಳೇ ಗತಿ, ನಾವು ವಿಧಿ ವಂಚಿತರು.' ಎಂದು ತಮ್ಮನ್ನೇ ನಿಂದಿಸಿಕೊಂಡರಂತೆ !

ತೇ ಭಕ್ಷ್ಯಭೋಜ್ಯೈಃ ಖಲಚೂರ್ಣಲೇಹ್ಯ—
ನಿರ್ಯೂಹಪಾನೀಯಗಣೈಶ್ಚ ಚಿತ್ರೈಃ ।
ವಿಸ್ಮಾಪಿತಾಃ ಸ್ವಾಂ ವಿಧಿವಂಚಿತೇತಿ
ಜಾತಿಂ ನಿನಿಂದುಃ ಶತಶಃ ಸುಧಾಶಾಃ ॥ (12-55)

8. ಗಂಗಾನದಿಯನ್ನು ಮೀನಾಕ್ಷಿಯ ಕೀರ್ತಿ, ದಯೆ, ಸೂಕ್ತಿಗಳಿಗೆ ಹೋಲಿಸಿರುವುದು ಮನೋಹರವಾಗಿದೆ—

ಪಶ್ಯಾಂಬ ಕೀರ್ತಿಮಿವ ತೇ ಭುವನಂ ಪುನಾನಾಂ
ಏನಾಂ ದಯಾಮಿವ ತವಾಸ್ಖಲಿತಪ್ರವಾಹಂ ।
ಸೂಕ್ತಿಂ ತವೇವ ಚ ಸುಧಾಮಧುರಾಂ ಗಭೀರಾಂ
ಭಾಗೀರಥೀಂ ಭವಜಟಾಪಟಲಾತ್ ಪ್ರವೃತ್ತಾಂ ॥ (9-32)

## ಗಂಗಾವತರಣ

ಇದು ನೀಲಕಂಠದೀಕ್ಷಿತನ ಇನ್ನೊಂದು ಕೃತಿ.* ಭಗೀರಥನು ತಪಸ್ಸು ಮಾಡಿ ಗಂಗೆಯನ್ನು ಭೂಮಿಗೆ ತಂದು, ಕಪಿಲಾಶ್ರಮಕ್ಕೆ ಕರೆದೊಯ್ದು ತನ್ನ ವಂಶಜರಾದ ಸಗರಪುತ್ರರಿಗೆ ಸದ್ಗತಿಯನ್ನು ಕಾಣಿಸಿದನೆಂಬ ಕಥೆ ಕಾವ್ಯವಸ್ತು. ಇದರಲ್ಲಿ ಎಂಟು ಸರ್ಗಗಳಿವೆ. ಅನುಷ್ಟುಪ್, ರಥೋದ್ಧತಾ, ವಿಯೋಗಿನೀ, ವಂಶಸ್ಥ, ದ್ರುತವಿಲಂಬಿತ, ಶಾರ್ದೂಲವಿಕ್ರೀಡಿತ ಮುಂತಾದ ವೃತ್ತಗಳನ್ನು ಕವಿಯು ಬಳಸಿದ್ದಾನೆ. ಕಥೆ ಚಿಕ್ಕದಾದರೂ ಅದನ್ನು ವಿಸ್ತರಿಸಿ ವರ್ಣಿಸುವ ಕವಿಕೌಶಲ ಮೆಚ್ಚುವಂತಹುದು. ನೀಲಕಂಠದೀಕ್ಷಿತನಿಗೆ ಸಹಜವಾದ ವಕ್ರೋಕ್ತಿಯ ವಿಜೃಂಭಣೆಯನ್ನು ಈ ಕಾವ್ಯದಲ್ಲಿಯೂ ಕಾಣಬಹುದು.

* ಈತನ ಕಾಲಾದಿ ವಿವರಗಳಿಗೆ ನೀಲಕಂಠವಿಜಯ ಚಂಪೂವಿನ ಕೆಳಗೆ ನೋಡಿ.

1 ಪಾರ್ವತಿಯು ಕಾಳಿದಾಸನ ಬಾಯಲ್ಲಿಟ್ಟ ತಾಂಬೂಲದ ಫಲ ಕವಿತೆಯಾದರೆ, ತನ್ನ ಪತಿಯಾದ ಶಿವನ ಬಾಯಲ್ಲಿಟ್ಟ ತಾಂಬೂಲದ ಫಲ ಒರಟಾದ ವೇದಾಕ್ಷರ—

ಕವಿತಾಮಫಲದ್ವೀಟೀ ಕಾಲಿದಾಸಮುಖೇಽರ್ಪಿತಾ ।
ಪತ್ಯುರ್ಮುಖೇತು ಸಾ ಗೌರ್ಯಾಃ ಪರುಷಂ ನಿಗಮಾಕ್ಷರಂ ॥ 1—4

2. ಯಮಕವೆಂಬ ರೋಗವೂ, ದುಷ್ಕವಿಯೆಂಬ ಅಪಮೃತ್ಯುವೂ ಗಂಟುಬಿದ್ದರೂ ವಾಗ್ದೇವಿ ಇನ್ನೂ ಬದುಕಿದ್ದಾಳೆ ! ಅವಳು ಕಠೋರ ವಜ್ರನಿರ್ಮಿತಳಾಗಿರಬೇಕು—

ಆಮಯೇ ಯಮಕೇ ಚಾಗ್ರತ್ಯಪಮೃತ್ಯೌ ಚ ದುಷ್ಕವೌ ।
ವಾಣಿ ಪ್ರಾಣಿಷಿ ತನ್ಮನ್ಯೇ ವಜ್ರೇಣೈವಾಸಿ ನಿರ್ಮಿತಾ ॥ 1—30

3. ಗಂಗಾನದಿಯು ಕಾಶಿಯ ಬಳಿ ಹರಿದುಬಂದಾಗ ಗುರುಹಿರಿಯರು ಸಂಭ್ರಮದಿಂದ ಧಾವಿಸಿದರು. ಸ್ವಲ್ಪಹೊತ್ತು ಪಾಠಹೇಳಿಸಿಕೊಳ್ಳುವುದು ತಪ್ಪಿತೆಂದು ವಟುಗಳಿಗೆ ಹರ್ಷವಾಯಿತು !

ಕ್ಷಣಮಧ್ಯಯನೋಪಘಾತತಃ ಪರಿತುಷ್ಟಾ ವಟವೋ ವಿಜಹ್ರಿರೇ ॥ 7—3

4. ಪ್ರಾಣಿಗಳು ಬದುಕುವುದಕ್ಕೆ ಕಾರಣವಾದ ಗಾಳಿಗೆ ಮೂವರು ಶತ್ರುಗಳಿದ್ದಾರೆ—ಶುಷ್ಕ ತಾಪಸ, ಬೇಸಿಗೆ, ಹಾವು ಇವರು ಯಾವ ನರಕದಲ್ಲಿ ಬೀಳುತ್ತಾರೋ ತಿಳಿಯದು—

ಪ್ರಾಣಿಮಾತ್ರಪರಿಜೀವನಹೇತೋಃ ಶತ್ರವಸ್ತ್ರಯ ಇಮೇ ಪವನಸ್ಯ ।
ಶುಷ್ಕತಾಪಸನಿದಾಘಭುಜಂಗಾಸ್ತೇ ಪತಂತಿ ನಿರಯೇ ಕ್ವ ನ ವಿದ್ಮಃ ॥ 2—50

5. ಹೇಮಂತಕಾಲದ ಚಳಿ ಕೈಲಾಸಕ್ಕೂ ತಾಕಿತು. ಶಿವನ ಗಜಚರ್ಮವನ್ನೂ, ವ್ಯಾಘ್ರಚರ್ಮವನ್ನೂ ಅವನ ಮಕ್ಕಳಿಬ್ಬರೂ ಚಳಿಯನ್ನು ತಡೆಯಲಾರದೆ ಎಳೆದುಕೊಂಡರು. ಪಾರ್ವತಿ ಸಂಭ್ರಾಂತಳಾಗಿ ತನ್ನ ಸೆರಗನ್ನು ಶಿವನಿಗೆ ಹೊದಿಸಿದಳು—

ಆಕೃಷ್ಟಯೋಃ ಕುಮಾರಾಭ್ಯಾಮ್ಭೈಭವೈಯಾಘ್ರ ಚರ್ಮಣೋಃ ।
ಸಂಭ್ರಾಂತಾ ಪತಿಮಾವವ್ರೇ ಸಂವ್ಯಾನಾಗ್ರೇಣ ಪಾರ್ವತೀ ॥ 4—30

ಭಗೀರಥನ ತಪಸ್ಸು, ಗ್ರೀಷ್ಮಹೇಮಂತಋತುಗಳು, ಶಿವ–ಪಾರ್ವತಿಯರ ಆಗಮನ, ಶಿವಸ್ತುತಿ, ಗಂಗೆಯ ಆರ್ಭಟ—ಮೊದಲಾದ ವರ್ಣನೆಗಳು ಮನೋಜ್ಞವಾಗಿವೆ.



## ಶ್ರೀನಾರಾಯಣೀಯ (ಕ್ರಿ. ಶ. 16—17ನೆಯ ಶತಕ)

ಕೇರಳದ ವಿದ್ವತ್ಕವಿ ನಾರಾಯಣಭಟ್ಟತಿರಿ (ಕ್ರಿ. ಶ. 1560–1646) ಇದನ್ನು ರಚಿಸಿದ್ದಾನೆ.*

**ಕಾವ್ಯಪರಿಚಯ :**

ಭಾಗವತಪುರಾಣವಾದ ಹನ್ನೆರಡು ಸ್ಕಂಧಗಳ ವಿಷಯವನ್ನು ಇದರಲ್ಲಿ ಸಂಕ್ಷೇಪವಾಗಿ ವರ್ಣಿಸಲಾಗಿದೆ. ಶ್ರೀನಾರಾಯಣೀಯವು ಭಾಗವತದ ಸಾರಸರ್ವಸ್ವವೆನ್ನಬಹುದು. ಅರ್ಥಪುಷ್ಟವಾದ ಭಾಷೆಯಲ್ಲಿ ಭಾಗವತದ ಕಥೆಯನ್ನೂ ದರ್ಶನತತ್ತ್ವವನ್ನೂ. ನಾರಾಯಣಭಟ್ಟತಿರಿ ಪ್ರಭಾವಶಾಲಿಯಾಗಿ ವರ್ಣಿಸಿದ್ದಾನೆ. ಅಜಾಮಿಳಾದ್ಯುಪಾಖ್ಯಾನಗಳನ್ನೂ, ವಿಷ್ಣುವಿನ ದಶಾವತಾರ ಕಥೆಗಳನ್ನೂ ಕವಿಯು ಸುಂದರವಾಗಿ ಚಿತ್ರಿಸಿದ್ದಾನೆ. ದಶಮಸ್ಕಂಧದ ಕೃಷ್ಣಾವತಾರದ ವೃತ್ತಾಂತವು ವಿಸ್ತೃತವಾಗಿದೆ. ಏಕಾದಶದ್ವಾದಶಸ್ಕಂಧಗಳ ಕರ್ಮ, ಭಕ್ತಿ, ಜ್ಞಾನಗಳ ನಿರೂಪಣೆ ಸಾರವತ್ತಾಗಿದೆ. ಇದರಲ್ಲಿ ನೂರು ದಶಕಗಳಿವೆ. ದಶಕವೆಂದು ಹೆಸರಿದ್ದರೂ ಕೆಲವು ದಶಕಗಳಲ್ಲಿ ಹತ್ತಕ್ಕಿಂತ ಹೆಚ್ಚು ಶ್ಲೋಕಗಳಿದ್ದು ಒಟ್ಟು 1036 ಶ್ಲೋಕಗಳಿವೆ. ಭಕ್ತಿರಸ ಪೋಷಕವಾಗಿರುವ ಈ ಗ್ರಂಥವನ್ನು ಬೃಹತ್ ಸ್ತೋತ್ರಕಾವ್ಯವೆನ್ನಬಹುದು. ಪ್ರತಿಯೊಂದು ಶ್ಲೋಕವೂ ಗುರುವಾಯೂರು ದೇವಾಲಯದ ಶ್ರೀಕೃಷ್ಣನನ್ನು ಸಂಬೋಧಿಸಿ ಪ್ರವೃತ್ತವಾಗಿದೆ.

ಕವಿ ನಾರಾಯಣಭಟ್ಟತಿರಿಗೆ ಒಮ್ಮೆ ದುರ್ಧರವಾದ ವಾತರೋಗ ಬಂದಿತೆಂದೂ, ಆಗ ಪ್ರತಿದಿನ ಈ ಕಾವ್ಯದ ಒಂದೊಂದು ದಶಕವನ್ನು ನಿರ್ಮಿಸಿ ಗುರುವಾಯೂರಿನ ಸ್ವಾಮಿಗೆ ಅರ್ಪಿಸುತ್ತ ಹೋದನೆಂದೂ, ಅದರಿಂದ ರೋಗವು ಪೂರ್ಣವಾಗಿ ಗುಣವಾಯಿತೆಂದೂ ಹೇಳುತ್ತಾರೆ. ಪ್ರತಿಯೊಂದು ದಶಕದ ಸಮಾಪ್ತಿಯಲ್ಲಿಯೂ ತನ್ನನ್ನು ರೋಗಮುಕ್ತನನ್ನಾಗಿ ಮಾಡುವಂತೆ ಕವಿಯು ಬೇಡಿಕೊಂಡಿರುವುದು ಈ ಕಿಂವದಂತಿಗೆ ಪೋಷಕವಾಗಿದೆ. ಕೇರಳದೇಶೀಯರು ಇಂದಿಗೂ ಈ ಗ್ರಂಥವನ್ನು ಪೂಜ್ಯಭಾವನೆಯಿಂದ ಕಾಣುತ್ತಿದ್ದಾರೆ.

ನಾರಾಯಣಭಟ್ಟತಿರಿ ವಿದ್ವತ್ಕವಿ, ಭಾಷೆ ಪ್ರೌಢವಾದುದು. ವ್ಯಾಕರಣವಿಶೇಷವಿರುವ 'ನ್ಯರುಂಧಾಂ. ಪ್ರಜಿಘಾಯ, ಆದುದುಹಃ, ಆನಶಿಷೇ, ವ್ಯಕೃಣಂತ, ಬುಭೋಜಿಥ, ಸಮಗಥಾಃ, ಸಮಹೃಧಾಃ' ಮುಂತಾದ ಕ್ರಿಯಾಪದಗಳನ್ನು ಲೀಲೆಯಿಂದ ಪ್ರಯೋಗಿಸುತ್ತಾನೆ. ವ್ಯಾಖ್ಯಾಗಮ್ಯವಾದ ಈ ಗ್ರಂಥ[illegible] ಭಾಷೆಗಳಲ್ಲಿ ಅರ್ಥವನ್ನು ಬರೆದಿ[illegible]ರೂ ಸಂಸ್ಕೃತದಲ್ಲಿ ವ್ಯಾಖ್ಯಾನವಿರುವಂತೆ ಕಾಣುವುದಿಲ್ಲ, ಪೃಥ್ವೀ, ವಸಂತತಿಲಕಾ, ಶಿಖರಿಣೀ, ಮಾಲಿನೀ. ಶಾಲಿನೀ, ಮಾಲಭಾರಿಣೀ. ಶಾರ್ದೂಲವಿಕ್ರೀಡಿತ, ಸ್ರಗ್ಧರಾ, ವಂಶಸ್ಥ—ಮುಂತಾದ ವೃತ್ತಗಳನ್ನು ಕವಿಯು ಬಳಸಿದ್ದಾನೆ.

*ಮತ್ಸ್ಯಾವತಾರ ಪ್ರಬಂಧವನ್ನು ನೋಡಿ.

1. ' ದೇವ, ಜನರಿಗೆ ನಾನಾಸಂಸಾರಕ್ಲೇಶಗಳನ್ನು ಒಡ್ಡುವ ಈ ಸೃಷ್ಟಿಕಾರ್ಯವನ್ನು ನೀನೇಕೆ ಕೈಗೊಂಡಿರಬಹುದೆಂದು ಚಿಂತಿಸುತ್ತಿದ್ದೆನು. ಈಗ ಅದರ ಉದ್ದೇಶ ತಿಳಿಯಿತು. ಈ ಸೃಷ್ಟಿಯನ್ನು ಮಾಡದಿದ್ದಲ್ಲಿ, ನಿನ್ನ ದಿವ್ಯರೂಪವನ್ನೂ, ನಿನ್ನ ರಮಣೀಯ ಕಥೆಯನ್ನೂ ಕೇಳಿ ಆನಂದಿಸುವ ಭಾಗ್ಯವು ಜನರಿಗೆ ಎಲ್ಲಿ ದೊರೆಯುತ್ತಿತ್ತು !

ಕಷ್ಟಾ ತೇ ಸೃಷ್ಟಿಚೇಷ್ಟಾ ಬಹುತರಭವಖೇದಾವಹಾ ಜೀವಭಾಜಾಂ
ಇತ್ಯೇವಂ ಪೂರ್ವಮಾಲೋಚಿತಮಜಿತ ಮಯಾ ನೈವಮದ್ಯಾಭಿಜಾನೇ ।
ನೋ ಚೇಜ್ಜೀವಾಃ ಕಥಂ ತೇ ಮಧುರತರಮಿದಂ ತ್ವದ್ವಪುಶ್ಚಿದ್ರಸಾರ್ದ್ರಂ
ನೇತ್ರೈಃ ಶ್ರೋತ್ರೈಶ್ಚ ಪೀತ್ವಾ ಪರಮರಸಸುಧಾಂಭೋಧಿಪೂರೇ ರಮೇರನ್ ॥ 1–7

ಶೈಲಿ ಸಹಜಪ್ರೌಢವಾದರೂ ರಸಾನುಗುಣವಾಗಿ ಪದಬಂಧದಲ್ಲಿ ವಿಭಿನ್ನಗುಣಗಳನ್ನು ತರುವುದರಲ್ಲಿ ಕವಿಯು ನಿಪುಣ. ಈ ಉದಾಹರಣೆಯನ್ನು ಗಮನಿಸಬಹುದು. ಇದು ಉಗ್ರ ನರಸಿಂಹನ ವರ್ಣನೆ—

2. ಉತ್ಸರ್ಪದ್ವಲಿಭಂಗಭೀಷಣಹನುಂ ಹ್ರಸ್ವಸ್ಥವೀಯಸ್ತರ
ಗ್ರೀವಂ ಪೀವರದೋಃಶತೋದ್ಗತನಖಕ್ರೂರಾಂಶುದೂರೋಲ್ಬಣಂ ।
ವ್ಯೋಮೋಲ್ಲಂಘಿಘನಾಘನೋಪಮಘನಪ್ರಧ್ವಾನ್ ನಿರ್ಧಾವಿತ
ಸ್ಪರ್ಧಾಲುಪ್ರಕರಂ ನಮಾಮಿ ಭವತಸ್ತನ್ನಾರಸಿಂಹಂ ವಪುಃ ॥ 25–4

'...ಸ್ಪರ್ಧಾಲುಪ್ರಕರಂ', ಎಂಬಲ್ಲಿಯವರೆಗೆ ಮಹಾಪ್ರಾಣ ದೀರ್ಘಸಮಾಸಗಳ ಓಜೋಬಂಧ ; ಅನಂತರ ಭಕ್ತಿಭಾವಕ್ಕೆ ಉಚಿತವಾದ ಲಲಿತಪದಗಳ ಮಧುರಬಂಧ.

3. ಅನುಪ್ರಾಸಯುಕ್ತವಾದ ಈ ತೋಟಕವೃತ್ತ ಪೋಷಕವಾಗಿದೆ. ಕೃಷ್ಣನ ಯಮುನೆಯ ಮಡುವಿಗೆ ಧುಮುಕಿದಾಗ ಕೆರಳಿದ ಕಾಳಿಯ ಸರ್ಪವು ಮೇಲೆದ್ದಿತು—

ಅಥ ದಿಕ್ಷು ವಿದಿಕ್ಷು ಪರಿಕ್ಷುಭಿತಭ್ರಮಿತೋದರವಾರಿನಿನಾದಭರೈಃ ।
ಉದಕಾದುದಗಾದುರಗಾಧಿಪತಿಸ್ತ್ವದುಪಾಂತಮಶಾಂತರುಷಾಂಧಮನಾಃ ॥ 55–4

4. ಕಾಳಿಯ ಹೆಡೆಯ ಮೇಲೆ ಕೃಷ್ಣನು ನರ್ತಿಸಿದನು. ಗೆಜ್ಜೆಗಳು ಜಣಜಣ ಎಂದವು—

ಅಧಿರುಹ್ಯ ತತಃ ಫಣಿರಾಜಫಣಾನ್ನನೃತೇ ಭವತಾ ಮೃದುಪಾದರುಚಾ ।
ಕಲಶಿಂಜಿತನೂಪುರಮಂಜು ಮಿಲತ್ಕರ ಕಂಕಣಸಂಕುಲ ಸಂಕ್ವಣಿತಂ ॥ 55–9

5. ಗೋಪಿಯರೊಡನೆ ಕೃಷ್ಣನ ರಾಸಕೇಳಿ ನಡೆಯುತ್ತಿದೆ. ಕೊಳಲಿನ ಧ್ವನಿ, ಮನೋಹರವಾದ ಗಾನ, ಅನುಗುಣವಾದ ರಾಗಗತಿ, ತಾಳಬದ್ಧವಾದ ಹೆಜ್ಜೆ, ಕಂಕಣಗಳ ಝಣತ್ಕಾರ ಪಾರ್ಶ್ವದಲ್ಲಿರುವವರ ಹೆಗಲಮೇಲೆ ಕೈ, ಗೋಪಿಯರ ನಿತಂಬದ ಅಂಬರ ಚಲಿಸುತ್ತಿದೆ.—

ವೇಣುನಾದಕೃತತಾನದಾನಕಲಗಾನರಾಗಗತಿಯೋಜನಾ
ಲೋಭನೀಯ ಮೃದುಪಾದ ಪಾತಕೃತತಾಲಮೇಲನಮನೋಹರಂ ।
ಪಾಣಿಸಂಕ್ವಣಿತಕಂಕಣಂ ಚ ಮುಹುರಂಸಲಂಬಿತಕರಾಂಬುಜಂ
ಶ್ರೋಣಿಬಿಂಬಚಲದಂಬರಂ ಭಜತ ರಾಸಕೇಲಿರಸಡಂಬರಂ॥ 69–4



6. ಗ್ರಂಥ ಸಮಾಪ್ತಿಯ ಮಂಗಳ ಶ್ಲೋಕವಿದು—

ಅಜ್ಞಾತ್ವಾ ತೇ ಮಹತ್ತ್ವಂ ಯದಿಹ ನಿಗದಿತಂ ವಿಶ್ವನಾಥ ಕ್ಷಮೇಥಾಃ
ಸ್ತೋತ್ರಂ ಚೈತತ್ಸಹಸ್ರೋತ್ತರಮಧಿಕತರಂ ತ್ವತ್ಪ್ರಸಾದಾಯ ಭೂಯಾತ್ ।
ದ್ವೇಧಾ ನಾರಾಯಣೀಯಂ ಶ್ರುತಿಷು ಚ ಜನುಷಾ ಸ್ತುತ್ಯತಾವರ್ಣನೇನ
ಸ್ಫೀತಂ ಲೀಲಾವತಾರೈರಿದಮಿಹ ಕುರುತಾಮಾಯುರಾರೋಗ್ಯಸೌಖ್ಯಂ ॥

ನಾರಾಯಣನ ಸ್ತುತಿಯಾದ್ದರಿಂದಲೂ, ನಾರಾಯಣಕವಿ ಬರೆದಿದ್ದರಿಂದಲೂ ಇದು ' ದ್ವೇಧಾ ನಾರಾಯಣೀಯಂ '.

## ಪತಂಜಲಿಚರಿತ ( ಕ್ರಿ. ಶ. ೧೭ ನೆಯ ಶತಮಾನ )

ಯಜ್ಞರಾಮದೀಕ್ಷಿತನ ಮಗ ರಾಮಭದ್ರದೀಕ್ಷಿತನು ಈ ಕಾವ್ಯವನ್ನು ರಚಿಸಿದ್ದಾನೆ. ಕುಂಭಕೋಣದ ಸಮೀಪದಲ್ಲಿರುವ ಒಂದು ಹಳ್ಳಿ ಈತನ ಜನ್ಮಸ್ಥಳ. ಗುರು ಬಾಲಕೃಷ್ಣ ಮತ್ತು ಚೊಕ್ಕನಾಥ. ತಂಜಾವೂರಿನಲ್ಲಿ ಆಳುತ್ತಿದ್ದ ಷಾಹಜಿಯು (ಕ್ರಿ. ಶ. 1684—1714) ರಾಮಭದ್ರದೀಕ್ಷಿತನಿಗೆ ಒಂದು ಅಗ್ರಹಾರವನ್ನು ದಾನಮಾಡಿದ್ದನು. ಕವಿಯು ಅಲ್ಲಿ ನೆಲಸಿ ಶಿಷ್ಯರಿಗೆ ಅಚ್ಚುಮೆಚ್ಚಿನ ಗುರುವಾಗಿ ಪಾಠಪ್ರವಚನಗಳನ್ನು ನಡೆಸುತ್ತಿದ್ದನು. ಜನಪ್ರಿಯತೆಯನ್ನು ಗಳಿಸಿದ ಈತನಿಗೆ ಅಯ್ಯಾದೀಕ್ಷಿತನೆಂಬ ಹೆಸರು ರೂಢಿಯಲ್ಲಿತ್ತು. ರಾಮಭದ್ರನು ಪ್ರಸಿದ್ಧನಾದ ನೀಲಕಂಠದೀಕ್ಷಿತನ ಜೊತೆಗಾರನಾಗಿದ್ದು ಕಾವ್ಯರಚನೆಯಲ್ಲಿ ಅವನಿಂದ ಪ್ರೋತ್ಸಾಹವನ್ನು ಪಡೆದನು. ನೀಲಕಂಠದೀಕ್ಷಿತನ ವಕ್ರೋಕ್ತಿ ಹಾಸ್ಯಪ್ರಿಯತೆಗಳು ಈತನ ಕಾವ್ಯಗಳಲ್ಲಿಯೂ ಕಂಡು ಬರುತ್ತವೆ.

ರಾಮಭದ್ರದೀಕ್ಷಿತನು ಪತಂಜಲಿಚರಿತವನ್ನಲ್ಲದೆ ಜಾನಕೀಪರಿಣಯನಾಟಕ, ಶೃಂಗಾರತಿಲಕ ಭಾಣಗಳನ್ನೂ ರಾಮಬಾಣಸ್ತವ ರಾಮಚಾಪಸ್ತವ ಮುಂತಾದ ಸ್ತೋತ್ರಗ್ರಂಥಗಳನ್ನೂ ಬರೆದಿದ್ದಾನೆ. 18 ನೆಯ ಶತಮಾನದ ಆದಿಭಾಗದಲ್ಲಿ ಈತನು ಸ್ವರ್ಗಸ್ಥನಾದನೆಂದು ತಿಳಿದು ಬರುತ್ತದೆ.

### ಕಾವ್ಯ ಪರಿಚಯ :

ವ್ಯಾಕರಣ ಮಹಾಭಾಷ್ಯಕಾರನಾದ ಪತಂಜಲಿಯ ಚರಿತೆಯನ್ನು ರಾಮಭದ್ರನು 8 ಸರ್ಗಗಳಲ್ಲಿ ವರ್ಣಿಸಿದ್ದಾನೆ, ಜನಶ್ರುತಿಯಲ್ಲಿದ್ದ ಕಥೆಯ ವಸ್ತು ಅತ್ಯಲ್ಪ. ವ್ಯಾಜಾಂತರದಿಂದ ಕವಿ ಸಮುದ್ರ ಚಂದ್ರೋದಯಾದಿಗಳನ್ನು ಚಿತ್ರಿಸಿ ಶೃಂಗಾರವನ್ನು ಅಲ್ಲಲ್ಲಿ ವರ್ಣಿಸಿದ್ದಾನೆ. ಕಥೆಯನ್ನು ಹೀಗೆ ಸಂಗ್ರಹಿಸಬಹುದು :

"ಶೇಷಶಾಯಿಯಾದ ವಿಷ್ಣು ಯೋಗನಿದ್ರೆಯಲ್ಲಿದ್ದಾಗ ಚಿದಂಬರಕ್ಷೇತ್ರದಲ್ಲಿ ನಡೆದ ಶಿವನ ನೃತ್ಯವನ್ನು ಕಂಡು ಆನಂದದಿಂದ ಹಿಗ್ಗಿದನು. ಅದನ್ನರಿತ ಆದಿಶೇಷನು ಶಿವನೃತ್ಯವನ್ನು ನೋಡುವ ಕುತೂಹಲವನ್ನು ವ್ಯಕ್ತಪಡಿಸಲು ವಿಷ್ಣು ಹೀಗೆಂದನು:

"ಪಾಣಿನಿಯೆಂಬ ಮುನಿ ಶಿವನ ಅನುಗ್ರಹವನ್ನು ಪಡೆದು ವ್ಯಾಕರಣಸೂತ್ರಗಳನ್ನು ರಚಿಸಿದ್ದನು. ಕಾತ್ಯಾಯನನು ಶಿವನನ್ನು ಕುರಿತು ತಪಸ್ಸುಮಾಡಿ ಅವನ ಪ್ರಸಾದದಿಂದ ಪಾಣಿನಿಸೂತ್ರಗಳಿಗೆ ವಾರ್ತಿಕಗಳನ್ನು ಬರೆದನು. ಅವನು ಉಕ್ತಾನುಕ್ತ ದುರುಕ್ತಗಳನ್ನು ವಿವರಿಸಿದ ರಿಂದ ಸೂತ್ರಕಾರನಾದ ಪಾಣಿನಿಗೆ ಕೋಪಬಂದಿತು. 'ಕಾಲೋ ಹಿ ಧೀರೇಽಪಿ ಕರೋತಿ ಮೋಹಂ.' ಅವನು ವಾರ್ತಿಕಕಾರನನ್ನು 'ಸತ್ತುಹೋಗು !' ಎಂದು ಶಪಿಸಿದನು ವಾರ್ತಿಕಕಾರನು ತಿರುಗಿ ಸೂತ್ರಕಾರನನ್ನು ಹಾಗೆಯೇ ಶಪಿಸಿದನು. ಅದರಿಂದಾಗಿ ತ್ರಯೋದಶಿಯ ದಿನ ಅವರು ದೇಹವನ್ನು ಬಿಟ್ಟರು, ಆದ್ದರಿಂದಲೇ ತ್ರಯೋದಶೀತಿಥಿ ವ್ಯಾಕರಣ ಶಾಸ್ತ್ರಕ್ಕೆ ಅನಧ್ಯಯನ ದಿನ. ಎಲೈ ಶೇಷ, ನೀನು ಭೂಲೋಕದಲ್ಲಿ ಅವತರಿಸಿ ಆ ಸೂತ್ರ ವಾರ್ತಿಕಗಳಿಗೆ ಭಾಷ್ಯವನ್ನು ರಚಿಸಬೇಕೆಂದೂ. ಚಿದಂಬರದಲ್ಲಿ ಶಿವನ ನೃತ್ಯವನ್ನು ನೋಡುವ ಯೋಗ ನಿನಗೆ ಲಭಿಸುವುದೆಂದೂ ಶಿವನ ಆಜ್ಞೆಯಾಗಿದೆ.

ಗೋನರ್ದದೇಶದ ಗೋಣಿಕಾ ಎಂಬ ತಪಸ್ವಿನಿ ಅರ್ಘ್ಯಪ್ರದಾನ ಮಾಡುತ್ತಿರುವಾಗ ಅವಳ ಅಂಜಲಿಪುಟದಿಂದ ಆದಿಶೇಷನು ಅವತರಿಸಿದನು. ಅಂಜಲಿಯಿಂದ ಹೊರಬಂದುದರಿಂದ ಅವನಿಗೆ ಪತಂಜಲಿಯೆಂದು ಗೋಣಿಕೆ ಹೆಸರಿಟ್ಟಳು ಪತಂಜಲಿಯು ದೀರ್ಘ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಭಾಷ್ಯರಚನೆಯ ಶಕ್ತಿಯನ್ನು ಪಡೆದುಕೊಂಡನು. ಅನಂತರ ಚಿದಂಬರ ಕ್ಷೇತ್ರಕ್ಕೆ ಹೋಗಿ ಶಿವನೃತ್ಯವನ್ನು ವೀಕ್ಷಿಸಿ ವ್ಯಾಕರಣ ಮಹಾಭಾಷ್ಯವನ್ನು ರಚಿಸಿದನು.

ಭಾಷ್ಯವನ್ನು ಅಧ್ಯಯನ ಮಾಡಲು ನಾನಾ ದೇಶಗಳಿಂದ ಶಿಷ್ಯರು ಆಗಮಿಸಿದರು. ಅವರೆಲ್ಲರಿಗೂ ಪತಂಜಲಿಯು ತೆರೆಯ ಮರೆಯಲ್ಲಿ ಕುಳಿತು ಪಾಠ ಹೇಳುತ್ತಿದ್ದನು. ತೆರೆಯನ್ನು ಯಾವ ಸಂದರ್ಭದಲ್ಲಿಯೂ ಸರಿಸಬಾರದೆಂದು ಶಿಷ್ಯರಿಗೆ ಕಟ್ಟಪ್ಪಣೆಯಾಗಿತ್ತು.

ಒಂದು ದಿನ ಶಿಷ್ಯರು ಭಾಷ್ಯಪುಸ್ತಕಗಳನ್ನು ಕೈಯಲ್ಲಿ ಹಿಡಿದು ಅಧ್ಯಯನಕ್ಕೆ ಕುಳಿತಿದ್ದರು, ತೆರೆಯ ಮರೆಯಲ್ಲಿ ಪತಂಜಲಿಯ ಅಧ್ಯಾಪನಕಾರ್ಯ ನಡೆದಿತ್ತು. ಅಷ್ಟಾಧ್ಯಾಯಿಯ 'ವ್ಯಾಸರೂಪೋಽಸ್ತ್ರಿಯಾಂ' ಎಂಬ ಸೂತ್ರದ ಮೇಲೆ ವ್ಯಾಖ್ಯಾನವು ನಡೆಯುತ್ತಿತ್ತು, ಗುರುವಿನ ಅದ್ಭುತವಾದ ವಾಗ್ವೈಖರಿಯನ್ನು ಕೇಳಿ ಬೆರಗಾದ ಶಿಷ್ಯರು ತೆರೆಯನ್ನು ಸರಿಸಿದರು. ಅವರು ಕಂಡದ್ದೇನು ?

ವಿವೃತಫಣಸಹಸ್ರ ಮುಗ್ರದಂಷ್ಟ್ರಂ
ಕ್ಷಿತಿತಲಕುಂಡಲಿತಾರ್ಧಭೋಗಭೀಮಂ ।
ಪ್ರಸೃತಪರಿಹೃತೋಭಯಾಗ್ರಜಿಹ್ವಂ
ತರಲದೃಶಂ ತಮಥ ವ್ಯಲೋಕಯಂಸ್ತೇ ॥ (5—16)

ಕ್ಷಣಾರ್ಧದಲ್ಲಿ ಎಲ್ಲ ಶಿಷ್ಯರೂ ಭಾಷ್ಯಪುಸ್ತಕಗಳೊಡನೆ ಸುಟ್ಟು ಭಸ್ಮವಾದರೂ ಆ ಸಮಯದಲ್ಲಿ ಕಾರಣಾಂತರದಿಂದ ಹೊರಗೆ ಹೋಗಿದ್ದ ಒಬ್ಬ ಶಿಷ್ಯನು ಬಂದನು, ಪತಂಜಲಿಯು "ಎಲೈ ಮುಕ್ತಾಯದ ಶಾಂತಿಪಾಠವನ್ನೂ ಹೇಳದೆ, ನನ್ನ ಅನುಮತಿಯೂ ಇಲ್ಲದೆ ಪಾಠದ ಮಧ್ಯದಲ್ಲಿ ಎದ್ದು ಹೋದೆಯಾ ? ರಾಕ್ಷಸನಾಗು !" ಎಂದು ಅವನನು



ಶಪಿಸಿದನು. ಕಡೆಗೆ ಕೃಪೆಯಿಂದ "ನೀನು ದಾರಿಯಲ್ಲಿ ಬರುವವರನ್ನು ಕುರಿತು ಪಚಧಾತುವಿಗೆ ಕ್ತಪ್ರತ್ಯಯ ಪರವಾದಾಗ ಯಾವ ರೂಪವಾಗುವುದೆಂದು ಕೇಳುತ್ತಿರು. ಯಾವನು ಸರಿಯಾದ ರೂಪವನ್ನು ಹೇಳುವನೋ ಅವನಿಗೆ ವ್ಯಾಕರಣಶಾಸ್ತ್ರವನ್ನು ಕಲಿಸು. ನನ್ನ ಮಹಾಭಾಷ್ಯವೆಲ್ಲವೂ ನಿನಗೆ ಸ್ಫುರಿಸಲಿ, ಅನಂತರ ಶಾಪಮುಕ್ತನಾಗುವೆ" ಎಂದು ಅನುಗ್ರಹಿಸಿದನು.

ಆ ಶಿಷ್ಯನು ಬ್ರಹ್ಮರಾಕ್ಷಸನಾಗಿ ಒಂದು ವಟವೃಕ್ಷದಲ್ಲಿ ಕುಳಿತು ದಾರಿಯಲ್ಲಿ ಬಂದವರನ್ನು ಪಚಧಾತುವಿಗೆ ಕ್ತಪ್ರತ್ಯಯ ಸೇರಿದಾಗ ಯಾವ ರೂಪವಾಗುತ್ತದೆ ? ಎಂದು ಪ್ರಶ್ನೆಮಾಡುತ್ತಿದ್ದನು. 'ಪಚಿತ' ಎಂದು ಹೇಳಿದವರನ್ನು ತಿಂದುಬಿಡುತ್ತಿದ್ದನು. ಹೀಗಿರಲು ಚಂದ್ರಗುಪ್ತನೆಂಬ ವಿಪ್ರನು ಆತನ ಪ್ರಶ್ನೆಗೆ 'ಪಕ್ವ' ಎಂದು ಉತ್ತರವಿತ್ತನು. ಬ್ರಹ್ಮರಾಕ್ಷಸನಿಗೆ ಸಂತೋಷವಾಯಿತು. ಚಂದ್ರಗುಪ್ತನಿಗೆ ಎರಡುತಿಂಗಳ ಕಾಲ ಅವ್ಯಾಹತವಾಗಿ ಮಹಾಭಾಷ್ಯವನ್ನು ಹೇಳಿಕೊಟ್ಟನು. ಆ ವಿಪ್ರನು ಆಲದ ಎಲೆಗಳ ಮೇಲೆ ಭಾಷ್ಯವನ್ನು ಬರೆದುಕೊಳ್ಳುತ್ತ ಹೋದನು. ಬ್ರಹ್ಮರಾಕ್ಷಸನಿಗೆ ಶಾಪದಿಂದ ವಿಮುಕ್ತಿಯಾಯಿತು.

ಚಂದ್ರಗುಪ್ತನು ಮಹಾಭಾಷ್ಯವನ್ನು ಬರೆದುಕೊಂಡಿದ್ದ ಎಲೆಗಳನ್ನು ಗಂಟುಕಟ್ಟಿ ಹೊತ್ತುಕೊಂಡು ತನ್ನ ಉಜ್ಜಯಿನಿಗೆ ಹಿಂದಿರುಗಿದನು. ದಾರಿಯಲ್ಲಿ ನದಿಯ ಬಳಿ ತಂಗಿದ್ದಾಗ ಒಂದು ಮೇಕೆಯಮರಿ ಕೆಲವು ಎಲೆಗಳನ್ನು ಕಚ್ಚಿ ನಾಶಮಾಡಿತು. ಉಜ್ಜಯಿನಿಗೆ ಹೋಗಿ ಚಂದ್ರಗುಪ್ತನು ಭಾಷ್ಯಗ್ರಂಥವನ್ನು ಕ್ರಮವಾಗಿ ಬರೆದನು. ಅಜದಿಂದ ನಷ್ಟವಾದ ಭಾಗಕ್ಕೆ ಕುಂಡಲಿ ಗುರುತು ಮಾಡಿದನು.

ಚಂದ್ರಗುಪ್ತನಿಗೆ ಬ್ರಾಹ್ಮಣಾದಿ ನಾಲ್ವರು ಮಡದಿಯರಿದ್ದರು. ಬ್ರಾಹ್ಮಣಿಯಲ್ಲಿ ವರರುಚಿ, ಕ್ಷತ್ರಿಯೆಯಲ್ಲಿ ವಿಕ್ರಮಾರ್ಕ, ವೈಶ್ಯೆಯಲ್ಲಿ ಭಟ್ಟಿ, ಶೂದ್ರಳಲ್ಲಿ ಭರ್ತೃಹರಿ ಎಂಬ ನಾಲ್ವರು ಪುತ್ರರು ಜನಿಸಿದರು. ಶೂದ್ರಪುತ್ರನಾದ ಭರ್ತೃಹರಿ ವ್ಯಾಕರಣ ವಿದ್ವಾಂಸನಾಗಿ ವಾಕ್ಯಪದೀಯ, ಸುಭಾಷಿತತ್ರಿಶತಿಗಳನ್ನೂ, ಮಹಾಭಾಷ್ಯಕ್ಕೆ ಸಪಾದಲಕ್ಷಾತ್ಮಕವಾದ ಒಂದು ಅದ್ಭುತವ್ಯಾಖ್ಯಾನವನ್ನೂ ರಚಿಸಿದನು. ತನ್ನ ವ್ಯಾಖ್ಯಾನದ ಬಗೆಗೆ ಹೆಮ್ಮೆಯಿಂದ

ಅಹೋ ಭಾಷ್ಯಮಹೋ ಭಾಷ್ಯಮಹೋ ವಯಮಹೋ ವಯಂ ।
ಮಾಮದೃಷ್ಟ್ವಾ ಗತಃ ಸ್ವರ್ಗಮಕೃತಾರ್ಥಃ ಪತಂಜಲಿಃ ॥ (8–14)

ಎಂದು ಹೇಳಿಕೊಂಡನು. ಈ ಗರ್ವೋಕ್ತಿಯ ಫಲವಾಗಿ ಅವನ ವ್ಯಾಖ್ಯಾನ ಪ್ರಸಿದ್ಧಿಗೆ ಬರದೆ ನಷ್ಟವಾಯಿತು. ಏಕೆಂದರೆ—

ವಿದ್ಯಾನ ದೂಷಯತಿ ಕಿಂ ವಿನಯವ್ಯಪಾಯಃ ।
ನಾಸಾವಿಯೋಗ ಇವ ಯೋಷಿತಮುಜ್ಜ್ವಲಾಂಗೀಂ ॥ (8–15)

ಇತ್ತ ಚಂದ್ರಗುಪ್ತನು ಗೌಡಪಾದರಿಂದ ಉಪದೇಶವನ್ನು ಪಡೆದು ಕೆಲವು ಕಾಲ ಕಾಶಿಯಲ್ಲಿದ್ದು ಬದರಿಕಾಶ್ರಮಕ್ಕೆ ತೆರಳಿ ಗೋವಿಂದಯತೀಶ್ವರನೆಂದು ಖ್ಯಾತನಾದನು. ಆತನೇ ಪತಂಜಲಿಯ ಅವತಾರ, ಅಲ್ಲಿಗೆ ಶಂಕರಾಚಾರ್ಯರು ಬಂದು ಗೋವಿಂದಯತಿಯಿಂದ ಉಪದೇಶವನ್ನು ಪಡೆದು ಕಾಂಚಿಗೆ ಹೋದರು. ಗೋವಿಂದಯತಿ ಸಿದ್ಧಿಯನ್ನು ಪಡೆದನು !

ರಾಮಭದ್ರದೀಕ್ಷಿತನು. ರಸದೃಷ್ಟಿಯುಳ್ಳ ಪ್ರತಿಭಾನ್ವಿತ ಕವಿ. ನದಿ. ಸಮುದ್ರ, ಸೂರ್ಯೋದಯ, ಚಂದ್ರೋದಯ, ಶೃಂಗಾರಸಂದರ್ಭಗಳನ್ನು ರಮಣೀಯವಾಗಿ ವರ್ಣಿಸಿದ್ದಾನೆ. ನಾಲ್ಕನೆಯ ಸರ್ಗದಲ್ಲಿ ವರ್ಣಿಸಿರುವ ನಟರಾಜನ ನೃತ್ಯದ ಪ್ರಕರಣ ಪ್ರಶಂಸನೀಯವಾಗಿದೆ.

1. ನೃತ್ಯಕಾಲದಲ್ಲಿ ಶಿವನ ಜಟೆ ನಕ್ಷತ್ರಮಂಡಲವನ್ನು ಅಪ್ಪಳಿಸುತ್ತಿತ್ತು, ಹೆಜ್ಜೆ ಇಟ್ಟರೆ ನೆಲ ಕುಸಿಯುತ್ತಿತ್ತು...

ಸುದದರ್ಶ ಸಪದಿ ಭ್ರಮಜ್ಜಟಾ [illegible]
ತಾಡಿತೋಡುಪಟಲಂ ತದಾ ಜನಃ ।
ವ್ಯಾಲನೂಪುರರಣತ್ಪದಾರ್ಪಣ
ನ್ಯಂಚಿತಕ್ಷಿತಿ ನಟೇಶನರ್ತನಂ ॥ (4–67)

2. ಸಮಾಸೋಕ್ತಿಯಿಂದ ನಾಯಕ ವ್ಯವಹಾರವನ್ನು ವ್ಯಂಜಿಸುವ ಈ ಪದ್ಯ ಮನೋಹರವಾಗಿದೆ

ವಪುರ್ವಿಲಿಂಪನ್ ಸಹಕಾರರೇಣುನಾ
ಪ್ರಫುಲ್ಲಮಲ್ಲೀ ಪರಿರಂಭಸಂಭ್ರಮೀ ।
ನಿಪೀತಕಂಕೇಲಿಲತಾದಲಾಧರಃ
ಚಚಾರ ಮಂದಂ ಕಿಲ ದಕ್ಷಿಣಾನಲಃ ॥ (6–44)

3. ಇದೊಂದು ಅಭೂತಪೂರ್ವಹೋಲಿಕೆ...ಪತಂಜಲಿಯನ್ನು ಕಂಡು ಬೇಡರಹಳ್ಳಿಯ ನಾಯಿಗಳು ಬಗುಳಿದವು, ಸರಸಕವಿಯ ವಾಣಿಯನ್ನು ಕೇಳಿ ದುರುಳರು ನಿಂದಿಸುವಂತೆ...

ತಮವೇಕ್ಷ್ಯ ನಿನಿಂದುರುಚ್ಚಕೈಃ
ಅಪದೇ ಪಕ್ಕಣಕಂಕ್ಕುರಾಃ ಪಥಿ ।
ಸರಸಸ್ಯ ಕವೇಃ ಕ್ರಮಂ ಗಿರಾಂ
ಅವಕರ್ಣ್ಯಾಕ್ಷಮಯೇವ ದುರ್ಧಿಯಃ ॥ (3–37)

## ಹೀರಸೌಭಾಗ್ಯ (17ನೇಯ ಶತಮಾನ)

ಹದಿನೇಳು ಸರ್ಗಗಳಿರುವ ಈ ಕಾವ್ಯವನ್ನು ದೇವವಿಮಲಗಣಿ ಬರೆದಿದ್ದಾನೆ. ಇವನ ತಂದೆ ಶಿವಸಾಧು. ತಾಯಿ ಸೌಭಾಗ್ಯದೇವಿ. ಗುರು ಸೀಹವಿಮಲಗಣಿ. ಧನವಿಜಯನೆಂಬ ರಾಜನು ಈ ಕಾವ್ಯವನ್ನು ಶೋಧಿಸಿದನೆಂದು ಗ್ರಂಥಪ್ರಶಸ್ತಿಶ್ಲೋಕದಿಂದ ತಿಳಿದುಬರುತ್ತದೆ.

ಹೀರವಿಜಯಸೂರಿಯೆಂಬ ಜೈನಾಚಾರ್ಯನ ಚರಿತೆ ಹೀರಸೌಭಾಗ್ಯದಲ್ಲಿ ವರ್ಣಿತವಾಗಿದೆ. ಈ ಆಚಾರ್ಯನು ವಿಕ್ರಮ ಸಂ. 1652ರಲ್ಲಿ(ಕ್ರಿ.ಶ.1595) ನಿರ್ವಾಣಹೊಂದಿದನೆಂದು ಕಾವ್ಯದಲ್ಲಿ ಹೇಳಿದೆ. ವರ್ಣನಾವಿವರಗಳನ್ನು ಗಮನಿಸಿದರೆ ಕವಿಯು ಆಚಾರ್ಯನ ಸಮಕಾಲಿಕನೆಂದೂ ಪ್ರತ್ಯಕ್ಷದರ್ಶಿಯೆಂದೂ ಹೇಳಬಹುದು. ಆದ್ದರಿಂದ ಕ್ರಿ.ಶ. 17ನೆಯ ಶತಮಾನದ ಆದಿಯಲ್ಲಿ ದೇವವಿಮಲಗಣಿ ಈ ಕಾವ್ಯವನ್ನು ರಚಿಸಿರಬೇಕು.

24ನೆಯ ತೀರ್ಥಂಕರ ಮಹಾವೀರನಿಂದ ಹಿಡಿದು ಹೀರವಿಜಯಸೂರಿಯವರೆಗೆ 60 [illegible] ಗುರುಶಿಷ್ಯ ಪರಂಪರೆಯನ್ನು ಸೂಕ್ಷ್ಮವಾಗಿ ಹೇಳಿ, ಹೀರವಿಜಯಸೂರಿಯ ಚರಿತೆಯನ್ನು



ವಿಸ್ತಾರವಾಗಿ ಕವಿ ವರ್ಣಿಸಿದ್ದಾನೆ. ಗುಜರಾತಿನ ಕುರಾ ಎಂಬ 'ವ್ಯವಹಾರಿಪುಂಗವ'ನ ಪತ್ನಿ ನಾಥಿಯಲ್ಲಿ ಹೀರಕುಮಾರನು ಜನಿಸಿ ವಿಜಯದಾನಸೂರಿಯಿಂದ ದೀಕ್ಷೆಯನ್ನು ಪಡೆದು ಲೋಕ ಸಂಚಾರ ಮಾಡುತ್ತಾ ಜೈನಧರ್ಮವನ್ನು ಬೋಧಿಸಿದನೆಂಬುದೆಂದು ಕಥಾವಸ್ತು.

ಹಲವಾರು ಚಾರಿತ್ರಿಕ ವಿಷಯಗಳು ದೊರೆಯುವುದೇ ಈ ಕಾವ್ಯದ ವೈಶಿಷ್ಟ್ಯ. ಬಾಬರ್, ಹುಮಾಯೂನರ ಪ್ರಸ್ತಾಪದೊಡನೆ ಮೊಗಲ್‌ಚಕ್ರವರ್ತಿ ಅಕಬರನ ವರ್ಣನೆ ವಿಸ್ತಾರವಾಗಿ ಬಂದಿದೆ. ಅಕಬರನು ಹೀರವಿಜಯಸೂರಿಯನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನೆಂದೂ ಆಚಾರ್ಯನ ಬೋಧೆಗೆ ಶರಣಾಗಿ ಜೈಲಿನಲ್ಲಿಟ್ಟಿದ್ದ ಖೈದಿಗಳನ್ನೂ, ಪಂಜರದಲ್ಲಿದ್ದ ಶುಕಾದಿ ಪಕ್ಷಿಗಳನ್ನೂ ಬಿಡುಗಡೆ ಮಾಡಿದನೆಂದೂ ಜೆಸಿಯಾ ಎಂಬ ತಲೆಗಂದಾಯವನ್ನು ತೆಗೆದುಹಾಕಿ ದನೆಂದೂ ಕವಿ ಹೇಳಿದ್ದಾನೆ. ಅಹಮ್ಮದಾಬಾದ್ ಗುಜರಾತನ್ನಾಳುತ್ತಿದ್ದ ಮಹಮ್ಮದಷಾಹಿ, ದೇವಗಿರಿಯ ನಿಜಾಮ, ಡೆಲ್ಲಿ, ಆಗ್ರಾ. ಲಾಭಪುರ (ಲಾಹೋರ್), ಅರ್ಬುದಗಿರಿ (ಅಬೂಪರ್ವತ)—ಮುಂತಾದ ನಗರಾದಿಗಳ ವರ್ಣನೆ ಇದೆ.

ದೇವವಿಮಲಗಣಿ ತನ್ನ ಹೀರಸೌಭಾಗ್ಯಕ್ಕೆ ಸೊಗಸಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ತುಂಬ ಪ್ರಾಮಾಣಿಕತೆಯಿಂದ ದೇಶಕಾಲಾದಿಗಳ ವಿವರವನ್ನು ಕೊಡುತ್ತಾನಲ್ಲದೆ, ಕಠಿಣಶಬ್ದ ಗಳಿಗೆ ದೇಶಭಾಷೆಯ ಅರ್ಥವನ್ನೂ ಬರೆಯುತ್ತಾನೆ. ತನ್ನ ಪ್ರಯೋಗವಿಶೇಷಗಳಿಗೆ ವಿಶೇಷ ವಾಗಿ ಶ್ರೀಹರ್ಷನ ನೈಷಧಕಾವ್ಯದ ಆಧಾರವನ್ನು ಒದಗಿಸುತ್ತಾನೆ. ಹೀಗೆಯೇ ಕಾಳಿದಾಸನ ರಘುವಂಶವನ್ನೂ, ಸುಮಸೌಭಾಗ್ಯ, ಸುರಥೋತ್ಸವ ಎಂಬ ಕಾವ್ಯಗಳನ್ನೂ, ಜೈನಮತದ ವಿವಿಧಸುತ್ತಿಗ್ರಂಥಗಳನ್ನೂ ಉದಾಹರಿಸಿದ್ದಾನೆ. ಅಲ್ಲಿಲ್ಲಿ ಇವನು ಉದ್ಧರಿಸುವ 'ಚಂಪೂಕಥೆ', 'ಚಂಪೂಟಿಪ್ಪನಕ'ಗಳು ಯಾವುವೆಂಬುದು ತಿಳಿಯದು. ಫುರಮಾನ (ಫರ್ಮಾನ್). ಸಾಹಿ (ಷಹಾ) ಮೊದಲಾದ ಉರ್ದೂಶಬ್ದಗಳನ್ನೂ ಕೆಲವಡೆ ಕವಿ ಬಳಸಿದ್ದಾನೆ.

ದೇವವಿಮಲಗಣಿಯ ಶೈಲಿ ಪ್ರಸನ್ನಗಂಭೀರವಾದುದು. ಶ್ರೀಹರ್ಷನ ನೈಷಧಕಾವ್ಯವನ್ನು ಈತನು ಕರತಲಾಮಲಕವಾಗಿ ಮಾಡಿಕೊಂಡಿದ್ದನೆಂದು ಕಾಣುತ್ತದೆ. ಶ್ರೀಹರ್ಷನ ಪ್ರಭಾವ ಸ್ಪಷ್ಟವಾಗಿ ಗೋಚರಿಸಿದರೂ ಈತನು ಅನುಕರಣಕವಿಯಲ್ಲ. ಇವನಿಗೆ ವಿಪುಲವಾದ ಕಲ್ಪನಾ ಶಕ್ತಿಯುಂಟು ಉತ್ಪ್ರೇಕ್ಷೆಗಳೇ ಅಧಿಕ ಸ್ರಗ್ವಿಣೀ ಮುಂತಾದ ವಿವಿಧ ವೃತ್ತಗಳನ್ನು ಬಳಸಿದ್ದಾನೆ.

1. ಹೀರವಿಜಯಸೂರಿ ಸಂಚರಿಸುತ್ತಿದ್ದ ವನಭೂಮಿ ಛಂದೋಜಾತಿಯಂತೆ ಇದ್ದಿತು. ವಿವಿಧ ವೃತ್ತನಾಮಗಳನ್ನು ಸೇರಿಸುವ ಚಾತುರ್ಯವನ್ನು ಇಲ್ಲಿ ಕಾಣಬಹುದು—

ಕುತ್ರಚಿದ್ವಾಣಿನೀ ಸ್ರಗ್ವಿಣೀ ಶಾಲಿನೀ
ಯತ್ರ ಲೋಕಂ ಪೃಣಾ ಕ್ವಾಪಿ ವಾತೋರ್ಮಿಕಾ ।
ಹಂಸಮಾಲಾ ಕ್ವಚಿತ್ ಕ್ವಾಪಿ ಕನ್ಯಾಮೃಗೀ
ಕುತ್ರಚಿನ್ಮಾಲತೀ ಪುಷ್ಟಿತಾಗ್ರಾ ಪುನಃ ॥
ಕ್ವಾಪಿ ಶಾರ್ದೂಲವಿಕ್ರೀಡಿತಂ ದೃಶ್ಯತೇ
ಕ್ವಾಪಿ ದೃಪ್ಯದ್ ಭುಜಂಗಪ್ರಯಾತಂ ಪುನಃ ।
ಸೂರಿಶೀತದ್ಯುತೇಃ ಸರ್ವತಃ ಪದ್ಧತಾ
ಛಂದಸಾಂ ಜಾತಿವತ್ ಕುಂಜಭೂಮಿಃ ಸ್ಮ ಭೂತ್ ॥ 12.2.3.

2. ದಿಲ್ಲೀನಗರ ವರ್ಣನೆ.

ದಿಲ್ಲೀತಿ ತತ್ರ ನಗರೀ ನ ಗರೀಯಸೀಭಿಃ
ಶ್ರೀಭಿಃ ಕ್ವಚಿದ್ವಿರಹಿತಾ ರಹಿತಾನನೀತ್ಯಾ ।
ರೇಜೇ ಗಿರೀಶಗಿರಿಶೃಂಗಕೃತೈಸ್ತಪೋಭಿಃ
ಪ್ರಾಪ್ತಾ ಪರಾಂ ಶ್ರಿಯಮಸೌ ತ್ರಿಶಿರಃ ಪುರೀವ ॥ 10—8

(ತ್ರಿಶಿರಃಪುರೀ = ಅಲಕಾನಗರ)

## ನಟೇಶವಿಜಯ (ಕ್ರಿ.ಶ. 17ನೆಯ ಶತಮಾನ)

ವಾಧೂಲಕುಲದಲ್ಲಿ ಜನಿಸಿದ ವೆಂಕಟಕೃಷ್ಣದೀಕ್ಷಿತನು ಇದನ್ನು ರಚಿಸಿದ್ದಾನೆ. ಇವನು ತಂಜಾವೂರಿನ ಸಾಹಜಿಯೆಂಬ ಮರಾಟೆಯ ರಾಜನ (1684-1711) ಆಶ್ರಯದಲ್ಲಿದ್ದನು. ಶ್ರೀರಂಗಪಟ್ಟಣ. ತ್ರಿಶಿರಃಪುರ (ತಿರುಚನಾಪಳ್ಳಿ), ಜೆಂಜೀಪುರಾಧೀಶರಿಂದ ಸುಮಾನಿತನಾಗಿದ್ದನು. ಈ ಕವಿಯು ನಟೇಶವಿಜಯವನ್ನಲ್ಲದೆ ಶ್ರೀರಾಮಚಂದ್ರೋದಯಕಾವ್ಯ, ಉತ್ತರಚಂಪೂ, ಕುಶಲವವಿಜಯನಾಟಕಗಳನ್ನು ಬರೆದಿದ್ದಾನೆ. ಆವನು ಗೋಪಾಲನೆಂಬ ಒಬ್ಬ ಸಾಮಂತ ರಾಜನಿಗೆ ಕವಿತಾರಚನೆಯನ್ನು ಹೇಳಿಕೊಡುತ್ತಿದ್ದನು. ನಟೇಶವಿಜಯವ ಗೋಪಾಲರಾಜನ ಕೃತಿಯೆಂದು ಅದರಲ್ಲಿ ಹೇಳಿದೆಯಾದರೂ ಆ ರಾಜನ ಹೆಸರಿನಲ್ಲಿ ವೆಂಕಟಕೃಷ್ಣದೀಕ್ಷಿತನೇ ರಚಿಸಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಕುಶಲವವಿಜಯ ನಾಟಕದಲ್ಲಿ ಈ ಕವಿಯೇ—

ಚಕ್ರೇ ಯುಗಂ ನಟೇಶವಿಜಯ ಶ್ರೀರಾಮಚಂದ್ರೋದಯಾ—
ಭಿಖ್ಯಂ ಸೋತ್ತರಚಂಪು ಧೀರಪದಸಂದರ್ಭೇಽಸ್ಯ, ಯತ್ನಾಃ ಕಿಯಾನ್ ॥

ಎಂಬುದಾಗಿ ತಾನು ನಟೇಶವಿಜಯವನ್ನು ಬರದುದಾಗಿ ತಿಳಿಸಿದ್ದಾನೆ.

**ಕಾವ್ಯ ಪರಿಚಯ :**

ಇದರಲ್ಲಿ ಹತ್ತು ಸರ್ಗಗಳಿವೆ. ಚಿದಂಬರಕ್ಷೇತ್ರದಲ್ಲಿ ನಟರಾಜನ ನೃತ್ಯಕ್ಕೆ ಸಂಬಂಧಿಸಿದ ಪರಿಸರವೇ ವರ್ಣನೀಯವಸ್ತುವೆನ್ನಬಹುದು. ಶಿವಲೀಲೆಗೆ ಸಂಬಂಧಿಸಿದ ಒಂದೆರಡು ವೃತ್ತಾಂತಗಳನ್ನು ಅನುಷಂಗಿಕವಾಗಿ ತರಲಾಗಿದೆ. ಉತ್ತಮಕಾವ್ಯಪ್ರತಿಭೆಯುಳ್ಳ ಈ ಕವಿ ಸಂಗತವಾದ ಒಂದು ಕಥೆಯನ್ನಾರಿಸಿಕೊಳ್ಳದೆ ತನ್ನ ಕವಿತಾಶಕ್ತಿಯನ್ನು 'ಕಾನನಕೌಮುದಿ'ಯಾಗಿ ಮಾಡಿದ್ದಾನೆ. ಒಡವೆಯಂತೆ ಮೋಹಕವಾದ ಋತುವರ್ಣನೆ ಯಾರೂ ಧರಿಸದೆ ಪ್ರದರ್ಶನಕ್ಕಿಟ್ಟಿರುವ ಕಾಣಿಸುತ್ತದೆ.





1. ಸುಂದರ ತರುಣನ ರೂಪದಲ್ಲಿ ಭಿಕ್ಷೆಗೆ ಬಂದ ಶಿವನಿಗೆ ಒಬ್ಬ ತರಣಿ ದುಗ್ಧಾನ್ನವನ್ನು ನೀಡುವೆನೆಂದು ಬೆಣ್ಣೆಯನ್ನು ನೀಡಿದಳು ! ಅದು ಅವಳ ಹೃದಯದಂತೆ ಸ್ನಿಗ್ಧವಾಗಿತ್ತು !

ಸಾಕೂತಮಂದಹಸಿತೇನ ಶಶಾಂಕಮೌಲೇಃ
ಕಾಕೂದಿತೇನ ಚ ಕರಂಬಿತಪಾರವಶ್ಯಾ ।
ದುಗ್ಧಾನ್ನ ಮಿತ್ಯುಪಹೃತಂ ನವನೀತಮೇಕಾ
ಸ್ನಿಗ್ಧಾತ್ಮಕಂ ಸ್ವಮಿವ ಚಿತ್ತಮುದಾದಮುಷ್ಮೈ ॥ 3-14

2. ವಸಂತಕಾಲದ ಕೋಗಿಲೆಗಳ ಪಂಚಮನಾದ ಹರಡಿತು—

ಪಂಚಮೇನ ನಿನದೇನ ದಿಶಂತೀ
ಪಂಚತಾಂ ಪಥಿಕ ಲೋಕವಧೂನಾಂ ।
ಪಂಚಸಾಯಕಯಶಾಂಸಿ ಪಠಂತೀ
ಸಂಚಚಾರ ಪಿಕಸಂತತಿರುಚ್ಚೈಃ ॥ 9-2

## ಪರಿಶಿಷ್ಟ

ಸಂಸ್ಕೃತವಾಙ್ಮಯದಲ್ಲಿ ದೊರೆಯುವ ಅಪಾರವಾದ ಕಾವ್ಯರಾಶಿಯಲ್ಲಿ ಈಗ ಮುದ್ರಿತವಾಗಿರುವ ಕೆಲವು ಮಹಾಕಾವ್ಯಗಳನ್ನು ಇದುವರೆಗೆ ಪರಿಚಯ ಮಾಡಿಕೊಡಲಾಗಿದೆ. ವಿಸ್ತರಭಯದಿಂದ ಎಲ್ಲವನ್ನೂ ಪರಾಮರ್ಶಿಸಿಲ್ಲ. ಗಮನಾರ್ಹವಾದ ಕೆಲವು ಕೃತಿಗಳ ದಿಗ್ದರ್ಶನವನ್ನು ಮಾತ್ರ ಈಗ ಮಾಡಲಾಗುವುದು.

1. ಕ್ಷತ್ರಚೂಡಾಮಣಿ (12ನೆಯ ಶತಮಾನ)

ಗದ್ಯ ಚೂಡಾಮಣಿಯನ್ನು ಬರೆದ ವಾದೀಭಸಿಂಹಸೂರಿಯು ಈ ಕಾವ್ಯದಲ್ಲಿ ಹನ್ನೊಂದು ಲಂಬಗಳಿವೆ. ಎಲ್ಲವೂ ಅನುಷ್ಟುಪ್ ವೃತ್ತಗಳಿಂದ ಕೂಡಿವೆ. ಅರ್ಥಾಂತರನ್ಯಾಸ ಕಾವ್ಯಲಿಂಗಾಲಂಕಾರಗಳನ್ನು ಕವಿ ವಿಶೇಷವಾಗಿ ಬಳಸಿದ್ದಾನೆ. ಜೀವಂಧರ ಚರಿತೆ ಕಥಾವಸ್ತು.

2. ಹರಚರಿತಚಿಂತಾಮಣಿ (13ನೆಯ ಶತಮಾನ)

ಇದನ್ನು ಬರೆದ ಜಯದ್ರಥನು ಕಾಶ್ಮೀರದವನು, ಶೃಂಗಾರರಥನ ಮಗ. ತನ್ನ ತಂತ್ರಾಲೋಕವಿವೇಕದಲ್ಲಿ ಜಯದ್ರಥನು ಕಾಶ್ಮೀರದ ಉಚ್ಚಲರಾಜನ (ಕ್ರಿ. ಶ. 1011-1111) ಆಸ್ಥಾನದಲ್ಲಿ ತನ್ನ ಪ್ರಪಿತಾಮಹನಾದ ಶಿವರಥನು ಮಂತ್ರಿಯಾಗಿದ್ದನೆಂದು ಹೇಳಿದ್ದಾನೆ. ಅಲ್ಲದೆ ಪೃಥ್ವೀರಾಜವಿಜಯವನ್ನು (ಕ್ರಿ. ಶ. 1190) ಉಲ್ಲೇಖಿಸಿದ್ದಾನೆ. ಆದ್ದರಿಂದ ಈತನು 13ನೆಯ ಶತಕದ ಆದಿಭಾಗದಲ್ಲಿದ್ದಿರಬೇಕು.

ಹರಚರಿತಚಿಂತಾಮಣಿಯಲ್ಲಿ 32 ಸರ್ಗಗಳಿದ್ದು ಶಿವನ ಲೀಲಾವತಾರದ ಕಥೆಗಳನ್ನು ವರ್ಣಿಸಿದೆ. ಕಾಶ್ಮೀರದ ನಗರ, ಗ್ರಾಮ, ತೀರ್ಥಗಳ ವಿವರಣೆಯು ಕಲ್ಹಣನ ರಾಜತರಂಗಿಣಿಯಲ್ಲಿ

ಹೇಳಿದ ವಿವರಣೆಗೆ ತಾಳೆಯಾಗುತ್ತದೆ. ಈ ಗ್ರಂಥವು ಪುರಾಣಶೈಲಿಯಲ್ಲಿದೆ. ಕಾವ್ಯ ದೃಷ್ಟಿಯಿಂದ ವಿಶೇಷವಿಲ್ಲ.

3. ಜಯಂತವಿಜಯ (ಕ್ರಿ. ಶ. 1222)

ಕಾಶೀರಾಜನಿಂದ ವಾದಿಸಿಂಹನೆಂಬ ಬಿರುದನ್ನು ಪಡೆದ ಅಭಯದೇವನೆಂಬ ಜೈನಮುನಿ ಈ ಕಾವ್ಯವನ್ನು ರಚಿಸಿದ್ದಾನೆ. ತಂದೆ ದೇವಭದ್ರ. ಗುರು ವಿಜಯಚಂದ್ರ. ಈ ಕಾವ್ಯದಲ್ಲಿ 19 ಸರ್ಗಗಳಿದ್ದು ಜಯಂತನಚರಿತೆ ಕಥಾವಸ್ತುವಾಗಿದೆ ಸೂರ್ಯೋದಯ, ಸೂರ್ಯಾಸ್ತ—ಮುಂತಾದವುಗಳ ವಿಸ್ತೃತವರ್ಣನೆ ಇದೆ.

4 ಚಂದ್ರಪ್ರಭಚರಿತ (13ನೆಯ ಶತಮಾನ)

ಚಂದ್ರಪ್ರಭತೀರ್ಥಂಕರನ ಚರಿತೆಯನ್ನು ವರ್ಣಿಸುವ ಈ ಕಾವ್ಯವನ್ನು ವೀರನಂದಿ ಬರೆದಿದ್ದಾನೆ. ಇದರಲ್ಲಿ 18 ಸರ್ಗಗಳಿದ್ದು ಕಡೆಯ ಸರ್ಗದಲ್ಲಿ ಜೈನತತ್ತ್ವಗಳನ್ನು ವಿವರಿಸಿದೆ.

5. ಹರಿವಿಲಾಸ (14ನೆಯ ಶತಮಾನ)

ವಿಜಯನಗರದ ಹರಿಹರನ ಆಸ್ಥಾನದಲ್ಲಿದ್ದ ಲೋಲಾಂಬರಾಜನು ಈ ಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ 5 ಸರ್ಗಗಳಿದ್ದು ಶ್ರೀಕೃಷ್ಣನ ಚರಿತ್ರೆ ವರ್ಣಿತವಾಗಿದೆ. ಕವಿಯ ತಂದೆ ದಿವಾಕರ. ಲೋಲಂಬರಾಜನ ಶೈಲಿ ಲಲಿತವೂ, ಮಧುರವೂ ಆಗಿದೆ. ಈತನ ಸುಂದರ ದಾಮೋದರ ಎಂಬ ಇನ್ನೊಂದು ಕಾವ್ಯವು ಮುದ್ರಿತವಾಗಿಲ್ಲ.

6. ನೇಮಿನಾಥಮಹಾಕಾವ್ಯ (15ನೆಯ ಶತಮಾನ)

ಕೀರ್ತಿರಾಜನ 12 ಸರ್ಗಗಳ ಈ ಕಾವ್ಯದಲ್ಲಿ ಬಾಲಬ್ರಹ್ಮಚಾರಿಯಾದ ನೇಮಿನಾಥತೀರ್ಥಂಕರನ ಚರಿತೆ ವರ್ಣಿತವಾಗಿದೆ. ಕೀರ್ತಿರಾಜನು ಜೆಸಲ್ಮರ್‌ಮಂದಿರದ ಪರಾವಜಿನಾಲಯದ ಪ್ರಶಸ್ತಿಯನ್ನು ಕ್ರಿ. ಶ. 1476ರಲ್ಲಿ ಬರೆದಿದ್ದಾನೆ.

7. ಜಗದ್ಗುರುಕಾವ್ಯ (ಕ್ರಿ. ಶ. 1577)

ಪದ್ಮಸಾಗರಣಿಯು ತನ್ನ ಗುರು ಹೀರವಿಜಯಸೂರಿಯ ಚರಿತೆಯನ್ನು ಈ ಕಾವ್ಯದಲ್ಲಿ ಚಿತ್ರಿಸಿದ್ದಾನೆ. ಹೀರವಿಜಯಸೂರಿ ಅಕ್ಬರನ ಕಾಲದವನು; ಹೀರಸೌಭಾಗ್ಯಕಾವ್ಯದ ನಾಯಕ.

8. ನಳಾಭ್ಯುದಯ (15ನೆಯ ಶತಮಾನ)

ವತ್ಸಗೋತ್ರದ ಕೋಮಟಿಯಜ್ವನ ಮಗ ವಾಮನಭಟ್ಟಬಾಣನು 8 ಸರ್ಗಗಳಿರುವ ಈ ಕಾವ್ಯವನ್ನು ಬರೆದಿದ್ದಾನೆ. ಈತನು ಸುಪ್ರಸಿದ್ಧರಾದ ವಿದ್ಯಾರಣ್ಯರ ಶಿಷ್ಯ. ಇವನ ಇನ್ನೊಂದು ಕಾವ್ಯ ರಾಮಾಯಣ ಕಥೆಯನ್ನು ವರ್ಣಿಸುವ ರಘುನಾಥಾಭ್ಯುದಯ. ಅದರಲ್ಲಿ 30 ಸರ್ಗಗಳಿವೆ. ಮುದ್ರಿತವಾಗಿಲ್ಲ. ಈ ಕವಿಯೇ ಕೊಂಡವೀಡು ರಾಜನಾದ ವೇಮಭೂಪಾಲನ (ಕ್ರಿ. ಶ. 1403–1420) ಆಸ್ಥಾನದಲ್ಲಿದ್ದು ವೇಮಭೂಪಾಲ ಚರಿತವೆಂಬ ಗದ್ಯಕಾವ್ಯವನ್ನು ಬರೆದಿದ್ದಾನೆ.



9. ಭಿಕ್ಷಾಟನಕಾವ್ಯ (16ನೆಯ ಶತಮಾನ)

ಮಲಬಾರಿನ ಕವಿ ಉತ್ಪ್ರೇಕ್ಷಾವಲ್ಲಭನು ಇದನ್ನು ರಚಿಸಿದ್ದಾನೆ. ಇವನಿಗೆ ಶಿವಭಕ್ತಿದಾಸನೆಂಬ ಹೆಸರಿತ್ತು. ಗೋಕುಲ ಎಂಬುದು ನಿಜವಾದ ಹೆಸರೆಂದು ಕಾಣುತ್ತದೆ. ಈ ಕಾವ್ಯದಲ್ಲಿ 40 ಪದ್ಧತಿಗಳಿದು. ಶಿವನು ರಾಜರಾಜಚೋಳನ ಧರ್ಮನಿಷ್ಠೆಯನ್ನು ಪರೀಕ್ಷಿಸಲು ವೇಷಾಂತರದಿಂದ ಹೋಗಿ ಭಿಕ್ಷೆಯನ್ನು ಬೇಡಿದನೆಂಬುದು ಕಥಾವಸ್ತುವಾಗಿದೆ. ಇದು ಸುಂದರವಾದ ವರ್ಣನೆಗಳಿಂದ ಮನೋಹರವಾಗಿದೆ. ಉಪದೇಶಾತ್ಮಕವಾದ ಕಲ್ಪನಾ ವಿಲಾಸಗಳನ್ನು ಇಲ್ಲಿ ಕಾಣಬಹುದು.

10. ರುಕ್ಮಿಣೀಪರಿಣಯ (17ನೆಯ ಶತಮಾನ)

ಇದರ ಕವಿ ರಾಜಚೂಡಾಮಣಿದೀಕ್ಷಿತನು ಸುಪ್ರಸಿದ್ಧ ವಿದ್ವಾಂಸನಾದ ರತ್ನಖೇಟದೀಕ್ಷಿತನ ಪುತ್ರ. ತಾಯಿ ಕಾಮಾಕ್ಷಿ. ತಂಜಾವೂರಿನ ರಘುನಾಥರಾಜನ ಆಶ್ರಯದಲ್ಲಿದ್ದನು. ತಂತ್ರಶಿಖಾಮಣಿ ಎಂಬ ಗ್ರಂಥವನ್ನು ಕ್ರಿ.ಶ. 1636ರಲ್ಲಿ ಬರದಿದ್ದಾನೆ. ರುಕ್ಮಿಣೀಕಲ್ಯಾಣವು 10 ಸರ್ಗಗಳಿರುವ ಕಾವ್ಯ. ಶ್ರೀಶಂಕರಾಚಾರ್ಯರ ಜೀವನ ಚರಿತ್ರೆಯನ್ನು ವರ್ಣಿಸುವ ಈತನ ಇನ್ನೊಂದು ಕಾವ್ಯ ಶಂಕರಾಭ್ಯುದಯದಲ್ಲಿ 6 ಸರ್ಗಗಳು ಮಾತ್ರ ಉಪಲಬ್ಧವಾಗಿವೆ. ಭೋಜನ ಚಂಪೂರಾಮಾಯಣಕ್ಕೆ ಪೂರಕವಾಗಿ ಯುದ್ಧಕಾಂಡವನ್ನು ರಾಜಚೂಡಾಮಣಿದೀಕ್ಷಿತನು ರಚಿಸಿದ್ದಾನೆ. ಅದನ್ನು ಒಂದೇ ದಿನದಲ್ಲಿ ಬರೆದು ಮುಗಿಸಿದನಂತೆ.

11. ಜಾನಕೀಪರಿಣಯ (17ನೆಯ ಶತಮಾನ)

ಲೋಕನಾಥ ಮತ್ತು ಅಂಬೆಯ ಮಗನಾದ ಚಕ್ರಕವಿಯ ಈ ಕಾವ್ಯವು ಸೀತಾವಿವಾಹ ಪರ್ಯಂತರವಾದ ರಾಮ ಕಥೆಯನ್ನು ನಿರೂಪಿಸುತ್ತದೆ. ಇದರಲ್ಲಿ 8 ಸರ್ಗಗಳಿದ್ದು ಕವಿತಾಶೈಲಿ ಪ್ರಶಂಸನೀಯವಾಗಿದೆ. ಇದಲ್ಲದೆ ರುಕ್ಮಿಣಿ, ಗೌರಿ, ದ್ರೌಪದಿ—ಈ ಮೂವರ ಪರಿಣಯವನ್ನು ಕುರಿತು ಮೂರು ಚಂಪೂಕಾವ್ಯಗಳನ್ನು ಚಕ್ರಕವಿ ಬರೆದಿದ್ದಾನೆ.

12. ಶಿವತತ್ತ್ವರತ್ನಾಕರ (18ನೆಯ ಶತಮಾನ)

ಶಿವಮೊಗ್ಗ ಜಿಲ್ಲೆಯ ಕೆಳದಿಯ ನಾಯಕ ಬಸವಭೂಪಾಲನು ರಚಿಸಿದ ಗ್ರಂಥವಿದು. ಈತನ ತಂದೆ ಸೋಮಶೇಖರನಾಯಕ. ತಾಯಿ ಚನ್ನಮ್ಮಾಜಿ. ಬಸವಭೂಪಾಲನು ಶಿವಾದ್ವೈತ ಸಿದ್ಧಾಂತದಲ್ಲಿ ವಿದ್ವಾಂಸನಾಗಿದ್ದನು. ಇವನ ಮಗ ಸದಾಶಿವನಾಯಕನು ವಿಜಯನಗರದ ರಾಮರಾಯನಿಗೆ ಸಹಾಯಕನಾಗಿ ಹೋರಾಡಿದನು.

ಶಿವತತ್ತ್ವರತ್ನಾಕರವು ಒಂದು ವಿಶ್ವಕೋಶವೆನ್ನಬಹುದು. ವೇದ ಮತ್ತು ಆಗಮಗಳಲ್ಲಿ ಪ್ರತಿಪಾದಿತವಾದ ದರ್ಶನಗಳನ್ನೂ, ಕಲೆಗಳನ್ನೂ ಇದರಲ್ಲಿ ವಿವರಿಸಲಾಗಿದೆ. ಅಲ್ಲದೆ ಕೆಳದಿ ಮತ್ತು ವಿಜಯನಗರಗಳ ನಿರ್ಮಾಣಕ್ಕೆ ಸಂಬಂಧಿಸಿದ ಕೆಲವು ಐತಿಹಾಸಿಕ ವಿವರಗಳು ಇದರಲ್ಲಿ ದೊರೆಯುತ್ತವೆ. ಈ ಗ್ರಂಥವು ತರಂಗ, ಕಲ್ಲೋಲ ಎಂಬುದಾಗಿ ವಿಭಕ್ತವಾಗಿದ್ದು ಕಾವ್ಯಗುಣಗಳನ್ನೊಳಗೊಂಡಿದೆ. ಅಮೂಲ್ಯ ವಿಷಯಗಳ ಸಂಗ್ರಹ ದೃಷ್ಟಿಯಿಂದಲೂ, ಕನ್ನಡಿಗನ ರಚನೆಯಾದ್ದರಿಂದಲೂ ಇದೊಂದು ಮಹತ್ವಪೂರ್ಣವಾದ ಗ್ರಂಥ.

## ಶಾಸ್ತ್ರಗರ್ಭಿತಕಾವ್ಯಗಳು

ಕ್ಷೇಮೇಂದ್ರನು ಸಮಸ್ತ ವಾಙ್ಮಯವನ್ನೂ ನಾಲ್ಕು ಬಗೆಯಲ್ಲಿ ವಿಂಗಡಿಸುತ್ತಾನೆ:

> ಶಾಸ್ತ್ರಂ ಕಾವ್ಯಂ ಶಾಸ್ತ್ರಕಾವ್ಯಂ ಕಾವ್ಯಶಾಸ್ತ್ರಂ ಚ ಭೇದತಃ ।
> ಚತುಷ್ಪ್ರಕಾರಃ ಪ್ರಸರಃ ಸತಾಂ ಸಾರಸ್ವತೋ ಮತಃ ॥

—ಸುವೃತ್ತತಿಲಕ. 3–2

ಇವುಗಳಲ್ಲಿ ಕಾವ್ಯಶಾಸ್ತ್ರ, ಕಾವ್ಯಶಾಸ್ತ್ರಗಳೆಂಬ ಪ್ರಭೇದಗಳ ಪರಿಚಯವನ್ನು ಹೀಗೆ ಮಾಡಿಸಿದ್ದಾನೆ—

> ಶಾಸ್ತ್ರಕಾವ್ಯಂ ಚತುರ್ವರ್ಗಪ್ರಾಯಂ ಸರ್ವೋಪದೇಶಕೃತ್ ।
> ಭಟ್ಟಿಭೌಮಕಕಾವ್ಯಾದಿ ಕಾವ್ಯಶಾಸ್ತ್ರಂ ಪ್ರಚಕ್ಷತೇ ॥

ಅದೇ. 3–4

ಕ್ಷೇಮೇಂದ್ರನ ಚತುರ್ವರ್ಗಸಂಗ್ರಹ, ಭರ್ತೃಹರಿಯ ವೈರಾಗ್ಯಶತಕ ಮೊದಲಾದವು ಶಾಸ್ತ್ರಕಾವ್ಯ. ಇವರಲ್ಲಿ ಉಪದೇಶವು ಪ್ರಧಾನವಾಗಿದ್ದು ಜೊತೆಗೆ ಕಾವ್ಯಸೌಂದರ್ಯವೂ ಇರುತ್ತದೆ. ಭಟ್ಟಿಯ ರಾವಣವಧ, ಭೌಮಕನ ರಾವಣಾರ್ಜುನೀಯ, ಕೃಷ್ಣಮಿಶ್ರನ ಪ್ರಬೋಧಚಂದ್ರೋದಯನಾಟಕ ಮೊದಲಾದವು ಕಾವ್ಯಶಾಸ್ತ್ರ. ಇದರಲ್ಲಿ ಕಾವ್ಯಗುಣವು ಪ್ರಧಾನವಾಗಿದ್ದು ಜೊತೆಗೆ ಶಾಸ್ತ್ರವ್ಯುತ್ಪತ್ತಿಯಾಗಲೆಂದು ಶಾಸ್ತ್ರೀಯ ವಿಷಯವನ್ನು ಸೇರಿಸಲಾಗುತ್ತದೆ.

ಕಾವ್ಯಶಾಸ್ತ್ರದಲ್ಲಿ ಸೇರುವ ಭಟ್ಟಿಕಾವ್ಯವನ್ನು ಹಿಂದೆ ಪರಿಶೀಲಿಸಲಾಗಿದೆ. ಈ ವರ್ಗಕ್ಕೆ ಸೇರುವ ಇನ್ನೂ ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

1. ರಾವಣಾರ್ಜುನೀಯ (ಕ್ರಿ. ಶ. ಸು. 6ನೆಯ ಶತಮಾನ)

ರಾವಣನಿಗೂ ಕಾರ್ತವೀರ್ಯಾರ್ಜುನನಿಗೂ ನಡೆದ ಯುದ್ಧವನ್ನು ವರ್ಣಿಸುವ ಈ ಕಾವ್ಯವನ್ನು ಭಟ್ಟಭೌಮಕನು ರಚಿಸಿದ್ದಾನೆ. ಕೆಲವು ಮಾತೃಕೆಗಳಲ್ಲಿ ಕವಿಯ ಹೆಸರು ಪಟ್ಟಭೀಮ ಎಂದು ದೊರೆಯುತ್ತದೆ. 27 ಸರ್ಗಗಳ ಈ ಕಾವ್ಯದಲ್ಲಿ ಕವಿಯು ಪಾಣಿನಿಸೂತ್ರಗಳಿಗೆ ಉದಾಹರಣೆಗಳನ್ನು ಒದಗಿಸಿದ್ದಾನೆ. ಕ್ಷೇಮೇಂದ್ರನು ತನ್ನ ಸುವೃತ್ತತಿಲಕದಲ್ಲಿ ಈ ಕವಿಯನ್ನು ಉಲ್ಲೇಖಿಸಿದ್ದಾನೆ. ಕಾಶಿಕಾವೃತ್ತಿಯಲ್ಲಿ (ಕ್ರಿ.ಶ. 7ನೆಯ ಶತಮಾನ) ರಾವಣಾರ್ಜುನೀಯದಿಂದ ಉದಾಹರಿಸಿರುವುದರಿಂದ ಈ ಕವಿ ಕಾಶಿಕಾವೃತ್ತಿಕಾರನಿಗಿಂತ ಪ್ರಾಚೀನ.

2. ಕವಿರಹಸ್ಯ (ಕ್ರಿ.ಶ. 10ನೆಯ ಶತಮಾನ)

ಹಲಾಯುಧನ ಈ ಕಾವ್ಯದಲ್ಲಿ ರಾಷ್ಟ್ರಕೂಟ ದೊರೆ ಕೃಷ್ಣರಾಜನ ಚರಿತೆ ಪ್ರಸ್ತುತವಾಗಿದೆ, ಕ್ರಿ.ಶ. 10ನೆಯ ಶತಮಾನದಲ್ಲಿದ್ದ ಮೂರನೆಯ ಕೃಷ್ಣರಾಜನು ಕವಿಗೆ ಆಶ್ರಯದಾತನೆಂದು ವಿದ್ವಾಂಸರು ಊಹಿಸಿದ್ದಾರೆ. ಸಮಾನಾರ್ಥಕವಾದ ಧಾತುಗಳ ವಿವಿಧರೂಪಗಳನ್ನು ಸಂಗ್ರಹಿಸಿರುವ ಈ ಗ್ರಂಥ ಒಂದು ಧಾತುಕೋಶವಾಗಿದೆ. ಟೀಕಾಕಾರನಾದ ರವಿಧರ್ಮನು ಕವಿರಹಸ್ಯವನ್ನು ಅಪಶಬ್ದಾಭಾಸಕಾವ್ಯವೆಂದು ಕರೆದಿದ್ದಾನೆ.



3. ವಾಸುದೇವವಿಜಯ

ಕೇರಳದ ಪೆರುವನಂ ಎಂಬ ಗ್ರಾಮದ ವಾಸುದೇವನು ಇದರ ಕರ್ತೃ. ಯುಮಕಕಾವ್ಯವಾದ ಯುಧಿಷ್ಠಿರವಿಜಯವನ್ನು ಬರೆದ ವಾಸುದೇವನೇ ಈತನೆಂದು ಕೆಲವರ ಮತವಿದೆ. ಈ ಪಕ್ಷದಲ್ಲಿ ಈತನು ಕ್ರಿ. ಶ. 11ನೆಯ ಶತಮಾನಕ್ಕಿಂತ ಈಚಿನವನಲ್ಲ. ರಾಜರವಿವರ್ಮನ ಆಶ್ರಿತನೂ, ಸಂಕ್ಷೇಪರಾಮಾಯಣ ಮುಂತಾದ ಕೆಲವು ಲಘುಕಾವ್ಯಗಳನ್ನು ಬರೆದವನೂ ಆದ ವಾಸುದೇವನು ಈ ವಾಸುದೇವವಿಜಯವನ್ನು ರಚಿಸಿದ್ದಾನೆಂದು ಡಾ॥ ಕುಂಜುನ್ನಿರಾಜ ಅವರ ಅಭಿಪ್ರಾಯ (*vide* The Contribution of Kerala to Sanskrit Literature, Madras, 1958, pp 12–16 : 309). ಈ ಪಕ್ಷದಲ್ಲಿ ವಾಸುದೇವನು 16ನೆಯ ಶತಕದವನೆಂದೂ, ನಾರಾಯಣ ಭಟ್ಟತಿರಿಯ ಹಿರಿಯ ಸಮಕಾಲಿಕನೆಂದೂ ಹೇಳಬೇಕಾಗುತ್ತದೆ.

ವಾಸುದೇವವಿಜಯದ 3 ಸರ್ಗಗಳು ದೊರಕಿವೆ. ಶ್ರೀಕೃಷ್ಣನ ಚರಿತೆ ಕಾವ್ಯವಸ್ತು. ದೇವಕಿಯ ಸೂತಿಕಾಗೃಹಕ್ಕೆ ಕಂಸನು ಹೋಗಿ ಮಾಯಾಕನ್ಯೆಯನ್ನೆತ್ತಿ ಬೀಸುವುದು, ಅಶರೀರವಾಣಿ, ಭೀತನಾದ ಕಂಸನು ಅಸುರರೊಡನೆ ಸಮಾಲೋಚಿಸುವುದು, ಇಲ್ಲಿಯವರೆಗಿನ ಕಥೆ ವರ್ಣಿತವಾಗಿದೆ. ಈ ಕಾವ್ಯದಲ್ಲಿ 7 ಸರ್ಗಗಳಿದ್ದವೆಂದು ಹೇಳಲು ಆಧಾರವಿದೆ. ಏನೆಂದರೆ, ನಾರಾಯಣ ಭಟ್ಟತಿರಿಯು ಬರೆದ ಇದರ ಪೂರಕವಾದ ಧಾತುಕಾವ್ಯದ 1ನೆಯ ಸರ್ಗದ ವ್ಯಾಖ್ಯಾನದ ಒಂದು ಪ್ರತಿಯಲ್ಲಿ ಪರಿಸಮಾಪ್ತಿವಾಕ್ಯ ಈ ರೀತಿ ಇದೆ—

'ಇತಿ...ವಾಸುದೇವವಿಜಯೋರ್ಧ್ವಭಾಗರೂಪಸ್ಯ ಧಾತುಕಾವ್ಯಸ್ಯ ವ್ಯಾಖ್ಯಾನೇ...... ಪ್ರಥಮಃ ಸರ್ಗಃ, ಆದಿತೋಽಷ್ಟಮಃ'

ಈ ಕಾವ್ಯಕ್ಕೆ ವಾಸುದೇವನೇ ಬರೆದ ಪದಚಂದ್ರಿಕಾ ಎಂಬ ಸ್ವೋಪಜ್ಞವ್ಯಾಖ್ಯಾನವಿದೆ, ರಾಮಪ್ರಸನ್ನಶಾಸ್ತ್ರಿಯ ಕೈಶವೀ ಎಂಬ ಇನ್ನೊಂದು ವ್ಯಾಖ್ಯಾನವು ಮುದ್ರಿತವಾಗಿದೆ. ಪಾಣಿನಿಯ ಅಷ್ಟಾಧ್ಯಾಯಿಯನ್ನನುಸರಿಸಿ ನಾನಾ ಶಬ್ದರೂಪಗಳನ್ನು ವಾಸುದೇವನು ಉದಾಹರಿಸಿದ್ದಾನೆ.

ಇದು ಕಂಸನ ರಾಜಧಾನಿಯ ವರ್ಣನೆ,

> ರುಚ್ಯಂ ಫಲಂ ಸಂಪ್ರದದೇ ಹ ಕಿಂಚಿದ್ದಾಸ್ಯಾ ಮಿಥಃ ಕಶ ನ ಕೌಲಟೇರಃ ।
> ಶಾರಾವಮನ್ನಂ ದದದೇಽಪರಸ್ಮೈ ಯತ್ರಾಪರಃ ಸ್ಮೇರಮುಖಸ್ತದಾನೀಂ ॥

2–25

4. ಧಾತುಕಾವ್ಯ

ವಾಸುದೇವವಿಜಯದಲ್ಲಿ ಧಾತುಗಳ ಕೃದಂತತಿಙಂತ ರೂಪಗಳು ಸಾಕಷ್ಟು ಬಂದಿಲ್ಲವೆಂದು ಪೂರಕವಾಗಿ ನಾರಾಯಣಭಟ್ಟತಿರಿಯು ಧಾತುಕಾವ್ಯವನ್ನು ಬರೆದಿದ್ದಾನೆ. ಪಾಣಿನೀಯಧಾತುಪಾಠಕ್ಕೆ ಭೀಮಸೇನನೆಂಬ ವಿದ್ವಾಂಸನು ಅರ್ಥವನ್ನು ಬರೆದು ಪರಿಷ್ಕರಿಸಿದ್ದಾನೆಂದು ತಿಳಿದುಬರುತ್ತದೆ. ಮಾಧವೀಯ ಧಾತುವೃತ್ತಿಯಲ್ಲಿ ಉಪಲಬ್ಧವಾದ ಈ

ಪರಿಷ್ಕೃತಪಾಠಕ್ರಮವನ್ನನುಸರಿಸಿ ಈ ಕಾವ್ಯದಲ್ಲಿ ಧಾತುರೂಪಗಳನ್ನು ಉದಾಹರಿಸಲಾಗಿದೆ. ಕವಿಯ ಪ್ರತಿಜ್ಞಾವಾಕ್ಯವಿದು—

ಉದಾಹೃತಂ ಪಾಣಿನಿಧಾತುಮಂಡಲಂ
ಪ್ರಾಗ್ವಾಸುದೇವೇನ ತದೂರ್ಧ್ವತೋಽಪರಃ।
ಉದಾಹರತ್ಯದ್ಯ ವೃಕೋದರೋದಿತಾನ್
ಧಾತೂನ್ ಕ್ರಮೇಣೈವ ಹಿ ಮಾಧವಾಶ್ರಯಾತ್ ॥

ಶ್ರೀಕೃಷ್ಣನನ್ನು ಕರೆತರಲು ಕಂಸನ ಆಜ್ಞೆಯಂತೆ ಅಕ್ರೂರನು ನಂದಗೋಕುಲಕ್ಕೆ ಹೋದನೆಂಬ ವೃತ್ತಾಂತದಿಂದ ಆರಂಭಿಸಿ ಕಂಸವಧಪರ್ಯಂತವಾದ ಕಥೆಯನ್ನು ಕವಿ ಮೂರು ಸರ್ಗಗಳಲ್ಲಿ ಬರೆದಿದ್ದಾನೆ. ಇದರಲ್ಲಿ ದಶವಿಕರಣಿಯ ನಾನಾ ಧಾತುಗಳ ತಿಙಂತಕೃದಂತ ರೂಪಗಳನ್ನು ಅಳವಡಿಸಿದ್ದಾನೆ.

ಇದು ಯಮುನಾನದಿಯ ವರ್ಣನೆ—

ಅಹೋಲಸತ್ತ್ವಾ ರವಿರಶ್ಮಿಜಾಲೇಽ-
ಪ್ಯವಿಕ್ವಥಂತೀ ತಟಪಾಥಿಪಾಥಾಃ ।
ತಾಪಂ ಮಥಂತೀ ಕಣಿಕಾ ವಮಂತೀ
ಭ್ರಮ್ಯತ್ತರಂಗಾ ಕ್ಷರತಿ ಸ್ಫುಟಂ ಯಾ ॥ (2–23)

ಅಹೋಲಸತ್ತ್ವಾ = ಹಿಂಸಕವಲ್ಲದ ಜಲಜಂತುಗಳುಳ್ಳ.
ತಟಪಾಥಿಪಾಥಾಃ = ತೀರಗಾಮಿಯಾದ ಜಲವುಳ್ಳ.

ಧಾತುಕಾವ್ಯಕ್ಕೆ ನಾರಾಯಣಭಟ್ಟತಿರಿಯ ಶಿಷ್ಯರು ಬರೆದ ಕೃಷ್ಣಾರ್ಪಣ, ರಾಮಪಾಣಿವಾದನ ವಿವರಣ ಮತ್ತು ರಾಮಪ್ರಪನ್ನಶಾಸ್ತ್ರಿಯ ಕೈಶವೀ— ಎಂಬ ವ್ಯಾಖ್ಯಾನಗಳಿವೆ.

5. ಕುಮಾರಪಾಲಚರಿತ (ಕ್ರಿ. ಶ. 12ನೆಯ ಶತಮಾನ) : ಸುಪ್ರಸಿದ್ಧ ಜೈನ ವಿದ್ವಾಂಸ ಹೇಮಚಂದ್ರನು (ಕ್ರಿ. ಶ. 1108–1174) 28 ಸರ್ಗಗಳ ಈ ಕಾವ್ಯದಲ್ಲಿ ಗುಜರಾತಿನ ಅನ್ಹಿಲ್‌ವಾಡ್ ರಾಜವಂಶಾವಳಿಯನ್ನು ವರ್ಣಿಸಿದ್ದಾನೆ. ಹೇಮಚಂದ್ರನೇ ಬರೆದ ಶಬ್ದಾನುಶಾಸನಕ್ಕೆ ಉದಾಹರಣರೂಪವಾದ ವಿವರಣೆ ಇದು. ಮೊದಲನೆಯ 20 ಸರ್ಗಗಳು ಸಂಸ್ಕೃತದಲ್ಲಿಯೂ ಉಳಿದ 8 ಸರ್ಗಗಳು ಪ್ರಾಕೃತದಲ್ಲಿಯೂ ಇವೆ.

6. ಗಜೇಂದ್ರಮೋಕ್ಷ : ಭಾಗವತದಲ್ಲಿ ಸುಪ್ರಸಿದ್ಧವಾದ ಗಜೇಂದ್ರಮೋಕ್ಷವು ಈ ಕಾವ್ಯದ ಕಥಾವಸ್ತು. 5 ಸರ್ಗಗಳಿರುವ ಈ ಕಾವ್ಯದಲ್ಲಿ ಕೇದಾರಭಟ್ಟನ ವೃತ್ತರತ್ನಾಕರಕ್ಕೆ ಅನುಗುಣವಾಗಿ ವಿವಿಧಛಂದಸ್ಸುಗಳ ನಿಬಂಧನವಿದೆ. ಇದರ ಕವಿ ವಾಸುದೇವ. ಯಮಕ ಕಾವ್ಯ ಯುಧಿಷ್ಠಿರವಿಜಯವನ್ನು ಬರೆದ ವಾಸುದೇವನೇ (ಕ್ರಿ. ಶ. 11ನೆಯ ಶತಮಾನ) ಈತನೆಂದು ಕೆಲವರ ಮತ. ಆದರೆ ಈತನು ಯುಧಿಷ್ಠಿರವಿಜಯದ ಕವಿ ವಾಸುದೇವನನ್ನು ಸ್ಮರಿಸಿರುವುದರಿಂದ ಅವನಿಗಿಂತ ಅರ್ವಾಚೀನನೆಂದು ಹೇಳಬಹುದಾಗಿದೆ.



7. ನಕ್ಷತ್ರಮಾಲಾ (ಕ್ರಿ. ಶ. 18ನೆಯ ಶತಮಾನ) : ಶಿವರಾಮತ್ರಿಪಾಠಿಯ ಈ ಶೃಂಗಾರ ಕಾವ್ಯದಲ್ಲಿ ಮುಖ್ಯವಾದ ಕೆಲವು ವ್ಯಾಕರಣಪರಿಭಾಷೆಗಳಿಗೆ ಉದಾಹರಣೆಗಳನ್ನು ಒದಗಿಸಲಾಗಿದೆ. ಕವಿಯೇ ಇದಕ್ಕೆ ವ್ಯಾಖ್ಯಾನವನ್ನು ಬರೆದು ವೈಯಾಕರಣ ನಾಗೇಶಭಟ್ಟನ ಉಕ್ತಿಗಳನ್ನು ಅಲ್ಲಲ್ಲಿ ಉಲ್ಲೇಖಿಸಿದ್ದಾನೆ.

8. ರಾಜವರ್ಮಮಹಾರಾಜಚರಿತ (ಕ್ರಿ. ಶ. 19ನೆಯ ಶತಮಾನ) : ತಿರುವಾಂಕೂರಿನ ರಾಮವರ್ಮಮಹಾರಾಜನ (1860-1880) ಚರಿತೆ ಇದು. ಇದರ ಕವಿ ಪರಮೇಶ್ವರ ಶಿವದ್ವಿಜ. ಈ ಕಾವ್ಯದಲ್ಲಿ 8 ಸರ್ಗಗಳಿದ್ದು ಒಂದೊಂದು ಸರ್ಗವೂ ಅಷ್ಟಾಧ್ಯಾಯಿಯ ಒಂದೊಂದು ಅಧ್ಯಾಯಕ್ಕೆ ಉದಾಹರಣೆಯಾಗಿದೆ. ವಿಶೇಷವೇನೆಂದರೆ, ಪಾಣಿನಿಸೂತ್ರಸ್ಥಶಬ್ದಗಳನ್ನು ಬಳಸಿ ಶ್ಲೋಕಗಳನ್ನು ರಚಿಸಲಾಗಿದೆ.

9. ಸುರೂಪರಾಘವ (ಕ್ರಿ. ಶ. 19ನೆಯ ಶತಮಾನ) : ಇಲತ್ತೂರು ರಾಮಸ್ವಾಮಿ ಶಾಸ್ತ್ರಿಯು (1824–1887) ಪಾಣಿನಿಸೂತ್ರೋದಾಹರಣರೂಪವಾಗಿ 15 ಸರ್ಗಗಳ ಈ ಕೃತಿಯನ್ನು ರಚಿಸಿದ್ದಾನೆ ರಾಮಾಯಣ ಕಥಾವಸ್ತು. ಕವಿಯೇ ಇದಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾನೆ.

10. ಸುಗಲಾರ್ಥಮಾಲಾ (ಕ್ರಿ. ಶ 20ನೆಯ ಶತಮಾನ) : ಪಂಡಿತರಾಜ ಪಿ. ನಾರಾಯಣನಂಬೂದರಿಯವರ ಆಧುನಿಕ ಕೃತಿ ಇದು. ಪಿ. ದಾಮೋದರಪಿಶಾರತಿಯವರ ವ್ಯಾಖ್ಯಾನವಿದೆ ಗುರುಕುಲದಲ್ಲಿದ್ದ ಶಿಷ್ಯನ ಅನುಭವ ಮತ್ತು ಅವನಿಗೆ ತಂದೆಯ ಉಪದೇಶ ವರ್ಣನೀಯ ವಸ್ತು. 130 ಶ್ಲೋಕಗಳಲ್ಲಿ ಲಕಾರಾರ್ಥಪ್ರಕ್ರಿಯೆಯನ್ನನುಸರಿಸಿ ಉದಾಹರಣೆಗಳನ್ನು ಒದಗಿಸಿದೆ.

## ಐತಿಹಾಸಿಕ ಕಾವ್ಯಗಳು

ಭಾರತೀಯ ಸಂಸ್ಕೃತಿ ಮತ್ತು ನಾಗರಿಕತೆಯ ಪ್ರಾಚೀನತೆ ಹಾಗೂ ಮಹತ್ತ್ವದ ಬಗೆಗೆ ಯಾರಿಗೂ ಸಂಶಯಕ್ಕವಕಾಶವಿಲ್ಲ. ಆದರೆ ನಮ್ಮ ಪ್ರಾಚೀನ ಹಾಗು ಮಧ್ಯಕಾಲೀನ ಸಂಸ್ಕೃತ ಸಾಹಿತ್ಯದ ಒಂದೇ ಒಂದು ಗ್ರಂಥವಾಗಲಿ ಕಲ್ಪನಾಮಯ ಹಾಗು ಅತಿಶಯೋಕ್ತಿಪೂರ್ಣ ಅಂಶಗಳಿಂದ ಮುಕ್ತವಾದ ಇತಿಹಾಸಗ್ರಂಥವೆನ್ನಲು ಬಾರದಂತಿರುವುದು ದುರ್ದೈವದ ಸಂಗತಿಯಾಗಿದೆ. ತಿಥಿ, ವರ್ಷಗಳ ಘಟನಾವಳಿಗಳಿಗೆ ಪ್ರಾಶಸ್ತ್ಯವನ್ನೀಯುವದು ಪಾಶ್ಚಾತ್ಯರ ದೃಷ್ಟಿಕೋನ. ಈ ದೃಷ್ಟಿಕೋನದಿಂದ ಅವರು ಭಾರತದ ಗ್ರಂಥಗಳನ್ನು ತೂಗಿನೋಡಿ ಭಾರತೀಯರಲ್ಲಿ ಇತಿಹಾಸದೃಷ್ಟಿಯೆಂಬುದೇ ಇರಲಿಲ್ಲವೆಂಬ ಅಪಾದನೆಯನ್ನು ಮಾಡಿದ್ದಾರೆ.

ಆದರೆ ಭಾರತೀಯರ ದೃಷ್ಟಿಕೋನದಿಂದ ವೀಕ್ಷಿಸಿದಾಗ ಈ ಆಪಾದನೆಯೇ ಆಧಾರರಹಿತವೆನಿಸುತ್ತದೆ. ಏಕೆಂದರೆ ಭಾರತೀಯರು 'ಇತಿಹಾಸ'ವೆಂದರೆ ತಮ್ಮದೇ ಆದ ಅರ್ಥವನ್ನಿಟ್ಟುಕೊಂಡಿರುತ್ತಿದ್ದರು : ತಿಥಿ, ವರ್ಷಗಳ ಲೆಕ್ಕಾಚಾರ ಅವರಿಗೆ ಬಹು ಗೌಣವಾಗಿತ್ತು.

ವರ್ತಮಾನವನ್ನು ಉತ್ತಮಗೊಳಿಸಲು, ಭವಿಷ್ಯವನ್ನು ಆದರ್ಶಮಯವಾಗಿ ರೂಪಿಸಲು ಸಹಕಾರಿಯಾಗಬಲ್ಲ ಭೂತಕಾಲೀನ ಮಹಾಪುರುಷರ ಜೀವನದ ವಾಸ್ತವ ಹಾಗೂ ಉತ್ಪ್ರೇಕ್ಷಿತ ಘಟನಾವಳಿಯನ್ನೇ ಅವರು ಇತಿಹಾಸವೆಂದು ಭಾವಿಸುತ್ತಿದ್ದರು. ಇತಿಹಾಸವು ಸ್ವತಂತ್ರ ಶಾಸ್ತ್ರೀಯರಚನೆಯೆನಿಸದೆ ಕಾವ್ಯದ ಒಂದು ಅಂಗವೇ ಎಂದು ಅವರು ಭಾವಿಸುತ್ತಿದ್ದ ಕಾರಣ, ಕಾವ್ಯಾಂಶಗಳನ್ನು ಧಾರಾಳವಾಗಿ ಅವುಗಳಲ್ಲಿ ಬಳಸುತ್ತಿದ್ದರು; ರಸಾನುಗುಣವಾಗಿ ಸನ್ನಿವೇಶಗಳಲ್ಲಿ ಏರುಪೇರುಗಳನ್ನೂ ಮಾಡಿಕೊಳ್ಳುತ್ತಿದ್ದರು. ಮಹಾಪುರುಷರ ಮಹಾಜೀವನದ ಫಲವಾಗಿ ಸಿದ್ಧಿಸಿದ ಸರ್ವತೋಮುಖ ರಾಷ್ಟ್ರೋತ್ಥಾನದ ಚಿತ್ರ ಭಾರತೀಯ ಕವಿಗಳಿಗೆ ಪ್ರಿಯವಾಗಿದ್ದಿತು. ಈ ದೃಷ್ಟಿಯಿಂದ ಪ್ರಾಚೀನ ಆರ್ಷಕಾವ್ಯಗಳಾದ ರಾಮಾಯಣ, ಮಹಾಭಾರತಗಳನ್ನೂ, ಯುಗಾಂತರದ ರಾಜರ ಕಥೆಗಳನ್ನೊಳಗೊಳ್ಳುವ ಪುರಾಣಭಾಗಗಳನ್ನೂ ಪ್ರಾಚೀನರು ಇತಿಹಾಸವೆಂದೇ ಕರೆಯುತ್ತಿದ್ದರು. ಹೀಗೆ ಭಾರತೀಯರು ಇತಿಹಾಸಕಾಲದಲ್ಲಿ ಕಾವ್ಯರೂಪವಾಗಿ ಬರೆದ ಐತಿಹಾಸಿಕ ಕಾವ್ಯಗಳಲ್ಲಿ ಕೂಡ ಗದ್ಯ, ಆಖ್ಯಾಯಿಕ, ನಾಟಕ, ಚಂಪೂ, ಮಹಾಕಾವ್ಯಾದಿ ಪ್ರಕಾರಗಳೆಲ್ಲ ಅಂತರ್ಗತವಾಗಿ... ವವಲ್ಲದೆ, ಅವುಗಳಲ್ಲಿ ಅತಿಮಾನುಷವಾದ ದಿವ್ಯಘಟನೆಗಳಿಗೂ ಎಷ್ಟೋ ವೇಳೆ ಅವಕಾಶ ದೊರೆಯುವದುಂಟು. ಹೀಗೆ ಕಲ್ಪನಾತ್ಮಕವೂ, ಅತಿರಂಜಿತವೂ ಆದ ಅಂಶಗಳು ಇಂದಿನ ಇತಿಹಾಸದೃಷ್ಟಿಗೆ ಅವಿಶ್ವಸನೀಯವೆನಿಸುವುದು ಸಹಜವೇ ಇದೆ. ಆದರೆ ಆ ಅಂಶಗಳನ್ನು ಬಿಟ್ಟು ನಾವು ವಿಮರ್ಶಿಸಿದರೆ ಇತಿಹಾಸಕಾಲದಲ್ಲಿ ಜನರ ನಿತ್ಯಜೀವನದ ಚಿತ್ರವೂ, ಅವರ ಆದರ್ಶಗಳ ಒಂದು ಸಮಗ್ರ ಕಲ್ಪನೆಯೂ ಮೂಡುವುದರಲ್ಲಿ ಸಂಶಯವಿಲ್ಲ. ಬಾಣನ ಹರ್ಷಚರಿತವೇ ಮುಂತಾದ ಗದ್ಯಕಾವ್ಯಗಳೂ, ವಿಶಾಖದತ್ತನ 'ಮುದ್ರಾರಾಕ್ಷಸ' ವೇ ಮೊದಲಾದ ನಾಟಕಗಳೂ, 'ವರದಾಂಬಿಕಾಪರಿಣಯ' ವೇ ಮೊದಲಾದ ಚಂಪೂಗ್ರಂಥಗಳೂ ಬೇರೆ ಅಧ್ಯಾಯಗಳಲ್ಲಿ ನಿರೂಪಿತವಾಗಿರುವುದರಿಂದ, ಈ ಅಧ್ಯಾಯದಲ್ಲಿ ಕೇವಲ ಐತಿಹಾಸಿಕ ಮಹಾಕಾವ್ಯಗಳಲ್ಲಿ ಮುಖ್ಯವಾದುವನ್ನು ಮಾತ್ರ ಪರಿಚಯಿಸಲು ಯತ್ನಿಸಿದೆ.

ಭಾರತೀಯರಲ್ಲಿ ವಾಸ್ತವಿಕ ಐತಿಹಾಸಿಕ ದೃಷ್ಟಿ ವಿಕಸಿತವಾಗದೆ ಹೋಗಲು ನಾನಾ ಕಾರಣಗಳನ್ನು ಆಧುನಿಕರು ಸೂಚಿಸಿದ್ದಾರೆ :—

1. ವೇದೋತ್ತರಕಾಲೀನ ಮನೋಭಾವನೆಯಲ್ಲಿ ಮಾನವಜೀವನದ ಮುಖ್ಯಲಕ್ಷ್ಯ ಪಾರಮಾರ್ಥಿಕವೇ ಆಗಿದ್ದು, ಐಹಿಕ ಸಿದ್ಧಿಸಮೃದ್ಧಿಗಳು ಜನರ ಮುಖ್ಯ ಧ್ಯೇಯವೆನಿಸುತ್ತಿರಲಿಲ್ಲ. ಮೋಕ್ಷವಿಚಾರಕ್ಕಿದ್ದ ಮನ್ನಣೆ ಸಾಂಸಾರಿಕ ನಿತ್ಯಜೀವನದ ಚರ್ಚೆಗಳಿಗೆ ಇರಲಿಲ್ಲ. ಇಂತಹ ಚರ್ಚೆಗಳು ಮೋಕ್ಷದೃಷ್ಟಿಯಿಂದ ನಿರುಪಯೋಗಿಯೆಂಬ ಮನೋ... ಭೂಮಿಕೆಯನ್ನೇ ಆಸ್ತಿಕದರ್ಶನಗಳಂತೆ ಬೌದ್ಧ ಜೈನಧರ್ಮಗಳು ಕೂಡ ಬಿಂಬಿಸುತ್ತಿದ್ದವು.

2. ಭಾರತೀಯರ ಕರ್ಮಸಿದ್ಧಾಂತ ಕೂಡ ಐತಿಹಾಸಿಕ ಭಾವನೆಯ ವಿಕಾಸಕ್ಕೆ ಅಡ್ಡಿ... ಆಗಿದ್ದಿತು. ಕರ್ಮವಾದದಂತೆ ಪೂರ್ವಜನ್ಮದ ಕರ್ಮಾನುಸಾರವಾಗಿ ಐಹಿಕ ಜೀವ... ಘಟನೆಗಳು ನಡೆಯುತ್ತವೆ; ಯಾವಾಗ ಯಾವ ಆಕಸ್ಮಿಕ ಘಟನೆಯೂ ನಡೆಯಬಹು...



ಆದ್ದರಿಂದ ನಡೆದ ಘಟನೆಗಳ ಕಾಲನಿರ್ದೇಶನದ ವಿಷಯದಲ್ಲಿ ಭಾರತೀಯರ ಔದಾಸೀನ್ಯ ತಳೆಯುವಂತಾಯಿತು.

3. ಎಷ್ಟೇ ಆಗಲಿ, ಪೌರಾಣಿಕ ವಿಭೂತಿಪುರುಷರಾದ ಹರಿಶ್ಚಂದ್ರ, ನಳ, ಯುಧಿಷ್ಠಿರ, ರಾಮ, ಬುದ್ಧ, ಭರತಚಕ್ರವರ್ತಿ ಮುಂತಾದ ಆದರ್ಶವ್ಯಕ್ತಿಗಳನ್ನೇ ರಾಷ್ಟ್ರೀಯ ಇತಿಹಾಸದ ಶಾಶ್ವತಪ್ರತಿನಿಧಿಗಳೆಂದು ಕವಿಗಳು ತಿಳಿದಮೇಲೆ ಅಶೋಕ, ಸಮುದ್ರಗುಪ್ತರಂತಹ ಮಹಾಪುರುಷರೂ ಅವರ ಮುಂದೆ ಮಹಾಕಾವ್ಯದ ನಾಯಕರಾಗಲು ಯೋಗ್ಯರಲ್ಲವೆನಿಸಿರಬಹುದು. ಅಷ್ಟಿತಷ್ಟು ಇಂತಹ ಐತಿಹಾಸಿಕ ದೊರೆಗಳ ಬಗ್ಗೆ ಆಸ್ಥಾನಕವಿಗಳು ಮಹಾಕಾವ್ಯವನ್ನೇ ಬರೆದರೂ, ವ್ಯಾಖ್ಯಾಕಾರರ ಪಠನಪಾಠನಪರಂಪರೆ ಅದಕ್ಕೆ ದೊರೆಯುವದು ದುಸ್ತರವೇ ಆಗುತ್ತಿತ್ತು. ಉದಾಹರಣೆಗೆ, ವಿದ್ವತ್ಕಾವ್ಯವಾದ ನೈಷಧಕ್ಕೆ ಮೂವತ್ತು ವ್ಯಾಖ್ಯಾನಗಳು ದೊರೆಯುತ್ತಿದ್ದರೆ, ಪರಮಾರರಾಜ ಮುಂಜನನ್ನು ಕುರಿತ ಪರಿಮಲ ಕಾಲಿದಾಸನ 'ನವಸಾಹಸಾಂಕಚರಿತ' ಕ್ಕೆ ಒಂದೇ ವ್ಯಾಖ್ಯಾನವೂ ಇಲ್ಲ.

ಇವುಗಳಲ್ಲಿ ಅಂಶಿಕ ಸತ್ಯವಿರಬಹುದಾದರೂ, ಭಾರತೀಯರು ಐಹಿಕ ಜೀವನಪರಾಙ್ಮುಖರಾಗಿದ್ದರೆನ್ನುವುದು ಸರಿಯಲ್ಲ. ಏಕೆಂದರೆ ನಾನಾ ಲೌಕಿಕವಿದ್ಯೆಗಳೂ, ಶಾಸ್ತ್ರಗಳೂ— ವೈದ್ಯ, ಜ್ಯೋತಿಷ್ಯ, ಚೌರ್ಯ, ಪಾಕಶಾಸ್ತ್ರ, ಶಿಲ್ಪಶಾಸ್ತ್ರ, ಹಸ್ತಿಶಾಸ್ತ್ರ, ಗಜಶಾಸ್ತ್ರ, ವನಸ್ಪತಿಶಾಸ್ತ್ರ ಇತ್ಯಾದಿ—ಸಂಸ್ಕೃತದಲ್ಲಿ ವಿಪುಲವಾಗಿ ಬೆಳೆದಿರುವುದನ್ನು ನೋಡಿದರೆ, ಅವೆಲ್ಲ ಭಾರತೀಯರಿಗಿದ್ದ ಐಹಿಕ ಜೀವನಾಸಕ್ತಿಯನ್ನೇ ಎತ್ತಿತೋರಿಸುತ್ತವೆ. ಅನೇಕ ರಾಜಪ್ರಶಸ್ತಿಗಳೂ ಉತ್ಖನನಗಳಿಂದ ಉಪಲಬ್ಧವಾಗಿವೆ. ಅವುಗಳಲ್ಲಿ ಕಾಲನಿರ್ದೇಶವೂ ಇದ್ದೇ ಇರುತ್ತದೆ. ಇವನ್ನೆಲ್ಲ ಬಿಟ್ಟರೂ, ಈಗಾಗಲೇ ಸೂಚಿಸಿದಂತೆ ಐತಿಹಾಸಿಕ ರಾಜರುಗಳನ್ನೇ ಕುರಿತು ಆಸ್ಥಾನಕವಿಗಳು ರಚಿಸಿದ ಮತ್ತು ಇಡಿಯ ಕಾಶ್ಮೀರಪ್ರದೇಶದ ಪೂರ್ಣೇತಿಹಾಸಕ್ಕೇ ಮೀಸಲಾಗಿರುವ ಮಹಾಕಾವ್ಯಗಳು ಹತ್ತಾರು ದೊರೆತಿವೆ. ಇವುಗಳಲ್ಲಿ ಅತಿರಂಜಿತ ಅಂಶಗಳನ್ನಷ್ಟು ಬಿಟ್ಟುಕೊಟ್ಟರೆ ನಮಗೆ ಆಯಾ ಕಾಲದ ಜನರ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಒಂದು ಸುಸ್ಪಷ್ಟ ಕಲ್ಪನೆ ದೊರೆಯುತ್ತದೆ. ಆ ರಾಜರುಗಳು ಸಾಧಿಸಿದ ಮಹಾಕಾರ್ಯಗಳೂ ನಿಚ್ಚಳವಾಗಿ ಎದ್ದುಕಾಣುತ್ತವೆ. ಅದನ್ನೆಲ್ಲ ನೋಡಿದರೆ, ಸಂಸ್ಕೃತದಲ್ಲಿ ಐತಿಹಾಸಿಕ ರಾಜಾದಿಗಳನ್ನು ಕುರಿತ ನೂರಾರು ಕೃತಿಗಳು ರಚಿತವಾಗಿದ್ದಿರಬಹುದೆಂದೂ, ಅವೆಲ್ಲ ಉತ್ತರಕಾಲೀನರ ಔದಾಸೀನ್ಯದಿಂದ ಬಹುಮಟ್ಟಿಗೆ ನಷ್ಟವಾಗಿರಬೇಕೆಂದೂ ಊಹಿಸಬೇಕಾಗುತ್ತದೆ. ಕಾಳಿದಾಸನು ರಘುವಂಶವನ್ನು ರಚಿಸುವ ಮುನ್ನ ಪೂರ್ವಸೂರಿಗಳು ಆ ವಂಶದಲ್ಲಿ ವಾಗ್ದ್ವಾರವನ್ನು ನಿರ್ಮಿಸಿದ್ದರೆನ್ನುತ್ತಾನೆ. ದಿಲೀಪ, ರಘು, ಅಜ—ಇವರಾರ ಕಥೆಯೂ ವಾಲ್ಮೀಕಿ ರಾಮಾಯಣದಲ್ಲಿಲ್ಲ. ಎಂದಮೇಲೆ ಇವರ ಚರಿತೆಗಳನ್ನು ವಾಲ್ಮೀಕಿ ಭಿನ್ನರಾದ ಪೂರ್ವಸೂರಿಗಳು ಬರೆದಿದ್ದರಬೇಕೆಂಬುದು ಸ್ಪಷ್ಟವಿದೆ. ರಾಮಿಲಸೋಮಿಲರು ಬರೆದರೆನ್ನುವ ಶೂದ್ರಕಕಥೆ, ಗುಣಾಢ್ಯನ ಬೃಹತ್ಕಥೆ, ಇವು ಪೂರ್ಣವಾಗಿ ನಷ್ಟವಾಗಿವೆ.



46*

ಇವುಗಳಲ್ಲೆಲ್ಲ ಅನೇಕ ಚಾರಿತ್ರಿಕ ಅಂಶಗಳಿದ್ದುವೆಂದು ಊಹಿಸಲು ಸಾಕಷ್ಟು ಆಧಾರವಿದೆ. ಆದ್ದರಿಂದ ಕಾಲನ ಕಣ್ಣು ತಪ್ಪಿಸಿಯೂ ಉಳಿದು ಬಂದಿರುವ ಐತಿಹಾಸಿಕ ಮಹಾಕಾವ್ಯಗಳ ಪ್ರಾಮುಖ್ಯ ಹೆಚ್ಚಿನದಾಗಿದೆ.

ಇವುಗಳಲ್ಲೆಲ್ಲ ಪ್ರಥಮಸ್ಥಾನ ಬಾಣನ ಹರ್ಷಚರಿತೆಗೇ (ಕ್ರಿ. ಶ 600) ಸಲ್ಲಬೇಕು. ಅದರಲ್ಲಿರುವ ಚಾರಿತ್ರಿಕ ಅಂಶಗಳೆಲ್ಲ—ಪ್ರಭಾಕರವರ್ಧನನ ಮರಣಾನಂತರ ಹಿರಿಯಮಗ ರಾಜ್ಯವರ್ಧನನ ವೈರಾಗ್ಯ, ಹೂಣರೊಡನೆ ಯುದ್ಧ, ಅವನಿಗೆ ಕಪಟದಿಂದ ಒದಗಿದ ಮರಣ, ತಂಗಿ ರಾಜ್ಯಶ್ರೀಯು ವೈಧವ್ಯದಲ್ಲಿ ಆಕೆಯು ರಾಜಧಾನಿಯಾದ ಕಾನ್ಯಕುಬ್ಜಕ್ಕೆ ಒತ್ತಾಯದಿಂದ ಹರ್ಷನ ಪ್ರಭುತ್ವಸ್ವೀಕಾರ, ಹರ್ಷನ ದಿಗ್ವಿಜಯ, ಬೌದ್ಧಧರ್ಮಪ್ರೋತ್ಸಾಹ, ಸ್ವಯಂಕವಿತ್ವ ಪ್ರಾವೀಣ್ಯ, ಜನಾನುರಾಗ, ಇತ್ಯಾದಿ—ಅವನ ರಾಜ್ಯದಲ್ಲಿ ಪ್ರವಾಸಮಾಡಿದ ಚೀಣೀ ಯಾತ್ರಿಕ ಹ್ಯೂಯೆನ್‌ತ್ಸಾಂಗನ ವರದಿಗಳಿಂದ ಪ್ರಮಾಣಿತವೂ ಆಗಿದೆ. ಬಾಣನು ಹೇಳುವ ಭಟ್ಟಾರ ಹರಿಚಂದ್ರ, ಆಢ್ಯರಾಜ ಮುಂತಾದವರ ಕೃತಿಗಳು ಇಂದು ಲುಪ್ತವಾಗಿರುವದೂ ತಿಳಿಯುತ್ತದೆ.

ಬಾಣನ ಮಾರ್ಗವನ್ನನುಸರಿಸಿದವರಲ್ಲಿ ಒಂದು ಐತಿಹಾಸಿಕವಾದ ಪ್ರಾಕೃತ ಮಹಾಕಾವ್ಯವನ್ನೇ ರಚಿಸಿದ ಯಶಸ್ಸು "ಗೌಡವಹೋ" ಎಂಬ ಕಾವ್ಯಕಾರನಾದ ವಾಕ್ಪತಿರಾಜನದು. ಇವನು ಕಾನ್ಯಕುಬ್ಜದ ಮೌಖರಿ ರಾಜ ಯಶೋವರ್ಮನ ಆಸ್ಥಾನಕವಿ ಮತ್ತು ಭವಭೂತಿಯ ಸಮಕಾಲೀನ (ಕ್ರಿ. ಶ. 8ನೆಯ ಶತಮಾನ). ಯಶೋವರ್ಮನು ದಂಡಯಾತ್ರೆ ಮಾಡಿ ಗೌಡದೇಶದ ದೊರೆಯ ಮೇಲೆ ಸಾಧಿಸಿದ ವಿಜಯವೇ ಇಲ್ಲಿಯ ಕಾವ್ಯವಸ್ತು. ಮುಂದೆ ಕ್ರಿ. ಶ. 740ರಲ್ಲಿ ಕಾಶ್ಮೀರರಾಜ ಲಲಿತಾದಿತ್ಯನಿಂದ ಇವನು ಯುದ್ಧದಲ್ಲಿ ಹತನಾದ ಕಾರಣ ಕವಿ ತನ್ನ ಮಹಾಕಾವ್ಯವನ್ನು ಅಪೂರ್ಣವಾಗಿಯೇ ನಿಲ್ಲಿಸಿಬಿಟ್ಟಿದ್ದಾನೆ. ಇಲ್ಲಿ ಘಟನೆ ಅಲ್ಪವಾದರೂ, ವಾಕ್ಪತಿರಾಜನ ಕವಿತಾವಿಲಾಸವು ಅತ್ಯಂತ ರಮಣೀಯವೂ, ಅದ್ಭುತವೂ ಆಗಿದೆ. ಇದರಲ್ಲಿ 1209 ಗಾಥೆಗಳಿವೆ. ವಿಂಧ್ಯವಾಸಿನೀದೇವಿಯ ಗುಡಿಯ ವರ್ಣನೆ, ಮಗಧ, ವಂಗ, ಮಲಾಸುರಭಿ ಮತ್ತು ದಾಕ್ಷಿಣಾತ್ಯ ರಾಜರ ಪರಾಭವ, ಪಾರಸೀಕರ ಮತ್ತು ಕೊಂಕಣರ ಮೇಲಿನ ವಿಜಯ, ಪೂರ್ವ ಮತ್ತು ಉತ್ತರ ದಿಗ್ವಿಜಯಗಳ ವಿವರ ಇವುಗಳೆಲ್ಲವೂ ಚಮತ್ಕಾರಪೂರ್ಣವಾಗಿವೆ. ಋತು, ಗಿರಿ, ವನಾದಿವರ್ಣನೆಗಳು ವಿಸ್ತಾರವಾಗಿಯೂ, ಉತ್ಪ್ರೇಕ್ಷಾಬಂಧುರವಾಗಿಯೂ ಬಂದಿವೆ.

## ಪದ್ಮಗಲಪ್ತ ಅಥವಾ ಪರಿಮಲ ಕಾಲಿದಾಸನ 'ನವಸಾಹಸಾಂಕಚರಿತ' :—

ಈ ಕವಿಯು ಪ್ರಸಿದ್ಧ ಧಾರಾಧೀಶ ಭೋಜನ ತಂದೆಯಾದ ಸಿಂಧುರಾಜನ ಮತ್ತು ಅದಕ್ಕೂ ಮುಂಚೆ ಅವನ ಹಿರಿಯಣ್ಣನಾದ ಮುಂಜ ನರೇಶನ ಸಭಾಕವಿಯಾಗಿದ್ದನು. ತನ್ನ ಆಶ್ರಯದಾತನಾದ ಸಿಂಧುರಾಜನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು ಬರೆದಿರುವ ಮಹಾಕಾವ್ಯವೇ 'ನವಸಾಹಸಾಂಕಚರಿತ.' ಇಲ್ಲಿ ಸಿಂಧುರಾಜನೇ ನವಸಾಹಸಾಂಕ. ಅವನ ಕಾಲ ಕ್ರಿ. ಶ. 1005. ನಾಗರ ಶತ್ರುವಾದ ವಜ್ರಾಂಕುಶನನ್ನು ಸೋಲಿಸಿ ಸಿಂಧುರಾಜನು ನಾಗಾಧಿಪ ಶಂಖಪಾಲನ ಮಗಳಾದ ಶಶಿಪ್ರಭೆಯನ್ನು ವಿವಾಹವಾದನೆಂದು ಇಲ್ಲಿ ಮನೋಹರವಾಗಿ ವರ್ಣಿಸಲಾಗಿದೆ.



ಶಶಿಪ್ರಭೆಗೆ ತನ್ನ ಮುಂದಿದ್ದ ಜಿಂಕೆಗೆ ಚುಚ್ಚಿರುವ ಬಾಣದ ಮೇಲೆ ರಾಜನ ಹೆಸರು ಕಾಣಬರುತ್ತದ ಅತ್ತ ಜಿಂಕೆಯನ್ನು ಬೆನ್ನಟ್ಟಿದ ರಾಜನಿಗೆ ಒಂದು ಕೊಳದ ಬಳಿ ಹಂಸವೊಂದು ಕಾಣುತ್ತದ ಅದರ ಕೊಕ್ಕಿನಲ್ಲಿರುವ ಮುತ್ತಿನ ಸರದ ಮೇಲೆ ಶಶಿಪ್ರಭೆಯ ಹೆಸರು ಕೊರೆದಿದೆ. ಶಶಿಪ್ರಭೆಯ ದೂತಿ ಅಷ್ಟರಲ್ಲಿ ಬಂದು ಅವರ ಸಮಾಗಮವನ್ನೇರ್ಪಡಿಸುತ್ತಾಳೆ. ಅವಳ ಕೋರಿಕೆಯಂತ ಅವನು ನಾಗಶತ್ರುವನ್ನು ನಿಗ್ರಹಿಸಿ ಅವಳನ್ನು ಮದುವೆಯಾಗುತ್ತಾನೆ. ಇಲ್ಲಿ ಇತಿಹಾಸಘಟನ ಯೊಂದಿಗೆ ಪೌರಾಣಿಕ ಕಥೆಯೂ ಸಮ್ಮಿಳಿತವಾಗಿಬಿಟ್ಟಿದೆ. ಆದರೂ ಸಿಂಧುರಾಜನಿಂದ ಪರಾಜಿತರಾದ ರಾಜರೆಲ್ಲರೂ ಐತಿಹಾಸಿಕ ವ್ಯಕ್ತಿಗಳೆಂದು ಸಂಶೋಧಿಸಲಾಗಿದೆ. ಇದರಲ್ಲಿ 18 ಸರ್ಗಗಳೂ, 1500 ಪದ್ಯಗಳೂ ಇವೆ. ಕಾವ್ಯಶೈಲಿ ವೈದರ್ಭೀರೀತಿಯಾಗಿದ್ದು ಕಾಳಿದಾಸನನ್ನ ನೆನಪಿಗೆ ತರುವಂತಿದೆ. ಪದಮಾಧುರ್ಯ ಪ್ರಶಂಸನೀಯವಾಗಿದೆ. ಭೋಜನ 'ಸರಸ್ವತೀ ಕಂಠಾಭರಣ', ಕ್ಷೇಮೇಂದ್ರನ 'ಔಚಿತ್ಯವಿಚಾರಚರ್ಚೆ', ಮಮ್ಮಟನ 'ಕಾವ್ಯಪ್ರಕಾಶ'ಗಳಲ್ಲಿ ಈ ಗ್ರಂಥದ ಶ್ಲೋಕಗಳು ಉದಾಹೃತವಾಗಿವೆ. ಮಮ್ಮಟ ವಿಷಮಾಲಂಕಾರಕ್ಕೆ ನಿದರ್ಶನವಾಗಿ ಎತ್ತಿಕೊಂಡಿರುವ ಈ ಸುಂದರ ಪದ್ಯವೊಂದನ್ನು ನೋಡಿ :—

ಸದ್ಯಃ ಕರಸ್ಪರ್ಶಮವಾಪ್ಯ ಚಿತ್ರಂ ರಣೇ ರಣೇ ಯಸ್ಯ ಕೃಪಾಣಲೇಖಾ ।
ತಮಾಲಲೀಲಾಶರದಿಂದುಪಾಂಡು ಯಶಸ್ತ್ರಿಲೋಕ್ಯಾಭರಣಂ ಪ್ರಸೂತೇ ॥

## ಬಿಲ್ಹಣನ ವಿಕ್ರಮಾಂಕದೇವಚರಿತ :

ಬಿಲ್ಹಣನು ಕಾಶ್ಮೀರದಲ್ಲಿ ಜನಿಸಿದ ಕವಿ. ಇವನು ಬಾಣನಂತೆ ತನ್ನ ಜೀವನವೃತ್ತಾಂತವನ್ನು ಹೇಳಿಕೊಂಡಿದ್ದಾನೆ. ಇವನ ಜನ್ಮನಗರ ಪ್ರವರಪುರದ ಬಳಿಯ ಕೋಣಮುಖ. ವ್ಯಾಕರಣ, ಅಲಂಕಾರ ಶಾಸ್ತ್ರಗಳಲ್ಲಿ ಪ್ರಾವೀಣ್ಯ ಗಳಿಸಿದನು ; ತಂದೆಯೇ (ಜ್ಯೇಷ್ಠಕಲಶ) ಮಹಾಭಾಷ್ಯಕ್ಕೆ ಟೀಕೆ ಬರೆದವನು. ಯಶೋರ್ಥಿಯಾಗಿ, ಇವನು ದೇಶಪರ್ಯಟನೆ ಕೈಗೊಂಡನು, ನಾನಾ ಆಸ್ಥಾನಗಳನ್ನು ಸಂದರ್ಶಿಸಿ ಖ್ಯಾತಿಗಳಿಸಿದನು. ಮಥುರಾ, ಕಾನ್ಯಕುಬ್ಜ, ಪ್ರಯಾಗ, ವಾರಾಣಸಿಗಳನ್ನು ಸಂದರ್ಶಿಸಿದಮೇಲೆ ಡಾಹಲದ (ಬುಂದೇಲ್ ಖಂಡ) ರಾಜ ಕೃಷ್ಣನ ಆಸ್ಥಾನದಲ್ಲಿ ಮೊದಲು ಮನ್ನಣೆ ಪಡೆದನು. ಆ ಮೇಲೆ ಅಣಹಿಲವಾಡದ ಕರ್ಣದೇವನ (1064–94) ಆಸ್ಥಾನವನ್ನು ಸೇರಿ ಅಲ್ಲಿ 'ಕರ್ಣಸುಂದರೀ' ಎಂಬ ನಾಟಕವನ್ನು ಬರೆದನು. ಮುಂದೆ ದಕ್ಷಿಣದಲ್ಲಿ ರಾಮೇಶ್ವರದವರೆಗೂ ತೀರ್ಥಯಾತ್ರೆ ಮಾಡಿ, (ಕರ್ನಾಟಕದ) ಕಲ್ಯಾಣದ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ (ಕ್ರಿ. ಶ. 1076–1127) ವಿದ್ಯಾಪತಿಯೆಂಬ ಪದವಿಯನ್ನು ಗಳಿಸಿದನು. ಅದಕ್ಕೆ ಮೊದಲು ಧಾರಾನಗರಿಗೆ ಇವನು ಹೋದಾಗ 'ಅಯ್ಯೋ ಭೋಜನಿದ್ದಾಗ ನೀನು ಬರಲಿಲ್ಲವಲ್ಲಾ' ಎಂದು ಆ ನಗರದೇವತೆಯೇ ದುಃಖಿಸಿದಳಂತೆ. ಬಿಲ್ಹಣನು ಆ ರಾಜನ ಪ್ರಶಸ್ತಿಗಾಗಿ ಕ್ರಿ. ಶ. 1088ಕ್ಕೆ ಸ್ವಲ್ಪ ಮುಂಚೆ ತನ್ನ ಮಹಾಕಾವ್ಯ 'ವಿಕ್ರಮಾಂಕದೇವಚರಿತ' ವನ್ನು ಬರೆದನು.

ಇಲ್ಲಿಯೂ ಕಾವ್ಯದ ಮುಖ್ಯವಸ್ತು ನಾಯಕನ ಯುದ್ಧ ವಿಜಯಗಳು ಮತ್ತು ರಾಜಕನ್ಯೆಯರ ಲಾಭಗಳು. ಚಾಲುಕ್ಯವಂಶದ ಸಂಕ್ಷಿಪ್ತ ವರ್ಣನೆಯಿಂದ ಕಾವ್ಯ ಆರಂಭವಾಗುತ್ತದೆ. ತೈಲಪರಾಜನ ವರ್ಣನೆ (973–997) ಸ್ವಲ್ಪ ವಿವರವಾಗಿ ಬಂದಿದೆ. ವಿಕ್ರಮಾದಿತ್ಯನ ತಂದೆ ಆಹವಮಲ್ಲನಿಗೆ ಮೂವರು ಪುತ್ರರಾದುದನ್ನು ಶಿವನ ಪೂಜಾಫಲವೆಂದು ವರ್ಣಿಸಲಾಗಿದೆ. ಯುವರಾಜನಾಗಿದ್ದಾಗಲೇ ವಿಕ್ರಮಾದಿತ್ಯನ ವಿಜಯಯಾತ್ರೆಗಳ ವರ್ಣನೆ ಬರುತ್ತದೆ; ಆನಂತರ ಆಹವಮಲ್ಲನ ಮರಣದ ಕರುಣಾಜನಕ ವರ್ಣನೆ, ಅಣ್ಣ ಇಮ್ಮಡಿ ಸೋಮೇಶ್ವರ ಮತ್ತು ತಮ್ಮ ಜಯಸಿಂಹರಿಬ್ಬರೂ ಇವನ ಮೇಲೆ ತೋರಿಸಿದ ದುರ್ವರ್ತನೆ, ಅವರ ನಿಗ್ರಹ, ಆಮೇಲೆ ರಾಜ್ಯಾಭಿಷೇಕ, ನಾಲ್ಕೂ ದಿಕ್ಕುಗಳಲ್ಲಿ ಅಭೂತಪೂರ್ವ ದಿಗ್ವಿಜಯ, ಚೋಳರಾಜಪುತ್ರಿ ಮತ್ತು ಕರಹಾಟದ ರಾಜಪುತ್ರಿಯರೊಡನೆ ವಿವಾಹ—ಈ ಎರಡನೆಯವಳಾದ ಚಂದ್ರಲೇಖೆಯನ್ನು ಸ್ವಯಂವರದಲ್ಲಿ ಪಡೆದಂತೆ ಕವಿ ಕಲ್ಪಿಸಿದ್ದಾನೆ—ಚೋಳರೊಡನೆ ಮಾಡಿದ ಅನೇಕ ಯುದ್ಧಗಳು, ಈ ಐತಿಹಾಸಿಕ ಸನ್ನಿವೇಶಗಳೆಲ್ಲ ನಡುನಡುವೆ ಶಿವನು ಕನಸಿನಲ್ಲಿ ಬಂದು ಮಾಡುವ ಉಪದೇಶ ಇತ್ಯಾದಿ ಅತಿರಂಜಿತ ಅಂಶಗಳಿಂದಲೂ, ಜಲಕ್ರೀಡೆ, ರಥೋತ್ಸವ, ಮಧುಪಾನ ಮೃಗಯಾ ವಿನೋದಾದಿ ಕಾವ್ಯವರ್ಣನೆಗಳಿಂದಲೂ ಮುಚ್ಚಿಹೋಗುವಂತಾಗಿದೆ. ಹೀಗೆ ಐತಿಹಾಸಿಕಾಂಶ ಹಿಂದಾದರೂ ಬಿಲ್ಹಣನ ಕಾವ್ಯಗುಣ ಬಹಳ ಹಿರಿದಾಗಿದೆ. ಅವನು ಸರಸಕವಿಶಿರೋಮಣಿ. ಅವನ ಕವಿಕಾವ್ಯಪ್ರಶಂಸೆಯನ್ನು ಕುರಿತ ಕೆಲವು ಪದ್ಯಗಳಿವು :—

ಜಯನ್ತಿ ತೇ ಪಂಚಮನಾದಮಿತ್ರಚಿತ್ರೋಕ್ತಿಸಂದರ್ಭವಿಭೂಷಣೇಷು ।
ಸರಸ್ವತೀ ಯದ್ವದನೇಷು ನಿತ್ಯಮಾಭಾತಿ ವೀಣಾಮಿವ ವಾದಯನ್ತೀ ॥ (I–10)

ಪೃಥ್ವೀಪತೇಃ ಸನ್ತಿ ನ ಯಸ್ಯ ಪಾರ್ಶ್ವೇ
ಕವೀಶ್ವರಾಸ್ತಸ್ಯ ಕುತೋ ಯಶಾಂಸಿ ।
ಭೂಪಾಃ ಕಿಯನ್ತೋ ನ ಬಭೂವುರುರ್ವ್ಯಾಂ
ಜಾನಾತಿ ನಾಮಾಪಿ ನ ಕೋಽಪಿ ತೇಷಾಮ್ ॥ (I–26)

ತಂದೆಯ ಮರಣಾನಂತರ ವಿಕ್ರಮನು ಮರಳಿದ ರಾಜಧಾನಿ ಹೀಗೆ ಕಾಣಿಸಿತಂತೆ :

ಸರೋಜಿನೀವ ಹಂಸೇನ ನಯೇನೇವ ನರೇಂದ್ರತಾ ।
ಕವಿನಾ ಮುಖಗೋಷ್ಠೀವ ಚಂದ್ರೇಣೇವ ವಿಭಾವರೀ ॥ (III–90)
ಲಕ್ಷ್ಮೀರಿವ ಪ್ರದಾನೇನ ಕವಿತ್ವೇನೇವ ವಾಗ್ಮಿತಾ ।
ಮೇನೇ ತೇನಾಪವಿತ್ರೇನ ಪಿತ್ರಾ ವಿರಹಿತಾ ಪುರೀ ॥ (III–91)

## ಕಲ್ಹಣನ ' ರಾಜತರಂಗಿಣಿ ' :

ಕಾವ್ಯಾಂಶಕ್ಕಿಂತ ಐತಿಹಾಸಿಕ ಘಟನಾವಳಿಗೇ ವಿಶೇಷ ಪ್ರಾಶಸ್ತ್ಯವಿರುವ, ಮರುತ್ತು ಆದಿಕಾಲದಿಂದ ಹಿಡಿದು ಗ್ರಂಥಲೇಖಕನವರೆಗಿನ ಸಾವಿರಾರು ವರ್ಷಗಳವರೆಗೆ ಅನುಸ್ಯೂತವಾದ ಕಾಶ್ಮೀರರಾಜ್ಯದ ಇತಿಹಾಸವನ್ನು ಒದಗಿಸುವ ಏಕೈಕ ಸಂಸ್ಕೃತಸಾಹಿತ್ಯಕೃತಿಯೆಂಬ ಗೌರವ ಕಲ್ಹಣನ ರಾಜತರಂಗಿಣಿಗೆ ಮೀಸಲಾಗಿದೆ.



ಕಲ್ಹಣನ ತಂದೆ ಚಂಪಕನು ಕಾಶ್ಮೀರ ರಾಜನಾದ ಹರ್ಷದೇವನ (ಕ್ರಿ.ಶ. 1089–110 ಮಂತ್ರಿಯಾಗಿದ್ದನು. ಹರ್ಷನ ಮರಣಾನಂತರ ಉಚ್ಚಲ ಮತ್ತು ಸುಸ್ಸಲರು ಸಿಂಹಾಸನಾರೂಢರಾದಾಗ ಕಾಶ್ಮೀರದ ಇತಿಹಾಸದಲ್ಲಿ ಮೋಸ, ಅನಾಚಾರ, ರಕ್ತಪಾತಗಳಿಂದ ತುಂಬಿ ಏರುಪೇರುಗಳುಂಟಾದವು. ಕಲ್ಹಣನು ನಿಷ್ಪಕ್ಷಪಾತ ಸಾಕ್ಷಿಯಂತೆ ಇವನ್ನೆಲ್ಲ ವೀಕ್ಷಿಸಿ ಪರಿ ಮಾಡಿದ್ದಾನೆ. ರಾಜತರಂಗಿಣಿಯ ರಚನಾಕಾಲದಲ್ಲಿ ಸುಸ್ಸಲನ ಮಗ ಜಯಸಿಂಹನು (ಕ್ರಿ. ಶ 1128-1159) ರಾಜನಾಗಿದ್ದನು. ಅವನಾಳ್ವಿಕೆಯ ಕಡೆಯ ಎರಡು ವರ್ಷಗಳ ಅವಧಿಯಲ್ಲಿ ಈ ಬೃಹತ್ತಾದ ಇತಿಹಾಸಗ್ರಂಥವನ್ನು ಕಲ್ಹಣನು ಬರೆದು ಮುಗಿಸಿದನು. ಅಲಕದತ್ತನೆಂಬವನು ಕಲ್ಹಣನ ಆಶ್ರಯದಾತನಾಗಿದ್ದನು.

ರಾಜತರಂಗಿಣಿಯಲ್ಲಿ ಎಂಟು ತರಂಗಗಳಿವೆ. ಮೊದಲನೆಯ ತರಂಗದಲ್ಲಿ ಗೋನಂದನಿಂದ ಹಿಡಿದು ಯುಧಿಷ್ಠಿರನವರೆಗೆ 75 ರಾಜರ ಆಳ್ವಿಕೆಯನ್ನು ಸಂಕ್ಷಿಪ್ತವಾಗಿ ವರ್ಣಿಸಿದೆ. ಎರಡನೆಯ ತರಂಗದಲ್ಲಿ 6 ರಾಜರ 192 ವರ್ಷಗಳ ಆಳ್ವಿಕೆ ವರ್ಣಿತವಾಗಿದೆ. ಮೂರನೆಯ ತರಂಗದಲ್ಲಿ ಗೋನಂದವಂಶದ ಕಡೆಯ ರಾಜನಾದ ಆದಿತ್ಯನವರೆಗೆ ಹತ್ತು ರಾಜರ 536 ವರ್ಷಗಳ ರಾಜ್ಯಕಾಲ ವಿವರಿಸಲ್ಪಟ್ಟಿದೆ. ನಾಲ್ಕನೆಯ ತರಂಗವು ಕರ್ಕೋಟಕವಂಶದ ಮೊದಲ ರಾಜನಾದ ದುರ್ಲಭವರ್ಧನನ ರಾಜ್ಯಾಭಿಷೇಕದಿಂದ ಆರಂಭವಾಗುತ್ತದೆ. ಈ ತರಂಗದಲ್ಲಿ ವ್ಯಾಪ್ತವಾಗಿರುವ ಕಾಲಾವಧಿ 260 ವರ್ಷ, 6 ತಿಂಗಳು ಮತ್ತು 10 ದಿನಗಳದು ; ಬರುವ ರಾಜರ ಸಂಖ್ಯೆ ಹದಿನೇಳು. ಐದನೆಯ ತರಂಗದಲ್ಲಿ ಅವಂತಿವರ್ಮನ ರಾಜ್ಯಾರೋಹಣದಿಂದ ಉತ್ಪಲವಂಶ ಮೊದಲಾಗುತ್ತದೆ ಅವಂತಿವರ್ಮನು ಕ್ರಿ. ಶ. 836 ರಿಂದ 883ರ ವರೆಗೆ ರಾಜ್ಯವಾಳಿದನು. ಈ ತರಂಗದಲ್ಲಿಯೇ ಕಲ್ಯಪಾಲವಂಶದ ಸಂಕಟವರ್ಮ, ಸುಗಂಧಾದೇವಿ ಮತ್ತು ಶಂಕರವರ್ಧನರ ಆಳ್ವಿಕೆಯ ನಿರ್ದೇಶನವೂ ಬಂದಿದೆ. ಆರನೆಯ ತರಂಗದಲ್ಲಿ ಯಶಸ್ಕರನೆಂಬ ರಾಜನಿಂದಾರಂಭಿಸಿ ದಿದ್ದಾ ಎಂಬ ರಾಣಿಯವರೆಗೆ ಹತ್ತು ಜನರ ಶಾಸನಕಾಲ ನಿರೂಪಿತವಾಗಿದೆ. ಇದರ ಅವಧಿ ಕ್ರಿ.ಶ. 936 ರಿಂದ 1003. ಕಡೆಯದಾದ ಎಂಟನೆಯ ತರಂಗದಲ್ಲಿ ಸಾತವಾಹನ ವಂಶದ ಉಚ್ಚಲ, ಸುಸ್ಸಲ, ಭಿಕ್ಷಾಚರ ಮತ್ತು ಜಯಸಿಂಹರ ಜೀವನಚರಿತ್ರೆಯು ಅಡಕವಾಗಿದೆ.

ಕಲ್ಹಣನು ರಾಜತರಂಗಿಣಿಯನ್ನು ರಚಿಸುವ ಮುನ್ನ ಅನೇಕ ಅಧಿಕಾರಪತ್ರಗಳು, ಶಿಲಾಲೇಖಗಳು, ದಾನಪತ್ರಗಳು, ಪ್ರಶಸ್ತಿಗಳು, ಹಸ್ತಲಿಖಿತ ಗ್ರಂಥಗಳು ಮುಂತಾದುವನ್ನು ಚೆನ್ನಾಗಿ ಪರಿಶೀಲಿಸಿರುವುದಲ್ಲದೆ ಇತಿಹಾಸಸಾಮಗ್ರಿಯನ್ನು ಸರಿಯಾಗಿ ಸಂಯೋಜಿಸಲು ನೀಲಮತ ಪುರಾಣ, ಪ್ರಾಚೀನ ನಾಣ್ಯಗಳು, ಜನಶ್ರುತಿಗಳು ಮತ್ತು ವೃದ್ಧಜನರಲ್ಲಿ ಪ್ರಚಲಿತವಾದ ಐತಿಹ್ಯಗಳನ್ನು ಕೂಡ ಬಹಳ ಲಕ್ಷ್ಯಪೂರ್ವಕವಾಗಿ ಬಳಸಿಕೊಂಡಿರುವುದಾಗಿ ತಾನೇ ಹೇಳಿಕೊಂಡಿದ್ದಾನೆ. ಹೀಗೆ ಇವನಲ್ಲಿ ಅತ್ಯಾಧುನಿಕ ಹಾಗು ಶಾಸ್ತ್ರೀಯವೆನ್ನಬಹುದಾದ ಇತಿಹಾಸ ದೃಷ್ಟಿಯಿದೆ. ಪೌರಾಣಿಕಯುಗದ ವಿವೇಚನೆಗಳಲ್ಲಿ ಕಲ್ಪಿತಾಂಶಗಳು ಸೇರಿಕೊಂಡಿದ್ದರೂ ಐತಿಹಾಸಿಕಯುಗದ ಪ್ರತಿಪಾದನೆಯಲ್ಲಿ ಬಹಳಷ್ಟು ಮೆಚ್ಚುವಂತಹ ಐತಿಹಾಸಿಕ ಸಾಮಗ್ರಿಗಳು ಸಪ್ರಮಾಣವಾಗಿ ಬಂದಿವೆ.

ಈ ರಾಜತರಂಗಿಣಿಯನ್ನು ಕಾಶ್ಮೀರದ ಸಾಂಸ್ಕೃತಿಕ ಜೀವನದ ವಿಶ್ವಕೋಶವೆಂದೇ ಹೇಳಬಹುದು. ಇಲ್ಲಿ ಪ್ರಜೆಗಳ ಧಾರ್ಮಿಕ, ಸಾಮಾಜಿಕ ಮತ್ತು ರಾಜನೈತಿಕ ಜೀವನದ ಸುಂದರ ವರ್ಣನೆ ಬಂದಿದೆ. ಕಾಶ್ಮೀರಿಗಳು ಸರ್ವಧರ್ಮಸಹಿಷ್ಣುಗಳಾಗಿದ್ದುದರಿಂದ ಅಲ್ಲಿ ಹಿಂದೂಧರ್ಮದ ಜೊತೆಜೊತೆಗೇ ಬೌದ್ಧ, ಜೈನಧರ್ಮಗಳೂ, ಶೈವ, ಶಾಕ್ತ, ವೈಷ್ಣವ, ಪಾಶುಪತಾದಿ ವಿಭಿನ್ನ ಸಂಪ್ರದಾಯಗಳೂ ಪ್ರಚಲಿತವಾಗಿದ್ದುವಲ್ಲದೆ. ಸಮಾನವಾದ ರಾಜಾಶ್ರಯವನ್ನು ಪಡೆಯುತ್ತಿದ್ದವು. ತನ್ನ ಪ್ರದೇಶದಲ್ಲಿ ಬಳಕೆಯಿದ್ದ ಸಾಮಾಜಿಕ ರೀತಿನೀತಿಗಳನ್ನೆಲ್ಲ ಕಲ್ಹಣನು ಬಹು ಮಾರ್ಮಿಕವಾಗಿ ನಿರೂಪಿಸಿದ್ದಾನೆ. ಸುಮಾರು 3680 ವರ್ಷಗಳಷ್ಟು ದೀರ್ಘಾವಧಿಯ ಕಾಲದ ಕ್ರಮಾನುಗತ ಇತಿಹಾಸವನ್ನು ಕಾಶ್ಮೀರಕ್ಕೆ ಸಂಬಂಧಿಸಿದಂತೆ ಬರೆದ ಕಲ್ಹಣನ ಕಾರ್ಯ ಒಂದು ಅದ್ಭುತ ಸಾಹಸವೇ ಸರಿ.

ಅಷ್ಟೇ ಅಲ್ಲದೆ ವಿವಿಧ ರಾಜರ, ಅವರ ಮಂತ್ರಿ, ಸೇನಾಪತಿ ಮತ್ತು ಆಸ್ಥಾನಕವಿ ಪಂಡಿತಾದಿಗಳ ಸೂಕ್ಷ್ಮಸ್ವಭಾವದ ಪರಿಚಯವನ್ನು ಕೂಡ ಕಲ್ಹಣನು ಮಾಡಿಕೊಡುವಲ್ಲಿ ತನ್ನ ಕಲಾನೈಪುಣ್ಯವನ್ನು ಮೆರೆದಿದ್ದಾನೆ. ಅವನು ಮಾನವಸ್ವಭಾವದ ಭಿನ್ನ ಪರಿಗಳನ್ನು ಉತ್ತಮ ಚಿತ್ರಕಾರನಂತೆ ಚಿತ್ರಿಸಿದ್ದಾನೆ. ಹರ್ಷದೇವನಂತಹ ಒಳ್ಳೆಯ ರಾಜನೂ ಕಡೆಗಾಲಕ್ಕೆ ದುಃಖದಿಂದ ಬಳಲಿ ಸೇವಕರ ಕೈಯಿಂದ ಕೊಲೆಯಾಗುವ ಪರಿಸ್ಥಿತಿ ಹೇಗೆ ಬಂದಿತೆಂಬುದನ್ನು ಭಾವಪೂರ್ಣವಾಗಿ ಚಿತ್ರಿಸಿದ್ದಾನೆ :—

ಭೂರ್ನಿರ್ಜನಾ ವೃಷ್ಟಿಪಾತಸ್ತಮಿಸ್ರಾ ದುಃಸಹಾಯಿತಾ ।
ವೈರಿಭೀತಿರಿತಿ ಪ್ರಾಭೂತ್ಕಿಂ ಕಿಂ ತಸ್ಯ ನ ದುಃಖದಮ್ ॥
ಇತಿವೃತ್ತಾನುರೋಧೇನ ಧಿಗ್ದುಷ್ಕರ್ಮವಿಧಾಯಿನಾಮ್ ।
ಅಸ್ಮರ್ತವ್ಯಮಪಿ ವ್ಯಕ್ತಂ ನಾಮ ಗ್ರಾಹಿಷ್ಯತೇಽಧುನಾ ॥

(VII. 1633–34)

ಕೋಽಹಂ ಕೇನಾಭಿಭೂತೋಽದ್ಯ ಕ್ವ ವರ್ತೇ ಕೋಽನುಗೋಽಧುನಾ ।
ಕಿಂ ಕೃತ್ಯಮಿತಿ ನಿರ್ಧ್ಯಾಯ ಮುಹುರ್ಮುಹುರಕಂಪತ ॥
ಹೃತಂ ರಾಜ್ಯಂ ಪ್ರಿಯಾ ದಗ್ಧಾ ಭ್ರಷ್ಟಃ ಸೂನುರಬಾಂಧವಃ ।
ಜಾತೋಽಸ್ಮ್ಯೇಕಾಕ್ಯಪಾಥೇಯೋ ಲುಠನ್ ಭಿಕ್ಷುಭುಜೋಽಙ್ಗಣೇ ॥

(1647–48)

ರಾಜ್ಞಃ ಪ್ರಹರತಃ ಶಸ್ತ್ರಂ ವಂಚಯಿತ್ವಾಸ ಶಸ್ತ್ರಭೃತ್ ।
ವಕ್ಷಸಿ ಕ್ಷುರಿಕಾಘಾತದ್ವಯಂ ಪ್ರಾದಾತ್ ಕೃತತ್ವರಃ ॥
ವರ್ಣನೇ ಮಹೇಶ್ವರೇತ್ಯೇತಾನ್ ದ್ವಿರುಕ್ತ್ವಾ ಗತಜೀವಿತಃ ।
ಪಪಾತ ನಿಹತೋ ಭೂಮೌ ಛಿನ್ನಮೂಲ ಇವ ದ್ರುಮಃ ॥

(1671–72)



ಸಂಸ್ಕೃತದ ಐತಿಹಾಸಿಕ ಕೃತಿಗಳಲ್ಲೆಲ್ಲ ಪೂರ್ಣವಾಗಿ ತಿಥಿಗಳನ್ನು ನಿರ್ದೇಶಿಸುವ ಕೃತಿಯೆಂದರೆ ರಾಜತರಂಗಿಣಿಯೊಂದೇ ಆಗಿದೆ. ಈ ಐತಿಹಾಸಿಕ ಕಾವ್ಯದಲ್ಲಿಯೂ ಕೂಡಾ ಒಮ್ಮೊಮ್ಮೆ ಪ್ರಮಾದಗಳು ತಲೆಹಾಕಿವೆ ; ಅವನ ತಿಥಿಗಳೆಲ್ಲವೂ ಹದಿನಾರಾಣೆ ಕರಾರುವಾಕ್ಕಾಗಿವೆಯೆನ್ನುವಂತಿಲ್ಲ. ಕೆಲವೊಂದು ಘಟನೆಗಳು ಅಂಧಶ್ರದ್ಧೆಯಿಂದ ಇಲ್ಲವೆ ಐತಿಹ್ಯಗಳಿಂದ ಪ್ರೇರಿತವಾದಂತಿವೆ. ಎಂಟನೆಯ ಶತಮಾನಕ್ಕಿಂತ ಹಿಂದಿನ ಕಾಶ್ಮೀರದ ಇತಿಹಾಸವು, ಅಸ್ಪಷ್ಟವೂ ಕಲ್ಪನಾಭೂಯಿಷ್ಠವೂ ಆಗಿದೆ. ಆದರೆ ಕಡೆಯ ಶತಮಾನದ ಇತಿಹಾಸ ಮಾತ್ರ ನಿರ್ದುಷ್ಟವಾಗಿರುವಂತೆ ನಿಶ್ಚಿತವೂ ಆಗಿರುವುದು ನಿರ್ವಿವಾದ.

ರಾಜತರಂಗಿಣಿಯಲ್ಲಿ ಒಟ್ಟು 7826 ಶ್ಲೋಕಗಳಿವೆ. ಇದರ ಮೇಲಿಂದಲೇ ಅದು ಎಷ್ಟೊಂದು ಬೃಹತ್‌ಕೃತಿಯೆಂಬುದನ್ನು ಊಹಿಸಿಕೊಳ್ಳಬಹುದು. ಕಲ್ಹಣನು ಪ್ರಧಾನವಾಗಿ ಇತಿಹಾಸಕಾರನೇ ಆದರೂ ಅವನು ಕವಿತ್ವವಿಷಯವನ್ನು ಎಲ್ಲಿಯೂ ಕಡೆಗಣಿಸಿಲ್ಲ. ಆದ್ದರಿಂದಲೇ ಗ್ರಂಥದುದ್ದಕ್ಕೂ ಕವಿಕಲ್ಪನೆ, ರಸ, ಅಲಂಕಾರ, ಗುಣಾದಿಗಳ ಮನೋಹರ ಸಮನ್ವಯವಿದೆ. ಸಂವಾದಗಳು ಕೂಡ ಸುಂದರವೂ, ಓಜಃಪೂರ್ಣವೂ ಆಗಿವೆ. ಕಥೆಗಳನ್ನು ನಿರೂಪಿಸುವಲ್ಲಿ ಕಲ್ಹಣನು ಬಹಳ ಪ್ರಭಾವಶಾಲಿಯಾಗಿ ಉಪಮಾ, ವಿರೋಧಾಭಾಸಾದಿಗಳನ್ನು ಬಳಸುತ್ತಾನೆ. ಸ್ವಾಮಿಯ ದುಃಖವನ್ನು ಕಂಡ ಭೃತ್ಯನ ಕರುಣಾಜನಕ ಸ್ಥಿತಿಯನ್ನು ಕಲ್ಹಣನು ಬಣ್ಣಿಸುವ ಒಂದು ಶಬ್ದಚಿತ್ರ ಹೀಗಿದೆ:—

ಕ್ಷುತ್‌ಕ್ಷಾಮಸ್ತನಯೋ ವಧೂಃ ಪರಗೃಹಪ್ರೇಷ್ಯಾವಸನ್ನಃ ಸುಹೃತ್
ದುಗ್ಧಾ ಗೌರಶನಾದ್ಯಭಾವವಿವಶಾ ಹಂಬಾರವೋದ್ಗಾರಿಣೀ ।
ನಿಷ್ಪಥ್ಯೌ ಪಿತರಾವದೂರಮರಣೌ ಸ್ವಾಮೀ ದ್ವಿಷನ್ನಿರ್ಜಿತೋ
ದೃಷ್ಟ್ವೋ ಯೇನ ಪರಂ ನ ತಸ್ಯ ನಿರಯೇ ಪ್ರಾಪ್ತವ್ಯಮಸ್ತ್ಯಪ್ರಿಯಮ್ ॥

ರಾಜರ ವರ್ತನೆ ವಿಚಿತ್ರವೆನ್ನುವಾಗ ಕಲ್ಹಣನ ಉದ್ಗಾರ ಹೀಗಿದೆ :—

ಚಿತ್ರಂ ನೃಪದ್ವಿಪಾಃ ಪೂತಮೂರ್ತಯಃ ಕೀರ್ತಿನಿರ್ಝರೈಃ ॥
ಭವನ್ತಿ ವ್ಯಸನಾಸಕ್ತಿಪಾಂಸುಸ್ನಾನಮಲೀಮಸಾಃ ॥

ಗ್ರಂಥದ ಸಮಾಪ್ತಿಪದ್ಯದಲ್ಲಿ ಕೃತಿಯನ್ನು ಸಮುದ್ರ ಸೇರುವ ಏಳು ಸೀಳಿನ ಗೋದಾವರಿಗೆ ಹೋಲಿಸಲಾಗಿದೆ :—

ಗೋದಾವರೀಸರಿದಿವೋತ್ತುಮುಲೈಸ್ತರಂಗೈ-
ರ್ವಕ್ತ್ರೈಃ ಸ್ಫುಟಂ ಸಪದಿ ಸಪ್ತಭಿರಾಪತಂತೀ ।
ಶ್ರೀಕಾಂತರಾಜವಿಪುಲಾಭಿನಜಾಬ್ಧಿಮಧ್ಯಂ
ವಿಶ್ರಾಂತಯೇ ವಿಶತಿ ರಾಜತರಂಗಿಣೀಯಮ್ ॥

ಇಡಿಯ ರಾಜತರಂಗಿಣಿಯನ್ನು ಇಂಗ್ಲಿಷಿಗೆ ಇಬ್ಬರು ಮಹನೀಯರು, ಸ್ಟೇಯ್ನ್ ಮತ್ತು ಆರ್.ಎಸ್. ಪಂಡಿತ್ ಭಾಷಾಂತರ ಮಾಡಿದ್ದಾರೆ.

ಕಲ್ಹಣನ ಕಾಲಾನಂತರ, ಮುಂದಿನ ಇತಿಹಾಸವನ್ನು ಜೋನರಾಜ, ಶ್ರೀವರ, ಪ್ರಾಜ್ಯಭಟ್ಟ ಎಂಬವರು ಕ್ರಮವಾಗಿ 1417-1467, 1419—1486 ಮತ್ತು ಅಕ್ಬರನ ರಾಜ್ಯಕಾಲದ ವರೆಗೆ ವಿಸ್ತರಿಸಿ ಬರೆದರೇನೋ ನಿಜ ; ಆದರೆ ಅವುಗಳೊಂದರಲ್ಲಿಯೂ ಕಲ್ಹಣನ ಇತಿಹಾಸ ನಿರೂಪಣ ಕಲೆಯಾಗಲಿ. ಕಾವ್ಯಕಲೆಯಾಗಲಿ ಯಾವುದೂ ಗೋಚರವಾಗುವುದಿಲ್ಲ. ಅವು ಕೇವಲ ಇತಿಹಾಸಕಾರರ ನೀರಸ ವರದಿಗಳಂತಿವೆ. ಅವುಗಳ ಗಾತ್ರವೂ ಪರಿಮಿತ.

ಮುಂದೆ ಬಂದ ಇತರ ಇತಿಹಾಸಕಾವ್ಯಗಳು ಕೂಡ ಯಾವವೂ ರಾಜತರಂಗಿಣಿ ಮಟ್ಟಕ್ಕೆ ಏರವು. ಅವನ್ನಿಲ್ಲಿ ಸಂಗ್ರಹವಾಗಿ ಮಾತ್ರ ನಿರೂಪಿಸಬಹುದು :—

ಜಲ್ಹಣನೆಂಬ ಇನ್ನೊಬ್ಬ ಕಾಶ್ಮೀರಕನು ರಾಜಪುರಿಯ ರಾಜನಾದ ಸೋಮಪಾಲನ ಬಗೆಗೆ 'ಸೋಮಪಾಲವಿಲಾಸ' ವೆಂಬ ಒಂದು ಕಾವ್ಯವನ್ನು ಬರೆದಿದ್ದನಂತೆ. ಅದು ಈಗ ಉಪಲಬ್ಧ ವಿಲ್ಲ. ಈ ಸೋಮಪಾಲನು ಕಾಶ್ಮೀರರಾಜ ಸುಸ್ಸಲನಿಂದ ಪರಾಜಿತನಾದನೆಂದು ಕಲ್ಹಣನು ಉಲ್ಲೇಖಿಸಿದ್ದಾನೆ.

ಅಜಮೇರ್ ಮತ್ತು ದೆಹಲಿಗಳ ರಾಜನಾಗಿದ್ದು, ಕ್ರಿ. ಶ. 1191ರಲ್ಲಿ ಘೋರಿ ಮಹಮ್ಮದ ನನ್ನು ಸೋಲಿಸಿದ ಪ್ರತಾಪಶಾಲಿ ಪೃಥ್ವೀರಾಜನನ್ನು ಕುರಿತ 'ಪೃಥ್ವೀರಾಜವಿಜಯ'ವೆಂಬ ಒಂದು ಕಾವ್ಯ ಜೋನರಾಜನ (ಕ್ರಿ. ಶ. 15ನೆಯ ಶತಮಾನ) ವ್ಯಾಖ್ಯಾನದೊಂದಿಗೆ ದೊರೆತಿದೆ. ಆದರೆ ಇದರ ಕರ್ತೃ ಯಾರೆಂದು ಗೊತ್ತಿಲ್ಲ. ಪೃಥ್ವೀರಾಜನು ಕೆಲವೇ ವರ್ಷಗಳೊಳಗೆ ಹತನಾದುದ ರಿಂದಲೋ ಏನೋ, ಈ ಕಾವ್ಯ ಅಪೂರ್ಣವಾಗಿಯೇ ಉಳಿದಿದೆ. ಇದರಲ್ಲಿರುವ ಸರ್ಗಗಳು 12. ಇದರ ಕವಿ ಜಯಾನಕನೆಂಬವನೆಂದು ಕೆಲವರು ವಿದ್ವಾಂಸರು ಊಹಿಸಿದ್ದಾರೆ. ಇಲ್ಲಿ ಪೃಥ್ವೀರಾಜನನ್ನು ರಾಮಾವತಾರನೆಂದು ರೂಪಿಸಿ ವರ್ಣಿಸಲಾಗಿದೆ.

ಇದರಂತೆಯೇ ರುದ್ರಕವಿಯ 'ರಾಷ್ಟ್ರೌಢವಂಶ'ವೆಂಬ ಕಾವ್ಯ ಬಡೋದೆಯ ಗಾಯಕವಾಡ್ ಗ್ರಂಥಮಾಲೆಯಲ್ಲಿ ಮುದ್ರಿತವಾಗಿದೆ. ಕನೌಜಿನ ದೊರೆಯಾದ ರಾಷ್ಟ್ರೌಢನಿಂದ ಆರಂಭಿಸಿ, ಅವನ ವಂಶೀಯರಾದ ಮಯೂರಗಿರಿಯ ಬಾಗುಲರಾಜರ ವಂಶಾವಲಿಯನ್ನು 20 ಸರ್ಗಗಳಲ್ಲಿ ಈ ಕಾವ್ಯ ವರ್ಣಿಸುತ್ತದೆ. ಕಡೆಯ ರಾಜನು ಕವಿಗೆ ಆಶ್ರಯದಾತನಾದ ಮಯೂರಗಿರಿಯ ನಾರಾಯಣಶಾಹ (ಕ್ರಿ.ಶ. 1500). ಈ ಕವಿ ದಾಕ್ಷಿಣಾತ್ಯನಾದ ಅನಂತನ ಪುತ್ರ.

ಅಣಿಲವಾಡದ ಚಾಲುಕ್ಯರಾಜ ಕುಮಾರಪಾಲನ ಪ್ರಶಸ್ತಿಗಾಗಿ ಪ್ರಸಿದ್ಧ ಜೈನ ಗ್ರಂಥಕಾರ ನಾದ ಹೇಮಚಂದ್ರನು(ಕ್ರಿ.ಶ. 1088-1172) 'ಕುಮಾರಪಾಲಚರಿತ' ಅಥವಾ 'ದ್ವ್ಯಾಶ್ರಯ ಕಾವ್ಯ'ವನ್ನು ಕ್ರಿ .ಶ. 1163ರಲ್ಲಿ ರಚಿಸಿದ್ದಾನೆ. ಈ ಕಾವ್ಯದಲ್ಲಿ ಒಟ್ಟು 28 ಸರ್ಗಗಳಿವೆ;ಅವು ಗಳಲ್ಲಿ ಮೊದಲ 20 ಸರ್ಗಗಳು ಸಂಸ್ಕೃತದಲ್ಲಿಯೂ, ಕಡೆಯ 8 ಸರ್ಗಗಳು ಪ್ರಾಕೃತದಲ್ಲಿಯೂ ಇವೆ. ಆದ್ದರಿಂದಲೇ ಇದಕ್ಕೆ 'ದ್ವ್ಯಾಶ್ರಯಕಾವ್ಯ'ವೆಂಬ ನಾಮಾಂತರ ಬಂದಿದೆ. ಇಲ್ಲಿ ಗ್ರಂಥಕಾರನ ಉದ್ದೇಶ ಚಾರಿತ್ರಿಕ ಘಟನೆಗಳ ಸಂಗಡವೇ ವ್ಯಾಕರಣ ವ್ಯುತ್ಪತ್ತಿಯನ್ನು ಮಾಡಿ



ಕೊಡುವುದೂ ಆಗಿದೆ. ಸ್ವರಚಿತ ವ್ಯಾಕರಣ ನಿಯಮಗಳಿಗೆಲ್ಲ ಉದಾಹರಣರೂಪವಾಗಿ ಇಲ್ಲಿಯ ಪದ್ಯಗಳು ಬರುವಂತೆ ಹೇಮಚಂದ್ರನು ಶ್ರಮಿಸಿದ್ದಾನೆ.

ಸಂಧ್ಯಾಕರನಂದಿಯ 'ರಾಮಪಾಲಚರಿತ' ಬಂಗಾಲದ ರಾಮನರಪತಿ ಹೇಗೆ ಸಿಂಹಾಸನ ನ್ನಾಕ್ರಮಿಸಿದ್ದ ಭೀಮನಿಂದ ಮತ್ತೆ ರಾಜ್ಯವನ್ನು ಸೆಳೆದುಕೊಂಡನೆಂದೂ, ಮಿಥಿಲೆಯ ರಾಜನನ್ನು (ಕ್ರಿ.ಶ. 1084-1130) ಸೋಲಿಸಿದನೆಂದೂ ರಾಮಚರಿತೆಯು ಶ್ಲೇಷೆಯಿಂದ ವರ್ಣಿಸುತ್ತದೆ

ಗುಜರಾತಿನ ಸೋಮೇಶ್ವರನು (ಕ್ರಿ.ಶ. 1179-1262) 'ಕೀರ್ತಿಕೌಮುದೀ' ಮತ್ತು 'ಸುರಥೋತ್ಸವ' ಎಂಬ ಎರಡು ಪ್ರಶಸ್ತಿಗ್ರಂಥಗಳನ್ನು ರಚಿಸಿರುವನು. 'ಕೀರ್ತಿಕೌಮುದೀ' ವಸ್ತುಪಾಲನೆಂಬ ಉದಾರ ಮಂತ್ರಿಯ ಪ್ರಶಸ್ತಿಯಾಗಿದೆ. ಇದರ ಕಾವ್ಯಗುಣ ಕಡಿಮೆಯಾದರೂ ಅಂದಿನ ಜನರ ನಡೆವಳಿಕೆಗಳ ಬಗೆಗೆ, ಸಾಮಾಜಿಕ ಹಾಗೂ ರಾಜಕೀಯ ವಿಚಾರಗಳ ಬಗೆಗೆ ಕುತೂಹಲಕಾರಿಯಾದ ಅಂಶಗಳನ್ನೊದಗಿಸುತ್ತದೆ. 'ಸುರಥೋತ್ಸವ'ವು 15 ಸರ್ಗಗಳಲ್ಲಿದ್ದು ಮೇಲ್ನೋಟಕ್ಕೆ ಪೌರಾಣಿಕ ಕಥಾನಕವೆನಿಸಿದರೂ, ಅದು ಕವಿಯ ಆತ್ಮಚರಿತ್ರೆಯನ್ನೇ ಬಾಣ, ಬಿಲ್ಹಣರ ಮಾದರಿಯಲ್ಲಿ ಪ್ರತಿಬಿಂಬಿಸುವಂತೆ ತೋರುತ್ತದೆ.

ಅರಿಸಿಂಹನ 'ಸುಕೃತ-ಸಂಕೀರ್ತನ'ವೂ ಅದೇ ಕಾಲಕ್ಕೆ ಸೇರುವ ಪ್ರಶಸ್ತಿಗ್ರಂಥ. ಇದರಲ್ಲಿ 11 ಸರ್ಗಗಳಿವೆ (553 ಪದ್ಯಗಳು). ಮೊದಲು ಎರಡು ಸರ್ಗಗಳು ಚಾಪೋತ್ಕಟವಂಶದ ಮತ್ತು ಚಾಲುಕ್ಯ ವಂಶದ ವರ್ಣನೆಗಳನ್ನು ಒದಗಿಸಿದರೆ, ಮಿಕ್ಕವು ಅಷ್ಟಾದಶ ಕಾವ್ಯವರ್ಣನೆಗಳಲ್ಲಿ ಹಲವನ್ನು ಒಳಗೊಂಡಿವೆ. ವಸ್ತುಪಾಲನ ಮರಣಾನಂತರ ರಚಿತವಾದ 'ವಸಂತವಿಲಾಸ' ವೆಂಬುದು ಬಾಲಚಂದ್ರಸೂರಿಯೆಂಬ ಜೈನನಿಂದ ರಚಿತವಾದ ಕೃತಿ. ಇದರಲ್ಲಿ ಅಮಾತ್ಯ ವಸ್ತುಪಾಲನ ಧಾರ್ಮಿಕ, ರಾಜಕೀಯ ಜೀವನದ ಅನೇಕ ಘಟನಾವಳಿಗಳ ಉಲ್ಲೇಖವಿದೆ. 15ನೆಯ ಶತಮಾನದಲ್ಲಿ ನಯಚಂದ್ರಸೂರಿಯೆಂಬಾತನು 14ಸರ್ಗಗಳ 'ಹಮ್ಮೀರಮಹಾಕಾವ್ಯ' ವನ್ನು ರಚಿಸಿರುವನು. ಇವರ ನಾಯಕ ಮೇವಾರದ ಚೌಹಾಣ ಅರಸನಾದ ಹಮ್ಮೀರ. ಇಲ್ಲಿಯೂ ಐತಿಹಾಸಿಕ ಅಂಶಗಳಿಗಿಂತ ಋತು, ಜಲಕ್ರೀಡಾದಿ ವರ್ಣನೆಗಳ ಹಾವಳಿಯೇ ಹೆಚ್ಚು.

ಶಂಭುಕವಿಯ 'ರಾಜೇಂದ್ರಕರ್ಣಪೂರ' ಕಾಶ್ಮೀರರಾಜ ಹರ್ಷದೇವನನ್ನು ಹೊಗಳುವ 70 ಪದ್ಯಗಳ ಒಂದು ಪ್ರಶಸ್ತಿ, ಉದಯಪ್ರಭಸೂರಿಯ 'ಸುಕೃತಕೀರ್ತಿಕಲ್ಲೋಲಿನೀ' 179 ಪದ್ಯ ಗಳಲ್ಲಿ ವಸ್ತುಪಾಲನನ್ನು ಹೊಗಳುವ ಪ್ರಶಸ್ತಿ, ಪಂಡಿತರಾಜ ಜಗನ್ನಾಥನ 'ಪ್ರಾಣಾಭರಣ' ಕಾಮರೂಪದ ಪ್ರಾಣನಾರಾಯಣನನ್ನು ಹೊಗಳುವ 53 ಪದ್ಯಗಳ ಪ್ರಶಸ್ತಿ—ಇವುಗಳಾವುದ ರಲ್ಲಿಯೂ ಇತಿಹಾಸಾಂಶ ಗಮನಾರ್ಹವಾಗಿಲ್ಲ.

16ನೆಯ ಶತಮಾನ ಚಂದ್ರಶೇಖರಕವಿಯ 'ಸುರಜನಚರಿತಮ್' ಎಂಬುದು ಸಮ್ರಾಟ್ ಅಕ್ಬರನ ಪ್ರಬಲ ಸಾಮಂತನಾದ ಸುರಜನ್ ಸಿಂಹನನ್ನು ಹೊಗಳುತ್ತದೆ. ಇದರಲ್ಲಿ 20 ಸರ್ಗ ಗಳಿವೆ. ಇದರಲ್ಲಿ ಬೂಂದಿಯ ರಾಜವಂಶದವರ ವಿಷಯದಲ್ಲಿ ಗಮನಾರ್ಹ ಸಂಗತಿಗಳು ಅಡಕವಾಗಿವೆ.

ಅದೇ ಶತಮಾನದ ದಾಕ್ಷಿಣಾತ್ಯ ಕವಿ ರಾಜನಾಥ ಡಿಂಡಿಮನ 'ಅಚ್ಯುತರಾಯಾಭ್ಯುದಯಂ'ವು ವಿಜಯನಗರದ ದೊರೆಯಾದ ಅಚ್ಯುತರಾಯನ ಉದಾರಚರಿತವನ್ನು ಕಾವ್ಯಶೈಲಿಯಲ್ಲಿ ಬಣ್ಣಿಸುತ್ತದೆ. 13ನೆಯ ಶತಮಾನದ ಸರ್ವಾನಂದನು ಗುಜರಾತಿನಲ್ಲಿ 1256–58ರ ವರೆಗೆ ತಲೆದೋರಿದ ಭೀಕರ ಕ್ಷಾಮದಲ್ಲಿ ಜಗಡೂಶಾಹನೆಂಬ ಸೆಟ್ಟಿ ಹೇಗೆ ಅನ್ನದಾನ ಮಾಡಿದನೆಂಬುದನ್ನು ಜಗಡೂಚರಿತದಲ್ಲಿ ಬಣ್ಣಿಸಿದ್ದಾನೆ.

ಅದಕ್ಕೂ ಮುಂಚೆ 14ನೆಯ ಶತಮಾನದ ಗಂಗಾದೇವಿಯ 'ಮಧುರಾವಿಜಯಂ' ಅಥವಾ ವೀರಕಂಪಣರಾಯಚರಿತೆಯನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ನಿರೂಪಿಸಲಾಗಿದೆ.

## ಚಿತ್ರಕಾವ್ಯಗಳು

ಚಿತ್ರಕಾವ್ಯಗಳಲ್ಲಿ ಶಬ್ದಚಮತ್ಕಾರವು ಪ್ರಧಾನ. ಅನುಪ್ರಾಸ, ಯಮಕ, ಶ್ಲೇಷಗಳಿಗಾಗಿಯೇ ರಚಿತವಾದ ಕಾವ್ಯಗಳಿವೆ. ವಕ್ರೋಕ್ತಿ, ಚ್ಯುತ, ಗೂಢ ಮುಂತಾದ ಚಾತುರ್ಯ ಪ್ರದರ್ಶನದಲ್ಲಿ ಕೆಲವರಿಗೆ ಆಸಕ್ತಿಯಿದ್ದರೆ, ಮತ್ತೆ ಕೆಲವರಿಗೆ ಖಡ್ಗ, ಮುರಜ, ಕಮಲ, ಸರ್ಪ ಗೋಮೂತ್ರಿಕಾದಿ ಬಂಧಗಳಲ್ಲಿ ಆಸಕ್ತಿ. ಇದು ಒಂದು ವಿಧವಾದ ಘನಿಷ್ಠ ಪಾಂಡಿತ್ಯ. ಇದರಲ್ಲಿ ರಸಾದಿಗಳಿಗೆ ಅಷ್ಟಾಗಿ ಸ್ಥಾನವಿರುವುದಿಲ್ಲ.[1] ಸಾಧಾರಣರು ಓದಿ ಆನಂದಪಡುವಂತೆಯೂ ಇಲ್ಲ. ಆತ್ಮವಿಕಾಸವಿಲ್ಲದೆ ಪುಷ್ಟವಾಗಿ ಬೆಳೆದ ದೇಹಕ್ಕೆ ದೊರೆಯುವಷ್ಟೇ ಬೆಲೆ ಈ ಚಿತ್ರ ಕಾವ್ಯಗಳಿಗೆ. ಮಹಾಕಾವ್ಯಗಳಲ್ಲಿ ಎಲ್ಲಾದರೊಂದೆರಡು ಕಡೆ ಇಂತಹ ಚಾತುರ್ಯವಿದ್ದರೆ ಸೊಗಸೀತು. ಘನಿಷ್ಠಶಬ್ದಪಾಂಡಿತ್ಯದಿಂದ ಬೀಗುವವರ ಬಾಯಿ ಮುಚ್ಚಿಸಲು ಮಾಘ, ಭಾರವಿ ಮೊದಲಾದ ಮಹಾಕವಿಗಳು ತಮ್ಮ ಕಾವ್ಯಗಳ ಒಂದು ಸರ್ಗದಲ್ಲಿ ಇಂತಹ ಚಮತ್ಕಾರವನ್ನು ಪ್ರದರ್ಶಿಸಿರುವುದುಂಟು. ವ್ಯಾಸಮಹಾಭಾರತದಲ್ಲಿಯೂ ಇಂತಹ ಗ್ರಂಥಿಗಳಿವೆ. ಆಲಂಕಾರಿಕರು ಹೀಗೆ ಚಿತ್ರಕಾವ್ಯದ ಸ್ವರೂಪವನ್ನು ನಿರೂಪಿಸಿದ್ದಾರೆ.

'ಸ್ವರವ್ಯಂಜನಸ್ಥಾನಗತ್ಯಾಕಾರನಿಯಮಚ್ಯುತಗೂಢಾದಿಚಿತ್ರಂ'—ಹೇಮಚಂದ್ರ.
'ತಚ್ಚಿತ್ರಂ ಯತ್ರ ವರ್ಣಾನಾಂ ಖಡ್ಗಾದ್ಯಾಕೃತಿ ಹೇತುತಾ'—ಮಮ್ಮಟ

ಏಕಾಕ್ಷರ ದ್ವ್ಯಕ್ಷರ, ನಾನಾಭಾಷಾಮಯಿಯೂ ಆದ ಪದ್ಯಗಳ ರಚನೆಯೂ ಉಂಟು.

ಏಕಾಕ್ಷರ :— ನನೋನನುನನ್ನೋನುನ್ನೋನೋ ನಾನಾ ನಾನಾ ನನಾ ನನು ।
ನುನ್ನೋನ್ನೋನುನ್ನೋನನುನ್ನೋನೋ ನಾನೇನಾ ನುನ್ನನುನ್ನನುತ್ ॥

ದ್ವ್ಯಕ್ಷರ :— ನಾನಾದಾನಾನಿ ದೀನಾನಾಂ ದದಾನೋ ನಂದನಂದನಃ ।
ನದೀನನಂದನೀ ನಂದೀ ನುದೇದೇನೋ ದಿನೇ ದಿನೇ ॥

ಕಂಕಣ ಬಂಧ :— ಕಾಮಾಮಾಮಾಯಾಸಾರಾಮೇ ಹಾಮಾ ಮಾರಾದಾರಾಗಾಸಾ ।
ಲಾಪಾಸೇನಾಪಾಯಾಸಾಮಾಯಾನೀಷೋ ಭಾದಾಯಾದಾರಾ ॥
ರಾಮಚಂದ್ರೋದಯ ಸರ್ಗ–26

1. ಯತ್ತು ರಸವಂತಿ ಕಾನಿಚಿದ್ಯಮಕಾದೀನಿ ದೃಶ್ಯಂತೇ ತತ್ರ ರಸಾದೀನಾಮಂಗತಾ ಯಮಕಾದೀನಾಮಂಗಿತ್ವೈವ । ರಸಾಭಾಸೇ ಚ ಅಂಗತ್ವಮಪ್ಯವಿರುದ್ಧಂ । ಧ್ವನ್ಯಾಲೋಕ ॥



ಕೀಚಕವಧ :—ಇದು ನೀತಿವರ್ಮನ (ಸುಮಾರು ಕ್ರಿ.ಶ. 9ನೆಯ ಶತಮಾನ) ಕೃತಿ. ಪ್ರೇಮಚಂದ್ರನು ಕಾವ್ಯಾದರ್ಶದ ತನ್ನ ವ್ಯಾಖ್ಯಾನದಲ್ಲಿ ಈ ಕಾವ್ಯವನ್ನು ಪ್ರಸ್ತಾಪಿಸಿದ್ದಾನೆ. ಭೋಜನ ಶೃಂಗಾರಪ್ರಕಾಶದಲ್ಲಿಯೂ ಇದರ ಪ್ರಸ್ತಾಪವಿದೆ. ಐದು ಸರ್ಗಗಳನ್ನುಳ್ಳ ಈ ಕಾವ್ಯದ ವಸ್ತು ಭೀಮನಿಂದ ದ್ರೌಪದಿಯನ್ನು ಮೋಹಿಸಿದ ಕೀಚಕನ ವಧೆ. ಶ್ಲೇಷಮಹಿಮೆಯಿಂದ್ಲ ಕವಿಯ ಆಶ್ರಯದಾತನ ವೃತ್ತಾಂತವೂ ದೊರೆಯುತ್ತದೆ. ಈ ಶ್ಲೇಷಯಮಕ ಕಾವ್ಯವು ಬಂಗಾಳದ ಪಂಡಿತರಿಗೆ ಬಹಳ ಪ್ರಿಯವಾದುದು. ಜನಾರ್ದನಸೇನನು ಈ ಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ.

ನಲೋದಯ :—ನಾಲ್ಕು ಸರ್ಗಗಳಲ್ಲಿ ನಳನ ಜೀವನವನ್ನು ವರ್ಣಿಸಿರುವ ಈ ಕಾವ್ಯ ಕಾಳಿದಾಸನ ಹೆಸರಿನಲ್ಲಿ ಪ್ರಚಾರದಲ್ಲಿದೆ. ನಳೋದಯದ ಕರ್ತೃ ರವಿದೇವನೆಂದು ರಾಮರ್ಷಿಯೂ, ವಾಸುದೇವನೆಂದು ವಿಷ್ಣುವೂ ಹೇಳುತ್ತಾರೆ. ಕವಿಯು ಛಂದಸ್ಸು, ಶೈಲಿ, ಪ್ರಾಸಗಳಲ್ಲಿ ತನ್ನ ಚಾತುರ್ಯವನ್ನು ಪ್ರದರ್ಶಿಸಿದ್ದಾನೆ.

ಇದು ನಳೋದಯದ ಪ್ರಥಮಪದ್ಯ :—
ಹೃದಯ ಸದಾಯಾದವತಃ ಪಾಪಾಟವ್ಯಾದುರಾಸದಾಯಾದವತಃ ।
ಅರಿಸಮುದಾಯಾದವತಸ್ತ್ರೀಜಗನ್ಮಾಗಾಃ ಸ್ಮರ್ತೀಂ ದಾಯಾದವತಃ ॥

ಮಲ್ಲಿನಾಥ, ಪ್ರಜ್ಞಾಕರಮಿಶ್ರ, ಕೃಷ್ಣ, ತಿರುವೇಂಕಟಶೂರಿ, ಆದಿತ್ಯಸೂರಿ, ಹರಿಭಟ್ಟ, ಜೀವಾನಂದ, ಶಿವದತ್ತ ಮೊದಲಾದವರು ನಳೋದಯಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ರಾಕ್ಷಸಕಾವ್ಯ :—ಇಪ್ಪತ್ತೊಂದು ಪದ್ಯಗಳಿರುವ ಈ ಕಾವ್ಯ ಕಾಳಿದಾಸ ಮತ್ತು ವರರುಚಿಗಳ ಹೆಸರಿನಲ್ಲಿ ಪ್ರಚಾರದಲ್ಲಿದೆ. ಪ್ರೇಯಸಿಯೊಡನೆ ಕಾಡಿನಲ್ಲಿ ವಿಹರಿಸುವ ಪ್ರಿಯನು ಕಂಡ ಸುಂದರದೃಶ್ಯಗಳೇ ಈ ಕಾವ್ಯದ ವಸ್ತು. ಇದಕ್ಕೆ ಪ್ರೇಮಧರ, ಶಂಭುಭಾಸ್ಕರ, ಕವಿರಾಜ ಕೃಷ್ಣಚಂದ್ರ, ಉದಯಾಕರ ಮಿಶ್ರ, ಮತ್ತು ಬಾಲಕೃಷ್ಣಪಾಯರ ಸುಂದರ ವ್ಯಾಖ್ಯಾನಗಳಿವೆ.

ರಾಕ್ಷಸಕಾವ್ಯದ ಒಂದು ಪದ್ಯ :—
ಕಶ್ಚಿದ್ವನಂ ಬಹುವನಂ ವಿಚರನ್ ವಯಸ್ಯೋ
ವಶ್ಯಾಂ ವನಾತ್ಮವದನಾಂ ವನಿತಾಂ ವನಾರ್ದ್ರಾಮ್ ।
ತರ್ಯರ್ಯರಿಪ್ರದಮುದೀಕ್ಷ್ಯ ಸಮುತ್ಥಿತಂ ಖೇ
ನಾಗಾಮಿ ಮಾ ಮಂದಕಲಃ ಸಕಲಾಂ ಬಭಾಷೇ ॥

ಸ್ತುತಿ : (ಚತುರ್ವಿಂಶತಿಕಾ):—ಇದು ಕ್ರಿ.ಶ. 10ನೆಯ ಶತಮಾನದ ಶೋಭನ(ಶೋಭನಮುನಿ)ನಿಂದ ರಚಿತವಾಗಿದೆ. ಇದರಲ್ಲಿ 24 ತೀರ್ಥಂಕರರ, ಎಲ್ಲಾ ಜೈನರ, ಜೈನತತ್ವಗಳ ಮತ್ತು ನಾನಾದೇವತೆಗಳ ಸ್ತುತಿಯಿದೆ. ಇದಕ್ಕೆ ಧನಪಾಲನ ವ್ಯಾಖ್ಯಾನವಿದೆ.

ಶ್ರೀವತ್ಸಾಂಕನು (ಕ್ರಿ. ಶ. 12ನೆಯ ಶತಮಾನ) :— ಆರ್ಯಾಛಂದಸ್ಸಿನಲ್ಲಿ ಶ್ರೀಕೃಷ್ಣನ ಜೀವನವನ್ನು ತಿಳಿಸುವ ಯಮಕರತ್ನಾಕರವನ್ನೂ, ಧರ್ಮಘೋಷನು (ಕ್ರಿ. ಶ. 13ನೆಯ ಶತಮಾನ) ನಾಲ್ಕು ವಿಭಿನ್ನಾರ್ಥಗಳನ್ನು ಕೊಡುವ ಯಮಕಸ್ತುತಿಯನ್ನೂ, ವೆಂಕಟೇಶನು (ಕ್ರಿ. ಶ. 16ನೆಯ ಶತಮಾನ) ರಾಮಯಮಕಾರ್ಣವ, ರಾಮಚಂದ್ರೋದಯ ಮತ್ತು ಶ್ಲೇಷಮಾಲಾಗಳನ್ನೂ, ಗೋಪಾಲರಾಯನು (ಕ್ರಿ.ಶ. 18ನೆಯ ಶತಮಾನ) 5 ಉಲ್ಲಾಸಗಳ ರಾಮಚಂದ್ರೋದಯವನ್ನೂ ಬರೆದಿದ್ದಾರೆ. ದ್ವಿಸಂಧಾನಕಾವ್ಯಗಳು ಎರಡು ಮೂರು ಅರ್ಥಗಳನ್ನು ಕೊಡುತ್ತವೆ ; ಆದ್ದರಿಂದ ಇವುಗಳಲ್ಲಿ ಒಟ್ಟಿಗೆ ಹಲವು ಕಥೆಗಳು ಬರುತ್ತವೆ. ರಾಘವಯಾದವಪಾಂಡವೀಯವು ಏಕಕಾಲದಲ್ಲಿ ಮೂರು ಕಥೆಗಳನ್ನು ಹೇಳುತ್ತದೆ. ಹೀಗೆಯೇ ಪಂಚಕಲ್ಯಾಣ ಚಂಪು, ಸಪ್ತಸಂಧಾನ, ಶತಾರ್ಥಿಕಾವ್ಯ (ಕರ್ತೃ—ಸೋಮಪ್ರಭ) ಮುಂತಾದ ಕಾವ್ಯಗಳು ಹಲವು ಅರ್ಥಗಳನ್ನು ಕೊಡುತ್ತವೆ. ನಾರಾಯಣನ ನಿರನುನಾಸಿಕಚಂಪುವಿನಲ್ಲಿ ಮೂಗನ್ನು ಕಳೆದುಕೊಂಡಿದ್ದ ಶೂರ್ಪಣಖಿಯು ಅನುನಾಸಿಕವೇ ಬರದಂತೆ ರಾವಣನೊಡನೆ ಮಾತನಾಡುತ್ತಾಳೆ.

ಅಚ್ಯುತಲೀಲಾ, ರಾಮಲೀಲಾ, ಯುಧಿಷ್ಠಿರವಿಜಯ, ಶ್ಲೇಷಚೂಡಾಮಣಿ, ಪ್ರಾಸಭಾರತ, ಗೌರೀವಿವಾಹ, ಭಗವದವತಾರಚರಿತ, ದ್ರೌಪದೀಕಲ್ಯಾಣ, ರಾಮಕವಚ ಮುಂತಾದ ಹಲವು ಚಿತ್ರಕಾವ್ಯಗಳಿವೆ. ಅಲ್ಲದೆ ನಾನಾಬಂಧಗಳನ್ನುಳ್ಳ ಕಾವ್ಯಗಳೂ ಇವೆ.

ವಿದಗ್ಧಮುಖಮಂಡನ :—ಜೈನಕವಿ ಧರ್ಮದಾಸನು ಅನೇಕ ಮೂಲಗಳಿಂದ ಚಿತ್ರ ಪದ್ಯಗಳನ್ನು ಸಂಗ್ರಹಿಸಿ ನಾಲ್ಕು ಅಧ್ಯಾಯಗಳ ಈ ಗ್ರಂಥವನ್ನು ರಚಿಸಿದ್ದಾನೆ. ಇದಕ್ಕೆ ತಾರಾಚಂದ್ರ, ದುರ್ಗಾದಾಸ, ಗೌರೀಕಾಂತ ಮತ್ತು ನರಹರಿಗಳು ವ್ಯಾಖ್ಯಾನ ಬರೆದಿದ್ದಾರೆ. ಚಕ್ರಬಂಧದಲ್ಲಿರುವ ಇದರ ಒಂದು ಪದ್ಯ—

ಕರಂಕ-ಕೋಕಕುರರಲಹಂಸಕರಂಬಿತಃ ।
ಸರೋಜಕೋಮಲೋದ್ಗಾರನೀರಸಂಸಕ್ತಮಾರುತಃ ॥



ಧನಂಜಯನ " ದ್ವಿಸಂಧಾನಕಾವ್ಯ " (ಸು. ಕ್ರಿ. ಶ. 900), ಕವಿರಾಜನ " ರಾಘವ ಪಾಂಡವೀಯ "(ಸು.1300 ?) ಇವೇ ಮುಂತಾದ ಕಾವ್ಯಗಳಲ್ಲಿ ನಾನಾ ರೀತಿಯ ಚಿತ್ರಚಮತ್ಕಾರಗಳನ್ನು ಕಾಣಬಹುದು. ಒಂದೇ ಕೃತಿ ರಾಮಾಯಣ ಮಹಾಭಾರತಗಳೆರಡರ ಕಥೆಯನ್ನು ಏಕಕಾಲದಲ್ಲಿ ಪ್ರತಿಪಾದಿಸುವ ಸೋಜಿಗ ಇಲ್ಲಿ ಗೋಚರಿಸುತ್ತದೆ.



ಭಾಗ—4

# ಅಧ್ಯಾಯ 6

## ಖಂಡಕಾವ್ಯಗಳು

ಹುಲುಸಾಗಿ ಬೆಳೆದಿರುವ ಸಂಸ್ಕೃತ ಪದ್ಯಸಾಹಿತ್ಯದಲ್ಲಿ ಮಹಾಕಾವ್ಯಗಳು ಮತ್ತು ಖಂಡ ಕಾವ್ಯಗಳೆಂಬ ಎರಡು ಪ್ರಧಾನ ಪ್ರಕಾರಗಳಿವೆ. ಕಾಳಿದಾಸ, ಭಾರವಿ, ಮಾಘ ಮೊದಲಾದವರು ಮಹಾಕಾವ್ಯಗಳನ್ನು ರಚಿಸಿ ಸಹೃದಯರ ಹೃದಯಗಳನ್ನು ಸೂರೆಗೊಂಡಿರುವಂತೆ ಭರ್ತೃಹರಿ, ಅಮರು, ಜಯದೇವ ಮೊದಲಾದವರು ಖಂಡಕಾವ್ಯಗಳನ್ನು ಬರೆದು ಲೋಕವನ್ನು ತಣಿಸಿದ್ದಾರೆ. ಲಘುಕಾವ್ಯಗಳು ಮಹಾಕಾವ್ಯಲಕ್ಷಣಬದ್ಧವಾಗಿರದೆ ಭಾವಗೀತೆಗಳ ರೂಪದಲ್ಲಿವೆ. ಇವುಗಳಲ್ಲಿ ಅನುಕ್ರಮವಾಗಿ ವಿಕಾಸಗೊಂಡ ಕಥೆಯು ಅನುಸ್ಯೂತವಾಗಿರುವುದಿಲ್ಲ. ಒಂದೊಂದು ಪದ್ಯವೂ ಮುಕ್ತಕದಂತೆ ಸ್ವತಂತ್ರವಾಗಿದ್ದು ಪರಿಪೂರ್ಣಭಾವವನ್ನು ಹೊಂದಿರುತ್ತದೆ. ಕಥೆಯ ಸ್ಥಾನದಲ್ಲಿ ಪ್ರೇಮವೋ, ಭಕ್ತಿಯೋ—ಹೀಗೆ ಯಾವುದಾದರೊಂದು ಭಾವವು ನಿಂತು ಆದ್ಯಂತ ವ್ಯಾಪಿಸಿರುತ್ತದೆ. ಈ ಕಾವ್ಯಗಳ ಪದ್ಯಗಳು ಯಾವ ನಿರ್ದಿಷ್ಟ ಸಂಖ್ಯಾನಿಯಮವನ್ನೂ ಹೊಂದಿರುವುದಿಲ್ಲ. ನೂರು ಪದ್ಯಗಳಿದ್ದರೆ ಶತಕವಾಗುತ್ತದೆ ; ಎಂಟು ಪದ್ಯಗಳಿದ್ದರೆ ಅಷ್ಟಕವೆನಿಸುತ್ತದೆ. ಸಂಸ್ಕೃತಸಾಹಿತ್ಯದಲ್ಲಿ ಭಾವಗೀತೆಗೆ ಸ್ವತಂತ್ರಸ್ಥಾನವನ್ನು ಕಲ್ಪಿಸಿ ಕೊಟ್ಟವರಲ್ಲಿ ಕಾಳಿದಾಸನು ಮೊದಲಿಗನೆಂದು ಹೇಳಬಹುದು. ಅವನ ಮೇಘದೂತ ಸುಮಧುರವೂ ಸುಂದರವೂ ಆದ ಒಂದು ಪ್ರಸಿದ್ಧ ಭಾವಗೀತೆ. ಕಾಳಿದಾಸನಿಗಿಂತ ಹಿಂದೆ ಮಹಾಕಾವ್ಯ ಮತ್ತು ನಾಟಕಗಳಲ್ಲಿ ಭಾವಗೀತೆಯ ಅಂಶವಿದ್ದಿರಬಹುದು. ಆದರೆ ಕೇವಲ ಭಾವಕ್ಕೇ ಮೀಸಲಾದ ಸ್ವತಂತ್ರ ಕೃತಿಗಳಿರಲಿಲ್ಲ. ಹಿಂದೆ ಇದ್ದ ಭಾವಗೀತೆಗಳಿಂದ ಸ್ಫೂರ್ತಿಪಡೆದು ಕಾಳಿದಾಸನು ಸ್ವತಂತ್ರ ಭಾವಗೀತೆಯನ್ನು ರಚಿಸಿರಬೇಕು. ಈ ಕಾವ್ಯಗಳ ಒಂದೊಂದು ಮುಕ್ತಕವೂ ರಸದ ಬುಗ್ಗೆಯಾಗಿದ್ದು ಆನಂದಸಾಗರವನ್ನು ನಿರ್ಮಿಸುತ್ತದೆ.

ಪಾಳಿ ಧರ್ಮಗ್ರಂಥಗಳಾದ ಥೇರಾಗಾಥೆ ಮತ್ತು ಥೇರೀಗಾಥೆಗಳಿಂದಲೂ, ಪತಂಜಲಿಯ ಮಹಾಭಾಷ್ಯದಲ್ಲಿ ಬಂದಿರುವ " ವರತನು ಸಂಪ್ರವದಂತಿ ಕುಕ್ಕುಟಾಃ ..................."[1] "ಯದುದುಂಬರವರ್ಣಾನಾಂ ಘಟೀನಾಂ ಮಂಡಲಂ ಮಹತ್ । ಪೀತಂ ನ ಗಮಯೇತ್ ಸ್ವರ್ಗಂ ಕಿಂ ತತ್ ಕ್ರತುಗತಂ ನಯೇತ್ ॥"[2] ಮೊದಲಾದ ಉಲ್ಲೇಖಗಳಿಂದಲೂ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಭಾವಗೀತೆಗಳಿದ್ದವೆಂಬುದಕ್ಕೆ ಸೂಚನೆಗಳು ದೊರೆಯುತ್ತವೆ.

1. ಪತಂಜಲಿಮಹಾಭಾಷ್ಯ—ಅಧ್ಯಾಯ 3.
2. ಪಸ್ಪಶ.

ಋಗ್ವೇದ ಮತ್ತು ಅಥರ್ವವೇದಗಳಲ್ಲಿಯೇ ಭಾವಪ್ರಧಾನವಾದ ಅಂಶಗಳಿವೆ. ದನ ಕಾಯುವಾಗ, ಹೊಲ ಉಳುವಾಗ, ಧಾನ್ಯ ಬೀಸುವಾಗ, ಜನರು ಮೊದಲಿನಿಂದಲೂ ಶ್ರಮಪರಿಹಾರ ಮತ್ತು ವಿನೋದಗಳಿಗಾಗಿ ಹಾಡುಗಳನ್ನು ಹೇಳುತ್ತಿದ್ದಿರಬೇಕು. ಹೀಗೆ ಹಾಡುಗಬ್ಬಗಳನ್ನು ರಚಿಸುವುದು ಪ್ರಾರಂಭವಾಗಿ ಮುಂದೆ ಸಾಗಿ ಭಾವಗೀತೆಗಳ ರೂಪವಾದ ಕಾವ್ಯಗಳ ನಿರ್ಮಾಣವಾಗಿರಬಹುದು.

ಶೃಂಗಾರ, ನೀತಿ, ಭಕ್ತಿ, ಧರ್ಮ, ಸ್ತೋತ್ರ, ಸಂದೇಶ, ಅನ್ಯೋಕ್ತಿ, ವಿಡಂಬನೆ—ಹೀಗೆ ಹಲವು ಶಾಖೆಗಳಲ್ಲಿ ಲಘುಕಾವ್ಯಗಳು ಬೆಳೆದಿವೆ. ಸಂಸ್ಕೃತದಲ್ಲಿರುವಂತೆ ಪ್ರಾಕೃತದಲ್ಲಿಯೂ ಇಂತಹ ಭಾವಗೀತೆಗಳಿವೆ. ಹಾಲ ಕವಿಯ ಗಾಥಾಸಪ್ತಶತಿಯು ಒಂದು ಭಾವಗೀತೆ.

ಗಾಥಾಸಪ್ತಶತೀ :—

ಇದು ಮಹಾರಾಷ್ಟ್ರೀ ಪ್ರಾಕೃತದಲ್ಲಿರುವ ಅಮರ ಭಾವಗೀತೆಗಳ ಒಂದು ಸಂಗ್ರಹ. ಸಂಕಲನಕಾರ—ಹಾಲ ಅಥವಾ ಸಾತವಾಹನವೆಂಬ ರಾಜ. ಇವನ ಕಾಲವನ್ನು ನಿರ್ಣಯಿಸುವುದು ಕಷ್ಟ. ಪೌರಾಣಿಕ ವಂಶಾವಳಿಗಳ ಪ್ರಕಾರ ಇವನ ಕಾಲ ಕ್ರಿ. ಶ. ಒಂದು ಅಥವಾ ಎರಡನೆಯ ಶತಮಾನ. ಪ್ರಾಕೃತಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಕ್ರಿ.ಶ. 200–450ರ ಅವಧಿಯಲ್ಲಿ ಈ ಕೃತಿಯು ರಚನೆಯಾಗಿರಬೇಕೆಂದು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದರಲ್ಲಿ 700 ಪದ್ಯಗಳಿವೆ. ಕವಿಯು ತನ್ನ ಪದ್ಯಗಳೊಡನೆ ಇತರರ ಪದ್ಯಗಳನ್ನು ಸೇರಿಸಿಕೊಂಡೂ, ಪೂರ್ವಪ್ರಸಿದ್ಧ ಪದ್ಯಗಳನ್ನು ತನ್ನ ರುಚಿಗೆ ತಕ್ಕಂತೆ ಪರಿಷ್ಕರಿಸಿಕೊಂಡೂ ಈ ಕೋಶವನ್ನು ರಚಿಸಿದ್ದಾನೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉಪಲಬ್ಧವಾಗಿರುವ ಎಲ್ಲ ಸಂಸ್ಕರಣಗಳಲ್ಲಿಯೂ 430 ಪದ್ಯಗಳು ಸಮಾನವಾಗಿವೆ. ಉಳಿದವುಗಳಲ್ಲಿ ಬದಲಾವಣೆಯಿದೆ. ಆದ್ದರಿಂದ ಸಾಕಷ್ಟು ಪ್ರಕ್ಷೇಪವೂ ಇರಬೇಕು. 700 ಪದ್ಯಗಳೂ ಗಾಥಾಛಂದಸ್ಸಿನಲ್ಲಿವೆ. ಆದ್ದರಿಂದ ಕೃತಿಗೆ 'ಗಾಥಾಸಪ್ತಶತೀ' ಎಂಬ ಶೀರ್ಷಿಕೆಯನ್ನು ಕೊಡಲಾಗಿದೆ.

ಗಾಥೆಯ ಲಕ್ಷಣ :—

ಸಂಸ್ಕೃತದ ಆರ್ಯೆಯೇ[1] ಪ್ರಾಕೃತದ ಗಾಥಾ.
ಪಢಮಂ ಬಾರಹ ಮತ್ತಾವೀಏ ಅಟ್ಠಾರಹೇಹಿಂ ಸಂಜುತ್ತಾ ।
ಜಹ ಪಢಮಂ ತಹ ತೀಅಂ ದಹಪಂಚವಿಹೂಸಿಆ ಗಾಹಾ ॥

ಗಾಥಾಸಪ್ತಶತಿಯು ನಮ್ಮ ಗರತಿಯ ಹಾಡಿನಂತಹ ಗಾಥೆಗಳನ್ನು ಹೊಂದಿದೆ. ಮಧುರ ಪ್ರಾಕೃತದಿಂದಾಗಿ ಇದರ ಭಾವಮಾಧುರ್ಯವು ಅಧಿಕಗೊಂಡಿದೆ. ಶೃಂಗಾರದ ಬಹುಮುಖವಾದ ಸೊಬಗನ್ನು ಸವಿಯಬೇಕಾದರೆ ಇದನ್ನು ಓದಬೇಕು. 'ಅಮೃತಂ ಪ್ರಾಕೃತಕಾವ್ಯಂ' ಎಂಬ ಉಕ್ತಿಯನ್ನು ಇದು ಸತ್ಯಗೊಳಿಸಿದೆ. ಬಾಣನಂತಹ ಮಹಾಕವಿಯೂ ಇದನ್ನು ಮೆಚ್ಚಿ

1· ಪುಟ .... 431



ಹೊಗಳಿದ್ದಾನೆ[1]. ಇದನ್ನು ಜನಪದಸಾಹಿತ್ಯದ ಗುಂಪಿಗೆ ತಳ್ಳುವಂತಿಲ್ಲ. ಇದರಲ್ಲಿ ಭಾವದ ಹೊಂಬೆಳಕಿನಿಂದ ಮಾತು ಮಾಣಿಕ್ಯವಾಗಿದೆ. ಇನಿದು ಮಾತಿನಿಂದ ಭಾವಕ್ಕೆ ಮೆರಗು ಬಂದಿದೆ. ಉದ್ದಕೂ ಚತುರಕವಿಯ ಪ್ರತಿಭೆಕೌಶಲ್ಯಗಳು ಎದ್ದು ಕಾಣುತ್ತವೆ. ಕಾವ್ಯರಚನೆಯ ಕುಸುರಿಕೆಲಸವು ಮೋಹಕವಾಗಿದೆ. (ಸಾಕಷ್ಟು ಶಬ್ದಾಲಂಕಾರಗಳೂ, ಅರ್ಥಾಲಂಕಾರಗಳೂ ಇವೆ. ನಿರ್ದುಷ್ಟವಾಗಿ ಛಂದಸ್ಸನ್ನು ಬಳಸಲಾಗಿದೆ. ಭಾವವು ಕಲ್ಪನೆಯಿಂದ ಸೊರಗದೆ ಬಾಳಿಗೂ, ಸತ್ಯಕ್ಕೂ ಸಮೀಪಗತವಾಗಿದೆ. ಭಾಷೆಯು ಮಧುರವೂ, ಸರಳವೂ ಆಗಿದೆ. ಪ್ರಣಯಕೇಳಿಗೆ ಎಲ್ಲ ಋತುಗಳು ಸಹಕರಿಸುತ್ತವೆ. ದಾಂಪತ್ಯ ಜೀವನದ ರಸ–ವಿರಸಗಳೂ, ಪತಿ–ಉಪಪತಿಗಳ ವಿಹಾರ ವಿನೋದಗಳೂ, ಹಳ್ಳಿಯ ಹೆಂಗಸರ ಪ್ರಣಯಚಾತುರ್ಯಗಳೂ, ತಂದೆತಾಯಿಗಳ ಮಂದಹಾಸವೂ, ಸಾಂಸಾರಿಕಜೀವನದ ರಸನಿಮಿಷಗಳೂ ರಮ್ಯವಾಗಿ ವರ್ಣಿತವಾಗಿವೆ. ದೇವಾಲಯ, ಗದ್ದೆ, ಅರವಟ್ಟಿಗೆ, ತೋಟ, ಮನೆ, ಕೆರೆ, ಬಾವಿ, ರಸ್ತೆ ಮೊದಲಾದುವು ಪ್ರಣಯಕೇಳಿಗಳ ರಂಗಭೂಮಿ. ಲಾಕ್ಷಣಿಕರು ತಮ್ಮ ಲಕ್ಷಣಗಳಿಗೆ ಈ ಕೃತಿಯಿಂದ ನೂರಾರು ಸುಂದರ ಪದ್ಯಗಳಲ್ಲಿ ಲಕ್ಷ್ಯಗಳನ್ನಾಗಿ ಆಯ್ದುಕೊಂಡಿದ್ದಾರೆ. ಈ ಪದ್ಯಗಳಲ್ಲಿ ರಮಣೀಯವಾದ ವ್ಯಂಗ್ಯಾರ್ಥದ ಸೊಬಗುಸೌಂದರ್ಯಗಳನ್ನು ಮನಸಾರೆ ಸವಿಯಬಹುದು. ಮಾದರಿಗಾಗಿ ಕೆಲವು ಸಂಸ್ಕೃತಛಾಯೆಯ ಪದ್ಯಗಳನ್ನಿಲ್ಲಿ ಕೊಡಲಾಗಿದೆ.

ಈ ಪದ್ಯದಲ್ಲಿ ತಾವರೆಯ ಎಲೆಯಲ್ಲಿ ಕುಳಿತಿರುವ ಬಕಪಕ್ಷಿ ಪಥಿಕನ ಪ್ರಣಯವಿಹಾರ ವಿನೋದಗಳಿಗೆ ವ್ಯಂಗ್ಯವಾಗಿ ಕರೆಕೊಡುತ್ತದೆ—

ಪಶ್ಯ ನಿಶ್ಚಲನಿಷ್ಪಂದಾ ಬಿಸನೀಪತ್ರೇ ರಾಜತೇ ಬಲಾಕಾ ।
ನಿರ್ಮಲಮರಕತಭಾಜನಪರಿಸ್ಥಿತಾ ಶಂಖಶುಕ್ತಿರಿವ ॥

ಇಲ್ಲಿ ಪಥಿಕ ಮತ್ತು ಪ್ರಪಾಲಿಕೆಯರ ಕೃತಿಯಿಂದ ಅನುರಾಗವು ಚಿಮ್ಮುತ್ತದೆ—

ಉರ್ಧ್ವಾಕ್ಷಃ ಪಿಬತಿ ಜಲಂ ಯಥಾ ಯಥಾ ವಿರಲಾಗುಲಿಃ ಪಥಿಕಃ ।
ಪ್ರಪಾಪಾಲಿಕಾಪಿ ತಥಾ ತಥಾ ಧಾರಾಂ ತನುಕಾಮಪಿ ತನೂಕರೋತಿ ॥

ಈ ಪದ್ಯದಲ್ಲಿ ಕುಲಟೆಯ ವಿಧಿರೂಪವಾದ ಮಾತಿನಿಂದ ವ್ಯಂಗ್ಯವಾಗಿ ತೋರುವ ನಿಷೇಧವು ಹೃದ್ಯವಾಗಿದೆ:—

ಭ್ರಮ ಧಾರ್ಮಿಕ ವಿಶ್ವಸ್ತಃ ಸ ಶ್ವಾಽದ್ಯ ಮಾರಿತಸ್ತೇನ ।
ಗೋದಾನದೀಕಚ್ಛಕುಂಜವಾಸಿನಾ ದೃಪ್ತಸಿಂಹೇನ ॥

ಇದನ್ನು ಉಪಜೀವಿಸಿ ಗೋವರ್ಧನನು ಆರ್ಯಾಸಪ್ತಶತಿಯನ್ನು ರಚಿಸಿದ್ದಾನೆ[2]. ಶ್ವೇತಾಂಬರ ಜೈನನಾದ ಜಯವಲ್ಲಭನ ವಜ್ಜಾಲಗ್ಗದಲ್ಲಿಯೂ ಇಂತಹ ಹಲವು ಪದ್ಯಗಳಿವೆ. ಹೇಮಚಂದ್ರನು ಇಂತಹ ಕೆಲವು ಪದ್ಯಗಳನ್ನು ಅಪಭ್ರಂಶಕ್ಕೆ ಉದಾಹರಿಸಿದ್ದಾನೆ.

1. ಅವಿನಾಶಿನಮಗ್ರಾಮ್ಯಮಕರೋತ್ ಸಾತವಾಹನಃ ।
ವಿಶುದ್ಧಜಾತಿಭಿಃ ಕೋಶಂ ರತ್ನೈರಿವ ಸುಭಾಷಿತೈಃ ॥ —ಹರ್ಷಚರಿತ.
2. ಆರ್ಯಾಸಪ್ತಶತೀ— ಪು 431

## ಪ್ರೇಮಕಾವ್ಯಗಳು

**ಶೃಂಗಾರತಿಲಕ** :—ಒದುಂಗರ ಮೆಚ್ಚುಗೆಯನ್ನು ಗಳಿಸಿದ ಭಾವಗೀತೆಗಳ ಮಾಧುರ್ಯದಿಂದ ಆಕರ್ಷಿತರಾಗಿ ಹಲವರು ಸಂಸ್ಕೃತದಲ್ಲಿಯೂ ಭಾವಗೀತೆಗಳನ್ನು ರಚಿಸಿದ್ದಾರೆ. ಶೃಂಗಾರತಿಲಕವು ಇವುಗಳಲ್ಲೊಂದು. ಇದು ಕಾಳಿದಾಸನ ಹೆಸರಿನಲ್ಲಿ ಪ್ರಚಲಿತವಾಗಿದೆ. (ಇವನಹೆಸರಿನಲ್ಲಿ ಇನ್ನೂ ಹಲವು ಕೃತಿಗಳು ಪ್ರಚಾರದಲ್ಲಿವೆ. ಇವು ಕಾಳಿದಾಸನ ಕೃತಿಗಳೆಂಬುದಕ್ಕೆ ಸಾಕಷ್ಟು ಸಾಕ್ಷ್ಯವಿಲ್ಲ). ಶೃಂಗಾರ ತಿಲಕದಲ್ಲಿ 23 ಪದ್ಯಗಳಿವೆ. ಪ್ರೇಮದ ವರ್ಣನೆಯೇ ಇವುಗಳ ಗುರಿ. ಶೃಂಗಾರಚಿತ್ರಣದಲ್ಲಿ ಅಂತಹ ನವೀನತೆಯೇನೂ ಇಲ್ಲವಾದರೂ ಕಾವ್ಯ ಸೌಂದರ್ಯಕ್ಕೆ ಕೊರತೆಯಿಲ್ಲ. ಶೃಂಗಾರದ ಕೆಲವು ಮುಖಗಳನ್ನು ನಾವಿಲ್ಲಿ ಕಾಣುತ್ತೇವೆ. ಲಲನೆಯರ ನಯನ, ವದನ, ಕಟಾಕ್ಷಾದಿಗಳ ಸೌಂದರ್ಯಚಿತ್ರಣವು ರಮ್ಯವಾಗಿದೆ. ಕಾಂತೆಯ ತೋಳು ತಾವರೆಯ ದಂಟು, ಮುಖ ಕಮಲ, ಲಾವಣ್ಯ ವಿಲಾಸಜಲ, ನಿತಂಬ ತೀರ್ಥಶಿಲೆ, ನಯನ ಮೀನು, ಕೇಶಕಲಾಪ ಶೈವಾಲ, ಸ್ತನಗಳು ಚಕ್ರವಾಕಯುಗಲ—ಇಂತಹ ಅಪೂರ್ವ ರಮ್ಯವಾದ ಕಾಸಾರವನ್ನು ಮನ್ಮಥನ ಬಾಣಗಳ ಬೆಂಕಿಯಿಂದ ಬೆಂದವರು ಮುಳುಗಿ ತಂಪು ಪಡೆಯಲು ವಿಧಿಯು ನಿರ್ಮಿಸಿದ್ದಾನೆ. ವಸಂತರಾತ್ರಿಯು ಬರುತ್ತಿದೆ. ಪ್ರಿಯತಮನು ಹಿಂದಿರುಗದಿದ್ದರೆ ಅಗ್ನಿ ಪ್ರವೇಶವೇ ಗತಿ, ಮತ್ತೆ ಹುಟ್ಟುವುದಾದರೆ ಕೋಗಿಲೆಯನ್ನು ಬಂಧಿಸುವ ಬೇಡನಾಗಿಯೋ, ಚಂದ್ರನನ್ನು ನುಂಗುವ ರಾಹುವಾಗಿಯೋ, ಮದನನನ್ನು ದಹಿಸುವ ಹರನ ನೇತ್ರಾಗ್ನಿಯಾಗಿಯೋ ಹುಟ್ಟಲು ಬಯಸುತ್ತೇನೆಂದು ವಿರಹಿಣಿಯು ತನ್ನ ಸಂತಾಪವನ್ನು ಗೆಳತಿಗೆ ತೋಡಿಕೊಳ್ಳುತ್ತಾಳೆ. ವ್ಯಾಪಾರಕ್ಕಾಗಿ ಪತಿಯು ಪರದೇಶಕ್ಕೆ ತೆರಳಿರುವನು; ಅವನ ವಾರ್ತೆಯೇ ತಿಳಿಯದು; ಅತ್ತೆಯು ಹಡೆದ ಮಗಳ ಮನೆಗೆ ಹೋಗಿರುವಳು; ನಾನೋ ನವಯೌವನೆ; ಇದಾಗಲೇ ಸಂಜೆ; ದಾರಿಗನೆ, ನಮ್ಮ ಮನೆಯಲ್ಲಿ ಹೇಗೆ ತಂಗುವೆ; ಮತ್ತೆಲ್ಲಿಗಾದರೂ ಹೋಗೆಂದು ವ್ಯಂಗ್ಯೋಕ್ತಿಯಿಂದ ತನ್ನ ಮನೆಯಲ್ಲಿಯೇ ಉಳಿದುಕೊಳ್ಳಲು ಸ್ವೈರಿಣಿಯು ಪಥಿಕನಿಗೆ ಕರೆಕೊಡುತ್ತಾಳೆ. ತರುಣಿಯ ಸೌಂದರ್ಯಕ್ಕೆ ಮನಸೋತ ಯುವಕನು, 'ಎಲೈ ಮದನಚೂತಮಂಜರಿಯೇ, ನನ್ನ ಹೃದಯವನ್ನು ಕದ್ದು ಎಲ್ಲಿ ಹೋಗುವೆ; ಈ ದೇಶವು ಅರಾಜಕವೇ' ಎಂದು ಅವಳನ್ನು ಪ್ರಶ್ನಿಸುತ್ತಾನೆ. ಹೀಗೆ ರೂಪಕಾದ್ಯಲಂಕಾರಗಳು ರಸಕ್ಕೆ ಪುಷ್ಟಿ ನೀಡಿವೆ. ಮಾತುಗಳಲ್ಲಿ ವ್ಯಂಗ್ಯವಿದೆ. ಸಂಭೋಗ-ವಿಪ್ರಲಂಭ ಶೃಂಗಾರಗಳೆರಡೂ ಚಿತ್ರಿಸಲ್ಪಟ್ಟಿವೆ. ಶಾರ್ದೂಲವಿಕ್ರೀಡಿತ, ವಸಂತತಿಲಕಾ, ಮಂದಾಕ್ರಾಂತಾ, ಅನುಷ್ಟುಪ್, ಶಿಖರಿಣೀ ಛಂದಸ್ಸುಗಳನ್ನು ಬಳಸಲಾಗಿದೆ. ಶಾರ್ದೂಲವಿಕ್ರೀಡಿತ ಅಧಿಕವಾಗಿ ಬಂದಿದೆ. ಮಧುರ ಶೃಂಗಾರವು ದೀರ್ಘವಾದ ಶಾರ್ದೂಲವಿಕ್ರೀಡಿತದಲ್ಲಿಯೂ ರಮ್ಯವಾಗಿದೆ. ಲಾಕ್ಷಣಿಕರು ಲಕ್ಷ್ಯಗಳಿಗಾಗಿ ಈ ಕೃತಿಯನ್ನು ಬಳಸಿಕೊಂಡಿದ್ದಾರೆ.



ಈ ಪದ್ಯದಲ್ಲಿ ಮುಖಸೌಂದರ್ಯವರ್ಣನೆಗೆ ರೂಪಕಾನುಪ್ರಾಣಿತವಾದ ಭ್ರಾಂತಿಮದಲಂಕಾರವನ್ನು ಬಳಸಿಕೊಂಡಿರುವುದರಲ್ಲಿ ಚಾತುರ್ಯವಿದೆ—

ರಥ್ಯಂಟಿತಿ ಪ್ರವಿಶ ಗೇಹಂ ಮಾ ಬಹಿಸ್ತಿಷ್ಠ ಕಾಂತೇ
ಗ್ರಹಣಸಮಯವೇಲಾ ವರ್ತತೇ ಶೀತರಶ್ಮೇಃ ।
ಅಯಿ ! ಸುವಿಮಲಕಾಂತಿಂ ವೀಕ್ಷ್ಯ ನೂನಂ ಸ ರಾಹುಂ
ಗ್ರಸತಿ ತವ ಮುಖೇಂದುಂ ಪೂರ್ಣಚಂದ್ರಂ ವಿಹಾಯ ॥

ಇಲ್ಲಿ ನಲ್ಲೆಯ ಹೊಗಳಿಕೆಯನ್ನು ಪ್ರಾರಂಭಿಸಿ ಕೊನೆಯಲ್ಲಿ ತೆಗಳಿಕೆಯನ್ನು ಜೋಡಿಸಿರುವುದು ರಮ್ಯವಾಗಿದೆ—

ಇಂದೀವರೇಣ ನಯನಂ ಮುಖಮಂಬುಜೇನ
ಕುಂದೇನ ದಂತಮಧರಂ ನವಪಲ್ಲವೇನ ।
ಅಂಗಾನಿ ಚಂಪಕದಲೈಃ ಸ ವಿಧಾಯ ವೇಧಾಃ
ಕಾಂತೇ ಕಥಂ ಘಟಿತವಾನುಪಲೇನ ಚೇತಃ ॥

ಇಲ್ಲಿನ ಉತ್ಪ್ರೇಕ್ಷೆಯು ವಿಷಯಕ್ಕೆ ಸೊಗಸಾಗಿ ಹೊಂದಿಕೊಂಡು ತರುಣಿಯ ಸೌಂದರ್ಯವನ್ನು ಸಾಕ್ಷಾತ್ಕಾರಮಾಡಿಕೊಡುತ್ತದೆ—

ಪಯೋಧರಾಕಾರಧರೋ ಹಿ ಕಂದುಕಃ
ಕರೇಣ ರೋಷಾದಿವ ತಾಡ್ಯತೇ ಮುಹುಃ ।
ಇತೀವ ನೇತ್ರಾ ಕೃತಿಭೀತಮುತ್ಪಲಮ್
ತಸ್ಯಾಃ ಪ್ರಸಾದಾಯ ಪಪಾತ ಪಾದಯೋಃ ॥

ಈ ಪದ್ಯದಲ್ಲಿರುವ ಉಪಮಾಲಂಕಾರವು ಸಹಜವೂ, ಸುಂದರವೂ ಆಗಿದ್ದು ಪ್ರೇಮಭಾವಕ್ಕೆ ಪೋಷಣೆ ನೀಡುತ್ತದೆ—

ಇಯಂ ವ್ಯಾಧಾಯತೇ ಬಾಲಾ
ಭ್ರೂರಸ್ಯಾಃ ಕಾರ್ಮುಕಾಯತೇ ।
ಕಟಾಕ್ಷಾಶ್ಚ ಶರಾಯಂತೇ
ಮನೋ ಮೇ ಹರಿಣಾಯತೇ ॥

**ಋತುಸಂಹಾರ** :—

ಕಾವ್ಯಮಾರ್ಗದಲ್ಲಿ ಕಾಲಿಟ್ಟ ಕಾಳಿದಾಸನ ಪ್ರಥಮಕೃತಿ ಇದು. ಇದರ 6 ಸರ್ಗಗಳಲ್ಲಿ ವಿವಿಧ ಛಂದಸ್ಸಿನ 153 ಪದ್ಯಗಳಿವೆ. ಈ ಚಿತ್ರಶಾಲೆಯಲ್ಲಿ ಸುಂದರ ಪ್ರಕೃತಿಯ ವರ್ಣವೈವಿಧ್ಯವನ್ನು ಕಾಣಬಹುದು. ತಾರುಣ್ಯಕ್ಕೆ ಸಹಜವಾದ ಆಸೆ, ಉಲ್ಲಾಸಗಳು ಇಲ್ಲಿ ಪ್ರತಿಬಿಂಬಿತವಾಗಿವೆ. ಪ್ರಕೃತಿವರ್ಣನೆಯು ಶೃಂಗಾರ ಭಾವೋದ್ದೀಪನಕ್ಕೆ ಸಮರ್ಥವಾಗಿದೆ.

ಋತುಗಳ ಸಂಹಾರವೆಂದರೆ ಋತುಗಳ ಸಮೂಹವೆಂದರ್ಥ. ಅಭಿಜ್ಞಾನಶಾಕುಂತಲ, ರಘುವಂಶ ಮೊದಲಾದ ಕೃತಿಗಳಲ್ಲಿರುವ ಕಾವ್ಯಗುಣ ಇಲ್ಲಿಲ್ಲ; ಆದಿಯಿಂದ ಅಂತ್ಯದವರೆಗೆ

ಒಂದೇ ವಿಧವಾಗಿದ್ದು ಬಹಳ ಸರಳವೂ, ಸುಲಭವೂ ಆಗಿದೆ ; ಉಕ್ತಿಚಾತುರ್ಯ ಕಡಿಮೆಯಾಗಿದೆ; ಕವಿಯ ಇತರ ಕೃತಿಗಳಿಗೆ ವ್ಯಾಖ್ಯಾನ ಬರೆದಿರುವ ಮಲ್ಲಿನಾಥನು ಇದಕ್ಕೆ ವ್ಯಾಖ್ಯಾನ ಬರೆದಿಲ್ಲ ; ವಸಂತದಿಂದ ಸಂವತ್ಸರದ ಪ್ರಾರಂಭವಿದ್ದರೂ, ಗ್ರೀಷ್ಮದ ವರ್ಣನೆಯಿಂದ ಕಾವ್ಯವನ್ನು ಪ್ರಾರಂಭಿಸಲಾಗಿದೆ '—ಈ ಮುಂತಾದ ಕಾರಣಗಳಿಂದ ಇದು ವರಕವಿ ಕಾಳಿದಾಸನ ಕೃತಿಯಲ್ಲ ವೆಂದು ವಾದಿಸುವವರೂ ಇದ್ದಾರೆ. ಪ್ರಾರಂಭ ಕೃತಿಗಳಲ್ಲಿ ವ್ಯತ್ಯಾಸವಿರುವುದು ಸ್ವಾಭಾವಿಕ. ಸುಲಭವಾಗಿರುವುದರಿಂದಲೇ ಮಲ್ಲಿನಾಥನು ವ್ಯಾಖ್ಯಾನ ಬರೆದಿಲ್ಲ. ಋತುಗಳ ಯಥಾಕ್ರಮ ಪಟ್ಟಿಯನ್ನು ಸಿದ್ಧಪಡಿಸುವುದು ಕವಿಯ ಗುರಿಯಲ್ಲ. ಮಹಾಕಾವ್ಯಗಳ ನಿರ್ಮಾಣಕ್ಕೆ ಅಗತ್ಯ ವಾದ ಪ್ರತಿಭೆ, ಕೌಶಲ್ಯಗಳು ಇಲ್ಲಿ ಬೀಜರೂಪವಾಗಿವೆ.

ಪ್ರಕೃತಿಯು ಸೌಂದರ್ಯದ ಬೀಡು. ಇದರ ಸೃಷ್ಟಿಕರ್ತನ ಕೈಚಳಕ ಅದ್ಭುತ. ಕೋಗಿಲೆ ಕಂಠದ ಇಂಪು, ನವಿಲುಗರಿಯ ಪೆಂಪು. ಕುಸುಮಪರಿಮಳದ ಕಂಪು ಯಾರನ್ನು ತಾನೆ ಮೈ ಮರೆಸುವುದಿಲ್ಲ ? ಒಂದೊಂದು ಋತುವೂ ತನ್ನದೇ ಆದ ಸೌಂದರ್ಯವನ್ನು ಪಡೆದಿದೆ. ಹಗಲುರಾತ್ರಿಗಳಲ್ಲಿಯೂ ಸೌಂದರ್ಯವಿದೆ. ಇದನ್ನು ಸವಿಯಲು ಹಗುರಗೊಂಡ ಹೃದಯ ತೆರೆದಿರಬೇಕು. ಗೊಂದಲ ಗಡಿಬಿಡಿಗಳಿಲ್ಲದ, ಸಂಸಾರತಾಪತ್ರಯವಿಲ್ಲದ, ಆಸೆ, ಉತ್ಸಾಹ ಗಳಿಂದ ತುಂಬಿರುವ ಯುವಕ-ಯುವತಿಯರಿಗೆ ಸಾಧ್ಯ ಈ ಸೌಂದರ್ಯದ ಸವಿ. ವೈವಾಹಿಕ ಜೀವನದ ಪ್ರಾರಂಭದಲ್ಲಿ ಪ್ರಿಯನು ಪ್ರಿಯಳಿಗೆ ಪ್ರಕೃತಿಯ ಬಾಗಿಲನ್ನು ತೆರೆದು ಅಲ್ಲಿ ಷಡೃತು ಗಳಲ್ಲಿ ಚೆಲ್ಲಿ ನಿಂತಿರುವ ಚೆಲುವನ್ನು ಬಣ್ಣಿಸುವ ರೂಪದಲ್ಲಿ ಈ ಕಾವ್ಯವಿದೆ. ಆ ಚೆಲುವು ಅನುರಾಗದ ಹೊಳೆ ಹರಿಸಲು ಸಮರ್ಥವಾಗಿದೆ. 'ನಿದಾಘಕಾಲೋಽಯಮುಪಾಗತಃ ಪ್ರಿಯೇ ; ಹೇಮಂತಕಾಲಃ ಸಮುಪಾಗತಃ ಪ್ರಿಯೇ ' ಹೀಗೆ ಸರ್ಗಗಳು ಪ್ರಾರಂಭವಾಗಿವೆ. ಋತುಸಂಹಾರವು ಅಭ್ಯುಪಶಾಂತಮನ್ಮಥವಾದ ಗ್ರೀಷ್ಮದ ವರ್ಣನೆಯಿಂದ ಪ್ರಾರಂಭವಾಗಿ ಸುಖಕ್ಕೆ ಶ್ರೇಷ್ಠವೆನಿಸಿದ ವಸಂತದ ವರ್ಣನೆಯಿಂದ ಮುಗಿಯುತ್ತದೆ. ಷಡೃತುಗಳ ಪ್ರಕೃತಿ ಸೌಂದರ್ಯವನ್ನು ಕವಿಯು ಒಂದೇ ಕಡೆ ಒದಗಿಸಿದ್ದಾನೆ. ಬೇಸಿಗೆಯ ಬೇಗೆ, ಮಾಗಿಯ ಛಳಿ, ಮಳೆಗಾಲದ ಜಡಿಮಳೆ, ಶರತ್ಕಾಲದ ನಿರ್ಮಲಗಗನ, ಹೇಮಂತದ ಹಿಮ, ವಸಂತದ ಕುಸುಮ ಪರಿಮಳ—ಎಲ್ಲವೂ ಪ್ರಣಯಿಗಳಿಗೆ ಸಹಕಾರ ನೀಡುತ್ತವೆ. ಉಲಿಯುವ ಹಕ್ಕಿಗಳು, ತೂಗುವ ತರಂಗಗಳು, ಸುಳಿಯುವ ಎಳೆಗಾಳಿ, ಬೆದರಿಸುವ ಮೋಡಗಳು, ನಡುಗಿಸುವ ಕಾವಳ—ಎಲ್ಲವೂ ಉಪಕರಿಸುತ್ತವೆ.

ಸುಡುವ ಸೂರ್ಯ, ಕರೆಯುವ ಚಂದ್ರ, ಸೊರಗಿದ ಹೊಳೆ, ಸೊಗಯಿಸುವ ಸಂಜೆಗಳನ್ನುಳ್ಳ ಬೇಸಿಗೆಯು ಬರುತ್ತದೆ. ಜನರು ಜಲಯಂತ್ರಮಂದಿರಗಳನ್ನೂ, ಹರ್ಮ್ಯ ಗಳನ್ನೂ ಸೇವಿಸುತ್ತಾರೆ. ರಮಣಿಯರು ದುಕೂಲ-ಚಂದನ-ಹಾರ ನೂಪುರಗಳಿಂದ ಅಲಂಕೃತರಾಗಿ ಓಡಾಡುತ್ತಾರೆ. ನೂಪುರರಣಿತವು ಕಾಮಿಗಳ ಮನಸ್ಸನ್ನು ಕೆರಳಿಸುತ್ತದೆ. ಹರ್ಮ್ಯಗಳಲ್ಲಿ ಮಲಗಿದ ಲಲನೆಯರ ಮುಖಗಳನ್ನು ನೋಡಿ ನಾಚಿದ ಚಂದ್ರನು ಬಿಳುಪೇರುತ್ತಾನೆ. ರವಿ ಮಯೂಖಗಳಿಂದ ಸಂತಾಪಗೊಂಡು ಸರ್ಪ ಮಯೂರದ ನೆರಳನ್ನು ಸೇರುತ್ತದೆ. ಬಳಲಿದ



ದೇಹ, ಮನಸ್ಸುಗಳನ್ನುಳ್ಳ ನವಿಲು ತನ್ನ ಗರಿಯಲ್ಲಿ ಮುಖ ಮರೆಸಿಕೊಂಡ ಹಾವನ್ನು ಕೊಲ್ಲುವು ದಿಲ್ಲ. ಕಪ್ಪೆಯು ಸುಡುವ ಕೆಸರಿನಿಂದ ಕುಪ್ಪಳಿಸಿ ಹಾವಿನ ಹೆಡೆಯ ನೆರಳಿನಲ್ಲಿ ವಿರಮಿಸುತ್ತದೆ. ತೃಷಾಕುಲಫಣಿಯು ಕಪ್ಪೆಯನ್ನು ಕೊಲ್ಲುವುದಿಲ್ಲ. ಮಳೆಗರೆದ ಮೇಘವೆಂಬ ಮತ್ತಕುಂಜರ ವನ್ನು ಹತ್ತಿ ಮಿಂಚೆಂಬ ಪತಾಕೆ ಮತ್ತು ಸಿಡಿಲಿನ ಧ್ವನಿಯೆಂಬ ಭೇರಿನಿನಾದಗಳಿಂದ ಗಂಜಿಸುತ್ತಾ ರಾಜಠೀವಿಯಿಂದ ವರ್ಷಾಕಾಲ ಬರುತ್ತದೆ. ಮೋಡಗಳ ಜಲಧಾರೆ, ಮೂಡಿದ ಕಾಮನಬಿಲ್ಲು, ಆರ್ಭಟಿಸುವ ಸಿಡಿಲುಗುಡುಗುಗಳು, ನರ್ತಿಸುವ ಮಯೂರ, ತುಂಬಿ ಹರಿಯುವ ಹೊಳೆಗಳು, ಹಸಿರು ತುಂಬಿದ ಕಾನನಗಳು ವಿರಹಿಗಳಿಗೆ ಸಂತಾಪವನ್ನುಂಟುಮಾಡುತ್ತವೆ. ಕಾಮಿಜನರನ್ನು ಒಟ್ಟುಗೂಡಿಸುತ್ತವೆ. ಕಾಶಾಂಶುಕ ಧರಿಸಿ, ವಿಕಚಪದ್ಮಮನೋಜ್ಞವಕ್ತ್ರ ವಾಗಿ, ಹಂಸರವನೂಪುರನಾದ ರಮ್ಯವಾಗಿ, ಪಕ್ವಶಾಲಿರುಚಿರವಾದ ಶರತ್ಕಾಲ ನವವಧುವಿನಂತೆ ಬೋಜಿನಿಂದ ಬರುತ್ತದೆ. ಮಂದಾನಿಲ, ಪುಷ್ಪೋದ್ಗಮ, ಮತ್ತದ್ವಿರೇಫಗಳು ಮನಸ್ಸನ್ನು ಆಕರ್ಷಿಸುತ್ತವೆ. ಮಂಜನ್ನು ಸುರಿಸಿ, ತಾವರೆ ಬಾಡಿಸಿ ಹೇಮಂತ ಬರುತ್ತದೆ. ಶಿಶಿರದಲ್ಲಿ ಭೂಮಿಯು ಬೆಳೆದ ಶಾಲೀಕ್ಷುಗಳಿಂದ ಸಂಪನ್ನವಾಗಿರುತ್ತದೆ. ನಂತರ ಚೂತಾಂಕುರವನ್ನು ಸಾಯಕವನ್ನಾಗಿ ಧರಿಸಿ, ಭ್ರಮರ ಪಂಕ್ತಿಯನ್ನು ಧನುರ್ಗುಣವನ್ನಾಗಿಸಿ, ಕಾಮಿಗಳ ಹೃದಯ ವನ್ನು ಭೇದಿಸಲು ಯೋಧನಂತೆ ಋತುರಾಜ ವಸಂತ ಬರುತ್ತದೆ. ತರುಗಳು ಸಕುಸುಮ; ಸಲಿಲ ಸಕಮಲ, ಪವನ ಸುಗಂಧಿ, ಲಲನೆಯರು ಸಕಾಮರು, ರಜನಿಯು ಸುಖಕರ, ದಿವಸವು ರಮ್ಯ— ಹೀಗೆ ವಸಂತದಲ್ಲಿ ಎಲ್ಲವೂ ಚಾರುತರ. ಮದವೇರಿದ ಪುಂಸ್ಕೋಕಿಲ ಪ್ರೇಯಸಿಯನ್ನು ಚುಂಬಿಸುತ್ತದೆ. ಭ್ರಮರ ಕಮಲದಲ್ಲಿ ಪ್ರಿಯೆಯೊಡನೆ ರಮಿಸುತ್ತದೆ. ಮಂದಮಾರುತ, ವಿಹಗಕೂಜನ, ಕುಸುಮಪರಿಮಳಗಳು ಪ್ರೇಮಪಿಪಾಸೆಯನ್ನು ಉದ್ದೀಪನಗೊಳಿಸುತ್ತವೆ.

ಈ ಕಾವ್ಯದಲ್ಲಿರುವುದು ಕೇವಲ ಪ್ರಕೃತಿ ವರ್ಣನೆಯಲ್ಲ, ಅದರ ಮೇಲೆ ಪ್ರಭುತ್ವ ಪಡೆದಿರುವ ಪ್ರೇಮ ಚಿತ್ರಣವೂ ಇದೆ. ಇಲ್ಲಿರುವುದು ನಿಷ್ಕಳಂಕ ಪ್ರೇಮ; ವ್ಯಭಿಚಾರಿಗಳ ಕಾಮ ವಲ್ಲ. ಇಲ್ಲಿಯ ಶೃಂಗಾರಸಾಗರದಲ್ಲಿ ಅನೀತಿಯ ಬಿಂದುವೂ ಇಲ್ಲ. ಇನಿದಾದ ಪದಗಳು ಕೂಡಿ ಸುಂದರತರ ಛಂದಸ್ಸಿನಲ್ಲಿ ಹರಿದು ಅನುರಾಗಭಾವ ಒದಗಿಸುತ್ತವೆ. ಕಾವ್ಯ ಹಾಡಿಕೊಂಡು ಆನಂದಿಸಲು ಯೋಗ್ಯವಾಗಿದೆ. ವಂಶಸ್ಥ, ಮಾಲಿನೀ, ವಸಂತತಿಲಕಾ, ಉಪೇಂದ್ರವಜ್ರಾ, ಇಂದ್ರವಜ್ರಾ, ಉಪಜಾತಿ, ಶಾರ್ದೂಲವಿಕ್ರೀಡಿತ ಛಂದಸ್ಸುಗಳನ್ನು ಬಳಸಿಕೊಳ್ಳಲಾಗಿದೆ. ಮಾಲಿನೀ ಪ್ರತಿಸರ್ಗದಲ್ಲಿಯೂ, ವಂಶಸ್ಥ ವಸಂತತಿಲಕಗಳು ನಾಲ್ಕು ಸರ್ಗಗಳಲ್ಲಿಯೂ ಬಂದಿವೆ. ಅಧಿಕ ಪದ್ಯಗಳು ವಂಶಸ್ಥದಲ್ಲಿವೆ. ರೂಪಕ, ಉಪಮಾ, ಉತ್ಪ್ರೇಕ್ಷಾ, ಸಮಾಸೋಕ್ತಿ, ಸ್ವಭಾವೋಕ್ತ್ಯಲಂಕಾರಗಳಿಂದ ಕಾವ್ಯ ಶೋಭಿಸುತ್ತದೆ.

ಇದು ಗ್ರೀಷ್ಮದ ವರ್ಣನೆ—

ಶ್ವಸಿತಿ ವಿಹಗವರ್ಗಃ ಶೀರ್ಣಪರ್ಣದ್ರುಮಸ್ಥಃ
ಕಪಿಕುಲಮುಪಯಾತಿ ಕ್ಲಾಂತಮದ್ರೇರ್ನಿಕುಂಜಮ್ ।
ಭ್ರಮತಿ ಗವಯಯೂಥಃ ಸರ್ವತಸ್ತೋಯಮಿಚ್ಛನ್
ಶರಭಕುಲಮಜಿಹ್ಮಂ ಪ್ರೋದ್ಧರತ್ಯಂಬುಕೂಪಾತ್ ॥

ಇಲ್ಲಿನಲಿನೀ-ಭೃಂಗಗಳಲ್ಲಿ ಕಾಂತ-ಧೃಷ್ಟನಾಯಕರ ವ್ಯವಹಾರಸಮಾರೋಪವಿದೆ—

ಪ್ರಫುಲ್ಲಪತ್ರಾಂ ನಲಿನೀಂ ಸಮುತ್ಸುಕಾಮ್
ವಿಹಾಯ ಭೃಂಗಾಃ ಶ್ರುತಿಹಾರಿನಿಸ್ವನಾಃ।
ಪತಂತಿ ಮೂಢಾಃ ಶಿಖಿನಾಂ ಪ್ರನೃತ್ಯತಾಮ್
ಕಲಾಪಚಕ್ರೇಷು ನವೋತ್ಪಲಾಽಽಶಯಾ ॥

ಈ ಪದ್ಯದಲ್ಲಿ ವಸಂತನೊಡನೆ ಚೈತ್ರಯಾತ್ರೆಯನ್ನು ಕೈಗೊಂಡ ಮನಸಿಜನನ್ನು ದಿಗ್ವಿಜಯಿಯೊಡನೆ ರೂಪಣಮಾಡಿ ವರ್ಣಿಸಿರುವುದು ಚಮತ್ಕಾರವಾಗಿದೆ.—

ಆಮ್ರೀಮಂಜುಲಮಂಜರೀವರಶರಃ ಸತ್ಕಿಂಶುಕಂ ಯದ್ಧನು
ರ್ಜ್ಯಾ ಯಸ್ಯಾಲಿಕುಲಾ ಕಲಂಕರಹಿತಂ ಛತ್ರಂ ಸಿತಾಂಶುಃ ಸಿತಮ್ ।
ಮತ್ತೇಭೋ ಮಲಯಾನಿಲಃ ಪರಭೃತೋ ಯದ್ಬಂಧಿನೋ ಲೋಕಜಿತ್
ಸೋಽಯಂ ವೋ ವಿತನೋತು ಚೈವ ವಿತನುರ್ಭದ್ರಂ ವಸಂತಾನ್ವಿತಃ ॥

ಶೃಂಗಾರಶತಕ :

ಇದರ ಕರ್ತೃ ಭರ್ತೃಹರಿ. ಚೀನಾಯಾತ್ರಿಕನಾದ ಇತ್ಸಿಂಗನ ಬರವಣಿಗೆಯಿಂದಬೌದ್ಧನಾದ ಭರ್ತೃಹರಿಯು ಕ್ರಿ.ಶ. 651ರಲ್ಲಿ ಕಾಲವಾದಂತೆ ತಿಳಿದುಬರುತ್ತದೆ. ವಾಕ್ಯಪದೀಯವನ್ನು ಬರೆದ ಭರ್ತೃಹರಿ ಒಬ್ಬ ಪ್ರಸಿದ್ಧ ವೈಯಾಕರಣಿ. ಇವನೂ ಶತಕತ್ರಯವನ್ನು ಬರೆದ ಭರ್ತೃಹರಿಯೂ ಒಬ್ಬನೋ ಅಲ್ಲವೋ ನಿರ್ಣಯವಾಗಿಲ್ಲ. ಇವನು ಗೃಹಸ್ಥಾಶ್ರಮದಿಂದ ಸಂನ್ಯಾಸಾಶ್ರಮಕ್ಕೂ, ಸಂನ್ಯಾಶ್ರಮದಿಂದ ಗೃಹಸ್ಥಾಶ್ರಮಕ್ಕೂ ಪದೇ ಪದೇ ಬದಲಾಯಿಸುತ್ತಿದ್ದನೆಂದು ಪ್ರವಾದವಿದೆ. 'ಮೃಗಾಕ್ಷೀಕ್ಷಣವೀಕ್ಷಿತಸ್ಯ ನ ಹಿ ಮೇ ವೈದ್ಯೋ ನ ಚಾಪ್ಯೌಷಧಂ','ಗತೋ ಮೋಹೋಽಸ್ಮಾಕಂ', ' ಇದಾನೀಮಸ್ಮಾಕಂ ಪಟುತರವಿವೇಕಾಂಜನದೃಶಾ। ಸಮೀಭೂತಾ ದೃಷ್ಟಿಃ ತ್ರಿಭುವನಮಪಿ ಬ್ರಹ್ಮ ಮನುತೇ', ಈ ಮುಂತಾದ ಕವಿಯ ಮಾತುಗಳನ್ನು ಪರಿಶೀಲಿಸಿದರೆ ಅವನು ಮೊದಲು ಸಾಂಸಾರಿಕ ಜೀವನದ ಪ್ರೇಮವನ್ನು ಸಾರಸರ್ವಸ್ವವೆಂದು ಭಾವಿಸಿದ್ದು, ಕ್ರಮವಾಗಿ ಅದು ಕೃತ್ರಿಮವಾದುದೆಂದು ಮನಗಂಡು, ಬೌದ್ಧ ಸಂನ್ಯಾಸವನ್ನು ಸ್ವೀಕರಿಸಿರಬೇಕೆಂದು ತೋರುತ್ತದೆ.

ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ
ಸಾಪ್ಯನ್ಯಮಿಚ್ಛತಿ ಜನಂ ಸಜನೋಽನ್ಯರಕ್ತಃ।
ಅಸ್ಮತ್ಕೃತೇಽಪಿ ಪರಿತುಷ್ಯತಿ ಕಾಚಿದನ್ಯಾ
ಧಿಕ್ ತಾಂ ಚ ತಂ ಚ ಮದನಂ ಚ ಇಮಾಂ ಚ ಮಾಂ ಚ ॥

ಶೃಂಗಾರಶತಕದ ಕೊನೆಯಲ್ಲಿರುವ ಈ ಪದ್ಯವು ಇವನಿಗೆ ವೈರಾಗ್ಯವುಂಟಾದ ಬಗೆಯನ್ನು ತಿಳಿಸುತ್ತದೆ. ಇವನ ಶತಕಗಳಲ್ಲಿ ಬೌದ್ಧತತ್ವಪ್ರಭಾವವು ಕಂಡುಬರುವುದಿಲ್ಲ. ವೈರಾಗ್ಯಶತಕವನ್ನು ಹರನ ಸ್ತೋತ್ರದಿಂದ್ಯ ಪ್ರಾರಂಭಿಸಲಾಗಿದೆ. ' ಚೇತಃ ಸಂಪ್ರತಿ ಚಂದ್ರಚೂಡಚರಣ



ಧ್ಯಾನಾಮೃತೇ ವರ್ತತೆ ; 'ಭಕ್ತಿಃ ಶೂಲಿನಿ ಶಕ್ತಿರಾತ್ಮದಮನೆ ' ; ' ಕ್ವಚಿತ್ಪುಣ್ಯೇಽರಣ್ಯೇ ಶಿವಶಿವಶಿವೇತಿ ಪ್ರಲಪತಃ ', ' ತಥಾಪಿ ಭಕ್ತಿಃ ತರುಣೇಂದುಶೇಖರೇ ' —ಮುಂತಾದ ಮಾತುಗಳಿಂದ ಇವನು ಶಿವಾದ್ವೈತಿಯೆಂದು ತಿಳಿದುಬರುತ್ತದೆ. ಚಂದ್ರಗುಪ್ತನೆಂಬ ಬ್ರಾಹ್ಮಣನು ಇವನ ತಂದೆಯೆಂದೂ, ಸಿಂದುಮತಿಯೆಂಬ ಶೂದ್ರಳು ತಾಯಿಯೆಂದೂ, ವಿಕ್ರಮಾರ್ಕ ಮತ್ತು ಭಟ್ಟಿ ಇವನ ಮಲಸೋದರರೆಂದೂ ಒಂದು ದಂತಕಥೆಯಿದೆ. ಕೆಲವು ಕಾಲ ಭಟ್ಟಿಯೂ, ಭರ್ತೃಹರಿಯೂ ಒಬ್ಬನೇ ಎಂಬ ಭಾವನೆಯೂ ಇದ್ದಿತು. ಈ ಭಾವನೆಗೆ ಪ್ರಾಯಶಃ ಅವರಿಬ್ಬರ ! ! ವ್ಯಾಕರಣಜ್ಞಾನವೇ ಕಾರಣವಾಗಿರಬೇಕು. ದಂತಕಥೆಯು ಭರ್ತೃಹರಿಯೂ, ಶತಕತ್ರಯದ ಕರ್ತೃವೂ ಒಬ್ಬನೇ ಎಂದು ಹೇಳಲು ಪ್ರಮಾಣಗಳಿಲ್ಲ.

ಭರ್ತೃಹರಿಯು ನೀತಿಶತಕ ಮತ್ತು ವೈರಾಗ್ಯಶತಕಗಳನ್ನೂ ಬರೆದಿದ್ದಾನೆ. ಇವುಗಳಲ್ಲಿ ತಂತ್ರಾಖ್ಯಾಯಿಕಾ. ಕಾಳಿದಾಸನ ಶಾಕುಂತಲ, ವಿಶಾಖದತ್ತನ ಮುದ್ರಾರಾಕ್ಷಸ ಮೊದಲಾದ ಕೃತಿಗಳ ಪದ್ಯಗಳೂ ಕಂಡುಬರುತ್ತವೆ. ಇವು ಸಂಗ್ರಹಗಳಲ್ಲವೆಂದೂ, ಸ್ವತಂತ್ರಕೃತಿಗಳೆಂದೂ ಭಾವಿಸಲಾಗಿದೆ. ಆದ್ದರಿಂದ ಕವಿಯು ಮೆಚ್ಚುಗೆಯಾದ ಪದ್ಯಗಳನ್ನು ತಾನೇ ಸೇರಿಸಿಕೊಂಡಿರಬೇಕು ; ಇಲ್ಲವೆ ಯಾರಾದರೂ ಸೇರಿಸಿರಬೇಕು. ಸಾಮಾನ್ಯವಾಗಿ ಬಹಳ ಶತಕಗಳ ಸ್ಥಿತಿಯು ಹೀಗೆಯೇ ಇದೆ. ಶೃಂಗಾರಶತಕವು ಹೀಗಿರದೆ ಸ್ವತಂತ್ರಕೃತಿಯಾಗಿದೆ. ಶತಕಗಳ ಪದ್ಯಗಳು ಮುಕ್ತಕರೂಪವಾಗಿವೆ. ಭಾಷೆ ಸುಲಭ, ಶೈಲಿ ಸರಳ. ವಿವಿಧ ಛಂದಸ್ಸುಗಳನ್ನು ಬಳಸಲಾಗಿದೆ.

ಶೃಂಗಾರಶತಕವು ತ್ರಿಮೂರ್ತಿಗಳ ಮೇಲೂ ಅಕುಂಠಿತಪ್ರಭಾವವನ್ನುಳ್ಳ ಕುಸುಮಾಯುಧನ ಪ್ರಾರ್ಥನೆಯಿಂದ ಪ್ರಾರಂಭವಾಗಿದೆ. ಕಾಮೋದ್ದೀಪಕಗಳಾದ ವಸಂತಾದಿ ಋತುಗಳ ವರ್ಣನೆಯಿಂದೆ. ದುರ್ವಿರಕ್ತರು, ಸ್ತ್ರೀಪರಿತ್ಯಾಗ, ಯೌವನ ಮತ್ತು ಸುಚರಿತ್ರರ ಪ್ರಶಂಸೆಯಿಂದೆ. ಸ್ತ್ರೀಯರ ಪ್ರಶಂಸೆಯಂತೆ ನಿಂದೆಯೂ ಇದೆ. ಹಾವಭಾವವಿಲಾಸಾದಿಗಳಿಂದ ಸ್ತ್ರೀಯರು ಪುರುಷರನ್ನು ಬಂಧಿಸುತ್ತಾರೆ—

ದ್ರಷ್ಟವ್ಯೇಷು ಕಿಮುತ್ತಮಂ ಮೃಗದೃಶಾಂ ಪ್ರೇಮಪ್ರಸನ್ನಂ ಮುಖಮ್
ಘ್ರಾತವ್ಯೇಷ್ವಪಿ ಕಿಂ ತದಾಸ್ಯಪವನಃ ಶ್ರಾವ್ಯೇಷು ಕಿಂ ತದ್ವಚಃ ।
ಕಿಂ ಸ್ವಾದ್ಯೇಷು ತದೋಷ್ಠಪಲ್ಲವರಸಃ ಸ್ಪೃಶ್ಯೇಷು ಕಿಂ ತತ್ತನುಃ
ಧ್ಯೇಯಂ ಕಿಂ ನವಯೌವನಂ ಸಹೃದಯೈಃ ಸರ್ವತ್ರ ತದ್ವಿಭ್ರಮಃ ॥

ಹೀಗೆ ಸ್ತ್ರೀಯರೇ ಸರ್ವಸುಖಗಳಿಗೂ ಧಾಮ. ಶಕ್ರಾದಿಗಳನ್ನೂ ಗೆದ್ದ ಅವರು ಹೇಗೆ ಅಬಲೆಯರು ? ಅವರ ಶಕ್ತಿಯನ್ನು ನೋಡಿ—

ಸಂಮೋಹಯಂತಿ ಮದಯಂತಿ ವಿಡಂಬಯಂತಿ
ನಿರ್ಭರ್ತ್ಸಯಂತಿ ರಮಯಂತಿ ವಿಷಾದಯಂತಿ ।
ಏತಾಃ ಪ್ರವಿಶ್ಯ ಸದಯಂ ಹೃದಯಂ ನರಾಣಾಮ್
ಕಿನ್ನಾಮ ವಾಮನಯನಾ ನ ಸಮಾಚರಂತಿ ॥

ಇದು ಪಥಿಕನನ್ನು ಸಂತಾಪಗೊಳಿಸುವ ವರ್ಷಾಕಾಲದ ವರ್ಣನೆ—

ಉಪರಿ ಘನಂ ಘನಪಟಲಂ ತಿರ್ಯಗ್ಗಿರಯೋಽಪಿ ನರ್ತಿತಮಯೂರಾಃ ।
ವಸುಧಾ ಕಂದಲಧವಲಾ ದೃಷ್ಟಿಂ ಪಥಿಕಃ ಕ್ವ ಪಾತಯತು ॥

ಲಲನೆಯರ ಅಧರಮಧುಪಾನ ಮಾಡಲು ಭಾಗ್ಯವಿರಬೇಕು. ಏಕಚಿತ್ತವು ಪ್ರೇಮಕ್ಕೆ ಮುಖ್ಯವಾದುದು ; ಇಲ್ಲವಾದರೆ ಸರ್ವಾಗಮವು ಶವಗಳ ಸಂಗಮಕ್ಕೆ ಸದೃಶ. 'ಕಂದರ್ಪದಲನೆ ವಿರಲಾ ಮನುಷ್ಯಾಃ', ಸ್ತ್ರೀಸಂಗತ್ಯಾಗವಾರ್ತೆಯು ಕೇವಲ ಪಂಡಿತರ ಬಾಯಿಮಾತು—

ತಾವನ್ಮಹತ್ವಂ ಪಾಂಡಿತ್ಯಂ ಕುಲೀನತ್ವಂ ವಿವೇಕಿತಾ ।
ಯಾವಜ್ಜ್ವಲತಿ ನಾಂಗೇಷು ಹತಃ ಪಂಚೇಷುಪಾವಕಃ ॥

ಸ್ತ್ರೀಯರು ಅಸ್ಥಿರಸ್ವಭಾವುಳ್ಳವರು ; ಅವರ ಮರ್ಮವನ್ನು ತಿಳಿಯುವುದು ಕಷ್ಟ—

ಜಲ್ಪಂತಿ ಸಾರ್ಧಮನ್ಯೇನ ಪಶ್ಯಂತ್ಯನ್ಯಂ ಸವಿಭ್ರಮಾಃ ।
ಹೃದಯೇ ಚಿಂತಯಂತ್ಯನ್ಯಂ ಪ್ರಿಯಃ ಕೋ ನಾಮ ಯೋಷಿತಾಮ್ ॥
ಮಧು ತಿಷ್ಠತಿ ವಾಚಿ ಯೋಷಿತಾಂ ಹೃದಿ ಹಾಲಾಹಲಮೇವ ಕೇವಲಮ್ ।
ಅತ ಏವ ನಿಪೀಯತೇಽಧರೋ ಹೃದಯಂ ಮುಷ್ಟಿಭಿರೇವ ತಾಡ್ಯತೇ ॥

ಇಲ್ಲಿ ಅಧರಪಾನ, ಕುಚಮರ್ದನಗಳಿಗೆ ಕೊಟ್ಟಿರುವ ಕಾರಣ ಚಮತ್ಕಾರವಾಗಿದೆ. ಶೃಂಗಾರ ಪ್ರಸಂಗದಲ್ಲಿ ಬಳಸಿದ್ದರೂ ಕೆಲವು ವಾಕ್ಯಗಳು ಸಾರ್ವತ್ರಿಕ ನೀತಿರೂಪವಾಗಿವೆ.

1. ಪುಣ್ಯೈರ್ವಿನಾ ನ ಹಿ ಭವಂತಿ ಸಮೀಹಿತಾರ್ಥಾಃ
2. ವಿಪದಿ ಹಂತ ಸುಧಾಪಿ ವಿಷಾಯತೇ.
3. ಧನ್ಯಾಃ ಕೋಽಪಿ ನ ವಿಕ್ರಿಯಾಂ ಕಲಯತಿ ಪ್ರಾಪ್ತೇ ನವೇ ಯೌವನೇ

ಭರ್ತೃಹರಿಯು ಶಾರ್ದೂಲವಿಕ್ರೀಡಿತವನ್ನು ಪ್ರಧಾನವಾಗಿ ಬಳಸಿಕೊಂಡಿದ್ದಾನೆ. ಶಿಖರಿಣೀ, ಶ್ಲೋಕ, ವಸಂತತಿಲಕಾ, ಸ್ರಗ್ಧರಾ, ಆರ್ಯಾಛಂದಸ್ಸುಗಳೂ ಹೆಚ್ಚಾಗಿಯೇ ಬಂದಿವೆ. ಆರ್ಯಾಗೀತಿ, ಇಂದ್ರವಜ್ರಾ, ಮಾಲಿನೀ, ಹರಿಣೀ, ಮಂದಾಕ್ರಾಂತಾ, ಪೃಥ್ವೀ, ದ್ರುತವಿಲಂಬಿತ, ವಂಶಸ್ಥ, ಶಾಲಿನೀ, ರಥೋದ್ಧತಾ, ವೈತಾಲೀಯ, ದೋಧಕ, ಪುಷ್ಪಿತಾಗ್ರಾ, ಮಾತ್ರಾ ಸಮಕಗಳೂ ವಿರಳವಾಗಿ ಬಂದಿವೆ. ಮಹಾಬಲ, ಅಮೇಚಿ ರಾಮಚಂದ್ರ, ಧನಸಾರ, ರಾಮರ್ಷಿ, ಗುಣವಿನಯ, ಮೀನನಾಥ, ಇಂದ್ರಜಿತ್ ಮೊದಲಾದವರು ಇವನ ಶತಕಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ.

ಅಮರುಶತಕ :—

ಇದು ಪ್ರಖ್ಯಾತವಾದ ಒಂದು ಶೃಂಗಾರ ಶತಕ ಎಲ್ಲ ಲಾಕ್ಷಣಿಕರೂ, ತಮ್ಮ ಲಕ್ಷಣಗಳಿಗೆ ಇದರಿಂದ ಲಕ್ಷ್ಯಗಳನ್ನು ಧಾರಾಳವಾಗಿ ಆಯ್ದುಕೊಂಡಿದ್ದಾರೆ. ಇದರ ಕರ್ತೃ ಅಮರುಕ, ಧ್ವನ್ಯಾಲೋಕದ ಕರ್ತೃವಾದ ಆನಂದವರ್ಧನನು (ಕ್ರಿ. ಶ. 850) ಉತ್ತಮಕಾವ್ಯಕ್ಕೆ



ಮುಕ್ತಕರೂಪವಾಗಿಯೂ ಇರಬಹುದೆಂಬುದಕ್ಕೆ ಅಮರುಶತಕವನ್ನು ಹೆಸರಿಸಿ[1], ಅದರಿಂದ ಲಕ್ಷ್ಯಗಳನ್ನು ಉದ್ಧರಿಸಿದ್ದಾನೆ. ಕಾವ್ಯಾಲಂಕಾರಸೂತ್ರದ ಕರ್ತೃವಾದ ವಾಮನನು (ಕ್ರಿ. ಶ. 800) ಈ ಶತಕದಿಂದ ಲಕ್ಷ್ಯಗಳನ್ನು ತೆಗೆದುಕೊಂಡಿದ್ದಾನೆ. ಆದ್ದರಿಂದ ಅಮರುಕನು ಕ್ರಿ. ಶ. 8ನೆಯ ಶತಮಾನಕ್ಕಿಂತ ಹಿಂದಿನವನೆಂಬುದರಲ್ಲಿ ಸಂದೇಹವಿಲ್ಲ. ಎ. ಬಿ. ಕೀತ್ ಅವರು ಸುಮಾರು ಕ್ರಿ. ಶ. 650ರಲ್ಲಿ ಈ ಕಾವ್ಯವು ರಚಿತವಾಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ[2].

ಅಮರುಶತಕದ ಬಗೆಗೆ ಒಂದು ದಂತಕಥೆಯು ಪ್ರಚಲಿತವಾಗಿದೆ. ಶಂಕರಾಚಾರ್ಯರು ಮಾಹಿಷ್ಮತಿಯಲ್ಲಿ ಮಂಡನಮಿಶ್ರರನ್ನು ವಾದದಲ್ಲಿ ಗೆದ್ದರು. ಮಂಡನಮಿಶ್ರರ ಪತ್ನಿಯಾದ ಭಾರತಿಯು ಮುಂದೆ ಬಂದು ಅರ್ಧಾಂಗಿಯಾದ ತನ್ನನು ಗೆಲ್ಲದೆ ವಿಜಯವು ಅಪೂರ್ಣವೆಂದು ಹೇಳಿ ವಾದಕ್ಕೆ ಕರೆದಳು. ಹೆಂಗಸರೊಡನೆ ತಾನು ವಾದಮಾಡುವುದಿಲ್ಲವೆಂದು ಅವರು ಹೇಳಲು ಹಿಂದಿನ ಹಲವು ನಿದರ್ಶನಗಳನ್ನು ತೋರಿಸಿ ಅವರನ್ನು ವಾದಕ್ಕೆ ಒಪ್ಪಿಸಿದಳು. ಹದಿನೇಳು ದಿವಸಗಳ ಕಾಲ ವಾದ ನಡೆಯಿತು. ವಾದ ಮುಂದುವರಿಸುವುದು ಕಠಿಣವೆಂದು ಭಾವಿಸಿದ ಅವಳು ಕಾಮಶಾಸ್ತ್ರದ ರಹಸ್ಯಗಳನ್ನು ಕುರಿತು ಪ್ರಶ್ನೆಮಾಡಿದಳು. ಗೃಹಸ್ಥಾಶ್ರಮದ ಪರಿಚಯವಿಲ್ಲದ ಶಂಕರರಿಗೆ ಇದು ಕಷ್ಟವಾಯಿತು. ಆಗ ಅವರು ಒಂದು ತಿಂಗಳ ಅವಧಿಯನ್ನು ಪಡೆದು, ನರ್ಮದಾ ನದಿಯ ಅರಣ್ಯದ ಒಂದು ಮರದ ಪೊಟ್ಟರೆಯಲ್ಲಿ ತಮ್ಮ ದೇಹವನ್ನು ತ್ಯಜಿಸಿ, ಅದನ್ನು ರಕ್ಷಿಸಲು ಶಿಷ್ಯರನ್ನು ನೇಮಿಸಿ, ಸಂಸ್ಕಾರಕ್ಕೆ ಸಿದ್ಧವಾಗಿದ್ದ ಅಮರುಕನೆಂಬ ಕಾಶ್ಮೀರರಾಜನ ದೇಹಕ್ಕೆ ಪರಕಾಯಪ್ರವೇಶಮಾಡಿ, ಅವನ ಅಂತಃಪುರವನ್ನು ಸೇರಿದರು. ಅಂತಃಪುರದ ರಮಣಿಯರ ಸಹವಾಸದಿಂದ ಕಾಮರಹಸ್ಯಗಳನ್ನು ತಿಳಿದು ಮರಳಿ ತನ್ನ ದೇಹಕ್ಕೆ ಪ್ರವೇಶಿಸಿ, ಭಾರತಿಯೊಡನೆ ವಾದಕ್ಕೆ ಸಿದ್ಧವಾದರು. ಅವಳ ಸಮಸ್ಯೆಗೆ ಉತ್ತರರೂಪವಾಗಿ ಈ ಶತಕವನ್ನು ಬರೆದರು. ಅವಳು 'ನೀನು ಸನ್ಯಾಸಾಶ್ರಮಧರ್ಮದಿಂದ ಭ್ರಷ್ಟನಾದ್ದರಿಂದ ವಾದಕ್ಕೆ ಅನರ್ಹ' ನೆನ್ನಲು ಶಂಕರರು ನೂರು ಪದ್ಯಗಳಿಗೂ ವೈರಾಗ್ಯಪರವಾದ ಅರ್ಥವನ್ನು ಹೇಳಿ ಅವಳನ್ನು ವಾದದಲ್ಲಿ ಗೆದ್ದರು. ಈ ಕಥೆಯು ನಂಬಿಕೆಗೆ ಪಾತ್ರವಲ್ಲವಾದರೂ ಅಮರುಶತಕದ ಅದ್ವಿತೀಯ ಸೌಂದರ್ಯವನ್ನೂ, ಜನಪ್ರಿಯತೆಯನ್ನೂ ತಿಳಿಸುತ್ತದೆ. ಆನಂದವರ್ಧನನೇ ಮೊದಲಾದವರು ಇದನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಇದರ ಒಂದೊಂದು ಪದ್ಯವೂ ಸರಸ ಪ್ರಬಂಧವಾಗಿದೆ.

1. ಅಮರುಕಸ್ಯ ಕವೇರ್ಮುಕ್ತಕಾಃ ಶೃಂಗಾರರಸಸ್ಯಂದಿನಃ ಪ್ರಬಂಧಾಯಮಾನಾಃ ಪ್ರಸಿದ್ಧಾ ಏವ—ಆನಂದವರ್ಧನ.

2. From the elaboration and perfection of the technique, it seems much more probable that the poet wrote after rather than before—A.B. Keith.

ದೊರೆತಿರುವ ಈ ಕಾವ್ಯದ ಸಂಸ್ಕರಣಗಳಲ್ಲಿ 90 ರಿಂದ 115ರವರೆಗೆ ಪದ್ಯಗಳಿವೆ. ಪ್ರಸಿದ್ಧವಾದ ನಾಲ್ಕು ಮೂಲಪ್ರತಿ1ಗಳಲ್ಲಿ 51 ಪದ್ಯಗಳು ಮಾತ್ರ ಸಮಾನವಾಗಿವೆ. ಪದ್ಯ ಕ್ರಮದಲ್ಲಿ ವ್ಯತ್ಯಾಸವಿದೆ. ಸುಭಾಷಿತಸಂಗ್ರಹಕಾರರು ಹೇಳಿರುವ ಹಲವು ಪದ್ಯಗಳು ಇಲ್ಲಿಲ್ಲ; ಅಲ್ಲದೆ ಅವರು ಇಲ್ಲಿನ ಹಲವು ಪದ್ಯಗಳನ್ನು ಬೇರೆ ಕವಿಗಳ ಹೆಸರಿನಲ್ಲಿ ಸಂಗ್ರಹಿಸಿದ್ದಾರೆ. ಶಾರ್ದೂಲವಿಕ್ರೀಡಿತ ಪದ್ಯಗಳನ್ನು ಮಾತ್ರ ಶುದ್ಧಮೂಲವೆಂದು ಭಾವಿಸಿದ ಒಂದು ಶತಕವಾಗದೆ ಕೇವಲ 61 ಪದ್ಯಗಳಾಗುತ್ತವೆ. ಪ್ರಾಚೀನ ವ್ಯಾಖ್ಯಾಕಾರನಾದ ಅರ್ಜುನವರ್ಮನು (1215) ಬಳಸಿಕೊಂಡಿರುವ ಮೂಲವನ್ನು ಸದ್ಯಕ್ಕೆ ಶುದ್ಧವೆಂದು ಕೀತ್‌ರು ಅಭಿಪ್ರಾಯಪಡುತ್ತಾರೆ.

ಅರ್ಜುನವರ್ಮ, ಕೋಕಸಂಭವ, ಶೇಷರಾಮಕೃಷ್ಣ, ಚತುರ್ಭುಜಮಿತ್ರ, ನಂದಲಾಲ, ಸೂರ್ಯದಾಸ, ರುದ್ರಮಾದೇವ, ರವಿಚಂದ್ರ, ರಾಮರುದ್ರ, ವೇಮಭೂಪಾಲ, ಗೋಷ್ಠಿಪೂರೇಂದ್ರರು, ಶಂಕರಾಚಾರ್ಯ, ವೇಂಕಟರಮಣ, ಹರಿಹರಭಟ್ಟ, ದೇವಶಂಕರಭಟ್ಟ, ಈ ಕಾವ್ಯಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಅಜ್ಞಾತರ ಇನ್ನೂ ಎರಡು ವ್ಯಾಖ್ಯಾನಗಳಿವೆ. ರವಿಚಂದ್ರನು ಶೃಂಗಾರದ ಜೊತೆಗೆ ವೇದಾಂತರೂಪವಾದ ಮತ್ತೊಂದು ಅರ್ಥವನ್ನೂ ಪ್ರತಿಪಾದಿಸಿದ್ದಾನೆ. ವೇಮಭೂಪಾಲನು (14ನೇ ಶತಮಾನ) ಶೃಂಗಾರಭಾವವನ್ನು ಗಮನಿಸಿ ಅಲಂಕಾರಗ್ರಂಥಗಳ ಲಕ್ಷಣಗಳಿಗೆ ಸರಿದೂಗುವ ನಾಯಿಕೆಯರನ್ನು ತಿಳಿಸಿದ್ದಾನೆ. ಜ್ಞಾನಾನಂದ ಕಲಾಧರಸೇನನು ಶೃಂಗಾರ ಮತ್ತು ವೈರಾಗ್ಯಪರವಾಗಿ ಅರ್ಥಮಾಡಿದ್ದಾನೆ. ಉಳಿದವರು ಅರ್ಥವನ್ನು ಕೊಟ್ಟು ಅಲಂಕಾರ ಮತ್ತು ಛಂದಸ್ಸನ್ನು ತಿಳಿಸಿದ್ದಾರೆ.

ಬಹಳ ಪದ್ಯಗಳು ಶಾರ್ದೂಲವಿಕ್ರೀಡಿತ ವೃತ್ತದಲ್ಲಿವೆ. ಹರಿಣೀ, ವಸಂತತಿಲಕಾ, ಶಿಖರಿಣೀ, ಸ್ರಗ್ಧರಾವೃತ್ತಗಳನ್ನು ಧಾರಾಳವಾಗಿ ಬಳಸಿಕೊಳ್ಳಲಾಗಿದೆ. ಶ್ಲೋಕ, ಮಾಲಿನೀ, ಮಂದಾಕ್ರಾಂತಾ, ದ್ರುತವಿಲಂಬಿತಗಳೂ ಅಲ್ಲಲ್ಲಿ ಬರುತ್ತವೆ. ದೀರ್ಘವೂ, ಕಠಿಣವೂ ಆದ ಸಮಸ್ತಪದಗಳ ಪ್ರಯೋಗವಿಲ್ಲ. ಛಂದಸ್ಸು ಮತ್ತು ಪದಗಳು ಮಧುರವೂ, ಕೋಮಲವೂ ಆದ ಶೃಂಗಾರಭಾವವನ್ನು ಸುಂದರವಾಗಿ ಪ್ರಕಟಿಸಲು ಸಮರ್ಥವಾಗಿವೆ. ಅಲಂಕಾರಗಳು ಪ್ರಧಾನಭಾವಕ್ಕೆ ಮೆರುಗುಕೊಟ್ಟಿವೆ.

ಭರ್ತೃಹರಿಯ ಶೃಂಗಾರಶತಕವು ತರುಣಿಯರ ಕಾಯಕಾಂತಿಯ ವರ್ಣನೆಯಲ್ಲಿ ಪರ್ಯವಸಾನಗೊಂಡರೆ, ಅಮರುಶತಕವು ವಿಲಾಸಿನಿಯರ ಅವಿಸ್ಮರಣೀಯ ಪ್ರಣಯ... ಸುಂದರವಾಗಿ ಚಿತ್ರಿಸುತ್ತದೆ; ಸ್ತ್ರೀಯರ... ಲೋಕವನ್ನು ಪ್ರವೇಶಿಸಿ ವಿವಿಧ ಭಾವಭಂಗಿಗಳನ್ನು ಸುಂದರವಾಗಿ ... ತೊಡಗುವುದಿಲ್ಲ. ಗಾಥಾಸಪ್ತಶತಿಯು ಹಳ್ಳಿಯ... ನಿಂದೆಯಾಗಲೀ, ಪ್ರಶಂಸೆಯಾಗಲೀ ... ಯುವತಿಯರನ್ನು ಕುರಿತದ್ದಾದರೆ ಈ ಕಾವ್ಯವು ಅಂತಃಪುರ ಮತ್ತು ವಿಲಾಸಮಂದಿರಗಳ ... ಕಾಮತಂತ್ರನಿಪುಣರಾದ ನಾಯಕ... ರಸಿಕೆಯರಾದ ವಿಲಾಸಿನಿಯರನ್ನು ಕುರಿತದ್ದು.

1 (i) ದಕ್ಷಿಣ ಭಾರತದ ಪ್ರತಿ (ವ್ಯಾಖ್ಯಾಕಾರ –ವೇಮಭೂಪಾಲ)
(ii) ಬಂಗಾಳದ ಪ್ರತಿ (ವ್ಯಾ–ರವಿಚಂದ್ರ)
(iii) ಅರ್ಜುನವರ್ಮನು ಬಳಸಿಕೊಂಡಿರುವ ಪ್ರತಿ
(iv) ರಾಮರುದ್ರ ಮತ್ತು ರುದ್ರಮಾದೇವರು ಬಳಸಿಕೊಂಡಿರುವ ಮಿಶ್ರ ಸಂಸ್ಕರಣ.



ಮುಗ್ಧೆಯರನ್ನೂ, ಪ್ರೌಢೆಯರನ್ನೂ ಒಲಿಸಿಕೊಳ್ಳುವ ಮತ್ತು ಚತುರೆಯರಾದ ಲಲನೆಯರು ಪ್ರಿಯರೊಡನೆ ವ್ಯವಹರಿಸುವ ವಿಧಾನಗಳೇ ಈ ಕಾವ್ಯದ ವಸ್ತು. ಈ ಕಾವ್ಯವು ಶೃಂಗಾರಭಾವ ಪ್ರಧಾನವಾದ ಶ್ರೇಷ್ಠದರ್ಜೆಯ ಒಂದು ಭಾವಗೀತೆ. "The love which Amaru likes is gay and high spirited delighting in tiny tiffs and lovers' quarrels, but ending in smiles."—ಕಾವ್ಯದ ಶೃಂಗಾರವನ್ನು ಕುರಿತು ಎ. ಬಿ. ಕೀತ್ ಅವರು ಹೀಗೆ ಅಭಿಪ್ರಾಯಪಡುತ್ತಾರೆ. ಎಲ್ಲಾ ಪದ್ಯಗಳೂ ಸುಂದರವಾಗಿಯೇ ಇವೆ. ಕವಿಯು ವಸ್ತುವಿಗನುಗುಣವಾಗಿ ಭ್ರಮರವಿಭ್ರಮ ಧರಿಸಿದ ಅಂಬಿಕೆಯ ಕಟಾಕ್ಷವನ್ನೂ, ಕಾಮಿಯಂತೆ ತ್ರಿಪುರ ಯುವತಿಯರನ್ನು ಕಾಡಿಸಿದ ಶಂಭುವಿನ ಶರಾಗ್ನಿಯನ್ನೂ ಪ್ರಾರ್ಥಿಸಿ, ಹರಿಹರಸ್ಕಂದಾದಿದೇವತೆಗಳಿಂದೇನು ? 'ತನ್ವ್ಯಾಃ ಸುರತಕಾಂತತಾಂತನಯನಂ ವಕ್ತ್ರಂ ಚಿರಾಯ ಪಾತು' ಎಂದು ಹೇಳಿ ಕಾವ್ಯವನ್ನು ಪ್ರಾರಂಭಿಸಿದ್ದಾನೆ. ಸಮಾಪ್ತಿಯವರೆಗೆ ಶೃಂಗಾರಭಾವಪ್ರವಾಹವು ನಾನಾ ಬಣ್ಣಗಳಿಂದ ರಂಜಿಸುತ್ತಾ ಅವಿಚ್ಛಿನ್ನವಾಗಿ ಹರಿದಿದೆ. ಪ್ರೌಢೆ, ಮುಗ್ಧೆ, ಮಾನಿನಿ, ಕಲಹಾಂತರಿತೆ, ಸ್ವೈರಿಣಿ, ಪ್ರೋಷಿತ ಭರ್ತೃಕೆ ಮೊದಲಾದ ನಾಯಿಕೆಯರ ಮತ್ತು ದಕ್ಷಿಣ, ಶಠ, ವಿರಹಿ, ಕೃತಾಪರಾಧ ಮೊದಲಾದ ನಾಯಕರ ಚಿತ್ರಣವು ಮನೋಜ್ಞವಾಗಿದೆ. ಪ್ರಥಮಾನುರಾಗ, ನಾಯಿಕಾಪ್ರಸಾದನ, ಸೋಲ್ಲುಂಠವಚನ, ವಿರಹಾವಸ್ಥೆ, ಲಜ್ಜೆ, ಮಾನ, ಮೊದಲಾದುವುಗಳ ವರ್ಣನೆ ಆಕರ್ಷಕವಾಗಿದೆ. ಕಾವ್ಯದ ಮಾಧುರ್ಯವನ್ನು ತಿಳಿಸಲು ಉದಾಹರಣೆಗಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ.

ಇದು ದಕ್ಷಿಣನಾಯಕನ ಪ್ರಣಯರೀತಿ :—

ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ ಪಶ್ಚಾದುಪೇತ್ಯಾದರಾ-
ದೇಕಸ್ಯಾ ನಯನೇ ನಿಮೀಲ್ಯ ವಿಹಿತಕ್ರೀಡಾನುಬಂಧಚ್ಛಲಃ ।
ಈಷದ್ವಕ್ರಿತಕಂಧರಃ ಸಪುಲಕಃ ಪ್ರೇಮೋಲ್ಲಸನ್ಮಾನಸಾ-
ಮಂತರ್ಹಾಸಲಸತ್ಕಪೋಲಫಲಕಾಂ ಧೂರ್ತೋಽಪರಾಂ ಚುಂಬತಿ ॥

ಇದು ಪ್ರಣಯಲೋಕದ ವಿಶೇಷಾನುಭವವಿಲ್ಲದ ಬಾಲೆಯ ಹೃದಯಂಗಮ ಚಿತ್ರ :—

ಸಾ ಪತ್ಯುಃ ಪ್ರಥಮೇಽಪರಾಧಸಮಯೇ ಸಖ್ಯೋಪದೇಶಂ ವಿನಾ
ನೋ ಜಾನಾತಿ ಸವಿಭ್ರಮಾಂಗವಲನಾವಕ್ರೋಕ್ತಿಸಂಸೂಚನಮ್ ।
ಸ್ವಚ್ಛೈರಚ್ಛಕಪೋಲಮೂಲಗಲಿತೈಃ ಪರ್ಯಸ್ತನೇತ್ರೋತ್ಪಲಾ
ಬಾಲಾ ಕೇವಲಮೇವ ರೋದಿತಿ ಲುಠಲ್ಲೋಲೋದಕೈರಶ್ರುಭಿಃ ॥

ಪ್ರೋಷಿತಭರ್ತೃಕೆಯ ಅನುಪಮ ಪ್ರೇಮವನ್ನು ಸಾರುವ ವಿರಹ ಸಂತಾಪ :—

ಪ್ರಸ್ಥಾನಂ ವಲಯೈಃ ಕೃತಂ ಪ್ರಿಯಸಖೈರಸ್ರೈರಜಸ್ರಂ ಗತಮ್
ಧೃತ್ಯಾ ನ ಕ್ಷಣಮಾಸಿತಂ ವ್ಯವಸಿತಂ ಚಿತ್ತೇನ ಗಂತುಂ ಪುರಃ ।
ಯಾತುಂ ನಿಶ್ಚಿತಚೇತಸಿ ಪ್ರಿಯತಮೇ ಸರ್ವೇ ಸಮಂ ಪ್ರಸ್ಥಿತಾ
ಗಂತವ್ಯೇ ಸತಿ ಜೀವಿತ ! ಪ್ರಿಯಸುಹೃತ್ಸಾರ್ಥಃ ಕಿಮು ತ್ಯಜ್ಯತೇ ॥

ಭಾವಸಂಮಿಶ್ರಣಕ್ಕೆ ಇದೊಂದು ಸುಂದರವಾದ ಉದಾಹರಣೆ :—

ದೂರಾದುತ್ಸುಕಮಾಗತೇ ವಿವಲಿತಂ ಸಂಭಾಷಿಣಿ ಸ್ಫಾರಿತಮ್
ಸಂಶ್ಲಿಷ್ಯತ್ಯರುಣಂ ಗೃಹೀತವಸನೇ ಕೋಪಾಂಚಿತಭ್ರೂಲತಮ್ ।
ಮಾನಿನ್ಯಾಶ್ಚರಣಾನತಿವ್ಯತಿಕರೇ ಬಾಷ್ಪಾಂಬುಪೂರ್ಣೇಕ್ಷಣಮ್
ಚಕ್ಷುರ್ಜಾತಮಹೋ ಪ್ರಪಂಚಚತುರಂ ಜಾತಾಗಸಿ ಪ್ರೇಯಸಿ ॥

ನಾಯಕ ನಾಯಿಕೆಯರ ಈ ಚತುರಸಲ್ಲಾಪವು ಮನೋಜ್ಞವಾಗಿದೆ :—

ಬಾಲೇ ! ನಾಥ ! ವಿಮುಂಚ ಮಾನಿನಿ ! ರುಷಂ ರೋಷಾನ್ಮಯಾ ಕಿಂ ಕೃತಮ್
ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ ಸರ್ವೇಽಪರಾಧಾ ಮಯಿ ।
ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ
ನನ್ವೇತನ್ಮಮ ಕಿಂ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ ॥

ಇದು ವಿಯೋಗಿಯ ಅದ್ವೈತಾವಸ್ಥೆ :—

ಪ್ರಾಸಾದೇ ಸಾ ದಿಶಿ ದಿಶಿ ಚ ಸಾ ಪೃಷ್ಠತಃ ಸಾ ಪುರಃ ಸಾ
ಪರ್ಯಂಕೇ ಸಾ ಪಥಿ ಪಥಿ ಚ ಸಾ ತದ್ವಿಯೋಗಾತುರಸ್ಯ ।
ಹಂಹೋ ಚೇತಃ ಪ್ರಕೃತಿರಪರಾ ನಾಸ್ತಿ ಮೇ ಕಾಪಿ ಸಾ ಸಾ
ಸಾ ಸಾ ಸಾ ಸಾ ಜಗತಿ ಸಕಲೇ ಕೋಽಯಮದ್ವೈತವಾದಃ ॥

ರಸಿಕಸಂಜೀವಿನೀಟೀಕಾಕಾರನು ಮುಕ್ತಕಂಠದಿಂದ ಹೊಗಳಿರುವಂತೆ ಅಮರುಶತಕದ ಶೃಂಗಾರವೈಭವ ಅಸದೃಶ—

ಅಮರುಕಕವಿತ್ವಡಮರುಕನಾದೇನ ವಿನಿಹ್ನುತಾ ನ ಸಂಚರತಿ ।
ಶೃಂಗಾರಭಣಿತಿರನ್ಯಾ ಧನ್ಯಾನಾಂ ಶ್ರವಣಯುಗಲೇಷು ॥

**ಚೋರಪಂಚಾಶಿಕಾ :—**

ಇದನ್ನು ಮಹಾಕವಿಯಾದ ಬಿಲ್ಹಣನು ಬರೆದಿರಬೇಕೆಂದು ಹೇಳುತ್ತಾರೆ. ಇವನು ರಾಜಕುಮಾರಿಗೆ ಪಾಠ ಹೇಳುತ್ತಿದ್ದನೆಂದೂ, ಕ್ರಮೇಣ ಅನುರಕ್ತನಾಗಿ ಅವಳನ್ನು ರಹಸ್ಯವಾಗಿ ಭೋಗಿಸಿದ್ದನೆಂದೂ, ಇದನ್ನು ತಿಳಿದ ದೊರೆಯು ಇವನಿಗೆ ಮರಣದಂಡನೆಯನ್ನು ವಿಧಿಸಿದನೆಂದೂ, ವಧ್ಯಸ್ಥಳಕ್ಕೆ ಕರೆದುಕೊಂಡು ಹೋಗುವಾಗ ದಾರಿಯುದ್ದಕ್ಕೂ ತನ್ನ ಪ್ರಣಯವನ್ನು ಕುರಿತು ಹಾಡುತ್ತಾ ಹೋದನೆಂದೂ, ಇದನ್ನು ಕಂಡು ಮನಕರಗಿ ದೊರೆಯು ಮಗಳನ್ನು ಅವನಿಗೆ ವಿವಾಹ ಮಾಡಿಕೊಟ್ಟನೆಂದೂ ಕಥೆ ಹೇಳುತ್ತಾರೆ. 'ಅದ್ಯಾಪಿ ತಾಂ ನೃಪತಿಶೇಖರರಾಜಕನ್ಯಾಂ', 'ಅಂಗೋಪಬುಧಪತಿತೋ ನೃಪ ! ಸನ್ನಹಸ್ತಃ'—ಕಾವ್ಯದ ಈ ಮಾತುಗಳು ಮೇಲಿನ ಕಥೆಗೆ ಪೋಷಣೆ ನೀಡುತ್ತವೆ. ಕಾಶ್ಮೀರದ ಪ್ರವಾದದಿಂದ ಆ ರಾಜಕುಮಾರಿಯು ಮಹಿಲಾಪಟ್ಟಣದ ದೊರೆಯಾದ ವೀರಸಿಂಹನ ಮಗಳಾದ ಚಂದ್ರಲೇಖೆಯೆಂದೂ, ದಕ್ಷಿಣದೇಶದ ಪ್ರವಾದದಿಂದ ಪಾಂಚಾಲದ ದೊರೆಯಾದ ಮದನಾಭಿರಾಮನ ಮಗಳಾದ ಯಾಮಿನೀಪೂರ್ಣ



ತಿಲಕೆಯೆಂದೂ ಗೊತ್ತಾಗುತ್ತದೆ. ವೀರಸಿಂಹನು ವಿದ್ಯೆಯನ್ನು ಭೋಗಿಸಿದ ಚಾರಪಲ್ಲಿಯ ರಾಜಕುಮಾರನಾದ ಸುಂದರನಿಗೆ ಮರಣದಂಡನೆಯನ್ನು ವಿಧಿಸಿದನೆಂದೂ. ಆಗ ರಾಜಕುಮಾರನು ತನ್ನ ಸ್ಥಿತಿಯನ್ನು ಕಾಳಿಕೆಗೆ ವಿಜ್ಞಾಪಿಸಿಕೊಂಡಿದ್ದಾನೆಂದೂ ವ್ಯಾಖ್ಯಾನಕಾರನಾದ ರಾಮತರ್ಕವಾಗೀಶನು (ಕ್ರಿ. ಶ. 1798) ಹೇಳುತ್ತಾನೆ. ಕೆಲವು ಸಂಸ್ಕರಣಗಳ ಪ್ರಾರಂಭದಲ್ಲಿ ಪ್ರೇಮಮೂಲವನ್ನು ತಿಳಿಸುವ ಪೀಠಿಕಾಭಾಗವಿದೆ. ಇದರಲ್ಲಿ ಬೇರೆಬೇರೆ ಕವಿಗಳ ಪದ್ಯಗಳಿರುವುದರಿಂದ ಯಾರೋ ಈ ಭಾಗವನ್ನು ಸಂಕಲನ ಮಾಡಿ ಸೇರಿಸಿರಬೇಕು; ಬಿಲ್ಹಣನು ತನ್ನ ಐತಿಹಾಸಿಕ ಕಾವ್ಯದಲ್ಲಿ ಎಲ್ಲಿಯೂ ರಾಜಮನೆತನದೊಡನೆ ತನಗಿದ್ದ ಇಂತಹ ಸಂಬಂಧವನ್ನು ಹೇಳಿಕೊಂಡಿಲ್ಲ. ಬಂಗಾಳಿ ಮೂಲದ ಪ್ರಕಾರ ಇಂತಹ ಕಥೆಯೇ ಇದ್ದು ಚೋರಸುಂದರನು ಇದರ ಕರ್ತೃವೆಂದು ತಿಳಿದುಬರುತ್ತದೆ. ಶೃಂಗಾರಪ್ರಕಾಶದ ಕರ್ತೃವಾದ ಭೋಜನೂ, ವಿಕ್ರಮಾರ್ಕಚರಿತದ ಕರ್ತೃವಾದ ತೆಲುಗು ಕವಿ ಜಕ್ಕಣನೂ ಅನೇಕ ಕವಿಗಳ ಜೊತೆಯಲ್ಲಿ ಬಿಲ್ಹಣ-ಚೋರರನ್ನು ಪ್ರತ್ಯೇಕವಾಗಿ ಪ್ರಶಂಸಿಸಿರುವುದರಿಂದ ಇಬ್ಬರೂ ಒಬ್ಬನಲ್ಲ.

ಪಂಚಾಶಿಕಾ ಎಂದರೆ ಐವತ್ತು. ಈ ಕಾವ್ಯದಲ್ಲಿ 50 ಪದ್ಯಗಳಿವೆ. ಪ್ರೇಯಸಿಯ ಸುರತಸ್ಮರಣೆಯೇ ಇದರ ವಸ್ತು. ಪ್ರಾಯಕವಾಗಿ ಪ್ರತಿಯೊಂದು ಪದ್ಯವೂ 'ಅದ್ಯಾಪಿ ತಾಂ' ಎಂದು ಆರಂಭಗೊಂಡು 'ಸ್ಮರಾಮಿ' ಎಂದು ಮುಗಿಯುತ್ತದೆ. ಎಲ್ಲಾ ಪದ್ಯಗಳೂ ಮೇಘದೂತದಂತೆ ಒಂದೇ 'ವಸಂತತಿಲಕಾ' ವೃತ್ತದಲ್ಲಿ ರಚಿತವಾಗಿದ್ದು ಹಾಡಲು ಯೋಗ್ಯವಾಗಿವೆ. ಭಾಷೆಯು ಸುಲಭ, ಶೈಲಿಯು ಸರಳ ಮತ್ತು ಮಧುರ. ಸುಕುಮಾರಪ್ರಣಯದ ಸೂಕ್ಷ್ಮ ಮನೋಭಾವಗಳ ಚಿತ್ರಣ ಇಲ್ಲಿಲ್ಲ. ಅಷ್ಟಾಗಿ ವ್ಯಂಗ್ಯಕ್ಕೂ, ಅಲಂಕಾರಗಳಿಗೂ ಗಮನಕೊಟ್ಟಿಲ್ಲ.

ರಹಸ್ಯದಲ್ಲಿ ಪ್ರೇಯಸಿಯಿಂದ ಪಡೆದ ಸಕಲ ಸುಖವನ್ನೂ ಸ್ಮರಿಸಿಕೊಳ್ಳಲಾಗಿದೆ; ಅವಳ ಅಂಗಾಂಗಗಳ ಸೌಂದರ್ಯವನ್ನೂ, ನಡೆನುಡಿ ಮೊದಲಾದುವುಗಳ ಚೆಲುವನ್ನೂ, ಭಾವಭಂಗಿಗಳ ಮಾಧುರ್ಯವನ್ನೂ ವರ್ಣಿಸಲಾಗಿದೆ. ಸಾವು ಹತ್ತಿರ ಬಂದಿದ್ದರೂ ಅದರ ಪರಿವೆಯಿಲ್ಲದೆ ಅವಳ ಮಧುರಸ್ಮರಣೆಯಲ್ಲಿ ಉನ್ಮತ್ತನಾಗುತ್ತಾನೆ. ಪಡೆದ ಸುಖವನ್ನು ಅವನು ಮರೆಯಲಾರ.

ಇದು ಅವನ ಸುರತಸ್ಮೃತಿಗೆ ಒಂದು ಉದಾಹರಣೆ—

ಅದ್ಯಾಪಿ ತಾಂ ಗಲಿತಬಂಧನಕೇಶಪಾಶಾಮ್
ಸ್ರಸ್ತಸ್ರಜಂ ಸ್ಮಿತಸುಧಾಮಧುರಾಧರೋಷ್ಠೀಮ್ ।
ಪೀನೋನ್ನತಸ್ತನಯುಗೋಪರಿಚಾರುಚುಂಬನ
ಮುಕ್ತಾವಲೀಂ ರಹಸಿ ಲೋಲದೃಶಂ ಸ್ಮರಾಮಿ ॥

ಈ ಪದ್ಯದಲ್ಲಿ ವಿರಹಿಣಿಯ ಅವಸ್ಥೆಯನ್ನು ಚಿತ್ರಿಸಲಾಗಿದೆ—

ಅದ್ಯಾಪಿ ತಾಂ ಗಮನಮಿತ್ಯುದಿತಂ ಮದೀಯಮ್
ಶ್ರುತ್ವೈವ ಭೀತಹರಿಣೀಶಿಶುಚಂಚಲಾಕ್ಷೀಮ್ ।
ವಾಚಸ್ಖಲದ್ವಿಗಲದಶ್ರುಕಣಾಕುಲಾಕ್ಷೀಮ್
ಸಂಚಿಂತಯಾಮಿ ಗುರುಶೋಕವಿನಮ್ರವಕ್ತ್ರಾಮ್ ॥

ಬ್ರಹ್ಮ, ಕೇಶವ, ಹರರ ಚಿಂತೆ ಅವನಿಗೆ ಬೇಕಿಲ್ಲ ; ಅವಳ ಚಿಂತೆಯನ್ನು ಮಾತ್ರ ಬಿಡಲಾರ. ಪ್ರಣಯಕುಪಿತಳಾದ ಪ್ರೇಯಸಿಯನ್ನು ಅವನು ಒಲಿಸಿಕೊಳ್ಳುವ ಬಗೆ ಇದು—

ಅದ್ಯಾಪಿ ಯಾ ಶಶಿಮುಖೀ ನ ಕೃತಾಗಸಂ ಮಾಮ್
ಸೋಚ್ಚೈರ್ವಚಃ ಪ್ರತಿದದಾತಿ ಯದೈವ ವಕ್ತ್ರಮ್ ।
ಚುಂಬಾಮಿ ರೋದಿಮಿ ಭೃಶಂ ಪತಿತೋಽ ಪಾದೇ
ದಾಸಸ್ತವ ಪ್ರಿಯತಮೇ ! ಭಜ ಮಾಂ ಸ್ಮರಾಮಿ ॥

ಅವಳು ಅವನ ಜೀವನೌಷಧ; ಅವಳನ್ನು ಕಳೆದುಕೊಂಡ ದುಃಖಕ್ಕೆ ಮರಣದಿಂದಲೇ ಶಾಂತಿ ; ಅವಳ ನಿಷ್ಕಳಂಕ ಪ್ರೇಮವನ್ನು ಎಂದೂ ತ್ಯಜಿಸಲಾರ—

ಅದ್ಯಾಪಿ ನೋಜ್ಝತಿ ಹರಃ ಕಿಲ ಕಾಲಕೂಟಮ್
ಕೂರ್ಮೋ ಬಿಭರ್ತಿ ಧರಣೀಂ ಖಲು ಪೃಷ್ಠಕೇನ ।
ಅಂಭೋನಿಧಿರ್ವಹತಿ ದುಃಸಹಬಾಡವಾಗ್ನಿಮ್
ಅಂಗೀಕೃತಂ ಸುಕೃತಿನಃ ಪರಿಪಾಲಯಂತಿ ॥

**ಮಯೂರಾಷ್ಟಕ :**

ಈ ಕಾವ್ಯವನ್ನು ಬರೆದ ಮಯೂರನು ಬಾಣನ ಮಾವ. ಇವನು ಕ್ರಿ.ಶ. 7ನೇ ಶತಮಾನದಲ್ಲಿ ಕನೌಜಿನ ಹರ್ಷವರ್ಧನನ ಆಸ್ಥಾನದಲ್ಲಿದ್ದನು. ದೊರೆಯು ಬಾಣ ಮತ್ತು ಮಯೂರರನ್ನು ಸಮಾನವಾಗಿ ಗೌರವಿಸುತ್ತಿದ್ದನು. ವ್ಯಾಖ್ಯಾಕಾರನಾದ ಜಯಮಂಗಲನು ಮಯೂರರನ್ನು ಸರಸ್ವತಿಯ ಅವತಾರವೆಂದು[1] ಹೊಗಳಿದ್ದಾನೆ. ಮಯೂರನು ಭೋಜನ ಆಸ್ಥಾನದಲ್ಲಿದ್ದನೆಂದು ಭೋಜಪ್ರಬಂಧವು ತಿಳಿಸುತ್ತದೆ. ಐತಿಹಾಸಿಕ ಸಂಗತಿಗೆ ಪ್ರಬಂಧ ವಿಶ್ವಾಸಾರ್ಹವಲ್ಲ. ಭೋಜನಿಗಿಂತ ಬಹಳ ಹಿಂದೆಯೇ ಮಯೂರನಿದ್ದನು. ಇವನಿಗೆ ತನ್ನ ಮಗಳ ಅಂಗಾಂಗ ಸೌಂದರ್ಯವನ್ನು ವರ್ಣಿಸಿದ್ದರಿಂದ ಅವಳ ಶಾಪದ ಫಲವಾಗಿ ಕುಷ್ಠರೋಗ ಬಂದಿತೆಂದೂ, ಸೂರ್ಯಶತಕವನ್ನು ಬರೆದ ಮೇಲೆ ಆ ರೋಗ ಪರಿಹಾರವಾಯಿತೆಂದೂ ಒಂದು ಕಥೆಯಿದೆ. ಮಯೂರಾಷ್ಟಕದಲ್ಲಿ ಶೃಂಗಾರಪರವಾದ 8 ಪದ್ಯಗಳಿವೆ.

ಒಂದು ಉದಾಹರಣೆ :—

ಏಷಾ ಕಾ ಸ್ತನಪೀನಭಾರಕಠಿನಾ ಮಧ್ಯೇ ದರಿದ್ರಾವತೀ
ವಿಭ್ರಾಂತಾ ಹರಿಣೀ ವಿಲೋಲನಯನಾ ಸಂತ್ರಸ್ತಯೂಥೋದ್ಗತಾ ।
ಅಂತಃಸ್ವೇದಗಜೇಂದ್ರಗಂಡಗಲಿತಾ ಸಂಲೀಲಯಾ ಗಚ್ಛತಿ
ದೃಷ್ಟ್ವಾ ರೂಪಮಿದಂ ಪ್ರಿಯಾಂಗಗಹನಂ ವೃದ್ಧೋಽಪಿ ಕಾಮಾಯತೇ ॥

1. ಭಕ್ತಮಯೂರವಕ್ತ್ರೋಚ್ಚಪದವಿನ್ಯಾಸ ಶಾಲಿನೀ ।
ನರ್ತಕೀವ ನರೀನರ್ತಿ ಸಭಾಮಧ್ಯೇ ಸರಸ್ವತಿ ॥



ಪ್ರಿಯತಮನೊಡನೆ ರಹಸ್ಯಸಮಾಗಮ ಪಡೆದು ಹಿಂತಿರುಗುವ ತರುಣಿಯ ಈ ವರ್ಣನೆಯಿಂದ ಮೇಲಿನ ಕಥೆ ಹುಟ್ಟಿರಬೇಕೆಂದು ಕೀತ್ ಅವರು ಅಭಿಪ್ರಾಯಪಡುತ್ತಾರೆ.

**ಆರ್ಯಾಸಪ್ತ ಶತೀ :**

ಇದನ್ನು ಬರೆದವನು ಗೋವರ್ಧನ. ಅವನ ಗ್ರಂಥದ ಕೊನೆಯಲ್ಲಿ ತನ್ನನ್ನು ಗೋವರ್ಧನಾಚಾರ್ಯನೆಂದು ಹೇಳಿಕೊಂಡಿದ್ದಾನೆ. ಆರ್ಯಾಛಂದಸ್ಸಿನಲ್ಲಿ ರಚಿತವಾದ 700 ಪದ್ಯಗಳು ಈ ಕಾವ್ಯದಲ್ಲಿವೆ. ಆರ್ಯಾಛಂದಸ್ಸಿನ ಲಕ್ಷಣ—

ಯಸ್ಯಾಃ ಪಾದೇ ಪ್ರಥಮೇ ದ್ವಾದಶಮಾತ್ರಾಸ್ತಥಾ ತೃತೀಯೇಽಪಿ ।
ಅಷ್ಟಾದಶ ದ್ವಿತೀಯೇ ಪಂಚದಶ ಚತುರ್ಥಕೇ ಸಾರ್ಯೇತಿ ॥

ಕವಿಯು ತನ್ನ ಕಾವ್ಯದಲ್ಲಿ ಸಕಲಕಲೆಗಳಿಗೂ ಸೇನಕುಲತಿಲಕನಾದ ಭೂಪತಿಯೊಬ್ಬನೇ ಪ್ರಭುವೆಂದು ಹೇಳಿದ್ದಾನೆ. ಒಬ್ಬ ವ್ಯಾಖ್ಯಾಕಾರನು[1] ಈ ದೊರೆಯನ್ನು ಪ್ರವರಸೇನನೆಂದು ಸೂಚಿಸಿದ್ದಾನೆ ; ಮತ್ತೊಬ್ಬ ವ್ಯಾಖ್ಯಾಕಾರನು[2] 'ಸೇನಕುಲತಿಲಕಭೂಪತಿಃ ಸೇತುಕರ್ತಾ ಪ್ರವರಸೇನನಾಮಾ ರಾಜಾ' ಎಂದು ವಿಶದಪಡಿಸಿದ್ದಾನೆ, ಕ್ಷತ್ರಿಯವಂಶದ ದೊರೆಯಾದ ಈ ಪ್ರವರಸೇನನು ಕಾಶ್ಮೀರದವನು. ಆರ್ಯಾಸಪ್ತಶತಿಯ ಸಂಶೋಧಕರಾದ ಇಬ್ಬರು ವಿದ್ವಾಂಸರು[3] ಅಡಿಟಿಪ್ಪಣಿಯಲ್ಲಿ "ಸೇನಕುಲಂ ಕಾಯಸ್ಥಕುಲಂ ವಂಗದೇಶ ಪ್ರಸಿದ್ಧಮ್ । ತತ್ತಿಲಕಾಯಮಾನೋ ಭೂಪತಿರ್ಲಕ್ಷ್ಮಣಸೇನಃ । ನ ತು ಸೇತುಬಂಧಕಾವ್ಯಕರ್ತಾ ಕಾಶ್ಮೀರ ಮಹಾರಾಜಃ ಪ್ರವರಸೇನಃ । ಸ ತು ಕ್ಷತ್ರಿಯಕುಲಾವತಂಸ ಆಸೀದಿತಿ ರಾಜತರಂಗಿಣ್ಯಾಂ ಸ್ಫುಟಮೇವ ।" ಎಂದು ಸ್ಪಷ್ಟಪಡಿಸಿದ್ದಾರೆ. ಜಯದೇವನು ಗೀತಗೋವಿಂದದ ಪ್ರಾರಂಭದಲ್ಲಿ 'ಶೃಂಗಾರೋತ್ತರಸತ್ಪ್ರಮೇಯರಚನೈರಾಚಾರ್ಯಗೋವರ್ಧನಸ್ಪರ್ಧೀ ಕೋಽಪಿ ನ ವಿಶ್ರುತಃ,' ಎಂದು ಗೋವರ್ಧನಾಚಾರ್ಯನನ್ನು ಪ್ರಶಂಸಿಸಿದ್ದಾನೆ.

ಜಯದೇವನು ವಂಗದೇಶದ ದೊರೆ ಬಲ್ಲಾಳಸೇನನ ಮಗನಾದ ಲಕ್ಷ್ಮಣಸೇನನ ಆಸ್ಥಾನದಲ್ಲಿದ್ದನು. ಲಕ್ಷ್ಮಣಸೇನನ ಸಭಾಗೃಹದ ದ್ವಾರದಲ್ಲಿ "ಗೋವರ್ಧನಶ್ಚ ಶರಣೋ ಜಯದೇವ ಉಮಾಪತಿಃ । ಕವಿರಾಜಶ್ಚ ರತ್ನಾನಿ ಸಮಿತೌ ಲಕ್ಷ್ಮಣಸ್ಯ ಚ' ಎಂಬ ಪದ್ಯವು ಕೆತ್ತಲ್ಪಟ್ಟಿದ್ದಿತೆಂದೂ, ಜಯದೇವ ಗೋವರ್ಧನರು ಸಮಕಾಲೀನರೆಂದೂ ಹೇಳುತ್ತಾರೆ. ಲಕ್ಷ್ಮಣಸೇನನು ಕ್ರಿ. ಶ. 1116ರಲ್ಲಿದ್ದನು, ಕಾವ್ಯದಿಂದಲೇ ತಿಳಿದುಬರುವಂತೆ ಗೋವರ್ಧನನ ತಂದೆ ನೀಲಾಂಬರ ; ಸೋದರ ಬಲಭದ್ರ; ಶಿಷ್ಯ ಉದಯನ ; ಶಿಷ್ಯ ಮತ್ತು ಸೋದರರು ಈ ಕಾವ್ಯವನ್ನು ಶೋಧಿಸಿ ಪ್ರಕಟಿಸಿದರು.

ಗೋವರ್ಧನನು ಹಾಲಕವಿಯ ಗಾಥಾಸಪ್ತಶತಿಯನ್ನು ಉಪಜೀವಿಸಿ ಆರ್ಯಾಸಪ್ತಶತಿಯನ್ನು ಬರೆದಿದ್ದಾನೆ. ಇದು ಅನುವಾದವಲ್ಲ. ಹಿಂದೀ ಸಾಹಿತ್ಯದ ಸುಪ್ರಸಿದ್ಧ ಕವಿಯಾದ

1. ಜೀವಾನಂದ ವಿದ್ಯಾಸಾಗರ ಭಟ್ಟಾಚಾರ್ಯ.
2. ಅನಂತಪಂಡಿತ.
3. ಪಂಡಿತ ದುರ್ಗಾಪ್ರಸಾದ ಮತ್ತು ಕಾಶೀನಾಥ ಪಾಂಡುರಂಗ ಪರಬ.

ಬಿಹಾರಿಲಾಲನ (1662) ಆರ್ಯಾಸಪ್ತಶತಿಯನ್ನು ಪಜೀವಿಸಿ ಹಿಂದಿಯಲ್ಲಿ ದೋಹಾ ಛಂದಸ್ಸಿನಲ್ಲಿ "ಸತಸಈ" ಎಂಬ ಕಾವ್ಯವನ್ನು ಬರೆದಿದ್ದಾನೆ. ಪರಮಾನಂದನು ಬರೆದಿರುವ ಶೃಂಗಾರಸಪ್ತಶತಿಕೆಯು ಈ ಹಿಂದೀ ಕಾವ್ಯದ ಸಂಸ್ಕೃತಾನುವಾದ ರಹೀಂ, ವೃಂದ ಮೊದಲಾದ ವರು ಹಿಂದಿಯಲ್ಲಿ "ಸತಸಈ"ಗಳನ್ನು ಬರೆದು ಈ ಪರಂಪರೆಯನ್ನು ಬೆಳೆಸಿದ್ದಾರೆ. ಇದೇ ದೇವೀಭಾಗವತದ ಭಾಗವಾದ ದುರ್ಗಾಸಪ್ತಶತಿಯು ಪ್ರಸಿದ್ಧವಾಗಿದೆ. ದೂರ್ವಾಸನು ಮಾನರಿಯಲ್ಲಿ ಲಕ್ಷ್ಮೀಧರನ ಮಗನಾದ ವಿಶ್ವೇಶ್ವರನು ಆರ್ಯಾಸಪ್ತಶತಿಯನ್ನೂ, ವ್ರಜರಾಜನು ಆರ್ಯಾದ್ವಿಶತಿಯನ್ನೂ ಸಾಮರಾಜದೀಕ್ಷಿತನು ಆರ್ಯಾತ್ರಿಶತಿಯನ್ನೂ, ಆರ್ಯಾತ್ರಿಶತಿಮುಕ್ತಕವನ್ನೂ ಬರೆದಿದ್ದಾರೆ.

ಗೋವರ್ಧನನಿಗೆ ಒಳ್ಳೆಯ ಲಲಿತವೂ ಮಧುರವೂ ಆದ ಕಾವ್ಯ ರಚಿಸುವುದರಲ್ಲಿ ಸಹೃದಯಾ ಸಾಮರ್ಥ್ಯವಿದೆ. ಅವನ ತನ್ನ ಆರ್ಯೆಗಳನ್ನು ವರ್ಣಿಸುತ್ತಾ ಗೀತಿಗತಯಃ ಸಜ್ಜನ ಹೃದಯಾ ಭಿಸಾರಿಕಾಃ ಸುರಸಾಃ ವಿಶನ್ತಿ ಎಂದು ಹೇಳಿಕೊಂಡಿರುವುದು ಒಪ್ಪುವ ಮಾತಾಗಿದೆ. ಅವನ ಈ ಆರ್ಯೆಯು ಆದಿಯಿಂದ ಅಂತ್ಯದವರೆಗೆ ಸುಂದರವೂ, ನಿರರ್ಗಳವೂ ಆಗಿ ಹರಿಯುತ್ತದೆ. ಪ್ರಾಕೃತದ ಸರಸಸೂಕ್ತಿಗಳನ್ನು ಪರಿಚಯವಿಕೆ ಇತರರನ್ನು ಈ ದಾರಿಗೆ ಆಕರ್ಷಿಸಿದೆ. ಗಗನಕ್ಕೆ ಒಯ್ಯುವಂತ್ಯಾಗುತ್ತ ಸಂಸ್ಕೃತಕ್ಕೆ ತರವುದೆಂದರೆ ತಗ್ಗಿಗೆ ಹರಿಯುವ ಯಮುನೆಯನ್ನು ಸಂಸ್ಕೃತ ವರ್ಣಮಾಲೆಯ ದೆಂದು ಗೋವರ್ಧನನೇ ಹೇಳಿದ್ದಾನೆ. ಸರ್ಗಗಳಿಗೆ ಬದಲಾಗಿ ಸಂಸ್ಕೃತ ವರ್ಣಮಾಲೆಯ ಕ್ರಮವನ್ನನುಸರಿ ಕಾವ್ಯವನ್ನು "ಅಕಾರಾದಿಃ", ಆಕಾರಾದಿಃ" ಮುಂತಾಗಿ ವಿಭಾಗಿಸಲಾಗಿದೆ. ಕಾವ್ಯದ ಪೀಠಿಕಾ ಭಾಗದಲ್ಲಿ ಹಲವು ದೇವತೆಗಳ ಸ್ತೋತ್ರವೂ, ಕವಿಗಳ ಮತ್ತು ಸಹೃದಯರ ಪ್ರಶಂಸೆಯೂ ಇವೆ; ಉಪಸಂಹಾರ ಭಾಗದಲ್ಲಿ ಕೃತಿಯ ಸೊಗಸು ಸೌಂದರ್ಯಗಳನ್ನು ತಿಳಿ ಲಾಗಿದೆ. ಕಾವ್ಯದಲ್ಲಿ ವ್ಯಂಗ್ಯವು ಹೃದ್ಯವಾಗಿದ್ದು ಉಪಮಾದ್ಯಲಂಕಾರಗಳು ರಮಣೀಯವಾಗಿ ವ್ಯಂಗ್ಯ ಮತ್ತು ಅಲಂಕಾರಗಳಿಂದ ರಮಣೀಯವಾದ ಈ ಸ್ತೋತ್ರದಲ್ಲಿಯೂ ಶೃಂಗಾರವೇ ಪ್ರಭುತ್ವ ಪಡೆದಿರುವುದನ್ನು ಕಾಣಬಹುದು—

ಪಿತಾಮಹೇನೋಕ್ತಃ ।
ಮಾ ಮಮ ಸಂಪ್ರತಿ ಪುಣ್ಯಂ ವಿಷಮಿದಮಿತಿ ಸಾತಂಕಂ
ಪ್ರಾತರ್ಜಯತಿ ಸಲಜ್ಜಃ ಕಜ್ಜಲಮಲಿನಾಧರಃ ಶಂಭುಃ ॥

ಕುಂಜರಾಪದೇಶದಿಂದ ಹೊಟ್ಟೆಗಾಗಿ ಕೀಳೆಂದಾರಿಯು ತರವಲ್ಲವೆಂಬುದನ್ನು ಮುಟ್ಟುವಂತೆ ಹೇಳಲಾಗಿದೆ—

ಭ್ರಮಸಿ ಪ್ರಕಟಯಸಿ ರದಂ ಕರಂ ಪ್ರಸಾರಯಸಿ ತೃಣಮಪಿ ಶ್ರಯಸಿ ।
ಧಿಙ್ಮಾನಂ ತವ ಕುಂಜರ ಜೀವನ ನ ಜುಹೋಷಿ ಜಠರಾಗ್ನೌ ॥

ಪತಿಯ ಶೃಂಗಾರದ ಕೆಲವು ಮುಖಗಳನ್ನು ನೋಡಬಹುದು, ನಾಯಿಕೆಯು ಕಂಡು ಹೆದರಿದ ಉಪಪತಿಗೆ ದೂತಿಯು ಹೇಳುವ ಈ ಮಾತು ಚತುರವಾಗಿದೆ—

ತ್ಯಜಸಿ ।
ಕುತ ಇಹ ಕುರಂಗಶಾವಕ ಕೇದಾರೇ ಕಲಮಮಂಜರೀಂ
ತೃಣಬಾಹ್ಯತೃಣಧನ್ವಾ ತೃಣಘಟಿತಃ ಕಪಟಪುರುಷೋऽಯಮ್ ॥

ನೀತಿಪ್ರಾಯವಾದ ಮಾತುಗಳೂ ಅಲ್ಲಲ್ಲಿವೆ. ಇದು ದೊಡ್ಡವರ ಪ್ರಕೃತಿ—

ಗೌರೀಪತೇರ್ಗರೀಯೋ ಗರಲಂ ಗತ್ವಾ ಗಲೇ ಜೀರ್ಣಮ್ ।
ಜೀರ್ಯಂತಿ ಕರ್ಣೇ ಮಹತಾಂ ದುರ್ವಾದೋ ನಾಲ್ಪಮಪಿ ವಿಶತಿ ॥

ಭಾಮಿನೀವಿಲಾಸ :—

ಆಂಧ್ರದೇಶದಲ್ಲಿ ಜನಿಸಿ ತನ್ನ ಪಾಂಡಿತ್ಯಪ್ರತಿಭೆಗಳಿಂದ, ದಿಲ್ಲೀಶ್ವರನಾದ ಷಾಹಜಹಾನನ ಆಸ್ಥಾನದಲ್ಲಿ ಪಂಡಿತರಾಜನೆಂದು ಬಿರುದುಗಳಿಸಿದ ಜಗನ್ನಾಥನು ಈ ಕಾವ್ಯದ ಕರ್ತೃ. ಇವನ ತಂದೆ ಪೇರುಭಟ್ಟ ; ತಾಯಿ ಲಕ್ಷ್ಮಿ. ತಂದೆಯಿಂದ ಸಾಹಿತ್ಯ ಮತ್ತು ಅಲಂಕಾರಶಾಸ್ತ್ರವನ್ನೂ, ಜ್ಞಾನೇಂದ್ರ ಭಿಕ್ಷು ಮೊದಲಾದ ಗುರುಗಳಿಂದ[1] ವೇದಾಂತ, ನ್ಯಾಯ, ವೈಶೇಷಿಕ, ವ್ಯಾಕರಣ, ಮೀಮಾಂಸಾದಿ ಶಾಸ್ತ್ರಗಳನ್ನೂ ಕಲಿತನು. ದಿಲ್ಲಿಯಲ್ಲಿ ರಾಜಕುಮಾರನಿಗೆ ಪಾಠಹೇಳುತ್ತಿದ್ದು, ಯವನಸುಂದರಿಯನ್ನು ಪ್ರೇಮಿಸಿ ಲಗ್ನವಾಗಿ ಕೆಲಕಾಲ ಅಲ್ಲಿಯೇ ಉಳಿದನು. ತನ್ನನ್ನು ತಮ್ಮ ಆಸ್ಥಾನದಲ್ಲಿಟ್ಟುಕೊಳ್ಳಲು ಬಯಸಿದ ಎಷ್ಟೋಮಂದಿ ರಾಜರಿಗೆ ಅವನು ಕೊಟ್ಟ ಉತ್ತರ:

ದಿಲ್ಲೀಶ್ವರೋ ವಾ ಜಗದೀಶ್ವರೋ ವಾ ಮನೋರಥಾನ್ ಪೂರಯಿತುಂ ಸಮರ್ಥಃ ।
ಅನ್ಯೈರ್ನೃಪಾಲೈಃ ಪರಿದೀಯಮಾನಂ ಶಾಕಾಯ ವಾ ಸ್ಯಾಲ್ಲವಣಾಯ ವಾ ಸ್ಯಾತ್ ॥

ಪ್ರಾಯವನ್ನು ದಿಲ್ಲಿಯಲ್ಲಿ ಕಳೆದು ಕೊನೆಗಾಲದಲ್ಲಿ ಮಥುರೆಯಲ್ಲಿ ನೆಲೆಸಿದನು[2]. ಇವನು ವ್ಯಾಕರಣಶಾಸ್ತ್ರದಲ್ಲಿ ಮೂರ್ಧನ್ಯನೆನಿಸಿದ 'ಸಿದ್ಧಾಂತ' ಕೌಮುದೀಕಾರನಾದ ಭಟ್ಟೋಜೀ ದೀಕ್ಷಿತನನ್ನು ಖಂಡಿಸಿ ಬಾಯಿಮುಚ್ಚಿಸಿದ ಧೀರ. 'ಚಿತ್ರಮೀಮಾಂಸಾ' ಮೊದಲಾದ ಅಲಂಕಾರ ಗಳನ್ನು ರಚಿಸಿದ ಅಪ್ಪಯ್ಯದೀಕ್ಷಿತರನ್ನು ಉಗ್ರವಾಗಿ ಖಂಡಿಸಿ "ಕಿಂ ಜಾನಾತ್ಯಯಂ ದ್ರವಿಡ ಶಿಶುಃ" ಎಂದು ಹೇಳಿದ ಕೆಚ್ಚು ಇವನದು. ಇವನ ಕೃತಿಯಾದ "ರಸಗಂಗಾಧರ" ಒಂದು ಪ್ರೌಢವಾದ ಅಲಂಕಾರಗ್ರಂಥ. ಇವನ ಕಾಲ ಕ್ರಿ. ಶ. 17 ನೆಯ ಶತಮಾನ. ದೊಡ್ಡ ವಿದ್ವಾಂಸನಾದ ಇವನು ಯವನಸುಂದರಿಯನ್ನು ಮದುವೆಯಾಗಿ ಮುಸಲ್ಮಾನರೊಡನೆ ಬಾಳಿದುದ ರಿಂದ ಜಾತಿ ಭ್ರಷ್ಟನಾದನೆಂದೂ, ಅಪ್ಪಯ್ಯ ಭಾಗವತನೇ ಮೊದಲಾದ ವೈದಿಕರು ಇವನನ್ನು ಹತ್ತಿರ ಸೇರಿಸದೆ ತೆಗಳಿದರೆಂದೂ, ಕೊನೆಗಾಲದಲ್ಲಿ ಘಟ್ಟದಲ್ಲಿ ಕುಳಿತು ಗಂಗೆಯನ್ನು ಸ್ತೋತ್ರ

---

1. ಶ್ರೀಮದ್ ಜ್ಞಾನೇಂದ್ರಭಿಕ್ಷೋರಧಿಗತಸಕಲಬ್ರಹ್ಮವಿದ್ಯಾಪ್ರಪಂಚಃ
ಕಾಣಾದೀರಾಕ್ಷಪಾದೀರಪಿ ಗಹನಗಿರೋ ಯೋ ಮಹೇಂದ್ರಾದವೇದೀತ್ ।
ದೇವಾದೇವಾಧ್ಯಗೀಷ್ಟ ಸ್ಮರಹರನಗರೇ ಶಾಸನಂ ಜೈಮಿನೀಯಂ
ಶೇಷಾಂಕಪ್ರಾಪ್ತ ಶೇಷಾಮಲಭಣಿ ತಿರಭೂತ್ಸರ್ವ ವಿದ್ಯಾಧರೋ ಯಃ ॥—ರಸಗಂಗಾಧರ

2. ಶಾಸ್ತ್ರಾಣ್ಯಾಕಲಿತಾನಿ ನಿತ್ಯವಿಧಯಃ ಸರ್ವೇऽಪಿ ಸಂಭಾವಿತಾಃ
ದಿಲ್ಲೀವಲ್ಲಭಪಾಣಿಪಲ್ಲವತಲೇ ನೀತಂ ನವೀನಂ ವಯಃ ।
ಸಂಪ್ರತ್ಯುಜ್ಝಿತಮಾಸನಂ ಮಧುಪುರೀ ಮಧ್ಯೇ ಹರಿಃ ಸೇವ್ಯತೇ
ಸರ್ವಂ ಪಂಡಿತರಾಜರಾಜಿತಿಲಕೇನಾಕಾರಿ ಲೋಕಾಧಿಪವತ್ ॥—ಭಾಮಿನೀವಿಲಾಸ.

ಮಾಡುತ್ತಿದ್ದಾಗ ಗಂಗೆಯು ಮೆಟ್ಟಿಲು ಮೆಟ್ಟಿಲಾಗಿ ಮೇಲೆ ಬಂದು ಇವನನ್ನು ತನ್ನಲ್ಲಿ ಐಕ್ಯ ಗೊಳಿಸಿಕೊಂಡಳೆಂದೂ ಲೋಕದಲ್ಲಿ ಪ್ರವಾದವಿದೆ.

ಇವನು ಮನೋರಮಾಕುಚಮರ್ದಿನೀ, ಗಂಗಾಲಹರೀ, ಸುಧಾಲಹರೀ, ಅಮೃತಲಹರೀ, ಕರುಣಾಲಹರೀ, ಲಕ್ಷ್ಮೀಲಹರೀ, ಯಮುನಾವರ್ಣನಚಂಪೂ, ಭಾಮಿನೀವಿಲಾಸ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಭಟ್ಟೋಜಿದೀಕ್ಷಿತರ ಖಂಡನೆಗಾಗಿಯೇ ಮನೋರಮಾಕುಚ ಮರ್ದಿನಿಯನ್ನು ಬರೆದನು. ನವಾಬ್ ಆಸಫ್‌ಖಾನನ ಸ್ಮರಣಾರ್ಥವಾಗಿ "ಆಸಫ್‌ವಿಲಾಸ" ವೆಂಬ ಗದ್ಯಕಾವ್ಯವನ್ನೂ, ದಾರಾಷಾನ ಔದಾರ್ಯವರ್ಣನೆಗಾಗಿ 'ಜಗದಾಭರಣ' ವೆಂಬ ಪದ್ಯ ಕಾವ್ಯವನ್ನೂ, ಕಾಮರೂಪದೇಶದ ದೊರೆಯಾದ ಪ್ರಾಣನಾರಾಯಣನ ಪ್ರಶಂಸೆಗಾಗಿ 'ಪ್ರಾಣಾಭರಣ' ವೆಂಬ ಕಾವ್ಯವನ್ನೂ ಬರೆದಿದ್ದಾನೆ.

ಮಾನವನ ನಾಲ್ಕು ಪುರುಷಾರ್ಥಗಳ ಪ್ರತಿಪಾದನೆ ಮತ್ತು ನೀತಿಬೋಧನೆಗಾಗಿ ಭಾಮಿನೀ ವಿಲಾಸವನ್ನು ಬರೆದಿದ್ದಾನೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ[1]. ಅವುಗಳಲ್ಲೊಂದು ಅಧ್ಯಾಯ ವಾದ ಶೃಂಗಾರವಿಲಾಸದಲ್ಲಿ 102 ಪದ್ಯಗಳಿವೆ. ಇವುಗಳಲ್ಲಿ ಕಲ್ಪನೆಯ ವಿನೂತನತೆ ಇದೆ; ಶಬ್ದಚಮತ್ಕಾರ ಮತ್ತು ಅಲಂಕಾರಗಳ ಸೊಗಸಿದೆ; ಛಂದಸ್ಸು ಮತ್ತು ಪ್ರಾಸಗಳು ಭಾವಕೆ ತುಂಬ ಹೊಂದಿಕೊಂಡಿವೆ. ಈ ಕೃತಿಯು ಜನಾದರಣೆಯನ್ನು ಗಳಿಸಿಕೊಂಡಿದೆ. ಕವಿಯೇ "ಮದೀಯಪದ್ಯರತ್ನಾನಾಂ ಮಂಜೂಷೈಷಾ ಕೃತಾ ಮಯಾ" ಎಂದು ಹೇಳಿಕೊಂಡಿದ್ದಾನೆ. ಈ ಕಾವ್ಯಕ್ಕೆ ಅಚ್ಯುತರಾಯನ ವ್ಯಾಖ್ಯಾನವಿದೆ. ರಮಣಿಯರ ಅಪರಿಹಾರ್ಯವಾದ ಆಕರ್ಷಣೆಯ ವರ್ಣನೆ ಇದು—

ಉಪನಿಷದಃ ಪರಿಪೀತಾ ಗೀತಾಪಿ ಚ ಹನ್ತ ಮತಿಪಥಂ ನೀತಾ ।
ತದಪಿ ನ ಹಾ ವಿಧುವದನಾ ಮಾನಸಸದನಾದ್ ಬಹಿರ್ಯಾತಿ ॥

ಈ ಪದ್ಯದಲ್ಲಿ ತರುಣಿಯ ಸೌಂದರ್ಯಚಿತ್ರಕ್ಕೆ ಶಬ್ದಾರ್ಥಾಲಂಕಾರಗಳು ಪುಷ್ಟಿನೀಡಿವೆ—

ತೀರೇ ತರುಣ್ಯಾ ವದನಂ ಸಹಾಸಮ್
ನೀರೇ ಸರೋಜಂ ಚ ಮಿಲದ್ವಿಕಾಸಮ್ ।
ಆಲೋಕ್ಯ ಧಾವತ್ಯುಭಯತ್ರ ಮುಗ್ಧಾ
ಮರಂದಲುಬ್ಧಾಲಿಕಿಶೋರಮಾಲಾ ॥

ಭಾಮಿನೀವಿಲಾಸದ ವ್ಯಾಖ್ಯಾಕಾರರು ಇದನ್ನು ಜಗನ್ನಾಥನ ಕೊನೆಯ ಪದ್ಯವೆಂದು ಹೇಳುತ್ತಾರೆ :—

ಯವನೀ ನವನೀತಕೋಮಲಾಂಗೀ ಶಯನೀಯೇ ಯದಿ ಲಭ್ಯತೇ ಕಾದಾಚಿತ್ ।
ಅವನೀ ತಲಮೇವ ಸಾಧು ಮನ್ಯೇ ನ ವನೀ ಮಾಧವನೀ ವಿನೋದಹೇತುಃ ॥

1. ಅನ್ಯೋಕ್ತಿ, ಶೃಂಗಾರ, ಕರುಣ, ಶಾಂತ.



ಪಾಣಿನಿಯ ಹೆಸರಿನಲ್ಲಿ ಕೆಲವು ಸುಂದರವಾದ ಪದ್ಯಗಳು ಸುಭಾಷಿತ ಸಂಗ್ರಹ ಗ್ರಂಥಗಳಲ್ಲಿ ದೊರೆಯುತ್ತವೆ. ಈ ಪಾಣಿನಿ ಯಾರೋ ತಿಳಿಯದು. ಉದಾಹರಣೆಗಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ.

ತರುಣಿಯ ಸೌಂದರ್ಯವರ್ಣನೆ :—

ತನ್ವಂಗೀನಾಂ ಸ್ತನೌ ದೃಷ್ಟ್ವಾ ಶಿರಃ ಕಂಪಾಯತೇ ಯುವಾ ।
ತಯೋರಂತರಸಂಲಗ್ನಾಂ ದೃಷ್ಟಿಮುತ್ಪಾತಯನ್ನಿವ ॥

ಇಲ್ಲಿ ಲೋಕದ ಪ್ರಣಯವೃತ್ತಾಂತವನ್ನು ಪ್ರಕೃತಿಯ ಮೂಲಕ ವರ್ಣಿಸಲಾಗಿದೆ :-

ವಿಲೋಕ್ಯ ಸಂಗಮೇ ರಾಗಂ ಪಶ್ಚಿಮಾಯಾ ವಿವಸ್ವತಾ ।
ಕೃತಂ ಕೃಷ್ಣಂ ಮುಖಂ ಪ್ರಾಚ್ಯಾ ನಹಿ ನಾರ್ಯೋ ವಿನೇರ್ಷ್ಯಯಾ॥

ಮೋಡಗಳು ಮಿಂಚೆಂಬ ದೀಪಗಳನ್ನು ಹಿಡಿದು ಸೂರ್ಯನನ್ನು ಹುಡುಕುವ ರೀತಿ :—

ಕ್ಷಪಾಃ ಕ್ಷಾಮೀಕೃತ್ಯ ಪ್ರಸಭಂ ಅಪಹೃತ್ಯಾಂಬು ಸರಿತಾಮ್
ಪ್ರತಾಪ್ಯೋರ್ವೀಂ ಕೃತ್ಸ್ನಾಂ ತರುಗಹನಮುಚ್ಛೋಷ ಸಕಲಮ್ ।
ಕ್ವ ಸಂಪ್ರತ್ಯುಷ್ಣಾಂಶುರ್ಗತ ಇತಿ ತದನ್ವೇಷಣಪರಾ–
ಸ್ತಡಿದ್ದೀಪಾಲೋಕಾ ದಿಶಿದಿಶಿ ಚರಂತೀವ ಜಲದಾಃ ॥

ವಾಕ್ಕೂಟನ ಹೆಸರಿನಲ್ಲಿ ಈ ಸೊಗಸಾದ ಪದ್ಯವು ದೊರೆಯುತ್ತದೆ. ಇದು ಪ್ರೇಯಸಿಯನ್ನಗಲಿದ ಪ್ರಿಯತಮನ ವಿರಹವರ್ಣನೆ :—

ಏತೇ ಚೂತಮಹೀರುಹೋಽಪ್ಯವಿರಲೈರ್ಧೂಮಾಯಿತೈಷ್ಷಟ್ಪದೈಃ
ಏತೆ ಪ್ರಜ್ವಲಿತಾಃ ಸ್ಫುಟತ್ಕಿಸಲಯೊದ್ಭೇದೈರಶೋಕದ್ರುಮಾಃ ।
ಏತೇ ಕಿಂಶುಕಶಾಖಿನೋಽಪಿ ಮಲಿನೈರಂಗಾರಿತಾಃ ಕುಡ್ಮಲೈಃ
ಕಷ್ಟಂ ವಿಶ್ರಮಯಾಮಿ ಕುತ್ರ ನಯನೇ ಸರ್ವತ್ರ ವಾಮೋ ವಿಧಿಃ ॥

ಕೆಲವು ಪದ್ಯಗಳನ್ನು ಶಾರ್ಙ್ಗಧರಪದ್ಧತಿಯಲ್ಲಿ 'ಶೀಲಾಭಟ್ಟಾರಿಕಾ' ಹೆಸರಿನಲ್ಲಿ ಸಂಗ್ರಹಿಸ ಲಾಗಿದೆ. ಲಾಕ್ಷಣಿಕರಾದ ಮಮ್ಮಟ ಮತ್ತು ವಿಶ್ವನಾಥರು ಅವುಗಳಲೊಂದಾದ ಈ ಪದ್ಯ ವನ್ನು ಉದ್ಧರಿಸಿದ್ದಾರೆ.

ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾಃ
ಸ್ತೇ ಚೋನ್ಮೀಲಿತಮಾಲತೀಸುರಭಯಃ ಪ್ರೌಢಾಃ ಕದಂಬಾನಿಲಾಃ ।
ಸಾ ಚೈವಾಸ್ಮಿ ತಥಾಪಿ ತತ್ರ ಸುರತವ್ಯಾಪಾರಲೀಲಾವಿಧೌ
ರೇವಾರೋಧಸಿ ವೇತಸೀತರುತಲೇ ಚೇತಃ ಸಮುತ್ಕಂಠತೇ ॥

ಸುಭಾಷಿತ ಸಂಗ್ರಹಗಳಲ್ಲಿ ಅನೇಕರ ಹೆಸರಿನಲ್ಲಿ ಒಳ್ಳೆಯ ಪದ್ಯಗಳನ್ನು ಕಲೆಹಾಕಲಾಗಿದೆ. ಆ ಕವಿಗಳ ಮತ್ತು ಅವರ ಕಾವ್ಯಗಳ ವಿಚಾರ ದೊರೆಯುತ್ತಿಲ್ಲ. ಯಾರ ಪದ್ಯಗಳನ್ನೋ ಮತ್ತೆ ಯಾರ ಹೆಸರಿನಲ್ಲಿಯೋ ಸಂಗ್ರಹಿಸಿರುವುದೂ ಉಂಟು. ಅಜ್ಞಾತರ ಕಾವ್ಯಗಳೂ ಇವೆ. ಕೆಲವರು

ತಮಗೆ ರುಚಿಸಿದ ಇತರರ ಪದ್ಯಗಳನ್ನು ಆರಿಸಿಕೊಂಡು ತಮ್ಮ ಪದ್ಯಗಳನ್ನೂ ಸೇರಿಸಿರುವು
ದುಂಟು. ಹೀಗಾಗಿ ಹಲವು ಸುಂದರ ಪದ್ಯಗಳ ಕರ್ತೃಗಳೇ ಗೊತ್ತಿಲ್ಲ. ಈ ಪದ್ಯಗಳು ಶೃಂಗಾರ,
ನೀತಿ, ಧರ್ಮ, ವೈರಾಗ್ಯ, ಸ್ತೋತ್ರ, ಮೊದಲಾದ ವಿಷಯಗಳನ್ನೂ ಹೊಂದಿವೆ, ಅವುಗಳ
ಸ್ವರೂಪ ಪರಿಚಯಕ್ಕಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ :-

1. ಅಂಕುರಿತೇ ಪಲ್ಲವಿತೇ ಕೋರಕಿತೇ ವಿಕಸಿತೇ ಸಹಕಾರೇ ।
ಅಂಕುರಿತ ಃ ಪಲ್ಲವಿತ ಃ ಕೋರಕಿತೋ ವಿಕಸಿತಶ್ಚ ಮದನ ಃ ॥

2. ಉದಯಗಿರಿಸೌಧಶಿಖರೇ ತಾರಾಚಯಚಿತ್ರಿತಾಂಬರವಿತಾನೇ ।
ಸಿಂಹಾಸನಮಿವ ನಿಹಿತಂ ಚಂದ್ರ ಃ ಕಂದರ್ಪಭೂಪಸ್ಯ ॥

3. ಭೀಮೇನಾತ್ರ ವಿಜೃಂಭಿತಂ ಧನುರಿಹ ದ್ರೋಣೇನ ಮುಕ್ತಂ ಶುಚಾ
ಕರ್ಣಸ್ಯಾತ್ರ ಹಯಾ ಹೃತಾ ರಥಪತಿರ್ಭೀಷ್ಮೋತ್ರ ಯೋದ್ಧುಂ ಸ್ಥಿತ ಃ ।
ವಿಶ್ವಂ ರೂಪಮಿಹಾರ್ಜುನಸ್ಯ ಹರಿಣಾ ಸಂದರ್ಶಿತಂ ಕೌತುಕಾದು
ದ್ದೇಶಾ ತ ಇಮೇ ನ ತೇ ಸುಕೃತಿನ ಃ ಕಾಲೇಹಿ ಸರ್ವಂ ಕಷ ಃ ॥

## ದೂತಕಾವ್ಯಗಳು

ದೂತಕಾವ್ಯ ಅಥವಾ ಸಂದೇಶಕಾವ್ಯವು ಲಘುಕಾವ್ಯಗಳಲ್ಲಿ ಒಂದು ಚೇತೋಹಾರಿ ಪ್ರಕಾರ.
ಈ ಪ್ರಕಾರ ರಚನೆಗೆ ಪ್ರೇರಣೆ ಬಹಳ ಪ್ರಾಚೀನ. ಪಣಿಗಳ ಹತ್ತಿರಕ್ಕೆ ಸರಮೆಯು (ನಾಯಿ)
ದೂತಳಾಗಿ ಹೋದುದು ಋಗ್ವೇದದಲ್ಲಿದೆ. ಪುರಾಣ ಇತಿಹಾಸಗಳಲ್ಲಿಯೂ ದೂತವೃತ್ತಾಂತ
ಗಳಿವೆ. ವ್ಯವಹಾರಲೋಕದಲ್ಲಿಯೂ ಅಂದಿನಿಂದ ಇಂದಿನವರೆಗೆ ದೂತರ ಬಳಕೆ ಇದೆ.
ಶ್ರೀರಾಮನಿಗೆ ಹನುಮಂತನೂ, ಯುಧಿಷ್ಠಿರನಿಗೆ ಕೃಷ್ಣನೂ, ನಲನಿಗೆ ಹಂಸವೂ ದೂತರಾಗಿ
ಕಾರ್ಯನಿರ್ವಹಿಸಿದುದು ಪ್ರಸಿದ್ಧವಾಗಿದೆ. ರಾಮಾಯಣದಿಂದ ಪ್ರೇರಣೆಹೊಂದಿ ಕವಿಕುಲಗುರು
ವೆನಿಸಿದ ಕಾಳಿದಾಸನು ಮೊಟ್ಟಮೊದಲಿಗೆ ಮಂದಾಕ್ರಾಂತಾವೃತ್ತದಲ್ಲಿ ಮೇಘದೂತವೆಂಬ
ವಿರಹ ಶೃಂಗಾರದ ಸುಮಧುರ ಕಾವ್ಯವನ್ನು ರಚಿಸಿದನು. ಇದರ ಸೊಗಸು ಸೌಂದರ್ಯಗಳಿಂದ
ವ್ಯಾಮೋಹಿತರಾಗಿ ಹಲವರು ಇವನನ್ನನುಕರಿಸಿ ಮಂದಾಕ್ರಾಂತಾವೃತ್ತದಲ್ಲಿಯೇ ದೂತಕಾವ್ಯ
ಗಳನ್ನು ಬರೆದರು. ಕ್ರಮೇಣ ಶಿಖರಣೀ, ರಥೋದ್ಧತಾ, ಮಾಲಿನೀ ಮೊದಲಾದ ವೃತ್ತಗಳು
ಮಂದಾಕ್ರಾಂತಾವೃತ್ತದ ಸ್ಥಾನದಲ್ಲಿ ಬಳಕೆಗೆ ಬಂದವು. ಪ್ರಣಯನಿರೂಪಣೆಯಿಂದ ಪ್ರಾರಂಭ
ಗೊಂಡ ಈ ಕಾವ್ಯಪ್ರಕಾರದಲ್ಲಿ ಕ್ರಮೇಣ ಸಿದ್ಧಾಂತ, ಭಕ್ತಿ, ವಿಜ್ಞಾಪನೆ, ನೀತಿ, ಶಾಂತಿ
ಮೊದಲಾದುವುಗಳು ಪ್ರೇಮದ ಸ್ಥಾನವನ್ನಲಂಕರಿಸಿದವು. ಹೀಗೆ ಸಂಸ್ಕೃತ ಸಾಹಿತ್ಯದಲ್ಲಿ ಒಂದು
ದೂತಕಾವ್ಯಪರಂಪರೆಯೇ ಪ್ರಾರಂಭಗೊಂಡು ವಿಪುಲವೂ, ಸುಂದರವೂ ಆಗಿ ಬೆಳೆದಿದೆ.



### ಮೇಘದೂತ ( ಮೇಘಸಂದೇಶ ) :—

ಇದು ವರಕವಿ ಕಾಳಿದಾಸನ ಅಮರ ಭಾವಗೀತೆ. ಇದರ ಸುಮಧುರ ವಿರಹಭಾವ
ಹೃದಯದಾಳದಿಂದ ಚಿಮ್ಮಿ ಹರಿದು ವಾಚಕಲೋಕವನ್ನು ತನ್ಮಯಗೊಳಿಸುತ್ತದೆ. ಇಲ್ಲಿ
ದೊರೆಯುವ ಆನಂದ ವಿಗಲಿತವೇದ್ಯಾಂತರ. ಕವಿಯು ಬಳಸಿರುವ ಮಂದಾಕ್ರಾಂತಾವೃತ್ತವು
ವಿರಹಕ್ಕೆ ಗಾನರೂಪ ತಂದಿದೆ. ವಿರಹದಲ್ಲಿಯೂ ಅಚ್ಚಳಿಯದೆ ಉಳಿದಿರುವ ಪ್ರೇಮ ಅಮರ
ವಾದುದು. ಸಂಭೋಗಶೃಂಗಾರದಲ್ಲಿ ಕಾಣಿಸಿಕೊಳ್ಳಬಹುದಾದ ಲೋಲುಪತೆ, ಕಾಮುಕತೆಗಳ
ಸೋಂಕು ಇದಕ್ಕಿಲ್ಲ. ದಿವ್ಯಪ್ರೇಮದ ಮಧುರಸಂದೇಶವೇ ಮೇಘಸಂದೇಶ. ಒಂದು ವರ್ಷ
ಪ್ರಿಯಾವಿರಹವನ್ನನುಭವಿಸುವಂತೆ ಕುಬೇರನಿಂದ ಶಪಿತನಾದ ಯಕ್ಷನು ರಾಮಗಿರಿಗೆ ಬಂದು
ನೆಲಸಿದನು. ಹೇಗೋ ಕೆಲವು ತಿಂಗಳುಗಳನ್ನು ಕಳೆದನು. ಆಷಾಢಮಾಸದ ಮೊದಲ ಮೋಡ
ಕಾಣಿಸಿಕೊಂಡಿತ್ತು. ಆತನಕ ತಡೆಹಿಡಿದಿದ್ದ ಯಕ್ಷನ ಕಂಬನಿ ಧಾರೆಯಾಗಿ ಹರಿಯಿತು.
ನಿರ್ಜನಾರಣ್ಯದಲ್ಲಿ ಗತ್ಯಂತರವಿಲ್ಲದೆ ಅವನು ದೌತ್ಯಮಾಡುವಂತೆ ಅಚೇತನ ಮೇಘವನ್ನೇ
ಬೇಡಿಕೊಂಡು ಅಲಕೆಯಲ್ಲಿದ್ದ ಪ್ರೇಯಸಿಗೆ ಸಂದೇಶವನ್ನು ಕಳುಹಿಸಿದನು. ಇಷ್ಟೇ ಮೇಘ
ದೂತದ ವಸ್ತು. ವೈಣಿಕನು ಕಿರುತಂತಿಯಿಂದ ನಾದಪರಂಪರೆಯನ್ನು ಮೂಡಿಸುವಂತೆ ಕವಿಯು
ಈ ಅಲ್ಪವಸ್ತುವಿನಿಂದ ಅಪಾರ ಭಾವವನ್ನು ಮೂಡಿಸಿದ್ದಾನೆ. ಈ ಕಾವ್ಯದಲ್ಲಿ 120 ಪದ್ಯ
ಗಳಿದ್ದು ಮಂದಾಕ್ರಾಂತಾವೃತ್ತದಲ್ಲಿ ರಚಿತವಾಗಿದೆ. ಎರಡು ಸರ್ಗಗಳಿದ್ದು ಅವು ಪರಸ್ಪರ ಪೂರಕ
ವಾಗಿವೆ. ಅವನ್ನು ಪೂರ್ವಮೇಘ ಮತ್ತು ಉತ್ತರಮೇಘಗಳೆಂದು ಕರೆಯುವ ರೂಢಿಯಿದೆ.

ವಾಲ್ಮೀಕಿರಾಮಾಯಣದಲ್ಲಿ ವಿರಹಸಂತಪ್ತನಾದ ಶ್ರೀರಾಮನು ಲಂಕೆಯ ಅಶೋಕವನ
ದಲ್ಲಿದ್ದ ಸೀತೆಗೆ ಹನುಮಂತನ ಮೂಲಕ ಪ್ರಣಯಸಂದೇಶವನ್ನು ಕಳುಹಿಸುತ್ತಾನೆ. ವ್ಯಾಸ
ಭಾರತದಲ್ಲಿ ಅನುರಕ್ತನಾದ ನಳನು ಹಂಸದ ಮೂಲಕ ದಮಯಂತಿಗೆ ಪ್ರೇಮಸಂದೇಶವನ್ನು
ಕಳುಹಿಸುತ್ತಾನೆ. ಹಂಸ ಹನುಮಂತರು ಚೇತನರು, ಮೇಘಸಂದೇಶದ ದೂತ ಅಚೇತನ.
ಅಂತಹ ದೌತ್ಯವನ್ನು ಆಲಂಕಾರಿಕನಾದ ಭಾಮಹನು ತನ್ನ ಕಾವ್ಯಾಲಂಕಾರದಲ್ಲಿ 'ಅಯುಕ್ತಿಮತ್'
ಎಂದು ದೂಷಿಸಿದ್ದಾನೆ.[1] ಆದರೆ ಪ್ರೇಮಸಂದೇಶ ಕಳುಹಿಸಲು ಅಚೇತನ ಮೇಘವನ್ನು
ದೂತನನ್ನಾಗಿ ಮಾಡಿಕೊಂಡಿರುವ ಕಲ್ಪನೆಯು ವಿಶ್ವಸಾಹಿತ್ಯದಲ್ಲಿಯೇ ಅಪೂರ್ವವಾದುದು ;
ಹೃದಯಾವರ್ಜಕವಾದುದು. ಇದು ವಿರಹವ್ಯಥೆಯ ತೀಕ್ಷ್ಣತೆಯನ್ನು ಸಮರ್ಥವಾಗಿ ಧ್ವನಿಸು
ತ್ತದೆ. ಮಳೆಯಿಲ್ಲದೆ ಸೂರ್ಯತಾಪದಿಂದ ಕಡುಬಾಡಿದ ತರುಲತೆಗಳಿಗೆ ನೀರೆರೆದು ಸಂತೈಸುವ
ಮೇಘದ ಅನುಕಂಪ ಪ್ರಶಂಸನೀಯ ; ರಾಮಗಿರಿಯಿಂದ ಅಲಕೆಗೆ ಹೋಗುವ ಸಾಮರ್ಥ್ಯವೂ
ಅದಕ್ಕುಂಟು. ಆದ್ದರಿಂದ ಧನಪತಿಯ ಶಾಪದಿಂದ ಸಂತಪ್ತನಾದ ಯಕ್ಷನು ಮೇಘವನ್ನು

1. ಅಯುಕ್ತಿಮದ್ಯಥಾ ದೂತಾ ಜಲಭೃನ್ಮಾರುತೇಂದವಃ ।
ತಥಾ ಭ್ರಮರಹಾರೀತಚಕ್ರವಾಕ ಶುಕಾದಯಃ ॥
ಅವಾಚೋ ಯುಕ್ತವಾಚಶ್ಚ ದೂರದೇಶವಿಚಾರಿಣಃ ।
ಕಥಂ ದೂತ್ಯಂ ಪ್ರಪದ್ಯೇರನ್ನಿತಿ ಯುಕ್ತ್ಯಾನ್ಮ ಯುಜ್ಯತೇ ॥
—ಕಾವ್ಯಾಲಂಕಾರ, ಭಾಮಹ

ದೂತನನ್ನಾಗಿ ಮಾಡಿಕೊಂಡಿರುವುದರಲ್ಲಿ ಪೂರ್ಣ ಔಚಿತ್ಯವಿದೆ. ಅಲ್ಲದೆ ವಿರಹೋತ್ಕಂಠಿತನಲ್ಲಿ ಚೇತನಾಚೇತನ ಭೇದವಿರುವುದಿಲ್ಲ. ಕಾಳಿದಾಸನು ಕಾವ್ಯದ ಆರಂಭದಲ್ಲಿಯೇ 'ಕಾಮಾರ್ತಾ ಹಿ ಪ್ರಕೃತಿಕೃಪಣಾಶ್ಚೇತನಾಚೇತನೇಷು' ಎಂದು ಸಮರ್ಥಿಸಿದ್ದಾನೆ. ದೋಷವನ್ನು ಹೇಳಿದ ಭಾಮಹನೂ ಮುಂದೆ ಇದನ್ನು ಒಪ್ಪಿಕೊಂಡಿದ್ದಾನೆ.[1] ಕಾಳಿದಾಸನ ಈ ಕಲ್ಪನೆಯಿಂದ ಮಹಾಕವಿ ಭವಭೂತಿಯು ಪ್ರಭಾವಿತನಾಗಿದ್ದಾನೆ.[2] ಯಕ್ಷನ ವಿರಹವು ತಾತ್ಕಾಲಿಕ ; ಅಲಕೆಯ ವಿರಹಿಣಿಗೆ ವಿನಾಶವಿಲ್ಲ ; ಆದ್ದರಿಂದ ವಿರಹದ ಸಮರ್ಪಕ ಚಿತ್ರಣಕ್ಕೆ ಯಕ್ಷನು ಯೋಗ್ಯಪಾತ್ರನಲ್ಲವೆಂದು ಪ್ರಾರಂಭದಲ್ಲಿ ತೋರಬಹುದು. ಆದರೆ ದಿವ್ಯಸಂಸ್ಕಾರಸಂಪನ್ನನೂ, ಪೂರ್ಣ ಸೌಂದರ್ಯೋಪಾಸಕನೂ ಆದ ಆದರ್ಶಭಾರತೀಯನ ಪ್ರತಿನಿಧಿಯೇ ರಾಮಗಿರಿಯ ಯಕ್ಷ. ಧ್ವನಿಯು ಉತ್ತಮ ಕಾವ್ಯದ ಲಕ್ಷಣ.

ಹೃದಯಪ್ರೇಮವು ಸುಂದರ ಪ್ರಕೃತಿಯಲ್ಲಿ ಪ್ರತಿಬಿಂಬಿಸುತ್ತದೆ ; ಪ್ರಕೃತಿಸೌಂದರ್ಯವು ಹೃದಯದ ಪ್ರೇಮಕ್ಕೆ ಪುಟ ಕೊಡುತ್ತದೆ. ಪ್ರಕೃತಿಯು ಉದಾಸೀನವಾಗಿ ದೂರ ನಿಲ್ಲದೆ ಮಾನವನ ಬಾಳಿನಲ್ಲಿ ಪಾಲ್ಗೊಳ್ಳುತ್ತದೆ ; ಸುಖದುಃಖಗಳನ್ನು ಹಂಚಿಕೊಳ್ಳುತ್ತದೆ. ಈ ತತ್ತ್ವವನ್ನು ಮನಗಂಡ ಕಾಳಿದಾಸನು ತನ್ನ ಕಾವ್ಯಗಳಲ್ಲಿ ಪ್ರಕೃತಿಯನ್ನು ಮಾನವಸಂಗಾತಿಯನ್ನಾಗಿ ವರ್ಣಿಸಿದ್ದಾನೆ. ಕವಿಯ ಶಾಕುಂತಲದಲ್ಲಿ ತರು, ಲತೆ, ಹರಿಣಿಗಳ ಸಹಕಾರ, ಮೈತ್ರಿಗಳನ್ನು ನೋಡಬಹುದು. ಕಾಳಿದಾಸನು ಅಂತರಂಗಸೌಂದರ್ಯಚಿತ್ರಣದಲ್ಲಿ ಎಷ್ಟು ಸಮರ್ಥನೋ, ಬಾಹ್ಯಪ್ರಕೃತಿ ಸೌಂದರ್ಯಚಿತ್ರಣದಲ್ಲಿಯೂ ಅಷ್ಟೇ ಸಮರ್ಥ. ಹೃದಯದಲ್ಲಿ ಮೂಡುವ ಭಾವನೆಗಳನ್ನೂ ಪ್ರಕೃತಿಯಲ್ಲಿ ಕಾಣುವ ಸೌಂದರ್ಯವನ್ನೂ ಇವನು ಹೃದಯಂಗಮವಾಗಿ ವರ್ಣಿಸಬಲ್ಲ. ಋತು ಸಂಹಾರದಲ್ಲಿ ಪ್ರಕೃತಿಯ ವರ್ಣನೆ ಪ್ರಧಾನ ; ಮೇಘದೂತದಲ್ಲಿ ಹೃದಯದ ಭಾವಚಿತ್ರಣ ಪ್ರಧಾನ. ಪೂರ್ವಮೇಘದಲ್ಲಿ ಪ್ರಕೃತಿವರ್ಣನೆಯೂ, ಉತ್ತರ ಮೇಘದಲ್ಲಿ ಪ್ರಣಯ ನಿರೂಪಣೆಯೂ ಇವೆ.

ಶಾಪಕ್ಕೆ ತುತ್ತಾಗಿ ರಾಮಗಿರಿಯಲ್ಲಿ ಮಾನವನಂತ ವಾಸಿಸುತ್ತಿದ್ದರೂ ಯಕ್ಷನು ಪೂರ್ವ ವಾಸನೆಯನ್ನು ಕಳೆದುಕೊಂಡಿಲ್ಲ. ಅಲಕೆಯಲ್ಲಿದ್ದ ಪ್ರಿಯತಮೆಯನ್ನು ನೆನೆದು ಕಣ್ಣೀರು ಸುರಿಸಿದನು. ಸಂದೇಶವನ್ನಾದರೂ ಕಳುಹಿಸಲು ಯೋಚಿಸಿದನು. ಆದರೆ ಕಳುಹಿಸುವುದು ಹೇಗೆ? ಉತ್ತರಾಭಿಮುಖವಾಗಿ ಹೋಗುತ್ತಿದ್ದ ಮೇಘವನ್ನು ಕಂಡು, ಆದರಿಸಿ, ತನ್ನ ಸಂದೇಶವನ್ನು ಮುಟ್ಟಿಸುವಂತೆ ಬೇಡಿಕೊಂಡನು. ರಾಮಗಿರಿಯಿಂದ ಅಲಕಾಪುರಿಯವರೆಗಿನ ನದಿ ಗಿರಿ ನಗರಗಳನ್ನೆಲ್ಲಾ ಪರಿಚಯಮಾಡಿಕೊಟ್ಟನು. ಸಹಯಾತ್ರಿಕರನ್ನೂ, ಮಾರ್ಗದರ್ಶಕರನ್ನೂ, ದೊರೆಯುವ

---

1. ಯದಿ ಚೋತ್ಕಂಠಯಾ ಯತ್ತದುನ್ಮತ್ತ ಇವ ಭಾಷತೇ ।
ತಥಾ ಭವತು ಭೂಮ್ನೇದಂ ಸುಮೇಧೋಭಿಃ ಪ್ರಯುಜ್ಯತೇ ॥

2. ದೈವಾತ್ಪಶ್ಯೇರ್ಜಗತಿ ವಿಚರನ್ನಿಚ್ಛಯಾ ಮತ್ಪ್ರಿಯಾಂ, ಚೇತ್ ।
ಆಶ್ವಾಸ್ಯಾದೌ ತದನು ಕಥಯೇ ಮಾಧವೀಯಾಮವಸ್ಥಾಮ್ ॥

ಮಾಲತಿಮಾಧವ—ಭವಭೂತಿ



ಆನಂದವನ್ನೂ ತಿಳಿಸಿದನು. ಆಮ್ರಕೂಟ ಪರ್ವತ, ಭೋರ್ಗರೆಯುವ ನರ್ಮದೆ. ದಶಾರ್ಣ ದೇಶದ ನೇತ್ರವತೀ, ವಿದಿಶಾಪಟ್ಟಣ, ನಿರ್ವಿಂಧ್ಯ, ಸಿಪ್ರಾತೀರದ ಉಜ್ಜಯಿನೀ, ಗಂಭೀರಾ ಚರ್ಮಣ್ವತೀ, ಸರಸ್ವತೀ, ಗಂಗಾ, ದೇವಗಿರಿ, ಕುರುಕ್ಷೇತ್ರ, ಕೈಲಾಸ, ಅಲಕಾಪಟ್ಟಣ ಹೀಗೆ ಎಲ್ಲವನ್ನೂ ಪರಿಚಯ ಮಾಡಿಕೊಡುತ್ತಾನೆ. ಮೇಘದಂತೆ ಕವಿಯ ಕಲ್ಪನೆಯೂ ಭೂಲೋಕದಿಂದ ಯಕ್ಷಲೋಕಕ್ಕೆ ಏರುತ್ತದೆ. ಇದು ಪೂರ್ವಮೇಘದ ಸಂಗ್ರಹ. ದಾರಿಗೆ ಕೊಂಚದೂರವಾದರೂ ಮರೆಯಂದೆ ಉಜ್ಜಯಿನಿಯನ್ನು ನೋಡು :—

ವಕ್ರಃ ಪಂಥಾಸ್ತವ ಭವತು ಚ ಪ್ರಸ್ಥಿತಸ್ಯೋತ್ತರಾಶಾಮ್
ಸೌಧೋತ್ಸಂಗಪ್ರಣಯವಿಮುಖೋ ಮಾ ಚ ಭೂರುಜ್ಜಯಿನ್ಯಾಃ ।
ವಿದ್ಯುದ್ದಾಮಸ್ಫುರಿತಚಕಿತೈಸ್ತತ್ರ ಪೌರಾಂಗನಾನಾಮ್
ಲೋಲಾಪಾಂಗೈರ್ಯದಿ ನ ರಮಸೇ ಲೋಚನೈರ್ವಂಚಿತೋಽಸಿ ॥

ಹಿಮಾಲಯವನ್ನು ಪರಿಚಯಮಾಡಿಕೊಡುವಾಗ ಕವಿಹೃದಯ ಭಕ್ತಿಯಿಂದ ತುಂಬುತ್ತದೆ :—

ತತ್ರ ವ್ಯಕ್ತಂ ದೃಶದಿ ಚರಣನ್ಯಾಸಮರ್ಧೇಂದುಮೌಲೇಃ
ಶಶ್ವತ್ಸಿದ್ಧೈರುಪಚಿತಬಲಿಂ ಭಕ್ತಿನಮ್ರಃ ಪರೀಯಾಃ ।
ಯಸ್ಮಿನ್ ದೃಷ್ಟೇ ಕರಣವಿಗಮಾದೂರ್ಧ್ವಮುದ್ಧೂತಪಾಪಾಃ
ಕಲ್ಪಂತೇಽಸ್ಯ ಸ್ಥಿರಗಣಪದಪ್ರಾಪ್ತಯೇ ಶ್ರದ್ದಧಾನಾಃ ॥

ಮಂದಾಕಿನೀತೀರವು ಅತೀವ ರಮಣೀಯ :—

ಮಂದಾಕಿನ್ಯಾಸ್ಸಲಿಲಶಿಶಿರೈಸ್ಸೇವ್ಯಮಾನಾ ಮರುದ್ಭಿ-
ರ್ಮಂದಾರಾಣಾಮನುತಟರುಹಾಂ ಛಾಯಯಾ ವಾರಿತೋಷ್ಣಾಃ ॥
ಅನ್ವೇಷ್ಟವ್ಯೈಃ ಕನಕಸಿಕತಾಮುಷ್ಟಿನಿಕ್ಷೇಪಗೂಢೈಃ
ಸಂಕ್ರೀಡಂತೇ ಮಣಿಭಿರಮರಪ್ರಾರ್ಥಿತಾ ಯತ್ರ ಕನ್ಯಾಃ ॥

ಇದು ಯಕ್ಷನ ಮನೆಯ ಪರಿಚಯ :—

ತನ್ಮಧ್ಯೇ ಚ ಸ್ಫಟಿಕಫಲಕಾ ಕಾಂಚನೀ ವಾಸಯಷ್ಟಿ-
ರ್ಮೂಲೇ ಬದ್ಧಾ ಮಣಿಭಿರನತಿಪ್ರೌಢವಂಶಪ್ರಕಾಶೈಃ ।
ತಾಲೈಶ್ಶಿಂಜಾವಲಯಸುಭಗೈರ್ನರ್ತಿತಃ ಕಾಂತಯಾ ಮೇ
ಯಾಮಧ್ಯಾಸ್ತೇ ದಿವಸವಿಗಮೇ ನೀಲಕಂಠಸ್ಸುಹೃದ್ವಃ ॥
ಏಭಿಸ್ಸಾಧೋ ! ಹೃದಯನಿಹಿತೈರ್ಲಕ್ಷಣೈರ್ಲಕ್ಷಯೇಥಾಃ
ದ್ವಾರೋಪಾಂತೇ ಲಿಖಿತವಪುಷೌ ಶಂಖಪದ್ಮೌ ಚ ದೃಷ್ಟ್ವಾ ।

ಯಕ್ಷನು ತನ್ನ ಪ್ರೇಯಸಿಯ ಸೌಂದರ್ಯವನ್ನು ಮತ್ತೆಲ್ಲಿಯೂ ನೋಡಲಾರ :—

ಶ್ಯಾಮಾಸ್ವಂಗಂ ಚಕಿತಹರಿಣೀಪ್ರೇಕ್ಷಣೇ ದೃಷ್ಟಿಪಾತಮ್
ವಕ್ತ್ರಚ್ಛಾಯಾಂ ಶಶಿನಿ ಶಿಖಿನಾಂ ಬರ್ಹಭಾರೇಷು ಕೇಶಾನ್ ।
ಉತ್ಪಶ್ಯಾಮಿ ಪ್ರತನುಷು ನದೀವೀಚಿಷು ಭ್ರೂವಿಲಾಸಾನ್
ಹಂತೈಕಸ್ಮಿನ್ ಕ್ವಚಿದಪಿ ನ ತೇ ಚಂಡಿ ಸಾದೃಶ್ಯಮಸ್ತಿ ॥

ಉತ್ತರಮೇಘದಲ್ಲಿರುವ ಯಕ್ಷನ ಸಂದೇಶವು ಹೃದಯಸ್ಪರ್ಶಿಯಾಗಿದೆ, 'ಅವ್ಯಾಪನ್ನಃ ಕುಶಲಮಬಲೇ ! ಪೃಚ್ಛತಿ ತ್ವಾಂ ವಿಯುಕ್ತಾಂ'—ಇದು ಅವನು ಕುಶಲವನ್ನು ವಿಚಾರಿಸುವ ರೀತಿ. ಪ್ರೇಯಸಿಯೇ ಹೆದರಬೇಡ, 'ಕಸ್ಯಾತ್ಯಂತಂ ಸುಖಮುಪನತಂ ದುಃಖಮೇಕಾಂತತೋ ವಾ ! ನೀಚೈರ್ಗಚ್ಛತ್ಯುಪರಿಚ ದಶಾ ಚಕ್ರನೇಮಿಕ್ರಮೇಣ'[1] ಎಂದು ಸಮಾಧಾನ ಹೇಳುತ್ತಾನೆ. ಕಣ್ಣು ಮುಚ್ಚಿಕೊಂಡು ಕೆಲವು ತಿಂಗಳುಗಳನ್ನು ತಳ್ಳು, ನಂತರ ಸುಖವನ್ನು ಯಥೇಚ್ಛವಾಗಿ ಭೋಗಿಸೋಣ ಎಂದು ಭರವಸೆ ನೀಡುತ್ತಾನೆ. ಕಾವ್ಯದ ಕೊನೆಯಲ್ಲಿ ಯಕ್ಷನು ಮೇಘಕ್ಕೆ ಶುಭಕೋರುತ್ತಾನೆ—

ಇಷ್ಟಾನ್ ದೇಶಾನ್ ಜಲದ ! ವಿಚರ ಪ್ರಾವೃಷಾ ಸಂಭೃತಶ್ರೀ
ರ್ಮಾ ಭೂದೇವಂ ಕ್ಷಣಮಪಿ ಚ ತೇ ವಿದ್ಯುತಾ ವಿಪ್ರಯೋಗಃ ।

ವಾಲ್ಮೀಕಿ ರಾಮಾಯಣದ ಹನುಮಂತನ ದೌತ್ಯದಿಂದ ಪ್ರಭಾವಿತನಾಗಿ ಕಾಳಿದಾಸನು ಪ್ರಾಯಶಃ ಮೇಘದೂತವನ್ನು ಬರೆದಿದ್ದಾನೆ, 'ಇತ್ಯಾಖ್ಯಾತೇ ಪವನತನಯೇ ಮೈಥಿಲೀವೋನ್ಮುಖೀ ಸಾ'[2]—ಈ ಹೋಲಿಕೆ ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ಕೊಡುತ್ತದೆ. ಅಲ್ಲದೆ ವಿಶ್ವಾಸ ಹುಟ್ಟಿಸಲು ಹೇಳುವ ಮಾತು ಮತ್ತು ಸಂದೇಶಗಳಲ್ಲಿಯೂ ಸಾದೃಶ್ಯವು ಕಾಣಿಸುತ್ತದೆ.

ಸಂಭೋಗಶೃಂಗಾರಕ್ಕಿಂತಲೂ ವಿಪ್ರಲಂಭಶೃಂಗಾರ ಸತ್ವಯುತವಾದುದು. ಕಹಿಯನ್ನು ತಿಂದವನಿಗೆ ಸಿಹಿಯು ಹೆಚ್ಚು ಆಸ್ವಾದ್ಯವಾಗುತ್ತದೆ. ಬಿಸಿಲಿನಿಂದ ಬಂದವನಿಗೆ ನೆರಳು ಹೆಚ್ಚು ಪ್ರಿಯ. ದುಃಖದ ಮೂಸೆಯಲ್ಲಿ ಕಾಲುಷ್ಯ ಕಳೆದುಕೊಂಡರೆ ಪ್ರೇಮಕ್ಕೆ ಅಮರಪದವಿ. ಕಾಳಿದಾಸನು ನಿಷ್ಕಳಂಕಪ್ರೇಮದ ಸವಿಯನ್ನು ಲೋಕಕ್ಕೆ ಈ ಕಾವ್ಯದ ಮೂಲಕ ಒದಗಿಸಿದ್ದಾನೆ. ಇದೊಂದು ರಸದ ಚಿಲುಮೆ. ಶೈಲಿಯು ಸರಳವೂ ಆಗಿದೆ; ರಚನೆಯಲ್ಲಿ ಒಳ್ಳೆಯ ಓಟವಿದೆ ; ಭಾಷೆಯಲ್ಲಿ ಕಾಠಿಣ್ಯವಿಲ್ಲ ; ಭಾವ ಬಂಧುರವಾಗಿದೆ; ವರ್ಣನೆಗಳು ಮನೋಜ್ಞವಾಗಿವೆ. ವಿರಹವರ್ಣನೆಗೆ ಮಂದಾಕ್ರಾಂತಾವೃತ್ತವು ಒಪ್ಪುತ್ತದೆ. ದೂತಕಾವ್ಯಗಳನ್ನು ಬರೆದಿರುವ ಬಹಳ ಕವಿಗಳು ಈ ವೃತ್ತವನ್ನೇ ಆಯ್ದುಕೊಂಡಿದ್ದಾರೆ. ಕಾಳಿದಾಸನ ಪ್ರತಿಭೆ ಈ ಕಾವ್ಯದಲ್ಲಿ ಪರಿಪಕ್ವಗೊಂಡಿದೆ.

ದಕ್ಷಿಣಾವತ, ಪೂರ್ಣಸರಸ್ವತಿ, ಮಲ್ಲಿನಾಥ ಮೊದಲಾದವರು ಮೇಘದೂತಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ನಲ್ವತ್ತಕ್ಕೂ ಮಿಗಿಲಾಗಿ ವ್ಯಾಖ್ಯಾನಗಳಿವೆ. ಅಜ್ಞಾತರ ಕೆಲವು ವ್ಯಾಖ್ಯಾನಗಳೂ ಇವೆ. ಆರ್. ಕೃಷ್ಣಮಾಚಾರ್ಯರು ಮೇಘಸಂದೇಶವಿಮರ್ಶೆಯೆಂಬ ಒಂದು ಉತ್ತಮ ವಿಮರ್ಶೆಯನ್ನು ಬರೆದಿದ್ದಾರೆ. ಲೆಕ್ಕವಿಲ್ಲದಷ್ಟು ಸಣ್ಣಪುಟ್ಟ ವಿಮರ್ಶೆಗಳಿವೆ.

---

1. ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।
ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ ವಾ.—ರಾಮಾಯಣ.
2. ಮೇಘದೂತ.



ದೂತಕಾವ್ಯದಲ್ಲಿ ವಿರಹಶೃಂಗಾರಕ್ಕೆ ಕಾಳಿದಾಸನು ಬಳಸಿರುವ ಮಂದಾಕ್ರಾಂತಾವೃತ್ತವು ಬಹಳ ಕವಿಗಳನ್ನು ಆಕರ್ಷಿಸಿದೆ. ಭವಭೂತಿಯು ಮಾಲತೀಮಾಧವದಲ್ಲಿ ಪ್ರಣಯಸಂದೇಶಕ್ಕೆ ಈ ವೃತ್ತವನ್ನೇ ಬಳಸಿದ್ದಾನೆ[1]. ಇದರ ಲಕ್ಷಣ :—'ಮಂದಾಕ್ರಾಂತಾ ಜಲಧಿಷಡಗೈರ್ಮ್ಭೌ ನತೌ ತಾದ್ಗುರೂ ಚೇತ್.' ಕವಿಲೋಕದ ಮೇಲಿರುವ ಮೇಘದೂತದ ಪ್ರಭಾವ ಅಪಾರವಾದುದು. ವಸ್ತು, ಛಂದಸ್ಸು, ಸ್ವರೂಪಗಳನ್ನೂ ಹಲವರು ಅನುಕರಣೆ ಮಾಡಿದ್ದಾರೆ. ಕೆಲವರು ಮೇಘದೂತದ ಎಲ್ಲಾ ಪಾದಗಳನ್ನೂ ತೆಗೆದುಕೊಂಡು ಸಮಸ್ಯಾಪೂರಣ ಕ್ರಮದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಮತ್ತೆ ಕೆಲವರು ಪ್ರತಿಪದ್ಯದ ಅಂತಿಮ ಚರಣವನ್ನು ತೆಗೆದುಕೊಂಡು ಸಮಸ್ಯಾಪೂರಣ ವಿಧಾನದಲ್ಲಿ ಕಾವ್ಯಗಳನ್ನು ಬರೆದಿದ್ದಾರೆ. ಅನೇಕ ಜೈನಕವಿಗಳು ಮೇಘದೂತವನ್ನನುಕರಿಸಿ ಜೈನತತ್ತ್ವ ಬೋಧಿಸುವ ಶಾಂತರಸಪ್ರಾಧಾನ್ಯವಾದ ದೂತಕಾವ್ಯಗಳನ್ನು ವಿರಚಿಸಿದ್ದಾರೆ.

**ಪಾರ್ಶ್ವಾಭ್ಯುದಯ :—**

ಆಚಾರ್ಯ ಜಿನಸೇನನು (ಕ್ರಿ. ಶ. 9 ನೆಯ ಶತಮಾನ) ಮಂದಾಕ್ರಾಂತಾವೃತ್ತದಲ್ಲಿ ರಚಿತವಾದ **364** ಪದ್ಯಗಳನ್ನುಳ್ಳ ಈ ಕಾವ್ಯದಲ್ಲಿ ಪಾರ್ಶ್ವನಾಥನ ಜೀವನಚರಿತ್ರೆಯನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಪ್ರತಿ ಪದ್ಯದಲ್ಲಿಯೂ ಮೇಘದೂತದ ಒಂದು ಅಥವಾ ಎರಡು ಪಾದಗಳಿದ್ದು ಸಮಸ್ಯಾಪೂರಣಕ್ರಮದಲ್ಲಿ ಶೃಂಗಾರರಸಾತ್ಮಕ ಮೇಘದೂತವು ಶಾಂತರಸ ಸ್ವರೂಪದ ಪಾರ್ಶ್ವಾಭ್ಯುದಯವಾಗಿ ಪರಿಣಮಿಸಿದೆ ; ಅಥವಾ ಮೇಘದೂತವೇ ಹಿಗ್ಗಿ ಪಾರ್ಶ್ವಾಭ್ಯುದಯವಾಗಿದೆ. ಪ್ರಾಧ್ಯಾಪಕ ॥ ಕೆ. ಬಿ. ಪಾಠಕರು ಇದರ ಆಧಾರದ ಮೇಲೆ ಮೇಘದೂತದ ಒಂದು ಸುಂದರ ಸಂಸ್ಕರಣವನ್ನು ಪ್ರಕಾಶಗೊಳಿಸಿದ್ದಾರೆ. ಜಿನಸೇನನ ಸಾಧನೆಯಿಂದ ಸ್ಫೂರ್ತಿ ಪಡೆದ ಅನೇಕ ಜೈನಕವಿಗಳು ಇದೇ ಮಾದರಿಯಲ್ಲಿ ದೂತಕಾವ್ಯಗಳನ್ನು ಬರೆದಿದ್ದಾರೆ. ನೇಮಿದೂತ, ಶೀಲದೂತ, ಚಂದ್ರದೂತ, ಮೇಘದೂತಸಮಸ್ಯಾಲೇಖ, ಸಿದ್ಧದೂತ, ಹನುಮದ್ದೂತ, ಕಾಕದೂತ, ಭ್ರಮರದೂತ—ಇತ್ಯಾದಿ ಮೇಘದೂತಕಾವ್ಯದ ಅನುಕರಣಕಾವ್ಯಗಳು ವಿಪುಲವಾಗಿ ದೊರೆತಿವೆ.

ಮೇಘದೂತದ "ಇಷ್ಟಾನ್ ದೇಶಾನ್ ಜಲದ ! ವಿಚರ" ಎಂಬ ನಿರ್ದೇಶನದಿಂದ ಪ್ರೇರಣೆಗೊಂಡು ಸರ್ವಶಾಸ್ತ್ರಿಯ ಮಗನಾದ ಕೃಷ್ಣಮೂರ್ತಿಯು (ಕ್ರಿ.ಶ. 17ನೆಯ ಶತಮಾನ) ಯಕ್ಷೋಲ್ಲಾಸವೆಂಬ ಕಾವ್ಯವನ್ನು ಬರೆದಿದ್ದಾನೆ. ಅಭಿನವ ಕಾಳಿದಾಸನೆಂದು ತನ್ನನ್ನು ಕರೆದುಕೊಂಡಿರುವ ಇವನು ಮದನಾಭ್ಯುದಯವೆಂಬ ಭಾಣವನ್ನೂ ಬರೆದಿದ್ದಾನೆ. ಹೀಗೆಯೇ ಮಂಡಿಕಲ್ ರಾಮಶಾಸ್ತ್ರಿಯು ಮೇಘಪ್ರತಿಸಂದೇಶವನ್ನೂ, ಕೋರದ ರಾಮಚಂದ್ರನು ಘನವೃತ್ತವನ್ನೂ, ಮಹಾಮಹೋಪಾಧ್ಯಾಯ ಪರಮೇಶ್ವರ ಝಾ "ಯಕ್ಷಮಿಲನ" ಕಾವ್ಯವನ್ನೂ ಬರೆದಿದ್ದಾರೆ.

---

1. ಮಾಲತೀಮಾಧವ—ಅಂಕ 6, ಶ್ಲೋಕ 25-26.

**ಘಟಕರ್ಪರ :—**

ಇದೊಂದು ಇಪ್ಪತ್ತೆರಡು ಶ್ಲೋಕಗಳನ್ನುಳ್ಳ ಪ್ರಣಯಗೀತೆ. ಇದನ್ನು ಕಾಳಿದಾಸನೇ ಬರೆದನೆಂದು ಕೆಲವರೂ, ಘಟಕರ್ಪರನೆಂಬ ಒಬ್ಬ ಕವಿಯೇ ಇದ್ದನೆಂದು ಮತ್ತೆ ಕೆಲವರೂ ಹೇಳುತ್ತಾರೆ. ಘಟಕರ್ಪರನು ವಿಕ್ರಮಾದಿತ್ಯನ ನವರತ್ನಗಳಲ್ಲೊಬ್ಬನೆಂದೂ, ಕಾಳಿದಾಸನ ಸಮಕಾಲೀನನೆಂದೂ ಪ್ರವಾದವಿದೆ. ಕಾವ್ಯದ ಕೊನೆಯಲ್ಲಿ ಕವಿಯು ಈ ಪ್ರತಿಜ್ಞೆಯನ್ನು ಮಾಡಿದ್ದಾನೆ :—

ಆಲಂಬ್ಯ ಚಾಂಬು ತೃಷಿತಃ ಕರಕೋಶಪೇಯಂ
ಭಾವಾನುರಕ್ತವನಿತಾಸುರತೈಃ ಶಪೇಯಮ್ ।
ಜೀಯೇಯ ಯೇನ ಕವಿನಾ ಯಮಕೈಃ ಪರೇಣ
ತಸ್ಮೈ ವಹೇಯಮುದಕಂ ಘಟಕರ್ಪರೇಣ ॥

ಯಮಕಪ್ರಯೋಗದಲ್ಲಿ ತನ್ನನ್ನು ಮೀರಿಸುವ ಕವಿಗೆ ಘಟಕರ್ಪರದಿಂದ (ಗಡಿಗೆಯ ಚೂರಿನಿಂದ) ನೀರನ್ನು ಹೊತ್ತು ಹಾಕುತ್ತೇನೆಂಬ ಕವಿಯ ಈ ಶಪಥದಿಂದ ಕಾವ್ಯಕ್ಕೆ ಘಟಕರ್ಪರವೆಂಬ ಹೆಸರು ಬಂದಿದೆ. ಇದರಿಂದಲೇ ಈ ಕಾವ್ಯದ ಕವಿಯೂ ಘಟಕರ್ಪರನೆಂದು ಪ್ರಸಿದ್ಧಿಗೆ ಬಂದಿರಬೇಕು. ವಿರಹಿಣಿಯಾದ ತರುಣಿಯು ತನ್ನ ದುಃಖವನ್ನು ಮೇಘದ ಮೂಲಕ ದೂರದೇಶದಲ್ಲಿರುವ ಪ್ರಿಯತಮನಲ್ಲಿ ತೋಡಿಕೊಳ್ಳುತ್ತಾಳೆ. ಮೇಘದೂತದಂತೆ ಇಲ್ಲಿಯೂ ಮೇಘವೇ ಪ್ರಣಯ ಸಂದೇಶಹರ ; ಆದರೆ ಪ್ರಣಯ ಕಳುಹಿಸುವವಳು ನಾಯಿಕೆ. ಪ್ರತಿಯೊಂದು ಶ್ಲೋಕದಲ್ಲಿಯೂ ಯಮಕಾಲಂಕಾರವಿದ್ದು, ಅದರ ಸೊಗಸು ಹೃದಯಂಗಮವಾಗಿದೆ. ರಥೋದ್ಧತಾ, ವಸಂತತಿಲಕಾ ಮುಂತಾದ ವೃತ್ತಗಳನ್ನು ಬಳಸಿಕೊಳ್ಳಲಾಗಿದೆ. ಬಹಳ ಶ್ಲೋಕಗಳು (14) ರಥೋದ್ಧತಾವೃತ್ತದಲ್ಲಿವೆ.

ಮಳೆಗಾಲದ ವರ್ಣನೆಯಿಂದ ಕಾವ್ಯವು ಪ್ರಾರಂಭವಾಗುತ್ತದೆ. ಇದು ಮಳೆಗಾಲವನ್ನು ಚಿತ್ರಿಸುವ ಒಂದು ಶ್ಲೋಕ :—

ಹಂಸಾ ನದನ್ಮೇಘಭಯಾದ್ ದ್ರವಂತಿ
ನಿಶಾಮುಖಾನ್ಯದ್ಯ ನ ಚಂದ್ರವಂತಿ ।
ನವಾಂಬುಮತ್ತಾಃ ಶಿಖಿನೋ ನದಂತಿ
ಮೇಘಾಗಮೇ ಕುಂದಸಮಾನದಂತಿ ॥

ಅವಳು ವೇಗವಾಗಿ ಹೋಗಬಲ್ಲ ಮೇಘಗಳನ್ನು ತನ್ನ ಪ್ರಿಯನಿಗೆ ಸಂದೇಶ ತಲುಪಿಸುವಂತೆ ಕೇಳಿಕೊಳ್ಳುತ್ತಾಳೆ. ಪಾದಾಂತಯಮಕವನ್ನುಳ್ಳ ಈ ಶ್ಲೋಕ ಅವಳ ಸಂದೇಶವನ್ನು ತಿಳಿಸುತ್ತದೆ :—

ಹಂಸಪಂಕ್ತಿರಪಿ ನಾಥ ! ಸಂಪ್ರತಿ
ಪ್ರಸ್ಥಿತಾ ವಿಯತಿ ಮಾನಸಂ ಪ್ರತಿ ।
ಚಾತಕೋಽಪಿ ತೃಷಿತೋಽಂಬು ಯಾಚತೇ
ದುಃಖಿತಾ ಪಥಿಕ ! ಸಾ ಪ್ರಿಯಾ ಚ ತೇ ॥



ಇದು ಅವಳು ವಿರಹ ದುಃಖವನ್ನು ತೋಡಿಕೊಂಡಿರುವ ಬಗೆ :—

ನವಕದಂಬ ! ಶಿರೋಽವನತಾಸ್ಮಿ ತೇ
ವಸತಿ ಯನ್ಮದನಃ ಕುಸುಮೇಷ್ವಿತೇ ।
ಕುಟಜ ! ಕಿಂ ಕುಸುಮೈರುಪಹಸ್ಯತೇ
ನಿಪತಿತಾಸ್ಮಿ ಸುದುಃಪ್ರಸಹಸ್ಯ ತೇ ॥

ಈ ಕಾವ್ಯಕ್ಕೆ ವಿದ್ವಾಂಸರ ಹೆಚ್ಚು ಮನ್ನಣೆಯಿದೆ. ಅಭಿನವಗುಪ್ತ, ಭರತಮಲ್ಲಿಕ, ಶಂಕರ ತಾರಾಚಂದ್ರ, ಜೀವಾನಂದ, ಗೋವರ್ಧನ, ಕಮಲಾಕರ, ಕುಶಲಕವಿ, ವೈದ್ಯನಾಥ, ವಿಂಧ್ಯೇಶ್ವರೀಪ್ರಸಾದ ಮೊದಲಾದವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಮದನನು, (ಕ್ರಿ. ಶ. 1624) ಪ್ರತಿ ಶ್ಲೋಕದಲ್ಲಿಯೂ ಘಟಕರ್ಪರದ ಪಾದಗಳನ್ನು ಬಳಸಿಕೊಂಡು ಸಮಸ್ಯಾಪೂರಣ ವಿಧಾನದಲ್ಲಿ ಕೃಷ್ಣಲೀಲಾ ಎಂಬ ಕಾವ್ಯವನ್ನು ಬರೆದಿದ್ದಾನೆ. ಈ ಕಾವ್ಯದಿಂದ ಇಡೀ ಘಟಕರ್ಪರ ದೊರೆಯುತ್ತದೆ.

**ಚಂದ್ರದೂತ :—**

ಮೇಘದೂತದ ಅನುಕರಣೆಯಲ್ಲಿ ರಚಿತವಾದ ದೂತಕಾವ್ಯಗಳಲ್ಲಿ ಜಂಬೂಕವಿಯ ಚಂದ್ರದೂತವು ಪ್ರಾಚೀನವೆಂಬ ಅಭಿಪ್ರಾಯವಿದೆ. ಇದು ಅಸಮಗ್ರವಾಗಿ ದೊರೆತಿದೆ[1]. ದೊರೆತಿರುವ ಭಾಗದ ಹಲವು ಶ್ಲೋಕಗಳು ಜೀರ್ಣವಾಗಿಹೋಗಿವೆ. ಹಸ್ತಪ್ರತಿ ಕಾಲ ಕ್ರಿ.ಶ. 1286. ಟೀಕಾಕಾರ ಶಾಂತಿಸೂರಿಯ ಕಾಲ 11ನೆಯ ಶತಮಾನ. ಆದ್ದರಿಂದ ಕವಿಯ ಕಾಲ 10ನೆಯ ಶತಮಾನವಾಗಿರಬಹುದು. ವಿರಹಿಣಿಯು ಚಂದ್ರನ ಮೂಲಕ ಸಂದೇಶವನ್ನು ತನ್ನ ಪ್ರಿಯಕರನಿಗೆ ಕಳುಹಿಸುವುದು ಇದರ ವಸ್ತು. ಶ್ಲೋಕಗಳು ಮಾಲಿನೀವೃತ್ತದಲ್ಲಿದ್ದು ಅಂತ್ಯಯಮಕವನ್ನು ಹೊಂದಿವೆ. ಪ್ರತಿಭೆಗಿಂತ ಪಾಂಡಿತ್ಯ ಮೇಲಾಗಿದೆ. ಕೃಷ್ಣಚಂದ್ರನ ಹೆಸರಿನಲ್ಲಿ ಮತ್ತೊಂದು ಚಂದ್ರದೂತವಿದೆ.

**ಪವನದೂತ :—**

ಬಂಗಾಳದ ದೊರೆ ಲಕ್ಷ್ಮಣಸೇನನ ಆಸ್ಥಾನಕವಿಯಾಗಿದ್ದ ಧೋಯೀಯು (ಗವಾಯ್ ಧೋಯಿ ಕವಿರಾಜ) ಈ ಕಾವ್ಯದ ಕರ್ತೃ. ಒಂದು ಸಾರಿ ಕೇಳಿ ಕಂಠಗತ ಮಾಡಿಕೊಳ್ಳುವ ಸಾಮರ್ಥ್ಯವಿದ್ದುದರಿಂದ ಇವನನ್ನು ಶ್ರುತಧರನೆಂದು ಕರೆಯುತ್ತಿದ್ದರು. ಜಯದೇವನು ಇವನನ್ನು ಕವಿಕ್ಷ್ಮಾಪತಿಯೆಂದು ಪ್ರಶಂಸಿಸಿದ್ದಾನೆ.

ಲಕ್ಷ್ಮಣಸೇನನು ದಿಗ್ವಿಜಯಪ್ರಸಂಗದಿಂದ ದಕ್ಷಿಣಭಾರತಕ್ಕೆ ಹೋಗಿ ಹಿಂದಿರುಗಿದ ಮೇಲೆ ಅವನ ಗುಣಗಳಿಂದ ಮುಗ್ಧಳಾದ ದಕ್ಷಿಣದ ಕುವಲಯವತಿ ಎಂಬ ತರುಣಿಯು ತನ್ನ ಕಮನೀಯ ವಿರಹಾವಸ್ಥೆಯ ಸಂದೇಶವನ್ನು ಪವನನ ಮೂಲಕ ಕಳುಹಿಸುತ್ತಾಳೆ.

1. ಕಲ್ಕತ್ತೆಯಲ್ಲಿ ಡಾ॥ ಜತೀಂದ್ರ ವಿಮಲ ಚೌಧುರಿಯ ಸಂಪಾದಕತ್ವದಲ್ಲಿ ಪ್ರಕಟವಾಗಿದೆ.

ಮೇಘದೂತದ ಮಾದರಿಯ ಈ ಕಾವ್ಯವು ಸರಸವೂ, ಸುಂದರವೂ, ಆಗಿದೆ. ಪವನದೂತದ ಒಂದು ಪದ್ಯ :

ದಂತಿವ್ಯೂಹಂ ಕನಕತಿಲಕಾಂ ಚಾಮರಂ ಹೈಮದಂಡಂ ಯೋ ಗೌಡೇಂದ್ರಾದಲಭತ ಕವಿಕ್ಷ್ಮಾಭೃತಾಂ ಚಕ್ರವರ್ತೀ ।
ಶ್ರೀಧೋಯಿಕಃ ಸಕಲರಸಿಕಪ್ರೀತಿಹೇತೋರ್ಮನಸ್ವೀ ಕಾವ್ಯಂ ಸಾರಸ್ವತಮಿವ ಮಹಾಮಂತ್ರಮೇತಜ್ಜಗಾದ ॥

## ಹಂಸಸಂದೇಶ :—

ತೋತರಮ್ಮ ಮತ್ತು ಅನಂತಸೂರಿಗಳ ಮಗನಾದ ವೆಂಕಟನಾಥರು (ಕ್ರಿ. ಶ. 1268–1369) ತನ್ನದಾದ ವೈಖರಿ ಮತ್ತು ವೇದಾಂತಬೋಧೆಗಳಿಂದ ಕವಿತಾರ್ಕಿಕಸಿಂಹರೆಂದೂ, ವೇದಾಂತದೇಶಿಕರೆಂದೂ ಲೋಕವಿಖ್ಯಾತರಾದರು, ಇದರಿಂದ 121 ಕೃತಿಗಳು ರಚಿತವಾಗಿವೆ. ಕಾಳಿದಾಸನ ಮಾದರಿಯಲ್ಲಿ ಇವರು ಹಂಸಸಂದೇಶ, ಯದುವಂಶ (ಯಾದವಾಭ್ಯುದಯ), ಕುಮಾರಸಂಭವಗಳನ್ನು ಬರೆದಿದ್ದಾರೆ. ರಾಮಚಂದ್ರನು ಹಂಸದ ಮೂಲಕ ಸೀತೆಗೆ ಕಳುಹಿಸುವ ಸಂದೇಶ ಈ ಕಾವ್ಯದ ವಸ್ತು. ಹಂಸವು ಮಾಲ್ಯವಂತ ಪರ್ವತದಿಂದ ಹೊರಟು ಪುಣ್ಯತೀರ್ಥಗಳನ್ನು ಸಂದರ್ಶಿಸುತ್ತಾ ಲಂಕೆಯನ್ನು ತಲುಪುತ್ತದೆ. ಕಾವ್ಯ ಪ್ರೌಢವಾಗಿದೆ. ಶ್ರೀನಿವಾಸಾಚಾರ್ಯ, ನಾರಾಯಣಶಾಸ್ತ್ರಿ ಮೊದಲಾದವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಷಡ್ಭಾಷಾವಲ್ಲಭ ಮತ್ತು ಕವಿಸಾರ್ವಭೌಮನೆಂಬ ಬಿರುದುಗಳನ್ನು ಪಡೆದಿದ್ದ ವಾಮನ ಭಟ್ಟಬಾಣನೂ (ಕ್ರಿ. ಶ. 15ನೇ ಶತಮಾನ) ಒಂದು ಹಂಸಸಂದೇಶವನ್ನು ಬರೆದಿದ್ದಾನೆ. ಇದು ಮೇಘದೂತದ ಪೂರ್ಣ ಅನುಕರಣೆಯಾಗಿದೆ. ಇದರ ಮಂದಾಕ್ರಾಂತಾವೃತ್ತದಲ್ಲಿ ರಚಿತವಾದ 121 ಪದ್ಯಗಳನ್ನು ಪೂರ್ವೋತ್ತರ ಭಾಗಗಳನ್ನಾಗಿ ವಿಭಾಗಿಸಲಾಗಿದೆ. ಅಲಕೆಯಿಂದ ನಿರ್ವಾಸಿತನಾದ ಯಕ್ಷನು ಹಂಸದ ಮೂಲಕ ತನ್ನ ಪ್ರೇಯಸಿಗೆ ಕಳುಹಿಸುವ ವಿರಹ ಸಂದೇಶವು ಈ ಕಾವ್ಯದ ವಸ್ತು.

ರೂಪಗೋಸ್ವಾಮಿಯೂ (ಕ್ರಿ. ಶ. 1490–1563) ಒಂದು ಹಂಸಸಂದೇಶವನ್ನು ಬರೆದಿದ್ದಾನೆ. ರಾಧೆಯು ಮಥುರೆಯಲ್ಲಿದ್ದ ಕೃಷ್ಣನಿಗೆ ಹಂಸದ ಮೂಲಕ ಕಳುಹಿಸುವ ವಿರಹ ಸಂದೇಶವು ಇದರ ವಸ್ತು. ಅಕ್ರೂರನು ತೋರಿಸಿದ ದಾರಿಯಲ್ಲಿ ನಡೆದು ಹಂಸವು ಮಥುರೆಯನ್ನು ತಲುಪುತ್ತದೆ. ವೃಂದಾವನದ ಸ್ಥಿತಿಯನ್ನೂ, ರಾಧೆಯ ಮನೋವ್ಯಥೆಯನ್ನೂ ಮನೋಜ್ಞವಾಗಿ ವರ್ಣಿಸುತ್ತದೆ. ಈ ಕಾವ್ಯದಲ್ಲಿ ಮಥುರೆಯ ವೈಭವ ಮತ್ತು ಕೃಷ್ಣನ ಮಿತ್ರಮಂಡಲಿಯ ವರ್ಣನೆ ಸುಂದರವಾಗಿದೆ. 142 ಶ್ಲೋಕಗಳನ್ನುಳ್ಳ ಈ ಸಮಗ್ರ ಕಾವ್ಯ ಶಿಖರಿಣೀವೃತ್ತದಲ್ಲಿ ರಚಿತವಾಗಿದೆ. ಇದರ ಭಾವಾಭಿವ್ಯಂಜನೆ, ಕೋಮಲಪದಪ್ರಯೋಗಗಳು ಆಕರ್ಷಕವಾಗಿವೆ.

ಕೃಷ್ಣನ ನಿರಂತರ ಚಿಂತನೆಯಿಂದ ರಾಧೆಯು ಕೃಷ್ಣನಾದಳು ; ಆದರೆ ಅವಳ ಹೃದಯದ ವ್ಯಥೆ ಕಡಿಮೆಯಾಗಲಿಲ್ಲ :—

ಕದಾಚಿನ್ಮೂರ್ಛೇಯಂ ನಿಬಿಡಭವದೀಯಸ್ಮೃತಿಮದಾ-
ದಮಂದಾದಾತ್ಮಾನಂ ಕಲಯತಿ ಭವಂತಂ ಮಮ ಸಖೀ ।
ತಥಾಸ್ಯಾ ರಾಧಾಯಾ ವಿರಹದಹನಾಕಲ್ಪಿತಧಿಯೋ
ಮುರಾರೇ । ದುಃಸಾಧಾ ಕ್ಷಣಮಪಿ ನ ಬಾಧಾ ವಿರಮತಿ ॥

ಹೇಗೆ ಸಂದೇಶ ಕಳುಹಿಸಬೇಕೆಂದೂ ರಾಧೆಗೆ ತಿಳಿಯದೆ ಹೋಯಿತು :—

ಗರೀಯಾನ್ ಮೇ ಪ್ರೇಮಾ ತ್ವಯಿ ಪರಮಿತಿ ಸ್ನೇಹಲಘುತಾ
ನ ಜೀವಿಷ್ಯಾಮೀತಿ ಪ್ರಣಯಗರಿಮಾಖ್ಯಾಪನವಿಧಿಃ ।
ಕಥಂ ನಾಯಾಸೀತಿ ಸ್ಮರಣಪರಿಪಾಟೀಪ್ರಕಟನಂ
ಹತಾ ಸಂದೇಶಾಯ ಪ್ರಿಯಸಖಿ ! ನ ಮೇ ವಾಗವಸರಃ ॥

ಚೈತನ್ಯನ ಪ್ರಭಾವಕ್ಕೊಳಗಾಗಿ ಸಂನ್ಯಾಸವನ್ನು ಸ್ವೀಕರಿಸಿದ ರೂಪಗೋಸ್ವಾಮಿಯು ವರ್ಣಿಸಿರುವ ಪ್ರಣಯ ಭಕ್ತಿರೂಪವಾದುದು.

ನೃಸಿಂಹ ವಿಶ್ವನಾಥ ಚಕ್ರವರ್ತಿ, ಮಾಧವಮಿಶ್ರ ಮತ್ತು ರಾಮಶಂಕರರು ಈ ಕಾವ್ಯಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ರೂಪಗೋಸ್ವಾಮಿಯು ಉದ್ಧವಸಂದೇಶವನ್ನೂ ಬರೆದಿದ್ದಾನೆ. ಮಾಧವ ಕವೀಂದ್ರ ಭಟ್ಟಾಚಾರ್ಯನೂ ಮಂದಾಕ್ರಾಂತಾವೃತ್ತದಲ್ಲಿ ರಚಿತವಾದ 141 ಪದ್ಯಗಳನ್ನುಳ್ಳ ಉದ್ಧವ ದೂತವೆಂಬ ಕಾವ್ಯವನ್ನು ಬರೆದಿದ್ದಾನೆ.

ರಘುನಾಥದಾಸನು ಹಂಸದೂತವನ್ನೂ, ವಿದ್ಯಾವಿಧಾನ ಕವೀಂದ್ರಾಚಾರ್ಯಸರಸ್ವತಿ, ವೆಂಕಟೇಶ, ಪೂರ್ಣಸರಸ್ವತಿ ಮತ್ತು ಇಬ್ಬರು ಅನಾಮಧೇಯರು ಹಂಸಸಂದೇಶಗಳನ್ನೂ ಬರೆದಿದ್ದಾರೆ. ಅಜ್ಞಾತಕವಿಯ ಒಂದು ಹಂಸಸಂದೇಶವು ಮಂದಾಕ್ರಾಂತಾವೃತ್ತದಿಂದ ರಚಿತವಾಗಿದ್ದು ಜ್ಞಾನ, ಯೋಗಗಳ ಸಮ್ಮಿಶ್ರಣದ ಒಂದು ಆಧ್ಯಾತ್ಮ ತತ್ತ್ವಕಾವ್ಯವಾಗಿದೆ. ಮಾಯೆಯ ನಿಮಿತ್ತ ಶಿವಭಕ್ತೆಯಿಂದ ವಿರಕ್ತನಾದ ಒಬ್ಬ ಭಕ್ತನು ಶಂಕರನಲ್ಲಿಗೆ ಮಾನಸಗಾಮಿಯಾದ ಹಂಸವನ್ನು ಸಂದೇಶಹರನನ್ನಾಗಿ ಮಾಡಿಕೊಳ್ಳುತ್ತಾನೆ.

ಮಹಾಮಹೋಪಾಧ್ಯಾಯ ಶ್ರೀಕೃಷ್ಣಸಾರ್ವಭೌಮನು ಮಂದಾಕ್ರಾಂತಾವೃತ್ತದಲ್ಲಿ ರಚಿತವಾದ 46 ಪದ್ಯಗಳನ್ನುಳ್ಳ ಪದಾಂಕದೂತವನ್ನೂ (ಹೆಜ್ಜೆಗುರುತು), ವೀರೇಶ್ವರನು ಶಾರ್ದೂಲವಿಕ್ರೀಡಿತವೃತ್ತದಲ್ಲಿ ರಚಿತವಾದ 101 ಪದ್ಯಗಳನ್ನುಳ್ಳ ಮಂಡನಗುಣದೂತವನ್ನೂ ಬರೆದಿದ್ದಾರೆ.

# ನೀತಿಕಾವ್ಯಗಳು

ಇಹದ ಮೇಲೆ ನಿತ್ಯ ಪರವನ್ನು ಎಟಕಿಸಿಕೊಳ್ಳಲು ಬಯಸುವ ಭಾರತೀಯನ ಒಲವು ದೇವ,
ಧರ್ಮ, ಸತ್ಯಗಳ ಕಡೆಗೆ ಅಧಿಕ. ಅವನ ಬುದ್ಧಿ ಮತ್ತು ಬಾಳು ಇದಕ್ಕನುಗುಣವಾಗಿ ರೂಪಿತ
ವಾಗಿವೆ. ವೇದ ಪುರಾಣೇತಿಹಾಸ ಕಾವ್ಯಾದಿಗಳಲ್ಲಿಯೂ ಈ ಪ್ರಭಾವವಿದೆ. ನೀತಿಬೋಧಕ
ಮಾತುಗಳು ಋಗ್ವೇದದಲ್ಲಿಯೇ ಇವೆ. ಐತರೇಯ ಬ್ರಾಹ್ಮಣದ ಒಂದು ಉಪಾಖ್ಯಾನದಲ್ಲಿ
ಸಾಕಷ್ಟು ನೀತಿಬೋಧೆಯಿದೆ. ಉಪನಿಷತ್ತು ಮತ್ತು ಸೂತ್ರಗಳಲ್ಲಿಯೂ ನೀತಿ ವಿಶಿಷ್ಟಸ್ಥಾನವನ್ನು
ಪಡೆದಿದೆ. ಉತ್ತಮ ಜೀವನವನ್ನು ಸಾಗಿಸಲು ಅಗತ್ಯವಾದ ಆದರ್ಶ ನೀತಿಗಳಿಗೆ ಆಗರವಾದ
ಮಹಾಭಾರತಕ್ಕೂ ಹಿಂದೆಯೇ ರಚಿತವಾದ ನೀತಿಕಾವ್ಯಗಳ ಅವಶೇಷಗಳು[1] ದೊರೆಯುತ್ತವೆ.
ಪತಂಜಲಿಗೆ ಇಂತಹ ಸಾಹಿತ್ಯದ ಪರಿಚಯವಿದ್ದಿತೆಂದು ತಿಳಿದು ಬರುತ್ತದೆ. ಪಾಳಿಯಲ್ಲಿರುವ
ಧಮ್ಮಪದವು ಇದಕ್ಕಾಗಿಯೇ ರಚಿತವಾದುದು. ಲೌಕಿಕ ಸಾಹಿತ್ಯದ ಕಾವ್ಯನಾಟಕಾದಿ ಪ್ರಕಾರ
ಗಳಲ್ಲಿ ದೊರೆಯುವ ಇಂತಹ ಪದ್ಯಗಳನ್ನು ಸುಭಾಷಿತ ಸಂಗ್ರಹಗಳಲ್ಲಿ ಸಂಪಾದಿಸಲಾಗಿದೆ.
ನೀತಿಧರ್ಮಗಳಿಗಾಗಿಯೇ ರಚನೆಗೊಂಡ ಸ್ವತಂತ್ರ ಕಾವ್ಯಗಳೂ ಇವೆ. ಪಂಚತಂತ್ರ ಮತ್ತು
ಹಿತೋಪದೇಶಗಳಲ್ಲಿ ನೀತಿಬೋಧಕ ಪದ್ಯಗಳು ಹೇರಳವಾಗಿವೆ. ಆಧ್ಯಾತ್ಮಬುದ್ಧಿಯ
ಭಾರತೀಯರು ಬಹಳ ಹಿಂದಿನಿಂದ ಇಂದಿನವರೆಗೆ ನೀತಿ, ಶಾಂತಿ, ವಿರಕ್ತಿರೂಪವಾದ ಉಪದೇಶ
ಕಾವ್ಯಗಳನ್ನು ರಚಿಸಿದ್ದಾರೆ. ಮತ ಅಥವಾ ತತ್ತ್ವಪ್ರಧಾನವಾದ ಕಾವ್ಯಗಳೂ ಇವೆ.

ಮನಸ್ಸಿನ ಶಾಂತಿ: ಜನನ ಮರಣಗಳಿಂದ ಮುಕ್ತಿ; ಸುಖ—ದುಃಖ, ಪಾಪ—ಪುಣ್ಯ,
ಸತ್ಯ—ಮಿಥ್ಯೆ, ಕಾಮ—ಪ್ರೇಮ, ರಕ್ತಿ—ವಿರಕ್ತಿ, ಶಾಶ್ವತ—ಅಶಾಶ್ವತ, ಧರ್ಮ—
ಅಧರ್ಮ, ಆಚಾರ—ಅನಾಚಾರ, ಮೊದಲಾದ ದ್ವಂದ್ವಗಳ ವಿವೇಚನೆ; ಆಧ್ಯಾತ್ಮ ಚಿಂತನೆ,
ಸಹನೆ, ಸೋದರ ಭಾವಗಳ ಪ್ರಾಪ್ತಿ; ಮುಂತಾದುದು ನೀತಿಕಾವ್ಯಗಳ ಗುರಿ ಮತ್ತು ಸಾರ.
ಇವು ಲೋಕದಲ್ಲಿ ರೂಢಿಯಲ್ಲಿರುವ ಸಾಧಾರಣ ನೀತಿಮಾತುಗಳು ಮತ್ತು ಗಾದೆಗಳಂತಿರದೆ
ಕವಿಪ್ರತಿಭೆಯಿಂದ ಒರಟುತನವನ್ನು ಕಳೆದುಕೊಂಡು, ಅಲಂಕಾರಗೊಂಡು, ಭಾವತುಂಬಿ,
ಸಾಣೆಹಿಡಿದ ರತ್ನದಂತೆ ಬೆಳಗುತ್ತದೆ; ರಸತುಂಬಿದ ಪಕ್ವಫಲದಂತೆ ಆಕರ್ಷಿಸುತ್ತವೆ;
ಪರಿಮಳತುಂಬಿದ ಕುಸುಮದಂತೆ ಆನಂದಗೊಳಿಸುತ್ತವೆ. ಇವು ಜನರ ಬಾಯಿಯಿಂದ ಬಾಯಿಗೆ
ಹರಡುತ್ತವೆ; ಸಂದರ್ಭಗಳಲ್ಲಿ ಉದಾಹರಿಸಲ್ಪಡುತ್ತವೆ. ರಾಜನೀತಿಸಮುಚ್ಚಯ; ಚಾಣಕ್ಯ
ನೀತಿ, ಚಾಣಕ್ಯರಾಜನೀತಿ, ವೃದ್ಧಚಾಣಕ್ಯ, ಲಘುಚಾಣಕ್ಯ ಹೀಗೆ ಜನಪ್ರಿಯವಾದ ಒಂದು
ನೀತಿಕಾವ್ಯದಿಂದ ನಾನಾ ಹೆಸರುಗಳಲ್ಲಿ ಅನೇಕ ಸಂಗ್ರಹಗಳು ಮೂಡುತ್ತವೆ. ಸಂಗ್ರಹಕಾರರು
ಬೇರೆ ಮೂಲಗಳಿಂದ ಆಯ್ದು ಪದ್ಯಗಳನ್ನು ಸೇರಿಸಿರುವುದೂ ಉಂಟು.

---

1. See Bohtlingks critical Edition in Indische Spruche and Au-
rec's Z D M G X VII. 1 Muir's Religious and Moral Sentiments from
Sanskrit Writers.



ಸರ್ವಜ್ಞನ ಮೂಲವಚನಗಳ ನಿರ್ಣಯದಂತೆ ಈ ನೀತಿಕಾವ್ಯಗಳ ಮೂಲಪದ್ಯ
ನಿರ್ಣಯವೂ ಅಸಾಧ್ಯವಾಗಿದೆ. ದೊರೆತಿರುವ ಮೂಲಪ್ರತಿಗಳಲ್ಲಿ ಅಸಾಮಂಜಸ್ಯವಿದೆ. ಕೆಲವು
ನೀತಿಕಾವ್ಯಗಳಲ್ಲಿ ವಿಷಯಕ್ಕೆ ಸಂಬಂಧಿಸಿದಂತೆ ಪದ್ಯಗಳ ವರ್ಗೀಕರಣವಿದೆ; ಮತ್ತೆ ಕೆಲವು ನೀತಿ
ಕಾವ್ಯಗಳಲ್ಲಿ ಯಾವ ವರ್ಗೀಕರಣವೂ ಇಲ್ಲ; ಪದ್ಯಗಳೆಲ್ಲಾ ಸ್ವತಂತ್ರವಾಗಿ ಮುಕ್ತಕಗಳಂತಿರುತ್ತವೆ.
ಇಂತಹ ನೀತಿಯನ್ನು ವಿಶದಪಡಿಸಲು ಸಂಸ್ಕೃತದಲ್ಲಿ ಕಥಾಸಾಹಿತ್ಯವೂ ಬೆಳೆದಿದೆ. ಉಪದೇಶವು
ಕಾವ್ಯಪ್ರಯೋಜನಗಳಲ್ಲೊಂದು[1]. ಅಶ್ವಘೋಷನು ತನ್ನ ಒಂದು ಕಾವ್ಯದ ಪ್ರಾರಂಭದಲ್ಲಿ
'ಕಾವ್ಯವ್ಯಾಜೇನ ತತ್ತ್ವಂ ಕಥಿತಮಿಹ ಮಯಾ ಮೋಕ್ಷಃ ಪರಮಿತಿ' ಎಂದು ಹೇಳಿಕೊಂಡಿದ್ದಾನೆ.

ತುಂಬಿದ ಮಾಧುರ್ಯದಿಂದ ಉಲ್ಲಾಸಗೊಳಿಸಿ ಸನ್ಮಾರ್ಗವನ್ನು ತೋರಿಸುವ ಈ ಸುಂದರ
ನೀತಿ ಶ್ಲೋಕಗಳನ್ನು ಸಾಮಾನ್ಯವಾಗಿ ಸುಭಾಷಿತಗಳು, ಸೂಕ್ತಿಗಳು, ಸದುಕ್ತಿಗಳೆಂದು ಕರೆಯು
ತ್ತಾರೆ. ಇವು ವಿಧಿ, ನಿಷೇಧ, ನಿಂದಾ, ಪ್ರಶಂಸಾ, ಅನ್ಯೋಕ್ತಿ ಮುಂತಾದ ರೂಪದಲ್ಲಿರುತ್ತವೆ.
ಒಂದು ದೊಡ್ಡ ಧ್ವನಿಕಾವ್ಯದಿಂದಾಗುವ ಆನಂದ ಒಂದು ಚಿಕ್ಕ ಸುಭಾಷಿತದಿಂದ ದೊರೆಯುತ್ತದೆ.

ಚಾಣಕ್ಯನೀತಿ :—ಪ್ರಸಿದ್ಧ ಮೂಲಗಳಿಂದ ಜನಪ್ರಿಯ ಲೋಕೋಕ್ತಿಗಳನ್ನು ಸಂಗ್ರಹಿ
ಸುವ ಪದ್ಧತಿ ಬಹಳ ಹಿಂದಿನಿಂದಲೂ ಬಂದಿದೆ. ಇಂತಹ ನೀತಿಬೋಧಕ ಲೋಕೋಕ್ತಿಗಳ
ಪ್ರಥಮ ಸಂಕಲನವು ಚಂದ್ರಗುಪ್ತನ ಮಂತ್ರಿಯಾದ ಚಾಣಕ್ಯನ ಹೆಸರಿನಲ್ಲಿ ಪ್ರಚಾರದಲ್ಲಿದೆ.
ಇದಕ್ಕೆ ಚಾಣಕ್ಯನೀತಿ, ರಾಜನೀತಿಸಮುಚ್ಚಯ, ಚಾಣಕ್ಯರಾಜನೀತಿ, ವೃದ್ಧಚಾಣಕ್ಯ,
ಲಘುಚಾಣಕ್ಯ ಮುಂತಾದ ಹೆಸರುಗಳಿವೆ. ಈ ಸಂಕಲನ ಅನೇಕ ಸಂಸ್ಕರಣಗಳಲ್ಲಿ ದೊರೆಯುತ್ತದೆ.
ಒಂದೊಂದು ಸಂಸ್ಕರಣಕ್ಕೂ ವ್ಯತ್ಯಾಸ ಸ್ಪಷ್ಟವಾಗಿದೆ. ಒಂದು ಸಂಸ್ಕರಣದಲ್ಲಿ 17 ಪ್ರಕರಣ
ಗಳಿದ್ದರೆ ಮತ್ತೊಂದು ಸಂಸ್ಕರಣದಲ್ಲಿ 18 ಪ್ರಕರಣಗಳಿವೆ. ಚಾಣಕ್ಯನು ಇವುಗಳನ್ನು ರಚಿಸಿಲ್ಲ;
ಸಂಗ್ರಹಕಾರರು ರಾಜನೀತಿಗೆ ಪ್ರಸಿದ್ಧನಾದ ಅವನ ಹೆಸರಿನಲ್ಲಿ ಇವನ್ನು ಪ್ರಚಾರಕ್ಕೆ ತಂದಿದ್ದಾರೆ.
ಕೆಲವು ಸಂಸ್ಕರಣಗಳ ಪ್ರಾರಂಭದಲ್ಲಿ ರಾಜನೀತಿಯನ್ನು ಪ್ರತಿಪಾದಿಸುವ ಪದ್ಯವಿರುವುದರಿಂದ
ಮೂಲಕೃತಿಯ ಗುರಿ ರಾಜನೀತಿ ಪ್ರತಿಪಾದನೆಯಾಗಿದ್ದಿತೆಂದು ಊಹಿಸುವುದೂ ಕಷ್ಟ. ಒಂದು
ಸಂಸ್ಕರಣದಲ್ಲಿ 340 ಶ್ಲೋಕಗಳಿದ್ದರೆ ಮತ್ತೊಂದು ಸಂಸ್ಕರಣದಲ್ಲಿ 576 ಶ್ಲೋಕಗಳಿವೆ.
ಜೀವನದ ನಾನಾ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಿರಿತನ, ಬಡತನ, ವಿಧಿ, ನೀತಿವಾಕ್ಯಗಳಿವೆ;
ಮನುಷ್ಯಯತ್ನ, ಲೋಕಸಾಧಾರಣನೀತಿ, ಧರ್ಮ ಮುಂತಾದ ವಿಚಾರಗಳನ್ನು ಕುರಿತ
ಲೋಕೋಕ್ತಿಗಳಿವೆ. ಪಶುಪಕ್ಷಿಗಳಿಂದ ಗ್ರಹಿಸಬೇಕಾದ ಗುಣಗಳು, ಬ್ರಾಹ್ಮಣ, ವೈಶ್ಯ, ಶೂದ್ರ,
ಚಂಡಾಲರ ದೋಷಗಳು, ಕುದೇಶದಲ್ಲಿ ವಾಸನಿಷೇಧ ಮೊದಲಾದ ವಿಷಯಗಳು ಸುಂದರವಾಗಿ
ವರ್ಣಿಸಲ್ಪಟ್ಟಿವೆ.

---

1. ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಂಮಿತತಯೋಪದೇಶಯುಜೇ ॥

—ಮಮ್ಮಟ

## ಉತ್ತಮಭಾರ್ಯೆಯ ಲಕ್ಷಣ :—

ಸಾ ಭಾರ್ಯಾ ಯಾ ಶುಚಿರ್ದಕ್ಷಾ ಸಾ ಭಾರ್ಯಾ ಯಾ ಪತಿವ್ರತಾ ।
ಸಾ ಭಾರ್ಯಾ ಯಾ ಪತಿಪ್ರೀತಾ ಸಾ ಭಾರ್ಯಾ ಸತ್ಯವಾದಿನೀ ॥

ಈ ಪದ್ಯ ಸತ್ಯದ ಬೆಲೆಯನ್ನು ತಿಳಿಸುತ್ತದೆ :—

ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇನ ತಪ್ಯತೇ ರವಿಃ ।
ಸತ್ಯೇನ ವಾತಿ ವಾಯುಶ್ಚ ಸರ್ವಂ ಸತ್ಯೇ ಪ್ರತಿಷ್ಠಿತಮ್ ॥

## ಪ್ರಜೆಗಳು ರಾಜನನ್ನು ಹಿಂಬಾಲಿಸುವ ರೀತಿ :—

ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಾಃ ಸಮೇ ಸಮಾಃ ।
ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ॥

ಇಲ್ಲಿ ವಿಷಯ ಪುಷ್ಟಿಗಾಗಿ ಅಲಂಕಾರವನ್ನು ಬಳಸಿಕೊಳ್ಳಲಾಗಿದೆ—

ಏಕೇನಾಪಿ ಸುಪುತ್ರೇಣ ವಿದ್ಯಾಯುಕ್ತೇನ ಸಾಧುನಾ ।
ಆಹ್ಲಾದಿತಂ ಕುಲಂ ಸರ್ವಂ ಯಥಾ ಚಂದ್ರೇಣ ಶರ್ವರೀ ॥

## ಹೆಚ್ಚು ಸರಳವಾಗಿರುವುದು ಅಪಾಯಕ್ಕೆ ಹಾದಿ—

ನಾತ್ಯಂತಸರಲೈರ್ಭಾವ್ಯಂ ಗತ್ವಾ ಪಶ್ಯ ವನಸ್ಥಲೀಮ್ ।
ಛಿದ್ಯಂತೇ ಸರಲಾಸ್ತತ್ರ ಕುಬ್ಜಾಸ್ತಿಷ್ಠಂತಿ ಪಾದಪಾಃ ॥

## ಮಾನಹಾನಿಗಿಂತಲೂ ಪ್ರಾಣ ಪರಿತ್ಯಾಗ ಲೇಸು—

ವರಂ ಪ್ರಾಣಪರಿತ್ಯಾಗೋ ನ ಮಾನಪರಿಖಂಡನಮ್ ।
ಪ್ರಾಣತ್ಯಾಗಃ ಕ್ಷಣಂ ಚೈವ ಮಾನಭಂಗೋ ದಿನೇ ದಿನೇ ॥

## ಹೆಂಗಸಿನ ದೋಷಗಳು :—

ಅನೃತಂ ಸಾಹಸಂ ಮಾಯಾ ಮೂರ್ಖತ್ವಮತಿಲೋಭತಾ ।
ಅಶೌಚತ್ವಂ ನಿರ್ದಯತ್ವಂ ಸ್ತ್ರೀಣಾಂ ದೋಷಾಃ ಸ್ವಭಾವಜಾಃ ॥

ಶ್ಲೋಕಛಂದಸ್ಸನ್ನು ಅಧಿಕವಾಗಿ ಬಳಸಲಾಗಿದೆ. ಇದರಲ್ಲಿ ವಜ್ರಾ, ವಂಶಸ್ಥ, ವಸಂತತಿಲಕಾ, ಶಾರ್ದೂಲವಿಕ್ರೀಡಿತ ಮುಂತಾದ ಛಂದಸ್ಸುಗಳೂ ಇವೆ. ಉಪಮಾ, ರೂಪಕ, ದೃಷ್ಟಾಂತ, ಸ್ವಭಾವೋಕ್ತಿ ಮುಂತಾದ ಅರ್ಥಾಲಂಕಾರಗಳೂ, ಅನುಪ್ರಾಸಯಮಕಗಳೂ ಇವೆ. ಜಗತ್ತಿನ ನಿಜವಾದ ಸ್ವರೂಪ ಮತ್ತು ಸುಖಶಾಂತಿಗಳನ್ನು ತರುವ ಜೀವನಮಾರ್ಗಗಳನ್ನು ಸಮರ್ಥವಾಗಿ ಈ ಸಂಗ್ರಹ ಪರಿಚಯಮಾಡಿ ಕೊಡುತ್ತದೆ. 110 ಪದ್ಯಗಳನ್ನುಳ್ಳ ಚಾಣಕ್ಯಶತಕವೆಂಬ ಮತ್ತೊಂದು ಸಂಗ್ರಹವೂ ಇದೆ. ಇವು ಅದರ ಪದ್ಯಗಳು :—

ಕಿಂ ಕರಿಷ್ಯಂತಿ ವಕ್ತಾರಃ ಶ್ರೋತಾ ಯತ್ರ ನ ವಿದ್ಯತೇ ।
ನಗ್ನಕ್ಷಪಣಕೇ ದೇಶೇ ರಜಕಃ ಕಿಂ ಕರಿಷ್ಯತಿ ? ॥



ಶೈಲೇ ಶೈಲೇ ನ ಮಾಣಿಕ್ಯಂ ಮೌಕ್ತಿಕಂ ನ ಗಜೇ ಗಜೇ ।
ಸಾಧವೋ ನ ಹಿ ಸರ್ವತ್ರ ಚಂದನಂ ನ ವನೇ ವನೇ ॥
ಕುದೇಶಮಾಸಾದ್ಯ ಕುತೋಽರ್ಥಸಂಚಯಃ
ಕುಪುತ್ರಮಾಸಾದ್ಯ ಕುತೋ ಜಲಾಂಜಲಿಃ ।
ಕುಗೇಹಿನೀಂ ಪ್ರಾಪ್ಯ ಗೃಹೇ ಕುತಃ ಸುಖಮ್
ಕುಶಿಷ್ಯಮಧ್ಯಾಪಯತಃ ಕುತೋ ಯಶಃ ॥

## ಶಿಷ್ಯಾಲೇಖಾಧರ್ಮಕಾವ್ಯ :—

ಪ್ರಸಿದ್ಧವಾದ ಚಂದ್ರವ್ಯಾಕರಣವನ್ನು ರಚಿಸಿದ ಚಂದ್ರಗೋಮಿಯು ಇದರ ಕವಿ. ಬೌದ್ಧಮತದ ಇವನನ್ನು ಚಂದ್ರಯೋಗಿ ಮತ್ತು ಚಂದ್ರ ಎಂದೂ ಕರೆದಿದ್ದಾರೆ. ಇವನ ವ್ಯಾಕರಣವನ್ನು ಜಯಾದಿತ್ಯನು ತನ್ನ ಕಾಶಿಕೆಯಲ್ಲಿ ಬಳಸಿಕೊಂಡಿದ್ದಾನೆ. ವಸುರಾತನು ಇವನ ಶಿಷ್ಯ. ಹೂಣರನ್ನು ಪ್ರಸ್ತಾಪಿಸಿರುವುದರಿಂದ ಚಂದ್ರಗೋಮಿಯ ಕಾಲ ಕ್ರಿ. ಶ. 470 ಎಂದು ಬೆಲ್ವಾಲ್ಕರರು ಹೇಳುತ್ತಾರೆ. ಅನೇಕ ವ್ಯಾಕರಣಕಾರರಂತೆ ಇವನೂ ಒಬ್ಬ ಉತ್ತಮ ಕವಿಯಾಗಿದ್ದನು. ತನಗೆ ಆಶ್ರಯದಾತನಾಗಿದ್ದ ರತ್ನಕೀರ್ತಿಯೆಂಬ ದೊರೆಯು ದುರಾಗ್ರಹಕ್ಕೆ ಪಾತ್ರನಾದ ಇವನು ಸಂಪತ್ತು ಮತ್ತು ಅಧಿಕಾರದಿಂದ ಮದಿಸಿದ್ದ ಅವನಿಗೆ ಪದ್ಯರೂಪವಾದ ಶಿಷ್ಯಾಲೇಖಾಧರ್ಮ ಕಾವ್ಯವೆಂಬ ಒಂದು ಪತ್ರವನ್ನು ಬರೆದನು. ಇದರಲ್ಲಿ 114 ಶ್ಲೋಕಗಳಿವೆ. ಕಾಲುಷ್ಯಪೂರ್ಣವಾದ ಅಂಧಕಾರತುಂಬಿದ ಜನ್ಮವು ನರಕಕ್ಕೆ ಸದೃಶವಾದುದೆಂದು ತಿಳಿಸಿ, ಪ್ರೇತಗಳು ಮತ್ತು ವೈತರಣೀ ನದಿಯಿಂದಾಗುವ ಬಾಧೆಗಳನ್ನು ವರ್ಣಿಸಿ, ಪರೋಪಕಾರಕ್ಕಾಗಿ ಶ್ರಮಿಸುವುದೇ ಮುಕ್ತಿಗೆ ಮಾರ್ಗವೆಂದೂ, ಮರುಭೂಮಿಯಲ್ಲಿ ಬಾಯಾರಿಕೆಯಿಂದ ಬಳಲಿದವರಿಗೆ ಮರವೋ, ಮೇಘವೋ, ಕೊಳವೋ ತಾನಾಗಬೇಕೆಂದೂ ಸಾರಿ ಕಾವ್ಯವನ್ನು ಮುಗಿಸಿದ್ದಾನೆ. ಚಂದ್ರಗೋಮಿಯು ತಾರಾಸಾಧನಶತಕವನ್ನೂ ಬರೆದಿದ್ದಾನೆ.

ವಲ್ಲಭದೇವನ ಸುಭಾಷಿತಾವಲಿಯಲ್ಲಿ ಇವನ ಐದು ಪದ್ಯಗಳು ಉದ್ಧೃತವಾಗಿವೆ. ಈ ಪದ್ಯಗಳಿಂದ ಚಂದ್ರಗೋಮಿಯ ಶೈಲಿ ಮತ್ತು ವಿಷಯ ಪ್ರತಿಪಾದನರೀತಿಗಳನ್ನು ಪರಿಚಯ ಮಾಡಿಕೊಳ್ಳಬಹುದು.

1 ವಿಷಸ್ಯ ವಿಷಯಾಣಾಂ ಚ ದೂರಮತ್ಯಂತಮಂತರಮ್ ।
ಉಪಭುಕ್ತಂ ವಿಷಂ ಹಂತಿ ವಿಷಯಾಃ ಸ್ಮರಣಾದಪಿ ॥

2 ಕೇಚಿದ್ಭಯೇನ ಹಿ ಭಜಂತಿ ವಿನೀತಭಾವ
ಮನ್ಯೇ ಜನಾ ವಿಭವಲೋಭಕೃತಪ್ರಯತ್ನಾಃ ।
ಕೇಚಿಚ್ಚ ಸಾಧುಜನಸಂಸದಿ ಕೀರ್ತಿಲೋಭಾತ್
ಸದ್ಭಾವವಾಞ್ಜಗತಿ ಕೋಽಪಿ ನ ಸಾಧುರಸ್ತಿ ॥

**ನೀತಿದ್ವಿಷಷ್ಟಿಕಾ :—**

ಇದು ಸುಂದರಪಾಂಡ್ಯನ ಕೃತಿ. ಕ್ರಿ. ಶ. 750ರ ಶಾಸನದಲ್ಲಿ ಇವನನ್ನು ಅರಿಕೇಸರಿಯ ನಂತರ ಬಂದವನೆಂದು ಹೇಳಿರುವುದರಿಂದ ಇವನ ಕಾಲ ಸುಮಾರು ಕ್ರಿ. ಶ. 5ನೆಯ ಶತಮಾನ. ಇವನ ಪದ್ಯಗಳನ್ನು ಪಂಚತಂತ್ರ ಮೊದಲಾದ ಕೃತಿಗಳಲ್ಲಿ ಉದ್ಧರಿಸಲಾಗಿದೆ. ಆರ್ಯಾ ಛಂದಸ್ಸಿನಲ್ಲಿ ರಚಿತವಾಗಿರುವ ಈ ಪದ್ಯಗಳು ಸುಂದರವಾಗಿವೆ. ಕವಿಯು ತನ್ನ ಕೃತಿಗೆ ದೊರೆತಿರುವ ಗೌರವವನ್ನು ಹೀಗೆ ಹೇಳಿಕೊಂಡಿದ್ದಾನೆ—

ಇಮಾಂ ಕಾಂಚನಪೀಠಸ್ಥಾಂ ಸಮೇತ್ಯ ಕವಯೋ ಭುವಿ ।
ಆರ್ಯಾಂ ಸುಂದರಪಾಂಡ್ಯಸ್ಯ ಸ್ನಾಪಯಂತಿ ವಧೂಮಿವ ॥

ದುರ್ಜನ ಮತ್ತು ಸಜ್ಜನರ ಸಂಬಂಧ :—

ಸಹವಸತಾಮಪ್ಯಸತಾಂ ಜಲರುಹಜಲವದ್ಭವತ್ಯಸಂಶ್ಲೇಷಃ ।
ದೂರೇಽಪಿ ಸತಾಂ ವಸತಾಂ ಪ್ರೀತಿಃ ಕುಮುದೇಂದುವದ್ಭವತಿ ॥

**ನೀತಿಶತಕ :**—ಇದು ಭರ್ತೃಹರಿಯ ಮೂರು ಶತಕಗಳಲ್ಲೊಂದು. ಈ ಕವಿಯು ಶಾಂತಿಪದ್ಧತಿಯೆಂಬ ಮತ್ತೊಂದು ಗ್ರಂಥವನ್ನೂ ಬರೆದಿದ್ದಾನೆ. ಮಾಧವನು ತನ್ನ ಜಡವೃತ್ತದಲ್ಲಿ ವಿಟವೃತ್ತದ ಕರ್ತೃ ಭರ್ತೃಹರಿಯೆಂದು ಸೂಚಿಸಿದ್ದಾನೆ. ವಿಟವೃತ್ತವು ವಿಟರ ವರ್ತನೆಯನ್ನು ತಿಳಿಸುವ ಒಂದು ಚಿಕ್ಕ ಪದ್ಯಕಾವ್ಯ. ಭರ್ತೃಹರಿಯ ಶತಕತ್ರಯ ಲೋಕಪ್ರಿಯವಾದುದು. ಶಬ್ದಾರ್ಥಚಮತ್ಕಾರಗಳ ಮೂಲಕ ಪಾಂಡಿತ್ಯಪ್ರದರ್ಶನಕ್ಕೆ ಕೈಹಾಕದೆ ಸುಲಭ ಭಾಷೆ ಮತ್ತು ಸರಳ ಶೈಲಿಯಲ್ಲಿ ನೇರವಾಗಿ ಮನಮುಟ್ಟುವಂತೆ ವಿಷಯವನ್ನು ಪ್ರತಿಪಾದಿಸಿರುವ ರೀತಿಯು ಮನೋಜ್ಞವಾಗಿದೆ. ಮಾಲಿನೀ, ಪೃಥ್ವೀ, ಶಾರ್ದೂಲವಿಕ್ರೀಡಿತ ಮೊದಲಾದ ಛಂದಸ್ಸುಗಳನ್ನು ಬಳಸಿಕೊಳ್ಳಲಾಗಿದೆ. ಒಂದೊಂದು ಪದ್ಯವೂ ನೀತಿದೀಪವಾಗಿದ್ದು ಸುಖಶಾಂತಿಗಳಿಂದ ಕೂಡಿದ ಬಾಳಿನ ಮೇಲೆ ಬೆಳಕನ್ನು ಚೆಲ್ಲುತ್ತದೆ. ಕೆಲವು ಉದಾಹರಣೆಗಳನ್ನಿಲ್ಲಿ ಕೊಡಲಾಗಿದೆ.

ಮೂರ್ಖ ಜನರನ್ನು ತೃಪ್ತಿಪಡಿಸುವುದು ಅಸಾಧ್ಯ :—

ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್
ಪಿಬೇಚ್ಚ ಮೃಗತೃಷ್ಣಿಕಾಸು ಸಲಿಲಂ ಪಿಪಾಸಾರ್ದಿತಃ ।
ಕದಾಚಿದಪಿ ಪರ್ಯಟನ್ ಶಶವಿಷಾಣಮಾಸಾದಯೇತ್
ನ ತು ಪ್ರತಿನಿವಿಷ್ಟಮೂರ್ಖಜನಚಿತ್ತಮಾರಾಧಯೇತ್ ॥

ವಿಪತ್ತಿನಲ್ಲಿ ಧೈರ್ಯ, ಅಭ್ಯುದಯದಲ್ಲಿ ಕ್ಷಮೆ, ಸಭೆಯಲ್ಲಿ ವಾಕ್ಪಟುತ್ವ, ಯುದ್ಧದಲ್ಲಿ ಪರಾಕ್ರಮ, ಯಶಸ್ಸಿನಲ್ಲಿ ಅಭಿರುಚಿ, ಶ್ರುತಿಯಲ್ಲಿ ಆಸಕ್ತಿ—ಇದು ಮಹಾತ್ಮರಿಗೆ ಪ್ರಕೃತಿಸಿದ್ಧವಾದುದು. ಅವರು ನ್ಯಾಯಮಾರ್ಗವನ್ನು ಎಂದೂ ತ್ಯಜಿಸರು :—

ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ
ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ॥



ಮಾನ ಮುಖ್ಯವಾದುದು, ಹಸಿವಿನಿಂದ ಬಳಲಿದ್ದರೂ, ಮುಪ್ಪಿನಿಂದ ಕೃಶವಾಗಿದ್ದರೂ, ಶಕ್ತಿ ಉಡುಗಿದ್ದರೂ, ಕಷ್ಟದಶೆ ಒದಗಿದ್ದರೂ, ತೇಜಸ್ಸು ಕುಂದಿದ್ದರೂ, ಪ್ರಾಣಹೋಗುವ ಸ್ಥಿತಿಯಾದರೂ, ಮದಿಸಿದ ಆನೆಯ ಕುಂಭವನ್ನು ಸೀಳಿ ಭೋಜನಮಾಡುವ ಸಿಂಹವು ಎಂದಿಗೂ ಹುಲ್ಲನ್ನು ತಿನ್ನಲಾರದು. ಆನೆಯೂ ನಾಯಿಯಂತೆ ನಡೆದುಕೊಳ್ಳಲಾರದು :—

ಲಾಂಗೂಲಚಾಲನಮಧಶ್ಚರಣಾವಪಾತಂ
ಭೂಮೌ ನಿಪತ್ಯ ವದನೋದರದರ್ಶನಂ ಚ ।
ಶ್ವಾ ಪಿಂಡದಸ್ಯ ಕುರುತೇ ಗಜಪುಂಗವಸ್ತು
ಧೀರಂ ವಿಲೋಕಯತಿ ಚಾಟುಶತೈಶ್ಚ ಭುಂಕ್ತೇ ॥

ಮನಸ್ವಿಯಾದ ಕಾರ್ಯಾರ್ಥಿಯು ನಡೆಯುವ ರೀತಿ, ಸನ್ಮಿತ್ರನ ಲಕ್ಷಣ, ಸಹವಾಸದ ಪ್ರಭಾವ, ಪರಮಭೂಷಣವಾದ ಶೀಲ, ಸತ್ಸಂಗತಿ, ಆಲಸ್ಯ–ಉದ್ಯಮಗಳ ಅಂತರ, ಪಿತ್ತದ ಪ್ರಭಾವ, ವಿದ್ಯೆಯ ಪ್ರಾಶಸ್ತ್ಯ ಮುಂತಾದ ವಿಚಾರಗಳನ್ನು ಹೃದಯಂಗಮವಾಗಿ ಪ್ರತಿಪಾದಿಸಲಾಗಿದೆ. ಈ ಪದ್ಯದಲ್ಲಿ ಯಾರು ಯಾರು ಹೇಗೆ ಕೆಡುತ್ತಾರೆಂಬುದನ್ನು ತಿಳಿಸಲಾಗಿದೆ :—

ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ ಯತಿಃ ಸಂಗಾತ್ಸುತೋ ಲಾಲನಾತ್
ವಿಪ್ರೋಽನಧ್ಯಯನಾತ್ಕುಲಂ ಕುತನಯಾಚ್ಛೀಲಂ ಖಲೋಪಾಸನಾತ್ ।
ಹ್ರೀರ್ಮದ್ಯಾದನವೇಕ್ಷಣಾದಪಿ ಕೃಷಿಃ ಸ್ನೇಹಃ ಪ್ರವಾಸಾಶ್ರಯಾತ್
ಮೈತ್ರೀ ಚಾಪ್ರಣಯಾತ್ಸಮೃದ್ಧಿರನಯಾತ್ ತ್ಯಾಗಾತ್ ಪ್ರಮಾದಾದ್ಧನಮ್ ॥

ಈ ಪದ್ಯದಲ್ಲಿ ಸದೃಶಕ್ರಿಯಾರೂಪಗಳ ಸೌಂದರ್ಯವಿದೆ—

ತೃಷ್ಣಾಂ ಛಿಂಧಿ ಭಜ ಕ್ಷಮಾಂ ಜಹಿ ಮದಂ ಪಾಪೇ ರತಿಂ ಮಾ ಕೃಥಾಃ
ಸತ್ಯಂ ಬ್ರೂಹ್ಯನುಯಾಹಿ ಸಾಧುಪದವೀಂ ಸೇವಸ್ವ ವಿದ್ವಜ್ಜನಾನ್ ।
ಮಾನ್ಯಾನ್ಮಾನಯ ವಿದ್ವಿಷೋಽಪ್ಯನುನಯ ಪ್ರಚ್ಛಾದಯ ಸ್ವಾನ್ ಗುಣಾನ್
ಕೀರ್ತಿಂ ಪಾಲಯ ದುಃಖಿತೇ ಕುರು ದಯಾಮೇತತ್ಸತಾಂ ಚೇಷ್ಟಿತಮ್ ॥

**ಭಲ್ಲಟಶತಕ :**—ಕಾಶ್ಮೀರದ ಶಂಕರವರ್ಮನ (884–902 ಕ್ರಿ. ಶ.) ಆಸ್ಥಾನದಲ್ಲಿದ್ದ ಭಲ್ಲಟನು ಒಂದು ನೀತಿಶತಕವನ್ನು ಬರೆದಿದ್ದಾನೆ. ಅಭಿನವಗುಪ್ತ, ಕ್ಷೇಮೇಂದ್ರ ಮತ್ತು ಮಮ್ಮಟರು ಇವನ ಪದ್ಯಗಳನ್ನು ಉದ್ಧರಿಸಿದ್ದಾರೆ. ಸುಭಾಷಿತ ಸಂಗ್ರಹಗಳಲ್ಲಿಯೂ ಭಲ್ಲಟನ ಪದ್ಯಗಳಿವೆ. ನಾನಾ ಛಂದಸ್ಸುಗಳನ್ನು ಬಳಸಿಕೊಳ್ಳಲಾಗಿದೆ. ಇತರರ ಕೆಲವು ಪದ್ಯಗಳು ಈ ಶತಕದಲ್ಲಿ ಸೇರಿಕೊಂಡಿವೆ. ಶೈಲಿಯು ಸುಂದರವೂ, ಸರಳವೂ ಆಗಿದೆ. ಕಮಲನಾಳದ ಮೂಲಕ ಲೋಕಕ್ಕೆ ಹೀಗೆ ನೀತಿ ನೀಡಲಾಗಿದೆ :—

ಅಂತಶ್ಛಿದ್ರಾಣಿ ಭೂಯಾಂಸಿ ಕಂಟಕಾ ಬಹವೋ ಬಹಿಃ ।
ಕಥಂ ಕಮಲನಾಲಸ್ಯ ಮಾ ಭೂವನ್ ಭಂಗುರಾ ಗುಣಾಃ ॥





52*

ಅಲ್ಪರನ್ನು ದೊಡ್ಡವರ ತಲೆಯ ಮೇಲೆ ಕೂರಿಸುವುದನ್ನು ಪಾಂಸುವಿನ ಮೂಲಕ ವರ್ಣಿಸಲಾಗಿದೆ :—

ಯೇ ಜಾತ್ಯಾ ಲಘವಃ ಸದೈವ ಗಣನಾಂ ಯಾತಾ ನ ಯೇ ಕುತ್ರಚಿತ್
ಪದ್ಭ್ಯಾಮೇವ ವಿಮರ್ದಿತಾಃ ಪ್ರತಿದಿನಂ ಭೂಮೌ ನಿಲೀನಾಶ್ಚಿರಮ್ ।
ಉತ್ಕ್ಷಿಪ್ತಾಶ್ಚಪಲಾಶಯೇನ ಮರುತಾ ಪಶ್ಯಾಂತರಿಕ್ಷೇ ಸಖೇ
ತುಂಗಾನಾಮುಪರಿ ಸ್ಥಿತಿಂ ಕ್ಷಿತಿಭೃತಾಂ ಕುರ್ವಂತ್ಯಮೀ ಪಾಂಸವಃ ॥

ಭಲ್ಲಟನ ಈ ಪದ್ಯವು ಧ್ವನ್ಯಾಲೋಕದಲ್ಲಿ ಎರಡು ಕಡೆ ಉದ್ಧೃತವಾಗಿದೆ.—

ಪರಾರ್ಥೇ ಯಃ ಪೀಡಾಮನುಭವತಿ ಭಂಗೇಽಪಿ ಮಧುರೋ
ಯದೀಯಃ ಸರ್ವೇಷಾಮಿಹ ಖಲು ವಿಕಾರೋಽಪ್ಯಭಿಮತಃ ।
ನ ಸಂಪ್ರಾಪ್ತೋ ವೃದ್ಧಿಂ ಯದಿ ಸಭೃಶಮಕ್ಷೇತ್ರಪತಿತಃ
ಕಿಮಿಕ್ಷೋರ್ದೋಷೋಽಸೌ ನ ಪುನರಗುಣಾಯಾ ಮರುಭುವಃ ॥

ಈ ಪದ್ಯವು ಕವಿಯ ಜೀವನವನ್ನು ಪರಿಚಯ ಮಾಡಿಕೊಡುತ್ತದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕವಿಗಳನ್ನು ಆದರಿಸದ ತನ್ನ ದೊರೆಯ ತಿರಸ್ಕಾರದಿಂದ ಭಲ್ಲಟನು ಖಿನ್ನನಾಗಿದ್ದನೆಂದು ತಿಳಿಯುತ್ತದೆ. ಆನಂದವರ್ಧನ ಮೊದಲಾದ ಲಾಕ್ಷಣಿಕರ ಮೆಚ್ಚುಗೆಗೆ ಪಾತ್ರನಾದ ಇವನು ದೊಡ್ಡ ವಿದ್ವಾಂಸನೂ ಉತ್ತಮ ಕವಿಯೂ ಆಗಿದ್ದನು. ಇವನ ಶತಕವನ್ನು ಇವನ ಹೆಸರಿನಿಂದಲೇ ಕರೆಯುವ ರೂಢಿಯಿದೆ. ಉತ್ತಮ ಜೀವನ ಶಿಕ್ಷಣಕ್ಕೆ ಅಗತ್ಯವಾದ ಆದರ್ಶಗಳಿಗೆ ಇವನ ಕೃತಿಯು ಆಗರ. ಇದರಲ್ಲಿ ನಾನಾ ಪ್ರಕಾರವಾದ ಪದ್ಯಗಳಿದ್ದರೂ ಅನ್ಯೋಕ್ತಿಗಳೇ ಅಧಿಕವಾಗಿವೆ ; ಮತ್ತು ಅವು ಮನೋಜ್ಞವಾಗಿವೆ. ಇದೊಂದು ಸುಂದರವಾದ ಅನ್ಯೋಕ್ತಿ—

ಕಸ್ತ್ವಂ ಭೋಃ ? ಕಥಯಾಮಿ ದೈವಹತಕಂ ಮಾಂ ವಿದ್ಧಿ ಶಾಖೋಟಕಂ
ವೈರಾಗ್ಯಾದಿವ ವಕ್ಷಿ ? ಸಾಧು ವಿದಿತಂ ಕಸ್ಮಾದಿದಂ ಕಥ್ಯತೇ ? ।
ವಾಮೇನಾತ್ರ ವಟಸ್ತಮಧ್ವಗಜನಃ ಸರ್ವಾತ್ಮನಾ ಸೇವತೇ
ನಚ್ಛಾಯಾಪಿ ಪರೋಪಕಾರಕರಣೇ ಮಾರ್ಗಸ್ಥಿತಸ್ಯಾಪಿ ಮೇ ॥

ಭಲ್ಲಟನ ಸ್ವಭಾವೋಕ್ತಿ, ಉತ್ಪ್ರೇಕ್ಷೆ, ಉಪಮೆ, ಅರ್ಥಾಂತರನ್ಯಾಸ ಮೊದಲಾದ ಅಲಂಕಾರಗಳು ಹೃದ್ಯವಾಗಿವೆ.

ಈ ಪದ್ಯದಲ್ಲಿ ಆಶೆ ನಿರಾಶೆಯಾದ ಬಗೆಯನ್ನು ಸುಂದರವಾಗಿ ಚಿತ್ರಿಸಲಾಗಿದೆ—

ವಿಶಾಲಂ ಶಾಲ್ಮಲ್ಯಾ ನಯನಸುಭಗಂ ವೀಕ್ಷ್ಯ ಕುಸುಮಂ
ಶುಕಸ್ಯಾಸೀದ್ಬುದ್ಧಿಃ ಫಲಮಪಿ ಭವೇದಸ್ಯ ಸದೃಶಮ್
ಇತಿ ಧ್ಯಾತ್ವೋಪಾಸ್ತಂ ಫಲಮಪಿ ಚ ದೈವಾತ್ ಪರಿಣತಂ
ವಿಪಾಕೇ ತೂಲೋಽಂತಃ ಸಪದಿ ಮರುತಾ ಸೋಽಪ್ಯಪಹೃತಃ ॥



ನೀತಿರತ್ನ :— ವಿವಿಧ ಛಂದಸ್ಸಿನ 15 ಪದ್ಯಗಳಿರುವ ಈ ಸಂಗ್ರಹವು ವರರುಚಿಯ ಹೆಸರಿನಲ್ಲಿದೆ. ಈ ಸಂಗ್ರಹದ ಒಂದು ಪದ್ಯ ಇದು—

ದಿವ್ಯಂ ಚೂತರಸಂ ಪೀತ್ವಾ ನ ಗರ್ವಂ ಯಾತಿ ಕೋಕಿಲಃ ।
ಪೀತ್ವಾ ಕರ್ದಮಪಾನೀಯಂ ಭೇಕೋ ಮಕಮಕಾಯತೇ ॥

ನೀತಿಸಾರ :— ವಿವಿಧ ಛಂದಸ್ಸಿನ 21 ಪದ್ಯಗಳಿರುವ ಈ ಸಂಗ್ರಹವು ಘಟಕರ್ಪರನ ಹೆಸರಿನಲ್ಲಿದೆ.

ಈ ಪದ್ಯ ದಾರಿದ್ರ್ಯದ ತೀಕ್ಷ್ಣ ಸ್ವರೂಪವನ್ನು ತಿಳಿಸುತ್ತದೆ—

ಏಕೋ ಹಿ ದೋಷೋ ಗುಣಸನ್ನಿಪಾತೇ
ನಿಮಜ್ಜತೀಂದೋರಿತಿ ಯೋ ಬಭಾಷೇ ।
ನೂನಂ ನ ದೃಷ್ಟಂ ಕವಿನಾಪಿ ತೇನ
ದಾರಿದ್ರ್ಯದೋಷೋ ಗುಣರಾಶಿನಾಶೀ ॥

ನೀತಿಪ್ರದೀಪ :— 16 ಪದ್ಯಗಳನ್ನುಳ್ಳ ಈ ಸಂಗ್ರಹ ವೇತಾಲಭಟ್ಟನ ಹೆಸರಿನಲ್ಲಿದೆ. ಈ ಪದ್ಯ ಸಜ್ಜನರ ಸಂಪತ್ತು ಪರೋಪಕಾರಕ್ಕೆಂದು ವಿವರಿಸುತ್ತದೆ—

ರತ್ನಾಕರಃ ಕಿಂ ಕುರುತೇ ಸ್ವರತ್ನೈಃ
ವಿಂಧ್ಯಾಚಲಃ ಕಿಂ ಕರಿಭಿಃ ಕರೋತಿ ।
ಶ್ರೀಖಂಡಖಂಡೈರ್ಮಲಯಾಚಲಃ ಕಿಂ
ಪರೋಪಕಾರಾಯ ಸತಾಂ ವಿಭೂತಿಃ ॥

ಭವಭೂತಿಯ ಹೆಸರಿನಲ್ಲಿ 'ಗುಣರತ್ನ' ಮತ್ತು ಶಂಕದೇವನ ಹೆಸರಿನಲ್ಲಿ "ಶಂಕಾಷ್ಟಕ' ಎಂಬ ಸಂಗ್ರಹಗಳು ಪ್ರಚಾರದಲ್ಲಿವೆ. ಅಜ್ಞಾತರ ಹೆಸರಿನಲ್ಲಿ ಪ್ರಚಾರದಲ್ಲಿರುವ ಭ್ರಮರಾಷ್ಟಕ, ವಾನರಾಷ್ಟಕ, ವಾನರ್ಯಷ್ಟಕ, ಪೂರ್ವಚಾತಕಾಷ್ಟಕ, ಉತ್ತರಚಾತಕಾಷ್ಟಕ—ಮುಂತಾದ ಸಂಗ್ರಹಗಳಲ್ಲಿಯೂ ಸುಂದರ ಪದ್ಯಗಳಿವೆ. ಸಾಮಾನ್ಯವಾಗಿ ಸಂಗ್ರಹಗಳಲ್ಲಿ ಸಮಾನ ಪದ್ಯಗಳೂ ದೊರೆಯುತ್ತವೆ.

### ಅನ್ಯೋಕ್ತಿ ಮುಕ್ತಾಲತಾಶತಕ

ಶಂಭುವು ಕಾಶ್ಮೀರದ ಹರ್ಷನ (ಕ್ರಿ. ಶ. 1073-1101) ಆಶ್ರಯದಲ್ಲಿ ಈ ಕಾವ್ಯವನ್ನು ಬರೆದನು. ಇವನು ರಾಜೇಂದ್ರಕರ್ಣಪೂರವೆಂಬ ಮತ್ತೊಂದು ಕಾವ್ಯವನ್ನೂ ಬರೆದಿದ್ದಾನೆ. ಅನ್ಯೋಕ್ತಿ ಮುಕ್ತಾಲತಾಶತಕದಲ್ಲಿ ಅಂತಹ ಪ್ರಶಂಸನೀಯವಾದ ಯಾವ ಕಾವ್ಯಧರ್ಮವೂ ಇಲ್ಲ.

ದೃಷ್ಟಾಂತ ಶತಕ :— ನೀತಿಬೋಧಿಸುವ ನೂರು ಪದ್ಯಗಳನ್ನುಳ್ಳ ಈ ಕಾವ್ಯದ ಕರ್ತೃ ಕುಸುಮದೇವ. ಕವಿಯು ಕಾವ್ಯದ ಕೊನೆಯಲ್ಲಿ

ಇಯಂ ಕುಸುಮದೇವೇನ ಕವಿನೈಕೇನ ನಿರ್ಮಿತಾ ।
ದೃಷ್ಟಾಂತಕಲಿಕಾ ನಾಮ ಜೃಂಭತಾಂ ಕವಿಮಾನಸೇ ॥

ಎಂದು ಹೇಳಿಕೊಂಡಿದ್ದಾನೆ. ಈ ಶತಕದ ಪ್ರತಿ ಪದ್ಯದಲ್ಲಿಯೂ ದೃಷ್ಟಾಂತವಿರುವುದು ಒಂದು ವಿಶೇಷ. ಕವಿಯ ಶೈಲಿ ಮತ್ತು ದೃಷ್ಟಾಂತಗಳನ್ನು ಕೊಟ್ಟಿರುವ ರೀತಿಯ ಪರಿಚಯಕ್ಕಾಗಿ ಇಲ್ಲಿ ಕೆಲವು ಪದ್ಯಗಳನ್ನು ಕೊಡಲಾಗಿದೆ—

1. ವಿವೇಕ ಏವ ವ್ಯಸನಂ ಪುಸಾಂ ಕ್ಷಪಯಿತುಂ ಕ್ಷಮಃ ।
ಅಪಹರ್ತುಂ ಸಮರ್ಥೋಽಸೌ ರವಿರೇವ ನಿಶಾತಮಃ ॥

2. ಸ್ವಭಾವಂ ನ್ನೈವ ಮುಂಚಂತಿ ಸಂತಃ ಸಂಸರ್ಗತೋಽಸತಾಮ್ ।
ನತ್ಯಜಂತಿ ರುತಂ ಮಂಜುಂ ಕಾಕಸಂಪರ್ಕತಃ ಪಿಕಾಃ ॥

3. ಉತ್ತಮಃ ಕ್ಲೇಶವಿಕ್ಷೋಭಂ ಕ್ಷಮಃ ಸೋಢುಂ ನ ಹೀತರಃ ।
ಮಣಿರೇವ ಮಹಾಶಾಣಘರ್ಷಣಂ ನ ತು ಮೃತ್ಕಣಃ ॥

ಅನ್ಯೋಕ್ತಿ ಅಥವಾ ಅನ್ಯಾಪದೇಶರೂಪವಾದ ಸಾಹಿತ್ಯ ಪರೋಕ್ಷವಾಗಿ ನೀತಿ ಬೋಧಿಸುವ ಅನ್ಯೋಕ್ತಿ ಅಥವಾ ಅನ್ಯಾಪದೇಶರೂಪವಾದ ಸಾಹಿತ್ಯ ಸಂಸ್ಕೃತದಲ್ಲಿ ಸಾಕಷ್ಟು ಬೆಳೆದಿದೆ. ಪಶುಪಕ್ಷಿ ಸಸ್ಯಾದಿಗಳನ್ನುದ್ದೇಶಿಸಿ ಹೇಳುವ ಮಾತು ಮಾನವನಿಗೆ ಅನ್ವಯವಾಗಿ ನೀತಿ ಬೋಧಿಸುತ್ತದೆ. ಯಾರ ಅಥವಾ ಯಾವುದರ ಹೊಗಳಿಕೆಯೋ ತೆಗಳಿಕೆಯೋ ಮತ್ತೆ ಯಾರಿಗೋ ಯಾವುದಕ್ಕೋ ಅನ್ವಯಿಸುತ್ತದೆ. ಸೋಮನಾಥನ ಅನ್ಯೋಕ್ತಿಶತಕ, ಚಂದ್ರಚೂಡನ ಅನ್ಯೋಕ್ತಿಕಂಠಾಭರಣ, ನೀಲಕಂಠನ ಅನ್ಯಾಪದೇಶಶತಕ ಮುಂತಾದ ಹಲವು ಅನ್ಯೋಕ್ತಿ ಕೃತಿಗಳಿವೆ.

ಸದಾನಂದನ ನೀತಿಮಾಲಾ, ಶಂಭುರಾಜನ ನೀತಿಮಂಜರೀ, ಸೋಮದೇವಸೂರಿಯ ನೀತಿವಾಕ್ಯಾಮೃತ ಮೊದಲಾದ ಹಲವು ನೀತಿಕಾವ್ಯಗಳೂ ಇವೆ. ಒಂದೇ ಹೆಸರಿನ ಕಾವ್ಯಗಳನ್ನು ಹಲವರು ಬರೆದಿರುವುದೂ ಉಂಟು. ಇವುಗಳಲ್ಲಿ ಅಂತಹ ಪ್ರತಿಭೆಯಾಗಲೀ ಪಾಂಡಿತ್ಯವಾಗಲೀ, ವಿಶೇಷ ಚಮತ್ಕಾರವಾಗಲೀ ಇಲ್ಲ.

ವೈರಾಗ್ಯ, ಧರ್ಮ ಮತ್ತು ಶಾಂತಿಗಳನ್ನು ಕುರಿತ ಹಲವು ಕಾವ್ಯಗಳೂ ಸಂಸ್ಕೃತದಲ್ಲಿವೆ. ಇವುಗಳಲ್ಲಿ ಕೆಲವು ಕಾವ್ಯ ಧರ್ಮದಿಂದ ಕೂಡಿದ್ದು ಜನಪ್ರಿಯವಾಗಿವೆ.

ವೈರಾಗ್ಯ ಶತಕ :— ಭರ್ತೃಹರಿಯ ಈ ಶತಕವು ಬಹಳ ಪ್ರಸಿದ್ಧವಾದುದು. ಇವನ ಉಕ್ತಿಗಳು ಸಮರ್ಥವೂ ಸುಂದರವೂ ಆಗಿದ್ದು ಓದುಗರ ಹೃದಯಗಳಲ್ಲಿ ಸ್ಥಿರವಾದ ಚಿಹ್ನೆಗಳನ್ನು ಮೂಡಿಸುತ್ತವೆ. ಶೈಲಿಯಲ್ಲಾಗಲೀ ಭಾಷೆಯಲ್ಲಾಗಲೀ ಕ್ಲೇಶವಿಲ್ಲ. ಹಲವು ಸಾರಿ ಓದಿ ಚಪ್ಪರಿಸಬೇಕೆಂಬ ಆಸೆಯಾಗುತ್ತದೆ. ಹೆಚ್ಚು ಅಲಂಕಾರಗಳಿಲ್ಲದಿದ್ದರೂ ಪ್ರತಿಪಾದನ ರೀತಿಯಲ್ಲಿ ಆಕರ್ಷಣೆಯಿದೆ. ಮಾನವನ ಪ್ರಕೃತಿಯಲ್ಲಿ ರಕ್ತಿ — ವಿರಕ್ತಿಗಳೆರಡೂ ಇವೆ. ರಾಗವೇ ಅಧಿಕವಾಗಿದ್ದರೂ ಸುಪ್ತವಿರಾಗವೂ ವಿವೇಕ ಸನ್ನಿವೇಶ ಘಟನೆಗಳ ಮಾರುತಕ್ಕೆ ಸಿಕ್ಕಿ ಉಲ್ಬಣಿಸುತ್ತದೆ. ಹಳದನ್ನೆಲ್ಲಾ ಭಸ್ಮಮಾಡಿ ವ್ಯಕ್ತಿಯ ಬಣ್ಣವನ್ನೇ ಬದಲಾಯಿಸುತ್ತದೆ. ಅಂತಃಪುರ ಬಿಡಲಾರದವನು ಕಾಡಿಗೆ ಓಡುತ್ತಾನೆ. ಬುದ್ಧ ಮೊದಲಾದ ಮಹಾನುಭಾವರ ಜೀವನ ತಿರುವುಪಡೆದುದು ಹೀಗೆಯೇ. ಭರ್ತೃಹರಿಗೆ ಶೃಂಗಾರ



ಚಿತ್ರಣದಲ್ಲಿ ಎಂತಹ ಆವೇಶ ವೇಗಗಳಿವೆಯೋ ತತ್ಸದೃಶ ಆವೇಶ ವೇಗಗಳೇ ವೈರಾಗ್ಯ ಚಿತ್ರಣದಲ್ಲಿಯೂ ಇವೆ. ಶೃಂಗಾರ, ನೀತಿ, ವೈರಾಗ್ಯಗಳ ನಿರೂಪಣೆಗೆ ಕವಿಯ ಜೀವನಾನುಭವ ಪ್ರೇರಣೆ ನೀಡಿರಬೇಕು.

ವೈರಾಗ್ಯಶತಕವು ಶಿಖೆಯಲ್ಲಿ ಚಾರುಚಂದ್ರಕಲೆಯನ್ನು ಧರಿಸಿದ ವಿಲೋಲಕಾಮನನ್ನು ದಹಿಸಿದ, ಹೃದಯದ ಅಪಾರಮೋಹತಿಮಿರವನ್ನು ಉಚ್ಚಾಟಿಸುವ ಜ್ಞಾನಪ್ರದೀಪನಾದ ಹರನ ಪ್ರಾರ್ಥನೆಯಿಂದ ಪ್ರಾರಂಭಗೊಂಡು 'ಗಿರೀಂದ್ರಕಂದರದರೀಕುಂಜೇ ನಿವಾಸಃ ಕ್ವಚಿತ್' ಯುಕ್ತವೆಂಬ ಮಾತಿನಿಂದ ಮುಗಿಯುತ್ತದೆ. ಇದರಲ್ಲಿ ತೃಷ್ಣೆ, ಯಾಚನೆ, ದೈನ್ಯಗಳ ದೂಷಣೆ, ಯತಿನೃಪತಿಸಂಬಂಧ, ನಿತ್ಯಾನಿತ್ಯವಿಚಾರ, ಶಿವಾರ್ಚನಪದ್ಧತಿ, ಅವಧೂತಚರ್ಯೆಗಳೂ ಬಂದಿವೆ. ಆಶೆಯು ಪ್ರಬಲವಾದುದು, ಅದು ಪೂರೈಸುವುದೂ ಇಲ್ಲ; ಮಾನವನನ್ನು ಸುಮ್ಮನಿರಗೊಡವುದೂ ಇಲ್ಲ—

ಭ್ರಾಂತ್ವಾ ದೇಶಮನೇಕದುರ್ಗವಿಷಮಂ ಪ್ರಾಪ್ತಂನ ಕಿಂಚಿತ್ಫಲಂ
ತ್ಯಕ್ತ್ವಾಜಾತಿಕುಲಾಭಿಮಾನಮುಚಿತಂ ಸೇವಾ ಕೃತಾ ನಿಷ್ಫಲಾ ।
ಭುಕ್ತಂ ಮಾನವಿವರ್ಜಿತಂ ಪರಗೃಹೇಷ್ವಾಶಂಕಯಾ ಕಾಕವತ್
ತೃಷ್ಣೇ । ಜೃಂಭಸಿ ಪಾಪಕರ್ಮಪಿಶುನೇ ನಾದ್ಯಾಪಿ ಸಂತುಷ್ಯಸಿ ॥

ಆಶೆಗೆ ವಶರಾಗಿ ನಾವು ಕೆಟ್ಟೆವು : —

ಭೋಗಾ ನ ಭುಕ್ತಾ ವಯಮೇವ ಭುಕ್ತಾ ತಪೋ ನ ತಪ್ತಂ ವಯಮೇವ ತಪ್ತಾಃ ।
ಕಾಲೋ ನ ಯಾತೋ ವಯಮೇವ ಯಾತಾ ತೃಷ್ಣಾ ನ ಜೀರ್ಣಾ ವಯಮೇವ ಜೀರ್ಣಾ

ವಿಷಯಗಳು ಕ್ಷಣಭಂಗುರ, ಮಾಂಸ ಗ್ರಂಥಿಗಳಲ್ಲಿ ಸೌಂದರ್ಯವನ್ನು ಹುಡುಕುತ್ತೇವೆ, ಯಾವ ಅವಸ್ಥೆಯಲ್ಲಿಯೂ ವಿಷಯಗಳನ್ನು ಬಿಡಲಾರೆವು—

ಚಂಚಲ ಭೋಗಗಳಿಗಾಗಿ ಮಾನವನ್ನು ಕೈಬಿಟ್ಟು ಕಾಡಿ ಬೇಡಿ ದೈನ್ಯದಿಂದ ಬಾಳುತ್ತೇವೆ. ನಮ್ಮ ಸ್ವರೂಪದ ಅರಿವೂ ಇರದೆ ಆತ್ಮಕ್ಕೆ ಅಹಿತವನ್ನು ಆಚರಿಸುತ್ತೇವೆ—

ವ್ಯಾಘ್ರೀವ ತಿಷ್ಠತಿ ಜರಾ ಪರಿತರ್ಜಯಂತೀ
ರೋಗಾಶ್ಚಶತ್ರವ ಇವ ಪ್ರಹರಂತಿ ದೇಹೇ ।
ಆಯುಃ ಪರಿಸ್ರವತಿ ಭಿನ್ನಘಟಾದಿವಾಂಭೋ
ಲೋಕಸ್ತಥಾಪ್ಯಹಿತಮಾಚರತೀತಿ ಚಿತ್ರಮ್ ॥

ಅಹಿ—ಹಾರಗಳನ್ನೂ, ಮಣಿ-ಲೋಷ್ಟಗಳನ್ನೂ, ತೃಣ—ಸ್ತ್ರೈಣಗಳನ್ನೂ ಸಮಾನವಾಗಿ ಕಾಣುವವನಿಗೆ ದಿನಗಳು ಸುಲಭವಾಗಿ ಕಳೆಯುತ್ತವೆ. ಸುಖ ದುಃಖಗಳಿಗೆ ಮನಸು ಮೂಲ. ಈ ಪದ್ಯ ಧನಿಕದರಿದ್ರರ ಅಂತರವನ್ನು ಸ್ಪಷ್ಟಪಡಿಸುತ್ತದೆ—

ವಯಮಿಹ ಪರಿತುಷ್ಟಾ ವಲ್ಕಲೈಸ್ತ್ವಂ ದುಕೂಲೈಃ
ಸಮ ಇಹ ಪರಿತೋಷೋ ನಿರ್ವಿಶೇಷೋ, ವಿಶೇಷಃ ।
ಸ ತು ಭವತಿ ದರಿದ್ರೋ ಯಸ್ಯ ತೃಷ್ಣಾ ವಿಶಾಲಾ
ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ ॥

ರೋಗ ಮುಪ್ಪುಗಳು ಬರದೆ ದೇಹ ಗಟ್ಟಿಯಾಗಿರುವಾಗಲೇ ಆತ್ಮ ಶ್ರೇಯಸ್ಸಿಗೆ ಪ್ರಯತ್ನಿಸಬೇಕು. ಸಂದೀಪ್ತೇ ಭವನೇತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ?

ಭೋಗದಲ್ಲಿ ರೋಗಭಯ, ಕುಲದಲ್ಲಿ ಚ್ಯುತಿಭಯ, ವಿತ್ತದಲ್ಲಿ ರಾಜಭಯ, ಕಾಲದಲ್ಲಿ ರಿಪುಭಯ, ಹೀಗೆ 'ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಂ'.

ಅಪ್ಪಯ್ಯದೀಕ್ಷಿತ, ಜನಾರ್ದನ, ನೀಲಕಂಠ, ಶಂಕರಾಚಾರ್ಯ, ಸೋಮನಾಥ ಮತ್ತು ಪದ್ಮನಂದರೂ ವೈರಾಗ್ಯಶತಕಗಳನ್ನು ಬರೆದಿದ್ದಾರೆ. ಭರ್ತೃಹರಿಯಂತೆ ಧನದರಾಜನೂ ಕ್ರಿ.ಶ. 1430–ಮೂರು ಶತಕಗಳನ್ನು ಬರೆದಿದ್ದಾನೆ. ವಜ್ರಸಿಂಹಾಚಾರ್ಯನ ಶಿಷ್ಯನಾದ ಜೈನಯತಿ ಸೋಮಪ್ರಭನು ಸಿಂದೂರಪ್ರಕರವೆಂಬ ನೀತಿ ಕಾವ್ಯವನ್ನು ಬರೆದಿದ್ದಾನೆ.

ಶಾಂತಿ ಶತಕ :—ಕಾಶ್ಮೀರದ ಶಿಲ್ಹಣನು ಇದರ ಕವಿ. ಸದುಕ್ತಿ ಕರ್ಣಾಮೃತದ ಸಂಗ್ರಹಕಾರನು (ಕ್ರಿ.ಶ. 1205) ಇವನ ಪದ್ಯಗಳನ್ನು ಉದ್ಧರಿಸಿದ್ದಾನೆ. ಶಿಲ್ಹಣನು ಭರ್ತೃಹರಿಯನ್ನು ಅನುಕರಿಸಿದ್ದಾನೆ ಮತ್ತು ಅವನಿಂದ ಅನೇಕ ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ವೈಷ್ಣವನಾದ ಇವನು ತನ್ನ ಭಾವನೆಗನುಗುಣವಾಗಿ ಕೊಂಚ ಪರಿಷ್ಕರಿಸಿ ಭರ್ತೃಹರಿಯ ಕೆಲವು ಪದ್ಯಗಳನ್ನು ಬಳಸಿಕೊಂಡಿದ್ದಾನೆ. ಸ್ವತಂತ್ರ ಪದ್ಯಗಳನ್ನೂ ರಚಿಸಿದ್ದಾನೆ. ಈ ಕೃತಿಯಲ್ಲಿ ಗಮನಿಸಬೇಕಾದ ಕಾವ್ಯಧರ್ಮವಾಗಲೀ ಆಸ್ವಾದಿಸಬಹುದಾದ ಚಾತುರ್ಯವಾಗಲೀ ಇಲ್ಲ.

ಈ ಕಾವ್ಯ ಅಮರರ ಮೇಲೂ ಪ್ರಭಾವವುಳ್ಳ ಕರ್ಮದ ಪ್ರಾರ್ಥನೆಯಿಂದ ಪ್ರಾರಂಭವಾಗಿ 'ಅನಾವಿಲಮಿದಂ ಬ್ರಹ್ಮಸರಃ ಕಿಂ ನಾವಗಾಹಸೇ' ಎಂಬ ಮಾತಿನಿಂದ ಮುಗಿಯುತ್ತದೆ. ಇದರಲ್ಲಿ ಪರಿತಾಪೋಪಶಮ, ವಿವೇಕೋದಯ, ಕರ್ತವ್ಯತೋಪದೇಶ ಮತ್ತು ಬ್ರಹ್ಮಪ್ರಾಪ್ತಿಗಳೆಂಬ ನಾಲ್ಕು ಪರಿಚ್ಛೇದಗಳಿವೆ.

ಆಶೆಗೆ ಸಿಕ್ಕಿದ ಹೃದಯು ಅವಿಶ್ವಾಸ್ಯ :—

ತ್ವಾಮುಂದರ ! ಸಾಧು ಮನ್ಯೇ ಶಾಕೈರಪಿ ಯದಸಿ ಲಬ್ಧಪರಿತೋಷಮ್
ಹತಹೃದಯಂ ಹ್ಯಧಿಕಾಧಿಕವಾಂಛಾಶತದುರ್ಭರಂ ನ ಪುನಃ ॥

ಹೃದಯವೇ ಮುನಿಗಳ ಮಾತನ್ನು ಕೇಳು. ಯೋಷಿತ್ಸನ್ನಿಧಿಯು ತರವಲ್ಲ ವಿಷಯಂಗಳಿಂದ ಸುಖವಿಲ್ಲ—

ದಧತಿ ತಾವದಮೀ ವಿಷಯಾಃ ಸುಖಂ
ಸ್ಫುರತಿ ಯಾವದಿಯಂ ಹೃದಿ ಮೂಢತಾ ।
ಮನಸಿ ತತ್ತ್ವವಿದಾಂ ತು ವಿವೇಚಕೇ
ಕ್ವ ವಿಷಯಾಃ ಕ್ವ ಸುಖಂ ಕ್ವ ಪರಿಗ್ರಹಾಃ ॥

ಪಂಡಿತರಾಜ ಜಗನ್ನಾಥನ ಭಾಮಿನೀ ವಿಲಾಸದಲ್ಲಿ ಶಾಂತಿವಿಲಾಸವೆಂಬ ಒಂದು ಅಧ್ಯಾಯವಿದೆ. ಇದು ಅಲ್ಲಿರುವ ಒಂದು ಸುಂದರ ಪದ್ಯ—



ಧೂರ್ತೀರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯಕೋಲಾಹಲಃ
ನಾಶೋ ಹಂತ ಸತಾಮಸತ್ಪಥಜುಷಾಮಾಯುಃ ಶತಾನಾಂ ಸತಮ್ ।
ದುರ್ನೀತಿಂ ತವ ವೀಕ್ಷ್ಯ ಕೋಪದಹನಜ್ವಾಲಾಜಟಾಲೋಽಪಿ ಸನ್
ಕಿಂ ಕುರ್ವೇ ಜಗದೀಶ ಯತ್ಪುನರಹಂ ದೀನೋ ಭವಾನೀಶ್ವರಃ ॥

ಶಂಕರಾಚಾರ್ಯರು ಶತಶ್ಲೋಕೀ, ಮೋಹಮುದ್ಗರ, ಚರ್ಪಟಪಂಜರಿಕಾ ಮುಂತಾದ ಉಪದೇಶಾತ್ಮಕ ಕಾವ್ಯಗಳನ್ನು ಬರೆದಿದ್ದಾರೆ. ಇವುಗಳಲ್ಲಿ ವಿರಕ್ತಿಭಾವದ ಅಭಿವ್ಯಕ್ತಿ ಸುಂದರವಾಗಿದೆ. ಇವುಗಳ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ವರ್ಣವೃತ್ತ ಮತ್ತು ಮಾತ್ರಾವೃತ್ತಗಳಿಂದ ರಚಿತವಾದ ಇವು ಪ್ರಾಸಬದ್ಧವಾಗಿದ್ದು ಗಾನಯೋಗ್ಯವಾಗಿವೆ. ಬಹು ಜನರು ಹಾಡಿ ಆನಂದಿಸುತ್ತಾರೆ ; ಚಿಂತಿಸಿ ಆಸ್ವಾದಿಸುತ್ತಾರೆ ; ಜನರ ಮೇಲೆ ಇವುಗಳ ಪ್ರಭಾವ ಅಧಿಕವಾಗಿದೆ.

ಮೋಹಮುದ್ಗರದ ಪದ್ಯಗಳು :—

1. ಅರ್ಥಮನರ್ಥಂ ಭಾವಯ ನಿತ್ಯಂ ನಾಸ್ತಿ ತತಃ ಸುಖಲೇಶಃ ಸತ್ಯಮ್ ।
ಪುತ್ರಾದಪಿ ಧನಭಾಜಾಂ ಭೀತಿಃ ಸರ್ವತ್ರೈಷಾ ವಿಹಿತಾ ರೀತಿಃ ॥
2. ಕಾ ತೇ ಕಾಂತಾ ಕಸ್ತೇ ಪುತ್ರಃ ಸಂಸಾರೋಽಯಮತೀವ ವಿಚಿತ್ರಃ ।
ಕಸ್ಯ ತ್ವಂ ವಾ ಕುತ ಆಯಾತಃ ತತ್ತ್ವಂ ಚಿಂತಯ ತದಿದಂ ಭ್ರಾತಃ ॥

ಚರ್ಪಟಪಂಜರಿಕೆಯ ಪದ್ಯ :—

ದಿನಮಪಿ ರಜನೀ ಸಾಯಂಪ್ರಾತಃ
ಶಿಶಿರವಸಂತೌ ಪುನರಾಯಾತಃ ।
ಕಾಲಃ ಕ್ರೀಡತಿ ಗಚ್ಛತ್ಯಾಯುಃ
ತದಪಿ ನ ಮುಂಚತ್ಯಾಶಾವಾಯುಃ ॥

ಸ್ರಗ್ಧರಾವೃತ್ತದ 100 ಪದ್ಯಗಳನ್ನುಳ್ಳ ಶತಶ್ಲೋಕಿಯು ವೇದಾಂತವನ್ನು ಬೋಧಿಸುತ್ತದೆ.

## ವಿಡಂಬನ ಕಾವ್ಯಗಳು

ನೀತಿ ಬೋಧೆಯು ಕಾವ್ಯ ಪ್ರಯೋಜನಗಳಲ್ಲೊಂದು. ಆದರ್ಶಕೊಡದ ಕಾವ್ಯಕ್ಕೆ ಲೋಕಮಾನ್ಯತೆ ನೀಡದು. ಕಾವ್ಯಧರ್ಮವಿಲ್ಲದ ನೀತಿ ಬೋಧೆಯನ್ನು ಕಾವ್ಯವೆಂದೂ ಪರಿಗಣಿಸುವುದಿಲ್ಲ. ನೀತಿ ಬೋಧಿಸುವ ವಿಧಾನವು ಸಾಕ್ಷಾತ್ ಮತ್ತು ಪರೋಕ್ಷವೆಂದು ಎರಡು ವಿಧ. ಈವರೆಗೆ ಪ್ರಸ್ತಾಪಿಸಿದ ನೀತಿ–ವೈರಾಗ್ಯ– ಶಾಂತಿ ಮುಂತಾದ ಕಾವ್ಯಗಳು ಸಾಕ್ಷಾತ್ ಪ್ರಕಾರಕ್ಕೆ ಸೇರಿದವು. ವ್ಯಕ್ತಿಯ, ಸಮಾಜದ, ದೇಶದ ಲೋಪದೋಷಗಳನ್ನು ಎತ್ತಿ ತೋರಿಸುವ

ಮೂಲಕ ನೀತಿ ಬೋಧಿಸುವ ಮತ್ತೊಂದು ಪ್ರಕಾರವುಂಟು. ಇದರಿಂದ ಪರೋಕ್ಷವಾಗಿ ನೀತಿ ಬೋಧೆಯಾಗುತ್ತದೆ. ನೀತಿ, ಕಾವ್ಯಧರ್ಮ, ಲಘುಹಾಸ್ಯ ಬೆರೆತ ಈ ದ್ವಿತೀಯ ವಿಭಾಗದ ಕಾವ್ಯಗಳನ್ನು ವಿಡಂಬನ ಕಾವ್ಯಗಳೆಂದು ಕರೆಯುತ್ತಾರೆ. ಇವು ಸಮರ್ಥವೂ ಸುಂದರವೂ ಆಗಿ ನೀತಿಯನ್ನು ಬೋಧಿಸುತ್ತವೆ. ಲೋಕದ ದುರವಸ್ಥೆಯನ್ನು ನೋಡಿ, ಕರುಣಾಕ್ರಂದನವನ್ನು ಕೇಳಿ, ಮನಕರಗಿದ ಕವಿ ವಿಡಂಬನಕಾವ್ಯವನ್ನು ರಚಿಸುತ್ತಾನೆ. ಕಾವ್ಯನಾಟಕಾದಿಗಳಲ್ಲಿ ಪ್ರಾಸಂಗಿಕವಾಗಿ ವಿಡಂಬನಾಂಶಗಳನ್ನು ನೋಡುತ್ತೇವೆ. ವೆಂಕಟಾಧ್ವರಿಯ ವಿಶ್ವಗುಣಾದರ್ಶ ಚಂಪು ವಿಡಂಬನಾ ರೂಪವಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಹಾಸ್ಯವು ಗೌರವ ಸ್ಥಾನವನ್ನು ಪಡೆದಿಲ್ಲ. ನಾಟಕಗಳಲ್ಲಿ ಒಂದಲ್ಲ ಒಂದು ರೀತಿಯ ಹಾಸ್ಯವಿರುತ್ತದೆ. ಸುಭಾಷಿತ ಸಂಗ್ರಹ ಗಳಲ್ಲಿ ಅನೇಕ ವಿಡಂಬನ ಪದ್ಯಗಳಿರುತ್ತವೆ. ಕಾವ್ಯಧರ್ಮ ಬೆರೆತ ಲಘು ಹಾಸ್ಯವು ಕೀಟಲೆಯ ಟೀಕೆಯಾಗಿ ಪರಿಣಮಿಸದೆ ಜಾಗೃತಗೊಳಿಸಿ ನೀತಿಯನ್ನು ಬೋಧಿಸುತ್ತದೆ. ಇದಕ್ಕೇ ಮೀಸಲಾದ ಸ್ವತಂತ್ರ ಕಾವ್ಯಗಳು ಸಂಸ್ಕೃತದಲ್ಲಿವೆ. ಜೋಯಿಸ, ವೈದ್ಯ, ಅಕ್ಕಸಾಲಿಗ, ಅಧ್ಯಾಪಕ, ವೈದಿಕ ಮೊದಲಾದವರ ವೃತ್ತಿ ವಂಚನೆಯನ್ನೂ, ಲೋಪದೋಷಗಳನ್ನೂ ಬಯಲಿ ಗೆಳೆದು ನೀತಿ ಬೋಧಿಸುವ ವಿಡಂಬನಕಾವ್ಯಗಳು ಹೆಚ್ಚು ಲೋಕಪ್ರಿಯವಾಗಿವೆ.

ಕುಟ್ಟಿನೀಮತ :—

ಕಾಶ್ಮೀರದ ರಾಜ ಜಯಾಪೀಡನ (ಕ್ರಿ.ಶ. 751–786) ಮಂತ್ರಿಯಾಗಿದ್ದ ದಾಮೋದರ ಗುಪ್ತನು ಇದರ ಕವಿ. ಕುಟ್ಟಿನೀಮತ ಅಥವಾ ಶಂಭಾವಿಮತವು ಲೋಕದ ಲೋಪದೋಷಗಳನ್ನು ಬಯಲಿಗೆಳೆಯುವ ಒಂದು ಸುಂದರ ವಿಡಂಬನ ಕಾವ್ಯ. ಕುಟ್ಟಿನಿಯೆಂದರೆ ಕುಂಟಣಿ ಅಥವಾ ಕುಂಟಲಗಿತ್ತಿ; ಅವಳ ಮತವೆಂದರೆ ಉಪದೇಶ, ಕಾಶಿಯು ಇದರ ಕ್ಷೇತ್ರ. ವಿಟಚೇಟರ ವರ್ಗ ಮತ್ತು ಅಮೂಲ್ಯ ಆಭರಣಗಳಿಂದ ಕೂಡಿದ ವೇಶ್ಯೆಯರು ಶಿವನ ಪ್ರಸಾದಕ್ಕೆ ಪಾತ್ರರು. ಕಾಶಿಯ ಸಂಪಾದನೆಯಿಲ್ಲದ ವೇಶ್ಯೆಯಾದ ಮಾಲತಿಯು ಒಂದುದಿನ ನುರಿತ ಕುರೂಪಿಯಾದ ವಿಕರಾಳೆಯು ಹಾಡಿದ, ಸ್ತ್ರೀಯರು ಪ್ರೇಮಿಗಳನ್ನು ಸೆಳೆಯುವ ಕಲೆಯನ್ನು ಬೋಧಿಸುವ ಒಂದು ಆರ್ಯಾಪದ್ಯವನ್ನು ಕೇಳಿಸಿಕೊಂಡಳು. ವಿಕರಾಳೆಯ ಮನೆಗೆ ಹೋಗಿ ಅವಳಿಂದ ಆ ಕಲೆಯನ್ನು ಕಲಿತಳು. ವಿಕರಾಳೆಯ ಉಪದೇಶವೇ ಕಾವ್ಯದ ವಸ್ತು. ಅವಳು ಸುಳ್ಳು, ಮೋಸ ವಂಚನೆಗಳಿಂದ ಹೇಗೆ ಪರಪುರುಷರನ್ನು ಮರುಳುಮಾಡಬಹುದೆಂಬುದನ್ನು ದೃಷ್ಟಾಂತಕಥೆ ಗಳಿಂದ ನಿರೂಪಿಸಿದ್ದಾಳೆ. ಇದೊಂದು ಕಥೆಗಳ ಪುಂಜವಾಗಿದೆ; ಇಡೀ ರತ್ನಾವಳಿಯ ಸುಂದರ ಕಥಾಸಂಗ್ರಹವು ಇದರಲ್ಲಿದೆ. ಕಥೆಯನ್ನು ಬೆಳೆಸುವ ಮತ್ತು ಸಂಗ್ರಹಿಸುವ ಕಲೆ ಕವಿಗಿದೆ. ಈ ಕಾವ್ಯದಿಂದ ಲೋಕದ ಡಂಬಾಚಾರ, ವಂಚನೆ, ಸಾಮಾಜಿಕ ಲೋಪದೋಷಗಳು, ಜನರ ಸ್ವಭಾವ ಮುಂತಾದುವನ್ನು ತಿಳಿಯಬಹುದು. ಕಾಮಶಾಸ್ತ್ರದ ಹಲವು ಸಂಗತಿಗಳು ವಿವರ ವಾಗಿ ವರ್ಣಿಸಲ್ಪಟ್ಟಿವೆ. ಇದರ ಭಾಷೆ ಸುಲಭ; ಶೈಲಿ ಸರಳ. ಕಾವ್ಯ ರಚನೆಯಲ್ಲಿ ಯಾವ ವಿಶೇಷ ಪ್ರತಿಭೆಯೂ ಇಲ್ಲ. ಕಲ್ಹಣನು ದಾಮೋದರ ಗುಪ್ತನನ್ನು ಕವಿಯೆಂದು ಕರೆದಿದ್ದಾನೆ.



ಮಮ್ಮಟ ಮತ್ತು ರುಯ್ಯಕರು ಇವನ ಪದ್ಯಗಳನ್ನು ಉದಾಹರಿಸಿದ್ದಾರೆ. ಜಯಂತನು ತನ್ನ ನ್ಯಾಯಮಂಜರಿಯಲ್ಲಿ ಕುಟ್ಟಿನೀಮತದ ಶೃಂಗಾರವನ್ನು ಟೀಕಿಸಿದ್ದಾನೆ.

ಸಂಕಲ್ಪಭವನ ಪ್ರಾರ್ಥನೆಯಿಂದ ಈ ಕಾವ್ಯ ಪ್ರಾರಂಭವಾಗಿದೆ—

ಸ ಜಯತಿ ಸಂಕಲ್ಪಭವೋ ರತಿಮುಖಶತಪತ್ರಚುಂಬನಭ್ರಮರಃ ।
ಯಸ್ಯಾನುರಕ್ತಲಲನಾನಯನಾಂತವಿಲೋಕಿತಂ ವಸತಿಃ ॥

ವಿರಹಾವಸ್ಥೆಯ ವರ್ಣನೆ :—

ಅಪಸಾರಯ ಘನಸಾರಂ ಕುರು ಹಾರಂ ದೂರ ಏವ ಕಿಂ ಕಮಲೈಃ ।
ಅಲಮಲಮಾಲಿ ಮೃಣಾಲೈರಿತಿ ವದತಿ ದಿವಾನಿಶಂ ಬಾಲಾ ॥

ವೇಶ್ಯೆಯರ ಪರಮ ಗುರಿ ದುಡ್ಡು ; ಅದಕ್ಕಾಗಿ ಕಪಟ ಸಿದ್ಧತೆ, ಇದು ವೇಶ್ಯೆಯರ ಚಿತ್ರ

ಯಾಸಾಂ ಜಘನಾವರಣಂ ಪರಕೌತುಕವೃದ್ಧಯೇ ನ ತು ತ್ರಪಯಾ ।
ಉಜ್ಜ್ವಲವೇಷಾ ರಚನಾ ಕಾಮಿಜನಾಕೃಷ್ಟಯೇ ನ ತು ಸ್ಥಿತಯೇ ॥
ಮಾಂಸರಸಾಭ್ಯವಹಾರಃ ಪುರುಷಾಹತಿಪೀಡಯಾ ನ ತು ಸ್ಪೃಹಯಾ ।
ಆಲೇಖ್ಯಾದೌ ವ್ಯಸನಂ ವೈದಗ್ಧ್ಯಖ್ಯಾತಯೇ ನ ತು ವಿನೋದಾಯ ॥

ಈ ಕಾವ್ಯದ ಭಾಷೆ ನವಿರಾಗಿರದಿದ್ದರೂ ಚಾತುರ್ಯ, ಲಘುಹಾಸ್ಯಗಳು ಚೆನ್ನಾಗಿವೆ. ಈ ಪದ್ಯ ಲಘುಹಾಸ್ಯವನ್ನು ಚಿಮ್ಮುತ್ತದೆ :—

ಶೃಣು ಸಖಿ ಕೌತುಕಮೇಕಂ ಗ್ರಾಮ್ಯೇಣ ಕುಕಾಮಿನಾ ಯದದ್ಯ ಕೃತಮ್ ।
ಸುರತಸುಖಮೀಲಿತಾಕ್ಷೀ ಮೃತೇತಿ ಭೀತೇನ ಮುಕ್ತಾಸ್ಮಿ ॥

ಇದು ಅನನುಭವಿಯಾದ ಕಾಮುಕವಿಪ್ರನ ಚಿತ್ರ :—

ಅವಿದಗ್ಧಃ ಶ್ರಮಕಠಿನೋ ದುರ್ಲಭಯೋಷಿದ್ಯುವಾ ವಿಪ್ರಃ ।
ಅಪಮೃತ್ಯುರಪಕ್ರಾಂತಃ ಕಾಮಿವ್ಯಾಜೇನ ಮೇ ರಾತ್ರೌ ॥

ಈ ಪದ್ಯ ಹೆಣ್ಣಿನ ಹೃದಯವನ್ನು ಬಹಿರಂಗ ಪಡಿಸುತ್ತದೆ :—

ಪರ್ಯಂಕಃ ಸ್ವಾಸ್ತರಣಃ ಪತಿರನುಕೂಲೋ ಮನೋಹರಂ ಸದನಮ್ ।
ನಾರ್ಹತಿ ಲಕ್ಷಾಂಶಮಪಿ ತ್ವರಿತಕ್ಷಣಚೌರ್ಯಸುರತಸ್ಯ ॥

ಈ ಕಾವ್ಯವನ್ನೋದಿದವರು ವಿಟ, ವೇಶ್ಯೆ, ಧೂರ್ತರುಗಳಿಂದ ವಂಚಿತರಾಗುವುದಿಲ್ಲವೆಂಬ ತನ್ನ ಗೂಢೋದ್ದೇಶವನ್ನು ಕವಿಯು ಕಾವ್ಯದ ಕೊನೆಯಲ್ಲಿ ತಿಳಿಸಿದ್ದಾನೆ.[1]

## ಕಲಾವಿಲಾಸ

ಕಾಶ್ಮೀರದ ದೊರೆಯಾದ ಅನಂತನ (1029–1064 ಕ್ರಿ.ಶ.) ಆಸ್ಥಾನ ಕವಿಯಾಗಿದ್ದ ಕ್ಷೇಮೇಂದ್ರನ ಕೃತಿ ಇದು. ಇವನನ್ನು ವ್ಯಾಸದಾಸನೆಂದು ಕರೆಯುತ್ತಿದ್ದರು. ಇವನ ತಂದೆ

1. ಕಾವ್ಯಮಿದಂ ಯಃ ಶೃಣುತೇ ಸಮ್ಯಕ್ ಕಾವ್ಯಾರ್ಥಪಾಲನೇನಾಸೌ ।
ನೋ ವಂಚ್ಯತೇ ಕದಾಚಿದ್ವಿಟವೇಶ್ಯಾಧೂರ್ತಕುಟ್ಟನೀಭಿರಿತಿ ॥

ಪ್ರಕಾಶೇಂದ್ರ ; ತಾತ ಸಿಂಧು. ಇವನು ಮೊದಲು ಶಿವೋಪಾಸಕನಾಗಿದ್ದು ನಂತರ ವೈಷ್ಣವ ಭಾಗವತನಾಗಿದ್ದನು. ಅಭಿನವಗುಪ್ತನಲ್ಲಿ ಅಧ್ಯಯನ ಮುಗಿಸಿ ಅನೇಕ ಗ್ರಂಥಗಳನ್ನು ಬರೆದನು. ಇವನ ರಾಜಾವಳಿಯು ಒಂದು ಐತಿಹಾಸಿಕ ಕಾವ್ಯ. ಬೃಹತ್ಕಥೆ, ರಾಮಾಯಣ, ಮಹಾಭಾರತಗಳನ್ನು ಬೃಹತ್ಕಥಾ ಮಂಜರಿ, ರಾಮಾಯಣ ಮಂಜರೀ ಮತ್ತು ಭಾರತ ಮಂಜರಿ ಎಂಬ ಹೆಸರಿನಿಂದ ಪದ್ಯರೂಪವಾಗಿ ಸಂಗ್ರಹಿಸಿದ್ದಾನೆ. ಲಲಿತರತ್ನಮಾಲಾ, ಚಿತ್ರಭಾರತ ಮತ್ತು ಕನಕಜಾನಕೀ ಎಂಬ ರೂಪಕಗಳನ್ನು ಶಶಿವಂಶ ಮಹಾಕಾವ್ಯ, ಅಮೃತರಂಗಕಾವ್ಯ, ಅವಸರಸಾರ, ಮುಕ್ತಾವಳೀ, ಲಾವಣ್ಯವತಿ, ದೇಶೋಪದೇಶ. ಪವನಪಂಚಾಶಿಕಾ, ಪದ್ಯಕಾದಂಬರಿ, ಅವದಾನದ ಕಲ್ಪಲತಾ, ನೀತಿಕಲ್ಪತರು, ಲೋಕಪ್ರಕಾಶಕೋಶ, ಸೇವ್ಯಸೇವಕೋಪದೇಶ. ನೀತಿಲತಾ, ವಿನಯವಲ್ಲಿ, ದರ್ಪದಲನ, ಮುನಿಮತ ಮೀಮಾಂಸಾ, ಕವಿಕಂಠಾಭರಣ, ದಶಾವತಾರಚರಿತ, ಕಲಾವಿಲಾಸ, ಚಾರುಚರ್ಯಾ, ಸುವೃತ್ತತಿಲಕ, ಸಮಯಮಾತೃಕಾ, ಲೋಕಪ್ರಕಾಶ, ಔಚಿತ್ಯವಿಚಾರಚರ್ಚಾ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಕೆಲವು ಕೃತಿಗಳು ಮಾತ್ರ ದೊರೆತು ಪ್ರಕಾಶಕ್ಕೆ ಬಂದಿವೆ.

ಕಲಾವಿಲಾಸ ಹತ್ತು ಅಧ್ಯಾಯಗಳನ್ನುಳ್ಳ ಒಂದು ವಿಡಂಬನ ಕಾವ್ಯ. ಇದರಲ್ಲಿ ನಾನಾ ವೃತ್ತಿಗಳ ಜನರ ಲೋಪದೋಷಗಳನ್ನು ವರ್ಣಿಸಲಾಗಿದೆ. ಗ್ರಂಥದ ನಾಯಕನಾದ ಮೂಲ ದೇವನು ವಂಚನೆಯ ಅಪರಮೂರ್ತಿ. ಬಾಲಕನಾದ ಚಂದ್ರಗುಪ್ತನನ್ನು ಅವನ ತಂದೆಯು ವೃತ್ತಿ ಶಿಕ್ಷಣಕ್ಕಾಗಿ ಮೂಲದೇವನಿಗೆ ಒಪ್ಪಿಸುತ್ತಾನೆ. ಮೂಲದೇವನು ವಂಚನೆ ಡಂಬಾಚಾರಗಳು ಲೋಕದಲ್ಲವತರಿಸಿ ಸನ್ಯಾಸಿ, ವೈದ್ಯ, ಸಂಗೀತಗಾರ, ಅಕ್ಕಸಾಲಿಗ, ವರ್ತಕ, ನಟ ಮೊದಲಾದ ವರಲ್ಲಿ ಹೇಗೆ ವಿರಾಜಿಸುತ್ತಿವೆಯೆಂಬುದನ್ನು ತಿಳಿಸುತ್ತಾನೆ; ವಂಚನೆ ಡಂಬಾಚಾರಗಳು ತಮ್ಮ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ಪ್ರಾಣಿಲೋಕಕ್ಕೂ ವಿಸ್ತರಿಸಿಕೊಂಡಿವೆ. ಧ್ಯಾನದಲ್ಲಿ ತೊಡಗಿರು ವಂತೆ ಬಕವು ಮೀನು ಹಿಡಿಯುತ್ತದೆ. ಮರವು ವಲ್ಕಧರಿಸಿದ ಯತಿಯಂತೆ ತೊಗಟೆಯನ್ನು ಧರಿಸಿದೆ. ಹೀಗೆ ಎಲ್ಲೆಲ್ಲೂ ಮೋಸ ತುಂಬಿದೆ. ಮಡಿಕೆ ಕುಡಿಕೆ ಮೊದಲಾದ ತಮ್ಮ ಸಾಮಾನುಗಳನ್ನು ತುಂಬಿಕೊಂಡು ಗುಂಪು ಗುಂಪಾಗಿ ಜಿಪ್ಸಿಗಳಂತೆ ಹಾಡುತ್ತಾ ಸಂಚರಿಸುತ್ತಿದ್ದ ಜನರ ಪರಿಚಯ ಕ್ಷೇಮೇಂದ್ರನಿಗೆ ಚೆನ್ನಾಗಿದ್ದಿತು. ಅವರು ದೀರ್ಘ ಕೇಶಿಗಳೂ, ಬಹು ಪುತ್ರರೂ ಆಗಿದ್ದರು. ಹೊಗಳಿಕೆ ಮಾತುಗಳಿಂದ ಹಗಲೆಲ್ಲಾ ಸಂಪಾದಿಸಿ ಅದನ್ನು ರಾತ್ರಿ ಮುಗಿಸಿಬಿಡುತ್ತಿದ್ದರು. ವಂಚನಾಚತುರನಾದ ಅಕ್ಕಸಾಲಿಗ. ಕಪಟ ಔಷಧಿಗಳನ್ನು ಕೊಟ್ಟು ಹಲವರ ಪ್ರಾಣತೆಗೆದು ದೊಡ್ಡ ಮನುಷ್ಯನಂತೆ ಬೀಗಿ ಮೆರೆಯುವ ವೈದ್ಯ. ತನ್ನ ಹಿಂದೆ ತನ್ನ ಹೆಂಡತಿ ಮಾಡುತ್ತಿರುವುದನ್ನು ತಿಳಿಯಲು ಅಸಮರ್ಥನಾದರೂ ಕೂಡಲೆ ಎಲ್ಲರ ಭವಿಷ್ಯವನ್ನು ನುಡಿಯುವ ಜೋಯಿಸ. ಕೂದಲು ಉದುರಿ ತನ್ನ ತಲೆಯೇ ಬೋಡಾಗಿದ್ದರೂ ಕೂದಲು ಉದುರದ ಔಷಧವನ್ನು ಪ್ರಚಾರಮಾಡಿ ಮಾರುವ ಬೋಳರನ್ನು ವಿಶೇಷವಾಗಿ ವರ್ಣಿಸಿದ್ದಾನೆ. ಕ್ಷೇಮೇಂದ್ರನದು ಕೆಚ್ಚಿನ ಎದೆ. ಅವನು ಲೋಕದ ಪ್ರಶಂಸೆಗೂ ನಿಂದೆಗೂ ಜಗ್ಗುವವನಲ್ಲ; ಯಾರ ಕಂಡ ಲೋಪದೋಷಗಳನ್ನು ಧೈರ್ಯವಾಗಿ ಬಹಿರಂ ... ಪಡಿಸುವವನಲ್ಲ.

ಪಡಿಸುತ್ತಾನೆ. ಕಲಾವಿಲಾಸದಲ್ಲಿ ಉತ್ತಮ ಗುಣಗಳ ಪ್ರಶಂಸೆಯೂ ಇದೆ ; ಕಾವ್ಯಾಂಶದಿಂದ ಕೂಡಿದ ಸುಂದರ ಪದ್ಯಗಳೂ ಇವೆ.

ಇದು ಚಂದ್ರೋದಯವರ್ಣನೆ :—

ಅಥ ಪಥಿಕವಧೂಹಹನಃ ಶನಕೈರುದಭೂನ್ನಿಶಾಕರಲೋಕಃ ।
ಕುಮುದಪ್ರಬೋಧಧೂರ್ತೋ, ವ್ಯಸನಗುರುಶ್ಚಕ್ರವಾಕೀನಾಮ್ ॥

ಚೌರ್ಯನಿಪುಣರಾದ ಅಕ್ಕಸಾಲಿಗರನ್ನು ರಾಜರು ಸರ್ವಥಾ ನಿಗ್ರಹಿಸಬೇಕು :—

ಮೇರುಃ ಸ್ಥಿತೋಽತಿದೂರೇ ಮನುಷ್ಯಭೂಮಿಂ ಪರಿತ್ಯಜ್ಯ
ಭೀತೋ ಭಯೇನ ಚೌರ್ಯಾಚ್ಚೌರಾಣಾಂ ಹೇಮಕಾರಾಣಾಮ್ ।
ತಸ್ಮಾನ್ಮಹೀಪತೀನಾಮಸಂಭವೇ ಚೌರದಸ್ಯೂನಾಮ್
ಏಕಃ ಸುವರ್ಣಕಾರೋ ನಿಗ್ರಾಹ್ಯಃ ಸರ್ವಥಾ ನಿತ್ಯಂ ॥

ಇದು ಒಬ್ಬ ಭಟ್ಟನ ಚಿತ್ರ :—

ನೀತ್ವಾ ನಿಖಿಲಾಂ ರಾತ್ರಿಂ ಕ್ಷೀಬೋ ವಾಂತಾಸವಃ ಶ್ವಲೀಢಾಸ್ಯಃ ।
ಅಭಿವಾದನಪರಿಶುದ್ಧಃ ಪ್ರಾತರ್ಭಟ್ಟೋಽನ್ಯಭಟ್ಟೇಷು ॥

ಇವನು ಕ್ಷೇಮೇಂದ್ರನ ಲೇಖಕ :—

ಆಕಾರಶೀರ್ಷಹಾರೀ ನವದರಕಾರೀ ಪದಾರ್ಥಸಂಹಾರೀ।
ಅಕ್ಷರಭಕ್ಷಕಮೇಲಾಲಿಪ್ತಮುಖೋ ಲೇಖಕಃ ಕಾಲಃ ॥

ದುಡ್ಡಿರುವ ಮನೆಗಳಲ್ಲಿ ಮಿಂಚಿನಂತೆ ಓಡಾಡುವ ವೈದ್ಯನ ಚಿತ್ರ :—

ಶಬ್ದಾಟೋಪೈರ್ಭಯಂಕೃದುಧ್ವಸ್ತಹತರಸಂನಿಪಾತಹತಲೋಕಃ ।
ವೈದ್ಯೋ ವಿದ್ಯುದಿವೋಗ್ರಃ ಪತತಿ ನಿಧಾನೇಷು ಸದನೇಷು ॥

ದರ್ಪದಲನ :—

ಇದರಲ್ಲಿ ಏಳು ಅಧ್ಯಾಯಗಳಿವೆ. ಇವು ಕುಲ, ಐಶ್ವರ್ಯ, ಜ್ಞಾನ, ಸೌಂದರ್ಯ, ಸಾಹಸ, ಔದಾರ್ಯ ಮತ್ತು ಸನ್ಯಾಸಗಳಿಂದ ಜನಿಸುವ ದುರಹಂಕಾರದ ದೋಷಗಳನ್ನು ವಿವರಿಸುತ್ತವೆ. ಪ್ರತಿ ಅಧ್ಯಾಯವೂ ನೀತಿವಾಕ್ಯದಿಂದ ಪ್ರಾರಂಭವಾಗುತ್ತದೆ. ಕಥಾನಾಯಕನು ಲೋಪ ದೋಷಗಳನ್ನು ಬಹಿರಂಗಪಡಿಸುತ್ತಾನೆ. ಎರಡನೆಯ ಅಧ್ಯಾಯದಲ್ಲಿ ಬುದ್ಧನೂ, ಏಳನೆಯ ಅಧ್ಯಾಯದಲ್ಲಿ ಶಿವನೂ ಸನ್ಯಾಸಿಗಳ ವಿಷಯಾಸಕ್ತಿಯನ್ನು ದೂಷಿಸುತ್ತಾರೆ.

ಸೇವ್ಯಸೇವಕೋಪದೇಶ :—

ಇದರಲ್ಲಿ ಅರವತ್ತೊಂದು ಪದ್ಯಗಳಿವೆ; ಪ್ರಭು ಮತ್ತು ಭೃತ್ಯರನ್ನು ಕುರಿತ ಉಪದೇಶಗಳಿವೆ.

ಚತುರ್ವರ್ಗಸಂಗ್ರಹ :—

ಇದರಲ್ಲಿ ಜೀವನದ ಪರಮಾರ್ಥಗಳಾದ ಧರ್ಮ-ಅರ್ಥ-ಕಾಮ–ಮೋಕ್ಷಗಳ ವಿವರಣೆಯಿದೆ.

ಚಾರುಚರ್ಯಾಶತಕ :—

ಇದರಲ್ಲಿ ನೂರು ಶ್ಲೋಕಗಳಿವೆ. ಪುರಾಣ ಮತ್ತು ಪುಣ್ಯಶ್ಲೋಕಗಳ ಮೂಲಕ ಸದ್ವರ್ತನೆಯನ್ನು ಬೋಧಿಸಲಾಗಿದೆ. ದ್ಯಾದ್ವಿವೇದನನೀತಿಮಂಜರಿಯ ಮೇಲೆ ಈ ಕೃತಿ ಪ್ರಭಾವ ಬೀರಿದೆ.

ಸಮಯಮಾತೃಕಾ :—

ವೇಶ್ಯೆಯರು ಬಲೆ ಬೀಸುವ ವಿಧಾನಗಳನ್ನು ಕಥೆಗಳ ಮೂಲಕ ವರ್ಣಿಸಲಾಗಿದೆ. ಪ್ರಧಾನ ನಾಯಿಕೆಯಾದ ಕಂಕಾಲಿಯು ಕಾಶ್ಮೀರದ ಎಲ್ಲೆಡೆ ಸಂಚರಿಸಿ ಹಣವನ್ನು ಕೊಳ್ಳೆ ಹೊಡೆಯುತ್ತಾಳೆ. ಅವಳ ಕಾರ್ಯಕ್ಷೇತ್ರಗಳಿಂದ ಅಲ್ಲಿನ ಜನರ ಆಗಿನ ರೀತಿ ನೀತಿಗಳನ್ನು ಗುರುತಿಸಬಹುದು. ಕಂಕಾಳಿಯು ಬೌದ್ಧವಿಹಾರಗಳನ್ನೂ ಬಿಡುವುದಿಲ್ಲ. ಈ ಕೃತಿಯಿಂದ ಆಗಿನ ಕಾಲದ ಉಪ್ಪಿನ ವ್ಯಾಪಾರದ ಪರಿಚಯವಾಗುತ್ತದೆ.

ದೇಶೋಪದೇಶ :—

ಇದರಲ್ಲಿ ಎಂಟು ಉಪದೇಶಗಳಿವೆ. ಖಳ, ಜಿಪುಣ, ಸೂಳೆ, ಕುಟ್ಟಿನೀ, ಬಾಲವಿಧವೆ, ವಿಟ, ಧೂರ್ತ ವಿದ್ಯಾರ್ಥಿಗಳು, ಹುಡುಗಿಯನ್ನು ಮದುವೆಯಾದ ಮುದುಕ, ಜೋತಿಷ್ಯ, ವೈದ್ಯ ಮುಂತಾದ ವೇಷಧಾರಿಗಳ ದುರಾಚಾರಗಳನ್ನು ನಿರೂಪಿಸಲಾಗಿದೆ.

ನರ್ಮಮಾಲಾ :—

ಇದರಲ್ಲಿ ಮೂರು ಪರಿಹಾಸಗಳಿವೆ. ಅಧಿಕಾರಿಗಳಾದ ಕಾಯಸ್ಥ, ಪರಿಪಾಲಕ, ಗಂಜದಿವಿರ, ನಿಯೋಗಿ, ಗ್ರಾಮದಿವಿರ ಮುಂತಾದವರ ದುರ್ವರ್ತನೆಯನ್ನೂ, ವೇಷಧಾರಿಗಳ ಮೋಸವನ್ನೂ ವರ್ಣಿಸಲಾಗಿದೆ. ಕೆಲವು ಕಡೆ ಗ್ರಾಮ್ಯ ಭಾಷೆಯನ್ನು ಬಳಸಲಾಗಿದೆ.

ಕ್ಷೇಮೇಂದ್ರನು ಮುಚ್ಚುಮರೆಯಿಲ್ಲದೆ ಲೋಪದೋಷಗಳನ್ನು ಎತ್ತಿಹಾಡುವ ಸ್ವಭಾವದವನು. ದೋಷಗಳ ಉದ್ಘಾಟನೆಯ ಜೊತೆಗೆ ಉತ್ತಮ ಗುಣಗಳ ಪ್ರಶಂಸೆಯನ್ನೂ ಮಾಡುತ್ತಾನೆ. ಒಳ್ಳೆಯ ದಾರಿಯನ್ನು ತೋರಿಸಿ ವ್ಯಕ್ತಿ ಮತ್ತು ಸಮಾಜವನ್ನು ತಿದ್ದುವುದೇ ಇವನ ಗುರಿ.

ಕಲಿವಿಡಂಬನ :—

ಇದರ ಕವಿ ನೀಲಕಂಠ (ಕ್ರಿ.ಶ. 17ನೆಯ ಶತಮಾನ). ಇವನ ತಂದೆ ನಾರಾಯಣ ; ತಾಯಿ ಭೂಮಿದೇವಿ ತಾತ ಅಚ್ಚಾದೀಕ್ಷಿತ. ಅಚ್ಚಾದೀಕ್ಷಿತನು ಅಪ್ಪಯ್ಯದೀಕ್ಷಿತನ ಸಹೋದರ. ನೀಲಕಂಠನ ನಾಲ್ವರು ಸಹೋದರರೂ ಕವಿಗಳಾಗಿದ್ದರು. ನೀಲಕಂಠನ ಮೂರನೆಯ ಮಗ ಗಿರ್ವಾಣೇಂದ್ರನು ಶೃಂಗಾರಕೋಶ, ಅನ್ಯಾಪದೇಶಶತಕಗಳನ್ನು ಬರೆದಿದ್ದಾನೆ. ನೀಲಕಂಠನು



ಶಿವತತ್ವರಹಸ್ಯ (ತತ್ವಗ್ರಂಥ), ನೀಲಕಂಠ ವಿಜಯ (ಚಂಪು), ಶಿವಲೀಲಾರ್ಣವ (22 ಸರ್ಗಗಳ ಕಾವ್ಯ), ಗಂಗಾವತರಣ, ಕಲಿವಿಡಂಬನ (ವಿಡಂಬನ ಕಾವ್ಯ) ಸಭಾರಂಜನ, ಅನ್ಯಾಪದೇಶಶತಕ, ಶಾಂತಿವಿಲಾಸ, ವೈರಾಗ್ಯಶತಕ, ಆನಂದಸಾಗರಸ್ತವ, ಚಿತ್ರಮೀಮಾಂಸಾದೋಷಧಿಕ್ಕಾರ ಮತ್ತು ನಳಚರಿತ ಎಂಬ ನಾಟಕಗಳನ್ನು ಬರೆದಿದ್ದಾನೆ. ಇವನಿಗೆ ವ್ಯಾಕರಣ, ಅಲಂಕಾರಶಾಸ್ತ್ರ ಮತ್ತು ವೇದಾಂತಗಳಲ್ಲಿ ಒಳ್ಳೆಯ ಪಾಂಡಿತ್ಯವಿದ್ದಿತು. ಇವನ ಪ್ರತಿಭೆ ಮತ್ತು ಕಲ್ಪನಾಚಾತುರ್ಯಗಳು ವಿದ್ವಾಂಸರ ಮೆಚ್ಚುಗೆಯನ್ನು ಗಳಿಸಿವೆ. ಇವನ ಸುಂದರ ಹಾಗೂ ಸಹಜವಾದ ಭಾಷೆ ಮತ್ತು ಶೈಲಿಗಳಿಂದ ಒಳ್ಳೆಯ ರಂಜನೆ ದೊರಕುತ್ತದೆ.

ನೂರೊಂದು ಶ್ಲೋಕಗಳನ್ನುಳ್ಳ ಕಲಿವಿಡಂಬನದಲ್ಲಿ ಲೋಕವು ಕಾರ್ಯಸಿದ್ಧಿಗಾಗಿ ಆಚರಿಸುವ ಮಿಥ್ಯಾಚಾರವನ್ನು ಹಾಸ್ಯವಾಗಿ ವರ್ಣಿಸಲಾಗಿದೆ. ದೈವಜ್ಞತ್ವ, ಮಾಂತ್ರಿಕತ್ವ, ಭೈಷಜ್ಯ, ಚಾಟು ಕೌಶಲ ಇವು ಹಣಗಳಿಸುವ ದಾರಿಗಳು.

ಇದು ಉಪಾಧ್ಯಾಯನ ಗುಟ್ಟು :—

ಮಾಚ್ಯತಾಂ ಸಮಯೋಽತೀತಃ ಸ್ಪಷ್ಟಮಗ್ರೇ ಭವಿಷ್ಯತಿ ।
ಇತಿ ಪಾಠಯತಾಂ ಗ್ರಂಥೇ ಕಾಠಿಣ್ಯಂ ಕುತ್ರ ವರ್ತತೇ ॥

ಇದು ದೈವಜ್ಞನ ಸ್ವರೂಪ :—

ಪುತ್ರ ಇತ್ಯೇವ ಪಿತರಿ ಕನ್ಯಕೇತ್ಯೇವ ಮಾತರಿ ।
ಗರ್ಭಪ್ರಶ್ನೇಷು ಕಥಯನ್ ದೈವಜ್ಞೋ ವಿಜಯೀ ಭವೇತ್ ॥

ಧರ್ಮ, ಮತ, ವೈರಾಗ್ಯ, ಶಾಂತಿ, ವೇದಾಂತ, ಸಂಪ್ರದಾಯ, ಸಂಸ್ಕೃತಿ, ಸ್ತೋತ್ರ, ವಿಡಂಬನೆ—ಇವೆಲ್ಲಕ್ಕೂ ನೀತಿಯೆ ಮೂಲ, ನೀತಿ ಪರವಾದ ಸಾಹಿತ್ಯ ನಾನಾ ಉಪಶಾಖೆಗಳಾಗಿ ಬೆಳೆದಿದೆ. ಪ್ರಾಧಾನ್ಯವನ್ನು ಗಮನಿಸಿ ನೀತಿ ಶತಕ, ವೈರಾಗ್ಯ ಶತಕ ಮುಂತಾಗಿ ವ್ಯವಹರಿಸುತ್ತೇವೆ. ಎಲ್ಲಾ ಕವಿಗಳು ಇಂತಹ ಒಂದಲ್ಲ ಒಂದು ಕೃತಿಯನ್ನು ಬರೆದಿದ್ದಾರೆ. ಆದ್ದರಿಂದ ಇಂತಹ ನೂರಾರು ಕಾವ್ಯಗಳು ಸಂಸ್ಕೃತದಲ್ಲಿವೆ. ಕೆಲವು ಕೃತಿಗಳಲ್ಲಿ ಮಾತ್ರ ಕಾವ್ಯಾಂಶವಿದೆ.

ದಿಗಂಬರ ಜೈನಯತಿ ಅಮಿತಗತಿಯು (ಕ್ರಿ. ಶ. 994) ಧರ್ಮಪರೀಕ್ಷೆಯನ್ನೂ, ಹೇಮಚಂದ್ರನು (ಕ್ರಿ. ಶ. 11ನೆಯ ಶತಮಾನ) ಯೋಗಶಾಸ್ತ್ರವನ್ನೂ, ಸೋಮಪ್ರಭನು (ಕ್ರಿ. ಶ. 1276) ಶೃಂಗಾರವೈರಾಗ್ಯತರಂಗಿಣಿಯನ್ನೂ, ಜಗದ್ಧರನು ದರ್ಪದಲನವನ್ನೂ ಜಲ್ಹಣನು ಮುಗ್ಧೋಪದೇಶವನ್ನೂ, ಹಲಾಯುಧನು ಧರ್ಮವಿವೇಕವನ್ನೂ, ಶಂಕರಾಚಾರ್ಯರು ಆತ್ಮಬೋಧವನ್ನೂ ಬರೆದಿದ್ದಾರೆ. ಅನ್ಯೋಕ್ತಿ ಅಥವಾ ಅನ್ಯಾಪದೇಶ ಕಾವ್ಯಗಳಲ್ಲಿಯೂ ವಿಡಂಬನೆಯಿದೆ. ಸಾಕ್ಷಾತ್ ಬೋಧೆಗಿಂತಲೂ ಅನ್ಯೋಕ್ತಿಯು ಹೆಚ್ಚು ಸಮರ್ಥವೂ ಸುಂದರವೂ ಆದುದು. ಇದರಲ್ಲಿ ವಿಡಂಬನೆಯಂತೆ ಗರ್ವ, ದೈನ್ಯ, ಅಸಹನೆ, ಆಶೆ ಮುಂತಾದ ಭಾವಗಳ ಅಭಿವ್ಯಕ್ತಿಗೂ ಅವಕಾಶವಿದೆ.

ನೀಲಕಂಠ ದೀಕ್ಷಿತನ ಕಲಿವಿಡಂಬನದ ಜೊತೆಗೆ ಅವನದೇ ಆದ 'ಸಭಾರಂಜನಶತಕ'ವು ತುಂಬ ಚಮತ್ಕಾರಿಯೂ ಜನಪ್ರಿಯವೂ ಆಗಿದೆ. ಸಭೆಯಲ್ಲಿ ಸಮಯೋಚಿತವಾಗಿ ಉದಾಹರಿಸಬಹುದಾದ ಸುಂದರ ಶ್ಲೋಕಗಳನ್ನಿಲ್ಲಿ ಕಾಣಬಹುದು. ಒಂದು ಉದಾಹರಣೆ :—

ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।
ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥

ಮಹಿಷಶತಕ ಲೋಕ ಪ್ರಿಯವಾದ ಒಂದು ವಿಡಂಬನಕಾವ್ಯ. ಇದರ ಕವಿ, ಕುಟ್ಟಿ (ವಾಂಛೇಶ್ವರ). ಇವನ ಕಾಲ ಕ್ರಿ. ಶ. 18ನೆಯ ಶತಮಾನ.

ಇವನ ಪದ್ಯಗಳಲ್ಲಿ ಕಟುವಾದ ಟೀಕೆಯಿಂದ್ದು ಚಾಟಿಹೊಡೆತದ ಅನುಭವವಾಗುತ್ತದೆ.

ಉದಾಹರಣೆ :—

ಗ್ರಾಹ್ಯೋಽಸಿ ಶ್ರವಣಾದಿಭಿಃ ಪರಿಚಯಾತ್ತತ್ತ್ವಾವಮರ್ಶೇ ಕೃತೇ
ಸತ್ಯಜ್ಞಾನಮಯೋಽಸಿ ಕಿಂಚ ಬೃಹದಾರಣ್ಯಾನ್ತರೇ ದೃಶ್ಯಸೇ ।
ಪ್ರತ್ಯಕ್ಷೀ ಕ್ರಿಯಸೇ ಚ ಯೋಗಿಭಿರಖಂಡಾಕಾರವೃತ್ತ್ಯಾ ಸ್ವಯಂ
ತಸ್ಮಾತ್ ಪುಚ್ಛಮಯಂ ಲುಲಾಯ ಪರಮಂ ಬ್ರಹ್ಮ ತ್ವಮೇವಾಸಿ ನಃ ॥

## ಸುಭಾಷಿತ ಸಂಗ್ರಹಗಳು

ಒಬ್ಬೊಬ್ಬ ಕವಿಯಿಂದ ಸ್ವತಂತ್ರವಾಗಿ ರಚಿತವಾಗಿರುವ ಸುಭಾಷಿತ ಗ್ರಂಥಗಳಂತೆ ಪ್ರಸಿದ್ಧರೂ ಅಪ್ರಸಿದ್ಧರೂ ಆದ ಕವಿಗಳ ಚಾಟುಪದ್ಯಗಳನ್ನು ಕಲೆಹಾಕಿ ನಿರ್ಮಿಸಿದ ಸುಭಾಷಿತ ಸಂಗ್ರಹ ಗ್ರಂಥಗಳೂ ಇವೆ. ಇವುಗಳಲ್ಲಿ ಆಯಾ ಕವಿಯ ಹೆಸರಿನಲ್ಲಿ ಸುಭಾಷಿತಗಳನ್ನು ಸಂಗ್ರಹಿಸಲಾಗಿದೆ. ಇದರಿಂದ ಅನೇಕ ಕವಿಗಳ ಪರಿಚಯವೇನೋ ಆಗುತ್ತದೆ. ಆದರೆ ಬಹಳ ಕವಿಗಳ ಕೃತಿಗಳು ದೊರೆಯುತ್ತಿಲ್ಲ ; ಅದರ ಹೆಚ್ಚು ವಿವರವೂ ತಿಳಿದಿಲ್ಲ. ಎಲ್ಲಾ ಕಾವ್ಯಗಳಿಂದ ಉತ್ತಮ ಪದ್ಯಗಳನ್ನು ಆಯ್ದುಕೊಂಡು, ವಿಷಯಾನುಗುಣವಾಗಿ ಪ್ರಕಟಿಸುವುದೂ ಒಂದು ಕಲೆ. ಇದಕ್ಕೂ ವಿಶೇಷ ಸಾಮರ್ಥ್ಯಬೇಕು. ಈ ಪದ್ಯಗಳು ಗಾದೆ, ವಿಡಂಬನೆ, ಅನ್ಯೋಕ್ತಿ, ಭಕ್ತಿ, ರಸ, ವೈರಾಗ್ಯ, ವರ್ಣನೆ, ತತ್ತ್ವ ಮುಂತಾದ ರೂಪಗಳಲ್ಲಿರುತ್ತವೆ. ಇವೆಲ್ಲ ಮುಕ್ತಕಗಳಾಗಿದ್ದು ಸಮಗ್ರಕಾವ್ಯದಿಂದ ದೊರೆಯಬಹುದಾದಷ್ಟು ಆನಂದವನ್ನು ಒದಗಿಸುತ್ತವೆ. ಅನೇಕ ಅಲಂಕಾರಿಕರು ತಮ್ಮ ಲಕ್ಷಣಗಳಿಗೆ ಸುಭಾಷಿತ ಸಂಗ್ರಹಗಳಿಂದ ಲಕ್ಷ್ಯಗಳನ್ನು ಆಯ್ದುಕೊಂಡಿದ್ದಾರೆ. ಸ್ವತಂತ್ರ ಸುಭಾಷಿತಗ್ರಂಥಗಳನ್ನೂ ಲಘುಕಾವ್ಯಗಳ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

### ಕವೀಂದ್ರ ವಚನ ಸಮುಚ್ಚಯ :—

ಇದು ಅಜ್ಞಾತ ಕರ್ತೃವಿನ ಅತಿಪ್ರಾಚೀನ ಸಂಗ್ರಹ ; ಹಸ್ತಪ್ರತಿಯ ಕಾಲ ಕ್ರಿ. ಶ. 12ನೆಯ ಶತಮಾನ. ಮಯೂರ, ವಾಕ್ಪತಿರಾಜ ಮತ್ತು ರಾಜಶೇಖರರಿಗಿಂತ ಈಚಿನ ಕವಿಗಳ [illegible] ಸಂಗ್ರಹದಲ್ಲಿಲ್ಲ. ಹತ್ತನೆಯ ಶತಮಾನದ ಅಂತ್ಯದಲ್ಲಿ ಇದರ ಸಂಗ್ರಹವಾಗಿರಬಹುದು. ಬುದ್ಧ



ಸ್ತುತಿಯಿಂದ ಪ್ರಾರಂಭವಾಗಿರುವುದರಿಂದ ಸಂಗ್ರಾಹಕ ಬೌದ್ಧನಾಗಿರಬಹುದು. ಶ್ರೀ ಡಿ. ಡಿ. ಕೋಸಂಬಿಯವರು ಇದು ವಿದ್ಯಾಕರನ ಸುಭಾಷಿತ ರತ್ನಕೋಶದ ಒಂದು ಭಾಗವೆಂದು ಟಿಬೆಟ್ಟಿನ ಹಸ್ತಪ್ರತಿಯ ಅವಲೋಕನದಿಂದ ನಿರ್ಧರಿಸಿದ್ದಾರೆ.

### ಪ್ರಸನ್ನಸಾಹಿತ್ಯರತ್ನಾಕರ :—

ಸಹಸ್ರಶ್ಲೋಕಗಳನ್ನುಳ್ಳ ಈ ಸಂಗ್ರಹದ ಕರ್ತೃ ನಂದನ. ಅವನಿಗೆ ತನ್ನ ವ್ಯಾಕರಣ ಮತ್ತು ಸಾಹಿತ್ಯ ಜ್ಞಾನದ ವಿಷಯದಲ್ಲಿ ಬಹಳ ಹೆಮ್ಮೆ. ಕವೀಂದ್ರವಚನಸಮುಚ್ಚಯವನ್ನು ಅನುಸರಿಸಿ ಈ ಸಂಗ್ರಹದ ರಚನೆಯಾಗಿದೆ. ವಿಷಯಾನುಗುಣವಾಗಿ ಪದ್ಯಗಳನ್ನು ಸಂಗ್ರಹಿಸಿ ಒಂದೊಂದು ಭಾಗಕ್ಕೂ "ವ್ರಜ್ಯಾ" ಎಂಬ ಹೆಸರನ್ನು ಕೊಡಲಾಗಿದೆ. ಶಿವವ್ರಜ್ಯೆಯಿಂದ ಸಂಗ್ರಹ ಪ್ರಾರಂಭವಾಗಿದೆ.

### ಸುಭಾಷಿತರತ್ನಸಂದೋಹ :—

ದಿಗಂಬರ ಜೈನಯತಿಯಾದ ಅಮಿತಗತಿಯು ಇದರ ಸಂಗ್ರಾಹಕ. ಇವನು ಧಾರಾನಗರಿಯ ಪರಮಾರ ವಂಶಕ್ಕೆ ಸೇರಿದ ಮುಂಜನ ಆಳ್ವಿಕೆಯ ಕಾಲದವನು (994 ಕ್ರಿ.ಶ.). ಇವನ ಗುರು ಮಾಧವ. ಧರ್ಮಪರೀಕ್ಷೆಯು ಈತನ ಇನ್ನೊಂದು ಕೃತಿ.

### ಅನ್ಯೋಕ್ತಿಮುಕ್ತಾಲತಾ :—

ಇದರ ಸಂಗ್ರಾಹಕ ಶಂಭು ; ಕಾಲ ಕ್ರಿ.ಶ. 12ನೆಯ ಶತಮಾನದ ಪ್ರಾರಂಭ. ಇದರಲ್ಲಿ ಅನ್ಯೋಕ್ತಿರೂಪವಾದ, ನಾನಾ ವಿಷಯಗಳನ್ನು ಕುರಿತ ಶ್ಲೋಕಗಳನ್ನು ಸಂಗ್ರಹಿಸಲಾಗಿದೆ.

### ಸದುಕ್ತಿಕರ್ಣಾಮೃತ :—

ಇದರ ಸಂಗ್ರಹಕಾರನಾದ ಶ್ರೀಧರದಾಸನು ಬಂಗಾಳದ ದೊರೆಯಾದ ಲಕ್ಷ್ಮಣಸೇನನ ಕೈಕೆಳಗೆ ಮಾಂಡಲಿಕನಾಗಿದ್ದನು. ಇವನ ತಂದೆ ವಾತುದಾಸ. ಈ ಸಂಗ್ರಹದ ಕಾಲ ಕ್ರಿ.ಶ. 1205.

### ಸೂಕ್ತಿಮುಕ್ತಾವಲೀ :—

ಇದು ಯಾದವರಾಜ ಕೃಷ್ಣನ ಮಂತ್ರಿಯಾಗಿದ್ದ ಜಲ್ಹಣನ ಸಂಗ್ರಹ. ಇವನ ತಂದೆ ಲಕ್ಷ್ಮೀದೇವ. ಜಲ್ಹಣನ ನೇತೃತ್ವದಲ್ಲಿ ವೈದ್ಯಭಾನು ಪಂಡಿತ (ಭಾಸ್ಕರ)ನು ಕ್ರಿ.ಶ. 1257ರಲ್ಲಿ ಈ ಸಂಗ್ರಹ ರಚಿಸಿದನು. ಈ ಸಂಗ್ರಹ ಚಿಕ್ಕ ಮತ್ತು ದೊಡ್ಡ ಎರಡು ಸಂಸ್ಕರಣಗಳಲ್ಲಿ ದೊರೆಯುತ್ತದೆ. ಪ್ರಸಿದ್ಧ ಕವಿಗಳ ಮತ್ತು ಕವಯಿತ್ರಿಯರ ಪದ್ಯಗಳನ್ನುಳ್ಳ ಈ ಸಂಗ್ರಹ ಅಮೂಲ್ಯವಾದುದು.

### ಶಾರ್ಙ್ಗಧರ ಪದ್ಧತಿ :—

ಇದು ಶಾರ್ಙ್ಗಧರನ ಸಂಗ್ರಹ. ಇವನ ತಂದೆ ದಾಮೋದರ ; ತಾತ ರಾಘವ. ಇದು [illegible]ವಾದ ಕಾಲ ಕ್ರಿ.ಶ. 1363. ಇದರ 163 ಅಧ್ಯಾಯಗಳಲ್ಲಿ 4689 ಶ್ಲೋಕಗಳಿವೆ.

**ಸುಭಾಷಿತಾವಲೀ :—**

ಕಾಶ್ಮೀರದ ವಲ್ಲಭದೇವನಿಂದ 15ನೆಯ ಶತಮಾನದಲ್ಲಿ ರಚಿತವಾದ ಈ ಕೃತಿಯಲ್ಲಿ 3527 ಶ್ಲೋಕಗಳಿವೆ. ಇದರ 101 ಅಧ್ಯಾಯಗಳಲ್ಲಿ ಸುಮಾರು 350 ಕವಿಗಳ ಶ್ಲೋಕಗಳಿವೆ.

ಜೋನರಾಜನ ಶಿಷ್ಯ ಶ್ರೀವರನು 15ನೆಯ ಶತಮಾನದಲ್ಲಿ ಒಂದು ಸುಭಾಷಿತಾವಲೀಯನ್ನು ರಚಿಸಿದ್ದಾನೆ. ಇದರಲ್ಲಿ ಸು. 400 ಕವಿಗಳ ಶ್ಲೋಕಗಳಿವೆ. ಕಥಾಕೌತುಕ, ಜೈನ ರಾಜತರಂಗಿಣಿಗಳು ಶ್ರೀವರನ ಇತರ ಕೃತಿಗಳು.

**ಸೂಕ್ತಿರತ್ನಾವಲೀ :—**

ಕ್ರಿ.ಶ. 1591ರಲ್ಲಿ ವಿಜಯಸೇನ ಸೂರಿಯು ಬರೆದ ಈ ಕೃತಿಯಲ್ಲಿ 54 ಶ್ಲೋಕಗಳಿವೆ. ರಾಮಭಟ್ಟನ ಪುತ್ರ ವೈದ್ಯರತ್ನನೂ ಒಂದು ಸೂಕ್ತಿರತ್ನಾವಲಿಯನ್ನು ರಚಿಸಿದ್ದಾನೆ. ಇದರಲ್ಲಿ ಕವಿಗಳನ್ನು ಹೆಸರಿಸಿಲ್ಲ.

**ಪ್ರಸ್ತಾವರತ್ನಾಕರ :—**

ಪುರುಷೋತ್ತಮನ ಮಗನಾದ ಹರಿದಾಸನು ಕ್ರಿ.ಶ. 1557ರಲ್ಲಿ ಇದನ್ನು ರಚಿಸಿದನು. ಇವನು ಗಣೇಶನ ಉಪಾಸಕನಾಗಿದ್ದನು. ಈ ಸಂಗ್ರಹದಲ್ಲಿ ವಿಷಯ ವಿಂಗಡನೆಗನುಗುಣವಾಗಿ 21 ಅಧ್ಯಾಯಗಳಿವೆ.

**ಹಾರಾವಲೀ (ಸುಭಾಷಿತ ಹಾರಾವಲೀ) :—**

ಸು. ಕ್ರಿ.ಶ. 17ನೆಯ ಶತಮಾನದಲ್ಲಿದ್ದ ಹರಿಕವಿಯು ಇದರ ಸಂಗ್ರಾಹಕ. ಇವನಿಗೆ ಸಮಸ್ತ ಭಾರತದ ಸಾಹಿತ್ಯಪರಿಚಯವಿದ್ದಿತು.

**ಪದ್ಯತರಂಗಿಣೀ :—**

ಜಯಸಿಂಹನ ಮಗನಾದ ವ್ರಜನಾಥನು ಇದರ ಸಂಗ್ರಾಹಕ. ಇದರ ಕಾಲ ಕ್ರಿ.ಶ. 1753. ಇದರಲ್ಲಿ 12 ತರಂಗಗಳಿವೆ.

**ಸೂಕ್ತಿಸುಂದರ :—**

ಸುಂದರದೇವ ಇದರ ಸಂಗ್ರಾಹಕ ; ಕಾಲ 17ನೆಯ ಶತಮಾನ. ಇದರಲ್ಲಿ 16 ಮತ್ತು 17ನೆಯ ಶತಮಾನದ ದೊರೆಗಳನ್ನು ಪ್ರಶಂಸಿಸುವ ಪದ್ಯಗಳಿವೆ. ಕೆಲವು ಪದ್ಯಗಳಲ್ಲಿ ಉರ್ದು ಪದಗಳ ಪ್ರಯೋಗವೂ ಇದೆ.

ರೂಪಗೋಸ್ವಾಮಿಯು ಪದ್ಯಾವಲಿಯನ್ನೂ, ಗೋವಿಂದಭಟ್ಟನು ಪದ್ಯಮುಕ್ತಾವಲಿಯನ್ನೂ, ಕೃಷ್ಣ ಉಪಾಧ್ಯಾಯನು ಕವೀಂದ್ರ ಚಂದ್ರೋದಯವನ್ನೂ ರಚಿಸಿದ್ದಾರೆ. ಸಂಸ್ಕೃತದಲ್ಲಿ ಇಂತಹ ನೂರಾರು ಸಂಗ್ರಹಗಳಿವೆ. ಸ್ಥಳ ಸಂಕೋಚದಿಂದ ಪ್ರಸ್ತಾಪಿಸಿಲ್ಲ.



## ಗೀತಕಾವ್ಯ

ಗೀತಕಾವ್ಯವು ಸಂಸ್ಕೃತ ಸಾಹಿತ್ಯದಲ್ಲಿ ಅತ್ಯಂತ ರಮಣೀಯವಾದ ಒಂದು ಪ್ರಕಾರ. ಇದು ಮುಕ್ತಕರೂಪವಾಗಿಯೂ ಪ್ರಬಂಧರೂಪಕವಾಗಿಯೂ ದೊರೆಯುತ್ತದೆ. ಈ ಪ್ರಕಾರದಲ್ಲಿ ರಮಣಿಯರ ರೂಪ ಮತ್ತು ಹೃದಯಗಳ ಸುಂದರ ಚಿತ್ರಣವಿದೆ. ಶೃಂಗಾರದ ವಿಭಿನ್ನ ಅವಸ್ಥೆಗಳನ್ನು ಮಾರ್ಮಿಕವಾಗಿ ವರ್ಣಿಸಲಾಗಿದೆ. ಇದರಿಂದ ನಾರೀಪ್ರೇಮದ ಉದಾತ್ತತೆ ಮತ್ತು ವಿಶುದ್ಧತೆಗಳ ಅರಿವಾಗುತ್ತದೆ. ಪ್ರಕೃತಿವರ್ಣನೆಗೂ ಪ್ರಮುಖ ಸ್ಥಾನವಿದೆ. ಪ್ರಾಕೃತಿಕ ಸೌಂದರ್ಯವು ಆಂತರಿಕ ಸೌಂದರ್ಯಕ್ಕೆ ಪುಟ ಕೊಡುತ್ತದೆ. ಸಂಗೀತವು ಮೇಳವಿಸಿರುವುದು ಈ ಪ್ರಕಾರದ ವೈಶಿಷ್ಟ್ಯ. ನರ್ತನವನ್ನೂ ಜೊತೆಗೂಡಿಸುವ ಸಾಧ್ಯತೆಯಿದೆ. 'ಸಂಗೀತಮಪಿ ಸಾಹಿತ್ಯಂ ಚ ಸರಸ್ವತ್ಯಾಸ್ತನದ್ವಯಂ'—ಇಲ್ಲಿ ಸಂಗೀತ ಸಾಹಿತ್ಯಗಳೆರಡೂ ಮೇಳವಿಸಿವೆ. ಸಂಗೀತ ಆಪಾತ ಮಧುರ. ಸಾಹಿತ್ಯ ಆಪಲೋಚನಾಮೃತ. ಆದ್ದರಿಂದ ಸಾಧಾರಣರಿಗೂ ಈ ಪ್ರಕಾರವು ಆನಂದವನ್ನೊದಗಿಸುತ್ತದೆ. ಪ್ರೇಮವನ್ನು ಲೌಕಿಕಪ್ರೇಮಕ್ಕೇ ಸೀಮಿತಗೊಳಿಸದೆ ಭಕ್ತಿಯ ಕಡೆಗೂ ತಿರುಗಿಸಲಾಗಿದೆ. ಇದು ಒಂದು ಭಕ್ತಿಪಂಥವಾಗಿ ಪರಿಣಮಿಸಿದೆ. ರಾಮಾಯಣ ಮಹಾನದಿಗೆ ವಾಲ್ಮೀಕಿಯಂತೆ ಗೀತ ಕಾವ್ಯಪರಂಪರೆಗೆ ಜಯದೇವನು ಮೂಲ.

**ಗೀತಗೋವಿಂದ :—**

ನಾದ ಮತ್ತು ಭಾವಗಳ ಮಾಧುರ್ಯಕ್ಕೆ ಸುಪ್ರಸಿದ್ಧವಾದ ಈ ಕಾವ್ಯದ ಕರ್ತೃ ಜಯದೇವ. ಜಯದೇವನ ತಂದೆ ಭೋಜದೇವ ; ತಾಯಿ ವಾಮಾದೇವಿ. ಬಂಗಾಳದಲ್ಲಿ ಹರಿಯುವ ಅಜಯ ನದಿಯ ದಡದಲ್ಲಿರುವ ಕೆಂದುಬಿಲ್ವ ಇವನ ಜನ್ಮಸ್ಥಳ. ಲಕ್ಷ್ಮಣಸೇನನ ಆಸ್ಥಾನ ಕವಿಯಾದ ಇವನ ಕಾಲ ಕ್ರಿ.ಶ. 12ನೇ ಶತಮಾನ. ಗೋವರ್ಧನ, ಶರಣ, ಉಮಾಪತಿ ಮತ್ತು ಕವಿರಾಜಧೋಯೀ ಇವನ ಸಮಕಾಲೀನರು. ಚಿಕ್ಕವಯಸ್ಸಿನಲ್ಲಿ ಮಥುರೆ ಮತ್ತು ಬೃಂದಾವನಗಳಲ್ಲಿ ಸುತ್ತಾಡಿದ ಇವನ ಮೇಲೆ ಅಲ್ಲಿನ ಸುಂದರ ದೃಶ್ಯಗಳ ಮತ್ತು ರಾಧಾ ಮಾಧವರ ಕಥೆಗಳ ಪ್ರಭಾವವುಂಟಾಯಿತು. ಜಗನ್ನಾಥಕ್ಕೆ ಹೋಗಿದ್ದಾಗ ಅವನ ಜೀವನವು ಹೊಸ ತಿರುವನ್ನು ಪಡೆಯಿತು. ಅಲ್ಲಿ ಒಬ್ಬ ಬ್ರಾಹ್ಮಣನು ದೀರ್ಘಕಾಲ ಮಕ್ಕಳಿಲ್ಲದೆ ಕೊನೆಗೆ ಜಗನ್ನಾಥಪ್ರಭುವಿನ ಅನುಗ್ರಹದಿಂದ ಪದ್ಮಾವತಿಯೆಂಬ ಸುಂದರಿಯಾದ ಮಗಳನ್ನು ಪಡೆದಿದ್ದನು. ದೇವಾಲಯದ ಹತ್ತಿರ ಮರದ ಕೆಳಗೆ ತಂಗಿರುವ ಜಯದೇವನಿಗೆ ಮಗಳನ್ನು ಅರ್ಪಿಸೆಂಬ ಕನಸನ್ನು ಕಂಡು ಆ ಬ್ರಾಹ್ಮಣನು ಇಷ್ಟವಿರದಿದ್ದರೂ ಮಗಳನ್ನು ಅವನ ಹತ್ತಿರ ಬಿಟ್ಟು ತೆರಳಿದನು. ಗತ್ಯಂತರವಿಲ್ಲದೆ ಜಯದೇವನು ಅವಳನ್ನು ಮದುವೆಯಾದನು. ಇಬ್ಬರ ಗುಣಶೀಲಗಳಲ್ಲಿ ಸಾಮಂಜಸ್ಯವಿದ್ದುದರಿಂದ ಅವರ ದಾಂಪತ್ಯ ಜೀವನವು ಸುಖಮಯ.

ವಾಗಿದ್ದಿತು. ರಾಗದೊಡನೆ ನೃತ್ಯ ಬೆರೆತು ಭಾವ ಉಜ್ವಲವಾಯಿತು[1]. ಕಥುಂಕಂಡಿಯಲ್ಲಿ ಕೆಲವು ವರ್ಷಗಳ ಕಾಲ ನೆಲಸಿದ್ದು ತರುವಾಯ ಗೀತಗೋವಿಂದ ಕಾವ್ಯವನ್ನು ರಚಿಸಿದನು. ಆ ಗ್ರಾಮವನ್ನು ಇಂದಿಗೂ ಜಯದೇವಪುರವೆಂದು ಕರೆಯುತ್ತಾರೆ. ಅವನ ಕಾವ್ಯ ಲೋಕದ ಮನ್ನಣೆಯನ್ನು ಪಡೆಯಿತು. ಹಲವರು ಅವನ ಶಿಷ್ಯರಾದರು. ಅವನು ಕೆಂದುಬಿಲ್ವದಲ್ಲಿ ಕ್ರಿ.ಶ. 1200 ರಲ್ಲಿ ಕಾಲವಾದನು. ಜಯದೇವನ ಜಯಂತಿಯನ್ನು ಪುಷ್ಯಶುಕ್ಲ ಸಪ್ತಮಿಯ ದಿನ ಬಂಗಾಳದಲ್ಲಿ ಈಗಲೂ ಆಚರಿಸುತ್ತಾರೆ. ದೊರೆಯಾದ ಪ್ರತಾಪರುದ್ರದೇವನು ದೇವಾಲಯಗಳಲ್ಲಿ ಗೀತಗೋವಿಂದವನ್ನು ಹಾಡುವಂತೆ ಆಜ್ಞೆ ಹೊರಡಿಸಿದನು; ದೊರೆಯಾದ ಪುರುಷೋತ್ತಮ ದೇವನು (1470-1497 ಕ್ರಿ.ಶ.) ಅಭಿನವ ಗೀತಗೋವಿಂದವನ್ನು ರಚಿಸಿದನು.

ಗೀತಗೋವಿಂದವನ್ನು ಗ್ರಾಮ್ಯರೂಪಕ (Pastoral drama), ಗೀತನಾಟಕ (Lyric drama), ಪರಿಷ್ಕೃತ ಯಾತ್ರಾಪ್ರಬಂಧ, ಸುಗೀತರೂಪಕ (melo-drama) ಸಂಗೀತನಾಟಕ (Opera) ಮುಂತಾದ ನಾನಾ ಕಾವ್ಯಜಾತಿಗಳಲ್ಲಿ ಸೇರಿಸುವ ಪ್ರಯತ್ನ ನಡೆದಿದೆ. ಆದರೆ ಜಯದೇವನು ಇದನ್ನು ಕಾವ್ಯವೆಂದು ಕರೆದು ಸರ್ಗಗಳನ್ನಾಗಿ ವಿಭಾಗಿಸಿದ್ದಾನೆ. ನಾಟಕದಂತೆ ಪ್ರಸ್ತಾವನೆ, ಅಂಕಾದಿಗಳು ಇಲ್ಲ. ಕೆಲವರು ಇದನ್ನು ಶೃಂಗಾರ ಮಹಾಕಾವ್ಯವೆಂದೂ ಕರೆಯುತ್ತಾರೆ. ಸಂವಾದ, ಸಂಗೀತ, ಅಭಿನಯಾದಿಗಳು ಒಟ್ಟುಗೂಡಿರುವುದರಿಂದ 16ನೆಯ ಶತಮಾನದಲ್ಲಿ ಬಂದ ಸಮಗ್ರ ಸಂಗೀತ ನಾಟಕಗಳಿಗೆ ಇದು ಪೂರ್ವ ರೂಪವೆಂದು ಭಾವಿಸಬಹುದು. ಇವರಲ್ಲಿರುವ ಅಷ್ಟಪದಿಗಳಿಗೆ ರಾಗ, ತಾಲಗಳನ್ನು ಸೂಚಿಸಲಾಗಿದೆ. ಸಮಯೋಚಿತವಾಗಿ ಶ್ಲೋಕ, ಗದ್ಯ, ಗೀತಗಳನ್ನು ತರಲಾಗಿದೆ. ವರ್ಣನೆ ಮತ್ತು ಕಥಾಪ್ರತಿಪಾದನೆಗೆ ಶ್ಲೋಕವನ್ನೂ, ಪಾತ್ರಗಳ ಅಭಿಪ್ರಾಯವನ್ನು ಸೂಚಿಸುವ ಸಂವಾದಗಳಿಗೆ ಗದ್ಯವನ್ನೂ, ಭಾವಾಭಿವ್ಯಕ್ತಿಗೆ ಗೀತವನ್ನೂ ಬಳಸಲಾಗಿದೆ.

ಈ ಕಾವ್ಯದಲ್ಲಿ ಸಾಮೋದ ದಾಮೋದರ, ಅಕ್ಲೇಶಕೇಶವ, ಮುಗ್ಧಮಧುಸೂದನ ಮೊದಲಾದ ಹನ್ನೆರಡು ಸರ್ಗಗಳಿವೆ; ಇವುಗಳಲ್ಲಿ ಇಪ್ಪತ್ತನಾಲ್ಕು ಅಷ್ಟಪದಿಗಳಿವೆ. ಸರ್ಗಗಳ ಸಂಖ್ಯೆ ಭಾಗವತದ ಕಾಂಡಗಳ ಸಂಖ್ಯೆಗೆ ಸಮವಾಗಿವೆ. ಅಷ್ಟಪದಿಯಲ್ಲಿ ಎಂಟು ಪಾದ (ಸಾಲು)ಗಳಿದ್ದು, ಪ್ರಾರಂಭದ ಪಲ್ಲವಿಯು ಪ್ರತಿಪಾದದ ಕೊನೆಯಲ್ಲಿ ಬರುತ್ತದೆ. ರಾಧಾ ಮಾಧವರ ಅಮರಪ್ರೇಮ ಕಾವ್ಯದ ವಸ್ತು. ಇಲ್ಲಿ ಬರುವ ಪಾತ್ರಗಳು ಮುರಾರೀ-ಮಾಧವ ರಾಧಾ, ಸಖೀ. ಯಮುನಾಕೂಲದಲ್ಲಿ ರಾಧೆ ಮಾಧವರ ರಹಸ್ಯ ಕೇಳಿಗಳಿಗೆ ಜಯಕೋರುವ

1 ವಾಗ್ದೇವತಾಚರಿತಚಿತ್ರಿತಚಿತ್ತಸದ್ಮಾ
ಪದ್ಮಾವತೀ ಚರಣಚಾರಣಚಕ್ರವರ್ತೀ ।
ಶ್ರೀವಾಸುದೇವರತಿಕೇಲಿಕಥಾಸಮೇತಂ
ಏತಂ ಕರೋತಿ ಜಯದೇವಕವಿಃ ಪ್ರಬಂಧಂ ॥
— ಗೀತಗೋವಿಂದ.



ಮೂಲಕ ಕಾವ್ಯವನ್ನು ಪ್ರಾರಂಭಿಸಿ, ಮಹಾವಿಷ್ಣುವಿನ ದಶಾವತಾರಗಳನ್ನು ಸ್ಮರಿಸಿಕೊಂಡು, ವಸಂತ ಋತುವಿನಲ್ಲಿ ಯಮುನಾತೀರದಲ್ಲಿ ನಡೆದ ರಾಧೆ ಮಾಧವರ ಪ್ರಣಯಕೇಳಿಯನ್ನು ವರ್ಣಿಸಲಾಗಿದೆ. ಇವುಗಳಲ್ಲಿ ಆಸೆ, ನಿರಾಶೆ, ಔತ್ಸುಕ್ಯ, ಪ್ರಣಯಕೋಪ, ಈರ್ಷ್ಯೆ, ಕೋಪ ಪ್ರಸಾದನ, ಮಿಲನ ಮೊದಲಾದ ಪ್ರಣಯದ ಎಲ್ಲಾ ಅವಸ್ಥೆಗಳೂ ಬಂದಿವೆ. ವೃಂದಾವನದ ಸುಂದರ ಪ್ರಕೃತಿ, ಮಂದಮಾರುತ, ಪೂರ್ಣಚಂದ್ರಾದಿಗಳು ಹರಿಯ ರಾಸಕ್ರೀಡೆಗೆ ಹಿನ್ನೆಲೆಯಾಗಿ ನಿಂತಿವೆ. ಲೌಕಿಕ ದೃಷ್ಟಿಗೆ ಇದು ಪ್ರಣಯಕಾವ್ಯ; ಆಧ್ಯಾತ್ಮಿಕ ದೃಷ್ಟಿಗೆ ಭಕ್ತಿಕಾವ್ಯ. ನವವಿಧ ಭಕ್ತಿಗಳಲ್ಲಿ ಸತಿ-ಪತಿಗಳ ಮಧುರ ಭಾವವೂ ಒಂದು. ಸಂಪ್ರದಾಯದಂತೆ ಕೃಷ್ಣನು ಭಕ್ತಿಗಮ್ಯನಾದ ಪರಮಾತ್ಮ, ಗೋಪಿಯರು ಪರಮಾತ್ಮನನ್ನು ಭಜಿಸುವ ಜೀವಾತ್ಮರು. ಚೈತನ್ಯದೇವನು ಗೀತಗೋವಿಂದದ ಮಾಧುರ್ಯದ ಪರಮೋಪಾಸಕ. ಭಾರತದ ಬಹು ಭಾಗಗಳಲ್ಲಿ ಈ ಕಾವ್ಯದ ಹೆಚ್ಚು ಪ್ರಭಾವವಿದೆ.

ಗೀತಗೋವಿಂದದ ಶೈಲಿಯಲ್ಲಿ ಅದ್ಭುತದೋಹಕತ್ವವಿದೆ. ಮಧುರಭಾವವು ರಸಧುನಿಯಾಗಿ ಪ್ರವಹಿಸುತ್ತದೆ. ರಮಣೀಯ ನಾದವನ್ನು ತರಂಗತರಂಗವಾಗಿ ಹೊರಹೊಮ್ಮಿಸುವ ಸಾಮರ್ಥ್ಯ ಪದಗುಂಫನದಲ್ಲಿದೆ. ಭಾಷಾಪರಿಚಯವಿಲ್ಲದಿದ್ದರೂ ಶ್ರವಣ ಮಾತ್ರದಿಂದಲೇ ಆನಂದವು ದೊರೆಯುವಂತಿದೆ. ಎಂ. ಕೃಷ್ಣಮಾಚಾರ್ಯರು ಈ ಕಾವ್ಯದ ಬಗೆಗೆ ಹೀಗೆ ಅಭಿಪ್ರಾಯಪಡುತ್ತಾರೆ—In the melody of its diction, in the perfection of its alliteration and in the expression of varied emotions Gitagovinda has probably the first place in the lyrical literature of the world. ಜಯದೇವನೇ ತನ್ನ ಕಾವ್ಯವನ್ನು ಹರಿತು ಹರಿಚರಣ ಭಕ್ತಿಯನ್ನೂ, ವಿಲಾಸಕಲಾನುಭವನ್ನೂ ಒದಗಿಸುವ ಈ ಕಾವ್ಯವು ಮಧುರ ಕೋಮಲ ಕಾಂತ ಪದಾವಳಿಯುಳ್ಳದ್ದೆಂದೂ, ರಾಗ ರಂಜಿತವೆಂದೂ ಹೇಳಿಕೊಂಡಿದ್ದಾನೆ.[1]

ಸಂಸ್ಕೃತ ವಾಣಿಯು ಇಲ್ಲಿ ಸೌಂದರ್ಯ ಮಾಧುರ್ಯಗಳ ಪರಾಕಾಷ್ಠೆಯನ್ನು ಮುಟ್ಟಿದೆ. ಬಳಸಿರುವ ಛಂದಸ್ಸು ರಾಗರಸಗಳಿಗೆ ಪುಷ್ಟಿ ನೀಡುತ್ತದೆ. ದೀರ್ಘಸಮಾಸದ ಗೌಡಿರೀತಿಯಲ್ಲಿಯೂ ಪ್ರಸಾದಗುಣ ವಿರಾಜಿಸುತ್ತಿದೆ. ಅರ್ಥಕ್ಲೇಶವಾಗಲೀ ಶಬ್ದಕ್ಲೇಶವಾಗಲೀ ಇಲ್ಲ. ಯಮಕಾನುಪ್ರಾಸಗಳ ಸಂಯೋಜನೆಯಲ್ಲಿ ಅದ್ವಿತೀಯವಾಗಿದೆ. ಅಂತ್ಯಪ್ರಾಸಂತೆ ಒಳಪ್ರಾಸವೂ ಇದೆ. ಉಪಮಾ ಉತ್ಪ್ರೇಕ್ಷಾ ಮೊದಲಾದ ಅರ್ಥಾಲಂಕಾರಗಳು ಭಾವಪರಿ

1. (i) ಯದಿ ಹರಿಸ್ಮರಣೇ ಸರಸಂ ಮನೋ ಯದಿ ವಿಲಾಸಕಲಾಸು ಕುತೂಹಲಂ ।
ಮಧುರಕೋಮಲಕಾಂತಪದಾವಲೀಂ ಶೃಣು ತದಾ ಜಯದೇವಸರಸ್ವತೀಂ ॥
(ii) ಯದ್ಗಾಂಧರ್ವಕಲಾಸು ಕೌಶಲಮನುಧ್ಯಾನಂ ಚ ಯದ್ವೈಷ್ಣವಂ
ಯಚ್ಛೃಂಗಾರವಿವೇಕತತ್ತ್ವಮಪಿ ಯತ್ಕಾವ್ಯೇಷು ಲೀಲಾಯಿತಂ ।
ತತ್ಸರ್ವಂ ಜಯದೇವಪಂಡಿತಕವೇಃ ಕೃಷ್ಣೈಕತಾನಾತ್ಮನಃ
ಸಾನಂದಾಃ ಪರಿಶೋಧಯಂತು ಸುಧಿಯಃ ಶ್ರೀಗೀತಗೋವಿಂದತಃ ॥

ಪೋಷಣೆಗೆ ಸಹಕರಿಸಿವೆ. ರಾಗರಸಭಾವಗಳಿಗನುಗುಣವಾಗಿ ಪದಬಂಧದಲ್ಲಿ ದ್ರುತ ಮತ್ತು ವಿಲಂಬಿತಗಳಿವೆ. ಪ್ರತಿ ಅಷ್ಟಪದಿಯ ಪ್ರಾರಂಭದಲ್ಲಿ ರಾಗತಾಲಗಳನ್ನು ಕೊಡಲಾಗಿದೆ. ಈ ಅಷ್ಟಪದಿಯಲ್ಲಿ ಸಾಹಿತ್ಯ ಸಂಗೀತ ರಸ ಭಕ್ತಿಗಳು ಮೇಳವಿಸಿರುವುದನ್ನು ನೋಡಬಹುದು—

ಚಂದನಚರ್ಚಿತನೀಲಕಲೇವರಪೀತವಸನವನಮಾಲೀ ।
ಕೇಲಿಚಲನ್ಮಣಿಕುಂಡಲಮಂಡಿತಗಂಡಯುಗಸ್ಮಿತಶಾಲೀ ॥ 1 ॥

ಹರಿರಿಹಮುಗ್ಧವಧೂನಿಕರೇ ।
ವಿಲಾಸಿನಿ ವಿಲಸತಿ ಕೇಲಿಪರೇ ॥ (ಪಲ್ಲವಿ)

ಪೀನಪಯೋಧರ ಭಾರಭರೇಣ ಹರಿಂ ಪರಿರಭ್ಯ ಸರಾಗಮ್ ।
ಗೋಪವಧೂರನುಗಾಯತಿ ಕಾಚಿದುದಂಚಿತ ಪಂಚಮರಾಗಮ್ ॥ 2 ॥
ಕಾಪಿ ವಿಲಾಸ ವಿಲೋಲ ವಿಲೋಚನಖೇಲನ ಜನಿತಮನೋಜಮ್ ।
ಧ್ಯಾಯತಿ ಮುಗ್ಧವಧೂರಧಿಕಂ ಮಧುಸೂದನ ವದನ ಸರೋಜಮ್ ॥ 3 ॥
ಕಾಪಿ ಕಪೋಲತಲೇ ಮಿಲಿತಾ ಲಪಿತುಂ ಕಿಮಪಿ ಶ್ರುತಿಮೂಲೇ ।
ಚಾರು ಚುಚುಂಬ ನಿತಂಬವತೀ ದಯಿತಂ ಪುಲಕೈರನುಕೂಲೇ ॥ 4 ॥
ಕೇಲಿಕಲಾಕುತುಕೇನ ಚ ಕಾಚಿದಮುಂ ಯಮುನಾಜಲಕೂಲೇ ।
ಮಂಜುಲವಂಜುಲಕುಂಜಗತಂ ವಿಚಕರ್ಷ ಕರೇಣ ದುಕೂಲೇ ॥ 5 ॥
ಕರತಲತಾಲತರಲವಲಯಾವಲಿಕಲಿತಕಲಸ್ವನವಂಶೇ ।
ರಾಸರಸೇ ಸಹ ನೃತ್ಯಪರಾ ಹರಿಣಾ ಯುವತಿಃ ಪ್ರಶಶಂಸೇ ॥ 6 ॥
ಶ್ಲಿಷ್ಯತಿ ಕಾಮಪಿ ಚುಂಬತಿ ಕಾಮಪಿ ಕಾಮಪಿ ರಮಯತಿ ರಾಮಾಮ್ ।
ಪಶ್ಯತಿ ಸಸ್ಮಿತಚಾರುತರಾಮಪರಾಮನುಗಚ್ಛತಿ ವಾಮಾಮ್ ॥ 7 ॥

ಶ್ರೀಜಯದೇವಕವೇರಿದಮದ್ಭುತಕೇಶವಕೇಲಿರಹಸ್ಯಂ ।
ಬೃಂದಾವನವಿಪಿನೇ ಲಲಿತಂ ವಿತನೋತು ಶುಭಾನಿ ಯಶಸ್ಯಮ್ ॥ ।

ಇದು ವಿರಹಿಣಿಯಾದ ರಾಧೆಯ ಚಿತ್ರ :—

ವಹತಿ ಚ ವಲಿತವಿಲೋಚನಜಲಭರಮಾನನಕಮಲಮುದಾರಮ್ ।
ವಿಧುಮಿವ ವಿಕಟವಿಧುಂತುದದಂತದಲನಗಲಿತಾಮೃತಧಾರಮ್ ॥

ರಾಧೆಯ ಸೌಂದರ್ಯವರ್ಣನೆ :—

ದೃಶೌ ತವ ಮದಾಲಸೇ ವದನಮಿಂದುಸಂದೀಪಕಂ
ಗತಿರ್ಜನಮನೋರಮಾ ವಿಜಿತರಂಭಮೂರುದ್ವಯಮ್ ।
ರತಿಸ್ತವ ಕಲಾವತೀ ರುಚಿರಚಿತ್ರಲೇಖೇ ಭ್ರುವಾ
ವಹೋ ವಿಬುಧಯೌವತಂ ವಹಸಿ ತನ್ವಿ ! ಪೃಥ್ವೀಗತಾ ॥



ಇದು ಮಂದಾನಿಲವರ್ಣನೆ :—

ದರವಿದಲಿತ ಮಲ್ಲೀವಲ್ಲಿಚಂಚತ್ಪರಾಗ-
ಪ್ರಕಟಿತ–ಪಟವಾಸೈರ್ವಾಸಯನ್ ಕಾನನಾನಿ ।
ಇಹ ಹಿ ದಹತಿ ಚೇತಃ ಕೇತಕೀಗಂಧಬಂಧುಃ
ಪ್ರಸರದಸಮಬಾಣಪ್ರಾಣವದ್ಗಂಧವಾಹಃ ॥

ಗೀತಗೋವಿಂದಕ್ಕೆ ಉದಯನಾಚಾರ್ಯ, ಕೃಷ್ಣದಾಸಗೋಪಾಲ, ನಾರಾಯಣದಾಸ, ಭಾವಾಚಾರ್ಯ, ರಾಮತಾರಣ, ರಾಮದತ್ತ, ರೂಪದೇವ, ವಿಟ್ಠಲ, ವಿಶ್ವೇಶ್ವರ, ತಿರುಮಲಾರ್ಯ ಮೊದಲಾದವರು ವ್ಯಾಖ್ಯಾನವನ್ನು ಬರೆದಿದ್ದಾರೆ.

ಕೃಷ್ಣಕರ್ಣಾಮೃತ :—

ಇದರ ಕರ್ತೃವಾದ ಲೀಲಾಶುಕನನ್ನು ಕೃಷ್ಣಲೀಲಾಶುಕನೆಂದೂ ಕರೆಯುತ್ತಾರೆ. ಇವನ ತಂದೆ ದಾಮೋದರ ; ತಾಯಿ ನೀಲಿ ; ಗುರು ಈಶಾನದೇವ : ಮಿತ್ರ ರಾಘವೇಶಾನಯತಿ, ಜನ್ಮಸ್ಥಾನ ಮುಕ್ತಿಸ್ಥಳ. ಇವನು ಶ್ವೇತಾರಣ್ಯಕ್ಷೇತ್ರದ ಮೃತ್ಯುಂಜಯನ ಉಪಾಸಕನಾಗಿದ್ದನು. ಶ್ರೀಕೃಷ್ಣ ಪರಮೋಪಾಸಕನಾಗಿದ್ದು ಭಕ್ತಿಪರವಶದಿಂದ ಹಾಡುತ್ತಾ ನರ್ತಿಸುತ್ತಿದ್ದನು. ಸುಪ್ರೀತನಾದ ಕೃಷ್ಣನೂ ಭಕ್ತನನ್ನು ಪ್ರಶಂಸಿಸುತ್ತಾ ಹಾಡುತ್ತಿದ್ದನೆಂಬ ಪ್ರವಾದವಿದೆ. ಯತಿಯಾಗಿ ಬಿಲ್ವಮಂಗಲನೆಂಬ ಹೆಸರಿನಿಂದ ಪ್ರಸಿದ್ಧಿಗೆ ಬಂದನು. ಮಲಬಾರಿನಲ್ಲಿ ಮಠಾಧಿಪತಿಗಳನ್ನು ಬಿಲ್ವಮಂಗಲನೆಂದು ಕರೆಯುವ ರೂಢಿಯಿದೆ. ಸಂಪ್ರದಾಯಕುಲದೀಪಿಕೆಯು ತಮಿಳುನಾಡು, ಕಾಶಿ ಮತ್ತು ಒರಿಸ್ಸಾಗಳಲ್ಲಿ ಮಹಾಭಕ್ತರಾದ ಬಿಲ್ವಮಂಗಲರಿದ್ದರೆಂದೂ, ಅವರಲ್ಲೊಬ್ಬನು ಪ್ರಥಮ ಜನ್ಮದಲ್ಲಿ ಮಧವನಲನೆಂದೂ, ದ್ವಿತೀಯ ಜನ್ಮದಲ್ಲಿ ಬಿಲ್ಹಣನೆಂದೂ, ತೃತೀಯ ಜನ್ಮದಲ್ಲಿ ಬಿಲ್ವಮಂಗಲನೆಂದೂ, ಚತುರ್ಥಜನ್ಮದಲ್ಲಿ ಜಯದೇವನೆಂದೂ ಪ್ರಸಿದ್ಧಿಗೆ ಬಂದನೆಂದೂ, ಅವರೆಲ್ಲರೂ ವಿಷ್ಣೂಪಾಸಕರೆಂದೂ, ಅವರಿಗೆ ದೊಡ್ಡ ಭಕ್ತವರ್ಗವಿದ್ದಿತೆಂದೂ ತಿಳಿಸುತ್ತದೆ.

ಕೃಷ್ಣಲೀಲಾಶುಕನನ್ನು ಬಂಗಾಳ, ಒರಿಸ್ಸ, ಮಲಬಾರ್ ಮೊದಲಾದ ಪ್ರಾಂತದವರು ತಮ್ಮ ದೇಶಕ್ಕೆ ಸೇರಿದವನೆಂದು ಹೇಳಿಕೊಳ್ಳುತ್ತಾರೆ. ಅವನೊಡನೆ ಪವಿತ್ರಳೂ, ಶುದ್ಧಳೂ ಆದ ಚಿಂತಾಮಣಿಯೆಂಬ ಉಪಸಕೆಯೊಬ್ಬಳಿದ್ದಳೆಂದೂ, ತಂದೆಯ ವಾರ್ಷಿಕ, ಶ್ರಾದ್ಧದಲ್ಲಿ ತನನ್ನು ನೋಡಲು ಅವಳು ಅವಕಾಶ ಕೊಡುತ್ತಿರಲಿಲ್ಲವೆಂದೂ, ಲೀಲಾಶುಕನು ಕಾಮೋದ್ದೀಪಿತನಾಗಿ ಅರ್ಧರಾತ್ರಿಯಲ್ಲಿ ಕದ್ದುನೋಡಲು ಪ್ರಯತ್ನಿಸಿ ಸರ್ಪದಿಂದ ಕಡಿಯಲ್ಪಟ್ಟು ಪ್ರಜ್ಞಾಶೂನ್ಯನಾಗಿ ಬಿದ್ದನೆಂದೂ, ಅವಳು ಅವನನ್ನು ಉಪಚರಿಸಿ ಮಲಿನವಸನೆಯಾಗಿ ಕಾಣಿಸಿಕೊಂಡು ವಿಷಯ ಸುಖಲಾಲಸೆಯನ್ನು ತ್ಯಜಿಸುವಂತೆಯೂ, ಕೃಷ್ಣನನ್ನು ಪ್ರೀತಿಸುವಂತೆಯೂ ಬೋಧಿಸಿದಳೆಂದೂ, ಸೋಮನೆಂಬ ಗುರುವಿನಿಂದ ಕೃಷ್ಣಮಂತ್ರೋಪದೇಶವನ್ನು ಪಡೆದು ಅವನು ಯತಿಯಾದನೆಂದೂ ಒಂದು ಸಂಪ್ರದಾಯದ ಕಥೆಯಿದೆ. ಲೀಲಾಶುಕನಕಾಲ ಸುಮಾರು ಕ್ರಿ.ಶ. 11ನೆಯ ಶತಮಾನ. ವ್ಯಾಕರಣ ಸಾಹಿತ್ಯ ಮತ್ತು ವೇದಾಂತದಲ್ಲಿ ಅವನಿಗೆ ಅದ್ವಿತೀಯ ಪಾಂಡಿತ್ಯವಿದ್ದಿತು. ಅವನು ಬರೆದಿರುವ ಸರಸ್ವತೀಕಂಠಾಭರಣದ (ಭೋಜ), ವ್ಯಾಖ್ಯಾನದಲ್ಲಿ ಪಾಣಿನಿಯ ಅಭಿಪ್ರಾಯಗಳನ್ನೂ, ಪುರುಷಕಾರವೆಂಬ ವೇದಾಂತ ಕೃತಿಯಲ್ಲಿ ಹೇಮಚಂದ್ರನ

ಅಭಿಪ್ರಾಯಗಳನ್ನೂ ಉದ್ಧರಿಸಿದ್ದಾನೆ. ವಿದ್ಯಾರಣ್ಯರು ತಮ್ಮ ಧಾತುವೃತ್ತಿಯಲ್ಲಿ ಇವನ ಮಾತನ್ನು ಉದ್ಧರಿಸಿದ್ದಾರೆ. ಲೀಲಾಶುಕನು ಬರೆದಿರುವ ಕೃತಿಗಳಲ್ಲಿ ಇಂದು ತ್ರಿಭುವನಸುಭಗ, ಗಣಪತಿಸ್ತುತಿ. ಕಾರ್ಕೋಟಿಕಸ್ತುತಿ, ರಾಮಚಂದ್ರಸ್ತುತಿ, ಅಭವಸ್ತುತಿ. ಕೃಷ್ಣಸ್ತುತಿ, ಸುಮಂಗಲ ಸ್ತೋತ್ರ, ಕೃಷ್ಣಚರಿತ, ಕೃಷ್ಣಬಾಲಕ್ರೀಡಾ, ಅಭಿನವಕೌಸ್ತುಭಮಾಲಾ, ಕ್ರಮದೀಪಿಕಾ, ಶಂಕರ ಹೃದಯಾಂಗಣ, ಬೃಂದಾವನಸ್ತುತಿ ಮತ್ತು ಕೃಷ್ಣಕರ್ಣಾಮೃತಗಳು ನಮಗೆ ದೊರೆಯುತ್ತವೆ. ಲೀಲಾಶುಕನು ನಾದಮಾಧುರ್ಯ ಮತ್ತು ಭಾವಸೌಂದರ್ಯಗಳಿಂದ ಶೋಭಿಸುವ ಬೃಂದಾವನ ಸ್ತುತಿಯಲ್ಲಿ ಕೃಷ್ಣನ ರಾಸಕ್ರೀಡೆಯನ್ನು ವರ್ಣಿಸಿದ್ದಾನೆ. ಮೂರು ಸರ್ಗಗಳಿಂದ ಕೂಡಿದ ಕಾಲವಧವೆಂಬ ಕಾವ್ಯದಲ್ಲಿ ಕೃಷ್ಣನು ಗೋಪಿಕಾಸ್ತ್ರೀಯರಿಗೆ ಹೇಳುವ ರೀತಿಯಲ್ಲಿ ಮಾರ್ಕಂಡೇಯನನ್ನು ರಕ್ಷಿಸಲು ಶಿವನು ಯಮನನ್ನು ಜಯಿಸಿದ ವಸ್ತು ವರ್ಣಿಸಲ್ಪಟ್ಟಿದೆ. ಎಂಟು ಸರ್ಗಗಳನ್ನುಳ್ಳ ಗೋವಿಂದಾಭಿಷೇಕ (ಗೋಪಿಕಾಭಿಷೇಕ)ದಲ್ಲಿ ಪ್ರಾಕೃತ ವ್ಯಾಕರಣ ಪ್ರಯೋಗಗಳಿವೆ. ಅವನ ಶಿಷ್ಯನಾದ ದುರ್ಗಾಪ್ರಸಾದ ಯತಿಯು ಈ ಕಾವ್ಯಕ್ಕೆ ವ್ಯಾಖ್ಯಾನ ಬರೆದು ಹೊಸದಾಗಿ ನಾಲ್ಕು ಸರ್ಗಗಳನ್ನು ರಚಿಸಿ ಸೇರಿಸಿದ್ದಾನೆ. ಹನ್ನೆರಡು ಸರ್ಗಗಳಿಂದ ಕೂಡಿದ ಒಟ್ಟು ಗ್ರಂಥವನ್ನು ಶ್ರೀಚಿಹ್ನ[1] ಕಾವ್ಯವೆಂದು ಕರೆಯುತ್ತಾರೆ.

ಲೀಲಾಶುಕನ ಕೃತಿಗಳಲ್ಲೆಲ್ಲಾ ಕೃಷ್ಣಕರ್ಣಾಮೃತವು ಶ್ರೇಷ್ಠವಾಗಿದ್ದು ಅವನಿಗೆ ಶಾಶ್ವತ ಕೀರ್ತಿಯನ್ನು ಗಳಿಸಿಕೊಟ್ಟಿದೆ. 12 ತರಂಗಗಳಿಂದ ಕೂಡಿದ ಇದು ಒಂದು ಸುಂದರ ಭಾವಗೀತೆ, ಸುಶ್ರಾವ್ಯವಾಗಿ ಹಾಡಲೂ, ಭಾವಗಳನ್ನು ಅಭಿನಯಿಸಲೂ ಯೋಗ್ಯವಾಗಿದೆ. ಶ್ರೀಕೃಷ್ಣಚರಿತ ಇದರ ವಸ್ತು. ಭಾವಾಭಿನಯಕಾರರು ಈ ಕೃತಿಯನ್ನು ವಿಶೇಷವಾಗಿ ಬಳಸುತ್ತಾರೆ.

ಉತ್ತಮ ಅಭಿನಯ ಸೌಲಭ್ಯವನ್ನು ಪಡೆದಿರುವ ಈ ಪದ್ಯದಲ್ಲಿ ಶ್ರೀಕೃಷ್ಣನ ಸಹಜವಾದ ವರ್ಣನೆಯಿದೆ :—

ಅರ್ಧೋನ್ಮೀಲಿತಲೋಚನಸ್ಯ ಪಿಬತಃ ಪರ್ಯಾಪ್ತಮೇಕಂ ಸ್ತನಂ
ಸದ್ಯಃ ಪ್ರಸ್ನುತದುಗ್ಧದಿಗ್ಧಮಪರಂ ಹಸ್ತೇನ ಸಂಮಾರ್ಜತಃ ।
ಮಾತ್ರಾ ಚಾಂಗುಲಿಲಾಲಿತಸ್ಯ ಚಿಬುಕೇ ಸ್ಮೇರಾಯಮಾಣೇ ಮುಖೇ
ವಿಷ್ಣೋಃ ಕ್ಷೀರಕಣಾಂಬುಧಾಮಧವಲಾ ದಂತದ್ಯುತಿಃ ಪಾತು ನಃ ॥

ಆಧ್ಯಾತ್ಮ ದೃಷ್ಟಿಯಿಂದ ಕೂಡಿದ ಮತ್ತೊಂದು ವರ್ಣನೆ :—

ಪರಮಿಮಮುಪದೇಶಮಾದ್ರಿಯಧ್ವಂ ನಿಗಮವನೇಷು ನಿತಾಂತಖೇದಖಿನ್ನಾಃ ।
ವಿಚಿನುತ ಭವನೇಷು ವಲ್ಲವೀನಾಮುಪನಿಷದರ್ಥಮುಲೂಖಲೇ ನಿಬದ್ಧಂ ॥

---

1. ದುರ್ಗಾಪ್ರಸಾದಯತಿಯು ತನ್ನ ವ್ಯಾಖ್ಯಾನದಲ್ಲಿ ಕವಿ ಮತ್ತು ಕಾವ್ಯವನ್ನು ಕುರಿತು ಹೀಗೆ ಹೇಳಿದ್ದಾನೆ :—

ಶ್ರೀಪದ್ಮಪಾದಮುನಿವರ್ಯ ವಿನೇಯವರ್ಗ ಶ್ರೀ ಭೂಷಣಂ ಮುನಿರಸೌ ಕವಿಸಾರ್ವಭೌಮಃ ।
ಶ್ರೀಕೃಷ್ಣರೂಪ ಪರಮಾಮೃತಪಾನಶೀಲಶ್ಚಕ್ರೇ ತದೀಯಚರಿತಂ ಬಹುಧಾ ಹಿತಾಯ ॥



ಕೃಷ್ಣಕರ್ಣಾಮೃತವು ಚೈತನ್ಯ ಮಹಾಪ್ರಭುಗಳಿಗೆ ಬಹಳ ಪ್ರಿಯವಾದುದೆಂದು ಹೇಳುತ್ತಾರೆ. ಇದು ಭಕ್ತರ ಕಿವಿಗಳಲ್ಲಿ ಅಮೃತರಸಧಾರೆಯನ್ನು ಸುರಿಸುತ್ತದೆ. ಈ ಪದ್ಯವು ಭಾವಸೌಂದರ್ಯ ಮತ್ತು ನಾದಮಾಧುರ್ಯಗಳಿಗೆ ಒಂದು ಉದಾಹರಣೆ—

ಮುಗ್ಧಂ ಸ್ನಿಗ್ಧಂ ಮಧುರಮುರಲೀಮಾಧುರೀಧೀರನಾದೈಃ
ಕಾರಂ ಕಾರಂ ಕರಣವಿವಶಂ ಗೋಕುಲವ್ಯಾಕುಲತ್ವಂ ।
ಶ್ಯಾಮಂ ಕಾಮಂ ಯುವಜನಮನೋಮೋಹನಂ ಮೋಹನಾಂಗಂ
ಚಿತ್ತೇ ನಿತ್ಯಂ ನಿವಸತು ಮಹೋ ವಲ್ಲವೀವಲ್ಲಭಂ ನಃ ॥

ಕೃಷ್ಣಕರ್ಣಾಮೃತಕ್ಕೆ ಕರ್ಣಾನಂದ ಪ್ರಕಾಶಿನೀ ಮತ್ತು ಶೃಂಗಾರರಂಗದಾ ಎಂಬ, ಅಜ್ಞಾತರಿಂದ ರಚಿತವಾದ ಎರಡು ವ್ಯಾಖ್ಯಾನಗಳಿವೆ. ಗೋಪಾಲ, ಬೃಂದಾವನದಾಸ, ಶಂಕರ, ಪಾಲಂಕಬ್ರಹ್ಮಭಟ್ಟ ಮತ್ತು ಅಮರರಾಮಚಂದ್ರರೂ ಇದಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಈ ಕಾವ್ಯವನ್ನು ಅನುಕರಿಸಿ ಪ್ರತಾಪಸಿಂಹ ಮತ್ತು ರಾಮಭದ್ರದೀಕ್ಷಿತರು ರಾಮಕರ್ಣಾಮೃತವನ್ನೂ, ಸಿದ್ಧಾಂತಿ ಸುಬ್ರಹ್ಮಣ್ಯ ಕವಿಯು ಶ್ರೀನಿವಾಸಕರ್ಣಾಮೃತವನ್ನೂ ಬರೆದಿದ್ದಾರೆ.

ಗೀತದಿಗಂಬರ :— ಇದರ ಕವಿ ನೇಪಾಳದ ವಂಶಮಣಿ. ಇವನು ಬಿಲ್ವಪಂಚವಂಶದ ಮೈಥಿಲ ಬ್ರಾಹ್ಮಣನಾದ ರಾಮಚಂದ್ರನ ಮಗ. ಇವನು ನೇಪಾಳದ ದೊರೆಯಾದ ಪ್ರತಾಪ ಮಲ್ಲದೇವಿಯು ಕ್ರಿ. ಶ. 1655ರಲ್ಲಿ ತುಲಾಪುರುಷದಾನ ಸಮಾರಂಭದಲ್ಲಿ ತನ್ನ ದೇಹದ ತೂಕ ಚಿನ್ನ ಮತ್ತು ಆಭರಣಗಳನ್ನು ಬ್ರಾಹ್ಮಣರಿಗೆ ಹಂಚಿದ ಸಂದರ್ಭದಲ್ಲಿ ಬಂದಿದ್ದ ರಾಜರ ಮತ್ತು ಪಂಡಿತರ ಮನೋರಂಜನೆಗಾಗಿ ಈ ಕಾವ್ಯವನ್ನು ರಚಿಸಿದನು, ದೊರೆಯು ಸ್ವತಃ ಕವಿಯಾಗಿದ್ದು ತಾನು ರಚಿಸಿದ ಅಷ್ಟಕಗಳನ್ನು ನೇಪಾಳದ ದೇವಸ್ಥಾನಗಳಲ್ಲಿ ಕಲ್ಲಿನಮೇಲೆ ಕೆತ್ತಿಸಿದನು.

ಕೃಷ್ಣಲೀಲಾತರಂಗಿಣೀ :—

ಶಿವರಾಮಾನಂದತೀರ್ಥನ ಶಿಷ್ಯನಾದ ನಾರಾಯಣತೀರ್ಥನು ಇದರ ಕವಿ. ಇವನ ಜನ್ಮಸ್ಥಳ ಕುಚ್ಚಿಮಂಚಿ ; ಕಾಲ ಕ್ರಿ. ಶ. 17ನೆಯ ಶತಮಾನ. ಈ ಕೃತಿಯಲ್ಲಿ ಕೃಷ್ಣನ ಕಥೆಯನ್ನು 12 ತರಂಗಗಳಲ್ಲಿ ವರ್ಣಿಸಲಾಗಿದೆ. ಹಾಡುಗಳಿಗೆ ತಾಳಲಯಗಳನ್ನು ಗುರುತಿಸಲಾಗಿದೆ. ಹಾಡುಗಳ ನಡುವೆ ವಿವರಣಾತ್ಮಕ ಪದ್ಯಗಳಿವೆ.

ಬೆಲ್ಲಮಕೊಂಡರಾಮಾಶಾಸ್ತ್ರಿಯು ಇದೇ ಮಾದರಿಯಲ್ಲಿ ಒಂದು ಕೃಷ್ಣಲೀಲಾತರಂಗಿಣಿಯನ್ನು ಬರೆದಿದ್ದಾನೆ.

ನವಗೀತಾಕುಸುಮಾಂಜಲೀ :—

ಇದನ್ನು ಬರೆದ ಕವಿ ಬೆಂಗಳೂರು ಸಂಸ್ಕೃತ ಮಹಾಪಾಠಶಾಲೆಯ ಅಧ್ಯಕ್ಷರಾಗಿದ್ದ ವೆಂಕಟರಮಣಯ್ಯ. ಹಿಂದೂಪುರಾಣ ಮತ್ತು ಮತಗಳನ್ನು ಬಳಸಿಕೊಂಡು ದೇವನೊಬ್ಬ ನಾಮಹಲವು ಎಂಬ ಸಿದ್ಧಾಂತವನ್ನು ಸಾರುವುದು ಈ ಕಾವ್ಯದ ಗುರಿ. ಇದರಲ್ಲಿ 108 ಪದ್ಯಗಳಿದ್ದು ರಾಮಗೀತಾ, ಕೃಷ್ಣಗೀತಾ, ಗೌರೀಗೀತೆಗಳೆಂಬ 9 ಭಾಗಗಳಾಗಿ ವಿಂಗಡಿಸಲಾಗಿದೆ.

ಅಭಿಪ್ರಾಯಗಳನ್ನೂ ಉದ್ಧರಿಸಿದ್ದಾನೆ. ವಿದ್ಯಾರಣ್ಯರು ತಮ್ಮ ಧಾತುವೃತ್ತಿಯಲ್ಲಿ ಇವನ ಮಾತನ್ನು ಉದ್ಧರಿಸಿದ್ದಾರೆ. ಲೀಲಾಶುಕನು ಬರೆದಿರುವ ಕೃತಿಗಳಲ್ಲಿ ಇಂದು ತ್ರಿಭುವನಸಂಭಗ, ಗಣಪತಿಸ್ತುತಿ. ಕಾರ್ಕೋಟಿಕಸ್ತುತಿ, ರಾಮಚಂದ್ರಸ್ತುತಿ, ಅಭವಸ್ತುತಿ. ಕೃಷ್ಣಸ್ತುತಿ, ಸುಮಂಗಲ ಸ್ತೋತ್ರ, ಕೃಷ್ಣಚರಿತ, ಕೃಷ್ಣಬಾಲಕ್ರೀಡಾ, ಅಭಿನವಕೌಸ್ತುಭಮಾಲಾ, ಕ್ರಮದೀಪಿಕಾ, ಶಂಕರ ಹೃದಯಾಂಗಣ, ಬೃಂದಾವನಸ್ತುತಿ ಮತ್ತು ಕೃಷ್ಣಕರ್ಣಾಮೃತಗಳು ನಮಗೆ ದೊರೆಯುತ್ತವೆ. ಲೀಲಾಶುಕನು ನಾದಮಾಧುರ್ಯ ಮತ್ತು ಭಾವಸೌಂದರ್ಯಗಳಿಂದ ಶೋಭಿಸುವ ಬೃಂದಾವನ ಸ್ತುತಿಯಲ್ಲಿ ಕೃಷ್ಣನ ರಾಸಕ್ರೀಡೆಯನ್ನು ವರ್ಣಿಸಿದ್ದಾನೆ. ಮೂರು ಸರ್ಗಗಳಿಂದ ಕೂಡಿದ ಕಾಲವಧವೆಂಬ ಕಾವ್ಯದಲ್ಲಿ ಕೃಷ್ಣನು ಗೋಪಿಕಾಸ್ತ್ರೀಯರಿಗೆ ಹೇಳುವ ರೀತಿಯಲ್ಲಿ ಮಾರ್ಕಂಡೇಯನನ್ನು ರಕ್ಷಿಸಲು ಶಿವನು ಯಮನನ್ನು ಜಯಿಸಿದ ವಸ್ತು ವರ್ಣಿಸಲ್ಪಟ್ಟಿದೆ. ಎಂಟು ಸರ್ಗಗಳನ್ನುಳ್ಳ ಗೋವಿಂದಾಭಿಷೇಕ (ಗೋಪಿಕಾಭಿಷೇಕ)ದಲ್ಲಿ ಪ್ರಾಕೃತ ವ್ಯಾಕರಣ ಪ್ರಯೋಗಗಳಿವೆ. ಅವನ ಶಿಷ್ಯನಾದ ದುರ್ಗಾಪ್ರಸಾದ ಯತಿಯು ಈ ಕಾವ್ಯಕ್ಕೆ ವ್ಯಾಖ್ಯಾನ ಬರೆದು ಹೊಸದಾಗಿ ನಾಲ್ಕು ಸರ್ಗಗಳನ್ನು ರಚಿಸಿ ಸೇರಿಸಿದ್ದಾನೆ. ಹನ್ನೆರಡು ಸರ್ಗಗಳಿಂದ ಕೂಡಿದ ಒಟ್ಟು ಗ್ರಂಥವನ್ನು ಶ್ರೀಚಿಹ್ನ[1] ಕಾವ್ಯವೆಂದು ಕರೆಯುತ್ತಾರೆ.

ಲೀಲಾಶುಕನ ಕೃತಿಗಳಲ್ಲೆಲ್ಲಾ ಕೃಷ್ಣಕರ್ಣಾಮೃತವು ಶ್ರೇಷ್ಠವಾಗಿದ್ದು ಅವನಿಗೆ ಶಾಶ್ವತ ಕೀರ್ತಿಯನ್ನು ಗಳಿಸಿಕೊಟ್ಟಿದೆ. 12 ತರಂಗಗಳಿಂದ ಕೂಡಿದ ಇದು ಒಂದು ಸುಂದರ ಭಾವಗೀತೆ, ಸುಶ್ರಾವ್ಯವಾಗಿ ಹಾಡಲೂ, ಭಾವಗಳನ್ನು ಅಭಿನಯಿಸಲೂ ಯೋಗ್ಯವಾಗಿದೆ. ಶ್ರೀಕೃಷ್ಣಚರಿತ ಇದರ ವಸ್ತು. ಭಾವಾಭಿನಯಕಾರರು ಈ ಕೃತಿಯನ್ನು ವಿಶೇಷವಾಗಿ ಬಳಸುತ್ತಾರೆ.

ಉತ್ತಮ ಅಭಿನಯ ಸೌಲಭ್ಯವನ್ನು ಪಡೆದಿರುವ ಈ ಪದ್ಯದಲ್ಲಿ ಶ್ರೀಕೃಷ್ಣನ ಸಹಜವಾದ ವರ್ಣನೆಯಿದೆ :—

ಅರ್ಧೋನ್ಮೀಲಿತಲೋಚನಸ್ಯ ಪಿಬತಃ ಪರ್ಯಾಪ್ತಮೇಕಂ ಸ್ತನಂ
ಸದ್ಯಃ ಪ್ರಸ್ನುತದುಗ್ಧದಿಗ್ಧಮಪರಂ ಹಸ್ತೇನ ಸಂಮಾರ್ಜತಃ ।
ಮಾತ್ರಾ ಚಾಂಗುಲಿಲಾಲಿತಸ್ಯ ಚಿಬುಕೇ ಸ್ಮೇರಾಯಮಾಣೇ ಮುಖೇ
ವಿಷ್ಣೋಃ ಕ್ಷೀರಕಣಾಂಬುಧಾಮಧವಲಾ ದಂತದ್ಯುತಿಃ ಪಾತು ನಃ ॥

ಆಧ್ಯಾತ್ಮ ದೃಷ್ಟಿಯಿಂದ ಕೂಡಿದ ಮತ್ತೊಂದು ವರ್ಣನೆ :—

ಪರಮಿಮಮುಪದೇಶಮಾದ್ರಿಯಧ್ವಂ ನಿಗಮವನೇಷು ನಿತಾಂತಖೇದಖಿನ್ನಾಃ ।
ವಿಚಿನುತ ಭವನೇಷು ವಲ್ಲವೀನಾಮುಪನಿಷದರ್ಥಮುಲೂಖಲೇ ನಿಬದ್ಧಂ ॥

---

1. ದುರ್ಗಾಪ್ರಸಾದಯತಿಯು ತನ್ನ ವ್ಯಾಖ್ಯಾನದಲ್ಲಿ ಕವಿ ಮತ್ತು ಕಾವ್ಯವನ್ನು ಕುರಿತು ಹೀಗೆ ಹೇಳಿದ್ದಾನೆ :—

ಶ್ರೀಪದ್ಮಪಾದಮುನಿವರ್ಯ ವಿನೇಯವರ್ಗ ಶ್ರೀ ಭೂಷಣಂ ಮುನಿರಸೌ ಕವಿಸಾರ್ವಭೌಮಃ ।
ಶ್ರೀಕೃಷ್ಣರೂಪ ಪರಮಾಮೃತಪಾನಶೀಲಶ್ಚಕ್ರೇ ತದೀಯಚರಿತಂ ಬಹುಧಾ ಹಿತಾಯ ॥



ಕೃಷ್ಣಕರ್ಣಾಮೃತವು ಚೈತನ್ಯ ಮಹಾಪ್ರಭುಗಳಿಗೆ ಬಹಳ ಪ್ರಿಯವಾದುದೆಂದು ಹೇಳುತ್ತಾರೆ. ಇದು ಭಕ್ತರ ಕಿವಿಗಳಲ್ಲಿ ಅಮೃತರಸಧಾರೆಯನ್ನು ಸುರಿಸುತ್ತದೆ. ಈ ಪದ್ಯವು ಭಾವಸೌಂದರ್ಯ ಮತ್ತು ನಾದಮಾಧುರ್ಯಗಳಿಗೆ ಒಂದು ಉದಾಹರಣೆ—

ಮುಗ್ಧಂ ಸ್ನಿಗ್ಧಂ ಮಧುರಮುರಲೀಮಾಧುರೀಧೀರನಾದೈಃ
ಕಾರಂ ಕಾರಂ ಕರಣವಿವಶಂ ಗೋಕುಲವ್ಯಾಕುಲತ್ವಂ ।
ಶ್ಯಾಮಂ ಕಾಮಂ ಯುವಜನಮನೋಮೋಹನಂ ಮೋಹನಾಂಗಂ
ಚಿತ್ತೇ ನಿತ್ಯಂ ನಿವಸತು ಮಹೋ ವಲ್ಲವೀವಲ್ಲಭಂ ನಃ ॥

ಕೃಷ್ಣಕರ್ಣಾಮೃತಕ್ಕೆ ಕರ್ಣಾನಂದ ಪ್ರಕಾಶಿನೀ ಮತ್ತು ಶೃಂಗಾರರಂಗದಾ ಎಂಬ, ಅಜ್ಞಾತರಿಂದ ರಚಿತವಾದ ಎರಡು ವ್ಯಾಖ್ಯಾನಗಳಿವೆ. ಗೋಪಾಲ, ಬೃಂದಾವನದಾಸ, ಶಂಕರ, ಪಾಲಂಕಬ್ರಹ್ಮಭಟ್ಟ ಮತ್ತು ಅಮರಾಮಚಂದ್ರರೂ ಇದಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಈ ಕಾವ್ಯವನ್ನು ಅನುಕರಿಸಿ ಪ್ರತಾಪಸಿಂಹ ಮತ್ತು ರಾಮಭದ್ರದೀಕ್ಷಿತರು ರಾಮಕರ್ಣಾಮೃತವನ್ನೂ, ಸಿದ್ಧಾಂತಿ ಸುಬ್ರಹ್ಮಣ್ಯ ಕವಿಯು ಶ್ರೀನಿವಾಸಕರ್ಣಾಮೃತವನ್ನೂ ಬರೆದಿದ್ದಾರೆ.

ಗೀತದಿಗಂಬರ :— ಇದರ ಕವಿ ನೇಪಾಳದ ವಂಶಮಣಿ. ಇವನು ಬಿಲ್ವಪಂಚವಂಶದ ಮೈಥಿಲ ಬ್ರಾಹ್ಮಣನಾದ ರಾಮಚಂದ್ರನ ಮಗ. ಇವನು ನೇಪಾಳದ ದೊರೆಯಾದ ಪ್ರತಾಪ ಮಲ್ಲದೇವಿಯು ಕ್ರಿ. ಶ. 1655ರಲ್ಲಿ ತುಲಾಪುರುಷದಾನ ಸಮಾರಂಭದಲ್ಲಿ ತನ್ನ ದೇಹದ ತೂಕ ಚಿನ್ನ ಮತ್ತು ಆಭರಣಗಳನ್ನು ಬ್ರಾಹ್ಮಣರಿಗೆ ಹಂಚಿದ ಸಂದರ್ಭದಲ್ಲಿ ಬಂದಿದ್ದ ರಾಜರ ಮತ್ತು ಪಂಡಿತರ ಮನೋರಂಜನೆಗಾಗಿ ಈ ಕಾವ್ಯವನ್ನು ರಚಿಸಿದನು, ದೊರೆಯು ಸ್ವತಃ ಕವಿಯಾಗಿದ್ದು ತಾನು ರಚಿಸಿದ ಅಷ್ಟಕಗಳನ್ನು ನೇಪಾಳದ ದೇವಸ್ಥಾನಗಳಲ್ಲಿ ಕಲ್ಲಿನಮೇಲೆ ಕೆತ್ತಿಸಿದನು.

ಕೃಷ್ಣಲೀಲಾತರಂಗಿಣೀ :—

ಶಿವರಾಮಾನಂದತೀರ್ಥನ ಶಿಷ್ಯನಾದ ನಾರಾಯಣತೀರ್ಥನು ಇದರ ಕವಿ. ಇವನ ಜನ್ಮಸ್ಥಳ ಕುಚ್ಚಿಮಂಚಿ ; ಕಾಲ ಕ್ರಿ. ಶ. 17ನೆಯ ಶತಮಾನ. ಈ ಕೃತಿಯಲ್ಲಿ ಕೃಷ್ಣನ ಕಥೆಯನ್ನು 12 ತರಂಗಗಳಲ್ಲಿ ವರ್ಣಿಸಲಾಗಿದೆ. ಹಾಡುಗಳಿಗೆ ತಾಳಲಯಗಳನ್ನು ಗುರುತಿಸಲಾಗಿದೆ. ಹಾಡುಗಳ ನಡುವೆ ವಿವರಣಾತ್ಮಕ ಪದ್ಯಗಳಿವೆ.

ಬೆಲ್ಲಮಕೊಂಡರಾಮಶಾಸ್ತ್ರಿಯು ಇದೇ ಮಾದರಿಯಲ್ಲಿ ಒಂದು ಕೃಷ್ಣಲೀಲಾತರಂಗಿಣಿಯನ್ನು ಬರೆದಿದ್ದಾನೆ.

ನವಗೀತಾಕುಸುಮಾಂಜಲೀ :—

ಇದನ್ನು ಬರೆದ ಕವಿ ಬೆಂಗಳೂರು ಸಂಸ್ಕೃತ ಮಹಾಪಾಠಶಾಲೆಯ ಅಧ್ಯಕ್ಷರಾಗಿದ್ದ ಸಿ. ವೆಂಕಟರಮಣಯ್ಯ. ಹಿಂದೂಪುರಾಣ ಮತ್ತು ಮತಗಳನ್ನು ಬಳಸಿಕೊಂಡು ದೇವನೊಬ್ಬ ನಾಮಹಲವು ಎಂಬ ಸಿದ್ಧಾಂತವನ್ನು ಸಾರುವುದು ಈ ಕಾವ್ಯದ ಗುರಿ. ಇದರಲ್ಲಿ 108 ಪದ್ಯಗಳಿದ್ದು ರಾಮಗೀತಾ, ಕೃಷ್ಣಗೀತಾ, ಗೌರೀಗೀತೆಗಳೆಂಬ 9 ಭಾಗಗಳಾಗಿ ವಿಂಗಡಿಸಲಾಗಿದೆ.

ಗಂಗಾಸ್ತವ :

ಇದರ ಕರ್ತೃ ಧೀರಜಯಂದೇವನೆಂದು ಭಾವಿಸಲಾಗಿದೆ. ಇದರಲ್ಲಿ 8 ಪದ್ಯಗಳಿವೆ. ಗಂಗಾ ಸ್ತೋತ್ರವೇ ವಸ್ತು. ಕವಿಕರ್ಣಪೂರ, ದೇವೇಶ್ವರ, ಹರಿಭಾಸ್ಕರ, ಗಂಗಾಧರ, ಸತ್ಯಘನಾನಂದ ತೀರ್ಥ. ಇವರೂ ಗಂಗಾಸ್ತವವನ್ನು ಬರೆದಿದ್ದಾರೆ.

ಸ್ತವಮಾಲಾ :

ರೂಪಗೋಸ್ವಾಮಿಯು ಸ್ತುತಿಪರವಾದ ರಾಧಾಮಾಧವರ ಕೇಲಿ ಪದ್ಯಗಳನ್ನು ತನ್ನ ಅಣ್ಣನಾದ 'ಸನಾತನ' ಹೆಸರಿನಲ್ಲಿ ರಚಿಸಿದ್ದಾನೆ. ರಸಮಯವಾದ ಈ ಪದ್ಯಗಳನ್ನು ಸಂಗ್ರಹಿಸಿ ಜೀವ ಗೋಸ್ವಾಮಿಯು ವ್ಯಾಖ್ಯಾನ ಬರೆದಿದ್ದಾನೆ. ಈ ಮಾಲೆಯಲ್ಲಿ ಅನೇಕ ಅಷ್ಟಪದಿಗಳಿದ್ದು ಗೀತ ಗೋವಿಂದದ ಪ್ರಭಾವ ಸ್ಪಷ್ಟವಾಗಿದೆ. ಇಲ್ಲಿಯೂ ಸಖಿಪತಿಭಾವರೂಪವಾದ ಭಕ್ತಿಮಾರ್ಗವಿದೆ. ಈ ಸಾಧನಮಾರ್ಗವು ಬಂಗಾಳದಲ್ಲಿ ಹೆಚ್ಚು ಪ್ರಚಾರದಲ್ಲಿದೆ.

ಇದು ಪ್ರಣಯಲೀನರಾಧಾಮಾಧವರ ವರ್ಣನೆ—

ಮಂದರಭರಮಂದಿರಪ್ರತಿಮಾರವಿಂದಾವಲೀ
ಸುಗಂಧಿನಿ ವಿಹಾರಯೋರ್ಜಲವಿಹಾರವಿಸ್ಫೂರ್ಜಿತೈಃ ।
ತವೇ ಸರಸಿ ವಲ್ಲಭೇ ಸಲಿಲವಾದ್ಯವಿದ್ಯಾವಿಧೌ
ವಿದಗ್ಧ ಭುಜಯೋರ್ಭಜೇ ವ್ರಜನವೀನಯೂನೋರ್ಯುಗವರ್ ॥

ಇದು ಅಷ್ಟಪದಿಯ ಒಂದಂಶ—

ಅನಧಿಗತಾಕಸ್ಮಿಕಗದಕಾರಣಂ ।
ಅರ್ಪಿತಮಂತ್ರೌಷಧಿನಿಕುರಂಬಮ್ ॥
ಅವಿರತರುದಿತ ವಿಲೋಹಿತಲೋಚನ
ಮನುಶೋಚಿತಿತಾಮಖಿಲಕುಟುಂಬಂ
ದೇವ ಹರೇ ಭವ ಕರುಣಾಶಾಲೀ
ಸಾ ತವ ನಿಶಿತಕಟಾಕ್ಷಶರಾಹತ
ಹೃದಯಾ ಜೀವತು ಕೃಶತನುರಾಲೀ ॥

ಗೀತಗೋವಿಂದದ ಮಾದರಿಯಲ್ಲಿ ಭಾನುದತ್ತನು[1] ಗೀತಗೌರೀಪತಿಯನ್ನೂ, ಸೋಮನಾಥನು ಕೃಷ್ಣಗೀತವನ್ನೂ, ಹರಿಶಂಕರನು ಗೀತಾರಾಘವವನ್ನೂ ರಾಮಶಿವಗೀತ ಮಾಲಿಕೆಯನ್ನೂ ಬರೆದಿದ್ದಾರೆ. ಇನ್ನೂ ಹಲವು ಗೀತಕಾವ್ಯಗಳು ದೊರೆಯುತ್ತವೆ. ಮುಕುಂದವಿಲಾಸವು ಹರಿ ಹರರಿಗೆ ಅಭೇದವನ್ನು ಕಲ್ಪಿಸಿ ಅವರ ಕ್ರೀಡೆಗಳನ್ನು ವರ್ಣಿಸುವ 6 ಸರ್ಗಗಳಿಂದ ಕೂಡಿದೆ. ಜಯನಾರಾಯಣನಿಂದ ರಚಿತವಾದ ಶಂಕರೀಸಂಗೀತದಲ್ಲಿ ಶಿವಪಾರ್ವತಿಯರ ವಿವಾಹ ವರ್ಣನೆಯು 12 ಪಟಲಗಳಲ್ಲಿ ಬಂದಿದೆ. ಆದರೆ ಗೀತಗೋವಿಂದದ ಮಾಧುರ್ಯ ಇವುಗಳಲ್ಲಿಲ್ಲ. ಎಷ್ಟೋ ಸ್ತೋತ್ರಗಳು ಹಾಡಲು ಯೋಗ್ಯವಾಗಿವೆ. ಅವುಗಳನ್ನು ಮುಂದೆ ಪ್ರಸ್ತಾಪ ಮಾಡಲಾಗಿದೆ.

1 ಪ್ರಭಾಕರ, ರಾಮುಕವಿ ಇವರೂ ಗೀತರಾಘವಗಳನ್ನು ಬರೆದಿದ್ದಾರೆ.



## ಸ್ತೋತ್ರಕಾವ್ಯ

ಮಾನವನು ದೇವನ ಮಹಾಶಕ್ತಿಗೆ ಮಣಿದು ಸಹಜವಾಗಿ ಭಯ-ಭಕ್ತಿಗಳಿಂದ ಅನುಗ್ರಹಕ್ಕಾಗಿ ಅವನನ್ನು ಸ್ತೋತ್ರಮಾಡುತ್ತಾನೆ. ಭಕ್ತನು ದೇವನೊಡನೆ ವ್ಯವಹರಿಸುವ ಮಾಧ್ಯಮ ಅಥವಾ ಭಾಷೆಯೇ ಸ್ತೋತ್ರ. ಭಗವಂತನ ಮಹಿಮೆಯನ್ನು ಕೊಂಡಾಡುವ ಮೂಲಕ ತನ್ನ ಹೃದಯದ ಅಸೀಮ ಭಕ್ತಿಯನ್ನು ತೋಡಿಕೊಳ್ಳುವ ಒಂದು ಮಾರ್ಗ ಇದು. ತಾಯಿಯನ್ನು ಒಲಿಸಿ ಕೊಳ್ಳಲು ಮಗು ಒಮ್ಮೆ ನಗುತ್ತದೆ, ಒಮ್ಮೆ ಅಳುತ್ತದೆ, ಒಮ್ಮೆ ಕುಣಿಯುತ್ತದೆ, ಒಮ್ಮೆ ಬಯ್ಯುತ್ತದೆ, ಒಮ್ಮೆ ಗುದ್ದುತ್ತದೆ; ಹಾಗೆಯೇ ಭಕ್ತನು ದೇವನೊಡನೆ ನಡೆದುಕೊಳ್ಳುತ್ತಾನೆ. ಇಂತಹ ಭಾವಪ್ರದರ್ಶನವಿರುವುದರಿಂದಲೇ ಸ್ತೋತ್ರಗಳು ಮೋಹಕವಾಗಿರುತ್ತವೆ. ಸಂಗೀತ ಬೆರೆತರಂತೂ ಭಾವದ ಹುಚ್ಚುಹೊಳೆ ಹರಿಯುತ್ತದೆ; ಆ ಹುಚ್ಚನ್ನು ಹಿಂಬಾಲಿಸಿ ಕುಣಿತವೂ ಸೇರುತ್ತದೆ. ಚಂಚಲಚಿತ್ತವನ್ನು ಏಕತ್ರ ಸ್ಥಿರವಾಗಿ ನಿಲ್ಲಿಸಲು ಸ್ತೋತ್ರ ಸಮರ್ಥವಾದುದು. ಇದು ಭಾರತೀಯನ ಜೀವನಕ್ಕೆ ಅವಿಭಾಜ್ಯವಾಗಿ ಅಂಟಿಕೊಂಡಿದೆ.

ಸಂಹಿತೆಗಳ ಕಾಲದಿಂದ ಹಿಡಿದು ಇಂದಿನವರೆಗೆ ಅಪರಿಮಿತವಾಗಿ ಸ್ತೋತ್ರಸಾಹಿತ್ಯ ಬೆಳೆದಿದೆ. ಋಕ್‌ಸಂಹಿತೆಯು ಸ್ತೋತ್ರರೂಪವಾದುದು; ಪ್ರಭುಸಂಮಿತೆ, ಮಿತ್ರಸಂಮಿತೆ, ಕಾಂತಾ ಸಂಮಿತೆ, ಈ ಮೂರು ಪ್ರಕಾರಗಳಲ್ಲಿಯೂ ಸ್ತೋತ್ರವಿದೆ. ಸಂಸ್ಕೃತಕಾವ್ಯಗಳ ಆದ್ಯಂತಗಳಲ್ಲಿ ಸ್ತೋತ್ರವಿದೆ; ಕಾಳಿದಾಸ, ಭಾರವಿ, ಮಾಘ, ಭವಭೂತಿ, ಭಾಸ ಮುಂತಾದವರ ಕೃತಿಗಳಲ್ಲಿನ ಸ್ತೋತ್ರಗಳು ಹೃದ್ಯವಾಗಿವೆ. ನೂರೆಂಟು ಸಾವಿರದೆಂಟು ದೇವನಾಮಗಳ ರೂಪದಲ್ಲಿರುವ ಸ್ತೋತ್ರಗಳೂ ಉಂಟು. ಈ ಅಷ್ಟೋತ್ತರಶತ, ಅಷ್ಟೋತ್ತರ ಸಹಸ್ರನಾಮಗಳಲ್ಲಿ ಯಾವ ಕಾವ್ಯಧರ್ಮವೂ ಇಲ್ಲ. ಶುದ್ಧ ಭಕ್ತಿಯ ಉದ್ಗಾರಗಳನ್ನೆಲ್ಲಾ ಕಾವ್ಯಗಳೆಂದು ಹೇಳಲಾಗುವುದಿಲ್ಲ. ಬಾಣ, ಮಯೂರ, ಶಂಕರಾಚಾರ್ಯ ಮೊದಲಾದವರಿಂದ ರಚಿತವಾದ ಸ್ತೋತ್ರಗಳಲ್ಲಿ ಯಥೇಚ್ಛವಾಗಿ ಕಾವ್ಯಧರ್ಮವೂ ಇದೆ.

ಸ್ತೋತ್ರಗಳಲ್ಲಿ ಧರ್ಮ, ಮತ, ಭಕ್ತಿ ಮತ್ತು ಸಾಹಿತ್ಯಗಳು ಬೆರೆತುಹೋಗಿವೆ. ಇದು ಧರ್ಮಸಾಹಿತ್ಯ, ಇದು ಮತಸಾಹಿತ್ಯ— ಮುಂತಾಗಿ ವರ್ಗೀಕರಿಸುವುದು ಕಷ್ಟ. ಬ್ರಾಹ್ಮಣರು, ಜೈನರು, ಬೌದ್ಧರು, ಶೈವರು— ಮೊದಲಾದವರಿಂದ ನಿರ್ಮಿತವಾದ ಸ್ತೋತ್ರಗಳೂ; ದ್ವೈತ, ಅದ್ವೈತಾದಿ ಮತಗಳಿಗನುಗುಣವಾಗಿ ನಿರ್ಮಿತವಾದ ಸ್ತೋತ್ರಗಳೂ ಇವೆ. ಲೀಲಾಶುಕನ ಕೃಷ್ಣಕರ್ಣಾಮೃತ, ಜಯದೇವನ ಗೀತಗೋವಿಂದಗಳೂ ಪ್ರೇಮದ ತಿರುವನ್ನು ಪಡೆದ ಸ್ತೋತ್ರಗಳೇ ಆಗಿವೆ. ಶತಕರೂಪವಾದ ಸ್ತೋತ್ರಗಳೂ ಇವೆ.

ಚಂಡೀಶತಕ :—ಹರ್ಷವರ್ಧನನ ಆಸ್ಥಾನಕವಿಯಾಗಿದ್ದ ಬಾಣನ ಕೃತಿ ಇದು. ಇದರ ಸ್ರಗ್ಧರಾಛಂದಸ್ಸಿನ 102 ಪದ್ಯಗಳಲ್ಲಿ ಮಹಿಷಾಸುರ ಮರ್ದಿನಿಯಾದ ಚಂಡಿಯ ಸ್ತುತಿಯಿದೆ. ದುರ್ಗೆಯ ಅನುಗ್ರಹಕ್ಕಾಗಿ ಭಕ್ತರು ಈ ಸ್ತೋತ್ರಗಳನ್ನು ಬಳಸುತ್ತಾರೆ. ಬಾಣನು





55*

ಮಹಾಕಾವ್ಯವನ್ನು ಬರೆಯಲು ಪ್ರಯತ್ನಿಸಿದ್ದರೆ ಯಶಸ್ವಿಯಾಗುತ್ತಿದ್ದನೆಂದು ಈ ಕಾವ್ಯದಿಂದ ಊಹಿಸಬಹುದು. ಶಬ್ದಾರ್ಥಾಲಂಕಾರಗಳಿಂದ ಕೂಡಿ ವರ್ಣನೆಗಳು ರಮ್ಯವಾಗಿವೆ. ನೇರ ಸಂವಾದಗಳಿಲ್ಲದಿದ್ದರೂ ಪಾತ್ರಗಳ ಬಾಯಿಯಿಂದ ಮಾತುಗಳನ್ನು ಹೇಳಿಸಿರುವುದರಿಂದ ಕಾವ್ಯಕ್ಕೆ ಕಳೆ ಬಂದಿದೆ. ದೇವತೆಗಳನ್ನು ಅಲ್ಲಗಳೆಯುವ, ಮಹಿಷನನ್ನು ನಿಂದಿಸುವ, ಶಿವನನ್ನು ಸಂಬೋಧಿಸುವ ಮಾತುಗಳು ಚಂಡಿಯ ಬಾಯಿಯಿಂದ ಬಂದು ಸೌಂದರ್ಯ ಪಡೆದಿವೆ. ಮಹಿಷ, ಜಯಾ, ಶಿವ, ಕಾರ್ತಿಕೇಯ, ದೇವತೆಗಳು, ಋಷಿಗಳು, ಚಂಡಿಯಪಾದ, ಕಾಲ್ಬೆರಳುಗಳ ಉಗುರುಗಳೂ ಕೂಡ ಮಾತನಾಡುವ ರೀತಿಯಲ್ಲಿ ಕಾವ್ಯ ಬೆಳೆದಿದೆ. ರೂಪಕದ ರೂಪವಿರದಿದ್ದರೂ ಛಾಯೆಯಿದೆ. ಯಮಕಾನುಪ್ರಾಸಗಳಿಂದ ಮಧುರ ನಾದ ಅನುರಣಿತವಾಗುತ್ತದೆ.

ಭೋಜನ ಸರಸ್ವತೀಕಂಠಾಭರಣದಲ್ಲಿ ಚಂಡೀಶತಕದಿಂದ ಉದ್ಧೃತವಾಗಿರುವ ಈ ಪದ್ಯದಲ್ಲಿ ಬಾಣನ ಶೈಲಿಯ ನಾದಮಾಧುರ್ಯವನ್ನೂ, ವರ್ಣನಾವೈಖರಿಯನ್ನೂ ನೋಡಬಹುದು—

ವಿದ್ರಾಣೇ ರುದ್ರವೃಂದೇ ಸವಿತರಿ ತರಲೇ ವಜ್ರಿಣಿ ಧ್ವಸ್ತವಜ್ರೇ
ಜಾತಾಶಂಕೇ ಶಶಾಂಕೇ ವಿರಮತಿ ಮರುತಿ ತ್ಯಕ್ತವೈರೇ ಕುಬೇರೇ ।
ವೈಕುಂಠೇ ಕುಂಠಿತಾಸ್ತ್ರೇ ಮಹಿಷಮತಿರುಷಂ ಪೌರುಷೋಪಘ್ನನಿಘ್ನಂ
ನಿರ್ವಿಘ್ನಂ ನಿಘ್ನತೀ ವಃ ಶಮಯತು ದುರಿತಂ ಭೂರಿಭಾವಾ ಭವಾನೀ ॥

ಚಂಡೀಶತಕಕ್ಕೆ ಧನೇಶ್ವರನ ವ್ಯಾಖ್ಯಾನವೂ, ಅಜ್ಞಾತರ ಮತ್ತೆರಡು ವ್ಯಾಖ್ಯಾನಗಳೂ ಇವೆ.

ಸೂರ್ಯಶತಕ :— ಇದನ್ನು ರಚಿಸಿದ ಕವಿ ಬಾಣನ ಮಾವನಾದ ಮಯೂರ. ಇದರಲ್ಲಿ ಸ್ರಗ್ಧರಾವೃತ್ತದ ನೂರು ಪದ್ಯಗಳಿವೆ. ಹರ್ಷವರ್ಧನನ ಸೂರ್ಯಪ್ರಾರ್ಥನೆಗಾಗಿ ಈ ಸ್ತೋತ್ರ ಕಾವ್ಯವನ್ನು ರಚಿಸಲಾಯಿತು. ಇದು ಗೌಡೀಶೈಲಿ ಮತ್ತು ಯಮಕಾನುಪ್ರಾಸಗಳಿಗೆ ಸುಪ್ರಸಿದ್ಧವಾಗಿದೆ. ಉಪಮಾ, ರೂಪಕ, ಉತ್ಪ್ರೇಕ್ಷೆ, ವ್ಯತಿರೇಕ, ವಿರೋಧ, ದೀಪಕ, ತುಲ್ಯಯೋಗಿತಾ ಮುಂತಾದ ಅರ್ಥಾಲಂಕಾರಗಳು ಕಾವ್ಯಕ್ಕೆ ಮೆರುಗುತಂದಿವೆ. ಭಾವಾನುಗುಣವಾಗಿ ನಾದ ಹೊರಹೊಮ್ಮುವಂತೆ ಪದಗುಂಫನವಿದೆ; ವಸ್ತುವನ್ನು ನೇರಪದಗಳಿಂದ ಹೇಳದೆ "ತೋಯದತೆರ್ಣೀ ಪವನಃ, ಅಶಿಶಿರಮಹಃ, ಶೀತೇತರಾಂಶುಃ, ವಿಷಧರದಮನಸ್ಯ ಅಗ್ರಜಃ", ಹೀಗೆ ಭಂಗ್ಯಂತರದಿಂದ ಹೇಳುವುದು ಇವನ ವೈಶಿಷ್ಟ್ಯ. 'ಶಂ' ಎಂಬ ವೈದಿಕಶಬ್ದ, ಆಜ್ಞಾರ್ಥದ ಕಾದಂತರೂಪ (ಅವತಾತ್), ಅಧಿಜಲಧಿ, ವಿತರತಿತರಾಂ ಮುಂತಾದ ವಿಶೇಷ ವ್ಯಾಕರಣ ರೂಪಗಳು— ಇಂತಹ ಪ್ರಯೋಗಗಳು ಈ ಕಾವ್ಯದಲ್ಲಿ ಸಾಕಷ್ಟಿವೆ. ಸೂರ್ಯನ ರಶ್ಮಿ, ಅಶ್ವ, ಸಾರಥಿ, ಮಂಡಲಗಳ ಪ್ರತ್ಯೇಕವರ್ಣನೆಗಾಗಿ ನಾಲ್ಕು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಸೂರ್ಯನಕಿರಣಗಳ ಪ್ರಾರ್ಥನೆಯಿಂದ ಪ್ರಾರಂಭಗೊಂಡು ಸೂರ್ಯಮಂಡಲದ ಪ್ರಾರ್ಥನೆಯಿಂದ ಕಾವ್ಯ ಮುಗಿಯುತ್ತದೆ. ತರುವಾಯ ಒಂದು ಪದ್ಯದಲ್ಲಿ ಕಾವ್ಯದ ಪ್ರವರ್ತಕ



ಕವಿ ಮತ್ತು ಫಲಗಳನ್ನು ತಿಳಿಸಲಾಗಿದೆ[1]. ಸೂರ್ಯನ ಸರ್ವತೋಮುಖವಾದ ವರ್ಣನೆಯೇ ಕಾವ್ಯದ ವಸ್ತು; ಅಭಿನವಗುಪ್ತ ಮತ್ತು ಮಮ್ಮಟರು ಇದರಿಂದ ಲಕ್ಷ್ಯಗಳನ್ನು ಆಯ್ದುಕೊಂಡಿದ್ದಾರೆ.

ಸರ್ವದೇವತಾಸ್ವರೂಪಿಯಾದ ಸೂರ್ಯನ ಒಂದು ಸ್ತೋತ್ರ :—

ಯೋನಿಃ ಸಾಮ್ನಾಂ ವಿಧಾತಾ ಮಧುರಿಪುರಜಿತೋ ಧೂರ್ಜಟಿಃ ಶಂಕರೋಽಸೌ
ಮೃತ್ಯುಃ ಕಾಲೋಽಲಕಾಯಾಃ ಪತಿರಪಿ ಧನದಃ ಪಾವಕೋ ಜಾತವೇದಾಃ ।
ಇತ್ಥಂ ಸಂಜ್ಞಾತ ಉಚಿತ್ವಾದ್ಯಭಿಪದಮೃತಭುಜಾಂ ಯಾ ಯದೃಚ್ಛಾಪ್ರವೃತ್ತಾಃ
ತಾಸಾಮೇಕೋಽಭಿಧೇಯಸ್ತದನುಗುಣಗಣೋ ಯಃ ಸ ಸೂರ್ಯೋಽವತಾದ್ವಃ

ಸೂತ್ರದಾರನಂತೆ ವರ್ತಿಸುವ ಅರುಣನ ಈ ವರ್ಣನೆಯು ರೂಪಕೋಪಮೆಗಳಿಂದ ರಮ್ಯವಾಗಿದೆ—

ಪ್ರಾತಃ ಶೈಲಾಗ್ರರಂಗೇ ರಜನಿಜವನಿಕಾಪಾಯಸಂಲಕ್ಷ್ಯಲಕ್ಷ್ಮೀಃ
ವಿಕ್ಷಿಪ್ಯಾಪೂರ್ವಪುಷ್ಪಾಂಜಲಿಮುಡುನಿಕರಂ ಸೂತ್ರಧಾರಾಯಮಾಣಃ ।
ಯಾಮೇಷ್ವಂಕೇಷ್ವಿವಾಹ್ನಃ ಕೃತರುಚಿಷು ಚತುರ್ಷ್ವೇವ ಯಾತಃ ಪ್ರತಿಷ್ಠಾ-
ಮವ್ಯಾತ್ ಪ್ರಸ್ತಾವಯನ್ ವೋ ಜಗದಟನಮಹಾನಾಟಿಕಾಂ ಸೂರ್ಯಸೂತಃ ॥

ಸೂರ್ಯನ ಕಿರಣಗಳು ಭವಸಾಗರವನ್ನು ದಾಟಿಸುವ ನೌಕೆಗಳು—

ದತ್ತಾನಂದಾಃ ಪ್ರಜಾನಾಂ ಸಮುಚಿತಸಮಯಾಕೃಷ್ಟಸೃಷ್ಟೈಃ ಪಯೋಭಿಃ
ಪೂರ್ವಾಹ್ಣೇ ವಿಪ್ರಕೀರ್ಣಾ ದಿಶಿ ದಿಶಿ ವಿರಮತ್ಯಹ್ನಿ ಸಂಹಾರಭಾಜಃ ।
ದೀಪ್ತಾಂಶೋರ್ದೀರ್ಘದುಃಖಪ್ರಭವಭಯೋದನ್ವದುತ್ತಾರನಾವೋ
ಗಾವೋ ವಃ ಪಾವನಾನಾಂ ಪರಮಪರಿಮಿತಾಂ ಪ್ರೀತಿಮುತ್ಪಾದಯಂತು ॥

ಸೂರ್ಯಮಂಡಲವು 'ಬೀಜಮಹ್ನಾಂ'. 'ಅಪಹೃತತಿಮಿರಂ ಚಕ್ಷುಷಾಮಂಜನಂ', 'ದ್ವಾರಂ ಮುಕ್ತಿಭಾಜಾಂ', ಆದ್ದರಿಂದ 'ರವೇರ್ಮಂಡಲಂ ಮುಕ್ತಯೇಽಸ್ತು'.

ಈ ಪದ್ಯದಲ್ಲಿ ಶಬ್ದಾಲಂಕಾರದಿಂದ ಪುಷ್ಟಿಗೊಂಡ ವ್ಯತಿರೇಕಾಲಂಕಾರವು ಸೂರ್ಯನೆಂಬ ದೀಪಕ್ಕೂ, ದೀಪಕ್ಕೂ ಇರುವ ವ್ಯತ್ಯಾಸವನ್ನು ಪ್ರಕಟಿಸುತ್ತದೆ—

ನೋ ಕಲ್ಪಾಪಾಯವಾಯೋರದಯರಯದಲತ್ಕ್ಷ್ಮಾಧರಸ್ಯಾಪಿ ಗಮ್ಯಾ
ಗಾಢೋದ್ಗೀರ್ಣೋಜ್ಜ್ವಲಶ್ರೀರಹನಿ ನ ರಹಿತಾ ನೋ ತಮಃ ಕಜ್ಜಲೇನ ।
ಪ್ರಾಪ್ತೋತ್ಪತ್ತಿಃ ಪತಂಗಾನ್ನ ಪುನರುಪಗತಾ ಮೋಷಮುಷ್ಣತ್ವಿಷೋ ವೋ
ವರ್ತಿಃ ಸೈವಾನ್ಯರೂಪಾ ಸುಖಯತು ನಿಖಿಲದ್ವೀಪ ದ್ವೀಪಸ್ಯ ದೀಪ್ತಿಃ ॥

---

1. ಶ್ಲೋಕಾ ಲೋಕಸ್ಯ ಭೂತ್ಯೈ ಶತಮಿತಿ ರಚಿತಾಃ ಶ್ರೀ ಮಯೂರೇಣ ಭಕ್ತ್ಯಾ
ಯುಕ್ತಶ್ಚೈತಾನ್ ಪಠೇದ್ಯಃ ಸಕೃದಪಿ ಪುರುಷಃ ಸರ್ವಪಾಪೈರ್ವಿಮುಕ್ತಃ ।
ಆರೋಗ್ಯಂ ಸತ್ಕವಿತ್ವಂ ಮತಿಮತುಲಬಲಂ ಕೀರ್ತಿಮಾಯುಃಪ್ರಕರ್ಷಂ
ವಿದ್ಯಾಮೈಶ್ವರ್ಯಮರ್ಥಂ ಸುಖಮಪಿ ಲಭತೇ ಸೋಽತ್ರ ಸೂರ್ಯಪ್ರಸಾದಾತ್ ॥

ಅರುಣನನ್ನು ಸಂಬೋಧಿಸಿ ಸೂರ್ಯನು ಹೇಳುವ ಈ ಮಾತು ಅವನ ಅನ್ಯಾಪೇಕ್ಷೆಯಿಲ್ಲದ ವಿಶ್ವೋಪಕಾರಬುದ್ಧಿಯನ್ನು ತಿಳಿಸುತ್ತದೆ—

ಪಾಶಾನಾಶಾಂತಪಾಲಾದರುಣವರುಣತೋ ಮಾಗ್ರಹೀಃ ಪ್ರಗ್ರಹಾರ್ಥಂ
ತೃಷ್ಣಾಂ ಕೃಷ್ಣಸ್ಯ ಚಕ್ರೇ ಜಹಿಹಿ ನಹಿ ರಥೋ ಯಾತಿ ಮೇ ನೈಕಚಕ್ರಃ ।
ಯೋಕ್ತುಂ ಯೋಗ್ಯಂ ಕಿಮುಚ್ಚೈಃಶ್ರವಸಮಭಿಲಷಸ್ಯಷ್ಟಮಂ ವೃತ್ರಶತ್ರೋಃ
ತ್ಯಕ್ತ್ವಾನ್ಯಾಪೇಕ್ಷವಿಶ್ವೋಪಕೃತಿರಿತಿ ರವಿಃ ಶಾಸ್ತಿ ಯಂ ಸೋಽವತಾದ್ವಃ ॥

ತ್ರಿಭುವನಪಾಲ, ಯಜ್ಞೇಶ್ವರ, ಶ್ರೀರಂಗದೇವ, ಗೋಪೀನಾಥ, ರಾಮಚಂದ್ರ ಮೊದಲಾದವರು ಸೂರ್ಯಶತಕಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಗೋಪಾಲಶರ್ಮ ಶ್ರೀಶ್ವರವಿದ್ಯಾಲಂಕಾರ, ರಾಘವೇಂದ್ರಸರಸ್ವತೀ, ಲಿಂಗಕವಿ, ಮೊದಲಾದವರೂ ಸೂರ್ಯ ಶತಕಗಳನ್ನು ಬರೆದಿದ್ದಾರೆ. ಹನೂಮಾನ್ ಮತ್ತು ಉಪಮನ್ಯು ಸೂರ್ಯಸ್ತವಗಳನ್ನು ಬರೆದಿದ್ದಾರೆ.

**ಸ್ತೋತ್ರರತ್ನ** ;—ವೈಷ್ಣವ ಮತಪ್ರತಿಷ್ಠಾಪಕರಾದ ಶ್ರೀ ರಾಮಾನುಜಾಚಾರ್ಯರ ಪರಮ ಗುರುವಾದ ಯಾಮುನಾಚಾರ್ಯರ ಕೃತಿ ಇದು. ಇವನು ಈಶ್ವರಭಟ್ಟ ಮತ್ತು ರಂಗನಾಯಕೀ ಅವರ ಮಗ, ಮತ್ತು ನಾಥಮುನಿಯ ಮೊಮ್ಮಗ, ಕಾಲ, ಸುಮಾರ, ಕ್ರಿ. ಶ. 10ನೆಯ ಶತಮಾನ; ನಿವಾಸ ಶ್ರೀರಂಗ. ದಕ್ಷಿಣಭಾರತ ಇವನಪ್ರಧಾನ ಉಪದೇಶ ಕ್ಷೇತ್ರವಾಗಿದ್ದಿತು . ತಮಿಳುನಾಡಿನಲ್ಲಿ ಇವನನ್ನು ಆಲವಂದರ್ ಎಂದು ಕರೆಯುತ್ತಾರೆ. ಇವರು ರಚಿಸಿದ ಸೋತ್ರವು ಆಲವಂದಾರಸೋತ್ರವೆಂದು ಪ್ರಸಿದ್ಧಿಗೆ ಬಂದಿತು. ಭಕ್ತರು ಇದನ್ನು ಸ್ತೋತ್ರರತ್ನವೆಂದು ಕರೆಯುತ್ತಾರೆ. ಶ್ರೀಸ್ತುತಿಯು ಇವರಿಂದ ರಚಿತವಾದ ಮತ್ತೊಂದು ಸ್ತೋತ್ರ. ಇವನ ಪದ್ಯಗಳಿಗೆ ಭಕ್ತಿಯ ಹೊಳೆಯನ್ನು ಹರಿಸುವ ವಿಚಿತ್ರ ಶಕ್ತಿಯಿದೆ. ಸ್ತೋತ್ರರತ್ನವು ವೈಷ್ಣವರಿಗೆ ಬಹಳ ಪ್ರಿಯವಾದುದು. ಇದರ ಭಾಷೇ ಸುಲಭ; ಶೈಲಿ ಸರಳ; ಪದಗಳಲ್ಲಿ ಮಾಧುರ್ಯವಿದೆ.

ಈ ಪದ್ಯವು ಪ್ರಪತ್ತಿಭಾವದ ಸುಂದರಾಭಿವ್ಯಕ್ತಿಗೆ ಒಂದು ನಿದರ್ಶನ :—

ತವಾಮೃತಸ್ಯಂದಿನಿ ಪಾದಪಂಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ ।
ಸ್ಥಿತೇಽರವಿಂದೇ ಮಕರಂದನಿರ್ಭರೇ ಮಧುವ್ರತೋ ನೇಕ್ಷುರಸಂ ಸಮೀಕ್ಷತೇ ॥

**ಲಕ್ಷ್ಮೀ ಸಹಸ್ರ** :—ಇದು ಕ್ರಿ.ಶ. 17ನೆಯ ಶತಮಾನದ ವೆಂಕಟಾಧ್ವರಿಯಿಂದ ರಚಿತ ವಾದುದು. ನಾನಾ ಶಾಸ್ತ್ರಗಳನ್ನು ಬಲ್ಲ ದೊಡ್ಡ ಪಂಡಿತನಾದ ಇವನು ಚಂಪೂ, ನಾಟಕ, ಕಾವ್ಯ ಮೊದಲಾದುವುಗಳನ್ನು ಬರೆದಿದ್ದಾನೆ. ಇವನ ಭಾಷೆ ಕಠಿಣವಾದುದು. ಇವನೊಬ್ಬ ಶಬ್ದ ಕವಿ

ಲಕ್ಷ್ಮಿಯ ಕಟಿವರ್ಣನೆ :—

ಪರಮಾದಿಷು ಮಾತರಾದಿಮಂ ಯದಿಮಂ ಕೋಶಕೃತಾಹ ಮಧ್ಯಮಮ್ ।
ಅಮುತಃ ಕಿಲ ಪಾಮರಸ್ತತಃ ಸ ಬಭೂವ ಸ್ವಯಮೇಷ ಮಧ್ಯಮಃ



**ವರದರಾಜಸ್ತವ** :—ದೊಡ್ಡ ವಿದ್ವಾಂಸರಾದ ಅಪ್ಪಯ್ಯದೀಕ್ಷಿತರು (1554-1626) ಇದರ ಕರ್ತೃ. ವೇದಾಂತ ದೇಶಿಕರು ಬರೆದಿರುವ ವರದರಾಜಸ್ತುತಿಯಿಂದ ಈ ಸ್ತೋತ್ರ ಪ್ರಭಾವಿತವಾಗಿದೆ. ಕರಾಚಿಯಲ್ಲಿ ಬಹಳ ಕಾಲ ವಾಸಿಸುತ್ತಿದ್ದ ಅಪ್ಪಯ್ಯದೀಕ್ಷಿತರು 106 ಸುಂದರ ಪದ್ಯಗಳಲ್ಲಿ ವರದರಾಜನನ್ನು ಮನೋಜ್ಞವಾಗಿ ವರ್ಣಿಸಿದ್ದಾರೆ. ಇವರು ಉದಾತ್ತ ಭಕ್ತರೂ, ದಾರ್ಶನಿಕರೂ ಆಗಿದ್ದರು. ಇವರು ಪಂಚರತ್ನಸ್ತವ, ಭಕ್ತಾಮರಸ್ತವ, ಶಾಂತಿಸ್ತವ, ಆದಿತ್ಯ ಸೋತ್ರರತ್ನ, ಶಿವಮಹಿಮಾಕಲಿಕಾಸ್ತವ ಮುಂತಾದ ಸ್ತೋತ್ರಗಳನ್ನು ರಚಿಸಿದ್ದಾರೆ.

**ಪಂಚಲಹರಿಗಳು** :— ಪಂಡಿತರಾಜ ಜಗನ್ನಾಥನು ಸ್ತೋತ್ರರೂಪವಾದ ಐದು ಲಹರಿ ಗಳನ್ನು ಬರೆದಿದ್ದಾನೆ. ಸರಸ ಕಾವ್ಯ ರಚನೆಗೆ ಪ್ರಾಯಃ ಇವನೇ ಕೊನೆಯ ಕವಿ. ಕರುಣಾಲಹರಿ ಯಲ್ಲಿ ಭಗವಂತನ ದಯಾಯಾಚನೆಯನ್ನೂ, ಗಂಗಾಲಹರಿಯಲ್ಲಿ ಗಂಗೆಯ ಸ್ತೋತ್ರವನ್ನೂ, ಅಮೃತಲಹರಿಯಲ್ಲಿ ಯಮುನೆಯ ಸ್ತೋತ್ರವನ್ನೂ, ಲಕ್ಷ್ಮೀಲಹರಿಯಲ್ಲಿ ಲಕ್ಷ್ಮಿಯ ಸ್ತೋತ್ರವನ್ನೂ ಸುಧಾಲಹರಿಯಲ್ಲಿ ಸೂರ್ಯಸ್ತುತಿಯನ್ನೂ ಮಾಡಿದ್ದಾನೆ. ಕೃಷ್ಣನ ಚರಣಾರವಿಂದದಲ್ಲಿ ಅವನಿಗೆ ಅಮಿತ ಭಕ್ತಿಯಿದ್ದಿತು.

ಯಮುನಾ ತೀರದಲ್ಲಿ ಗೋಪಿಯರೊಡನೆ ವಿಹರಿಸುವ ಕೃಷ್ಣನ ವರ್ಣನೆ—

ಸ್ಮೃತಾಪಿ ತರುಣಾತಪಂ ಕರುಣಯಾ ಹರಂತೀ ನೃಣಾ
ಮಭಂಗುರತನುತ್ವಿಷಾಂ ವಲಯಿತಾ ಶತೈರ್ವಿದ್ಯುತಾಮ್ ।
ಕಲಿಂದಗಿರಿನಂದಿನೀತಟಸುರದ್ರುಮಾಲಂಬಿನೀ
ಮದೀಯಮತಿಚುಂಬಿನೀ ಭವತು ಕಾಪಿ ಕಾದಂಬಿನೀ ॥

ಕವಿಯು ಗಂಗಾಲಹರಿಯನ್ನು ಪೀಯೂಷಲಹರಿಯೆಂದು ಕರೆದಿದ್ದಾನೆ. ಇದು ಗಂಗಾ ಲಹರಿಯ ಒಂದು ಪದ್ಯ :—

ಸ್ಮೃತಿಂ ಯಾತಾ ಪುಂಸಾಮಕೃತಸುಕೃತಾನಾಮಪಿ ಚ ಯಾ
ಹರತ್ಯಂತಸ್ತಂದ್ರಾಂ ತಿಮಿರಮಿವ ಚಂದ್ರಾಂಶುಸರಣಿಃ ।
ಇಯಂ ಸಾ ತೇ ಮೂರ್ತಿಃ ಸಕಲಸುರಸಂಸೇವ್ಯಸಲಿಲಾ
ಮಮಾಂತಃಸಂತಾಪಂ ತ್ರಿವಿಧಮಥ ತಾಪಂ ಚ ಹರತಾಮ್ ॥

**ಶಿವಮಹಿಮ್ನಃಸ್ತೋತ್ರ** :—ಶಿವಸ್ತೋತ್ರಗಳಲ್ಲಿ ಇದಕ್ಕೆ ವಿಶೇಷ ಸ್ಥಾನವಿದೆ. ಇದರ ಕರ್ತೃವಾದ ಆಚಾರ್ಯ ಪುಷ್ಪದಂತನ ಒಂದು ಶ್ಲೋಕವನ್ನು ರಾಜಶೇಖರನು ತನ್ನ ಕಾವ್ಯಮೀಮಾಂಸೆಯಲ್ಲಿ ಉದ್ಧರಿಸಿರುವುದರಿಂದ ಪುಷ್ಪದಂತನು ಕ್ರಿ. ಶ. 10ನೆಯ ಶತಮಾನಕ್ಕಿಂತಲೂ ಹಿಂದಿನವನು. ಶಿಖರಿಣೀ ವೃತ್ತದಲ್ಲಿರುವ ಈ ಪದ್ಯಗಳು ಭಾವಪೂರ್ಣ ವಾಗಿವೆ, ದರ್ಶನ— ಸಾಹಿತ್ಯಗಳೆರಡನ್ನೂ ಪಡೆದಿವೆ.

**ಶಿವಸ್ತೋತ್ರಾವಲೀ** :—ಕಾಶ್ಮೀರವು ಶೈವದರ್ಶನಕ್ಕೆ ಪ್ರಸಿದ್ಧಕ್ಷೇತ್ರ. ಇಲ್ಲಿನ ಕವಿಗಳು ಶಿವಚರಿತ್ರೆಯ ಕಾವ್ಯಗಳನ್ನು ಬರೆದಿರುವಂತೆ ಶಿವಸ್ತೋತ್ರಗಳನ್ನೂ ರಚಿಸಿದ್ದಾರೆ,

ಇವರಲ್ಲೊಬ್ಬನಾದ ಉತ್ಪಲದೇವನು ಶಿವಸ್ತೋತ್ರಾವಳಿಯ ಕರ್ತೃ, ಇವನ ತಂದೆ ಉದಯಾಕರ ; ಕಾಲ ಸುಮಾರು ಕ್ರಿ.ಶ. 930. ಕ್ಷೇಮೇಂದ್ರನು ಇವನ ಪದ್ಯಗಳನ್ನು ಉದ್ಧರಿಸಿದ್ದಾನೆ ಉತ್ಪಲನಿಗೆ ಸಂಗೀತ ಶಾಸ್ತ್ರದಲ್ಲಿ ಪ್ರಾವೀಣ್ಯವಿದ್ದಿತು. ಶಿವಸ್ತೋತ್ರಾವಳಿಯಲ್ಲಿ 21 ವಿಭಿನ್ನ ಸ್ತೋತ್ರಗಳಿವೆ. ಶಂಕರನ ಸೌಂದರ್ಯ ಮತ್ತು ಅನಂತ ಗುಣಗಳನ್ನು ವರ್ಣಿಸಲಾಗಿದೆ. ಪದ್ಯಗಳು ಭಾವಪೂರ್ಣವಾಗಿವೆ.

ಒಂದು ಉದಾಹರಣೆ : —

ಕಂಠಕೋಣವಿನಿವಿಷ್ಟಮೀಶ ತೇ ಕಾಲಕೂಟಮಪಿ ಮೇ ಮಹಾಮೃತಮ್ ।
ಅಪ್ಯುಪಾತ್ತಮಮೃತಂ ಭವದ್ವಪುರ್ಭೇದವೃತ್ತಿ ಯದಿ ಮೇ ನ ರೋಚತೇ ॥

ಸ್ತುತಿಕುಸುಮಾಂಜಲಿ :— ಈ ಸ್ತೋತ್ರದ ಕರ್ತೃವಾದ ಜಗದ್ಧರನು ಕಾಶ್ಮೀರದವನು (ಪದ್ಮಪುರ). ಇವನ ಪೂರ್ವಿಕರು ಪ್ರಸಿದ್ಧ ವಿದ್ವಾಂಸರಾಗಿದ್ದರು. ಇವನ ತಂದೆ ರತ್ನಧರ, ತಾತ ಗೌರಧರ. ಇವನ ಕಾಲ ಸುಮಾರು ಕ್ರಿ.ಶ. 15ನೆಯ ಶತಮಾನ.

ಸ್ತುತಿಕುಸುಮಾಂಜಲಿಯಲ್ಲಿ 38 ವಿಭಿನ್ನ ಸ್ತೋತ್ರಗಳಿವೆ. ಇವುಗಳಲ್ಲಿ ಒಟ್ಟು 1425 ಶ್ಲೋಕಗಳಿವೆ. 7, 8 ಮತ್ತು 9ನೆಯ ಸ್ತೋತ್ರಗಳಲ್ಲಿ ಕರುಣರಸದ ಪರಿಪಾಕವಿದೆ. ಶ್ಲೇಷ ಮತ್ತು ಯಮಕಗಳಲ್ಲಿ ಇವನು ಸಿದ್ಧಹಸ್ತ. ಈ ಶ್ಲೋಕದಲ್ಲಿ ಸಭಂಗ ಶ್ಲೇಷದ ಚಾತುರ್ಯವನ್ನು ಕಾಣಬಹುದು :—

ಚಾರುಚಂದ್ರಕಲಯೋಪಶೋಭಿತಂ ಭೋಗಿಭಿಃ ಸಹ ಗೃಹೀತಸೌಹೃದಮ್ ।
ಅಭ್ಯುಪೇತಘನಕಾಲಶಾತ್ರವಂ ನೀಲಕಂಠಮತಿಕೌತುಕಂ ಸ್ತುಮಃ ॥

ಈಶನ ಗುಣಗಳ ಅಪಾರತೆಯನ್ನು ತಿಳಿಸುವ ರೀತಿಯಿದು—

ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧುಪಾತ್ರೇ
ಸುರತರುವರಶಾಖಾ ಲೇಖನೀ ಪತ್ರಮುರ್ವೀ ।
ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ
ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ॥

ಭಜಗೋವಿಂದ :— ಇದರ ಕರ್ತೃವಾದ ಶಂಕರಾಚಾರ್ಯರ ತಂದೆ ಶಿವಗುರು : ತಾಯಿ ಆರ್ಯಾಂಬಾ ; ಇವನದು ವಿದ್ಯಾಧಿರಾಜವಂಶ ; ಕೇರಳದಲ್ಲಿ (ಮಲಬಾರ್) ಹರಿಯುವ ಚೂರ್ಣೀ ನದಿಯ ದಂಡೆಯಲ್ಲಿರುವ ಕಾಲಡಿಯಲ್ಲಿ ಇವರು ಜನಿಸಿದರು. ಎಂಟು ವರ್ಷಗಳು ತುಂಬುವುದರೊಳಗೆ ಭಾರತೀಯ ಭಾಷೆಗಳಲ್ಲೆಲ್ಲಾ ಪ್ರಾವೀಣ್ಯ ಪಡೆದು ಪರಬ್ರಹ್ಮ ಚಿಂತನೆಗೆ ತೊಡಗಿದರು. ತಂದೆ–ತಾಯಿಗಳಿಗೆ ಇಷ್ಟವಿರದಿದ್ದರೂ ಗೋವಿಂದ ಭಗವತ್ಪಾದರಿಂದ ಸಂನ್ಯಾಸ ದೀಕ್ಷೆಯನ್ನು ಸ್ವೀಕರಿಸಿ, ಶಿಷ್ಯರ ಗುಂಪಿನಿಂದ ಕೂಡಿ ಭಾರತದಲ್ಲೆಲ್ಲಾ ಸಂಚರಿಸಿದರು. ಅದ್ವೈತ ವೇದಾಂತದ ಪ್ರತಿಷ್ಠಾಪಕರಾದ ಇವರು ತಮ್ಮ ತತ್ತ್ವಪ್ರಚಾರಕ್ಕಾಗಿ ಭಾರತದ ನಾನಾ ಕಡೆ ಮಠ ಪೀಠಗಳನ್ನು ಸ್ಥಾಪಿಸಿದರು. ಇಂದಿಗೂ ಅವು ಪೂಜ್ಯಪೀಠಗಳಾಗಿ ಉಳಿದಿವೆ. ಪ್ರಸ್ಥಾನ



ತ್ರಯಕ್ಕೆ (ಬ್ರಹ್ಮಸೂತ್ರ, ಗೀತಾ, ಮತ್ತು ಉಪನಿಷತ್) ಅಮೂಲ್ಯವಾದ ಭಾಷ್ಯವನ್ನು ಬರೆದಿದ್ದಾರೆ. ತಾಯಿಯ ಮರಣಕಾಲಕ್ಕೆ ಸರಿಯಾಗಿ ತಮ್ಮ ಸ್ವಂತ ಊರಿಗೆ ಹಿಂದಿರುಗಿ ದಹನ ಸಂಸ್ಕಾರದಲ್ಲಿ ಭಾಗವಹಿಸಿದರು. ತಮ್ಮ ಕೇವಲ 32ನೆಯ ವಯಸ್ಸಿನಲ್ಲಿ ದೈವಾಧೀನರಾದರು. ಇವರ ಕಾಲ ಸುಮಾರು ಕ್ರಿ.ಶ. 7 ಅಥವಾ 8ನೆಯ ಶತಮಾನವೆಂದು ಬಹಳ ಮಂದಿ ವಿದ್ವಾಂಸರ ಮತ.

ಶಂಕರರು ರಾಜಭುಜಂಗ, ಬ್ರಹ್ಮಣ್ಯಭುಜಂಗ, ವಿಷ್ಣುಭುಜಂಗ, ಶಿವಭುಜಂಗ, ದತ್ತಾತ್ರೇಯ ಭುಜಂಗ, ಹನುಮದ್ಭುಜಂಗ, ದೇವೀಭುಜಂಗ, ದ್ವಾದಶಮಂಜರೀ, ತ್ರಿಪುರಸುಂದರೀ, ರಾಜರಾಜೇಶ್ವರಿ, ಚಂದ್ರಮೌಳೀಶ್ವರ, ಲಕ್ಷ್ಮೀನೃಸಿಂಹ, ಅನ್ನಪೂರ್ಣಾ, ಶಾರದಾ, ಕಾಶಿ ವಿಶ್ವನಾಥ, ನಟೇಶ್ವರ, ಶ್ರೀಚಕ್ರಸ್ತವರಾಜ, ಅಪರಾಧಕ್ಷಮಾಪಣಸ್ತೋತ್ರ, ಕೃಷ್ಣತಾಂಡವ ಸ್ತೋತ್ರ, ಪಂಚರತ್ನ, ಶಿವಸ್ತೋತ್ರ, ವಿಷ್ಣುಸ್ತೋತ್ರ ಮೊದಲಾದ ಸ್ತೋತ್ರಗಳನ್ನೂ, ಅಂಬಾ, ಪಾಂಡುರಂಗ, ಶಿವನಾಮಾವಳಿ, ಕೃಷ್ಣ ಜಗನ್ನಾಥ, ಯಮುನಾ, ಗಂಗಾ, ಮಣಿಕರ್ಣಿಕಾ, ಭೈರವ, ಕಾಮಾಕ್ಷೀ, ಸಾಂಬ, ಭ್ರಮರಾಂಬಾ, ಮೊದಲಾದ ಅಷ್ಟಕಗಳನ್ನೂ ಬರೆದಿದ್ದಾರೆ. ಆನಂದಲಹರೀ, ಸೌಂದರ್ಯಲಹರೀ ಎಂಬ ಲಹರಿಗಳನ್ನೂ ಬರೆದಿದ್ದಾರೆ.

ಆದಿಶಂಕರರು ಅದ್ವೈತ ಮತ್ತು ಮಾಯಾವಾದದ ಸಂಸ್ಥಾಪಕರಾದರೂ ಲೋಕದ ನಾನಾ ದೇವತೆಗಳ ಉಪಾಸನೆಯಲ್ಲಿಯೂ ಆಸಕ್ತರು. ನಿರ್ಗುಣಬ್ರಹ್ಮವನ್ನು ತಲುಪಲು ಸಗುಣ ಬ್ರಹ್ಮೋಪಾಸನೆಯು ಅಗತ್ಯವಷ್ಟೆ. ಆದ್ದರಿಂದಲೇ ಅವರು ವಿಷ್ಣು, ಶಿವ, ಗಣಪತಿ, ಶಕ್ತಿ ಮುಂತಾದ ದೇವತೆಗಳನ್ನು ಸ್ತುತಿಸಿದ್ದಾರೆ. ಅವರ ಲಲಿತ ಲೇಖನಿಯಿಂದ ರಸಭಾವನಿರಂತರವಾದ ಕಾವ್ಯ ಮೂಡಿದೆ. ಆನಂದದ ಹೊಳೆ ಹರಿಸುವ ಶಕ್ತಿ ಅವರ ಮಧುರ ಶೈಲಿಗಿದೆ. ಅವರ ಪದ್ಯಗಳನ್ನು ಸುಮಧುರವಾಗಿ ಹಾಡಲು ಅನುಕೂಲವಿದೆ. ಅವರ ಭಜಗೋವಿಂದಂ ಸ್ತೋತ್ರವು ಸುಪ್ರಸಿದ್ಧವೂ, ಜನಪ್ರಿಯವೂ ಆಗಿದೆ.

ಒಂದು ಉದಾಹರಣೆ :—

ಭಜ ಗೋವಿಂದಂ ಭಜ ಗೋವಿಂದಂ ಭಜ ಗೋವಿಂದಂ ಮೂಢಮತೇ ।
ಪ್ರಾಪ್ತೇ ಸನ್ನಿಹಿತೇ ತವ ಮರಣೇ ನಹಿ ನಹಿ ರಕ್ಷತಿ ಡುಕೃಞ್ ಕರಣೇ ॥
ಬಾಲಸ್ತಾವತ್ ಕ್ರೀಡಾಸಕ್ತಃ ತರುಣಸ್ತಾವತ್ತರುಣೀರಕ್ತಃ ।
ವೃದ್ಧಸ್ತಾವಚ್ಚಿಂತಾಮಗ್ನಃ ಪರೇ ಬ್ರಹ್ಮಣೀ ಕೋಽಪಿ ನ ಲಗ್ನಃ ॥
ಭಜ ಗೋವಿಂದಂ ಭಜ ಗೋವಿಂದಂ ಭಜ ಗೋವಿಂದಂ ಮೂಢಮತೇ ॥

ಶಂಕರಾಚಾರ್ಯರ ಮಧುರಪದಗಳ ನಾದಲಹರಿಯು ಕಿವಿಗಳಲ್ಲಿ ಅಮೃತವನ್ನು ವರ್ಷಿಸಿ ನಮ್ಮನ್ನು ಆನಂದಮಯವಾದ ದಿವ್ಯಲೋಕಕ್ಕೆ ತೆಗೆದುಕೊಂಡು ಹೋಗುತ್ತದೆ. ಸಹಜ ಸುಂದರಾರ್ಥಗಳಿಂದ ಮೂಡುವ ರಮಣೀಯ ಭಾವವು ಓದುಗರನ್ನು ತನ್ನಲ್ಲಿ ಲಯಗೊಳಿಸಿ ಕೊಳ್ಳುತ್ತದೆ. ಅವರ ಕವಿತೆಯ ಪರಮ ಸೌಂದರ್ಯವನ್ನು ನೋಡಲು 'ಸೌಂದರ್ಯಲಹರಿ' ಒಂದು ಸಾಕು. ಭಗವತಿಯಾದ ತ್ರಿಪುರಸುಂದರಿಯ ದಿವ್ಯಸೌಂದರ್ಯ ಇಲ್ಲಿ ವರ್ಣಿತವಾಗಿದೆ,

ಭಾಷೆಭಾವ, ರಸ, ಅಲಂಕಾರ, ಸಾಹಿತ್ಯ, ತಂತ್ರ—ಎಲ್ಲವೂ ಇಲ್ಲಿ ಮನೋಜ್ಞ. ಭಗವತಿ ಕಾಮಾಕ್ಷಿಯ ಸೀಮಂತ ಮತ್ತು ಸಿಂಧೂರಗಳ ವರ್ಣನೆ—

ತನೋತು ಕ್ಷೇಮಂ ನಸ್ತವ ವದನಸೌಂದರ್ಯಲಹರೀ
ಪರೀವಾಹಃ ಸ್ರೋತಃಸರಣಿರಿವ ಸೀಮಂತಸರಣೀ ।
ವಹಂತೀ ಸಿಂಧೂರಂ ಪ್ರಬಲಕಬರೀಭಾರತಿಮಿರ-
ದ್ವಿಷಾಂ ವೃಂದೈರ್ವಂದೀಕೃತಮಿತ ನವೀನಾರ್ಕಕಿರಣಮ್ ॥

ಅಪರಾಧ ಕ್ಷಮಾಪಣ ಸ್ತೋತ್ರದ ಈ ಪದ್ಯವು ಬಾಳಿನ ಅವಿವೇಕವನ್ನು ಸಮರ್ಪಕವಾಗಿ ಹೊರ ಚೆಲ್ಲುತ್ತದೆ —

ಪ್ರೌಢೋಽಹಂ ಯೌವನಸ್ಥೋ ವಿಷಯವಿಷಧರೈಃ ಪಂಚಭಿರ್ಮರ್ಮಸಂಧೌ
ದಷ್ಟೋ ನಷ್ಟೋ ವಿವೇಕಃ ಸುತಧನಯುವತೀಸ್ವಾದುಸೌಖ್ಯೇ ನಿಷಣ್ಣಃ ।
ಶೈವೇ ಚಿಂತಾವಿಹೀನಂ ಮಮ ಹೃದಯಮಹೋ ! ಮಾನಗರ್ವಾಧಿರೂಢಂ
ಕ್ಷಂತವ್ಯೋ ಮೇಽಪರಾಧಃ ಶಿವಶಿವಶಿವಭೋಃ ಶ್ರೀಮಹಾದೇವ ! ಶಂಭೋ ॥

ದೇವ್ಯಪರಾಧಕ್ಷಮಾಪಣಸ್ತೋತ್ರದ ಈ ಪದ್ಯವು ಭಕ್ತಿಯ ಪರಾಕಾಷ್ಠೆಯನ್ನು ಭವ್ಯವಾಗಿ ನಿರೂಪಿಸುತ್ತದೆ—

ವಿಧೇರಜ್ಞಾನೇನ ದ್ರವಿಣವಿರಹೇಣಾಲಸತಯಾ
ವಿಧೇಯಾ ಶಕ್ಯತ್ವಾತ್ತವ ಚರಣಯೋರ್ಯಾಚ್ಯುತಿರಭೂತ್ ।
ತದೇತತ್ ಕ್ಷಂತವ್ಯಂ ಜನನಿ ಸಕಲಲೋಕೋದ್ಧಾರಿಣಿ ಶಿವೇ
ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥

**ಮುಕುಂದಮಾಲಾ** :—ಇದರ ಕರ್ತೃವಾದ ಕುಲಶೇಖರನು ತಿರುವಾಂಕೂರು ರಾಜ್ಯದ ದೊರೆಯಾಗಿದ್ದ ಒಬ್ಬ ವೈಷ್ಣವ ಭಕ್ತ. ಇವನು ಸಿಂಹಾಸನವನ್ನು ತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಿ ಮುಕುಂದಮಾಲೆಯನ್ನು ರಚಿಸಿದನು. ಮಲಬಾರಿನ ಪ್ರವಾದವು ಕುಲಶೇಖರನು ಕೃಷ್ಣಕರ್ಣಾಮೃತದ ಕವಿಯಾದ ಕೃಷ್ಣಲೀಲಾಶುಕನ ಸಮಕಾಲೀನನೆಂದು ತಿಳಿಸುತ್ತದೆ ಮತ್ತು ವಾಸುದೇವನು ತನ್ನ ಯುಧಿಷ್ಠಿರ ವಿಜಯದಲ್ಲಿ ಇವನನ್ನು ಸ್ಮರಿಸಿಕೊಂಡಿದ್ದಾನೆ.* ಆಳ್ವಾರ್ ಎಂದು ಪ್ರಖ್ಯಾತಿ ಪಡೆದ ಕುಲಶೇಖರನ ಕಾಲ ಸುಮಾರು ಕ್ರಿ.ಶ. 10ನೆಯ ಶತಮಾನ. ಮುಕುಂದಮಾಲೆಯಲ್ಲಿ 34 ಪದ್ಯಗಳಿವೆ. ವೈಷ್ಣವಸ್ತೋತ್ರಗಳಲ್ಲೆಲ್ಲಾ ಇದು ವಿಶಿಷ್ಟವಾದುದು. ಇದರ ಮಧುರಪದಗಳು ಹೃದಯವನ್ನು ಆವರ್ಜಿಸಿ ಭಕ್ತಿಯನ್ನು ಹೊರಹೊಮ್ಮಿಸಲು ಸಮರ್ಥವಾಗಿವೆ.

ಈ ಪದ್ಯವು ಕವಿಯ ಮಧುರಶೈಲಿಗೆ ಒಂದು ಉದಾಹರಣೆ :—

ವಂದೇ ಮುಕುಂದಮರವಿಂದದಲಾಯತಾಕ್ಷಂ
ಕುಂದೇಂದುಶಂಖದಶನಂ ಶಿಶುಗೋಪವೇಶಮ್ ।
ಇಂದ್ರಾದಿದೇವಗಣವಂದಿತಪಾದಪೀಠಂ
ವೃಂದಾವನಾಲಯಮಹಂ ವಸುದೇವಸೂನುಮ್ ॥

---

* ತಸ್ಯ ವಸುಧಾಮವತಃ ಕಾಲೇ ಕುಲಶೇಖರಸ್ಯ ವಸುಧಾಮವತಃ ।



ಅನುಪಮ ಭಕ್ತಿಯ ಪರಾಕಾಷ್ಠೆಯನ್ನು ಈ ಪದ್ಯದಲ್ಲಿ ಕಾಣಬಹುದು—

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ! ಪ್ರಕಾಮಮ್ !
ಅವಧೀರಿತಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ॥

ವೆಂಕಟೇಶ ಮತ್ತು ಆನಂದರಾಘವರು ಮುಕುಂದಮಾಲೆಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಬೌದ್ಧರು ಶೂನ್ಯವಾದಿಗಳಾದರೂ ಭಕ್ತಿಪ್ರೇರಿತರಾಗಿ ಸ್ತೋತ್ರಗಳನ್ನು ರಚಿಸಿದ್ದಾರೆ. ಅಶ್ವಘೋಷನ ಗಂಡೀಸ್ತೋತ್ರ ; ಆರ್ಯಸೂರನ ಜಾತಕಮಾಲಾ ; ಮಾತೃಚೇಟನ ಶತಪಂಚಶತ್ಕಸ್ತೋತ್ರ, ಏಕೋತ್ತರಿಕಸ್ತೋತ್ರ, ತ್ರಿರತ್ನಮಂಗಲಸ್ತೋತ್ರ, ತ್ರಿರತ್ನಸ್ತೋತ್ರ, ಮಿಶ್ರಕಸ್ತೋತ್ರ, ಸಂಗತಪಂಚತ್ರಿರತ್ನಸ್ತೋತ್ರಗಳು ಪ್ರಸಿದ್ಧವಾಗಿವೆ.

**ಚತುಸ್ತವ** :—ನಾಲ್ಕು ಸ್ತೋತ್ರಗಳನ್ನುಳ್ಳ ಈ ಗ್ರಂಥದ ಕರ್ತೃ ಶೂನ್ಯವಾದದ ಪ್ರಧಾನ ಪ್ರತಿಷ್ಠಾಪಕನಾದ ನಾಗಾರ್ಜುನ. ಟಿಬೆಟ್ ಭಾಷೆಯ ಇದರ ಅನುವಾದವು ದೊರೆಯುತ್ತದೆ. ನಿರೌಪಮ್ಯಸ್ತವ ಮತ್ತು ಅಚಿಂತ್ಯಸ್ತವಗಳೆಂಬ ಸ್ತೋತ್ರಗಳು ಮಾತ್ರ ಉಪಲಬ್ಧವಾಗಿವೆ. ಅಭಾವವಾದಿಯಾದ ಇವನ ಸ್ತೋತ್ರದಲ್ಲಿ ಆಸ್ತಿಕ್ಯವಾದವೂ ಕಾಣಿಸುತ್ತದೆ ; ಕಾಳಿದಾಸನ ಛಾಯೆಯೂ ಇದೆ—

ನಾಮಯೋ ನಾಶುಚಿ । ಕಾಯೇ ಕ್ಷುತ್ತೃಷ್ಣಾಸಂಭವೋ ನ ಚ ।
ತ್ವಯಾ ಲೋಕಾನುವೃತ್ತ್ಯರ್ಥಂ ದರ್ಶಿತಾ ಲೌಕಿಕೀ ಕ್ರಿಯಾ ॥
ನಿತ್ಯೋ ಧ್ರುವಃ ಶಿವಃ ಕಾಯಸ್ತವ ಧರ್ಮಮಯೋ ಜಿನಃ ।
ವಿನೇಯಜನಹೇತೋಶ್ಚ ದರ್ಶಿತಾ ನಿರ್ವೃತಿಸ್ತ್ವಯಾ ॥

**ಲೋಕೇಶ್ವರಶತಕ** :—ಈ ಸ್ತೋತ್ರಕಾವ್ಯದ ಕರ್ತೃವಾದ ಬೋಧಿಸತ್ವಲೋಕೇಶ್ವರ ಅಥವಾ ಅವಲೋಕಿತೇಶ್ವರನ ಕಾಲ ಸುಮಾರು ಕ್ರಿ. ಶ. 9ನೆಯ ಶತಮಾನ. ಈ ಸ್ತೋತ್ರದಲ್ಲಿ ಸ್ರಗ್ಧರಾವೃತ್ತದಲ್ಲಿ ರಚಿತವಾದ ಆಶೀರ್ವಾದರೂಪದ 100 ಶ್ಲೋಕಗಳಿವೆ. ಇವುಗಳಲ್ಲಿ ಬೋಧಿಸತ್ವನ, ನಖಶಿಖಾಂತ ವರ್ಣನೆಯಿದೆ.

**ದೇವಾಗಮಸ್ತೋತ್ರ** :—ಇದು ಪ್ರಾಚೀನ ಜೈನಕವಿಯಾದ ಸಮಂತಭದ್ರನ ಕೃತಿ. ಈ ಕವಿಯು ಪ್ರಾಯಶಃ ಕ್ರಿ. ಶಕದ ಪ್ರಾರಂಭದಲ್ಲಿ ಜೀವಿಸಿದ್ದಿರಬೇಕು. ಪ್ರಭಾಚಂದ್ರನ ಆರಾಧನಕಥಾಕೋಶದಿಂದ ಮಹಾತಪಸ್ವಿಯಾದ ಇವನು ಕಂಚಿಯಲ್ಲಿ ವಾಸಿಸುತ್ತಿದ್ದನೆಂದೂ, ಉದರಬೇನೆಯಿಂದ ನರಳುತ್ತಿದ್ದು ಸಂಚರಿಸುತ್ತಾ ಕಾಶಿಗೆ ಹೋದನೆಂದೂ, ಶಿವನ ಪ್ರತಿಮೆಯನ್ನು ತನ್ನ ಮಹಿಮೆಯಿಂದ ಪಾರ್ಶ್ವನಾಥನ ಪ್ರತಿಮೆಯನ್ನಾಗಿ ಪರಿವರ್ತಿಸಿದನೆಂದೂ

ತಿಳಿದುಬರುತ್ತದೆ. ಆದಿಪುರಾಣವು ಇವನನ್ನು ಹೊಗಳಿದೆ[1]. ದೇವಾಗಮಸ್ತೋತ್ರ ಮತ್ತು ಸ್ವಯಂಭೂಸ್ತೋತ್ರಗಳು ಇವನ ಕೃತಿಗಳು.

**ಕಲ್ಯಾಣಮಂದಿರಸ್ತೋತ್ರ:**—ಇದು ನ್ಯಾಯಾವತಾರದ ಕರ್ತೃವಾದ ಸಿದ್ಧಸೇನ ದಿವಾಕರನ ಕೃತಿ. ಇವನು ಸಮಂತಭದ್ರನ ಸಮಕಾಲೀನ. ಇವನಿಗೆ ಸಂಬಂಧಿಸಿದಂತೆಯೂ ಶಿವನ ವಿಗ್ರಹವನ್ನು ತೀರ್ಥಂಕರನ ವಿಗ್ರಹವನ್ನಾಗಿ ಪರಿವರ್ತಿಸಿದ ಕಥೆಯಿದೆ. ಜಿನಸೇನನು ತನ್ನ ಆದಿಪುರಾಣದಲ್ಲಿ ಇವನನ್ನು ಪ್ರಶಂಸಿಸಿದ್ದಾನೆ[2].

ಕಲ್ಯಾಣಮಂದಿರಸ್ತೋತ್ರದಲ್ಲಿ 44 ಪದ್ಯಗಳಿವೆ. ಶೈಲಿಯಲ್ಲಿ ಪ್ರಸಾದಗುಣವಿದೆ. ಸೌಷ್ಠವ ಮತ್ತು ಸಹಜತೆಗಳಿಂದ ಈ ಸ್ತೋತ್ರವು ಅಭಿನಂದನೀಯವಾಗಿದೆ.
ಒಂದು ಉದಾಹರಣೆ :—

ಆಸ್ತಾಮಚಿಂತ್ಯಮಹಿಮಾ ಜಿನ ಸಂಸ್ತವಸ್ತೇ
ನಾಮಾಪಿ ಪಾತಿ ಭವತೋ ಭವತೋ ಜಗಂತಿ ।
ತೀವ್ರಾತಪೋಪಹತಪಾಂಥಜನಾನ್......ನಿದಾಘೇ
ಪ್ರೀಣಾತಿ ಪದ್ಮಸರಸಃ ಸರಸೋಽನಿಲೋಽಪಿ ॥

**ಭಕ್ತಾಮರಸ್ತೋತ್ರ:**—ಮಾನತುಂಗಾಚಾರ್ಯನ ಈ ಸ್ತೋತ್ರವು ಜೈನರಲ್ಲಿ ಪ್ರಸಿದ್ಧವಾದುದು. ಇವನು ಮಾಳವದೇಶದ ಚಾಳುಕ್ಯ ಮನೆತನದ ದೊರೆಯಾದ ವೈರಸಿಂಹನ (ಕ್ರಿ. ಶ. 825–900) ಮಂತ್ರಿಯಾಗಿದ್ದನು. ಭಯಹರಣಸ್ತವ ಇವನ ಇನ್ನೊಂದು ಸ್ತೋತ್ರ.
ಒಂದು ಉದಾಹರಣೆ :—

ಅಲ್ಪಶ್ರುತಂ ಶ್ರುತವತಾಂ ಪರಿಹಾಸಧಾಮ ತ್ವದ್ಭಕ್ತಿರೇವ ಮುಖರೀಕುರುತೇ ಬಲಾನ್ಮಾಂ ।
ಯತ್ಕೋಕಿಲಃ ಕಿಲ ಮಧೌ ಮಧುರಂ ವಿರೌತಿ ತಚ್ಚಾರುಚೂತಕಲಿಕಾನಿಕರೈಕಹೇತುಃ ॥

ಕಾಳಿದಾಸನ ಹೆಸರಿನಲ್ಲಿ ಶ್ಯಾಮಲಾದಂಡಕವೂ, ಮೂಕಕವಿಯ ಹೆಸರಿನಲ್ಲಿ ಮೂಕಪಂಚಶತಿಯೂ, ಆನಂದವರ್ಧನನ ಹೆಸರಿನಲ್ಲಿ ದೇವೀಶತಕವೂ ಪ್ರಚಾರದಲ್ಲಿವೆ. ಸಂಸ್ಕೃತದಲ್ಲಿ ಸ್ತೋತ್ರಸಾಹಿತ್ಯ ಅಪಾರವಾಗಿ ಬೆಳೆದಿದೆ.

---

1 ನಮಸ್ಸಮಂತಭದ್ರಾಯ ಮಹತೇ ಕವಿವೇಧಸೇ ।
ಯದ್ವಚೋವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯಃ
ಕವೀನಾಂ ಗಮಕಾನಾಂ ಚ ವಾದೀನಾಂ ವಾಗ್ಮಿನಾಮಪಿ ।
ಯಶಸ್ಸಾಮಂತಭದ್ರೀಯಂ ಮೂರ್ಧ್ನಿ ಚೂಡಾಮಣೀಯತೇ ॥

2 ಪ್ರವಾದಿಕರಿಯೂಥಾನಾಂ ಕೇಸರೀ ನಯಕೇಸರೀ ।
ಸಿದ್ಧಸೇನಕವಿರ್ಜೀಯಾತ್ ವಿಕಲ್ಪನಖರಾಂಕುರಃ ॥



## ಸಂಸ್ಕೃತ ಕವಯಿತ್ರಿಯರು

ಗಾರ್ಗಿ, ಮೈತ್ರೇಯಿಯರಂತೆ ವೇದಕಾಲದಿಂದಲೂ ಸ್ತ್ರೀಯರು ಪುರುಷರಿಗೆ ಸರಿಸಮವಾಗಿ ವಿದ್ಯಾವತಿಯರಾಗಿರುತ್ತಿದ್ದರು. ರಾಜಪುತ್ರಿಯರು ವಿಶೇಷವಾಗಿ ಕಾವ್ಯಕಲೆಗಳಲ್ಲಿ ಸುಶಿಕ್ಷಿತೆಯರಾಗಿರುತ್ತಿದ್ದರೆನ್ನಲು ಆಧಾರಗಳಿವೆ. ಆದ್ದರಿಂದ ಕಾವ್ಯದ ಎಲ್ಲ ಪ್ರಕಾರಗಳಲ್ಲಿಯೂ ಕವಯಿತ್ರಿಯರು ಕೂಡ ರಚನೆ ಮಾಡಿ ವಿಖ್ಯಾತೆಯರಾಗಿದ್ದರೆ ಸೋಜಿಗವೇನೂ ಇಲ್ಲ. ಆದರೆ ಹೆಚ್ಚಾಗಿ ಕವಯಿತ್ರಿಯರ ರಚನೆಗಳು ಲುಪ್ತಪ್ರಾಯವಾಗಿವೆ. ಸುಭಾಷಿತ ಸಂಗ್ರಹಗಳಲ್ಲಿ, ಶಾಸನಾದಿಗಳಲ್ಲಿ, ರಾಜಶೇಖರನ 'ಕಾವ್ಯಮೀಮಾಂಸೆ' ಮುಂತಾದ ಅಪೂರ್ವ ಗ್ರಂಥಗಳಲ್ಲಿ ಬರುವ ಉಲ್ಲೇಖಗಳ ಮೇಲಿಂದ ಸಂಸ್ಕೃತ ಕವಯಿತ್ರಿಯರ ಸಾಹಿತ್ಯರಚನೆ ವಿಪುಲವಾಗಿತ್ತೆಂದು ಊಹಿಸಬೇಕಾಗಿದೆ. ಪ್ರಾಕೃತ ಗಾಥಾಸಪ್ತಶತಿಯ ಸುಭಾಷಿತಗಳಲ್ಲಿ ಕೆಲವನ್ನು ಕವಯಿತ್ರಿಯರೇ ರಚಿಸಿದ್ದಾರೆ. ಅವೆಲ್ಲ ಹೆಚ್ಚಾಗಿ ಜಾನಪದ ಜೀವನದ ಶೃಂಗಾರಮಯ ಸನ್ನಿವೇಶಗಳನ್ನು ಕುರಿತವು.

ರಾಜಶೇಖರನ ಪತ್ನಿ ಅವಂತಿಸುಂದರಿಯೇ ಕವಯಿತ್ರಿಯಾಗಿದ್ದಳಲ್ಲದೆ ತನ್ನದೇ ಆದ ನೂತನಾಭಿಪ್ರಾಯಗಳನ್ನು ಹೊಂದಿದ್ದ ಕಾವ್ಯಲಕ್ಷಣಜ್ಞಳೂ ಆಗಿದ್ದಳೆಂಬುದು ಅಲ್ಲಿ ಉದಾಹೃತವಾಗಿರುವ ಆಕೆಯ ವಚನಗಳಿಂದ ವ್ಯಕ್ತವಾಗುತ್ತದೆ. 'ಕಾವ್ಯರಚನೆಗೆ ಹೆಣ್ಣುಗಂಡೆಂಬ ವ್ಯತ್ಯಾಸವಿಲ್ಲ ; ಪುರುಷರಂತೆ ಸ್ತ್ರೀಯರೂ ಕಾವ್ಯಗಳನ್ನು ಬರೆಯಬಲ್ಲರು' ಎಂದು ರಾಜಶೇಖರನು ಸ್ಪಷ್ಟವಾಗಿ ಘೋಷಿಸಿದ್ದಾನೆ.

ಶೀಲಾ ವಿದ್ಯಾ ಮಾರುಲಾ ಮೋರಿಕಾದ್ಯಾಃ
ಕಾವ್ಯಂ ಕರ್ತುಂ ಸಂತಿ ವಿಜ್ಞಾಃ ಸ್ತ್ರಿಯೋಽಪಿ ॥

ಎಂಬ ಸುಭಾಷಿತವೊಂದು ಕೆಲವು ಕವಯಿತ್ರಿಯರ ಹೆಸರನ್ನು ಹೇಳಿದರೂ ಅವರ ಕೃತಿಗಳು ಉಪಲಬ್ಧವಿಲ್ಲ ; ಕೇವಲ ಕೆಲವೊಂದು ಮುಕ್ತಕಗಳು ಮಾತ್ರ ಸುಭಾಷಿತ ಸಂಗ್ರಹಗಳಲ್ಲಿ ದೊರೆಯುತ್ತವೆ. ಇವರಲ್ಲದೆ ಸುಭಾಷಿತಕಾರರು ಉದ್ಧರಿಸಿರುವ ಮಿಕ್ಕ ಕವಯಿತ್ರಿಯರ ಹೆಸರುಗಳೇ ಕುತೂಹಲಕಾರಿಯಾಗಿವೆ—ಚಂಡಾಲವಿದ್ಯಾ, ಸರಸ್ವತೀಕುಟುಂಬದುಹಿತಾ, ಪ್ರಿಯಂವದಾ, ಜಘನಚಪಲಾ, ವಿಕಟನಿತಂಬಾ, ಮಂದಾಲಸಾ, ಇತ್ಯಾದಿ. ಇವರಾರ ಕಾಲ, ದೇಶವಿಚಾರವು ಸ್ಪಷ್ಟವಿಲ್ಲ. ಆದರೆ ಪದ್ಯಗಳ ಸೊಬಗು ಮಾತ್ರ ಇಂದಿಗೂ ರಸಿಕರಿಗೆ ಆಕರ್ಷಕವಾಗುವಂತಿದೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಆಯ್ದುಕೊಡಲಾಗಿದೆ :—

(1) ಕ್ರಮ ಕ್ರಮವಾಗಿ ಕುಗ್ಗುತ್ತಹೋಗುವ ಪ್ರೇಮದ ವಿವಿಧಾವಸ್ಥೆಗಳನ್ನು ಹೃದಯಹಾರಿಯಾಗಿ ಚಿತ್ರಿಸುವ ಭಾವದೇವಿಯ ಒಂದು ಮುಕ್ತಕವಿದು :—

ತಥಾಭೂದಸ್ಮಾಕಂ ಪ್ರಥಮಮವಿಭಿನ್ನಾ ತನುರಿಯಂ
ತತೋ ನು ತ್ವಂ ಪ್ರೇಯಾನಹಮಪಿ ಹತಾಶಾ ಪ್ರಿಯತಮಾ ।
ಇದಾನೀಂ ನಾಥಸ್ತ್ವಂ ವಯಮಪಿ ಕಲತ್ರಂ ಕಿಮಪರಂ
ಮಯಾಪ್ತಂ ಪ್ರಾಣಾನಾಂ ಕುಲಿಶಕಠಿನಾನಾಂ ಫಲಮಿದಮ್ ॥

(2) ಪರಸ್ಪರ ಪ್ರೇಮಾಸಂಬಂಧವೆಂಬುದು ಅಕಾರಣ ಮತ್ತು ದೈವಕೃತವೆಂಬ ಭಾವವನ್ನು ಲಕ್ಷ್ಮಿಯೆಂಬ ಕವಯಿತ್ರಿ ಹೀಗೆ ಸುಂದರವಾದ ಅರ್ಥಾಂತರನ್ಯಾಸದಿಂದ ಚಿತ್ರಿಸುತ್ತಾಳೆ :—

ಭ್ರಮನ್ ವನಾಂತೇ ನವಮಂಜರೀಷು
ನ ಷಟ್ಪದೋ ಗಂಧಫಲೀಮಜಿಘ್ರತ್ ।
ಸಾ ಕಿಂ ನ ರಮ್ಯಾ ನ ಚ ಕಿಂ ನ ರಂತಾ
ಬಲೀಯಸೀ ಕೇವಲಮೀಶ್ವರೇಚ್ಛಾ ॥

(3) ಕಾವ್ಯ ಪ್ರಕಾಶಕಾರನು ಉತ್ತಮ ಕಾವ್ಯದ ಮಾದರಿಯೆಂದು ಉದಾಹರಿಸುವ ಒಂದು ರಮಣೀಯ ಶೃಂಗಾರಮುಕ್ತಕ ಶೀಲಾ ಭಟ್ಟಾರಿಕಾ ಎಂಬಾಕೆಯದು ; ಇದರಲ್ಲಿ ಅನಿರ್ಬಂಧವಾದ ಪ್ರೇಮದ ಪ್ರಶಸ್ತಿ ಬಹಳ ಲಲಿತರಮ್ಯವಾಗಿ ಮೂಡಿಬಂದಿದೆ :—

ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾ–
ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾ–
ಸ್ತೇ ಚೋನ್ಮೀಲಿತಮಾಲತೀಸುರಭಯಃ ಪ್ರೌಢಾಃ ಕದಂಬಾನಿಲಾಃ ।
ಸಾ ಚೈವಾಸ್ಮಿ ತಥಾಪಿ ತತ್ರ ಸುರತವ್ಯಾಪಾರಲೀಲಾವಿಧೌ
ರೇವಾರೋಧಸಿ ವೇತಸೀತರುತಲೇ ಚೇತಃ ಸಮುತ್ಕಂಠತೇ ॥

(4) ಪದ್ಮಾವತಿಯೆಂಬ ಕವಯಿತ್ರಿಯ ಕಲ್ಪನಾಚಕ್ಷುವಿಗೆ ಸೂರ್ಯಬಿಂಬವು ಲಕ್ಷ್ಮಿಗೆ ಪ್ರಭಾತರಾಜಕನ್ಯೆ ಬೆಳಗಲೆತ್ತಿರುವ ಆರತಿಯ ತಟ್ಟೆಯಂತೆ ಭಾಸವಾಗುವುದನ್ನು ನೋಡಿ :—

ಪ್ರಭಾತವೇಲಾಸ್ಮರರಾಜಪುತ್ರೀ
ನೀರಾಜನಾಭಾಜನಮರ್ಕಬಿಂಬಮ್ ।
ಪಾಣೌ ಗೃಹೀತ್ವಾಂಕುರಿತಾಂಶುಮಾಲಮ್
ಆಯಾತಿ ನೀರಾಜಿತುಮಬ್ಧಿಪುತ್ರೀಮ್ ॥

ಹೀಗೆ ಕವಯಿತ್ರಿಯರ ಭಾವಗಳಲ್ಲಿ ಹೆಣ್ಣಿಗೆ ಸಹಜವಾದ ಸುಕುಮಾರಮನೋಧರ್ಮವೂ, ವಿಶಿಷ್ಟ ಉತ್ಪ್ರೇಕ್ಷೆಗಳೂ ಸಹೃದಯರನ್ನು ತಣಿಸುತ್ತವೆ.

ಸ್ವತಂತ್ರ ಕಾವ್ಯರಚನೆ ಮಾಡಿದ ಕವಯಿತ್ರಿಯರು

1 ವಿಜ್ಜಿಕೆ : ಇವರಲ್ಲಿ ಅಗ್ರಸ್ಥಾನ ವಿಜ್ಜಿಕೆಗೆ ಸಲ್ಲಬೇಕು. ಮಹಾಕವಿ ರಾಜಶೇಖರನು—

ಸರಸ್ವತೀವ ಕಾರ್ಣಾಟೀ ವಿಜಯಾಂಕಾ ಜಯತ್ಯಸೌ ।
ಯಾ ವೈದರ್ಭಗಿರಾಂ ವಾಸಃ ಕಾಲಿದಾಸಾದನಂತರಮ್ ॥

ಎಂದು ಮುಕ್ತಕಂಠದಿಂದ ಈಕೆಯನ್ನು ಶ್ಲಾಘಿಸಿರುವನು. ಈಕೆ ಬಾದಾಮಿ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಪುಲಿಕೇಶಿಯ ಸೊಸೆಯಿರಬೇಕೆಂದು (ಕ್ರಿ. ಶ. 680) ವಿದ್ವಾಂಸರು ಊಹಿಸುತ್ತಾರೆ. ಈಕೆ ಬರೆದ ನಾಟಕದ ಹೆಸರು 'ಕೌಮುದೀ—ಮಹೋತ್ಸವ'. ಅದು ಈಚೆಗೆ ಮಾತ್ರ ಅಪೂರ್ಣವಾಗಿ ಪ್ರಕಟವಾಗಿದೆ. ಅದೊಂದು ಚಿಕ್ಕ ಐತಿಹಾಸಿಕ ನಾಟಕ.



ಇದರಲ್ಲಿಯೂ ರತ್ನಾವಳೀ ನಾಟಕದಂತೆ ರಾಜ್ಯಲಾಭ, ಕನ್ಯಾಲಾಭಗಳ ನಿರ್ವಹಣೆಯಿದೆ. ಪಾಟಲೀಪುತ್ರದ ರಾಜಪುತ್ರ ಕಲ್ಯಾಣವರ್ಮನು ನಾಯಕ. ಮಥುರಾಧಿಪತಿಯ ಪುತ್ರಿ ಕೀರ್ತಿಮತಿ ನಾಯಿಕೆ. ಚಂಡಸೇನ ಪ್ರತಿನಾಯಕ. ಮಂತ್ರಿಯಾದ ಮಂತ್ರಿಗುಪ್ತನು ಯೌಗಂಧರಾಯಣನನ್ನು ನೆನಪಿಗೆ ತರುತ್ತಾನೆ. ನಾಟಕದ ಹಸ್ತಪ್ರತಿಯಲ್ಲಿ '—ಕಯಾನಿಬದ್ಧಮ್' ಎಂದಿಷ್ಟೇ ಇರುವುದರಿಂದ ವಿಜ್ಜಿಕೆಯದೇ ಎಂದು ಗಟ್ಟಿಯಾಗಿ ನಿಶ್ಚಯಿಸುವಂತಿಲ್ಲ. ಆದರೆ ಅವಳ ಕೆಲವು ಸುಭಾಷಿತಗಳು ಅವಿಸ್ಮರಣೀಯವಾಗಿವೆ. ಅವಳ ಎಂಟೆದೆಯನ್ನು ನೋಡಿ ; ದಂಡಿಯ ಮೇಲೆಯೇ ಸ್ಪರ್ಧೆಗೆ ನಿಂತಿದ್ದಾಳೆ :—

ನೀಲೋತ್ಪಲದಲಶ್ಯಾಮಾಂ ವಿಜ್ಜಿಕಾಂ ಮಾಮಜಾನತಾ ।
ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತೀ ॥

ಅವಳು ಕವಿಗಳೆಂದು ಒಪ್ಪುವುದು ಮೂವರನ್ನೇ—ಬ್ರಹ್ಮ, ವ್ಯಾಸ, ವಾಲ್ಮೀಕಿ ; ಮಿಕ್ಕವರೆಲ್ಲ ಕಸಕ್ಕಿಂತ ಕಡೆ ಅವಳಿಗೆ—

ಏಕೋಽಭೂನ್ನಲಿನಾತ್ ತತಶ್ಚ ಪುಲಿನಾತ್ ವಲ್ಮೀಕತಶ್ಚಾಪರಃ
ತೇ ಸರ್ವೇ ಕವಯಃ ಪ್ರಸನ್ನಮತಯಃ ತೇಭ್ಯೋ ಮಹದ್ಭ್ಯೋ ನಮಃ ।
ಅರ್ವಾಂಚೋ ಯದಿ ಗದ್ಯಪದ್ಯರಚನಾಚಾತುರ್ಯಮಾತನ್ವತೇ
ತೇಷಾಂ ಮೂರ್ಧ್ನಿ ದಧಾಮಿ ವಾಮಚರಣಂ ಕರ್ಣಾಟರಾಜಪ್ರಿಯಾ ।

ವಿಜ್ಜಿಕೆಯ ಧ್ವನಿಬಂಧುರ ರಚನೆಗೆ ಒಂದು ಉದಾಹರಣೆ ; ಶೈಲಿ ಮನೆಮಾತಿನಂತಿದೆ :—

ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮದ್ಗೃಹೇ ದಾಸ್ಯಸಿ
ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ।
ಏಕಾಕಿನ್ಯಪಿ ಯಾಮಿ ಸತ್ವರಮಿತಃ ಸ್ರೋತಸ್ತಮಾಲಾಕುಲಂ
ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾ ನಲಗ್ರಂಥಯಃ ॥

## 2. ಗಂಗಾದೇವಿ :

ಕರ್ಣಾಟಕ ರಾಜ್ಯರಮಾರಮಣ ವಿಜಯನಗರದ ಬುಕ್ಕರಾಯನ ಸೊಸೆ ; ವೀರ ಕಂಪಣರಾಯನ ವೀರಪತ್ನಿ ಈ ಗಂಗಾದೇವಿ. ಈಕೆ ಬರೆದಿರುವ ಐತಿಹಾಸಿಕ ಮಹಾಕಾವ್ಯವೇ 'ಮಧುರಾವಿಜಯ' ಅಥವಾ 'ವೀರಕಂಪಣರಾಯಚರಿತ' ಇದು ತಿರುವಾಂಕೂರು ಗ್ರಂಥಮಾಲೆಯಲ್ಲಿ ಮುದ್ರಿತವಾಗಿದೆ.

ಕವಿಸಮಯಭೂಯಿಷ್ಠವಾದ ಶೈಲಿಯಲ್ಲಿ ಮೊದಲು ಹರಿಹರನ ತಮ್ಮ ಬುಕ್ಕರಾಯ, ರಾಜಧಾನಿಯಾದ ತುಂಗಭದ್ರಾ ತೀರದ 'ವಿಜಯ ನಗರಿ', ಬುಕ್ಕರಾಯನ ಪಟ್ಟದರಸಿ ಕುಂತಳ ರಾಜಪುತ್ರಿ ದೇವಾಯಿ, ಅವರ ಮಗ ಕಂಪಣರಾಯ, ಇವರ ವರ್ಣನೆ ಬರುತ್ತದೆ. ಆಮೇಲೆ ಬರುವ ಐತಿಹಾಸಿಕ ವಸ್ತು ಹೀಗಿದೆ:– ತುಂಡೀರ ಮಂಡಲದ ರಾಜ ಚಂಪರಾಯನನ್ನು

ಗೆದ್ದು. ಕಾಂಚಿಯು ವಶವಾದಮೇಲೆ, ದಕ್ಷಿಣದ ತುರುಕದೊರೆಗಳ ಮೇಲೆ ಸಮಯ ನೋಡಿ ನಡೆತ್ತಬೇಕೆಂಬ ತಂದೆಯ ಅಪ್ಪಣೆಯಂತೆ ಕಂಪಣರಾಯನು ಚತುರಂಗಸೈನ್ಯ ಸಮೇತನಾಗಿ ಹೊರಡುವನು. ಐದಾರು ದಿನಗಳಲ್ಲೇ ಕರ್ಣಾಟಕ ದೇಶದ ಗಡಿಯನ್ನು ಮುಟ್ಟಿ 'ರಾಜಗಂಭೀರ' ವೆಂಬ ಕೋಟೆಯಲ್ಲಿ ಅಡಗಿದ್ದ ಚಂಪರಾಯನಮೇಲೆ ಧಾಳಿ ಮಾಡುವನು. ಮುತ್ತಿಗೆಯನ್ನು ತಡೆಯಲಾರದೆ ಕಡೆಗೆ ಚಂಪರಾಯನು ದ್ವಂದ್ವಯುದ್ಧಕ್ಕೆ ಸಿದ್ಧನಾಗುವನು. ವೀರ ಕಂಪರಾಯನು ಅವನನ್ನು ಖಡ್ಗಯುದ್ಧದಲ್ಲಿ ಸೋಲಿಸಿ ಕೊಲ್ಲುವನು; ಜಯಭೇರಿ ಹಾಕಿಸಿಕೊಂಡು ಹೋಗಿ ಕಾಂಚಿಯಲ್ಲಿ ರಾಜನಾಗುವನು. ಸಿಂಹಳ, ದ್ರಾವಿಡ, ಕೇರಳ ರಾಜರೆಲ್ಲ ಅವನ ಮಾಂಡಲಿಕ ರಾಗುವರು. ಕಂಪಣರಾಯನು ಸ್ವಲ್ಪಕಾಲ ಗಂಗಾದೇವಿಯೇ ಮುಂತಾದ ರಾಣಿ ವಾಸದವರೊಡನೆ ಸುಖ ವಿಲಾಸದಲ್ಲಿರುವಾಗ ಒಂದು ದಿನ ದೇವತೆಯೊಬ್ಬಳು ಅವನ ಆಸ್ಥಾನಕ್ಕೆ ಬಂದು ಚಿದಂಬರ, ಶ್ರೀರಂಗ, ಮಧುರೆ ಮುಂತಾದ ಕ್ಷೇತ್ರಗಳಲ್ಲಿ ತುರುಕರು ಗೈಯುತ್ತಿದ್ದ ಅತ್ಯಾಚಾರಗಳನ್ನು ವರ್ಣಿಸಿ, ಅಗಸ್ತ್ಯದತ್ತವಾದ ಅದ್ಭುತ ಖಡ್ಗವೊಂದನ್ನು ಅವನಿಗಿತ್ತು, ತುರುಕರನ್ನು ನಾಶಮಾಡಿ ವಿಜಯಿಯಾಗೆಂದು ಹರಸಿಹೋಗುವಳು. ಮಧುರೆಯ ತುರುಕ ದೊರೆಗೂ, ಕಂಪಣನಿಗೂ ಯುದ್ಧವಾಗುವುದು. ಕಡೆಗೆ ಅಲ್ಲಿಯೂ ದ್ವಂದ್ವಯುದ್ಧಮಾಡಿ ಕಂಪಣನು ಹಗೆಯನ್ನು ಕಡಿದು ಹಾಕಿ ಚೋಳಪಾಂಡ್ಯರೆಲ್ಲರಿಂದಲೂ ಮನ್ನಣೆ ಪಡೆಯುವನು.

ಈ ನಿರೂಪಣೆಯಲ್ಲಿ ಐತಿಹಾಸಿಕ ಸಂಗತಿಗಳೊಡನೆ ಅತಿಮಾನುಷ ಘಟನೆಗಳೂ ನುಸುಳಿವೆ. ಕಾವ್ಯಮರ್ಯಾದೆಯಂತೆ. ಮಧುರಾದೇವಿ ತುರುಕರ ಅತ್ಯಾಚಾರವನ್ನು ಬಣ್ಣಿಸುವದು ರಘುವಂಶದಲ್ಲಿ ಅಯೋಧ್ಯಾದೇವಿ ಮಾಡುವ ವರ್ಣನೆಯನ್ನು ನೆನಪಿಗೆ ತರುತ್ತದೆ. ಕಾಳಿದಾಸನ ಸುಭಗಸುಂದರ ಶೈಲಿಯೇ ಗಂಗಾದೇವಿಗೂ ಸಿದ್ಧಿಸಿದೆ. ಆಕೆ ಕಾಳಿದಾಸ ಬಾಣಾದಿಗಳಂತೆ ಸಮಕಾಲೀನರಾದ ತಿಕ್ಕಯ, ಅಗಸ್ತ್ಯಕವಿ, ಗಂಗಾಧರ, ವಿಶ್ವನಾಥರನ್ನೂ ಸ್ಮರಿಸುತ್ತಾಳೆ, ಇಲ್ಲಿ ವರ್ಣಿತವಾದ ಘಟನೆಗಳು ಕ್ರಿ. ಶ. 1360 ರಿಂದ 1371ರ ಕಾಲಾವಧಿಯಲ್ಲಿ ನಡೆದುವು. ಕವಯಿತ್ರಿಯ ಕಾವ್ಯರೀತಿಗೆ ಒಂದೆರಡು ಉದಾಹರಣೆಗಳು :—

ಕವಿಪ್ರಶಂಸೆ :

ತಾರ್ಕಿಕಾ ಬಹವ ಃ ಸನ್ತಿ ಶಾಬ್ದಿಕಾಶ್ಚ ಸಹಸ್ರಶಃ ।
ವಿರಲಾಃ ಕವಯೋ ಲೋಕೇ ಸರಲಾಲಾಪಪೇಶಲಾಃ ॥

ಸೂರ್ಯಾಸ್ತವರ್ಣನೆ :

ಕಮಲೋದರಸಂಭೃತಂ ಕರೈ—
ರ್ಮಧು ಪೀತ್ವಾ ರವಿರುಜ್ಝಿತಾಂಬರಃ ।
ಸ್ಪೃಶತಿ ಸ್ಮ ದಿಶಂ ಪ್ರಚೇತಸೋ
ನ ಮದಃ ಕಸ್ಯ ವಿಕಾರಕಾರಣಮ್ ॥



ಮಧುರಾನಗರಿಯ ದುರ್ದೆಸೆ :—

ಮಧುರೋಪವನಂ ನಿರೀಕ್ಷ್ಯ ದೂಯೇ
ಬಹುಶಃ ಖಂಡಿತನಾಲಿಕೇರಷಂಡಮ್ ।
ಪರಿತೋನ್ಯಕರೋಟಿಕೋಟಿಹಾರ
ಪ್ರಚಲಚ್ಛೂಲಪರಂಪರಾಪರೀತಮ್ ॥

ತುರುಕರ ವಧಾನಂತರದ ಶಾಂತಿಃ—

ಪ್ರಶಾಂತದಾವೇವ ವನಾಂತಲಕ್ಷ್ಮೀ :
ಗತೋಪರಾಗಾ ಗಗನಸ್ಥಲೀವ ।
ಕಲಿಂದಜಾಮರ್ದಿತಕಾಲಿಯೇವ
ದಿಗ್ ದಕ್ಷಿಣಾಸೀತ್ ಗತಪಾರಸೀಕಾ ॥

3. ತಿರುಮಲಾಂಬೆ :

ಈಕೆಯೂ ವಿಜಯನಗರದ ರಾಜಮನೆತನದವಳೇ ; ಕ್ರಿ. ಶ. 1529–42ರ ವರೆಗೆ ಆಳಿದ ಅಚ್ಯುತದೇವರಾಯನ ಪ್ರೇಯಸಿ. ಇವಳು ಬರೆದಿರುವ ಐತಿಹಾಸಿಕ ಚಂಪೂಕೃತಿಯ ಹೆಸರು 'ವರದಾಂಬಿಕಾ–ಪರಿಣಯ'. ಇದರ ವಿವರಗಳಿಗೆ ಚಂಪೂಕಾವ್ಯವನ್ನು ಕುರಿತ ಅಧ್ಯಾಯವನ್ನು ನೋಡಿ.

4. ರಾಮಭದ್ರಾಂಬೆ :

ಈಕೆಯು ತಂಜಾವೂರಿನ ರಘುನಾಥನಾಯಕನ ರಾಣಿ. ಕಾಲ 17ನೆಯ ಶತಮಾನ. ರಘುನಾಥನಾಯಕನು ಅನೇಕ ದೇವಾಲಯಗಳನ್ನು ನಿರ್ಮಿಸಿ, ಅಗ್ರಹಾರಗಳನ್ನು ದಾನಮಾಡಿ ಜನೋಪಕಾರಿಯೆಂದು ಹೆಸರು ಗಳಿಸಿದ್ದನಲ್ಲದೆ, ಕವಿಜನಗಳಿಗೆ ಆಶ್ರಯದಾತನೂ ಆಗಿದ್ದನು. ಅವನ ಮಂತ್ರಿ ಗೋವಿಂದದೀಕ್ಷಿತ ಮತ್ತು ಅವನ ಗುರು ಕಾಂಚಿಯ ಕುಮಾರ ತಾತಾಚಾರ್ಯ.

ರಾಮಭದ್ರಾಂಬೆ ತನ್ನ ಬಹುಭಾಷಾಪ್ರವೀಣ್ಯವನ್ನೂ, ಕವಿತಾಪ್ರಾಗಲ್ಭ್ಯವನ್ನೂ ಹೊಗಳಿಕೊಂಡಿದ್ದಾಳೆ. ಈಕೆಯು ತನ್ನ ಪತಿಯ ಪ್ರಶಸ್ತಿಗಾಗಿ ರಚಿಸಿದ ಐತಿಹಾಸಿಕ ಕಾವ್ಯವೇ 'ರಘುನಾಥಾಭ್ಯುದಯ.' ರಘುನಾಥನಾಯಕನು ಶ್ರೀರಾಮನ ಅವತಾರವೇ ಎಂದು ಅವಳ ಕಲ್ಪನೆ. ಇಲ್ಲಿಯ ಘಟನಾವಳಿಗಳ ಕಾಲ ಕ್ರಿ. ಶ. 1620ರ ಸಮೀಪದ್ದು. ಕಾವ್ಯದಲ್ಲಿ 12 ಸರ್ಗಗಳಿವೆ. ಮೊದಲಿನ ಐದು ಸರ್ಗಗಳಲ್ಲಿ ಚೋಳದೇಶದ ವರ್ಣನೆ, ತಂಜಾವೂರಿನ ವರ್ಣನೆ, ರಘುನಾಥನಾಯಕನ ಮಹಿಮೆ, ದಿನಚರಿಗಳ ವಿವರಗಳಿವೆ. ಏಳರಿಂದ ಹತ್ತನೆಯ ಸರ್ಗದವರೆಗೆ ತತ್ಕಾಲೀನ ಇತಿಹಾಸದ ಉಲ್ಲೇಖಗಳು ಬರುತ್ತವೆ. ಕ್ರಿ. ಶ. 1585–1614ರ ವರೆಗೆ ಚಂದ್ರಗಿರಿ ಪೆನುಗೊಂಡೆಗಳಿಂದ ವಿಜಯನಗರದ ರಾಜ್ಯದ ಅವಶೇಷಗಳನ್ನು ಆಳುತ್ತಿದ್ದ ವೆಂಕಟದೇವರಾಯನು ತುರುಕರೊಡನೆ ಯುದ್ಧದ ಬವಣೆಯಿಂದ ಬೇಸತ್ತು ರಕ್ಷಣೆಗಾಗಿ ರಘುನಾಥನಾಯಕನ ನೆರವನ್ನು ಯಾಚಿಸಿದ್ದು ಇಲ್ಲಿ ಉಕ್ತವಾಗಿದೆ :

ಅತಿಪ್ರಗಲ್ಭೈರಥ ಪಾರಸೀಕೈಃ ಸಮಂ ಪ್ರವೃತ್ತೇ ಸತಿ ಸಂಪರಾಯೇ ।
ಕರ್ಣಾಟರಕ್ಷಾಕರಣೇ ನಿತಾಂತಂ ವಿಚಾರವಾನ್ ವೆಂಕಟದೇವರಾಯಃ ।
ರಣೇ ಸಹಾಯಂ ರಘುನಾಥಭೂಪಮಯಾಚತೋರ್ಜಸ್ವಲಮಚ್ಯುತೇಂದ್ರಮ್ ॥

ರಘುನಾಥನಾಯಕನು ಮಾಡಿದ ಈ ಮಹಾಸಹಾಯಕ್ಕೆ ಪ್ರತ್ಯುಪಕಾರವೆಂದು ವೆಂಕಟಪತಿ ರಾಯನು ಜಿಂಜಿಯ ಕೃಷ್ಣಪ್ಪನಾಯಕನನ್ನು ಸೆರೆಯಿಂದ ಬಿಟ್ಟು ಅವನ ತಂಗಿಯನ್ನು ಮದುವೆಯಾಗುವನು. ವೆಂಕಟಪತಿಯ ತರುವಾಯ ಪಟ್ಟವನ್ನೇರಿದ ಶ್ರೀರಂಗರಾಯನನ್ನು ಜಗ್ಗರಾಯನು ಕೊಲೆಮಾಡಿಸಿದ ಘಟನೆಯೂ ಇಲ್ಲಿ ಉಕ್ತವಾಗಿದೆ :

ಸಾನುಜೋ ನಿಶಿ ಸ ಜಗ್ಗಮಹೀಶಃ ಪಾರ್ಥಿವಸ್ಯ ಭವನಂ ಪರಿವೀಕ್ಷ್ಯ ।
ಭೂಪತಿಂ ತದನು ಪುತ್ರಕಲತ್ರೈರ್ನಿರ್ಘೃಣೋ ನಿಹತಮಾತನುತೇ ಸ್ಮ ॥

ಕಡೆಗೆ ಕಾವೇರಿತೀರದ ತೋಪೂರಿನ ಬಳಿ ತಂಜಾವೂರು ನಾಯಕನ ಸೈನ್ಯಕ್ಕೂ ಜಿಂಜಿ ಮತ್ತು ಮಧುರೆಯ ನಾಯಕನ ಸೈನ್ಯಕ್ಕೂ ನಡೆದ ಕಾಳಗದಲ್ಲಿ ಜಗ್ಗರಾಯನು ರಾಣ ರಘುನಾಥರಾಯನ ಆಯುಧಕ್ಕೆ ಬಲಿಯಾದುದರ ವರ್ಣನೆಯೂ ಬಂದಿದೆ. ರಘುನಾಥರಾಯನ ಇತರ ಸಾಹಸಗಳೂ ವಿವರವಾಗಿ ನಿರೂಪಿತವಾಗಿವೆ.

ಹೀಗೆ ಈ ಕಾವ್ಯವು ಇತಿಹಾಸದೃಷ್ಟಿಯಿಂದ ತುಂಬಾ ಉಪಕಾರಕವಾಗಿದೆ. ಇದರ ಕಾವ್ಯಗುಣವೂ ಶ್ಲಾಘ್ಯವಾಗಿದೆ. ರಾಮಭದ್ರಾಂಬೆ ತನ್ನ ಪತಿಯನ್ನು ಮನದುಂಬಿ ಬಣ್ಣಿಸುವ ಪರಿಯನ್ನು ನೋಡಿ :—

ಅಮುಷ್ಯ ಸೌಂದರ್ಯಮಮುಷ್ಯ ಧೀರತಾ
ಮಮುಷ್ಯ ಗಾಂಭೀರ್ಯಮಮುಷ್ಯ ವೈಭವಮ್ ।
ಅಮುಷ್ಯ ವೈದುಷ್ಯಮಮುಷ್ಯ ವರ್ತನಂ
ಫಣೀಶ್ವರೋ ವಾ ಭಣಿತುಂ ನ ಹಿ ಪ್ರಭುಃ ॥

ಈಕೆಯ ಕಾವ್ಯದಲ್ಲಿ ಸುಂದರವಾದ ಅರ್ಥಾಂತರನ್ಯಾಸಗಳೂ ಸಮಯೋಚಿತವಾಗಿ ಕಂಗೊಳಿಸುತ್ತವೆ :—

1. ಧರಣೌ ಭೂಪತಿರೇವ ಧರ್ಮಹೇತುಃ,
2. ಪರಿಭೂತಃ ಪರಿಭೂಯತೇ ಜಗತ್ಯಾಮ್,
3. ಜಗತಿ ಮಹದವಾಪ್ತಿರ್ಜಾಯತೇ ಗೌರವಾಯ,
4. ಪಾಲ್ಯಾ ಪ್ರಾಣಾಪೇಕ್ಷಯಾ ಹಿ ಪ್ರತಿಜ್ಞಾ

ಹೀಗೆ ಪುರುಷ ಕವಿಗಳಿಗೆ ಸರಿದೊರೆಯದ ಕಾವ್ಯರಚನಾನೈಪುಣ್ಯವನ್ನು ಕವಯಿತ್ರಿಯರೂ ಸಂಸ್ಕೃತಸಾಹಿತ್ಯದಲ್ಲಿ ಮೆರೆದಿದ್ದಾರೆ. ಇದೇ ರಘುನಾಥನಾಯಕನ ಆಸ್ಥಾನದಲ್ಲಿ ಮಧುರವಾಣೀ ಎಂಬ ಕವಯಿತ್ರಿಯೂ ಒಬ್ಬಳಿದ್ದಳು. ಅವಳು 14 ಸರ್ಗಗಳಲ್ಲಿ ಪ್ರಸಿದ್ಧ ಆಂಧ್ರ ರಾಮಾಯಣವನ್ನು ಸಂಸ್ಕೃತದಲ್ಲಿ ಪರಿವರ್ತಿಸಿದ್ದಾಳೆ. ಅವಳ ಕವಿತಾಪ್ರಶಂಸೆಯು ಮಾದರಿಯಿದು :—

ಸಂಖ್ಯಾವತಾಂ ಸರ್ವಪಥೀನಧೀಭಿ
ಸ್ಸಂಶೋಧಿತಾ ಚೇತ್ಕವಿತಾ ಕವೀನಾಮ್ ।
ಕಸ್ತೂರಿಕಾಚಂದನಕುಂಕುಮಾದ್ಯೈ
ರುದ್ವರ್ತಿತಾಂಗೀ ಯುವತೀವ ದೀಪ್ಯೇತ್ ॥



ಆಸ್ಥಾನಮಂದಿರದಲ್ಲಿ ಸುಂದರಿಯೊಬ್ಬಳು ತನ್ನ ಪ್ರತಿಬಿಂಬವನ್ನೇ ಲಕ್ಷ್ಮಿಯೆಂದು ಭ್ರಮಿಸುವ ಪರಿಯಿದು :—

ಮಧ್ಯೇ ಮಣಿಭಿತ್ತ್ಯನುಬಿಂಬಿತಂ ಸ್ವಂ
ಮತ್ವಾ ರಮಾಂ ಯತ್ರ ವಿನುತಿಕಾಮಾ ।
ಕರೇ ತದೀಯೇ ಕಮಲಂ ತದಾನೀ
ಮಸೀಕ್ಷಮಾಣಾ ತ್ರಪತೇ ನತಾಂಗೀ ॥

## ಗದ್ಯಕಾವ್ಯಗಳು

'ಗದ್ =ವ್ಯಕ್ತಾಯಾಂ ವಾಚಿ' ಧಾತುವಿನಿಂದ ಗದ್ಯ ಎಂಬ ರೂಪ ನಿಷ್ಪನ್ನವಾಗಿದೆ. 'ವೃತ್ತಗಂಧೋಜ್ಝಿತಂ ಗದ್ಯಂ[1]——ಗಣ. ಯತಿ, ಪಾದನಿಯಮವಿಲ್ಲದುದು ಗದ್ಯ. ಪಂಚತಂತ್ರ, ಹಿತೋಪದೇಶ, ಶುಕಸಪ್ತತಿ ಮೊದಲಾದುವೂ ಗದ್ಯರೂಪವಾಗಿಯೇ ಇವೆ. ಆದರೆ ಲಾಕ್ಷಣಿಕರು ಇವುಗಳನ್ನು ಗದ್ಯಕಾವ್ಯಗಳೆಂದು ಒಪ್ಪುವುದಿಲ್ಲ. ಇವುಗಳಲ್ಲಿ ಕಥಾಸ್ವಾರಸ್ಯವಿದ್ದರೂ ಗದ್ಯಕಾವ್ಯಗಳಿಗೆ ಅಂಗೀಕೃತವಾದ ವಿಶಿಷ್ಟಲಕ್ಷಣವಿಲ್ಲ. ಗದ್ಯಕಾವ್ಯವು ಆಖ್ಯಾಯಿಕೆ ಮತ್ತು ಕಥೆ ಎಂದು ಎರಡು ವಿಧ. ಭಾಮಹನು ತನ್ನ ಕಾವ್ಯಾಲಂಕಾರದಲ್ಲಿ[2] ನಿರೂಪಿಸಿರುವಂತೆ ಲಲಿತ ಮತ್ತು ಮಧುರ ಶಬ್ದಾರ್ಥಗಳಿಂದ ತುಂಬಿ ಸಮಾಸಮಯವಾಗಿದ್ದು ಶ್ರವಣರಮಣೀಯವಾದ, ಉದಾತ್ತವಿಷಯಗಳನ್ನೊಳಗೊಂಡಿರುವ, ಉಚ್ಛ್ವಾಸಗಳೆಂಬ ಪರಿಚ್ಛೇದಗಳಿಂದ ಕೂಡಿರುವ, ಪ್ರತಿಪಾದ್ಯವಿಷಯಕ್ಕನುಗುಣವಾಗಿ ರಚಿತವಾದ ಗದ್ಯಕಾವ್ಯವು ಆಖ್ಯಾಯಿಕೆ. ಇದರಲ್ಲಿ ನಾಯಕನು ತನ್ನ ಚರಿತ್ರೆಯನ್ನು ತಾನೇ ಹೇಳಿಕೊಳ್ಳುತ್ತಾನೆ. ಭಾವ್ಯರ್ಥಸೂಚನೆಗೆ 'ವಕ್ತ್ರ' ಮತ್ತು 'ಅಪರವಕ್ತ್ರ' ಛಂದಸ್ಸಿನ ಪದ್ಯಗಳು ಬರುತ್ತವೆ. ಕವಿಯ ಅಭಿಪ್ರಾಯವನ್ನು ಸೂಚಿಸುವ ಕೆಲವು ಮುದ್ರೆಗಳೂ ಇರುತ್ತವೆ. ಕನ್ಯಾಹರಣ, ಸಂಗ್ರಾಮ, ವಿಪ್ರಲಂಭ, ಉದಯ—ಇವು ಇದರ ವಸ್ತು. ಆಖ್ಯಾಯಿಕೆಯ ಭಾಷೆ ಕೇವಲ ಸಂಸ್ಕೃತ. ಕಥೆಯಲ್ಲಿ ವಕ್ತ್ರಾಪರವಕ್ತ್ರಗಳಾಗಲೀ ಉಚ್ಛ್ವಾಸಗಳಾಗಲೀ ಇರುವುದಿಲ್ಲ. ಇದನ್ನು ರಚಿಸಲು ಸಂಸ್ಕೃತದಂತೆ ಪ್ರಾಕೃತಾದಿ ಭಾಷೆಗಳನ್ನೂ ಬಳಸಬಹುದು. ನಾಯಕನು ತನ್ನ ವೃತ್ತಾಂತವನ್ನು ತಾನೇ ಹೇಳದೆ ಇತರರು ಹೇಳುತ್ತಾರೆ. ಭಾಮಹನ ಈ ಲಕ್ಷಣವನ್ನು ದಂಡಿಯು ಒಪ್ಪುವುದಿಲ್ಲ. ಇವನ

1. ಸಾಹಿತ್ಯದರ್ಪಣ – ವಿಶ್ವನಾಥ.
2. ಪ್ರಕೃತಾನುಕೂಲ ಶ್ರವ್ಯಶಬ್ದಾರ್ಥಪದವೃತ್ತಿನಾ ।
   ಗದ್ಯೇನ, ಯುಕ್ತೋದಾತ್ತಾರ್ಥಾ, ಸೋಚ್ಛ್ವಾಸಾಖ್ಯಾಯಿಕಾ, ಮತಾ ॥
   ವೃತ್ತಮಾಖ್ಯಾಯತೇ ತಸ್ಯಾಂ ನಾಯಕೇನ ಸ್ವಚೇಷ್ಟಿತಮ್ ।
   ವಕ್ತ್ರಂ ಚಾಪರವಕ್ತ್ರಂ ಚ ಕಾಲೇ ಭಾವ್ಯರ್ಥಶಂಸಿ ಚ
   ಕವೇರಭಿಪ್ರಾಯಕೃತೈಃ ಕಥನೈಃ ಕೈಶ್ಚಿದಂಕಿತಾ ।
   ಕನ್ಯಾಹರಣ ಸಂಗ್ರಾಮ ವಿಪ್ರಲಂಭೋದಯಾನ್ವಿತಾ ॥
   ನ ವಕ್ತ್ರಾಪರವಕ್ತ್ರಾಭ್ಯಾಂ, ಯುಕ್ತಾ, ನೋಚ್ಛ್ವಾಸವತ್ಯಪಿ ।
   ಸಂಸ್ಕೃತಂ ಸಂಸ್ಕೃತಾ ಚೇಷ್ಟಾ ಕಥಾಪಭ್ರಂಶಭಾಕ್ ತಥಾ ॥
   ಅನ್ಯೈಸ್ಸ್ವಚರಿತಂ ತಸ್ಯಾಂ ನಾಯಕೇನ ತು ನೋಚ್ಯತೇ ।
   ಸ್ವಗುಣಾವಿಷ್ಕೃತಿಂ ಕುರ್ಯಾದಭಿಜ್ಞಾತಃ ಕಥಂ ಜನಃ ॥ — ಕಾವ್ಯಾಲಂಕಾರ ಭಾಮಹ.

ಅಭಿಪ್ರಾಯದಂತೆ ಕಥೆಯಲ್ಲಿ ನಾಯಕನ ಚರಿತ್ರೆಯನ್ನು ನಾಯಕನಾಗಲೀ, ಇತರರಾಗಲೀ ಹೇಳಬಹುದು. ನಾಯಕನೇ ಹೇಳಿದರೂ ಭೂತಾರ್ಥದ ಉಲ್ಲೇಖವಾದ್ದರಿಂದ ಆತ್ಮಪ್ರಶಂಸಾರೂಪವಾದ ದೋಷವೆನಿಸುವುದಿಲ್ಲ. ಆಖ್ಯಾಯಿಕೆಯಂತೆ ಕಥೆಗೆ ಈ ನಿಯಮದ ಅಗ್ಯವಿಲ್ಲ. ಭೂತಾರ್ಥವನ್ನು ಯಾರು ಹೇಳಿದರೇನು ? ಕಥೆಯಲ್ಲಿ ಆರ್ಯೆ ಮುಂತಾದ ಛಂದಸ್ಸುಗಳಂತೆ ವಕ್ತ್ರಾಪರವಕ್ತ್ರಗಳು ಏತಕ್ಕೆ ಬರಬಾರದು ? ಪರಿಚ್ಛೇದವನ್ನು ಲಂಭವೆಂದಾಗಲೀ, ಉಚ್ಛ್ವಾಸವೆಂದಾಗಲೀ ಕರೆದರೆ ತಪ್ಪೇನು ? ಆದ್ದರಿಂದ ಒಂದೇ ಕಾವ್ಯ ಜಾತಿಗೆ ಎರಡು ಹೆಸರುಗಳಿದ್ದಂತಾಯಿತು. ಎಲ್ಲಾ ಗದ್ಯಕಾವ್ಯಪ್ರಕಾರಗಳೂ ಇದರಲ್ಲಿಯೇ ಅಂತರ್ಭಾವಗೊಳ್ಳುತ್ತವೆ. ಕನ್ಯಾಹರಣಾದಿಗಳು ಕಥೆ, ಆಖ್ಯಾಯಿಕೆ—ಈ ಎರಡರಲ್ಲಿಯೂ ಇರಬಹುದು ; ಪದ್ಯಕಾವ್ಯಗಳಲ್ಲಿಯೂ ಇರಬಹುದು ; ಇವು ಪ್ರಕಾರಭೇದಗಳಾಗಲಾರವು. ಕವಿಯು ತನ್ನಿಚ್ಛೆಯಂತೆ 'ಮುದ್ರೆ' ಯನ್ನು ಎಲ್ಲಿಯಾದರೂ ಬಳಸಬಹುದು. ಹೀಗೆ ದಂಡಿಯ ಅಭಿಪ್ರಾಯದಲ್ಲಿ ಕಥೆ ಮತ್ತು ಆಖ್ಯಾಯಿಕೆಗಳಿಗೆ ಭೇದವಿಲ್ಲ. ಪೂರ್ವದ ಗದ್ಯಕಾವ್ಯಗಳಲ್ಲಿ ನಾಯಕನೇ ತನ್ನ ಚರಿತ್ರೆಯನ್ನು ಹೇಳಿಕೊಳ್ಳುತ್ತಿದ್ದರೂ ರೂಢಿಯಿಂದ 'ಆಖ್ಯಾಯಿಕೆ' ಎಂಬ ಹೆಸರು ಪ್ರಸಿದ್ಧಿಗೆ ಬಂದಿರಬೇಕು. ದಂಡಿ ಮತ್ತು ಬಾಣರ ಕಾಲಕ್ಕೆ ಈ ನಿಯಮವಾಗಲೇ ಸಡಿಲಗೊಂಡಿದ್ದಿತು. ಬಾಣನಿಗೂ ಈ ಲಕ್ಷಣಗಳ ಪರಿಜ್ಞಾನವಿದ್ದುದು ಅವನ ಮಾತುಗಳಿಂದಲೇ ತೋರುತ್ತದೆ.[2]

ರುದ್ರಟನು ಬಾಣನ ಹರ್ಷಚರಿತ ಮತ್ತು ಕಾದಂಬರಿಗಳನ್ನು ಆಧರಿಸಿ ಆಖ್ಯಾಯಿಕೆ ಮತ್ತು ಕಥೆಗಳ ಲಕ್ಷಣವನ್ನು ನಿರೂಪಿಸಿದ್ದಾನೆ. ಅದರಂತೆ ಕಥೆಯು ಪದ್ಯರೂಪವಾದ ದೇವಗುರು ಪ್ರಾರ್ಥನೆ, ಕವಿಯ ವಂಶಾನುಕೀರ್ತನ, ರಚನೆಯ ಉದ್ದೇಶಪ್ರಕಟಣೆಗಳಿಂದ ಪ್ರಾರಂಭವಾಗುತ್ತದೆ. ಇದರ ವಸ್ತು ಲಲಿತ ಮಧುರ ಪದಾವಳಿಯಿಂದ ಮನೋಜ್ಞವಾದ ಸಂಸ್ಕೃತ ಗದ್ಯದಲ್ಲಿರುತ್ತದೆ. ಪುರಾಣಗಳ ವರ್ಣನೆಯಿರುತ್ತದೆ. ಪ್ರಾರಂಭದಲ್ಲಿ ಕಥಾಂತರ ವಿದ್ದು ಅದು ಮುಂದಿನ ಕಥೆಗೆ ಸುಂದರವಾಗಿ ಹೊಂದಿಕೊಳ್ಳುತ್ತದೆ. ಕನ್ಯಾಲಾಭವು ಪ್ರಧಾನವಾಗಿದ್ದು ಪ್ರೇಮದ ಪರಿಪೂರ್ಣ ಚಿತ್ರಣವಿರುತ್ತದೆ. ಆಖ್ಯಾಯಿಕೆಯಾದರೋ ಪದ್ಯರೂಪದ ದೇವ ಗುರುಪ್ರಾರ್ಥನೆ, ಪೂರ್ವಕವಿಪ್ರಶಂಸೆ, ಕವಿಯ ಅಸಾಮರ್ಥ್ಯಪ್ರತಿಪಾದನೆ, ಆದರೂ ಕಾವ್ಯರಚನೆಯ ಕಾರಣಸೂಚನೆಗಳಿಂದ ಪ್ರಾರಂಭವಾಗುತ್ತದೆ. ವಸ್ತುವಿನ ಬೆಳವಣಿಗೆ ಸುಮಾರು ಕಥೆಯಂತೆಯೇ ಇರುತ್ತದೆ. ಕವಿಯ ಮತ್ತು ಅವನ ವಂಶದ ವೃತ್ತಾಂತವು ಇದ್ದೇ ತೀರಬೇಕು. ಆಖ್ಯಾಯಿಕೆಯು ಸಂಸ್ಕೃತಗದ್ಯರೂಪವಾಗಿರುತ್ತದೆ. ಉಚ್ಛ್ವಾಸಗಳಿದ್ದು, ಪ್ರಥಮೋಚ್ಛ್ವಾಸವನ್ನು ಹೊರತು ಉಳಿದುವುಗಳ ಆದಿಯಲ್ಲಿ ಆರ್ಯಾಛಂದಸ್ಸಿನ ಎರಡು ಪದ್ಯಗಳಿರುತ್ತವೆ. ಈ ವಿವರಣೆಯಿಂದ ರುದ್ರಟನು ಭಾಮಹನ ಲಕ್ಷಣವನ್ನೂ ವ್ಯತ್ಯಾಸಗೊಳಿಸಿರುವುದು ಕಂಡುಬರುತ್ತದೆ. ದಂಡಿಯಂತೂ ಆ ಲಕ್ಷಣವನ್ನು ಪ್ರತಿಭಟಿಸಿದ್ದಾನೆ. ಪ್ರಯೋಗಗಳನ್ನು ನೋಡಿ ವ್ಯಾಕರಣಕಾರರು ಸೂತ್ರಗಳನ್ನು ರಚಿಸುವಂತೆ ಲಾಕ್ಷಣಿಕರೂ ಬೆಳೆಯುತ್ತಿರುವ ಕಾವ್ಯಗಳನ್ನು ನೋಡಿ ಲಕ್ಷಣ ನಿರೂಪಿಸುವುದರಲ್ಲಿ ಔಚಿತ್ಯವಿದೆ.

ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಗದ್ಯದ ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ ಮತ್ತು ಚೂರ್ಣಕವೆಂಬ ನಾಲ್ಕು ವಿಧಗಳನ್ನು ತಿಳಿಸಿ ಕಥಾ ಮತ್ತು ಆಖ್ಯಾಯಿಕೆಗಳ ಲಕ್ಷಣವನ್ನು ಹೇಳಿದ್ದಾನೆ.* ಇವನ ಲಕ್ಷಣ ನಿರೂಪಣೆಯು ಗತಾನುಗತಿಕವಾಗಿಯೇ ಇದೆ. ಹೇಮಚಂದ್ರನು

---

1. ಅಪಾದಃ ಪದಸಂತಾನೋ ಗದ್ಯಮಾಖ್ಯಾಯಿಕಾ ಕಥಾ ।
ಇತಿ ತಸ್ಯ ಪ್ರಭೇದೌ ದ್ವೌ ತಯೋರಾಖ್ಯಾಯಿಕಾ ಕಿಲ ॥
ನಾಯಕೇನೈವ ವಾಚ್ಯಾನ್ಯಾ ನಾಯಕೇನೇತರೇಣ ವಾ ।
ಸ್ವಗುಣಾವಿಷ್ಕ್ರಿಯಾ ದೋಷೋ ನಾತ್ರ ಭೂತಾರ್ಥಶಂಸಿನಃ ॥
ಅಪಿ ತ್ವನಿಯಮೋ ದೃಷ್ಟಸ್ತತ್ರಾಪ್ಯನ್ಯೈರುದೀರಣಾತ್ ॥
ಅನ್ಯೋ ವಕ್ತಾ ಸ್ವಯಂವೇತಿ ಕೀದೃಗ್ವಾ ಭೇದಕಾರಣಮ್ ।
ವಕ್ತ್ರಂ ಚಾಪರವಕ್ತ್ರಂ ಚ ಸೋಚ್ಛ್ವಾಸತ್ವಂ ಚ ಭೇದಕಮ್ ।
ಚಿಹ್ನಮಾಖ್ಯಾಯಿಕಾಶ್ಚೇತ್ ಪ್ರಸಂಗೇನ ಕಥಾಸ್ವಪಿ ॥
ಆರ್ಯಾದಿವತ್ಪ್ರವೇಶಃ ಕಿಂ ನ ವಕ್ತ್ರಾಪರವಕ್ತ್ರಯೋಃ ।
ಭೇದಶ್ಚ ದೃಷ್ಟೋ ಲಂಭಾದಿರುಚ್ಛ್ವಾಸೋ ವಾಸ್ತು ಕಿಂ ತತಃ ॥
ತತ್ಕಥಾಖ್ಯಾಯಿಕೇತ್ಯೇಕಾ ಜಾತಿಸ್ಸಂಜ್ಞಾದ್ವಯಾಂಕಿತಾ ।
ಅತ್ರೈವಾಂತರ್ಭವಿಷ್ಯಂತಿ ಶೇಷಾಶ್ಚಾಖ್ಯಾನ ಜಾತಯಃ ॥ —ಕಾವ್ಯಾದರ್ಶ, ದಂಡಿ

2. ಉಚ್ಛ್ವಾಸಾಂತೇಷ್ವಖಿನ್ನಾಸ್ತೇ ಯೇಷಾಂ ವಕ್ತ್ರೇ ಸರಸ್ವತೀ ।
ಕಥಮಾಖ್ಯಾಯಿಕಾಕಾರಾ ನ ತೇ ವಂದ್ಯಾಃ ಕವೀಶ್ವರಾಃ ॥ —ಬಾಣ.



---

* ವೃತ್ತಗಂಧೋಜ್ಝಿತಂ ಗದ್ಯಂ ಮುಕ್ತಕಂ ವೃತ್ತಗಂಧಿ ಚ ॥
ಭವೇದುತ್ಕಲಿಕಾಪ್ರಾಯಂ ಚೂರ್ಣಕಂ ಚ ಚತುರ್ವಿಧಮ್ ।
ಆದ್ಯಂ ಸಮಾಸರಹಿತಂ ವೃತ್ತಭಾಗಯುತಂ ಪರಮ್ ॥
ಅನ್ಯದ್ದೀರ್ಘ ಸಮಾಸಾಢ್ಯಂ ತುರ್ಯಂ ಚಾಲ್ಪಸಮಾಸಕಮ್ ॥
ಕಥಾಯಾಂ ಸರಸಂ ವಸ್ತು ಗದ್ಯೈರೇವ ವಿನಿರ್ಮಿತಮ್ ॥
ಕ್ವಚಿದತ್ರ ಭವೇದಾರ್ಯಾ ಕ್ವಚಿದ್ವಕ್ತ್ರಾಪವಕ್ತ್ರಕೇ ।
ಆದೌ ಪದ್ಯೈರ್ನಮಸ್ಕಾರಃ ಖಲಾದೇರ್ವೃತ್ತಕೀರ್ತನಮ್ ॥
ಆಖ್ಯಾಯಿಕಾ ಕಥಾವತ್ ಸ್ಯಾತ್ ಕವೇರ್ವಂಶಾನುಕೀರ್ತನಮ್ ।
ಅಸ್ಯಾಮನ್ಯಾ ಕವೀನಾಂ ಚ ವೃತಂ ಪದ್ಯಂ ಕ್ವಚಿತ್ ಕ್ವಚಿತ್ ॥
ಕಥಾಂಶಾನಾಂ ವ್ಯವಚ್ಛೇದ ಆಶ್ವಾಸ ಇತಿ ಬಧ್ಯತೇ ।
ಆರ್ಯಾ ವಕ್ತ್ರಾಪವಕ್ತ್ರಾಣಾಂ ಛಂದಸಾ ಯೇನ ಕೇನಚಿತ್ ॥
ಅನ್ಯಾಪದೇಶೇನಾಶ್ವಾಸಮುಖೇ ಭಾವ್ಯರ್ಥಸೂಚನಮ್—ಸಾಹಿತ್ಯದರ್ಪಣ ವಿಶ್ವನಾಥ.

ಛಂದೋಮಂಜರಿಯು ವೃತ್ತಕ, ಉತ್ಕಲಿಕಾಪ್ರಾಯ ಮತ್ತು ವೃತ್ತಗಂಧಿಯೆಂಬ ಗದ್ಯದ ಮೂರು ವಿಧಗಳನ್ನು ಹೇಳಿ ಉದಾಹರಿಸಿದೆ :—
ಅಕಠೋರಾಕ್ಷರಂ ಸ್ವಲ್ಪಸಮಾಸಂ ವೃತ್ತಕಂ ಮತಮ್ ।
ತತ್ತು ವೈದರ್ಭರೀತಿಸ್ಥಂ ಗದ್ಯಂ ಹೃದ್ಯತರಂ ಭವೇತ್ ॥
ಭವೇದುತ್ಕಲಿಕಾಪ್ರಾಯಂ ಸಮಾಸಾಢ್ಯಂ ದೃಢಾಕ್ಷರಮ್ ।
ವೃತ್ತೈಕದೇಶಸಂಬಂಧಾದ್ವೃತ್ತಗಂಧಿ ಪುನಸ್ಸ್ಮೃತಮ್ ॥

(i) ಸ ಹಿ ತ್ರಯಾಣಾಮೇವ ಜಗತಾಂ ಗತಿಃ ಪರಮಪುರುಷೋತ್ತಮೋ ದೃಪ್ತದಾನವಭರೇಣ ಭಂಗುರಾಂಗೀಮವನಿಮವಲೋಕ್ಯ ಕರುಣಾರ್ದ್ರ ಹೃದಯಃ...

(ii) ಪ್ರಣಿಪಾತಪ್ರವಣಸಪ್ರಧಾನಾಶೇಷಸುರಾದಿವೃಂದಸೌಂದರ್ಯಪ್ರಕಟಕಿರೀಟ-ಕೋಟಿನಿವಿಷ್ಟಸ್ಪಷ್ಟಮಣಿಮಯೂಖಚ್ಛಟಾಚ್ಛುರಿತಚರಣನಖಚಕ್ರವಿಕ್ರಮೋದ್ದಾಮ...

(iii) ಜಯ ಜಯ ಜಯ ಜನಾರ್ದನ ಸುಕೃತಿಮನಸ್ತಡಾಗವಿಕಸ್ವರಚರಣ ಪದ್ಮ ಪದ್ಮ ಪತ್ರನಯನ ಪದ್ಮಾಪದ್ಮಿನೀವಿನೋದ ರಾಜಹಂಸಭಾಸ್ವರ-ಯಶಃಪಟಲಪರಿಪೂರಿತಭುವನಕುಹರ...

ಕಥೆಯು ಗದ್ಯರೂಪವಾಗಿಯೂ ಪದ್ಯರೂಪವಾಗಿಯೂ ಇರಬಹುದೆಂದು ಹೇಳಿ ಪದ್ಯಮಯೀ ಕಥೆಗೆ ಲೀಲಾವತಿಯನ್ನು ಹೆಸರಿಸಿದ್ದಾನೆ. ಅಲ್ಲದೆ ಆಖ್ಯಾನಂ, ನಿದರ್ಶನಂ, ಪ್ರವಹ್ಲಿಕಾ, ಮತಲ್ಲಿಕಾ, ಮಣಿಕುಲ್ಯಾ, ಪರಿಕಥಾ, ಖಂಡಕಥಾ, ಸಕಲಕಥಾ, ಉಪಕಥಾ, ಬೃಹತ್ಕಥಾ, ಎಂಬ ಕಥಾ ಪ್ರಕಾರಗಳನ್ನೂ ತಿಳಿಸಿದ್ದಾನೆ.* ಲಾಕ್ಷಣಿಕರು ನಿರೂಪಿಸಿರುವ ಲಕ್ಷಣಗಳ ಕೆಲವು ಅಂಶಗಳಲ್ಲಿ ಮತಭೇದವಿದ್ದರೂ ಸಂಸ್ಕೃತಭಾಷೆ, ಸಮಾಸಮಯಶೈಲಿ, ಉದಾತ್ತವಸ್ತು, ಮತ್ತು ರಸಪೋಷಣೆಗಳಲ್ಲಿ ವಿವಾದವಿಲ್ಲ. ಸುಂದರ ಸಮಾಸಮಯವಾದ ಶೈಲಿಯಿಲ್ಲದ ಗದ್ಯ ಕಾವ್ಯವೆನಿಸಲಾರದು. ದಂಡಿಯು ಗದ್ಯಕ್ಕೆ ಓಜೋಗುಣವು ಜೀವಿತವೆಂದು ಹೇಳಿದ್ದಾನೆ.† ಆದ್ದರಿಂದಲೇ ಪಂಚತಂತ್ರ, ಹಿತೋಪದೇಶ ಮುಂತಾದವು ಗದ್ಯಕಾವ್ಯಗಳಲ್ಲಿ ಸೇರುವುದಿಲ್ಲ. ಇವುಗಳಲ್ಲಿ ಕಥಾಸ್ವಾರಸ್ಯವು ಪ್ರಧಾನ; ಗದ್ಯಕಾವ್ಯಗಳಲ್ಲಿ ಶ್ಲೇಷಾದ್ಯಲಂಕಾರಗಳಿಂದ ಕೂಡಿದ ವರ್ಣನೆ ಪ್ರಧಾನ. ಮಹಾಕಾವ್ಯಗಳ ವರ್ಣನೆ ಇತಿಮಿತಿಗೊಳಪಟ್ಟಿರುತ್ತದೆ. ಗದ್ಯಕಾವ್ಯಗಳ ವರ್ಣನೆ ಕಟು ನಿಯಂತ್ರಣಕ್ಕೊಳಗಾಗದೆ ಕವಿಪ್ರತಿಭೆಯಿಂದ ಸಾಂಗವಾಗಿ ಪೂರ್ಣಗೊಂಡು ವಿಜೃಂಭಿಸುತ್ತದೆ. ಈ ಒಂದೊಂದು ವರ್ಣನೆಯೂ ರುಚಿಕರವಾಗಿದ್ದು ಸ್ವತಂತ್ರ ಕಾವ್ಯವೊ ಎನಿಸುತ್ತದೆ. ಈ ಶೈಲಿ, ವರ್ಣನೆ, ರಸಪರಿಪೋಷಣೆ, ಪಾತ್ರಚಿತ್ರಣ, ಭಾವೋತ್ಪ್ರೇಕ್ಷೆಗಳು ಪ್ರತಿಭಾದೌರ್ಬಲ್ಯವುಳ್ಳವನಿಗೆ ಸಾಧ್ಯವಿಲ್ಲ. ಒಂದು ವೇಳೆ ದುರ್ಬಲ ಪ್ರತಿಭೆಯುಳ್ಳವನು ಗದ್ಯ ಬರೆದರೆ

---

* 1. ಪ್ರಬಂಧಮಧ್ಯೇ ಪರಪ್ರಬೋಧನಾರ್ಥಂ ನಲಾದ್ಯುಪಖ್ಯಾನಮಿವೋಪಾಖ್ಯಾನಮಭಿನಯನ್ ಪಠನ್ ಗಾಯನ್ ಯದ್ಯೈಕೋ ಗ್ರಂಥಿಕಃ ಕಥಯತಿ ತದ್ಗೋವಿಂದವತ್ ಆಖ್ಯಾನಮ್.
2. ತಿರಶ್ಚಾಮತಿರಶ್ಚಾಂ ವಾ ಚೇಷ್ಟಾಭಿರ್ಯತ್ರ ಕಾರ್ಯಮಕಾರ್ಯಂ ವಾ ನಿಶ್ಚೀಯತೇ ತತ್ಪಂಚತಂತ್ರಾದಿವತ್ ಧೂರ್ತವಿಟಕುಟ್ಟನೀಮತಮಯೂರಮಾರ್ಜಾರಾದಿವಚ್ಚ ನಿದರ್ಶನಮ್
3. ಪ್ರಧಾನಮಧಿಕೃತ್ಯ ಯತ್ರ ದ್ವಯೋರ್ವಿವಾದಃ ಸೋऽರ್ಧಪ್ರಾಕೃತರಚಿತಾ ಚೇಟಕಾದಿವತ್ ಪ್ರವಹ್ಲಿಕಾ.
4. ಪ್ರೇತಮಹಾರಾಷ್ಟ್ರಭಾಷಯಾ ಕ್ಷುದ್ರಕಥಾ ಗೋರೋಚನಾ ನಂಗವತ್ಯಾದಿವತ್ ಮತಲ್ಲಿಕಾ ಯಸ್ಯಾಂ ಪುರೋಹಿತಾಮಾತ್ಯತಾಪಸಾದೀನಾಂ ಪ್ರಾರಬ್ಧಾನಿರ್ವಾಹೇ ಉಪಹಾಸಸ್ಸಾಪಿ ಮತಲ್ಲಿಕಾ.
5. ಯಸ್ಯಾಂ ಪೂರ್ವಂ ವಸ್ತು ನ ಲಕ್ಷ್ಯತೇ ಪಶ್ಚಾತ್ತು ಪ್ರಕಾಶ್ಯತೇ ಸಾ ಮತ್ಸ್ಯಹಸಿತಾದಿವತ್ ಮಣಿಕುಲ್ಯಾ.
6. ಏಕಂ ಧರ್ಮಾದಿಪುರುಷಾರ್ಥಮುದ್ದಿಶ್ಯ ಪ್ರಕಾರವೈಚಿತ್ರ್ಯೇಣಾನಂತವೃತ್ತಾಂತವರ್ಣನಪ್ರಧಾನಾ ಶೂದ್ರಕಾದಿವತ್ ಪರಿಕಥಾ.
7. ಮಧ್ಯಾದುಪಾಂತತೋ ವಾ ಗ್ರಂಥಾಂತರಪ್ರಸಿದ್ಧಮಿತಿವೃತ್ತಂ ಯಸ್ಯಾಂ ವರ್ಣ್ಯತೇ ಸೇಂದುಮತ್ಯಾದಿವತ್ ಖಂಡಕಥಾ.
8. ಸಮಸ್ತಫಲಾಂತೇತಿವೃತ್ತ ವರ್ಣನಾ ಸುಮರಾದಿತ್ಯಾದಿವತ್ ಸಕಲಕಥಾ.
9. ಏಕತರಚರಿತಾಶ್ರಯೇಣ ಪ್ರಸಿದ್ಧ ಕಥಾಂತರೋಪನಿಬದ್ಧಾ ಉಪಕಥಾ.
10. ಲಂಭಾಂಕಿತಾದ್ಭುತಾರ್ಥಾ ನರವಾಹನದತ್ತಚರಿತವತ್ ಬೃಹತ್ಕಥಾ.

—ಹೇಮಚಂದ್ರ

† ಓಜಸ್ಸಮಾಸಭೂಯಸ್ತ್ವಮೇತದ್ಗದ್ಯಸ್ಯ ಜೀವಿತಮ್—ದಂಡೀ.



ಅದು ಕಾವ್ಯವಾಗುವುದಿಲ್ಲ; ಅಲ್ಲದೆ ಅವನ ದೌರ್ಬಲ್ಯ ಎದ್ದು ಕಾಣಿಸುತ್ತದೆ. ಆದ್ದರಿಂದಲೇ 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಮಾತು ಹುಟ್ಟಿಕೊಂಡಿರುವುದು.

ಕ್ರಿ.ಶ. 7ನೆಯ ಶತಮಾನದಲ್ಲಿ ರಚಿತವಾದ ಸಂಸ್ಕೃತಗದ್ಯಕಾವ್ಯಗಳ ವಸ್ತುವನ್ನು ಗ್ರೀಸಿನ ಪ್ರಾಚೀನ ಅದ್ಭುತಕಥೆಗಳೊಡನೆ ಹೋಲಿಸುವುದುಂಟು. ಪೀಟರ್‌ಸನ್ ತಾನು ಬರೆದಿರುವ ಕಾದಂಬರಿಯ ಪೀಠಿಕೆಯಲ್ಲಿ ಕಾದಂಬರಿ ಮತ್ತು ಲ್ಯೂಸಿಪ್ಪೆ (Leucippe)ಗಳಿಗಿರುವ ಸಾದೃಶ್ಯಗಳನ್ನು ಪಟ್ಟಿಮಾಡಿ ಗ್ರೀಸಿನ ಪ್ರಾಚೀನ ಅದ್ಭುತಕಥೆಗಳಿಂದಲೇ ಸಂಸ್ಕೃತಗದ್ಯಕಾವ್ಯರಚನೆಯು ಜನ್ಮತಾಳಿತೆಂದು ಅಭಿಪ್ರಾಯಪಟ್ಟಿದ್ದಾನೆ. ಸಿಲ್ವಾನ್‌ಲೇವಿಯು ಈ ವಿಚಾರವನ್ನು ವಿಶೇಷವಾಗಿ ಪರಿಶೀಲಿಸಿ 'The romances of the two peoples are totally different both in plan and spirit as even a cursory reading will show' ಎಂದು ಮೇಲಿನ ಅಭಿಪ್ರಾಯವನ್ನು ತಿರಸ್ಕರಿಸಿದ್ದಾನೆ. ಎ. ಎಫ್. ಲಕೋಟೆಯು ಈ ವಿಚಾರವನ್ನು ಆಳವಾಗಿ ವಿಮರ್ಶಿಸಿ ಗ್ರೀಕ್ ಗದ್ಯದಿಂದ ಸಂಸ್ಕೃತಗದ್ಯ ಜನಿಸಿತೆಂಬ ನಿರ್ಣಯವನ್ನು ತಳ್ಳಿಹಾಕಿದ್ದಾನೆ. ಕಥಾಬೆಳವಣಿಗೆಯೇ ಪ್ರಧಾನವಾಗಿರುವ ಗ್ರೀಸಿನ ಅದ್ಭುತಕಥೆಗಳಲ್ಲಿ ಸಂಸ್ಕೃತಕಾವ್ಯಗಳ ಲಲಿತಮಧುರಪದಗುಂಫನ, ಪ್ರಕೃತಿಯ ಬಹುಮುಖ ವರ್ಣನೆ, ಕಾರ್ಯಸಾಧನೆಯ ವಿವರ, ಹೃದಯದ ಸಕಲಭಾವಗಳ ಚಿತ್ರಣ, ನೈತಿಕಮೌಲ್ಯಗಳ ನಿರೂಪಣೆ, ದೈಹಿಕಗುಣಗಳ ಪ್ರತಿಪಾದನೆ ಮುಂತಾದುವುಗಳಿಲ್ಲ. ಗ್ರೀಸಿನ ಅದ್ಭುತಕಥೆಯು ಸಾಹಸಗಳ ಸರಮಾಲೆ. ಗ್ರೀಸಿನ ಗದ್ಯದಿಂದ ಸಂಸ್ಕೃತಗದ್ಯವು ಉದಯಿಸಿತೆಂಬ ವಾದವು ಸಾಧಾರಣವಾಗಿ ಅಂಗೀಕೃತವಾಗಿಲ್ಲ.

ಭಾರತದ ಕಥೆಗಳ ಹಿನ್ನೆಲೆಯು ಬಹಳ ಪ್ರಾಚೀನ. ಸಂಹಿತೆಗಳ ಕಾಲದಿಂದಲೇ ಇವು ಮೂಡಿ ನಾನಾ ಪ್ರಕಾರವಾಗಿ ಬೆಳೆದು ವಿಶ್ವದ ಬೇರೆ ಬೇರೆ ಪ್ರದೇಶಗಳಿಗೂ ಹರಡಿವೆ. ಜಗತ್ತಿನ ಪ್ರಸಿದ್ಧ ಭಾಷೆಗಳಿಗೆಲ್ಲಾ ಅನುವಾದಗೊಂಡಿರುವ ಪಂಚತಂತ್ರವು ಇದಕ್ಕೆ ಸಾಕ್ಷಿ. ಬೃಹತ್ಕಥೆ, ವೇತಾಲಪಂಚವಿಂಶತಿ, ಶುಕಸಪ್ತತಿ, ಪಂಚತಂತ್ರ ಮುಂತಾದ ಕೃತಿಗಳಲ್ಲಿ ಕಾಣಿಸುವ ಕಥಾಸಾಹಿತ್ಯವೇ ಕ್ರಮೇಣ ವೈಶಿಷ್ಟ್ಯ ತುಂಬಿಕೊಂಡು ಸೊಗಸುಸೌಂದರ್ಯಗಳಿಂದ ರಂಜಿಸುವ ಗದ್ಯಕಾವ್ಯವಾಗಿ ರೂಪಗೊಂಡಿರಬೇಕು. ಮಹಾಕಾವ್ಯಗಳಿಗಿಂತ ಹೆಚ್ಚಿನ ಕವಿತ್ವಶಕ್ತಿಯನ್ನು ತೋರಿಸಿದವರನ್ನು ಮಾತ್ರ ಗದ್ಯಕವಿಗಳೆಂದು ಗೌರವಿಸುತ್ತಿದ್ದರು. ತಮ್ಮ ಪ್ರತಿಭೆ, ಪಾಂಡಿತ್ಯಗಳಿಂದ ಸಂಸ್ಕೃತ ಗದ್ಯಕಾವ್ಯ ಪ್ರಕಾರಕ್ಕೆ ಕೀರ್ತಿತಂದ ಸುಬಂಧು, ಬಾಣ ಮತ್ತು ದಂಡಿ ಲೋಕಮನ್ನಣೆಗೆ ಪಾತ್ರರಾದರು; ಇವರನ್ನು ಸರಿದೂಗಿದವರಿಲ್ಲ.

ಕೃಷ್ಣಯಜುರ್ವೇದದ ಗದ್ಯವೇ ಉಪಲಬ್ಧವಿರುವ ಗದ್ಯಗಳಲ್ಲೆಲ್ಲಾ ಬಹಳ ಪ್ರಾಚೀನವಾದುದು. ಯಜ್ಞಯಾಗಾದಿಗಳ ಆಚರಣೆಯನ್ನು ಬೋಧಿಸುವ ಬ್ರಾಹ್ಮಣಗಳು* ನೀರಸವಾದ

---

* ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಸ್ತದಂತರೇಣ ಸರ್ವಾ ಅನ್ಯಾ ದೇವತಾ । ಆಗ್ನಾವೈಷ್ಣವಂ ಪುರೋಡಾಶಂ ನಿರ್ವಪಂತಿ ದೀಕ್ಷಣೀಯಮೇಕಾದಶಕಪಾಲಂ ಸರ್ವಾಭ್ಯ ಏವೈನಂ ತದ್ದೇವತಾಭ್ಯೋऽನಂತರಾಯಂ ನಿರ್ವಪಂತಿ ।—ಐತರೇಯ ಬ್ರಾಹ್ಮಣ.

ಪ್ರೌಢಗದ್ಯಗಳೇ ಆಗಿವೆ. ಮಹಾಭಾರತ ಮತ್ತು ಪುರಾಣ[1]ಗಳಲ್ಲಿರುವ ಗದ್ಯಭಾಗಗಳಲ್ಲಿ ಬ್ರಾಹ್ಮಣಗಳ ಗದ್ಯಶೈಲಿಯ ಪ್ರಭಾವವು ಕಾಣಿಸುತ್ತದೆ. ಜಗತ್ತಿನಲ್ಲಿ ಅದ್ಭುತರಚನೆಯೆನಿಸಿದ ಸೂತ್ರಗಳೂ[2] ಗದ್ಯವೇ ಆಗಿವೆ. ಪಾಣಿನಿಯ ವ್ಯಾಕರಣಸೂತ್ರಗಳ[3] ರಚನಾಕೌಶಲ್ಯಕ್ಕೆ ತಲೆದೂಗದವರಿಲ್ಲ. ಕ್ರಿಸ್ತಪೂರ್ವದಲ್ಲಿಯೇ ನಾನಾಶಾಸ್ತ್ರಗಳಿಗೆ ಸಂಬಂಧಿಸಿದಂತೆ ಸೂತ್ರಗಳ ರಚನೆಯಾಗಿದೆ. ಸೂತ್ರಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾದಾಗ ಮಾಡಿದ ವೃತ್ತಿ[4]ಗಳೂ ಗದ್ಯವೇ; ಸೂತ್ರ-ವೃತ್ತಿಗಳ ಅರ್ಥವಿವರಣೆಗೆ ಜನಿಸಿದ ಭಾಷ್ಯಗಳೂ[5] ಗದ್ಯರೂಪವಾಗಿಯೇ ಇವೆ. ವಿಷಯಪ್ರಧಾನವಾದ ಇವುಗಳಲ್ಲಿ ರಂಜನೆ ನೀಡುವ ಕವಿತ್ವ ಕಲೆಯಿಲ್ಲ. ಹೀಗೆ ಪ್ರಾಚೀನಕಾಲದಿಂದಲೂ ಗದ್ಯವು ನಾನಾರೂಪವಾಗಿ ಹರಿದುಬಂದಿದೆ. ಸದ್ಯಕ್ಕೆ ಮಹಾಭಾರತದ ಉಪಾಖ್ಯಾನ[6]ಗಳಲ್ಲಿರುವ ಗದ್ಯವನ್ನು ಲೌಕಿಕ ಸಂಸ್ಕೃತಸಾಹಿತ್ಯದ ಅತಿಪ್ರಾಚೀನಗದ್ಯವೆಂದು ಗುರುತಿಸಬಹುದು.

ಮಹಾಕವಿಗಳ ಪ್ರಶಂಸೆಗೆ ಪಾತ್ರವಾದ ಹಲವು ಗದ್ಯಕಾವ್ಯಗಳು ಕಾಲಗರ್ಭದಲ್ಲಿ ಅಡಗಿ ಕೇವಲ ತಮ್ಮ ಹೆಸರುಗಳನ್ನು ಬಿಟ್ಟುಹೋಗಿವೆ. ಕಾತ್ಯಾಯನನು 'ಆಖ್ಯಾಯಿಕಾ' ಪದವನ್ನು ಬಹುವಚನದಲ್ಲಿ ಬಳಸಿರುವುದನ್ನು ನೋಡಿದರೆ ಕ್ರಿಸ್ತಪೂರ್ವದಲ್ಲಿಯೇ ಆಖ್ಯಾಯಿಕೆಗಳು ಪ್ರಸಿದ್ಧವೂ ಜನಪ್ರಿಯವೂ ಆಗಿರಬೇಕು. ಮಹಾಭಾಷ್ಯಕರ್ತೃವಾದ ಪತಂಜಲಿಯು (ಸು. ಕ್ರಿ. ಪೂ. 150) ಸುಮನೋತ್ತರಾ ಮತ್ತು ಭೈಮರಥಿಗಳನ್ನು ಹೆಸರಿಸಿ ವಾಸವದತ್ತೆಯು ಆಖ್ಯಾಯಿಕೆಯೆಂದೂ ಅದನ್ನೋದುವವರು ವಾಸವದತ್ತಿಕರೆಂದೂ ಹೇಳಿದ್ದಾನೆ. ಆದರೆ ಅವುಗಳ ಕವಿಗಳನ್ನು ತಿಳಿಸಿಲ್ಲ. ಬಾಣನು (ಕ್ರಿ. ಶ. 7ನೆಯ ಶತಮಾನ) ಆಖ್ಯಾಯಿಕಾಕಾರರನ್ನೂ

1. ಯಥೈವ ವ್ಯೋಮ್ನಿ ವಹ್ನಿಪಿಂಡೋಪಮಂ ತ್ವಾಮಹಮಪಶ್ಯಂ ತಥೈವಾದ್ಯಾಗ್ರತೋಗತಮಪ್ಯತ್ರ ಭಗವತಾ ಕಿಂಚಿನ್ನ ಪ್ರಸಾದೀಕೃತಂ ವಿಶೇಷಮುಪಲಕ್ಷಯಾಮೀತ್ಯುಕ್ತೇ ಭಗವತಾ ಸೂರ್ಯೇಣ ನಿಜಕಂಠಾದುನ್ಮುಚ್ಯ ಸ್ಯಮಂತಕಂ ನಾಮ ಮಹಾಮಣಿವರಮವತಾರ್ಯ ಏಕಾಂತೇ ನ್ಯಸ್ತಮ್ ।—ವಿಷ್ಣುಪುರಾಣ.

2. ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥—ಸೂತ್ರಲಕ್ಷಣ.

3. ಇಕೋ ಯಣಚಿ ।—ಪಾಣಿನಿಸೂತ್ರ.

4. ಇಕಃಸ್ಥಾನೇ ಯಣ್ ಸ್ಯಾತ್ ಅಚಿ ಸಂಹಾಯಾಂ ವಿಷಯೇ ।—ವರರುಚಿಯ ವೃತ್ತಿ.

5. ಕಸ್ತರ್ಹಿಶಬ್ದಃ ? । ಯೇನೋಚ್ಚಾರಿತೇನ ಸಾಸ್ನಾಲಾಂಗೂಲಕಕುದಖುರವಿಷಾಣಿನಾಂ ಸಂಪ್ರತ್ಯಯೋ ಭವತಿ ಸ ಶಬ್ದಃ । ಅಥವಾ ಪ್ರತೀತಪದಾರ್ಥಕೋ ಲೋಕೇ ಧ್ವನಿಃ ಶಬ್ದ ಇತ್ಯುಚ್ಯತೇ । ತದ್ಯಥಾ—ಶಬ್ದಂ ಕುರು, ಮಾ ಶಬ್ದಂ ಕಾರ್ಷೀಃ, ಶಬ್ದಕಾರ್ಯಯಂ ಮಾಣವಕಃ, ಇತಿ ಧ್ವನಿಂ ಕುರ್ವನ್ನೇವಮುಚ್ಯತೇ । ತಸ್ಮಾದ್ ಧ್ವನಿಃ ಶಬ್ದಃ—ಪತಂಜಲಿಭಾಷ್ಯ.

6. ಪ್ರೋವಾಚ ಚೈನಮಯಮಸ್ಮ್ಯತ್ರ ಕೇದಾರಖಂಡೇ ನಿಃಸರಮಾಣಮುದಕಮವಾರಣೀಯಂ ಸಂರೋದ್ಧುಂ ಸಂವಿಷ್ಟೋ ಭಗವಚ್ಛಬ್ದಂ ಶ್ರುತ್ವೈವ ಸಹಸಾ ವಿದಾರ್ಯ ಕೇದಾರಖಂಡಂ ಭವಂತಮುಪಸ್ಥಿತಃ ।— ಮಹಾಭಾರತ, ಆದಿಪರ್ವ.

7. ಅಧಿಕೃತ್ಯ ಕೃತೇಗ್ರಂಥೇ, ಲುಬಾಖ್ಯಾಯಿಕಾಭ್ಯೋ ಬಹುಲಮ್ । ಅಧಿಕೃತ್ಯ ಕೃತೇ ಗ್ರಂಥೇ ಇತ್ಯತ್ರ ಲುಬಾಖ್ಯಾಯಿಕಾಭ್ಯೋ ಬಹುಲಂ ಲುಬ್ ವಕ್ತವ್ಯಃ । ವಾಸವದತ್ತಾ ಸುಮನೋತ್ತರಾ । ನ ಚ ಭವತಿ ಭೈಮರಥೀ ।—ಮಹಾಭಾಷ್ಯ.



ಆಖ್ಯಾಯಿಕೆಯಾದ ವಾಸವದತ್ತೆಯನ್ನೂ * ಪ್ರಶಂಸಿಸಿದ್ದಾನೆ. ಹರದತ್ತನು ಕಾಶಿಕೆಯಲ್ಲಿ 'ಉರ್ವಶೀ' ಯನ್ನು ಹೆಸರಿಸಿದ್ದಾನೆ. ವರರುಚಿಯು ಚಾರುಮತಿಯನ್ನೂ, ಶ್ರೀಪಾಲಿತನು ತರಂಗವತಿಯನ್ನೂ ಬರೆದಿರುವುದಕ್ಕೆ ಸೂಚನೆಗಳೂ ದೊರೆಯುತ್ತವೆ. ಶ್ರೀಪಾಲಿತನು ಹಾಲನ ಆಸ್ಥಾನದ ಪ್ರಸಿದ್ಧ ಕವಿಯಾಗಿದ್ದನು. ಧನಪಾಲ ಮತ್ತು ಅಭಿನಂದರು ಇವನನ್ನು ಪ್ರಶಂಸಿಸಿದ್ದಾರೆ. ತರಂಗವತಿಯು ಪ್ರಾಯಶಃ ಪ್ರಾಕೃತದಲ್ಲಿರಬೇಕು. ರಾಮಿಲ ಮತ್ತು ಸೋಮಿಲರು ಶೂದ್ರಕಕಥೆಯನ್ನು ಬರೆದಿದ್ದಾರೆಂದು ಭೋಜನಿಂದ ತಿಳಿದುಬರುತ್ತದೆ‡. ಭೋಜನು ಚಾರುಮತಿಯೊಡನೆ ಮನೋವತೀ ಮತ್ತು ಸಾತಕರ್ಣೀಹರಣ§ಗಳನ್ನೂ ಹೆಸರಿಸಿದ್ದಾನೆ. ಮನೋವತಿಯನ್ನು ದಂಡಿಯೂ ಪ್ರಶಂಸಿಸಿದ್ದಾನೆ. ಬಾಣನು ಸುಂದರ ಗದ್ಯರಚನೆಗಾಗಿ ಹರಿಶ್ಚಂದ್ರ (ಭಟ್ಟಾರ)ನನ್ನು ಹೊಗಳಿದ್ದಾನೆ.

ಪದಬಂಧೋಜ್ವಲೋ ಹಾರೀ ಕೃತವರ್ಣಕ್ರಮಸ್ಥಿತಿಃ ।
ಭಟ್ಟಾರ ಹರಿಚಂದ್ರಸ್ಯ ಗದ್ಯಬಂಧೋ ವಿಭಾವ್ಯತೇ ॥ _ಹರ್ಷಚರಿತ. ॥

ಈ ಗದ್ಯಬಂಧವು ಮಾಲತಿಯಾಗಿರಬೇಕೆಂದು ಊಹಿಸುತ್ತಾರೆ. ಬಾಣನಂತೆ ಶೀಲಾಭಟ್ಟಾರಿಕೆಯೂ ಸುರುಚಿರೋಕ್ತಿಗಳಿಗೆ ಪ್ರಸಿದ್ಧಳೆಂದು ತಿಳಿದುಬರುತ್ತದೆ (ಜಲ್ಹಣನ ಸೂಕ್ತಿಮುಕ್ತಾವಳೀ). ಆದರೆ ಆ ಪ್ರಬಂಧದ ಹೆಸರು ತಿಳಿಯದು. ಭೋಜನು ಶೃಂಗಾರಮಂಜರಿಯನ್ನೂ, ಕುಲಶೇಖರನು ಆಶ್ಚರ್ಯಮಂಜರಿಯನ್ನೂ ಬರೆದಿದ್ದರು. ವಾದಿಗಂಘಾಲನು ಕಂಸುಮಮಂಜರಿಯನ್ನೂ ಹೆಸರಿಸಿದ್ದಾನೆ. ಮತ್ತು ಜಯರಥನು ಅನಂಗಲೇಖೆಯಿಂದ ವಾಕ್ಯವನ್ನು ಉದ್ಧರಿಸಿದ್ದಾನೆ. ಈ ಕೃತಿಗಳ ಕವಿಗಳು ಯಾರೋ ತಿಳಿಯದು. ಹಸ್ತಿಮಲ್ಲನು ಲಂಭಗಳುಳ್ಳ ಒಂದು ಆಖ್ಯಾಯಿಕೆಯನ್ನು ಬರೆದಿದ್ದಂತೆ ತಿಳಿದುಬರುತ್ತದೆ. ವಿಷಾದದ ಸಂಗತಿಯೆಂದರೆ ಈವರೆಗೆ ಮೇಲೆ ಪ್ರಸ್ತಾಪಿಸಿದ ಕೃತಿಗಳಲ್ಲಿ ಇಂದು ಒಂದೂ ದೊರೆಯುವುದಿಲ್ಲ. ಇಂತಹ ಹಲವು ಕೃತಿಗಳ ಪರಿಶೀಲನೆಯಿಂದಲೇ ದಂಡಿಯು ಗದ್ಯಕಾವ್ಯದ ಲಕ್ಷಣವನ್ನು ಹೇಳಿರುವುದರಿಂದ

* ಕವೀನಾಮಗಲದ್ದರ್ಪೋನೂನಂ ವಾಸವದತ್ತಯಾ ।
ಶಕ್ತ್ಯೇವ ಪಾಂಡುಪುತ್ರಾಣಾಂ ಗತಯಾ ಕರ್ಣಗೋಚರಮ್ ॥ — ಹರ್ಷಚರಿತ, ಬಾಣ.

† ಪುಣ್ಯಾ ಪುನಾತಿ ಗಂಗೇವ ಗಾಂ ತರಂಗವತೀ ಕಥಾ । — ತಿಲಕಮಂಜರೀ.

‡ (i) ಶುಕೋ ಜರದ್ಗಿರಃ ಶೂದ್ರಕಕಥಾಯಾಂ ಹರಿಮತೀವೃತ್ತಾಂತೇ ಯಥಾ ।
—ಶೃಂಗಾರಪ್ರಕಾಶ

(ii) ತೌ ಶೂದ್ರಕಕಥಾಕಾರೌ ರಾಮಿಲಸೋಮಿಲೌ
ಕಾವ್ಯಂ ಯಯೋರ್ದ್ವಯೋರಾಸೀದರ್ಧನಾರೀಶ್ವರೋಪಮಮ್ ॥ —ಜಲ್ಹಣ.

ಸಾರಿಕಃ ಶಕುನಿಕಃ ಶಕುಂತಿಕಾಯಾಃ ಸಾತಕರ್ಣೀಹರಣೆ ।—ಶೃಂಗಾರಪ್ರಕಾಶ.

§ ಧವಳಪ್ರಭವಾ ರಾಗಂ ಸಾ ತನೋತಿ ಮನೋವತೀ । ಕವಿಗಂಧಗಜೈರೇಭಿಃ ... ॥
—ಅವಂತಿ ಸುಂದರೀ.

ಇವುಗಳಲ್ಲಿ ಓಜೋಗುಣವಿದ್ದಿರಬೇಕು. ಕ್ರಿ ಶ. 150ರಲ್ಲಿ ರಚಿತವಾದ ರುದ್ರದಾಮನ ಶಿಲಾಲೇಖನದ* ಶೈಲಿಯು ಸಮಾಸಮಯವೂ, ಅಲಂಕೃತವೂ ಆಗಿದೆ, ಇದರಲ್ಲಿ "ಸ್ಫುಟ ಲಘು-ಮಧುರ-ಚಿತ್ರ-ಕಾಂತ-ಶಬ್ದ-ಸಮಯೋದಾರಾಲಂಕೃತ-ಗದ್ಯ" ವೆಂಬ ಮಾತೂ ಬರುತ್ತದೆ. ಪುಲಮಾಯಿಯ ಪ್ರಾಕೃತ ಗದ್ಯ ಶಾಸನವೂ, ಹರಿಷೇಣನ ಸಮುದ್ರಗುಪ್ತ ಪ್ರಶಸ್ತಿಯ† ಗದ್ಯವೂ ಗದ್ಯಕಾವ್ಯಗಳ ಶೈಲಿಗೆ ಸಾಕ್ಷಿಗಳಾಗಿವೆ.

ವಾಸವದತ್ತಾ :-

ಕಥಾರೂಪವಾದ ಈ ಪ್ರಬಂಧಧ ಕರ್ತೃ ಸುಬಂಧು. ಬಾಣನು ತನ್ನ ಹರ್ಷಚರಿತದಲ್ಲಿ 'ಕವೀನಾಮಗಲದ್ದರ್ಪೋ ನೂನಂ ವಾಸವದತ್ತಯಾ' ಎಂದು ಮುಕ್ತಕಂಠದಿಂದ ವಾಸವದತ್ತೆಯನ್ನು ಹೊಗಳಿದ್ದಾನೆ. ಇದು ಪತಂಜಲಿಯು ಹೆಸರಿಸಿರುವ ವಾಸವದತ್ತೆಯೋ, ಸುಬಂಧುವಿನ ವಾಸವದತ್ತೆಯೋ ನಿರ್ಣಯಿಸುವುದು ಕಷ್ಟ. ಬಾಣನು ಕಾದಂಬರಿಯಲ್ಲಿ ತನ್ನ ಕೃತಿಯನ್ನು 'ಅತಿದ್ವಯೀಕಥಾ' ಎಂದು ವರ್ಣಿಸಿದ್ದಾನೆ. ವ್ಯಾಖ್ಯಾನಕಾರನಾದ ಭಾನುದತ್ತನು 'ಸುಬಂಧುವಿನ ವಾಸವದತ್ತಾ' ಮತ್ತು 'ಗುಣಾಢ್ಯನ ಬೃಹತ್ಕಥಾ' ಇವೇ ಆ ಎರಡು ಕಥೆಗಳೆಂದು ಅಭಿಪ್ರಾಯಪಟ್ಟಿದ್ದಾನೆ. ಸುಬಂಧುವಿನ ಕೃತಿಯಲ್ಲಿ ಭವಭೂತಿಯ ಛಾಯೆಯನ್ನು ವಿದ್ವಾಂಸರು ತೋರಿಸುತ್ತಾರೆ.‡ ಆದರೆ ಯಾರಿಗೆ ಯಾರು ಋಣಿಗಳೋ ಹೇಳುವುದು ಕಷ್ಟ. ವಾಸವದತ್ತೆಯ ಆರಂಭಪದ್ಯವೊಂದರಲ್ಲಿ ಸೂಚಿಸಿರುವ ವಿಕ್ರಮಾದಿತ್ಯನು § ಯಾರೆಂಬ ನಿರ್ಣಯವೂ ಇಲ್ಲ. ವಾಕ್ಪತಿರಾಜನ (ಸಂ. ಕ್ರಿ. ಶ. 8ನೆಯ ಶತಮಾನ) 'ಗೌಡವಹೋ' ಪ್ರಬಂಧದಲ್ಲಿ ಭಾಸ, ಕಾಳಿದಾಸ ಮತ್ತು ಹರಿಚಂದ್ರರೊಡನೆ ಸುಬಂಧುವಿನ ಹೆಸರೂ ಬಂದಿದೆ. ಮಂಖ.(ಮಂಖಕ)ನ (ಕ್ರಿ.ಶ. 12ನೆಯ ಶತಮಾನ) ಶ್ರೀಕಂಠಚರಿತದಲ್ಲಿ ಮಂಥ, ಭಾರವಿ ಮತ್ತು

---

* ಪ್ರಮಾಣಮಾನೋನ್ಮಾನಸ್ವರಗತಿವರ್ಣಸಾರಸತ್ತ್ವಾದಿಭಿಃ ಪರಮಲಕ್ಷಣವ್ಯಂಜನೈರುಪೇತ ಕಾಂತಮೂರ್ತಿನಾ ಸ್ವಯಮಧಿಗತಮಹಾಕ್ಷತ್ರಪನಾಮ್ನಾ ನರೇಂದ್ರಕನ್ಯಾಸ್ವಯಂವರಾನೇಕ ಮಾಲ್ಯಪ್ರಾಪ್ತದಾಮ್ನಾ ಮಹಾಕ್ಷತ್ರಪೇಣ ರುದ್ರದಾಮ್ನಾ ಸೇತುಂ ಸುದರ್ಶನತರಂ ಕಾರಿತಮ್ ।— ರುದ್ರದಾಮನ ಗಿರಿನಾರ ಶಿಲಾಲೇಖ.

† ಸರ್ವಪೃಥಿವೀವಿಜಯಜನಿತೋದಯವ್ಯಾಪ್ತನಿಖಿಲಾವನಿತಲಾಂ ಕೀರ್ತಿಮಿತಸ್ತ್ರಿದಶಪತಿಭವನ ಗಮನಾವಾಪ್ತಿಲಲಿತಸುಖವಿಚರಣಾಮಾಚಕ್ಷಾಣ ಇವ ಭುವೋ ಬಾಹುರಯಮುಚ್ಛ್ರಿತಃ ಸ್ತಂಭಃ ।

‡ 'ಹೃದಯಂ ವಿಲಿಖಿತಮಿವ ಉತ್ಕೀರ್ಣಮಿವ ಪ್ರತ್ಯುಪ್ತಮಿವ... ಕೀಲಿತಮಿವ... ವಜ್ರಲೇಪಘಟಿತಮಿವ... ಮರ್ಮಾಂತರಸ್ಥಿತಮಿವ ಕಂದರ್ಪಕೇತುಂ ಮನ್ಯಮಾನಾ

— ವಾಸವದತ್ತಾ

ಲೀನೇವ ಪ್ರತಿಬಿಂಬಿತೇವ ಲಿಖಿತೇವೋತ್ಕೀರ್ಣರೂಪೇವ ಸಾ ।
ಪ್ರತ್ಯುಪ್ತೇವ ಚ ವಜ್ರಲೇಪಘಟಿತೇವಾಂತರ್ನಿ ಖಾತೇವ ಚ ॥ —ಮಾಲತೀಮಾಧವ.

§ ಸಾ ರಸವತ್ತಾ ವಿಹತಾ ನವಕಾ ವಿಲಸಂತಿ ಚರತಿ ನೋ ಕಂಕಃ ।
ಸರಸೀವ ಕೀರ್ತಿಶೇಷಂ ಗತವತಿ ಭುವಿ ವಿಕ್ರಮಾದಿತ್ಯೇ ॥ – ವಾಸವದತ್ತಾ.



ಬಾಣರೊಡನೆ ಸುಬಂಧುವಿನ ಹೆಸರು ಬಂದಿದೆ. ವಾಸವದತ್ತೆಯಲ್ಲಿ ಬಂದಿರುವ 'ನ್ಯಾಯಸ್ಥಿತಿಮಿವ ಉದ್ಯೋತಕರಸ್ವರೂಪಾಂ, ಬೌದ್ಧಸಂಗತಿಮಿವ ಅಲಂಕಾರಭೂಷಿತಾಂ' ಎಂಬ ಮಾತಿನಿಂದ ಸುಬಂಧು ಉದ್ಯೋತಕರ (ಕ್ರಿ. ಶ. 6 ಅಥವಾ 7ನೆಯ ಶತಮಾನ) ಮತ್ತು ಬೌದ್ಧ ಸಂಗತಿಯ ಕರ್ತೃವಾದ ಧರ್ಮಕೀರ್ತಿ (ಸಂ.ಕ್ರಿ.ಶ 7ನೆಯ ಶತಮಾನ)ಗಳಿಗಿಂತ ಹಿಂದಿನವನಲ್ಲ. ಕ್ರಿ.ಶ. 8ನೆಯ ಶತಮಾನದ ವಾಮನನು ವಾಸವದತ್ತೆಯಿಂದ ಉದಾಹರಿಸಿರುವುದರಿಂದ ಸುಬಂಧು ಅವನಿಗಿಂತ ಈಚಿನವನಲ್ಲ, ಕವಿರಾಜನು (ಕ್ರಿ.ಶ 12ನೆಯ ಶತಮಾನ) ವಕ್ರೋಕ್ತಿಮಾರ್ಗ ನಿಪುಣರನ್ನು ಹೇಳುವಾಗ ಬಂದಿರುವ ಸುಬಂಧು, ಬಾಣಭಟ್ಟ, ಕವಿರಾಜ ಎಂಬ ಪಟ್ಟಿಯು ಕಾಲಕ್ರಮವನ್ನನುಸರಿಸಿದೆಯೆಂದು ಭಾವಿಸುವುದಾದರೆ ಬಾಣನಿಗಿಂತ ಮೊದಲೇ ಸುಬಂಧು ತನ್ನ ಕಾವ್ಯವನ್ನು ಮುಗಿಸಿರಬೇಕು. ಕವಿಯ ಕಾಲ ಕ್ರಿ ಶ. 7ನೆಯ ಶತಮಾನದ ಉತ್ತರಾರ್ಧವೆಂದು ಎ.ಬಿ. ಕೀತರು ಅಭಿಪ್ರಾಯ ಪಡುತ್ತಾರೆ. 'ಇಂದ್ರಾಯುಧ' ಪದಪ್ರಯೋಗ ಮತ್ತು ಕಾದಂಬರಿಯ ಕೆಲವು ಪ್ರಸಂಗಗಳ ಛಾಯೆ ವಾಸವದತ್ತೆಯಲ್ಲಿರುವುದರಿಂದ ಸುಬಂಧುವಿನಕಾಲ ಕ್ರಿ.ಶ. 8ನೆಯ ಶತಮಾನದ ಅಂತ್ಯಭಾಗವೆಂದು ಕೃಷ್ಣಮಾಚಾರ್ಯರ ಅಭಿಪ್ರಾಯ. ಸುಬಂಧುವಿಗೆ ಪುರಾಣೇತಿಹಾಸಗಳು, ಕಾಮಸೂತ್ರ, ಛಂದೋವಿಚಿತಿ, ಬೃಹತ್ಕಥಾ ಮತ್ತು ಉಪನಿಷತ್ತುಗಳ ಪರಿಚಯವಿದ್ದಿತು. ನ್ಯಾಯ, ಮೀಮಾಂಸಾ ಮತ್ತು ಬೌದ್ಧ ತತ್ತ್ವಗಳಲ್ಲಿಯೂ ಇವನಿಗೆ ಪರಿಶ್ರಮವಿದ್ದಿತು.

ಚಿಂತಾಮಣಿಯೆಂಬ ಮಹಾರಾಜನ ಮಗನಾದ ಕಂದರ್ಪಕೇತು ಒಂದು ದಿನ ಕನಸಿನಲ್ಲಿ ಪರಮ ಸುಂದರಿಯಾದ ಕನ್ಯೆಯೊಬ್ಬಳನ್ನು ಕಂಡು ಅವಳಲ್ಲಿ ಅನುರಕ್ತನಾದನು. ಗೆಳೆಯನಾದ ಮಕರಂದನು ಎಷ್ಟು ಹೇಳಿದರೂ ಅವನ ಮನಸ್ಸಿಗೆ ಶಾಂತಿ ಲಭಿಸಲಿಲ್ಲ. ಯಾರಿಗೂ ತಿಳಿಯದಂತೆ ಇಬ್ಬರೂ ನಗರವನ್ನು ಬಿಟ್ಟು ಪ್ರಯಾಣ ಮಾಡಿ ಘೋರಾರಣ್ಯದ ಒಂದು ಮರದ ಕೆಳಗೆ ವಿಶ್ರಾಂತಿಗಾಗಿ ನಿಂತರು. ಅದೇ ಮರದ ಮೇಲೆ ಗಂಡು ಗಿಳಿ ಹೆಣ್ಣು ಗಿಳಿಗೆ ಹೇಳುತ್ತಿದ್ದ ಒಂದು ಕಥೆಯನ್ನು ಕೇಳಿಸಿಕೊಂಡನು :— 'ಕುಸುಮಪುರದ ರಾಜನಾದ ಶೃಂಗಾರಶೇಖರನು ತನ್ನ ಮಗಳಾದ ವಾಸವದತ್ತೆಗೆ ಸ್ವಯಂವರವನ್ನು ಏರ್ಪಡಿಸಿದನು. ರಾಜಕುಮಾರಿಯು ಯಾರನ್ನೂ ವರಿಸದೆ ತಾನು ಕನಸಿನಲ್ಲಿ ಕಂಡ ರಾಜಕುಮಾರನನ್ನು ಮೆಚ್ಚಿಕೊಂಡು ಕನಸಿನಲ್ಲಿಯೇ ಅವನ ಪೂರ್ವೋತ್ತರಗಳನ್ನು ವಿಚಾರಿಸಿಕೊಂಡು, ತನ್ನ ಆರಗಿಳಿಯಾದ ತಮಾಲಿಕೆಯ ಮೂಲಕ ಕಂದರ್ಪಕೇತುವಿಗೆ ಪ್ರಣಯಪತ್ರವನ್ನು ಕಳುಹಿಸಿದ್ದಾಳೆ. ಅದು ನನ್ನೊಡನೆ ಇಲ್ಲಿಯೇ ಇದೆ.' ಪ್ರೇಮಪತ್ರವನ್ನು ಪಡೆದು ಓದಿಕೊಂಡು ಆನಂದಪುಳಕಿತನಾದ ಕಂದರ್ಪಕೇತು ಕೂಡಲೇ ಹೊರಟು ಕುಸುಮಪುರವನ್ನು ಸೇರಿದನು. ಮಾರನೆಯ ದಿನ ಪುಷ್ಪಕೇತುವೆಂಬ ವರನೊಡನೆ ವಿವಾಹ ನಿಶ್ಚಿತವಾಗಿದ್ದುದರಿಂದ ಗೋಪ್ಯವಾಗಿ ವಾಸವದತ್ತೆಯನ್ನು ಒಪ್ಪಿಸಿ ಕೊಂಡು, ಮನೋಜವವೆಂಬ ಕುದುರೆಯನ್ನು ಹತ್ತಿ, ತಪ್ಪಿಸಿಕೊಂಡು ಅವಳೊಡನೆ ಅರಣ್ಯವನ್ನು ಸೇರಿದನು. ಕತ್ತಲಾದುದರಿಂದ ಅಲ್ಲಿ ಇಬ್ಬರೂ ಒಂದು ಮರದ ಕೆಳಗೆ ಮಲಗಿದರು. ಬೆಳಿಗ್ಗೆ ಎದ್ದಾಗ ವಾಸವದತ್ತೆ ಕಣ್ಣಿಗೆ ಕಾಣಿಸಲಿಲ್ಲ. ಕಂದರ್ಪಕೇತು ಅವಳನ್ನು ಅರಣ್ಯದಲ್ಲೆಲ್ಲಾ ಹುಡುಕಿ, ಸಿಕ್ಕದಿರಲು ಸಮುದ್ರಪರ್ಯಂತ ನಡೆದು ಪ್ರಾಣಬಿಡಲು ಸಿದ್ಧನಾದನು, ಆಗ

'ನಿನಗೆ ನಿನ್ನ ಪ್ರೇಯಸಿಯ ಸಮಾಗಮ ದೊರೆಯುತ್ತದೆ ; ದಂಡಕಬೇಡ' ಎಂಬ ಆಕಾಶವಾಣಿಯನ್ನು ಕೇಳಿಸಿಕೊಂಡು ಆ ಮಾತಿನ ವಿಶ್ವಾಸದಿಂದ ಅರಣ್ಯದಲ್ಲಿ ಕಾಲ ಕಳೆಯುತ್ತಿರುವಾಗ ಒಂದು ದಿನ ವಾಸವದತ್ತೆಯ ಆಕಾರದ ಶಿಲಾಮೂರ್ತಿಯನ್ನು ಕಂಡನು. ಅವನು ಮುಟ್ಟಿದೊಡನೆ ಅದು ನಿಜವಾದ ವಾಸವದತ್ತೆಯಾಯಿತು. ಆಗ ಅವಳು ನಡೆದ ಕಥೆಯನ್ನು ಅವನಿಗೆ ತಿಳಿಸಿದಳು :—' ನಿನಗಿಂತ ಮೊದಲೆದ್ದ ನಾನು ಉಪಾಹಾರಕ್ಕೆ ಹಣ್ಣುಗಳನ್ನು ಸಂಗ್ರಹಿಸಲು ಹೊರಟು ಬಂದು ಕಿರಾತಸೈನ್ಯದ ಅಧಿಪತಿಯ ಕಣ್ಣಿಗೆ ಬಿದ್ದೆನು. ಅಷ್ಟರಲ್ಲಿ ಮತ್ತೊಂದು ಕಿರಾತ ಸೈನ್ಯವು ಅಲ್ಲಿಗೆ ಬಂದಿತು. ನನ್ನ ನಿಮಿತ್ತವಾಗಿ ಎರಡು ಸೈನ್ಯಗಳಿಗೂ ಭಯಂಕರ ಹೋರಾಟವಾಗಿ ಎಲ್ಲರೂ ಮಡಿದರು. ಅಲ್ಲಿ ಹರಿದ ನೆತ್ತರಿನಿಂದ ತನ್ನ ಆಶ್ರಮ ಕಲುಷಿತವಾಯಿತೆಂದು ಕೋಪಗೊಂಡ ಋಷಿಯು ಕಲ್ಲಾಗೆಂದು ನನ್ನನ್ನು ಶಪಿಸಿದನು. ಕಡೆಗೆ ನಾನು ನಿರ್ದೋಷಿಯೆಂದು ತಿಳಿದು ಪ್ರಿಯನ ಸ್ಪರ್ಶವನ್ನು ಶಾಪಪರಿಹಾರಕವನ್ನಾಗಿ ಕರುಣಿಸಿದನು.' ಹೀಗೆ ಪ್ರಣಯಿಗಳಾದ ಇಬ್ಬರೂ ಸೇರಿ ಸುಖಿಗಳಾದರು.

ಈ ಗದ್ಯಕಾವ್ಯದ ಕಥೆ ಬಹಳ ಚಿಕ್ಕದು. ಭಾರತೀಯ ಸಾಹಿತ್ಯದಲ್ಲಿ ವಾಸವದತ್ತೆಯ ಹೆಸರು ಬಹಳ ಪ್ರಸಿದ್ಧವಾದುದು. ಬೃಹತ್ಕಥೆ ಅಥವಾ ಕಥಾಸರಿತ್ಸಾಗರದ ವಾಸವದತ್ತೆಗೂ ಇಲ್ಲಿನ ವಾಸವದತ್ತೆಗೂ, ಹೆಸರನ್ನು ಬಿಟ್ಟರೆ ಬೇರೆ ಯಾವ ಸಂಬಂಧವೂ ಕಾಣಿಸುವುದಿಲ್ಲ. ಪತಂಜಲಿಯು ಹೆಸರಿಸಿರುವ ವಾಸದತ್ತೆ ಅನುಪಲಬ್ಧ. ಭೋಜನು ತನ್ನ ಶೃಂಗಾರಪ್ರಕಾಶದಲ್ಲಿ 'ಲೀಲಾವತೀ' ಎಂಬ ಆಖ್ಯಾಯಿಕೆಯನ್ನು ಹೇಳಿದ್ದಾನೆ. ಇದೂ ಅನುಪಲಬ್ಧ. ಕನ್ನಡದ ಸುಪ್ರಸಿದ್ಧ ಕವಿಯಾದ ನೇಮಿಚಂದ್ರನು (ಕ್ರಿ.ಶ. 12ನೆಯ ಶತಮಾನ) ಬರೆದಿರುವ 14 ಆಶ್ವಾಸಗಳನ್ನುಳ್ಳ ಲೀಲಾವತಿಯೆಂಬ ಚಂಪೂಕಾವ್ಯಕ್ಕೂ ಈ ಗದ್ಯಕಾವ್ಯಕ್ಕೂ ನಾಯಿಕೆಯ ಹೆಸರಿನ ವ್ಯತ್ಯಾಸವೊಂದನ್ನು ಬಿಟ್ಟರೆ ಉಳಿದ ಅಂಶಗಳಲ್ಲಿ ಸಾದೃಶ್ಯವಿದೆ. ಹೀಗೆ ಈ ಕಥೆಯ ಮೂಲವನ್ನು ಪತ್ತೆ ಹಚ್ಚುವುದು ಕಷ್ಟ. ಪ್ರಸಿದ್ಧವಾದ ವಾಸವದತ್ತೆಯ ಹೆಸರನ್ನು ತೆಗೆದುಕೊಂಡು ನಾನಾ ರೂಪವಾಗಿ ಪ್ರಚಾರದಲ್ಲಿದ್ದ ಕಥಾಭಂಡಾರದ ಪ್ರಿಯ–ಪ್ರೇಯಸಿಯರು ಪರಸ್ಪರನ್ನು ಮದುವೆಗೆ ಮೊದಲೇ ಕನಸಿನಲ್ಲಿ ಕಾಣುವುದು, ವಿಹಂಗಮವಾಣಿ, ಆಕಾಶವಾಣಿ, ಮಾಯಾ ಕುದುರೆ, ಋಷಿಶಾಪ, ಶಾಪಪರಿಹಾರ, ಸ್ಥಿತ್ಯಂತರ, ಸ್ಪರ್ಶದಿಂದ ಪೂರ್ವಸ್ಥಿತಿ ಪ್ರಾಪ್ತಿ ಮುಂತಾದ ಅದ್ಭುತಾಂಶಗಳನ್ನು ಯಥಾಯೋಗ್ಯವಾಗಿ ಬಳಸಿಕೊಂಡು, ಒಡಲನ್ನು ವರ್ಣನೆಗಳಿಂದ ತುಂಬಿ ಸುಬಂಧು ಈ ಗದ್ಯಕಾವ್ಯವನ್ನು ಬರೆದಿದ್ದಾನೆಂದು ಭಾವಿಸಬಹುದು. ಬೃಹತ್ಕಥೆಯಲ್ಲಿ ಬರುವ ಅದ್ಭುತತಂತ್ರಗಳು ಇದರಲ್ಲಿವೆ. ಕಥೆಗೆ ಮುಖ್ಯವಾದ ಮತ್ತು ಕುತೂಹಲವನ್ನು ಕೆರಳಿಸುವ ಅಂಶಗಳೂ ಇಲ್ಲಿಲ್ಲ. ಕಥೆಯು ಅದ್ಭುತವೂ, ಅವಾಸ್ತವಿಕವೂ, ಶುಷ್ಕವೂ ಆಗಿದೆ. ಪಾತ್ರಗಳ ಸ್ವಭಾವಾಭಿವ್ಯಕ್ತಿಗೆ ಸಂದರ್ಭಗಳೇ ಇಲ್ಲ. ಹೃದಯದ ಭಾವಪರಂಪರೆಗಳ ಚಿತ್ರಣವೂ ಇಲ್ಲ. ನಗರ, ರಾಜ, ಸ್ವಪ್ನಸುಂದರಿಯ ಅಂಗಾಂಗಗಳು, ಬುದ್ಧಿವಾದ, ಘೋರಾರಣ್ಯ, ವಸಂತಕಾಲ, ಮಲಯಾನಿಲ, ಸ್ವಯಂವರಪೂರ್ವಾನುರಾಗ, ಸೂರ್ಯಾಸ್ತಮಯ, ಚಂದ್ರೋದಯ, ಪ್ರಯಾಣ, ಯುದ್ಧ, ಸಮುದ್ರ, ಸಮಾಗಮ—ಇವುಗಳ ಸುದೀರ್ಘ ವರ್ಣನೆಯೇ ಈ ಕಾವ್ಯದ ನಿಜವಾದ ವಸ್ತು. ಕಥಾಸಂವಿಧಾನ ಮತ್ತು ಪಾತ್ರಚಿತ್ರಣ



ಕಡೆಗೆ ಕವಿಯ ದೃಷ್ಟಿಯಿರದೆ ಪೂರ್ಣವಾಗಿ ಶಬ್ದಪ್ರಯೋಗಗಳ ಕಡೆಗೆ ವಾಲಿದೆ. ಅರ್ಥಗುಣ ಗೌಣ ; ಶಬ್ದಗುಣ ಪ್ರಧಾನ. ಶ್ಲೇಷೆಯು ಅವನಿಗೆ ಸರ್ವಸ್ವ. ಕವಿಯೇ ತನ್ನ ಗುಣವನ್ನು ಹೀಗೆ ಹೇಳಿಕೊಂಡಿದ್ದಾನೆ :—

ಪ್ರತ್ಯಕ್ಷರ ಶ್ಲೇಷಮಯಪ್ರಬಂಧ ವಿನ್ಯಾಸ ವೈದಗ್ಧ್ಯನಿಧಿರ್ನಿಬಂಧಮ್ ।
ಸರಸ್ವತೀದತ್ತವರ ಪ್ರಸಾದಶ್ಚಕ್ರೇ ಸುಬಂಧುಃ ಸುಜನೈಕಬಂಧುಃ ॥

ಈ ಗುರಿಯ ಸಾಧನೆಯಲ್ಲಿ ಕವಿಯು ಯಶಸ್ವಿಯಾಗಿದ್ದಾನೆ. ಮಾಲತಿ ಪರಿಮಳವಿಲ್ಲವಾದರೂ ತನ್ನ ರೂಪದಿಂದ ಕಣ್ಣುಗಳನ್ನು ರಂಜಿಸುವಂತೆ ಅರ್ಥಗುಣವಿಲ್ಲವಾದರೂ ಕಾವ್ಯ ತನ್ನ ಶಬ್ದ ಮಾಧುರ್ಯದಿಂದ ಆನಂದವನ್ನೊದಗಿಸುತ್ತದೆಯೆಂದು ಅವನ ನಂಬುಗೆ.* ಇಂತಹ ಶಬ್ದ ಮಾಧುರ್ಯವು ಈ ಕಾವ್ಯದಿಂದ ಯಥೇಚ್ಛವಾಗಿ ಲಭಿಸುತ್ತದೆ. ಇವನದು ಗೌಡೀ ಶೈಲಿ. ದೀರ್ಘಸಮಾಸಗಳು ಅಧಿಕವಾಗಿವೆ. ಬಿಡಿಬಿಡಿ ಮಾತುಗಳ ಸುಂದರವಾದ ಚಿಕ್ಕವಾಕ್ಯಗಳಿಗೂ ಕೊರತೆಯಿಲ್ಲ. ಶೈಲಿಯ ವೈವಿಧ್ಯಪ್ರದರ್ಶನಕ್ಕೆ ಕವಿಯು ಪ್ರಯತ್ನಿಸಿದ್ದಾನೆ. ಅವನ ಶಬ್ದ ಭಂಡಾರ ತುಂಬಿದುದು ; ಶ್ಲಿಷ್ಟಪದಗಳು ಅಹಮಹಮಿಕೆಯಿಂದ ಮುಂದೆ ಬರುತ್ತವೆ. ಶ್ರವಣ ಮಾಧುರ್ಯವನ್ನುಂಟುಮಾಡಲು ಸಮರ್ಥವಾದ ಯಮಕಗಳು ಹಾಸುಹೊಕ್ಕಾಗಿವೆ. ಒಂದೇ ಸಮನೆ ಮತ್ತೆ ಮತ್ತೆ ಯಮಕಗಳು ಬಂದರೆ ಅರುಚಿಯುಂಟಾಗುತ್ತದೆ. ಬೇಸರವಾಗುತ್ತದೆ. ಹೇರಳವಾಗಿ ದೀರ್ಘಸಮಾಸಗಳು ಬಂದರೆ ಅಭಿಪ್ರಾಯವನ್ನು ಗ್ರಹಿಸುವುದು ಬುದ್ಧಿಗೆ ಭಾರವಾಗುತ್ತದೆ. ಈ ಗದ್ಯಕಾವ್ಯದಲ್ಲಿ ಕೆಲವು ಕಡೆ ಇಂತಹ ಅನುಭವವಾಗುತ್ತದೆ. ಈ ಗದ್ಯಕಾವ್ಯದಲ್ಲಿ ಆರ್ಯಾ, ಶಾರ್ದೂಲವಿಕ್ರೀಡಿತ, ಶಿಖರಿಣೀ ಮತ್ತು ಸ್ರಗ್ಧರಾಛಂದಸ್ಸಿನ ಪದ್ಯಗಳಿವೆ. ಈ ಪದ್ಯಗಳ ರಚನೆಯನ್ನು ಗಮನಿಸಿದರೆ ಸುಬಂಧು ಪದ್ಯಕಾವ್ಯ ರಚಿಸುವುದರಲ್ಲಿಯೂ ಕೀರ್ತಿಶಾಲಿಯಾಗುತ್ತಿದ್ದನೆಂದು ತೋರದಿರದು. ಕವಿಯು ಬಳಸಿರುವ ಯಮಕ, ದೀಪಕ, ರೂಪಕ, ಉಪಮಾ, ಉತ್ಪ್ರೇಕ್ಷಾ, ವಿರೋಧಾಭಾಸ, ಪರಿಸಂಖ್ಯಾ ಮುಂತಾದ ಅಲಂಕಾರಗಳಿಗೆ ಶ್ಲೇಷೆಯೇ ಜೀವಾಳ. ಬಹಳಮಟ್ಟಿಗೆ ಅಲಂಕಾರಗಳು ಪುಂಜಪುಂಜವಾಗಿ ಬಂದಿವೆ.

ಕಾವ್ಯವು ಸರಸ್ವತೀಸ್ತೋತ್ರದಿಂದ ಪ್ರಾರಂಭವಾಗಿದೆ. ನಂತರ ಬಂದಿರುವ ಹಸನ್ಮುಖಿಯಾದ ಹರಿಯ ಪ್ರಾರ್ಥನೆ ಚಮತ್ಕಾರವಾಗಿದೆ :—

ಖಿನ್ನೋಽಸಿ ಮುಂಚ ಶೈಲಂ ಬಿಭೃಮೋ ವಯಮಿತಿ ವದತ್ಸು ಶಿಥಿಲಭುಜಃ ।
ಭರಭುಗ್ನವಿತತಬಾಹುಷು ಗೋಪೇಷು ಹಸನ್ ಹರಿರ್ಜಯತಿ ॥

ಪೀಠಿಕಾ ಭಾಗದಲ್ಲಿ ಕವಿಯು ದುರ್ಜನರನ್ನು ದೂಷಿಸಿ, ಸಜ್ಜನರನ್ನು ಪ್ರಶಂಸಿಸಿ ತನ್ನ ಕಾವ್ಯ ರಚನೆಯ ರೀತಿಯನ್ನು ಸೂಚಿಸಿದ್ದಾನೆ. ಈ ಖಲನಿಂದನೆಯಲ್ಲಿ ಶ್ಲೇಷ ಮತ್ತು ಅರ್ಥಾಂತರನ್ಯಾಸಾಲಂಕಾರಗಳು, ಸರಳವೂ ಸುಂದರವೂ ಆಗಿವೆ :—

ವಿಷಧರತೋಽಪ್ಯತಿವಿಷಮಃ ಖಲ ಇತಿ ನ ಮೃಷಾ ವದಂತಿ ವಿದ್ವಾಂಸಃ ।
ಯದಯಂ ನಕುಲದ್ವೇಷೀ ಸಕುಲದ್ವೇಷೀ ಪುನಃ ಪಿಶುನಃ ॥

* ಅವಿದಿತಗುಣಾಪಿ ಸತ್ಕವಿಭಣಿತಿಃ ಕರ್ಣೇಷು ವಮತಿ ಮಧುಧಾರಾಮ್ ।
ಅನಧಿಗತಪರಿಮಲಾಪಿ ಹಿ ಹರತಿ ದೃಶಂ ಮಾಲತೀಮಾಲಾ ॥—ವಾಸವದತ್ತಾ.

ಶ್ಲೇಷಮೂಲಕವಾದ ವಿರೋಧಾಭಾಸಚಿತ್ರಣದಲ್ಲಿ ಈ ಕವಿಯದು ಎತ್ತಿದ ಕೈ. 'ಧನದೇನಾಪಿ ಪ್ರಚೇತಸಾ',—ಉದಾರಿಯೂ ಜ್ಞಾನಿಯೂ ಆಗಿದ್ದನೆಂದು ವರ್ಣಿಸುವಾಗ ಬಳಸಿರುವ ಕುಬೇರನಾದರೂ ವರುಣನೆಂಬ ವಿರೋಧವು ಚಮತ್ಕಾರವಾಗಿದೆ. ಇಂತಹ ವಿರೋಧಾಭಾಸಗಳು ಈ ಕಾವ್ಯದಲ್ಲಿ ಸಾಕಷ್ಟು ದೊರೆಯುತ್ತವೆ. ಒಂದು ಉದಾಹರಣೆ :—

ವಿದ್ಯಾಧರೋಽಪಿ ಸುಮನಾಃ, ಧೃತರಾಷ್ಟ್ರೋಽಪಿ ಗುಣಪ್ರಿಯಃ, ಕ್ಷಮಾನುಗತೋಽಪಿ ಸುಧರ್ಮಾಶ್ರಿತೋ, ಬೃಹನ್ನಲಾನುಭಾವೋಽಪ್ಯಂತಃಸರಲೋ, ಮಹಿಷೇ ಸಂಭವೋಽಪಿ ವೃಷೋತ್ಪಾದೀ, ಅತರಲೋಽಪಿ ಮಹಾನಾಯಕೋ ರಾಜಾ,

ಈ ವಾಯುವರ್ಣನೆಯ ಯಮಕವು ಶ್ರವಣಮಾಧುರ್ಯವನ್ನುಂಟುಮಾಡುತ್ತದೆ :—

ಆಂದೋಲಿತಕುಸುಮಕೇಸರೇ ಕೇಶರೇಣುಮುಷಿ ರಣಿತಮಧುರಮಣೀನಾಂ ರಮಣೀನಾಂ ವಿಕಚಕುಮುದಾಕರೇ ಮಂದಾಕರೇ———

ಅತಿಯಾದ ಯಮಕಾನುಪ್ರಾಸಗಳಿಂದ ಬೇಸರವುಂಟಾಗುತ್ತದೆ, ಅತಿ ಸರ್ವತ್ರ ವರ್ಜಯೇತ್ ಎಂಬ ಲೋಕೋಕ್ತಿಯೇ ಹುಟ್ಟಿಕೊಂಡಿದೆ. ಈ ರೇವಾವರ್ಣನೆಯ ಯಮಕಾನುಪ್ರಾಸಗಳು ಭಾರವೆನಿಸುತ್ತವೆ ; ದೀರ್ಘಸಮಾಸವೂ ಕ್ಲೇಶದಾಯಕವಾಗುತ್ತದೆ :—

ಮದಕಲಕಲಹಂಸಸಾರಸರಸಿತೋದ್ಭ್ರಾಂತಭಾಃಕೂಟವಿಕಟಪುಚ್ಛಚ್ಛಟಾವ್ಯಾಧೂತವಿಕಚಕಮಲಖಂಡವಿಗಲಿತಮಕರಂದಬಿಂದುಸಂದೋಹಸುರಭಿತಸಲಿಲಯಾ......

ಆದರೆ ಎಲ್ಲಾ ಕಡೆ ದೀರ್ಘಸಮಾಸಗಳು ಅರ್ಥಕ್ಕೆ ತೊಡಕನ್ನುಂಟುಮಾಡಿಲ್ಲ. ಇಂತಹ ಪ್ರೌಢಶೈಲಿಯು ಭಾರತೀಯರಿಗೆ ಒಗ್ಗಿಹೋಗಿದೆ. ದೀರ್ಘಸಮಾಸವಿಲ್ಲದ ಭಾಗಗಳೂ ಸಾಕಷ್ಟಿವೆ, ಒಂದು ಉದಾಹರಣೆ :—

ಕೃತಾಪಕಾರೇಣಾಽಪಿ ವಿಧಿನೋಪಕೃತಿರೇವ ಕೃತಾ ಯದಯಂ ಲೋಚನಗೋಚರ ತಾಂ ನೀತಃ ಸಮುದ್ರಃ । ತದತ್ರ ದೇಹಮುತ್ಸೃಜ್ಯ ಪ್ರಿಯಾವಿರಹಾಗ್ನಿಂ ನಿರ್ವಾಪಯಾಮಿ। ಯದಮುನಾತುರಸ್ಯ ದೇಹತ್ಯಾಗೋ ನ ವಿಹಿತಸ್ತಥಾಽಪಿ ಕಾರ್ಯಃ । ನ ಖಲು ಸರ್ವಃ ಕಾರ್ಯಮಕಾರ್ಯಂ ವಾ ಕರೋತಿ। ಇತ್ಯಸಾರೇ ಕೇನ ಕಿಂ ವಾ ನ ಕೃತಂ । ತಥಾಹಿ। ಗುರುದಾರ ಗ್ರಹಣಂ ದ್ವಿಜರಾಜೋಽಕರೋತ್.

ಶೃಂಖಲಾಬಂಧದಲ್ಲಿ ಕವಿಯು ಮಹಾಸಮರ್ಥ. ಶ್ಲೇಷೆಯಲ್ಲಿ ಇವನನ್ನು ಮೀರಿಸುವವರಿಲ್ಲ. ಸಭಂಗಾಭಂಗಶ್ಲೇಷೆಗಳಿಗೆ ಒಂದು ಉದಾಹರಣೆ :—

ರಾಜಸೇನರಹಿತೋ ರಾಜಸೇ ನರಹಿತೋ, ಧ್ರುವಂ ವಿಶಾರದಾ ವಿಶಾರದಾಭ್ರವಿಶದಾ, ವಿಶದಾತ್ಮನೀನಮಹಿಮಾ ಮಹಿಮಾ ಮಹಿಮಾನರಕ್ಷಣಕ್ಷಮಾ, ಕ್ಷಮಾತಿಲಕ ಧೀರತಾಧೀರ ಮನಸಿ ಭೂತತಾಘಾತತಾ ವಚಸಿ.........



ಪ್ರಾಯಕವಾಗಿ ಇವನ ಎಲ್ಲಾ ಅಲಂಕಾರಗಳಲ್ಲಿಯೂ ಶ್ಲೇಷೆಯಿದೆ. ಶ್ಲೇಷಮೂಲಕವಾದ ಉಪಮೆಗಳು :—

ಜಲನಿಧಿರಿವ ವಾಹಿನೀಶತನಾಯಕಃ, ಸಮಕರಪ್ರಚಾರಶ್ಚ ;......ಹರಇವ ಮಹಾಸೇನಾನುಗತೋ ನಿವರ್ತಿತಮಾರಶ್ಚ, ಇತ್ಯಾದಿ. ಇಲ್ಲಿ ಉಪಮೆಗಳ ಒಂದು ಪುಂಜವೇ ಇದೆ.

ಉತ್ಪ್ರೇಕ್ಷೆಗಳಿಂದ ವರ್ಣನೆಗಳು ಹೆಚ್ಚು ಶೋಭಿಸುತ್ತವೆ. ಇವರಲ್ಲಿ ಬಾಣನು ಅದ್ವಿತೀಯ. ಇತರರ ಉತ್ಪ್ರೇಕ್ಷೆಗಳು ಇವನ ಮುಂದೆ ಮಂಕಾಗಿ ಕಾಣುತ್ತವೆ. ಸುಬಂಧುವಿನ ಉತ್ಪ್ರೇಕ್ಷೆಗೆ ಒಂದು ಉದಾಹರಣೆ :—

ದಧಿಧವಲೇ ಕಾಲಕ್ಷಪಣಕಗ್ರಾಸಪಿಂಡ ಇವ, ನಿಶಾಯಮುನಾಫೇನಪುಂಜ ಇವ, ಮೇನಕಾನಖಮಾರ್ಜನಶಿಲಾಶಕಲ ಇವ......ಇತ್ಯಾದಿ.

ಇವನಶ್ಲೇಷ ಮೂಲಕವಾದ ಸಹೋಕ್ತಿಗೆ ಒಂದು ಚಿಕ್ಕ ನಿದರ್ಶನ :—

ಸಮಂ ದ್ವಿಷಾಂ ಧನುಷಾಂ ಚ ಜೀವಾಕೃಷ್ಟಿಂ ಯೋಧಾಶ್ಚಕ್ರುಃ ।

ಮಾಲಾದೀಪಕಾಲಂಕಾರದ ಚಾತುರ್ಯ—

ಯಸ್ಯ ಚ ಸಮರಭುವಿ ಭುಜದಂಡೇನ ಕೋದಂಡಂ, ಕೋದಂಡೇನ ಶರಾಃ, ಶರೈರರಿಶಿರಃ, ತೇನಾಪಿ ಭೂಮಂಡಲಂ, ತೇನ ಚಾನನುಭೂತಪೂರ್ವೋ ನಾಯಕಃ, ನಾಯಕೇನ ಕೀರ್ತಿಃ, ಕೀರ್ತ್ಯಾ ಚ ಸಪ್ತ ಸಾಗರಾಃ, ಸಾಗರೈಃ ಕೃತಯುಗಾದಿರಾಜಚರಿತಸ್ಮರಣಂ, ಅನೇನ ಚ ಸ್ಥೈರ್ಯಮಮುನಾ ಚ ಪ್ರತಿಕ್ಷಣಮಾಶ್ಚರ್ಯಮಾಸಾದಿತಮ್ ।

ಇಲ್ಲಿ ಕೊನೆಯಲ್ಲಿರುವ 'ಆಸಾದಿತಂ' ಎಂಬ ಕ್ರಿಯೆ ವಾಕ್ಯದ ಎಲ್ಲ ಕರ್ತೃಗಳೊಡನೆ ಅನ್ವಯಿಸುವುದರಲ್ಲಿ ಚಮತ್ಕಾರವಿದೆ. 'ಕೋದಂಡೇನ ಶರಾಃ ಶರೈರರಿಶಿರಸ್ತೇನಾಽಪಿ ಭೂಮಂಡಲಂ, ಎಂಬುದು ಶಾರ್ದೂಲವಿಕ್ರೀಡಿತದ ಪಾದವಾದ್ದರಿಂದ ಈ ಗದ್ಯ ವೃತ್ತಗಂಧಿಯಾಗಿಯೂ ಇದೆ.

ಚಂದ್ರೋದಯವರ್ಣನೆಯಲ್ಲಿರುವ ರೂಪಕ :—

ಕ್ಷಣೇನ ಚ ಕ್ಷಣದಾರಾಜಕಸ್ಯಕಾಕಂದುಕಃ; ಕಂದರ್ಪ ಕನಕದರ್ಪಣಃ.........ಇತ್ಯಾದಿ

ಶ್ಲೇಷಮೂಲವಾದ ಪರಿಸಂಖ್ಯಾಲಂಕಾರ :—

ಯತ್ರ ಚ ಶಾಸತಿ ಧರಣಿಮಂಡಲಂ ಛಲನಿಗ್ರಹಪ್ರಯೋಗೋ ವಾದೇಷು, ನಾಸ್ತಿಕತಾ ಚಾರ್ವಾಕೇಷು, ಕಂಟಕಪ್ರಯೋಗೋ ನಿಯೋಗೇಷು ......ಇತ್ಯಾದಿ.

ಕವಿಯ ಸಂಭಾವನಾರೀತಿಗೆ ಒಂದು ಉದಾಹರಣೆ :—

ತ್ವತ್ಕೃತೇ ಯ್ಯಾನಯಾ ಯಾತನಾಽನುಭೂತಾ ಸಾ ಯದಿ ನಭಃ ಪತ್ರಾಯತೇ, ಸಾಗರೋ ಮೇಲಾನಂದಾಯತೇ ಬ್ರಹ್ಮಾ ಲಿಪಿಕಾರಾಯತೇ, ಭುಜಗಪತಿರ್ವಾ ಕಥಕಾಯತೇ ತದಾ ಕಿಮಪಿ ಕಥಮಪ್ಯನೇಕೈರ್ಯುಗಸಹಸ್ರೈರಭಿಲಿಖ್ಯತೇ ಕಥ್ಯತೇ ವಾ[1] ।

---

1. ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧುಪಾತ್ರೇ
ಸುರತರುವರಶಾಖಾ ಲೇಖನೀಪತ್ರಮುರ್ವೀ ।
ಲಿಖತಿ ಗೃಹೀತ್ವಾ ಶಾರದಾ ಸರ್ವಕಾಲಮ್
ತದಪಿ ಯದಿ ತವ ಗುಣಾನಾಮೀಶ ಪಾರಂ ನ ಯಾತಿ ।—ಮಹಿಮ್ನಸ್ತೋತ್ರದ ಪದ್ಯ.

ಕಾಡಿನಲ್ಲಿ ವಾಸವದತ್ತೆಯ ಶಾಪಪರಿಹಾರವಾದ ಕೂಡಲೇ ಕಥೆಯು ಮುಗಿಯುತ್ತದೆ. ಕೇವಲ ಒಂದು ಚಿಕ್ಕ ವಾಕ್ಯವು ನಾಯಕ ನಾಯಿಕೆಯರನ್ನು ನಗರಕ್ಕೆ ತಲುಪಿಸಿ, ಅವರು ಸಕಲ ಸುಖಗಳನ್ನೂ ಭೋಗಿಸಿದರೆಂದು ತಿಳಿಸುತ್ತದೆ. ಅನ್ಯೋನ್ಯ ಪ್ರಾಪ್ತಿಯನ್ನು ಬೆಳೆಸಿ ದಾಂಪತ್ಯ ಜೀವನದ ರಸನಿಮಿಷಗಳನ್ನು ಕೈಬಿಡಲಾಗಿದೆ.

ಶ್ಲೇಷೆಗೆ ವ್ಯಾಮೋಹಗೊಳ್ಳದಿದ್ದರೆ ಸುಬಂಧುವಿನ ಶೈಲಿ ಹೆಚ್ಚು ಹೃದ್ಯವಾಗುತ್ತಿದ್ದಿತು. ಯಮಕಾನುಪ್ರಾಸಗಳ ಕಡೆಗೆ ಕವಿಯ ದೃಷ್ಟಿ ಕೇಂದ್ರೀಕೃತವಾಗಿರುವುದರಿಂದ ಅಕ್ಷರಾಡಂಬರ ಅಧಿಕವಾಗಿ ರಸಭಾವಗಳ ಮಾಧುರ್ಯ ಮಂಕಾಗಿದೆ. ಅಲಂಕಾರಗಳ ಚಮತ್ಕಾರಕ್ಕೆ ಶ್ಲೇಷೆಯ ಗ್ರಹಣ ಹಿಡಿದಿದೆ. ಶಬ್ದಚಮತ್ಕಾರಪ್ರಿಯರಾದ ಪಂಡಿತರನ್ನು ಈ ಪದ್ಯಕಾವ್ಯ ಪೂರ್ಣವಾಗಿ ತೃಪ್ತಿಪಡಿಸುತ್ತದೆ. ಲೋಕಪ್ರತಿಬಿಂಬ ಈ ಕಾವ್ಯದಲ್ಲಿ ಕಾಣಿಸದು. ಕಲ್ಪನಾಲೋಕದ ರಮ್ಯತೆಯೂ ಸಾಲದು. ಇವನು ಗದ್ಯಕಾವ್ಯದ ಒಂದು ವಿನೂತನ ಸಂಪ್ರದಾಯವನ್ನು ಪ್ರಾರಂಭಿಸಿ 'ವಕ್ರೋಕ್ತಿಮಾರ್ಗನಿಪುಣ' ನೆಂಬ ಕೀರ್ತಿಗೆ ಪಾತ್ರನಾಗಿದ್ದಾನೆ.

ಜಗದ್ಧರ, ತ್ರಿವಿಕ್ರಮ, ತಿಮ್ಮಯಸೂರಿ, ರಾಮದೇವ ಮಿಶ್ರ, ಸಿದ್ಧ ಚಂದ್ರಗಣಿ, ನರಸಿಂಹಸೇನ, ನಾರಾಯಣ ಮತ್ತು ಶೃಂಗಾರಗುಪ್ತ. ಸರ್ವಚಂದ್ರ, ಶಿವರಾಮ, ಪ್ರಭಾಕರ, ಸರ್ವರಕ್ಷಿತ, ಕಾಶೀರಾಮ, ರಂಗನಾಥ, ಆರ್. ವಿ. ಕೃಷ್ಣಮಾಚಾರ್ಯ ಮತ್ತು ಕೆಲವರು ಅಜ್ಞಾತರು ವಾಸವದತ್ತೆಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಟಿ. ನರಸಿಂಹಯ್ಯಂಗಾರ್ ಅವರು ವಾಸವದತ್ತಾ ಕಥಾಸಾರವನ್ನು ಬರೆದಿದ್ದಾರೆ.

ಹರ್ಷಚರಿತ :—

'ಆಖ್ಯಾಯಿಕಾ' ರೂಪದಲ್ಲಿರುವ ಈ ಸುಪ್ರಸಿದ್ಧ ಐತಿಹಾಸಿಕ ಗದ್ಯಕಾವ್ಯದ ಕರ್ತೃ ಬಾಣಭಟ್ಟ. ಇವನು ಸ್ಥಾಣೇಶ್ವರದ ಹರ್ಷಚಕ್ರವರ್ತಿಯ (ಕ್ರಿ.ಶ. 606–647) ಆಸ್ಥಾನದಲ್ಲಿ ಮನ್ನಣೆ ಪಡೆದ[1] ಮಹಾದೇವಿ. ಇವನ ಕಾಲದೇಶಗಳ ವಿಷಯದಲ್ಲಿ ಯಾವ ಸಂದೇಶವೂ ಇಲ್ಲ. ಬಾಣನು ತನ್ನ ಹರ್ಷಚರಿತದ ಮೊದಲಿನ ಮೂರು ಉಚ್ಛ್ವಾಸಗಳಲ್ಲಿ ನೇರವಾಗಿಯೂ, ಕಾದಂಬರಿಯಲ್ಲಿ ವೈಶಂಪಾಯನಶುಕವೃತ್ತಾಂತದ ವ್ಯಾಜದಿಂದಲೂ ತನ್ನ ಜೀವಿತವನ್ನು ತಿಳಿಸಿದ್ದಾನೆ. ಹರ್ಷಚರಿತದಿಂದ ಆ ಕಾಲದ ದೇಶದ ಪರಿಸ್ಥಿತಿ ಮತ್ತು ಸಾಮಾಜಿಕ ಜೀವನಗಳ ಪರಿಚಯವೂ ಆಗುತ್ತದೆ.

ದುರ್ವಾಸಶಾಪದಿಂದ ಭೂಲೋಕದಲ್ಲಿ ಅವತರಿಸಿದ ಸರಸ್ವತಿಯು ದಧೀಚಮುನಿಯ ಸಂಬಂಧದಿಂದ ಮಗನನ್ನು ಹಡೆದಳು. ಈ ಸಾರಸ್ವತಸುತನ ಸಹವಾಸದಿಂದ ದಧೀಚನ

1. "ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು
ನಾಮ್ನೈವ ಕೇವಲಮಜಾಯತ ವಸ್ತುತಸ್ತು ।
ಶ್ರೀಹರ್ಷ ಏಷ ನಿಜಸಂಸದಿ ಯೇನ ರಾಜ್ಞಾ
ಸಂಪೂಜಿತಃ ಕನಕಕೋಟಿಶತೇನ ಬಾಣಃ ॥

—ಸೊಡ್ಢಲನ ಉದಯಸುಂದರೀ ಕಥಾ



ಸೋದರನ ಮಗನಾದ ವತ್ಸನು ಮಹತ್ವ ಪಡೆದನು. ಇವನಿಂದ ವಾತ್ಸ್ಯಾಯನ ಗೋತ್ರವು ಪ್ರಾರಂಭಗೊಂಡಿತು. ಈ ಗೋತ್ರದಲ್ಲಿ ಕುಬೇರನು ಜನಿಸಿದನು. ಕುಭೇರನ ಮಗ ಅರ್ಥಪತಿ ; ಮೊಮ್ಮಗ ಚಿತ್ರಭಾನು. ಚಿತ್ರಭಾನು ಮತ್ತು ರಾಜದೇವಿಯರ ಮಗನೇ ಬಾಣ, ಶೋಣಾ ನದಿಯ ತಟದಲ್ಲಿದ್ದ ಪ್ರೀತಿಕೂಟ ಇವನ ಜನ್ಮಸ್ಥಳ. ಇವನು ಬಾಲ್ಯದಲ್ಲಿ ತಾಯಿಯನ್ನೂ, ಹದಿನಾಲ್ಕನೇ ವಯಸ್ಸಿನಲ್ಲಿ ತಂದೆಯನ್ನೂ ಕಳೆದುಕೊಂಡು ಅನಾಥನಾದನು. ಬಂಧುಗಳು ಇವನನ್ನು ನಿರ್ಲಕ್ಷಿಸಿದರು. ನಾನಾ ಕಲಾಕುಶಲರು, ಕವಿಗಳು, ವಿಟರು, ಗಾಯಕರು, ವೈದ್ಯರು ಮುಂತಾದವರ ಜೊತೆಗೂಡಿ, ನಾನಾ ದೇಶಪರ್ಯಟನೆ ಮಾಡಿ "ಮಹಾಭುಜಂಗ" ನೆಂಬ ಕುಪ್ರಸಿದ್ಧಿಯನ್ನು ಪಡೆದನು. ಪೂರ್ವಜನ್ಮದ ಪುಣ್ಯದಿಂದಲೋ ವಂಶಪರಂಪರಾಗತ ಸಂಸ್ಕಾರ ವಿಶೇಷದಿಂದಲೋ ವಿಶ್ವಪಾಠಶಾಲೆಯಲ್ಲಿ ಪಾಂಡಿತ್ಯಪಡೆದು ಪತ್ರಿಭಾವಂತನಾಗಿ ತನ್ನೂರಿಗೆ ಹಿಂದಿರುಗಿದನು. ಹರ್ಷನ ಸಂಬಂಧಿಕನಾದ ಕೃಷ್ಣನ ಆಸರೆಯಿಂದ ರಾಜದರ್ಶನ ದೊರೆಯಿತು, ಪ್ರತಿಭಾಪ್ರಕರ್ಷವನ್ನು ಕಂಡು ಮೆಚ್ಚಿದ ದೊರೆಯು ಇವನನ್ನು ಅಭೂತಪೂರ್ವವಾಗಿ ಗೌರವಿಸಿದನು. ಅವ್ಯವಸ್ಥಿತ ಜೀವನವು ಕೊನೆಗೊಂಡು ಆಸ್ಥಾನಕವಿಯಾಗಿ ವಿರಾಜಿಸಿದನು. ಆತ್ಮಕಥೆಯನ್ನು ವಿಸ್ತಾರವಾಗಿ ಹೇಳಿಕೊಂಡಿರುವ ಬಾಣನು ತನ್ನ ಪತ್ನಿ, ಪುತ್ರರ ವಿಚಾರವಾಗಿ ಮೌನ ತಾಳಿದ್ದಾನೆ. ಹರ್ಷಚರಿತವನ್ನು ಬರೆದಾಗ ಪ್ರಾಯಶಃ ಆತನಿಗೆ ಮಕ್ಕಳಾಗಿರಲಿಲ್ಲವೆಂದು ತೋರುತ್ತದೆ. ಅರ್ಧಾಂತವಾಗಿ ನಿಂತಿದ್ದ ಕಾದಂಬರಿಯನ್ನು ಪೂರ್ಣಗೊಳಿಸಿ ಬಾಣನ ಮಗನು ಸಹೃದಯರ ಸಂತಾಪವನ್ನು ಪರಿಹರಿಸಿದನು*. ಇವನ ಹೆಸರು ಭೂಷಣ ಭಟ್ಟನೆಂದು ಕೆಲವರೂ, ಪುಲಿನ ಅಥವಾ ಪುಲಿಂದಭಟ್ಟನೆಂದು ಮತ್ತೆ ಕೆಲವರೂ ಹೇಳುತ್ತಾರೆ. ಧನಪಾಲನ ತಿಲಕ ಮಂಜರಿಯ ಒಂದು ಪದ್ಯದಲ್ಲಿ ಶ್ಲೇಷೆಯ ಮೂಲಕ ಬಾಣನ ಮಗನ ಹೆಸರು ಪುಲೀಂದ್ರನೆಂದು ಹೇಳಲಾಗಿದೆ†. ಬಾಣನಿಗೆ ಎಷ್ಟು ಮಕ್ಕಳಿದ್ದರೆಂಬುದು ತಿಳಿಯದು. ಮಹಾಕವಿಯಾದ ಮಯೂರನ ಸೋದರಿಯು ಬಾಣನ ಹೆಂಡತಿಯೆಂದು ಪ್ರವಾದದಿಂದ ತಿಳಿದುಬರುತ್ತದೆ.

* ಯಾತೇ ದಿವಂ ಪಿತರಿ ತದ್ವಚಸೈವ ಸಾರ್ಧಂ
ವಿಚ್ಛೇದಮಾಪ ಭುವಿ ಯಸ್ತು ಕಥಾಪ್ರಬಂಧಃ
ದುಃಖಂ ಸತಾಂ ತದಸಮಾಪ್ತಿಕೃತಂ ವಿಲೋಕ್ಯ
ಪ್ರಾರಬ್ಧ ಏಷ ಚ ಮಯಾ ನ ಕವಿತ್ವದರ್ಪಾತ್ ॥
ಕಾದಂಬರೀ ರಸಭರೇಣ ಸಮಸ್ತ ಏವ
ಮತ್ತೋ ನ ಕಿಂಚಿದಪಿ ಚೇತಯತೇ ಜನೋಽಯಮ್ ।
ಭೀತೋಽಸ್ಮಿ ಯನ್ನ ರಸವರ್ಣವಿವರ್ಜಿತೇನ
ತಚ್ಛೇಷಮಾತ್ಮ ವಚಸಾಪ್ಯನುಸಂದಧಾನಃ ॥

—ಕಾದಂಬರೀ ಉತ್ತರಾರ್ಧ

† ಕೇವಲೋಽಪಿ ಸ್ಫುರನ್ ಬಾಣಃ ಕರೋತಿ ವಿಮದಾನ್ ಕವೀನ್ ।
ಕಿಂಪುನಃಕ್ಲೃಪ್ತಸಂಧಾನಃ ಪುಲೀಂಧ್ರಕೃತಸನ್ನಿಧಿಃ ॥

—ಧನಪಾಲನ 'ತಿಲಕಮಂಜರಿ'

ಸಾಧಾರಣವಾಗಿ ಕವಿಗಳು ದರಿದ್ರರು ; ಆದರೆ ಬಾಣನು ಮಾತ್ರ ಅದಕ್ಕೆ ಅಪವಾದವಾಗಿದ್ದನು. ಅವನ ಐಹಿಕ ಸುಖಗಳಿಗೆ ಯಾವ ಲೋಪವೂ ಇರಲಿಲ್ಲ. ಬಾಣನು ಜೀವಿಸಿದ್ದ ಕ್ರಿ. ಶ. 7ನೆಯ ಶತಮಾನವು ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಬಹಳ ಮಹತ್ವವನ್ನುಳ್ಳ ಕಾಲ. ಈ ಕಾಲದಲ್ಲಿಯೇ ಮಹಾಕವಿಯಾದ ಮಯೂರ, ಜೈನಕವಿಯಾದ ಮಾನತುಂಗ, ಭಟ್ಟಿಕಾವ್ಯದ ಕರ್ತೃವಾದ ಭಟ್ಟಿ, ನ್ಯಾಯವಾರ್ತಿಕವನ್ನು ಬರೆದ ಉದ್ಯೋತಕರ ಮತ್ತು ದಶಕುಮಾರಚರಿತೆಯ ಕರ್ತೃ ದಂಡಿಯೂ ಜೀವಿಸಿದ್ದರು.

ಬಾಣನು 'ಹರ್ಷಚರಿತ' ವೆಂಬ ಆಖ್ಯಾಯಿಕೆಯನ್ನೂ. 'ಕಾದಂಬರೀ ' ಎಂಬ ಕಥೆಯನ್ನೂ ಬರೆದಿದ್ದಾನೆ. ಕ್ಷೇಮೇಂದ್ರನು ತನ್ನ ಔಚಿತ್ಯವಿಚಾರಚರ್ಚೆಯಲ್ಲಿ ಬಾಣನದೆಂದು ಉದ್ಧರಿಸಿರುವ. ಕಾದಂಬರಿಯ ವಿರಹಾವಸ್ಥೆಯನ್ನು ವರ್ಣಿಸುವ ಒಂದು ಪದ್ಯದಿಂದ ಬಾಣನು ಒಂದು ಪದ್ಯಕಾದಂಬರಿಯನ್ನೂ ಬರೆದಿದ್ದಾನೆಂದು ಊಹಿಸಬೇಕಾಗುತ್ತದೆ. ಆದರೆ ಇದು ಇಂದು ಅನುಪಲಬ್ಧ. ಬಾಣನು ಚಂಡೀಶತಕವೆಂಬ ಒಂದು ಸ್ತೋತ್ರಕಾವ್ಯವನ್ನೂ ಬರೆದಿದ್ದಾನೆ. ಶಿವಾಷ್ಟಕ, ಮುಕುಟತಾಡಿತಕ, ಶಾರದಾಚಂದ್ರಿಕ ಮತ್ತು ಪಾರ್ವತೀಪರಿಣಯ ಗಳು ಬಾಣನ ಹೆಸರಿನಲ್ಲಿ ಪ್ರಚಾರದಲ್ಲಿವೆ. ಶಿವಾಷ್ಟಕದಲ್ಲಿ ತ್ರಿಪುರಾಸುರನನ್ನು ಗೆದ್ದ ಶಿವನ ಸ್ತೋತ್ರ ಇದೆ, ಈ ಕೃತಿಯಲ್ಲಿ ಯಾವ ಕವಿಯ ಹೆಸರೂ ಇಲ್ಲ. ಆದರೆ ಸುಭಾಷಿತ ಸಂಗ್ರಹಗಳಲ್ಲಿ ಬಾಣನ ಹೆಸರಿನಲ್ಲಿ ಈ ಸ್ತೋತ್ರದ ಪದ್ಯಗಳನ್ನು ಸಂಗ್ರಹಿಸಲಾಗಿದೆ, ಭೋಜನು ತನ್ನ ಶೃಂಗಾರಪ್ರಕಾಶದಲ್ಲಿ ಉದ್ಧರಿಸಿರುವ ಒಂದು ಪದ್ಯವನ್ನು ಬಿಟ್ಟರೆ ಮುಕುಟತಾಡಿತಕದ ವಿಷಯದಲ್ಲಿ ಮತ್ತೇನೂ ತಿಳಿಯದು1, ಪಾರ್ವತೀಪರಿಣಯವೆಂಬ ನಾಟಕದ ಕೃತಿ ಬಾಣನೆಂದು ಕೆಲವರೂ, ವಾಮನ ಭಟ್ಟಬಾಣನೆಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ. ಶಾರದಾಚಂದ್ರಿಕಾ ಎಂಬ ನಾಟಕದ ಕರ್ತೃ ಬಾಣನೆಂದು ಶಾರದಾತನಯನು ಸೂಚಿಸಿದ್ದಾನೆ2. ಸೂಕ್ತಿಸಂಗ್ರಹಗಳಲ್ಲಿ ಬಾಣನ ಹೆಸರಿನಲ್ಲಿ ಸಂಗ್ರಹಿಸಿರುವ ಪದ್ಯಗಳನ್ನು ನೋಡಿದರೆ ಅವನು ಇನ್ನೂ ಹಲವು ಕೃತಿಗಳನ್ನು ರಚಿಸಿದ್ದನೆಂದೂ ಅವು ದೊರೆತಿರಲಾರವೆಂದೂ ತೋರುತ್ತದೆ.

ಹರ್ಷಚರಿತವು 8 ಉಚ್ಛ್ವಾಸಗಳನ್ನುಳ್ಳ ಒಂದು ಆಖ್ಯಾಯಿಕೆ, ಪ್ರಾರಂಭದಲ್ಲಿರುವ 21 ಪದ್ಯಗಳಲ್ಲಿ ವ್ಯಾಸ, ವಾಸವದತ್ತಾ, ಭಟ್ಟಾರ ಹರಿಚಂದ್ರ, ಸಾತವಹನ, ಪ್ರವರಸೇನ, ಭಾಸ,

---

1. ಯದಾಹ ಮುಕುಟತಾಡಿತ ನಾಟಕೇ ಬಾಣ :—
ಆಶಾಃ ಪ್ರೋಷಿತ ದಿಗ್ಗಜಾ ಇವ ಗುಹಾಃ ಪ್ರಧ್ವಸ್ತಸಿಂಹಾ ಇವ ।
ದ್ರೋಣ್ಯಃ ಕೃತ್ತಮಹಾದ್ರುಮಾ ಇವ ಭುವಃ ಪ್ರೋತ್ಪಾತಶೈಲಾ ಇವ ।
ಬಿಭ್ರಾಣಾಃ ಕ್ಷಯಕಾಲರಿಕ್ತಸಕಲತ್ರೈಲೋಕ್ಯಕಷ್ಟಾಂ ದಶಾಂ
ಜಾತಾಃ ಕ್ಷೀಣಮಹಾರಥಾಃ ಕುರುಪತೇರ್ದೇವಸ್ಯ ಶೂನ್ಯಾಸ್ಸಭಾಃ ॥

2. ಕಲ್ಪಿತಂ ಭಟ್ಟಬಾಣೇನ ಯಥಾ ಶಾರದಚಂದ್ರಿಕಾ ।
ದಿವ್ಯೇನ ಮರ್ತ್ಯಸ್ಯ ವಧಃ ಕಾವ್ಯಸ್ಯಾವಶಭಾವತಃ ॥
—ಭಾವ ಪ್ರಕಾಶ



ಕಾಲಿದಾಸ, ಬೃಹತ್ಕಥೆಗಳ ಪ್ರಶಂಸೆ ಇದೆ. ಪೂರ್ವೋತ್ತರ ಕವಿಗಳ ಕಾಲ ನಿರ್ಣಯಕ್ಕೆ ಇದರಿಂದ ಸಹಾಯವಾಗಿದೆ. ಪ್ರಾರಂಭದ ಮೂರು ಉಚ್ಛ್ವಾಸಗಳಲ್ಲಿ ಕವಿಯ ಆತ್ಮಕಥೆ ಇದೆ. ಮೂರನೆಯ ಉಚ್ಛ್ವಾಸದಲ್ಲಿ ಅವನು ರಾಜಾಸ್ಥಾನದಿಂದ ಹಿಂದಿರುಗಿ ತನ್ನ ಬಂಧುಗಳಿಗೆ ಹರ್ಷನ ಚರಿತ್ರೆಯನ್ನು ಹೇಳಲು ಪ್ರಾರಂಭಿಸುತ್ತಾನೆ, ಹರ್ಷನ ವಂಶದ ಮೂಲಪುರುಷನಾದ ಪುಷ್ಪಭೂತಿಯು ಸ್ಥಾಣೇಶ್ವರದಲ್ಲಿ ರಾಜ್ಯವನ್ನು ಸ್ಥಾಪಿಸಿದನು. ರಾಜನ ಸಹಾಯಕನಾಗಿದ್ದ ಭೈರವಾಚಾರ್ಯನ ಪ್ರಭಾವದಿಂದ ಪ್ರಸನ್ನಳಾದ ಲಕ್ಷ್ಮಿಯು ಈ ವಂಶದಲ್ಲಿ ಹರ್ಷನೆಂಬ ಮಹಾಚಕ್ರವರ್ತಿಯು ಹುಟ್ಟುವನೆಂದು ವರವನ್ನಿತ್ತಳು, ಈ ವಂಶದಲ್ಲಿ ನಾಲ್ಕನೆಯ ತಲೆಯವನಾದ ಪ್ರಭಾಕರವರ್ಧನನು ಗುರ್ಜರರು, ಮಾಳವರು, ಹೂಣರು ಮುಂತಾದವರನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದನು. ಕಾನ್ಯಕುಬ್ಜದ ಅವಂತಿವರ್ಮನು ಇವನ ಮಿತ್ರನಾಗಿದ್ದನು. ಪ್ರಭಾಕರವರ್ಧನ ಮತ್ತು ಯಶೋವತಿಯರಿಗೆ ಕ್ರಮವಾಗಿ ರಾಜ್ಯವರ್ಧನ ಮತ್ತು ಹರ್ಷವರ್ಧನರೆಂಬ ಇಬ್ಬರು ಗಂಡುಮಕ್ಕಳೂ ರಾಜ್ಯಶ್ರೀಯೆಂಬ ಒಬ್ಬಳು ಮಗಳೂ ಹುಟ್ಟಿದರು. ಪ್ರಾಪ್ತವಯಸ್ಕಳಾದ ರಾಜ್ಯಶ್ರೀಯನ್ನು ಅವಂತಿವರ್ಮನ ಮಗ ಗೃಹವರ್ಮನಿಗೆ ಕೊಟ್ಟು ವಿಜೃಂಭಣೆಯಿಂದ ವಿವಾಹ ಮಾಡಿದರು (ಉಚ್ಛ್ವಾಸ—4). ಉತ್ತರದಿಂದ ರಾಜ್ಯವನ್ನು ಮುತ್ತಿದ್ದ ಹೂಣರನ್ನು ಸದೆಬಡಿಯಲು ರಾಜ್ಯವರ್ಧನನು ಸೇನೆಯೊಡನೆ ತೆರಳಿದನು. ಹಿಮಾಲಯದ ತಪ್ಪಲಿನಲ್ಲಿ ಕ್ರೀಡಿಸುವ ಆಸೆಯಿಂದ ಹರ್ಷವರ್ಧನನೂ ಅಣ್ಣನನ್ನು ಹಿಂಬಾಲಿಸಿದನು. ರೋಗಿಯಾಗಿದ್ದ ತಂದೆಯ ಸ್ಥಿತಿಯು ಚಿಂತಾಜನಕವಾಗಿದೆಯೆಂಬ ವಾರ್ತೆಯನ್ನು ಹೊಂದಿ ಹರ್ಷವರ್ಧನನು ಕೂಡಲೇ ಹಿಂದಿರುಗಿದನು. ಆದರೆ ಅಷ್ಟರಲ್ಲಿ ತಂದೆಯು ಸತ್ತಿದ್ದನು. ಯಶೋವತಿಯು ಸಹಗಮನ ಮಾಡಿದಳು (ಉಚ್ಛ್ವಾಸ–5). ರಾಜ್ಯವರ್ಧನನು ಹಿಂದಿರುಗುವಷ್ಟರಲ್ಲಿ ಮಾಳವರಾಜನು ಗೃಹವರ್ಮನನ್ನು ಕೊಂದು ರಾಜ್ಯಶ್ರೀಯನ್ನು ಸೆರೆಹಿಡಿದನೆಂಬ ವಾರ್ತೆ ಬಂದಿತು. ಆಗ ಅವನು ರಾಜ್ಯವನ್ನು ತಮ್ಮನಿಗೊಪ್ಪಿಸಿ ಸೈನ್ಯದೊಡನೆ ಹೋಗಿ ಮಾಳವರಾಜನನ್ನು ಸೋಲಿಸಿದನು. ಆದರೆ ಮಾಳವರಾಜನಿಗೆ ಸಹಾಯಕನಾಗಿ ಬಂದಿದ್ದ ಗೌಡರಾಜನು ಮೋಸದಿಂದ ರಾಜ್ಯವರ್ಧನನನ್ನು ಕೊಂದನು. ವಿಚಾರ ತಿಳಿದು ಕ್ರುದ್ಧನಾದ ಹರ್ಷನು ಯುಕ್ತ ಪ್ರತೀಕಾರ ಮಾಡಲು ಪ್ರತಿಜ್ಞೆ ಮಾಡಿದನು (ಉಚ್ಛ್ವಾಸ–6). ದಿಗ್ವಿಜಯವನ್ನು ಕೈಗೊಂಡು ಹೊರಟ ಹರ್ಷನು ಪ್ರಾಗ್ಜ್ಯೋತಿಷೇಶ್ವರನಾದ ಭಾಸ್ಕರವರ್ಮನನ್ನು ಮಿತ್ರನನ್ನಾಗಿ ಸ್ವೀಕರಿಸಿ. ಗಲಾಟೆಯಲ್ಲಿ ತಪ್ಪಿಸಿಕೊಂಡ ರಾಜ್ಯಶ್ರೀಯು ವಿಂಧ್ಯಾರಣ್ಯವನ್ನು ಪ್ರವೇಶಿಸಿದಳೆಂಬ ವಾರ್ತೆಯನ್ನು ಮುಟ್ಟಿಸಿದ ಭಂಡಿಯನ್ನು ಸೈನ್ಯದೊಡನೆ ಗೌಡರಾಜನ ಕಡೆಗೆ ಕಳುಹಿಸಿ, ತಾನು ವಿಂಧ್ಯಾಟವಿಗೆ ಬಂದನು (ಉಚ್ಛ್ವಾಸ–7). ಶಬರನಾಯಕನ ಸಹಾಯದಿಂದ ದಿವಾಕರಮಿತ್ರನೆಂಬ ಬೌದ್ಧಭಿಕ್ಷುವಿನ ಆಶ್ರಮಕ್ಕೆ ಬಂದನು. ಅಲ್ಲಿ ಹೆಂಗಸೊಬ್ಬಳು ಅಗ್ನಿ ಪ್ರವೇಶಮಾಡುತ್ತಿರುವ ಸುದ್ದಿ ಕೇಳಿ. ಅಲ್ಲಿಗೆ ಧಾವಿಸಿ ತಂಗಿಯನ್ನು ಉಳಿಸಿದನು. ಪ್ರತೀಕಾರ ಮುಗಿದ ಮೇಲೆ ಇಬ್ಬರೂ ಬೌದ್ಧದೀಕ್ಷೆಯನ್ನು ಕೈಗೊಳ್ಳೋಣವೆಂದು ಅವಳನ್ನು ಸಮಾಧಾನಗೊಳಿಸಿದನು (ಉಚ್ಛ್ವಾಸ–8). ಇಲ್ಲಿಗೆ ಕಥೆಯು ತಟ್ಟನೆ ಮುಗಿಯುತ್ತದೆ.

ವಿವಿಧ ಲೋಕಾನುಭವವನ್ನು ಪಡೆದ ಮಹಾಕವಿ ಬಾಣನ ಅದ್ಭುತವಾದ ಬರವಣಿಗೆಯನ್ನು ಹೊಗಳದವರಿಲ್ಲ*. ಸುಮಾರು ಸಮಪ್ರಮಾಣದಲ್ಲಿ ಬಂದು ಮೆರೆಯುವ ಇವನ ವಾಕ್ಯಗಳಲ್ಲಿ ಅನುಪಮ ಮಾಧುರ್ಯವಿದೆ. ಬಾಣನೇ ಹೇಳಿರುವಂತೆ—

ನವೋಽರ್ಥೋ ಜಾತಿರಗ್ರಾಮ್ಯಾ ಶ್ಲೇಷೋಽಕ್ಲಿಷ್ಟಃ ಸ್ಫುಟೋ ರಸಃ ।
ವಿಕಟಾಕ್ಷರಬಂಧಶ್ಚ ಕೃತ್ಸ್ನಮೇಕತ್ರ ದುಷ್ಕರಮ್ ॥

ಒಂದೆಡೆ ಕಾಣಿಸದ ಇವುಗಳೆಲ್ಲ ಬಾಣನಲ್ಲಿ ಒಂದೇ ಕಡೆ ಕೂಡಿವೆ. ಇವನನ್ನು ಸೊಡ್ಢಲನು ಸರ್ವೇಶ್ವರನೆಂದು ಕೊಂಡಾಡಿದ್ದಾನೆ. ಇವನದು. ರಸಭಾವವಿಷಯಾನುಗುಣವಾದ ಪದಗುಂಫನ. ಇವನ ಪದಾವಳಿಯು ಘೋರಾರಣ್ಯ ಭಯಂಕರ ಸಂಗ್ರಾಮಾದಿಗಳ ವರ್ಣನಾವಸರದಲ್ಲಿ ಘನ-ಗಂಭೀರವಾಗಿಯೂ, ಕಾಮಿನಿಯ ಕಮನೀಯರೂಪಚಿತ್ರಣ ಮುಂತಾದ ಸಮಯದಲ್ಲಿ ಲಲಿತ-ಮಧುರವಾಗಿಯೂ ಇದೆ. ಅರ್ಥಾನುರೂಪಪದವಿನ್ಯಾಸವಿರುವ ಈ ಶೈಲಿಯನ್ನು ರಾಜಶೇಖರನು ಪಾಂಚಾಲಿಯೆಂದು ಕರೆದಿದ್ದಾನೆ :—

ಶಬ್ದಾರ್ಥಯೋಃ ಸಮೋ ಗುಂಫಃ ಪಾಂಚಾಲೀ ರೀತಿರಿಷ್ಯತೇ ।
ಶೀಲಾಭಟ್ಟಾರಿಕಾ ವಾಚಿ ಬಾಣೋಕ್ತಿಷು ಚ ಸಾ ಯದಿ ॥

ಅಣ್ಣನ ಕೊಲೆಯನ್ನು ತಿಳಿದು ರೋಷಗೊಂಡ ಹರ್ಷನ ವರ್ಣನೆ :—

ತತಶ್ಚಾಮರ್ಷವಿಧುತಶಿರಃ ಶೀರ್ಯಮಾಣಶಿಖಾಮಣಿಶಕಲಾಂಗಾರಕಿತಮಿವ ರೋಷಾಗ್ನಿಮುದ್ವಮನ್ನನವರತಸ್ಫುರಿತೇನ ಪಿಬನ್ನಿವ ಸರ್ವತೇಜಸ್ವಿನಾಮಾಯೂಂಷಿ ರೋಷನಿರ್ಭುಗ್ನೇನ ದಶನಚ್ಛದೇನ......

ದುರ್ವಾಸನನ್ನು ನಿಗ್ರಹಿಸಲು ಎದ್ದು ನಿಂತ, ಕ್ರುದ್ಧಳಾದ ಸಾವಿತ್ರಿಯ ವರ್ಣನೆ :—

ರೋಷವಿಮುಕ್ತವೇತ್ರಾಸನೈರ್ಹೂಂಕಾರಮುಖರಿತಮುಖೈರುತ್ಕ್ಷಿಪದೋಲಾಯಮಾನ...ಭಾರಭರಿತದಿಗ್ಭಿಃ. ಪರಿಕರಬಂಧಭ್ರಮಿತಕೃಷ್ಣಾಜಿನಾಟೋಪಚ್ಛಾಯಾಶ್ಯಾಮಾಯಮಾನ...ಸ್ವೈರಮರ್ಷನಿಃಶ್ವಾಸದೋಲಾಪ್ರೇಂಖೋಲಿತಬ್ರಹ್ಮಲೋಕೈಃ ಸೋಮರಸಮಿವ ಸ್ವೇದವಿ-

* 1. ಜಾತಾ ಶಿಖಂಡಿನೀ ಪ್ರಾಗ್ಯಥಾ ಶಿಖಂಡೀ ತಥಾವಗಚ್ಛಾಮಿ ।
ಪ್ರಾಗಲ್ಭ್ಯಮಧಿಕಮಾಪ್ತುಂ ವಾಣೀ ಬಾಣೋಬಭೂವೇತಿ ॥ —ಆರ್ಯಾಸಪ್ತಶತೀ

2. ಶ್ಲೇಷೇ ಕೇಚನ ಶಬ್ದಗುಂಫವಿಷಯೇ ಕೇಚಿದ್ರಸೇ ಚಾಪರೇಽ-
ಲಂಕಾರೇ ಕತಿಚಿತ್ ಸದರ್ಥವಿಷಯೇ ಚಾನ್ಯೇ ಕಥಾವರ್ಣನೇ ।
ಆಸರ್ವತ್ರಗಭೀರಧೀರಕವಿತಾ ವಿಂಧ್ಯಾಟವೀಚಾತುರೀ-
ಸಂಚಾರೀ ಕವಿಕುಂಭಿಕುಂಭಭಿದುರೋ ಬಾಣಸ್ತು ಪಂಚಾನನಃ ॥ —ಶ್ರೀ ಚಂದ್ರದೇವ

3. ವಾಗೀಶ್ವರಂ ಹಂತ ಭಜೇಽಭಿನಂದ--
ಮರ್ಥೇಶ್ವರಂ ವಾಕ್ಪತಿರಾಜಮೀಡೇ ।
ರಸೇಶ್ವರಂ ಸ್ತೌಮಿ ಚ ಕಾಲಿದಾಸಂ
ಬಾಣಂ ತು ಸರ್ವೇಶ್ವರಮಾನತೋಽಸ್ಮಿ ॥ —ಸೊಡ್ಢಲ



ಸರವ್ಯಾಜೇನ ಸ್ರವದ್ಭಿರಗ್ನಿಹೋತ್ರಪವಿತ್ರಭಸ್ಮಸ್ಮೇರಲಲಾಟೈಃ ಕುಶತಂತುಚಾರುಚಾಮರಚೀರಚೀವರಿಭಿರಾಷಾಢಿಭಿಃ ಪ್ರಹರಣೀಕೃತಕಮಂಡಲುಮಂಡಲೈರ್ಮೂರ್ತೈಃ ಶ್ಚತುರ್ಭಿರ್ವೇದೈಃ ಸಹ ವೃಷೀಮಪಹಾಯ ಸಾವಿತ್ರೀ ಸಮುತ್ತಸ್ಥೌ ।

ಪರಶಿವನಲ್ಲಿ ಪುಷ್ಪಭೂತಿಯ ಭಕ್ತಿಯನ್ನು ಚಿತ್ರಿಸುವ ಸಂದರ್ಭ :—

ಭಗವತಿ, ಭಕ್ತಿಸುಲಭೇ, ಭುವನಭೃತಿ. ಭೂತಭಾವನೇ, ಭವಚ್ಛಿದಿ, ಭವೇ ಭೂಯಸೀ ಭಕ್ತಿರಭೂತ್ । ಅಜಂ, ಅಜರಂ, ಅಮರಗುರುಂ, ಅಸುರಪುರರಿಪುಂ, ಅಪರಿಮಿತಗಣಪತಿಂ, ಅಚಲದುಹಿತೃಪತಿಂ, ಅಖಿಲಭುವನಕೃತಚರಣನತಿಂ, ಪಶುಪತಿಂ, ಪ್ರಪನ್ನೋಽನ್ಯದೇವತಾಶೂನ್ಯಮಮನ್ಯತ ತ್ರೈಲೋಕ್ಯಮ್ ।

ಸೇನಾಪ್ರಯಾಣದ ಚಿತ್ರ :—

ತತೋ ರಟತ್‌ಪಟಹೇ, ನಂದನ್ನಾಂದೀಕೇ, ಗುಂಜತ್ ಕುಂಜೇ, ಕೂಜತ್‌ಕಾಹಲೇ, ಶಬ್ದಾಯಮಾನಶಂಖೇ, ಕ್ರಮೋಪಚೀಯಮಾನಕಟಕಕಲಕಲೇ, ಪರಿಜನೋತ್ಥಾಪನವ್ಯಾಪೃತವ್ಯವಹಾರಿಣಿ, ದ್ರುತದ್ರುಘಣಘಾತಘಟ್ಟ್ಯಮಾನಕೋಣಿಕಾಕೀಲಕೋಲಾಹಲಕಲಿತಕಕುಭಿ, ಬಲಾಧಿಕೃತಬಧ್ಯಮಾನಪಾಟೀಪತಿಪೇಟಕೇ, ಜನಜ್ವಲಿತೋಲ್ಕಾಸಹಸ್ರಾಲೋಕಲುಪ್ಯಮಾನತ್ರಿಯಾಮಾತಮಸಿ......

ಕವಿಯು ಚಿತ್ರಣಕೌಶಲದಿಂದಪಾತ್ರಗಳು ತೇಜೋಯುಕ್ತವಾಗಿ ಕಂಗೊಳಿಸುತ್ತವೆ; ಸಹೃದಯರ ಹೃದಯಗಳಲ್ಲಿ ಚಿರಕಾಲ ನಿಲ್ಲುತ್ತವೆ. ಶ್ರೀಹರ್ಷನ ಪಾತ್ರ ಉಜ್ವಲವಾಗಿ ಚಿತ್ರಿತವಾಗಿದೆ. ಅವನ ಪಿತೃಭಕ್ತಿ; ಮಾತೃವಾತ್ಸಲ್ಯ, ಭ್ರಾತೃಪ್ರೇಮ, ಹೃದಯಮಾರ್ದವ, ಶತ್ರುಪ್ರತೀಕಾರಭಲು ಕಲಾರಸಿಕತೆ, ಧರ್ಮಶ್ರದ್ಧೆ, ಕರ್ತವ್ಯಪರತೆ ಮುಂತಾದ ಗುಣಗಳು ಕಣ್ಣ ಮುಂದೆ ನಿಲ್ಲುತ್ತವೆ. ಇನ್ನೂ ಎಳೆವಯಸ್ಸಿನಲ್ಲಿ ಯುದ್ಧಕ್ಕೆ ಹೊರಟ ಅಣ್ಣನೊಡನೆ ಹಿಮಾಲಯದ ತಪ್ಪಲಿನಲ್ಲಿ ವಿನೋದ ವಿಹಾರಗಳಿಗಾಗಿ ತೆರಳಿದ್ದವನು. ತಂದೆಯ ಅನಾರೋಗ್ಯವನ್ನು ತಿಳಿದ ಕೂಡಲೇ ನಗರಕ್ಕೆ ಓಡಿ ಬಂದನು ; ಆಯಾಸವನ್ನು ಲೆಕ್ಕಿಸಲಿಲ್ಲ; ಆಹಾರವನ್ನು ಮುಟ್ಟಲಿಲ್ಲ. ಬಂದ ಮುದ್ದು ಮಗನನ್ನು ಕಂಡು ನಿಟ್ಟುಸಿರು ಬಿಟ್ಟು ತಂದೆಯು ಸಮಾಧಾನ ಹೇಳಿದನು :—

ವತ್ಸ, ಜಾನಾಮಿ ತ್ವಾಂ ಪಿತೃಪ್ರಿಯಮತಿಮೃದುಹೃದಯಮ್ । ಈದೃಶೇಷು ವಿಧುರಯತಿ ಧೀಮತೋಽಪಿ ಧಿಯಂ ಅತಿದುರ್ಧರೋ ಬಾಂಧವಸ್ನೇಹಃ ಸರ್ವಪ್ರಮಾಥೀ । ಅತೋ ನಾರ್ಹಸ್ಯಾತ್ಮಾನಂ ಶುಚೇ ದಾತುಂ । ......ಸುಖಂ ಚ ರಾಜ್ಯಂ ಚ ವಂಶಶ್ಚ ಪ್ರಾಣಾಶ್ಚ ತ್ವಯಿ ಮೇ ಸ್ಥಿತಾಃ । ಯಥಾ ಮಮ ತಥಾ ಸರ್ವಾಸಾಂ ಪ್ರಜಾನಾಮ್ । ತ್ವದ್ವಿಧಾನಾಂ ಪೀಡಾಃ ಪೀಡಯಂತಿ ಸಕಲಮೇವ ಭುವನತಲಮ್ ॥ ನ ಹ್ಯಲ್ಪಪುಣ್ಯಭಾಜಾಂ ವಶಮಲಂಕುರ್ವಂತಿ ಭವಾದೃಶಾಃ ।

ಪ್ರಬಲವಾದ ವಿಧಿಯು ಪ್ರಭಾಕರವರ್ಧನನ ಬಾಳಿನ ಕೊನೆಯ ಹಾಳೆಯನ್ನು ತಿರುವಿಹಾಕಿತ್ತು. ಗೋಳಾಟ ದಿಗಂತವನ್ನು ಮುಟ್ಟಿತು. ಅಣ್ಣನೂ ಹತ್ತಿರ ಇಲ್ಲ. ಇಷ್ಟರಲ್ಲಿ ಪತಿವ್ರತೆಯಾದ

ಯಶೋವತಿಯ ಸಹಗಮನವಾರ್ತೆ ಬೇರೆ. ಬಾಲಕನಾದ ಹರ್ಷನಿಗೆ ದಿಕ್ಕೇ ತೋರದಾಯಿತು. ತಾಯಿಯ ಹತ್ತಿರಕ್ಕೆ ಧಾವಿಸಿ ಹಾಗೆ ಮಾಡದಂತೆ ಅಂಗಲಾಚಿ ಬೇಡಿಕೊಂಡನು. ವೀರಜನನಿಯೂ, ಪತಿವ್ರತೆಯೂ ಆದ ಅವಳು ಉಳಿಯಲು ಒಪ್ಪದೆ ಹೀಗೆ ನುಡಿದಳು—

ವತ್ಸ, ನಾಸಿ, ನ ಪ್ರಿಯೋ ನಿರ್ಗುಣೋ ವಾ ಪರಿತ್ಯಾಗಾರ್ಹೋ ವಾ। ಸ್ತನ್ಯೇನ ಸಹ ತ್ವಯಾ ಪೀತಂ ಮೇ ಹೃದಯಂ। ಅಸ್ಮಿಂಶ್ಚ ಸಮಯೇ ಪ್ರಭೂತಪ್ರಭುಪ್ರಸಾದಾಂತರಿತಾ ತ್ವಾಂ ನ ಪಶ್ಯತಿ ದೃಷ್ಟಿಃ। ಅಪಿ ಚ ಪುತ್ರಕ ಪುರುಷಾಂತರವಿಲೋಕನವ್ಯಸನಿನೀ ರಾಜ್ಯೋಪಕರಣಮಕರುಣಾ ವಾ ನಾಸ್ಮಿ ಲಕ್ಷ್ಮೀಃ ಕ್ಷಪಣಾ ವಾ। ಕುಲಕಲತ್ರಮಸ್ಮಿ ಚಾರಿತ್ರಧನಾ ಧರ್ಮಧವಲೇ ಕುಲೇ ಜಾತಾ ಕಿಂ ವಿಸ್ಮೃತೋಸಿ ಮಾಂ ಸಮರಶತಶೌಂಡಸ್ಯ ಪುರುಷಪ್ರಕಾಂಡಸ್ಯ ಕೇಸರಿಣ ಇವ ಕೇಸರಿಣೀಂ ಗೃಹಿಣೀಮ್। ವೀರಜಾ ವೀರಜಾಯಾ ವೀರಜನನೀ ಚ ಮಾದೃಶೀ ಪರಾಕ್ರಮ ಕ್ರೀತಾ ಕಥಮನ್ಯಥಾ ಕುರ್ಯಾತ್। .........

ವೀರಜೆಯೂ, ವೀರಜಾಯೆಯೂ, ವೀರಜನನಿಯೂ ಆದ ಅವಳು ಸಹಗಮನ ಮಾಡಿದಳು ಬಾಲಕನ ಹೃದಯ ಒಡೆದು ಹೋಳಾಯಿತು. ಭೋಗಭಾಗ್ಯಗಳೆಲ್ಲಾ ಅವನಿಗೆ ವಿರಸವಾದವು—

ಶ್ರಿಯಂ ಶಾಪ ಇತಿ, ಮಹೀಂ ಮಹಾಪಾತಕಮಿತಿ, ರಾಜ್ಯಂ ರೋಗ ಇತಿ, ಭೋಗಾನ್ ಭುಜಂಗಾ ಇತಿ, ನಿಲಯಂ ನಿರಯ ಇತಿ, ಬಂಧುಂ ಬಂಧನಮಿತಿ, ಜೀವಿತಮಯಶ ಇತಿ, ದೇಹಂ ದ್ರೋಹ ಇತಿ, ಕಲ್ಯತಾಂ ಕಲಂಕ ಇತಿ, ಆಯುರಪುಣ್ಯಫಲಮಿತಿ, ಆಹಾರಂ ವಿಷಮಿತಿ, ವಿಷಮಮೃತಮಿತಿ ಚಂದನಂ ದಹನ ಇತಿ, ಕಾಮಂ ಕ್ರಕಚ ಇತಿ, ಹೃದಯಸ್ಫೋಟನಮಭ್ಯುದಯಂ ಇತಿ......

ಇಷ್ಟರಲ್ಲಿ ಹಿಂದಿರುಗಿದ ರಾಜ್ಯವರ್ಧನನು ಶತ್ರುದಮನಕ್ಕಾಗಿ ತಾನು ಹೋಗಬೇಕಾಗಿರುವುದರಿಂದ ರಾಜ್ಯಭಾರವನ್ನು ವಹಿಸಿಕೊಳ್ಳೆಂದು ಹರ್ಷನನ್ನು ಮೃದುಮಧುರಮಾತುಗಳಿಂದ ಒತ್ತಾಯಪಡಿಸಿದನು. ಅಣ್ಣನ ಈ ಒತ್ತಾಯ ಅವನಿಗರ್ಥವಾಗಲಿಲ್ಲ. ಆಗಲೇ ತತ್ತರಿಸಿ ಹೋಗಿದ್ದ ಆ ಕೋಮಲಹೃದಯದಲ್ಲಿ ನಾನಾಭಾವನೆಗಳು ಮೂಡಿದವು. ಅಣ್ಣನು ಬಿಡದೆ ತಮ್ಮನನ್ನು ಒಪ್ಪಿಸಿ ಯುದ್ಧಕ್ಕೆ ಹೊರಟುಬಿಟ್ಟನು. ತಂಗಿಯೂ ವಿಧವೆಯಾದಳು. ಇದನ್ನು ತಿಳಿದ ಹರ್ಷನ ಸ್ಥಿತಿಯು ಅವರ್ಣನೀಯ—

ಅಥ ತಥಾಗತೇ ಭ್ರಾತರಿ, ಉಪರತೇ ಚ ಪಿತರಿ, ಪ್ರೋಷಿತಜೀವಿತೇ ಚ ಜಾಮಾತರಿ, ಮೃತಾಯಾಂ ಚ ಮಾತರಿ ಸಂಯತಾಯಾಂ ಚ ಸ್ವಸರಿ, ಸ್ವಯೂಥಭ್ರಷ್ಟ ಇವ ವನ್ಯಃ ಕರೀ ದೇವೋ ಹರ್ಷಃ ಕಥಂಕಥಮಪ್ಯೇಕಾಕೀ ಕಾಲಂ ತಮನೈಷೀತ್।

ಅನತಿಕಾಲದಲ್ಲಿ ಗೌಡರಾಜನು ರಾಜ್ಯವರ್ಧನನನ್ನು ಮೋಸದಿಂದ ಕೊಂದ ವಾರ್ತೆ ಬಂದಿತು. ಎಷ್ಟಾದರೂ ಕ್ಷತ್ರಿಯಕುಮಾರನಾದ ಹರ್ಷನು ಸಿಂಹಶಿಶು. ಕೆರಳಿ ಕೆಂಡವಾಗಿ ರಿಪುಕುಲವನ್ನು ತೊಡೆಯುವುದಾಗಿ ವೀರಪ್ರತಿಜ್ಞೆ ಮಾಡಿದನು :—

ಶ್ರೂಯತಾಂ ಮೇ ಪ್ರತಿಜ್ಞಾ। ಶಪಾಮ್ಯಾರ್ಯಸ್ಯೈವ ಪಾದಪಾಂಸುಸ್ಪರ್ಶೇನ ಯದಿ ಪರಿಗಣಿತೈರೇವ ವಾಸರೈಃ ಸಕಲಚಾಪಚಾಪಲದುರ್ಲಲಿತನರಪತಿಚರಣರಣರಣಾಯ ಮಾನನಿಗಡಾಂ ನಿರ್ಗೌಡಾಂ ನ ಕರೋಮಿ ಮೇದಿನೀಂ ತತಸ್ತನೂನಪಾತಿ ಪೀತಸರ್ಪಿಷಿ ಪತಂಗ ಇವ ಪಾತಕೀ ಪಾತಯಾಮ್ಯಾತ್ಮಾನಮ್ ॥



ಚಿಕ್ಕ ವಯಸ್ಸಿನಲ್ಲಿಯೇ ಕಷ್ಟಪರಂಪರೆಗೆ ಗುರಿಯಾದರೂ ಹರ್ಷನು ಕರ್ತವ್ಯವಿಮುಖನಾಗದೆ ಅರಿಕುಲವನ್ನು ತರಿದು ಸೋದರಿಯನ್ನು ಪಡೆದನು. ಅವನ ಮಧುರಹೃದಯ, ಕರ್ತವ್ಯನಿಷ್ಠೆ, ಅನುಪಮಸಾಹಸ, ಬಂಧುಪ್ರೇಮ, ಸಹಜವಿನಯ ಮುಂತಾದ ಗುಣಗಳನ್ನು ಮರೆಯಲು ಸಾಧ್ಯವಿಲ್ಲ. ಸಾಧ್ವೀಶಿರೋಮಣಿಯಾದ ಯಶೋವತಿಯ ಚಿತ್ರವೂ ಉಜ್ವಲವಾಗಿದೆ. ರಾಜ್ಯವರ್ಧನನದು ಹೋರಾಟ ತುಂಬಿದ ಬಾಳು.

ಕಥಾಸಂವಿಧಾನದಲ್ಲಿ ಒಳ್ಳೆಯ ನೈಪುಣ್ಯವಿದೆ. ಹರ್ಷಚರಿತದ ಆದಿಯಲ್ಲಿ ವಿರಹಿಣಿಯಾದ ಸರಸ್ವತಿಯ ಚಿತ್ರಣವೂ, ಅಂತ್ಯದಲ್ಲಿ ವಿಧವೆಯಾದ ರಾಜ್ಯಶ್ರೀಯ ಚಿತ್ರಣವೂ ಇದ್ದು ಮಧ್ಯದಲ್ಲಿ ಪ್ರಭಾಕರವರ್ಧನನ ಮರಣ, ಯಶೋವತಿಯ ಸಹಗಮನ, ರಾಜ್ಯವರ್ಧನನ ಕೊಲೆಗಳು ಬಂದಿವೆ. ವೀರಕರುಣಾದ್ಭುತರಸಗಳು ರಮ್ಯವಾಗಿ ಪರಿಪೋಷಣೆಗೊಂಡಿವೆ. ಸೇನಾಪ್ರಯಾಣ, ತಪೋವನ, ಮರಣಪ್ರಸಂಗ, ಭೀಕರಸಂಗ್ರಾಮ, ಅರಮನೆ, ಅಂತಃಪುರ ಮೊದಲಾದುವುಗಳನ್ನು ಪ್ರಸಂಗೋಚಿತವಾಗಿ, ಪ್ರಭಾವಶಾಲಿಯಾಗಿ ವರ್ಣಿಸಿದ್ದಾನೆ. ಭೀಕರ ಚಿತ್ರಣದಲ್ಲಾಗಲಿ, ಕೋಮಲ ಚಿತ್ರಣದಲ್ಲಾಗಲಿ ಕವಿಗೆ ಸಮಾನಪ್ರತಿಭೆ ಇದೆ.

ಯೋಧನನ್ನೂ, ಯತಿಯನ್ನೂ ಕೆಡದಂತೆ ಮೂರ್ತಿಮತ್ತಾಗಿ ಕಡೆಯಬಲ್ಲ ಸಾಮರ್ಥ್ಯ ಬಾಣನದು.

ಇದು ದಿವಾಕರಮಿತ್ರನ ವರ್ಣನೆ :—

ಅತಿವಿನೀತೈಃ ಕಪಿಭಿರಪಿ ಚೈತ್ಯಕರ್ಮಕುರ್ವಾಣೈಸ್ತ್ರಿಸರಣಪರೈಃ ಪರಮೋಪಾಸಕೈಃ ಶುಕೈರಪಿ ಶಾಕ್ಯಶಾಸನಕುಶಲೈಃ ಕೋಶಂ ಸಮುಪದಿಶದ್ಭಿಃ ಶಿಕ್ಷಾಪದೋಪದೇಶೋಪಶಮ ಶಾಲಿನೀಭಿಃ ಶಾರಿಕಾಭಿರಪಿ ಧರ್ಮದೇಶನಾಂ ದರ್ಶಯಂತೀಭಿರನವರತಶ್ರವಣಗೃಹೀತಾಲೋಕೈ ಕೌಶಿಕೈರಪಿ ಬೋಧಿಸತ್ವಜಾತಕಾನಿ ಜಪದ್ಭಿರ್ಜಾತಸೌಗತಿತೇಲಶೀತಲಸ್ವಭಾವೈಃ ಶಾರ್ದೂಲೈಃ ಉಪಮಾಂಸಾಶಿಭಿರುಪಾಸ್ಯಮಾನಂ............

ಭಾವವನ್ನು ಮರೆಯಿಸುವಂತೆ ಶ್ಲೇಷೆಯಿಂದ ಕೂಡಿದ ವರ್ಣನಾಡಂಬರವಿಲ್ಲ. ಹದವಾದ ಮಾತುಗಳು ಸಮರ್ಥವಾಗಿ ಭಾವವನ್ನು ಮೂಡಿಸುತ್ತವೆ. ಕಥಾಸ್ವಾರಸ್ಯವು ಎಲ್ಲಿಯೂ ಕುಂಠಿತವಾಗಿಲ್ಲ. ಅಲಂಕರಗಳು ಆಡಂಬರವಿಲ್ಲದೆ ವಿಷಯಕ್ಕೆ ಹೊಂದಿಕೊಂಡಿವೆ. ಹೇರಳವಾಗಿ ಲೋಕೋಕ್ತಿಗಳಿವೆ. ಕವಿಯು ತನ್ನ ಪ್ರಭುವನ್ನು ಚಿತ್ರಿಸುವುದರ ಜೊತೆಯಲ್ಲಿ ಭಾರತದ ಆದರ್ಶಸ್ತ್ರೀಪುರುಷರನ್ನು ಚಿತ್ರಿಸಿದ್ದಾನೆ.

ಉಚ್ಛ್ವಾಸದ ಆದಿಯಲ್ಲಿ ವಕ್ತ್ರಾಪರವಕ್ತ್ರಗಳಿರಬೇಕೆಂಬ ನಿಯಮಕ್ಕೆ ಬಾಣನು ಬದ್ಧನಾಗಿಲ್ಲ. ಆರ್ಯಾ, ಶ್ಲೋಕ, ವಕ್ತ್ರ, ಅಪರವಕ್ತ್ರ, ವಸಂತತಿಲಕಾ, ಶಾರ್ದೂಲವಿಕ್ರೀಡಿತ, ಸ್ರಗ್ಧರಾಛಂದಸ್ಸುಗಳನ್ನು ಕವಿಯು ಬಳಸಿಕೊಂಡಿದ್ದಾನೆ. ರಾಜಾನಕ, ಶಂಕರಕಂಠ, ರಂಗನಾಥರುಚಕ ಮತ್ತು ಶಂಕರರು ಹರ್ಷಚರಿತಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಕಾದಂಬರಿ :

ಬಾಣನ ಕೀರ್ತಿಯನ್ನು ಅಜರಾಮರಗೊಳಿಸಿದ ಈ ಮೇರುಕೃತಿ ಸಂಸ್ಕೃತದ ಗದ್ಯ ಸಾಹಿತ್ಯದ ಸುಂದರ ಸಾನುವಿನ ಉತ್ತುಂಗಶಿಖರ. ಹಿಂದಿನ ಸಕಲಕೃತಿಗಳ ಸಾರವನ್ನು ಹೀರಿ, ಮುಂದಿನ ಕೃತಿಗಳಿಗೆಲ್ಲಾ ಅನುಕರಣೀಯ ಆದರ್ಶವಾಗಿ ನಿಂತಿದೆ. ಇದರ ಮಾಧುರ್ಯಕ್ಕೆ ಮನಸೋತ ಹಲವರು ಇದನ್ನನುಕರಿಸಲು ಪ್ರಯತ್ನಿಸಿ ವಿಫಲರಾಗಿದ್ದಾರೆ. ಚಂಪಕಮುಕುಲರಚಿತವಾದ ಕುಸುಮಮಾಲೆಯಂತೆ ದೀಪಕೋಪಮಾದಿಗಳಿಂದಲಂಕೃತವಾದ ಕಥೆಗಳು ಸಹೃದಯರನ್ನು ರಂಜಿಸುತ್ತವೆ.* ಮಹಾಕವಿ ಬಾಣನ ಕಥಾರೂಪವಾದ ಕಾದಂಬರಿಯು ನವವಧುವಿನಂತೆ ಅಧಿಕ ಕೌತುಕವನ್ನುಂಟುಮಾಡುತ್ತದೆ.† ಚಂದ್ರಾಪೀಡನ ಕಾದಂಬರೀವಾರ್ತಾಶ್ರವಣದಿಂದ ಪೂರ್ವಭಾಗವು ಮುಗಿಯುತ್ತದೆ. ಅರ್ಧಾಂತವಾಗಿ ನಿಂತುಹೋದ ಕಥೆಯ ರಸವಿಚ್ಛಿತ್ತಿಯನ್ನು ಪರಿಹರಿಸಲು ಮಗನಾದ ಭೂಷಣಭಟ್ಟನು ಬಯಸುತ್ತಾನೆ. ಬಾಣನ ಅನುಪಮ ಸಾಮರ್ಥ್ಯ ಪ್ರತಿಭೆಗಳೆಲ್ಲಿ ! ಭೂಷಣನ ಬಾಲಿಶ ಬುದ್ಧಿಯೆಲ್ಲಿ ! ಆದರೂ ಅಮೃತಮಯನಾದ ಚಂದ್ರನ ಕಿರಣ ಸಂಪರ್ಕದಿಂದ ಚಂದ್ರಕಾಂತಶಿಲೆ ದ್ರವಿಸುವಂತೆ, ಕುನದಿಗಳೂ ಗಂಗೆಯನ್ನು ಸೇರಿ ಸಾಗರವನ್ನು ಮುಟ್ಟುವಂತೆ ತಂದೆಯ ಕರುಣೆಯಿಂದ ಪ್ರಭಾವಗೊಂಡ ತನ್ನ ವಾಣಿಯೂ ಕಾರ್ಯಸಮಾಪನ ಸಿದ್ಧಿಯನ್ನು ಪಡೆಯುತ್ತದೆಂದು ಭಾವಿಸುತ್ತಾನೆ ಅಲ್ಲದೆ ಕಾದಂಬರೀ ರಸಭರದಿಂದ ಮತ್ತವಾದ ಲೋಕದ ಗಣನೆಗೆ ತನ್ನ ಅವಗುಣ ಬರುವುದಿಲ್ಲವೆಂದು ಧೈರ್ಯ ತಾಳಿ ಉತ್ತರಭಾಗವನ್ನು ಬರೆದು ಕಾದಂಬರಿಯನ್ನು ಪೂರ್ಣಗೊಳಿಸಿದ್ದಾನೆ.‡

ಒಂದು ಸಾರಿ ಸುರಾಸುರಪಂಡಿತಚರಣನೂ, ತ್ರಿಭುವನಸುಂದರನೂ ಆದ ಶ್ವೇತಕೇತು ಮಹಾಮುನಿಯು ಅರ್ಚನೆಗೆ ಕಮಲಗಳನ್ನು ಕೊಯ್ಯಲು ಮಂದಾಕಿನಿಗೆ ಇಳಿದನು. ಇವನ ದರ್ಶನಮಾತ್ರದಿಂದ ಕಮಲವಾಸಿನಿಯಾದ ಲಕ್ಷ್ಮಿಯು ಮಗನನ್ನು ಹಡೆದು ಸಾಕಲು ಇವನಿಗೊಪ್ಪಿಸಿದಳು. ಪುಂಡರೀಕ (ಕಮಲ)ದಲ್ಲಿ ಹುಟ್ಟಿದುದರಿಂದ ಮಗುವಿಗೆ ಪುಂಡರೀಕನೆಂಬ ಹೆಸರು ಬಂದಿತು. ಬೆಳೆದು ದೊಡ್ಡವನಾದ ಮೇಲೆ ಶಿವಾರ್ಚನೆಗಾಗಿ ಅಮರಲೋಕದಿಂದ ಕೈಲಾಸಕ್ಕೆ ಹೋಗುತ್ತಿದ್ದಾಗ ನಂದನವನದೇವತೆಯರು ಕೊಟ್ಟ ಪಾರಿಜಾತಕುಸುಮಮಂಜರಿಯು ಅವನ ಕಿವಿಯನ್ನಲಂಕರಿಸಿತು. ಒಮ್ಮೆ ಅಚ್ಛೋದ ಸರೋವರದ ತೀರದಲ್ಲಿ ಸಖಿಯೊಡನೆ ವಿಹರಿಸುತ್ತಿದ್ದ ಮಹಾಶ್ವೇತೆಯೆಂಬ ಅಪ್ಸರಕನ್ಯೆಯು ಪುಂಡರೀಕನನ್ನು ನೋಡಿ ಅನುರಕ್ತಳಾದಳು.

* ಹರಂತಿ ಕಂ ನೋಜ್ಜ್ವಲದೀಪಕೋಪಮೈರ್ನವೈಃ ಪದಾರ್ಥೈರುಪಪಾದಿತಾಃ ಕಥಾಃ ।
ನಿರಂತರಶ್ಲೇಷಘನಾಃ ಸುಜಾತಯೋ ಮಹಾಸ್ರಜಶ್ಚಂಪಕಕುಡ್ಮಲೈರಿವ ॥ —ಕಾದಂಬರೀ

† ಸ್ಫುರತ್ಕಲಾಲಾಪವಿಲಾಸಕೋಮಲಾ ಕರೋತಿ ರಾಗಂ ಹೃದಿ ಕೌತುಕಾಧಿಕಮ್ ।
ರಸೇನ ಶಯ್ಯಾಂ ಸ್ವಯಮಭ್ಯುಪಾಗತಾ ಕಥಾ ಜನಸ್ಯಾಭಿನವಾ ವಧೂರಿವ ॥ —ಕಾದಂಬರೀ

‡ ಕಾದಂಬರೀರಸಭರೇಣ ಸಮಸ್ತ ಏವ ಮತ್ತೋ ನ ಕಿಂಚಿದಪಿ ಚೇತಯತೇ ಜನೋಽಯಮ್ ।
ಭೀತೋಽಸ್ಮಿ ಯನ್ನ ರಸವರ್ಣವಿವರ್ಜಿತೇನ ತಚ್ಛೇಷಮಾತ್ಮವಚಸಾಪ್ಯನುಸಂದಧಾನಃ ॥
—ಕಾದಂಬರೀ



ಗತ್ಯಂತರವಿಲ್ಲದೆ ಸ್ನಾನ ಮುಗಿದ ಮೇಲೆ ಅವಳು ತಾಯಿಯೊಡನೆ ಮನೆಗೆ ಹಿಂದಿರುಗಿದಳು. ತಾನೂ ಅನುರಕ್ತನಾಗಿ ಅತ್ಯಂತ ವಿರಹಸಂತಾಪಕ್ಕೆ ಭಾಗಿಯಾದ ಪುಂಡರೀಕನಿಗೆ ಅವನ ಆಪ್ತಮಿತ್ರನಾದ ಕಪಿಂಜಲನು ಬಹಳ ಬುದ್ಧಿ ಹೇಳಿದರೂ ಅದು ವ್ಯರ್ಥವಾಯಿತು. ಪ್ರಾಣ ಉಳಿಯುವುದೇ ಕಷ್ಟವೆಂದು ಕಾಣಲು ಅವನು ಹೋಗಿ ಮಹಾಶ್ವೇತೆಯನ್ನು ಕರೆತಂದನು. ಅಷ್ಟರಲ್ಲಿ ವಿರಹೋದ್ದೀಪಕನಾದ ಚಂದ್ರನನ್ನು ಶಪಿಸಿ ಚಂದ್ರನಿಂದ ತಾನೂ ಶಪ್ತನಾಗಿ ಪುಂಡರೀಕನು ಅಸು ನೀಗಿದ್ದನು. ಚಂದ್ರಮಂಡಲದಿಂದ ಒಬ್ಬ ದಿವ್ಯಪುರುಷನು ಬಂದು ಪ್ರಾಣಪರಿತ್ಯಾಗರತಳಾಗಿದ್ದ ಮಹಾಶ್ವೇತೆಗೆ ಮತ್ತೆ ಪತಿಯ ಸಮಾಗಮವಾಗುವುದರಿಂದ ಪ್ರಾಣ ಬಿಡಬಾರದೆಂದು ಹೇಳಿ ಪುಂಡರೀಕನ ದೇಹವನ್ನು ಎತ್ತಿಕೊಂಡು ಚಂದ್ರಮಂಡಲಕ್ಕೆ ಹೊರಟುಹೋದನು. ನನ್ನ ಮಿತ್ರನನ್ನೆಲ್ಲಿಗೆ ಅಪಹರಿಸಿಕೊಂಡು ಹೋಗುತ್ತಿರುವೆ ? ನಿಲ್ಲು ಎಂದು ಹೇಳುತ್ತಾ ಕಪಿಂಜಲನೂ ಆ ದಿವ್ಯಪುರುಷನನ್ನೇ ಹಿಂಬಾಲಿಸಿದನು. ಮಹಾಶ್ವೇತೆಯು ತಪಸ್ವಿನಿಯಾಗಿ ಕಾಷಾಯಕಮಂಡಲುಗಳನ್ನು ಧರಿಸಿ ಕೈಲಾಸಗಿರಿಯಲ್ಲಿದ್ದ ಶೂಲಪಾಣಿಯ ಸಿದ್ಧಾಯತನವನ್ನು ಸೇರಿದಳು.

ಶಾಪ-ಪ್ರತಿಶಾಪಗಳ ಪ್ರಭಾವದಿಂದ ಚಂದ್ರನು ಚಂದ್ರಾಪೀಡನೆಂಬ ಹೆಸರಿನಿಂದ ದೊರೆಯಾದ ತಾರಾಪೀಡನ ಮಗನಾಗಿಯೂ, ಪುಂಡರೀಕನು ವೈಶಂಪಾಯನನೆಂಬ ಹೆಸರಿನಿಂದ ಮಂತ್ರಿಯಾದ ಶುಕನಾಸನ ಮಗನಾಗಿಯೂ ಭೂಲೋಕದಲ್ಲಿ ಜನಿಸಿದರು, ಪ್ರಾಯಸಮರ್ಥರಾದ ಮೇಲೆ ಇಬ್ಬರೂ ಜೊತೆಗೂಡಿ ದಿಗ್ವಿಜಯಕ್ಕೆ ಹೊರಟರು. ಪ್ರಯಾಣಮಧ್ಯದಲ್ಲಿ ತಂಗಿದ್ದಾಗ ಚಂದ್ರಾಪೀಡನು ಏಕಾಕಿಯಾಗಿ ಬೇಟೆಯಾಡಲು ಇಂದ್ರಾಯುಧವೆಂಬ ಕುದುರೆಯನ್ನು ಹತ್ತಿ ಹೊರಟು ಕಿನ್ನರಮಿಥುನವನ್ನು ಕಂಡುಹಿಡಿಯಲು ಹಿಂಬಾಲಿಸಿ ಗಿರಿಯನ್ನು ಹತ್ತಿ ಕಿನ್ನರಮಿಥುನ ತಪ್ಪಿಸಿಕೊಳ್ಳಲು ಹತ್ತಿರದಲ್ಲಿದ್ದ ಅಚ್ಛೋದಸರೋವರದಲ್ಲಿ ದಣಿವನ್ನಾರಿಸಿಕೊಂಡು, ಆಗ ಕೇಳಿದ ಮಧುರಗಾನದ ದಿಕ್ಕಿಗೆ ನಡೆದು ತಪಸ್ವಿನಿಯಾಗಿದ್ದ ಮಹಾಶ್ವೇತೆಯನ್ನು ಕಂಡನು. ಪರಸ್ಪರ ಸ್ನೇಹವಿಶ್ವಾಸಗಳು ಮೂಡಿದ ಮೇಲೆ ಅವಳು ಗೆಳತಿಯಾದ, ಮಹಾಶ್ವೇತೆಯು ಮದುವೆಯಾಗುವ ತನಕ ತಾನೂ ಮದುವೆಯಾಗೆನೆಂದು ಹಟ ತಾಳಿದ್ದ ಗಂಧರ್ವ ರಾಜಕುಮಾರಿಯಾದ ಕಾದಂಬರಿಯನ್ನು ತೋರಿಸಲು ಹೇಮಕೂಟಕ್ಕೆ ಅವನನ್ನು ಕರೆದುಕೊಂಡು ಹೋದಳು. ಅಲ್ಲಿ ಚಂದ್ರಾಪೀಡ ಮತ್ತು ಕಾದಂಬರಿಯರು ಅನ್ಯೋನ್ಯಾನುರಕ್ತರಾದರು ರಾಜಧಾನಿಯಿಂದ ಕರೆ ಬಂದುದರಿಂದ ಅನಿವಾರ್ಯವಾಗಿ ಚಂದ್ರಾಪೀಡನು ಹಿಂದಿರುಗಿದನು.

ಸೈನ್ಯ ಕರೆತರಲು ಹಿಂದೆ ಉಳಿದುಕೊಂಡಿದ್ದ ವೈಶಂಪಾಯನನು ಅಚ್ಛೋದತೀರದಲ್ಲಿ ಅಡ್ಡಾಡುತ್ತಾ ಮಹಾಶ್ವೇತೆಯನ್ನು ಕಂಡು ಆತ್ಮೀಯತೆಯಿಂದ ಶುಕದಂತೆ ಮುದ್ದು ಮಾತುಗಳನ್ನಾಡಿ ಶುಕವಾಗೆಂಬ ಅವಳ ಶಾಪಕ್ಕೆ ಗುರಿಯಾದನು. ವಿರಹಸಂತಪ್ತನಾಗಿದ್ದ ಚಂದ್ರಾಪೀಡನೂ ಮಿತ್ರನ ಸ್ಥಿತಿಯನ್ನು ಕಂಡು ಪ್ರಾಣ ಬಿಟ್ಟನು, ಆಕಾಶವಾಣಿಯು ಪುನಸ್ಸಮಾಗಮದ ಮಾತಿನ ಭರವಸೆಯಿಂದ ಕಾದಂಬರಿಯು ಉಳಿದುಕೊಂಡಳು.

ಚಂದ್ರಾಪೀಡನು ಶೂದ್ರಕ ಮಹಾರಾಜನಾಗಿಯೂ, ವೈಶಂಪಾಯನನು ಶುಕವಾಗಿಯೂ ಮತ್ತೆ ಭೂಮಿಯಲ್ಲಿ ಹುಟ್ಟಿದರು. ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡಿದ ಈ ಶುಕದ ಮುದಿತಂದೆಯನ್ನು ಶಬರರು ಕೊಂದರು.

ನಡುಹಗಲಿನ ಸುಡುವ ಬಿಸಿಲಲ್ಲಿ ಧೂಳಿನಲ್ಲಿ ಬಿದ್ದು ಹೊರಳಾಡುತ್ತಿದ್ದ ಈ ಶುಕಶಿಶುವನ್ನು ಕಂಡು ಕರುಣೆಯಿಂದ ಉಪಚರಿಸಿ ಹಾರೀತನೆಂಬ ಋಷಿಕುಮಾರನು ತನ್ನ ತಂದೆಯಾದ ಜಾಬಾಲಿಯ ಆಶ್ರಮಕ್ಕೆ ತೆಗೆದುಕೊಂಡು ಹೋದನು. ರೆಕ್ಕೆ ಬಲಿತ ಮೇಲೆ ಅಲ್ಲಿಂದ ತಪ್ಪಿಸಿಕೊಂಡ ಗಿಳಿ ಚಂಡಾಲಕನ್ಯೆಯ ಕೈಗೆ ಸಿಕ್ಕಿತು. ಅವಳು ಅದನ್ನು ಶೂದ್ರಕ ಮಹಾರಾಜನಿಗೆ ಒಪ್ಪಿಸಿದಳು. ಇಲ್ಲಿಗೆ ಶಾಪ ಮುಗಿಯಿತು. ಗಿಳಿ ಮತ್ತು ಶೂದ್ರಕ ಮಹಾರಾಜರು ತಮ್ಮ ಪೂರ್ವದೇಹಗಳನ್ನು ಪಡೆದು ಪುಂಡರೀಕ ಚಂದ್ರಾಪೀಡರಾಗಿ ಪ್ರೇಯಸಿಯರೊಡನೆ ಸಕಲ ಭೋಗಭಾಗ್ಯಗಳನ್ನು ಅನುಭವಿಸಿದರು. ಲಕ್ಷ್ಮಿಯೇ ಪುತ್ರವಾತ್ಸಲ್ಯದಿಂದ ಚಾಂಡಾಲಕನೆ ಯಾಗಿಯೂ, ಕಪಿಂಜಲನೇ ಮಿತ್ರಸ್ನೇಹದಿಂದ ಇಂದ್ರಾಯುಧವಾಗಿಯೂ ಹುಟ್ಟಿದ್ದರು.

ಕಾದಂಬರಿಯ ಕಥಾಸಂವಿಧಾನವು ಹೆಜ್ಜೆಹೆಜ್ಜೆಗೂ ಕುತೂಹಲವನ್ನು ಕೆರಳಿಸುತ್ತಾ ಓದು ಗರನ್ನು ದಿವ್ಯಸುಂದರವಾದ ಒಂದು ಮಾಯಾಲೋಕಕ್ಕೆ ಕರೆದುಕೊಂಡು ಹೋಗುತ್ತದೆ. ಕಾದಂಬರೀ-ಚಂದ್ರಾಪೀಡರ ಮತ್ತು ಮಹಾಶ್ವೇತೆ-ಪುಂಡರೀಕರ ಎರಡು ಪ್ರಣಯಕತೆಗಳು ಒಂದರೊಡನೊಂದು ಹಾಸುಹೊಕ್ಕಾಗಿ ಹೆಣೆಕೆಗೊಂಡಿವೆ. ಮೂರು ಜನ್ಮಗಳ ಮೂಲಕ ಹಾದು, ಯಕ್ಷ, ಗಂಧರ್ವ, ವಿದ್ಯಾಧರ, ಕಿನ್ನರ, ಚಂದ್ರ ಶಂಕರ, ಹೇಮಕೂಟ ಕೈಲಾಸಾದಿಗಿರಿಗಳು, ಅಚ್ಛೋದಾದಿ ಸರೋವರಗಳು, ರಾಜಕುಮಾರ-ಕುಮಾರಿಯರು, ತಾಪಸ-ತಾಪಸಿಯರು, ಮಾಯಾಶ್ವಾದಿ ದಿವ್ಯಮೃಗಗಳು, ಶಬರರು, ಜಾತಿಸ್ಮರಗಳಾದ ಪಕ್ಷಿಗಳು, ವಿಂಧ್ಯಾಟವಿ, ದ್ರವಿಡ ಧಾರ್ಮಿಕ ಮುಂತಾದವರ ನೆರವಿನಿಂದ ಮೋಹಕವಾಗಿ ಬೆಳೆದು ಕಥೆಯು ಸ್ವರ್ಗಮರ್ತ್ಯಗಳೆರಡಕ್ಕೂ ಬಂಧುರ ಸಂಬಂಧ ಕಲ್ಪಿಸಿದೆ. ಶಾಪ, ಶಾಪಪರಿಹಾರ, ಪೂರ್ವಜನ್ಮಸ್ಮರಣೆ, ಆಕಾಶವಾಣಿ ಮೊದಲಾದುವೂ ಬರುತ್ತವೆ. ಶೂದ್ರಕ ಮಹಾರಾಜನಿಗೆ ವೈಶಂಪಾಯನ ಗಿಳಿಯು ಹೇಳುವಂತೆ ಕಥೆ ಬಂದಿದೆ. ಮಹಾಶ್ವೇತೆಯು ತನ್ನ ವೃತ್ತಾಂತವನ್ನು ಚಂದ್ರಾಪೀಡನಿಗೆ ಹೇಳಿದರೆ, ಜಾಬಾಲಿಯು ಆಶ್ರಮವಾಸಿಗಳಿಗೆ ಶುಕಶಿಶುವಿನ ಸಕಲ ವೃತ್ತಾಂತವನ್ನು ಹೇಳುತ್ತಾನೆ. ಕಥೆಯು ತೊಡಕ್ಕಾಗಿದ್ದರೂ ಸ್ವಾರಸ್ಯಕ್ಕೆ ಕುಂದುಂಟುಮಾಡದೆ ಕಥಾಪ್ರಕಾರಕ್ಕೆ ಮುಖ್ಯವಾದ ಕುತೂ ಹಲವನ್ನು ಕೆರಳಿಸಲು ಸಮರ್ಥವಾಗಿದೆ. ಗುಣಾಢ್ಯನ ಬೃಹತ್ಕಥೆಯ ಆಧಾರದಿಂದ ಈ ಕಥೆಯು ರಚಿತವಾಗಿದೆ. ಕಥಾಸರಿತ್ಸಾಗರದಲ್ಲಿರುವ ಮನೋರಥಪ್ರಭೆಯ ವೃತ್ತಾಂತವೇ ಇದಕ್ಕೆ ಸಾಕ್ಷಿ.* ಕಾದಂಬರಿಯ ಕಥಾಸಂವಿಧಾನದಲ್ಲಿ ಬೃಹತ್ಕಥೆಯಲ್ಲಿಲ್ಲದ ಅಂತಹ ಅಪೂರ್ವ ಸ್ವಾರಸ್ಯವೇನೂ ಇಲ್ಲ. ಹರ್ಷಚರಿತದ ಲೌಕಿಕ ಸ್ವಾರಸ್ಯವೂ ಇದರಲ್ಲಿಲ್ಲ. ಬಾಣನಿಂದ ರಚಿತವಾದ

* ಶಕ್ತಿಯಶೋಲಂಬಕ ಮೂರನೆಯ ತರಂಗ-



ಪೂರ್ವಭಾಗದಲ್ಲಂತೂ ಅಂತಹ ಕಥಾಸ್ವಾರಸ್ಯವೇನೂ ಇಲ್ಲ. ವರ್ಣನೆಯೇ ಕಾದಂಬರಿಯ ಜೀವಾಳ. ಇಲ್ಲಿ ವರ್ಣನೆಯೇ ಕಥೆ ; ಕಥೆಯೇ ವರ್ಣನೆ.

ಬಾಣನು ವರ್ಣಿಸದಿರುವ ಪ್ರಕೃತಿಯ ಭಾಗವಿಲ್ಲ. ಉತ್ಪ್ರೇಕ್ಷಿಸದಿರುವ ಹೃದಯದ ಭಾವವಿಲ್ಲ. 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂಬ ಲೋಕೋಕ್ತಿಯೇ ಹುಟ್ಟಿಕೊಂಡಿದೆ. ಕಾದಂಬರಿಯು ಶೂದ್ರಕಮಹಾರಾಜನ ವರ್ಣನೆಯಿಂದ ಪ್ರಾರಂಭವಾಗಿ ವಿಂಧ್ಯಾಟವೀ, ಅಗಸ್ತ್ಯಾಶ್ರಮ, ಶಾಲ್ಮಲೀತರು, ಶಬರಸೈನ್ಯ, ಉಜ್ಜಯಿನೀ, ಅಚ್ಛೋದಸರೋವರ, ಮಹಾಶ್ವೇತಾ, ಕಾದಂಬರೀ, ಜರದ್ದ್ರವಿಡಧಾರ್ಮಿಕ ಮುಂತಾದ ವರ್ಣನೆಗಳ ದೀರ್ಘಸುವರ್ಣ ಶೃಂಖಲೆಯನ್ನು ಹೊಂದಿದೆ. ಹೂಗಳಿಗೆ ದಾರದಂತೆ ಈ ವರ್ಣನೆಗಳಿಗೆ ಕಥೆಯು ಸಂಬಂಧ ಕಲ್ಪಿಸುತ್ತದೆ. ವರ್ಣನೆಗಳು ಅನುಚಿತವೂ, ಅಸ್ಥಾನಸ್ಥವೂ ಆಗಿರದೆ ಯಥಾಕ್ರಮವಾಗಿ ಬೆಳೆದು ಪೂರ್ಣ ವಿಕಾಸಗೊಂಡು, ಅಲಂಕಾರಭೂಷಿತವಾಗಿ ರಸಪರಿಪೋಷಕವಾಗಿ ತಮ್ಮದೇ ಆದ ವೈಶಿಷ್ಟ್ಯದಿಂದ ವಿಶೇಷಾನುರಂಜನೆಯನ್ನು ನೀಡುತ್ತವೆ. ತ್ರೈಲೋಕ್ಯಲಕ್ಷ್ಮಿಯ ಮಣಿದರ್ಪಣ ದಂತೆಯೂ, ವಸುಂಧರೆಯ ಸ್ಫಟಿಕಭೂಮಿಗೃಹದಂತೆಯೂ, ಸಾಗರಗಳ ನಿರ್ಗಮನ ಮಾರ್ಗದಂತೆಯೂ ಇರುವ ಅಚ್ಛೋದದ ವರ್ಣನೆಯನ್ನು ಓದಿ ಆನಂದದಿಂದ ತಲೆ ದೂಗದವರಿಲ್ಲ. ದ್ರವಿಡಧಾರ್ಮಿಕನ ವರ್ಣನೆಯಲ್ಲಿ ಯಥೇಚ್ಛವಾಗಿ ಹಾಸ್ಯ ದೊರೆಯುತ್ತದೆ. ಮಹಾಶ್ವೇತೆಯ ವರ್ಣನೆಯು ಸೌಂದರ್ಯದ ಪರಾಕಾಷ್ಠೆಯನ್ನು ಮುಟ್ಟಿಸುತ್ತದೆ. ಸಮಾಸ ಭೂಯಿಷ್ಠವಾದ ಈ ವಿಶಾಲವರ್ಣನೆಗಳನ್ನು ಪಾಶ್ಚಾತ್ಯ ವಿಮರ್ಶಕರು ಟೀಕಿಸುತ್ತಾರೆ. ವರ್ಣನೆ ಗಳಲ್ಲಿ ಸಿಕ್ಕಿಕೊಂಡ ಓದುಗರ ಗೋಳು ಘೋರಾರಣ್ಯದಲ್ಲಿ ದಾರಿಯನ್ನು ಕಳೆದುಕೊಂಡ ಪಥಿಕ ನಂತಾಗುತ್ತದೆಂದು ಹೇಳುತ್ತಾರೆ.* ಈ ವರ್ಣನೆಯಿಂದ ಪಾರಾಗಿ ಬರುವ ಹೊತ್ತಿಗೆ ಕಥಾ ಸೂತ್ರವು ಅನೇಕವೇಳೆ ಹರಿದುಹೋಗಿರುತ್ತದೆಂದೂ ಅಭಿಪ್ರಾಯಪಡುತ್ತಾರೆ.* ಪಾಶ್ಚಾತ್ಯರಿಗೆ ಈ ಮಾತು ಸರಿಯಾದರೂ ವರ್ಣನೆಗಳಿಗೆ ಒಗ್ಗಿ ಹೋಗಿರುವ, ರುಚಿ ಕಂಡಿರುವ ನಮಗೆ ಸರಿ ಕಾಣುವುದಿಲ್ಲ. ಒಂದು ದೇಶದ ಸಾಹಿತ್ಯದಂತೆ ಮತ್ತೊಂದು ದೇಶದ ಸಾಹಿತ್ಯವು ಇರಲಾರದು.

ಹೃದಯದ ಭಾವಗಳನ್ನು ಚಿತ್ರಿಸುವುದರಲ್ಲಿಯೂ ಬಾಣನದು ಪಳಗಿದ ಲೇಖನಿ. ಮೂಡುವ ಭಾವಪರಂಪರೆಯನ್ನು ಎಳೆಎಳೆಯಾಗಿ ವಿಶ್ಲೇಷಿಸಿ ಹೃದಯಂಗಮವಾಗಿ ಒದಗಿಸುತ್ತಾನೆ.

ತಂದೆಯು ಸತ್ತುಬಿದ್ದಿದ್ದರೂ ಬಾಯಾರಿಕೆಯಿಂದ ಚಡಪಡಿಸುವ ವೈಶಂಪಾಯನ ಶುಕ ಶಿಶುವಿನ ಮೃದುಹೃದಯದಲ್ಲಿ ಎದ್ದ ಭಾವತರಂಗಗಳನ್ನು ಬಣ್ಣಿಸಿರುವುದು ಯಾರನ್ನು ಆನಂದ ಗೊಳಿಸುವುದಿಲ್ಲ? ಶುಕನಾಸನು ಚಂದ್ರಾಪೀಡನಿಗೆ ನೀಡಿದ ಉಪದೇಶವು ಅದ್ಭುತರಮ್ಯವಾಗಿದೆ;

* Bana's prose is an Indian wood where progress is impossible through the undergrowth until the traveller cuts out a path for himself, and where even then he is confronted by malicious wild beasts in the shape of unknown words to terrify him.

* ಪ್ರೊ। ಟಿ. ಎಸ್. ವೆಂಕಣ್ಣಯ್ಯನವರು—" ಕರ್ಣಾಟಕ ಕಾದಂಬರಿ ಸಂಗ್ರಹ

ನಿತ್ಯಸತ್ಯವಾಗಿದೆ. ಇದು ರಾಜಕುಮಾರರಿಗೆ ಅಗತ್ಯವಾದ ಪ್ರಜ್ಞೆಯನ್ನು ನೀಡುತ್ತದೆ. ಪುಂಡರೀಕನನ್ನು ಕುರಿತ ಕಪಿಂಜಲನ ಉಪದೇಶವೂ ಮಾರ್ಮಿಕವಾಗಿದೆ. ಕಾವ್ಯದಲ್ಲಿ ಹೇರಳವಾಗಿ ಲೋಕೋಕ್ತಿಗಳು ದೊರೆಯುತ್ತವೆ. ಅದ್ಭುತಘಟನೆಗಳಲ್ಲಿ ಅಪನಂಬಿಕೆಯನ್ನು ತಾಳಿ, ವಿಸ್ತೃತವರ್ಣನೆಗಳಿಗೆ ಹೆದರಿ, ದೂರಸರಿದವನಿಗೆ ಈ ಕೃತಿ ಬಂಡಾದೀತು. ಶೃಂಗಾರವು ಕಾದಂಬರಿಯ ಪ್ರಧಾನ ರಸ. ಲಾಕ್ಷಣಿಕರು ಇದನ್ನು ಕರುಣವಿಪ್ರಲಂಭಶೃಂಗಾರವೆಂದು ಪರಿಗಣಿಸಿದ್ದಾರೆ.* ಈ ಕೃತಿಯ ರಸಧ್ವನಿಯು ನಿರರ್ಗಳವಾಗಿ ಹರಿದು ಸಹೃದಯರನ್ನು ತನ್ನಲ್ಲಿ ಲಯಗೊಳಿಸಿಕೊಳ್ಳುತ್ತದೆ. 'ಕಾದಂಬರೀ ರಸಜ್ಞಾನಾಂ ಆಹಾರೋಽಪಿ ನ ರೋಚತೇ' ಎಂಬ ಪ್ರಸಿದ್ಧ ಲೋಕೋಕ್ತಿಯು ಹುಟ್ಟಿಕೊಂಡಿದೆ. ಇಲ್ಲಿಯ ಪ್ರೇಮ ಒಂದು ಜನ್ಮಕ್ಕೇ ಅಳಿಸಿ ಹೋಗದೆ ಜನ್ಮಾಂತರಗಳಿಗೂ ವ್ಯಾಪಿಸಿ ನಿಲ್ಲುತ್ತದೆ. ಇದರ ನಾಯಕರು ಪ್ರೇಯಸಿಯರ ಆಗಮನದವರೆಗೆ ತಡೆಯಲಾರದೆ ಪ್ರಾಣಬಿಡುವ ಕೋಮಲಹೃದಯರು ; ನಾಯಕಿಯರಾದರೋ ಪ್ರೇಮಕ್ಕಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡುವ ಆದರ್ಶದೇವಿಯರು. ಒಂದು ಸಲ ಓದಿದವರ ಹೃದಯದಲ್ಲಿ ಮಾಸದಂತೆ ಚಿರಕಾಲ ನಿಂತು ಶೋಭಿಸುವಂತೆ ಕವಿಯು ಮಹಾಶ್ವೇತೆಯ ಮೂರ್ತಿಯನ್ನು ಕಡೆದು ಸ್ಥಾಪಿಸಿದ್ದಾನೆ. ಪ್ರತಿಯೊಂದು ಪಾತ್ರವೂ ಸಂಪುಷ್ಟವಾಗಿ ಬೆಳೆದಿದೆ. ಅಲ್ಪಕಾಲ ಕಾಣಿಸುವ ಚಂಡಾಲಕನ್ಯೆಯೂ ಹೃದಯರಂಗದಲ್ಲಿ ನಡೆದು ಮಾತನಾಡಿದಂತಾಗುತ್ತದೆ. ಒಂದು ಮರ, ಒಂದು ಮೃಗ, ಒಂದು ಗಿರಿ ಎಲ್ಲವೂ ಸ್ಥಿರಾಕಾರ ಪಡೆದಿವೆ. ಸುಂದರಯುವತಿಯೂ, ರಾಜಕನ್ಯೆಯೂ ಆದ ಪತ್ರಲೇಖೆಯು ತರುಣನೂ, ಸುಂದರನೂ ಆದ ಚಂದ್ರಾಪೀಡನ ಸಹಚರಿಯಾಗಿ, ಅವನು ನಿಂತಲ್ಲಿ ನಿಂತು, ಹೋದಲ್ಲಿ ಹೋಗಿ ಮನೋಜ್ಞ ಜೋಡಿಯಾಗಿ ಬಹುದೂರ ಕಾಣಿಸಿಕೊಂಡು ಕೊನೆಗೆ ಇದ್ದಕ್ಕಿದ್ದಂತೆ ಕಣ್ಮರೆಯಾಗುವುದು ಓದುಗರ ಕರುಳನ್ನು ಹಿಂಡುತ್ತದೆ ; ಬಾಣನನ್ನು ನಿಷ್ಕರುಣಿ ಎಂದು ದೂಷಿಸಬೇಕೆನಿಸುತ್ತದೆ. ರಾಮಾಯಣದ ಊರ್ಮಿಳೆಯಂತೆ ಪತ್ರಲೇಖೆಯ ತ್ಯಾಗವು ಪರರಿಗಾಗಿ.

ಬಾಣನ ಶೈಲಿಯು ಅದ್ಭುತರಮ್ಯವಾದುದು. ಸಮಾಸಭೂಯಿಷ್ಠವಾದ ದೀರ್ಘ ವಾಕ್ಯಗಳು ಸಾಗರದ ಘನ-ಗಂಭೀರ-ಹೆದ್ದೆರೆಗಳಂತೆ ಗರ್ಜಿಸುತ್ತಾ, ಪುಂಖಾನುಪುಂಖವಾಗಿ ಬಂದರೆ ಸಮಾಸರಹಿತವಾಗಿ ಪ್ರಸಾದಗುಣದಿಂದ ಕೂಡಿದ ಚಿಕ್ಕ ವಾಕ್ಯಗಳು ಕಾಸಾರದ ಕಿರುಕಲ್ಲೋಲಗಳಂತೆ ಮಂಜುಳನಾದ ಮೀಟುತ್ತಾ, ಗುಂಪುಗುಂಪಾಗಿ ಬರುತ್ತವೆ.

ಬಾಣನದು ದೊಡ್ಡ ಕೈ ; ಅವನು ಕೈತುಂಬಾ ಬಡಿಸುತ್ತಾನೆ. ರೂಪಕಗಳ ಗುಂಪು, ಉತ್ಪ್ರೇಕ್ಷೆಗಳ ಗುಂಪು, ಶ್ಲೇಷೆಗಳ ಗುಂಪು, ಭಾವಗಳ ಗುಂಪು—ಎಲ್ಲವೂ ಯಥೇಚ್ಛವಾಗಿ ಪುಂಜಪುಂಜವಾಗಿ ದೊರೆಯುತ್ತವೆ. ಇವನ ಪದಗುಂಫನ ಸಾಮರ್ಥ್ಯವು ಅನುಪಮವಾದುದು. ವೀಣೆಯ ತಂತಿಯಿಂದ ವಿಷಯ-ರಸ-ಭಾವಾನುಗುಣವಾಗಿ ಸ್ವರ ಮೂಡಿ ಏರಿಳಿತಗಳಲ್ಲಿ ಹರಿಯುವಂತೆ ಬಾಣನ ವಾಕ್ಯಗಳಿಂದ ಕಲಮಧುರವಾದ ನಾದವು ಮೂಡಿ ಓದುಗರಿಗೆ ವಿಜಾತೀಯವಾದ

---

* ವಿಶ್ವನಾಥ—ಸಾಹಿತ್ಯದರ್ಪಣ.



ಆನಂದವನ್ನುಂಟುಮಾಡುತ್ತದೆ.* ನಾದ ಚರಿತ ರಸಭಾವಗಳು ಸಹೃದಯರನ್ನು ಅಲೌಕಿಕ ಲೋಕಕ್ಕೆ ಕರೆದುಕೊಂಡು ಹೋಗಿ 'ರಸೋ ವೈ ಸಃ' ಎಂಬ ಮಾತಿನ ಅರ್ಥವನ್ನು ಸತ್ಯಗೊಳಿಸುತ್ತವೆ.† ಬಾಣನ ವಿನೂತನ ಶೈಲಿಯ ಪರಿಚಯಕ್ಕಾಗಿ ಕೆಲವು ವಾಕ್ಯಗಳನ್ನಿಲ್ಲಿ ಕೊಡಲಾಗಿದೆ.

**ಶೂದ್ರಕನ ಪ್ರತೀಹಾರಿಯ ವರ್ಣನೆ :—**

ಏಕದಾ ತು ನಾತಿದೂರೋದಿತೇ ನವನಲಿನದಲಸಂಪುಟಭಿದಿ ಕಿಂಚಿನ್ಮುಕ್ತಪಾಟಲಿಮ್ನಿ ಭಗವತಿ ಸಹಸ್ರಮರೀಚಿಮಾಲಿನಿ, ರಾಜಾನಮಾಸ್ಥಾನಮಂಡಪಗತಮಂಗನಾಜನವಿರುದ್ಧೇನ ವಾಮಪಾರ್ಶ್ವಾವಲಂಬಿನಾ ಕೌಕ್ಷೇಯಕೇಣ ಸನ್ನಿಹಿತವಿಷಧರೇವ ಚಂದನಲತಾಭೀಷಣರಮಣೀಯಾಕೃತಿಃ. ಅವಿರಲಚಂದನಾನುಲೇಪನಧವಲಿತಸ್ತನತಟಾ ಉನ್ಮಜ್ಜದೈರಾವತಕುಂಭಮಂಡಲೇವ ಮಂದಾಕಿನೀ, ಚೂಡಾಮಣಿಸಂಕ್ರಾಂತಪ್ರತಿಬಿಂಬಚ್ಛಲೇನ ರಾಜಾಜ್ಞೇವ ಮೂರ್ತಿಮತೀ, ರಾಜಭಿಃ ಶಿರೋಭಿರುಹ್ಯಮಾನಾ ಶರದಿವ ಕಲಹಂಸಧವಲಾಂಬರಾ, ಜಾಮದಗ್ನ್ಯಪರಶುಧಾರೇವ ವಶೀಕೃತಸಕಲರಾಜಮಂಡಲಾ, ವಿಂಧ್ಯಾವನಭೂಮಿರಿವ ವೇತ್ರಲತಾವತೀ, ರಾಜ್ಯಾಧಿದೇವತೇವ ವಿಗ್ರಹಿಣೀ ಪ್ರತಿಹಾರೀ ಸಮುಪಸೃತ್ಯ ಕ್ಷಿತಿತಲನಿಹಿತಜಾನುಕರಕಮಲಾ ಸವಿನಯಮಬ್ರವೀತ್.

ಇದು ಕಾದಂಬರಿಯಲ್ಲಿ ಕಾಣುವ ಬಾಣನ ಸಾಮಾನ್ಯ ಶೈಲಿ. ಇದರಲ್ಲಿ ನಿರರ್ಗಳವಾದ ಓಟವಿದೆ. ಶ್ರವಣಮಧುರ ನಾದವಿದೆ. ಈ ಪದಪುಂಜಗಳು ಉಪಮಾ-ಉತ್ಪ್ರೇಕ್ಷಾ-ಶ್ಲೇಷೆಗಳಿಂದ ಅಲಂಕೃತವಾಗಿ ಪ್ರತಿಹಾರಿಯ ಸೌಂದರ್ಯ, ಪದವಿಯ ಗಾಂಭೀರ್ಯಗಳನ್ನು ಸುಂದರವಾಗಿ ಧ್ವನಿಸುತ್ತವೆ.

**ಶುಕನಾಸನ ಉಪದೇಶದಲ್ಲಿ ಲಕ್ಷ್ಮಿಯ ಸ್ವಭಾವಚಿತ್ರಣ :—**

ನ ಪರಿಚಯಂ ರಕ್ಷತಿ, ನಾಭಿಜನಮೀಕ್ಷತೇ, ನ ರೂಪಮಾಲೋಕಯತೇ, ನ ಕುಲಕ್ರಮಮನುವರ್ತತೇ, ನ ಶೀಲಂ ಪಶ್ಯತಿ, ನ ವೈದಗ್ಧ್ಯಂ ಗಣಯತಿ, ನ ಶ್ರುತಮಾಕರ್ಣಯತಿ, ನ ಧರ್ಮಮನುರುಧ್ಯತೇ, ನ ತ್ಯಾಗಮಾದ್ರಿಯತೇ, ನ ವಿಶೇಷಜ್ಞತಾಂ ವಿಚಾರಯತಿ, ನಾಚಾರಂ ಪಾಲಯತಿ, ನ ಸತ್ಯಮನುಬುಧ್ಯತೇ, ನ ಲಕ್ಷಣಂ ಪ್ರಮಾಣೀಕರೋತಿ.................

ಮುತ್ತಿನಂತೆ ಬಿಡಿಬಿಡಿ ಮಾತುಗಳಿಂದ ಕೂಡಿರುವ ಈ ಶೈಲಿಯು ಸರಳವಾದರೂ ಬಹಳ ಪ್ರಭಾವಶಾಲಿಯಾಗಿದೆ, ಕಜ್ಜಾಯದೊಡನೆ ಸಂಚಿಕೆಯಂತೆ ಗಂಭೀರವಾಕ್ಯಗಳ ಜೊತೆಗೂಡಿದ ಸರಳವಾಕ್ಯಗಳಿಂದ ವಿಶೇಷ ರುಚಿಯುಂಟಾಗುತ್ತದೆ.

---

* ವಾಣೀಪಾಣಿಪರಾಮೃಷ್ಟವೀಣಾನಿಕ್ವಾಣಹಾರಿಣೀಮ್ ।
ಭಾವಯಂತಿ ಕಥಂ ವಾನ್ಯೇ ಭಟ್ಟಬಾಣಸ್ಯ ಭಾರತೀಮ್ ॥
—ಗಂಗಾದೇವಿ

† ರುಚಿರಸ್ವರವರ್ಣಪದಾ ರಸಭಾವವತೀ ಜಗನ್ಮನೋ ಹರತಿ ।
ತತ್ ಕಿಂ ತರುಣೀ ನಹೀ ನಹಿ ವಾಣೀ ಬಾಣಸ್ಯ ಮಧುರಶೀಲಸ್ಯ ॥
—ಧರ್ಮದಾಸಸೂರಿ-ವಿದಗ್ಧಮುಖಮಂಡನ

ಮಹಾಶ್ವೇತೆಯ ಶರೀರದಲ್ಲಿ ನವಯೌವನವು ಕಾಲಿಟ್ಟ ಬಗೆಯನ್ನು ಈ ಮಾಲೋಪಮೆಯು ಸುಂದರವಾಗಿ ಪ್ರತಿಪಾದಿಸುತ್ತದೆ—

ಕ್ರಮೇಣ ಚ ಕೃತಂ ಮೇ ವಪುಷಿ ವಸಂತ ಇವ ಮಧುಮಾಸೇನ, ಮಧುಮಾಸ ಇವ ನವಪಲ್ಲವೇನ, ನವಪಲ್ಲವ ಇವ ಕುಸುಮೇನ, ಕುಸುಮ ಇವ ಮಧುಕರೇಣ, ಮಧುಕರ ಇವ ಮದೇನ, ನವಯೌವನೇನ ಪದಮ್.

ವಿರೋಧಾಭಾಸಪರಂಪರೆಗೆ ಒಂದು ಚಿಕ್ಕ ಉದಾಹರಣೆ (ವಿಂಧ್ಯಾಟವೀ)—

ಅಪರಿಮಿತಬಹುಲಪತ್ರಸಂಚಯಾಪಿ । ಸಪ್ತಪರ್ಣಭೂಷಿತಾ, ಕ್ರೂರಸತ್ವಾಽಪಿ! ಮುನಿಜನಸೇವಿತಾ. ಪುಷ್ಪವತ್ಯಪಿ । ಪವಿತ್ರಾ.........

ಉತ್ಪ್ರೇಕ್ಷಾಪರಂಪರೆಗೆ ಒಂದು ಉದಾಹರಣೆ (ಜಾಬಾಲ್ಯಾಶ್ರಮ)—

ಅನಿಲಾವನಮಿತಶಿಖರಾಭಿಃ । ಪ್ರಣಮ್ಯಮಾನಮಿವ । ವನಲತಾಭಿಃ, ಅನವರತಮುಕ್ತ ಕುಸುಮೈರಭ್ಯರ್ಚ್ಯಮಾನಮಿವ । ಪಾದಪೈಃ । ಆಬದ್ಧಪಲ್ಲವಾಂಜಲಿಭಿಃ । ಉಪಾಸ್ಯಮಾನಮಿವ. ವಿಟಪೈಃ....................

ಬಾಣನ ಸೂಕ್ತಿಗಳು ಬಹಳ ಶಕ್ತವಾಗಿವೆ. ಅವುಗಳ ಪ್ರಭಾವ ಪರಿಯಕ್ಕಾಗಿ ಕೆಲವು ಸೂಕ್ತಿಗಳನ್ನಿಲ್ಲಿ ಕೊಡಲಾಗಿದೆ—

**ಹರ್ಷಚರಿತ :—**

1. ಕ್ಷಮಾ ಹಿ ಮೂಲಂ ಸರ್ವತಪಸಾಂ.
2. ಸಲಿಲಾನೀವ ಗತಗತಿಕಾನಿ ಲೋಲಾನಿ ಖಲು ಭವಂತ್ಯವಿವೇಕಿನಾ ಮನಾಂಸಿ.
3. ಸಂಪತ್ಕಣಿಕಾಮಪಿ ಪ್ರಾಪ್ಯ ತುಲೇವ ಲಘು ಪ್ರಕೃತಿರುನ್ನತಿಮಾಯಾತಿ.
4. ಅಲೋಹಃ ಖಲು ಸಂಯಮನಪಾಶಃ ಸೌಜನ್ಯಮಭಿಜಾತಾನಾಂ.

**ಕಾದಂಬರೀ :—**

1. ಕಿಮಿವ ಹಿ ದುಷ್ಕರಮಕರುಣಾನಾಂ.
2. ಸರ್ವಥಾ ನ ಕಂಚಿತ್ ನ ಖಲೀಕರೋತಿ ಜೀವಿತತೃಷ್ಣಾ.
3. ಜನಯತಿ ಹಿ ಪ್ರಭುಪ್ರಸಾದಲವೋಽಪಿ ಪ್ರಾಗಲ್ಭ್ಯಮಧೀರ ಪ್ರಕೃತೇಃ.
4. ನ ಹಿ ಕ್ಷುದ್ರನಿರ್ಘಾತಪಾತಾಭಿಹತಾ ಚಲತಿ ವಸುಧಾ.
5. ಅಪರಿಣಾಮೋಪಶಮೋ ದಾರುಣೋ ಲಕ್ಷ್ಮೀಮದಃ.

ಭಾನುಚಂದ್ರ ಮತ್ತು ಸಿದ್ಧಚಂದ್ರ, ಹರಿದಾಸ, ಶಿವರಾಮ, ವೈದ್ಯನಾಥ, ಬಾಲಕೃಷ್ಣ, ಸುರಚಂದ್ರ, ಮಹಾದೇವ, ಸುಖಾಕರ, ಅರ್ಜುನ, ಘನಶ್ಯಾಮ ಮುಂತಾದವರು ಕಾದಂಬರಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಕಾದಂಬರಿಯ ಕಥೆಯನ್ನವಲಂಬಿಸಿ ದುಂಡಿರಾಜ ವ್ಯಾಸ ಯಜ್ವನನು ಅಭಿನವಕಾದಂಬರಿಯನ್ನು, ಅಭಿನಂದನು 8 ಸರ್ಗಗಳ ಕಾದಂಬರಿ ಕಥಾಸಾರವೆಂಬ



ಪದ್ಯಕಾವ್ಯವನ್ನೂ, ವಿಕ್ರಮದೇವನು 13 ಸರ್ಗಗಳ ಕಾದಂಬರೀ ಕಥಾಸಾರವೆಂಬ ಪದ್ಯಕಾವ್ಯವನ್ನೂ, ಶ್ರೀಕಂಠಾಭಿನವಶಾಸ್ತ್ರಿಯು ಕಾದಂಬರೀ ಚಂಪುವನ್ನೂ, ನರಸಿಂಹನು ಕಾದಂಬರೀ ಕಲ್ಯಾಣವೆಂಬ ನಾಟಕವನ್ನೂ ಬರೆದಿದ್ದಾರೆ. ಮಣಿರಾಮ, ಕಾಶೀನಾಥ, ಆರ್. ವಿ ಕೃಷ್ಣಮಾಚಾರ್ಯ ಮುಂತಾದವರು ಕಾದಂಬರಿಯ ಸಂಗ್ರಹಗಳನ್ನು ರಚಿಸಿದ್ದಾರೆ,

**ದಶಕುಮಾರಚರಿತಂ :—**

ಸಂಸ್ಕೃತ ಗದ್ಯಸಾಹಿತ್ಯದಲ್ಲಿ ದಂಡಿಯ ದಶಕುಮಾರ ಚರಿತವು ಜನಪ್ರಿಯವಾದ ಕೃತಿ. 'ಅವಂತಿ ಸುಂದರೀ ಕಥಾಸಾರ'ದಿಂದ ದಂಡಿಯ ಜೀವಿತದ ಕೆಲವು ಸಂಗತಿಗಳು ದೊರೆಯುತ್ತವೆ. ಭಾರವಿ ಅಥವಾ ದಾಮೋದರನ ಮಗನಾದ ಮನೋರಥನಿಗೆ ನಾಲ್ವರು ಮಕ್ಕಳಿದ್ದರು. ಇವರಲ್ಲಿ ಕಿರಿಯವನಾದ ವೀರದತ್ತನಿಗೆ ' ಗೌರಿ ' ಎಂಬ ಹೆಂಡತಿಯಿದ್ದಳು. ಇವರ ಮಗನೇ ದಂಡಿ, ಇವನು ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ನಿರಾಶ್ರಿತನಾಗಿ ಕಾಂಚಿಯಲ್ಲಿ ವಾಸಮಾಡುತ್ತಿದ್ದನು. ಚಾಳುಕ್ಯದೊರೆಯಾದ ಮೊದಲನೆಯ ವಿಕ್ರಮಾದಿತ್ಯನ ಮುತ್ತಿಗೆಯಿಂದ (ಸುಮಾರು ಕ್ರಿ. ಶ. 655) ವಿಪ್ಲವಗೊಂಡ ಕಾಂಚಿಯನ್ನು ತ್ಯಜಿಸಿ ದಂಡಿಯು ಅಲ್ಲಲ್ಲಿ ಸುತ್ತಾಡಿ ಅಪಾರ ಅನುಭವವನ್ನು ಸಂಪಾದಿಸಿಕೊಂಡನು.*ಪಲ್ಲವ ದೊರೆಯಾದ ನರಸಿಂಹವರ್ಮನು ಶತ್ರುಗಳನ್ನು ಓಡಿಸಿ ನಗರಿಯನ್ನು ಸ್ವಾಧೀನಮಾಡಿಕೊಂಡ ಮೇಲೆ ಅವನು ಹಿಂದಿರುಗಿ ರಾಜಾಸ್ಥಾನವನ್ನು ಸೇರಿದನು. ಮಾತೃದತ್ತ ಮತ್ತು ರಾಮಶರ್ಮರು ಅವನ ಆಪ್ತಮಿತ್ರರಾಗಿದ್ದರು. ಅವಂತಿಸುಂದರೀಕಥೆಯು ಅಪೂರ್ಣವಾಗಿದ್ದು ಹಲವು ಪಾಠಾಂತರಗಳಿಂದ ಕೂಡಿದೆ. ಆದ್ದರಿಂದ ಭಾರವಿಯೂ ದಾಮೋದರನೂ ಒಬ್ಬನೆಂಬ ವಿಚಾರ ಸಂದೇಹಾಸ್ಪದವಾಗಿದೆ.†ದಂಡಿಯ ಕಾಲದ ವಿಚಾರವಾಗಿ ಮತಭೇದವಿದೆ. ಇವನ ಕಾವ್ಯಾದರ್ಶದ ಆಧಾರದ ಮೇಲೆ ಮೊದಲನೆಯ ರಾಜಾಸೇನನು (ಕ್ರಿ.ಶ.846–66) 'ಸ್ವಭಾಷಾಲಂಕಾರ' (ಸಿಯ-ಬಸ-ಲಕರ)ವನ್ನು ರಚಿಸಿದ್ದಾನೆ. ಕನ್ನಡ ಅಲಂಕಾರಗ್ರಂಥನಾದ 'ಕವಿರಾಜಮಾರ್ಗ'ವನ್ನು ರಚಿಸಿದ ಅಮೋಘವರ್ಷನು (ಕ್ರಿ. ಶ. 9ನೆಯ ಶತಮಾನ) ಕಾವ್ಯಾದರ್ಶದಿಂದ ಉಪಕೃತನಾಗಿದ್ದಾನೆ. ದಂಡಿಯು ಆಜ್ಞನು ಗಂಗರಾಜ ಮತ್ತು ದುರ್ವಿನೀತ ಮತ್ತು ಪಲ್ಲವರಾಜ ಸಿಂಹವಿಷ್ಣುಗಳ (ಕ್ರಿ. ಶ. 6ನೆಯ ಶತಮಾನದ ಕಡೆ ಭಾಗ) ಆಶ್ರಿತನಾಗಿದ್ದನು. ಈ ಹಲವು ಅಂಶಗಳಿಂದ ದಂಡಿಯ ಕಾಲ ಕ್ರಿ. ಶ. 7ನೆಯ ಶತಮಾನದ ಕಡೆಯೆನ್ನಬೇಕಾಗುತ್ತದೆ. ದಶಕುಮಾರಚರಿತೆಯು ಅಷ್ಟಮೋಚ್ಛ್ವಾಸದ ವಿಶ್ರುತ

* ಸ ಬಾಲ ಏವ ಮಾತ್ರಾ ಚ ಪಿತ್ರಾ ಚಾಪಿ ವ್ಯಯುಜ್ಯತ ।
ಅಯುಜ್ಯತ ಗರೀಯಸ್ಯಾ ಸರಸ್ವತ್ಯಾ ಶ್ರುತೇನ ಚ ॥—ಅವಂತಿಸುಂದರೀಕಥಾಸಾರ

† ಸ ಮೇಧಾವೀ ಕವಿರ್ವಿದ್ವಾನ್ ಭಾರವಿಂ ಪ್ರಭವಂ ಗಿರಾಮ್ ।
ಅನುರುಧ್ಯಾಕರೋನ್ಮೈತ್ರೀಂ ನರೇಂದ್ರೇ ವಿಷ್ಣುವರ್ಧನೇ ॥
ಇಲ್ಲಿ ಭಾರವೀ, ಭಾರವಿಂ ಎಂಬ ಎರಡು ಪಾಠಗಳು ದೊರೆತಿವೆ-ಅವಂತಿಸುಂದರೀಕಥಾಸಾರ.

ಚರಿತ್ರೆಯಲ್ಲಿ ಪ್ರತಿಪಾದಿತವಾಗಿರುವ ಐತಿಹಾಸಿಕ ಸಂಗತಿಗಳನ್ನು ಪರಿಶೀಲಿಸಿ ಪ್ರೊ॥ ವಿ. ವಿ. ಮಿರಾಶಿಯವರು ಇವು ವಿದರ್ಭದ ವಾಕಾಟರ ಆಳ್ವಿಕೆಯ ಕಡೆಗಾಲಕ್ಕೆ (ಸುಮಾರು ಕ್ರಿ.ಶ. 550) ಅನ್ವಯಿಸುವುದರಿಂದ ದಂಡಿಯ ಕಾಲ ತದನಂತರವೇ ಎಂದರೆ ಸುಮಾರು ಕ್ರಿ. ಶ. 650 ಎಂದು ನಿರ್ಣಯಕ್ಕೆ ಬಂದಿದ್ದಾರೆ. ದಂಡಿ ಮತ್ತು ಬಾಣರಲ್ಲಿ ಯಾರು ಪ್ರಾಚೀನರೆಂಬುದನ್ನು ಹೇಳುವುದು ಕಷ್ಟ. ಕಾವ್ಯಾದರ್ಶದ ಒಂದು ಶ್ಲೋಕದಲ್ಲಿ ಗೂಢವಾಗಿ ಕಾಂಚಿಯ ಪ್ರಸ್ತಾಪವಿರುವುದರಿಂದ ಅಲ್ಲಿಯೇ ದಂಡಿಯು ವಾಸಿಸುತ್ತಿದ್ದಿರಬಹುದು.* ಇವನ ಕಾವ್ಯಾದರ್ಶವು ಭಾಮಹ (ಕ್ರಿ.ಶ. 700)ನಿಗಿಂತ ಮೊದಲು ರಚಿತವಾದುದೆಂದೂ, ದಶಕುಮಾರಚರಿತದಲ್ಲಿ ಕಾಣುವ ಭೌಗೋಳಿಕ ಪರಿಸ್ಥಿತಿಯು ಹರ್ಷವರ್ಧನನ ಆಳ್ವಿಕೆಗಿಂತ ಪ್ರಾಚೀನವಾದುದೆಂದೂ, ಇವನ ತೌಲನಿಕ ಸರಳಶೈಲಿಯು ಸುಬಂಧು ಮತ್ತು ಬಾಣರ ಕೃತಿಗಳಿಗಿಂತ ಪೂರ್ವಕಾಲವನ್ನು ಸೂಚಿಸುತ್ತದೆಂದೂ ಎ.ಬಿ. ಕೀತರು ಅಭಿಪ್ರಾಯಪಡುತ್ತಾರೆ. ಇವನು ಭಾಮಹನನ್ನೂ, ಇವನನ್ನು ವಾಮನನೂ ಟೀಕಿಸಿರುವುದರಿಂದ ಇವನ ಕಾಲ ಕ್ರಿ ಶ 6ನೆಯ ಶತಮಾನವೆಂದು ಆರ್. ವಿ. ಕೃಷ್ಣಮಾಚಾರ್ಯರ ಮತ. ಶಿಲಾದಿತ್ಯನ (ಕ್ರಿ. ಶ. 570–620) ಆಳ್ವಿಕೆ ವೇಳೆಗೆ ದಂಡಿಯು ವೃದ್ಧನಾಗಿದ್ದನೆಂದು ಆರ್. ಸಿ. ದತ್ತರೂ, ಕ್ರಿ.ಶ. 8ನೆಯ ಶತಮಾನದವನೆಂದು ವೆಬರ್ ಅವರೂ, ಕ್ರಿ. ಶ. 11ನೆಯ ಶತಮಾನದವನೆಂದು ವಿಲ್ಸನ್ ಅವರೂ ಅಭಿಪ್ರಾಯ ಪಡುತ್ತಾರೆ. ಬಹುಜನ ವಿದ್ವಾಂಸರ ಮತದಂತೆ ದಂಡಿಯ ಕಾಲ ಕ್ರಿ.ಶ. 7ನೆಯ ಶತಮಾನವೆಂದು ಭಾವಿಸಲಾಗಿದೆ.

ದಂಡಿಯು ದಶಕುಮಾರ ಚರಿತ, ಕಾವ್ಯಾದರ್ಶ ಮತ್ತು ಅವಂತಿಸುಂದರೀಕಥಾ ಎಂಬ ಮೂರು ಕೃತಿಗಳನ್ನು ರಚಿಸಿದ್ದಾನೆ. ಕಾವ್ಯಾದರ್ಶವು ಒಂದು ಪ್ರಸಿದ್ಧವಾದ ಅಲಂಕಾರ ಗ್ರಂಥ. ದಶಕುಮಾರಚರಿತ ಮತ್ತು ಕಾವ್ಯಾದರ್ಶಗಳ ಏಕಕರ್ತೃಕತ್ವದ ವಿಷಯದಲ್ಲಿ ಮತಭೇದವಿದೆ. ಅವಂತಿಸುಂದರೀಕಥೆಯು ಅಪೂರ್ಣವಾಗಿ ದೊರೆತಿದೆ. ಲಲಿತಾಲಯನು ಮಹಾಮಲ್ಲಪುರ (ಮಹಾಬಲಿಪುರ)ಕ್ಕೆ ಹೋಗಿ ಶಿಲ್ಪಶಾಸ್ತ್ರನಿಪುಣನಾದ ದಂಡಿಯನ್ನು ತಾನು ತ್ರಿವಿಕ್ರಮ ಮೂರ್ತಿಗೆ ಮುರಿದ ತೋಳನ್ನು ಜೋಡಿಸಿರುವುದನ್ನು ಪರೀಕ್ಷಿಸುವಂತೆ ಕೇಳಿಕೊಂಡನೆಂದೂ, ದಂಡಿಯು ಜೋಡಿಸಿರುವುದನ್ನು ಮೆಚ್ಚಿಕೊಂಡು ಪೂಜಿಸುತ್ತಿದ್ದಾಗ ಸಮುದ್ರದ ಅಲೆಯು ತಳ್ಳಿದ ಕಮಲವು ಬಂದು ಮೂರ್ತಿಯ ಪಾದವನ್ನು ಮುಟ್ಟಿತೆಂದೂ, ಕೂಡಲೇ ಮೂರ್ತಿಯಿಂದ ಆವಿರ್ಭವಿಸಿದ ಒಬ್ಬ ವಿದ್ಯಾಧರನು ವಂದಿಸಿ ಮಾಯವಾದನೆಂದೂ, ಈ ರಹಸ್ಯವನ್ನು ತಿಳಿಯಲು ದಂಡಿಯು ಕಾಂಚಿಯಲ್ಲಿ ಧ್ಯಾನಮಗ್ನನಾದಾಗ ಅವನಿಗೆ ಅವಂತಿ

---

* ನಾಸಿಕ್ಯಮಧ್ಯಾ ಪರಿತಶ್ಚತುರ್ವರ್ಣವಿಭೂಷಿತಾ ।
ಅಸ್ತಿ ಕಾಚಿತ್ಪುರೀ ಯಸ್ಯಾಮಷ್ಟವರ್ಣಾಹ್ವಯಾ ನೃಪಾಃ ॥ —ಕಾವ್ಯಾದರ್ಶ
ಇಲ್ಲಿ ಸೂಚಿತವಾಗಿರುವ ಪಟ್ಟಣ 'ಕಾಂಚೀ', ರಾಜರು 'ಪಲ್ಲವರು' ಎಂದು ಟೀಕಾಕಾರನಾದ ತರುಣವಾಚಸ್ಪತಿಯು ತಿಳಿಸುತ್ತಾನೆ.



ಸುಂದರೀಕಥೆಯು ತೋರಿತೆಂದೂ, ಈ ಕೃತಿಯು ಜನನಕ್ಕೆ ಪೀಠಿಕಾರೂಪವಾದ ಒಂದು ಕಥೆಯಿದೆ. ಪಲ್ಲವರಾಜ್ಯವಿಪ್ಲವದಲ್ಲಿ ಈ ಕೃತಿಯು ಕಳೆದು ಹೋಯಿತೆಂದು, ಅದರ ಸಂಗ್ರಹವಾದ ದಶಕುಮಾರಚರಿತೆಯನ್ನು ದಂಡಿಯ ಮೂಲಕೃತಿಯೆಂದು ಭಾವಿಸಲಾಗಿದೆಯೆಂದೂ ವಿದ್ವಾಂಸರ ಅಭಿಪ್ರಾಯವಿದೆ. ಅವಂತಿಸುಂದರೀ ಕಥೆಯಲ್ಲಿ ವರ್ಣನೆಗಳು ದೀರ್ಘವೂ, ಸಮಗ್ರವೂ ಆಗಿದ್ದು ದಶಕುಮಾರ ಚರಿತದಲ್ಲಿ ಚಿಕ್ಕದಾಗಿ ಸಂಗ್ರಹ ರೂಪವಾಗಿವೆ. ಅವಂತಿಸುಂದರೀಕಥಾಸಾರವು ಅವಂತಿಸುಂದರೀಕಥೆಯ ಪದ್ಯರೂಪವಾದ ಸಂಗ್ರಹ. ಇದರಲ್ಲಿ 7 ಸರ್ಗಗಳಿವೆ, ಪ್ರತಿಸರ್ಗದ ಕೊನೆಯಲ್ಲಿ ಆನಂದಾಂಕವಿದೆ[1]. 7ನೆಯದು ಚಿತ್ರಸರ್ಗವಾಗಿದೆ. ಕೃತಿಯು ಪೂರ್ಣಗೊಂಡಿಲ್ಲ; ಇದರ ಕವಿಯೂ ಗೊತ್ತಿಲ್ಲ. ಭೋಜನು ತನ್ನ ಶೃಂಗಾರ ಪ್ರಕಾಶದಲ್ಲಿ 'ದ್ವಿಸಂಧಾನ'ವು ದಂಡಿಯ ಕಾವ್ಯವೆಂದು ಹೇಳಿ ಒಂದು ಪದ್ಯವನ್ನು ಉದ್ಧರಿಸಿದ್ದಾನೆ[2]. ಈ ಕೃತಿಯು ದೊರೆತಿಲ್ಲ. ಪದ್ಯಕಾವ್ಯವಾದ ದ್ವಿಸಂಧಾನವು ಏಕಕಾಲದಲ್ಲಿ ಒಟ್ಟಿಗೆ ರಾಮಾಯಣ ಮತ್ತು ಮಹಾಭಾರತದ ಕಥೆಗಳನ್ನು ತಿಳಿಸುತ್ತದೆ. ದಂಡಿಯದೆಂದು ಹೇಳುವ ಶಿವಪಂಚಸ್ತವೀ (ಅನಾಮಯಸ್ತೋತ್ರ)ಯು ಭಕ್ತಿಪ್ರಧಾನವಾದ ಒಂದು ಚಿಕ್ಕ ಪದ್ಯಕಾವ್ಯ.

ದಶಕುಮಾರಚರಿತದಲ್ಲಿ ಪೂರ್ವ ಪೀಠಿಕಾ ಮತ್ತು ಉತ್ತರ ಪೀಠಿಕಾ ಎಂಬ ಎರಡು ಭಾಗಗಳಿವೆ. ಪೂರ್ವ ಪೀಠಿಕೆಯಲ್ಲಿ ಐದು ಉಚ್ಛ್ವಾಸಗಳೂ, ಉತ್ತರ ಪೀಠಿಕೆಯಲ್ಲಿ ಎಂಟು ಉಚ್ಛ್ವಾಸಗಳೂ ಇವೆ. ದಂಡಿಯದೆಂದು ಒಪ್ಪಲಾಗಿರುವ ಉತ್ತರ ಪೀಠಿಕೆಯು ಇದ್ದಕ್ಕಿದ್ದ ಹಾಗೆ ಅಪರಿಚಿತ ವ್ಯಕ್ತಿಗಳಿಂದ ಪ್ರಾರಂಭವಾಗಿ ಕೊನೆಗಾಣದೆ ಇದ್ದಕ್ಕಿದ್ದ ಹಾಗೆ ನಿಂತು ಹೋಗಿದೆ. ಪೂರ್ವ ಪೀಠಿಕೆಯ ಕರ್ತೃವಿಷಯದಲ್ಲಿ ವಿವಾದವಿದೆ. ಇದಕ್ಕೂ ಉತ್ತರ ಪೀಠಿಕೆಗೂ ಹಲವು ಅಂಶಗಳಲ್ಲಿ ವ್ಯತ್ಯಾಸವೂ ವಿರೋಧವೂ ಇವೆ.[3] ಪೂರ್ವಭಾಗದ ಸಂಸ್ಕರಣಗಳಲ್ಲಿ ಸಮಾನತೆಯಿಲ್ಲ. ಕೆಲವು ಸಂಸ್ಕರಣಗಳ ಕಥೆಯಲ್ಲಿ ವ್ಯತ್ಯಾಸವೂ ಇದೆ. ಉತ್ತರಭಾಗಕ್ಕೆ ಮಾತ್ರ ಪ್ರಾಚೀನ ವ್ಯಾಖ್ಯಾನಗಳಿವೆ ಮತ್ತು ಉತ್ತರ ಪೀಠಿಕೆಗೂ ಅವಂತಿಸುಂದರೀಕಥೆಗೂ ಹೆಚ್ಚು ಸಾದೃಶ್ಯವಿದೆ. ಎಂ. ಆರ್. ಕವಿಯು 'ದಂಡಿಯ ಕೃತಿಯು

---

1. ಮುಕ್ತಾಶ್ವ ಶಯಾಂ ಮಿಲಿತಪುಲಕವ್ರಾತಮುತ್ಥಾಯ ಭೂಯಃ ।
ಪ್ರಾಪ್ತಾನಂದೋ ವಿರತಿಸಮಯೇ ಪ್ರಾಕ್ತನೀನಾಂ ಕ್ರಿಯಾಣಾಮ್ ॥ —ಪ್ರಥಮಸರ್ಗ.
2. 'ದಂಡಿನೋ ಧನಂಜಯಸ್ಯ ವಾ ದ್ವಿಸಂಧಾನೇ – – ರಾಮಾಯಣಮಹಾಭಾರತಯೋಃ ದಂಡಿದ್ವಿಸಂಧಾನಮಿವ' ಎಂದು ಹೇಳಿ 'ಉದಾರಮಹಿಮಾರಾಮಃ ಪ್ರಜಾನಾಂ ಹರ್ಷವರ್ದನಃ । ಧರ್ಮಪ್ರಭವ ಇತ್ಯಾಸೀತ್ ಖ್ಯಾತೋ ಭರತಪೂರ್ವಜಃ ॥' ಎಂಬ ಪದ್ಯವನ್ನು ಉದ್ಧರಿಸಿದ್ದಾನೆ.
3. ಪೂರ್ವಪೀಠಿಕೆಯು ಕೇವಲ ಪೀಠಿಕಾರೂಪವಾಗಿರದೆ, ಉತ್ತರ ಪೀಠಿಕೆಯಲ್ಲಿರುವ 8 ಮಂದಿ ಕುಮಾರರ ಕಥೆಗಳನ್ನು ಹತ್ತು ಮಂದಿ ಕುಮಾರರ ಕಥೆಗಳನ್ನಾಗಿಸಲು, ತಾನೂ ಇಬ್ಬರು ಕುಮಾರರ ಕಥೆಗಳನ್ನು ಹೊಂದಿದೆ. ಅರ್ಥಪಾಲ ಪ್ರಮತಿ ಮತ್ತು ವಿಶ್ರುತರ ಕಥಾ ಬೆಳವಣಿಗೆಯಲ್ಲಿ ವಿರೋಧವಿದೆ............ ಇತ್ಯಾದಿ.

ಕಳೆದುಹೋಗಿದ್ದಿತೆಂದೂ, ಉಪಲಬ್ಧವಿದ್ದ ಅನುವಾದಗಳು ಮತ್ತು ಪ್ರವಾದಗಳ ಆಧಾರದಿಂದ ಅದನ್ನು ಪೂರ್ವಭಾಗರೂಪವಾಗಿ ಮತ್ತೆ ಯಾರೋ ಬರೆದಿರುವರೆಂದೂ, ತೆಲಗು ಭಾಷೆಯಲ್ಲಿ ಕೇತನನು (ಕ್ರಿ. ಶ. 1250) ರಚಿಸಿರುವ ದಶಕುಮಾರಚರಿತವೇ ಅತಿ ಪ್ರಾಚೀನ ಭಾಷಾಂತರವೆಂದೂ, ಬಹಳ ಮಟ್ಟಿಗೆ ಈ ಭಾಷಾಂತರವನ್ನಾಧರಿಸಿ ಪೂರ್ವಭಾಗವು ರಚಿತವಾಗಿರಬೇಕೆಂದೂ, ಅಭಿಪ್ರಾಯಪಟ್ಟಿದ್ದಾರೆ. ದಶಕುಮಾರಚರಿತದ ಹಳಗನ್ನಡ ಅನುವಾದವೂ ಇದೆ; ಇದರ ಪೂರ್ವಭಾಗದ ಕಥೆಯು ಭಿನ್ನವಾಗಿದೆ. ಆದ್ದರಿಂದ ಕಳೆದುಹೋಗಿದ್ದ ಅವಂತಿಸುಂದರೀಕಥೆಯ ಪ್ರಥಮ ಭಾಗವನ್ನು ಅನೇಕರು ಬರೆದಿರಬೇಕೆಂದು ಊಹಿಸಲಾಗಿದೆ. ಎಸ್.ಕೆ.ಡೇ ಅವರು ದಶಕುಮಾರಚರಿತವು ದಂಡಿಯ ನಿಜವಾದ ಕೃತಿಯೆಂದು ಅಭಿಪ್ರಾಯಪಡುತ್ತಾರೆ. ಅಪ್ಪಯದೀಕ್ಷಿತ ಮತ್ತು ವಿನಾಯಕರು ಪೂರ್ವಪೀಠಿಕೆಯನ್ನು ಪದ್ಯರೂಪವಾಗಿ ಬರೆದಿದ್ದಾರೆ. ಗೋಪೀನಾಥ ಮಹಾರಾಜಾಧಿರಾಜನು ದಶಕುಮಾರಚರಿತದ ಸಂಶೋಧನೆಯನ್ನು ಕೈಗೊಂಡು ಮೂರು ಅಧ್ಯಾಯಗಳಲ್ಲಿ 679 ಶ್ಲೋಕಗಳನ್ನುಳ್ಳ ಒಂದು ಕೃತಿಯನ್ನು ರಚಿಸಿದ್ದಾನೆ. ದಶಕುಮಾರಚರಿತದ ಕೊನೆಯಲ್ಲಿ ಉಪಸಂಹಾರ ಅಥವಾ ಶೇಷಭಾಗವಿದೆ. ಅಪೂರ್ಣವಾಗಿ ನಿಂತುಹೋಗಿದ್ದ ಕಥೆಯನ್ನು ಚಂದ್ರಮೌಳಿದೀಕ್ಷಿತನ ಮಗನಾದ ಚಕ್ರಪಾಣಿದೀಕ್ಷಿತನು ಪೂರ್ಣಗೊಳಿಸಿ ಕೊನೆಯಲ್ಲಿ ಸೇರಿಸಿದ್ದಾನೆ.

ಮಗಧದೇಶದ ಪುಷ್ಪಪುರಿಯಲ್ಲಿ ರಾಜ್ಯವಾಳುತ್ತಿದ್ದ ರಾಜಹಂಸನಿಗೆ ಧರ್ಮಪಾಲ, ಪದ್ಮೋದ್ಭವ ಮತ್ತು ಸಿತವರ್ಮರೆಂಬ ಮೂವರು ಕುಲಾಮಾತ್ಯರಿದ್ದರು. ಧರ್ಮಪಾಲನಿಗೆ ಸುಮಂತ್ರ, ಸುಮಿತ್ರ, ಕಾಮಪಾಲರೂ; ಪದ್ಮೋದ್ಭವನಿಗೆ ಸಂಶ್ರುತ, ರತ್ನೋದ್ಭವರು ಮತ್ತು ಸಿತವರ್ಮನಿಗೆ ಸುಮತಿ, ಸತ್ಯವರ್ಮರೆಂಬ ಮಕ್ಕಳಾದರು. ಇವರಲ್ಲಿ ತೀರ್ಥಯಾತ್ರಾಭಿಲಾಷಿಯಾದ ಸತ್ಯವರ್ಮನೂ, ದುರ್ವಿನೀತನಾದ ಕಾಮಪಾಲನೂ, ವಾಣಿಜ ನಿಪುಣನಾದ ರತ್ನೋದ್ಭವನೂ ದೇಶಾಂತರಕ್ಕೆ ಹೋದರು. ಉಳಿದ ನಾಲ್ವರು ತಮ್ಮ ತಂದೆಗಳ ಮರಣಾನಂತರ ಸಚಿವ ಪದವಿಯನ್ನು ವಹಿಸಿಕೊಂಡರು. ಹೀಗಿರಲು ಒಂದು ಸಾರಿ ರಾಜಹಂಸನು ತನ್ನ ಧರ್ಮಪತ್ನಿಯಾದ ವಸುಮತಿಯ ಸೀಮಂತೋತ್ಸವಕ್ಕೆ ಮಿತ್ರರನ್ನೆಲ್ಲ ಆಹ್ವಾನಿಸಿದನು. ಅದೇಕಾಲಕ್ಕೆ ಪೂರ್ವ ವೈರವನ್ನು ತೀರಿಸಿಕೊಳ್ಳಲು ಮಾಳವನಾಥನಾದ ಮಾನಸಾರನು ರಾಜಧಾನಿಯನ್ನು ಮುತ್ತಿದನು. ಸಚಿವರು ಅಂತಃಪುರವರ್ಗವನ್ನು ಮೂಲಬಲದ ರಕ್ಷಣೆಯಲ್ಲಿ ವಿಂಧ್ಯಾಟವಿಗೆ ಸಾಗಿಸಿದರು. ಅಪಜಯ ಹೊಂದಿ, ಮೂರ್ಛೆಗೊಂಡು ರಥದಲ್ಲುರುಳಿದ ದೊರೆಯನ್ನು ಸಾರಥಿನಿಯಂತ್ರಣವಿಲ್ಲದ ಕುದುರೆಗಳು ಓಡಿ ಕಾಡಿಗೆ ಸಾಗಿಸಿದವು. ವಿಖ್ಯಾತಪರಾಕ್ರಮಿಯಾದ ರಾಜನು ದುರ್ವಿಧಿಯಿಂದ ಕಾಡಿನಲ್ಲಿ ರಾಣಿಯೊಡನೆ ನಿಂತನು. ವಸುಮತಿಯು ಸಕಲಲಕ್ಷಣಸಂಪನ್ನನಾದ ರಾಜವಾಹನನೆಂಬ ಮಗನನ್ನು ಹಡೆದಳು. ಮಂತ್ರಿಗಳೂ ಪ್ರಮತಿ, ಮಿತ್ರಗುಪ್ತ, ಮಂತ್ರಗುಪ್ತ, ಮತ್ತು ವಿಶ್ರುತರೆಂಬ ತನಯರನ್ನು ಪಡೆದರು. ಸೀಮಂತೋತ್ಸವಕ್ಕೆ ಬಂದಿದ್ದು, ಯುದ್ಧದಲ್ಲಿ ಪಾಲ್ಗೊಂಡು ಸೋತು ಹಿಂದಿರುಗುತ್ತಿದ್ದ ರಾಜಹಂಸನ ಮಿತ್ರನಾದ ಪ್ರಹಾರವರ್ಮನನ್ನು ಶಬರ ಸೈನ್ಯವು ಮುತ್ತಿತು. ಅವನು ತಪ್ಪಿಸಿಕೊಂಡು ರಾಣಿಯೊಡನೆ ವೇಗವಾಗಿ ಹೊರಟುಹೋದನು. ಅವನ ಎರಡು ಮಕ್ಕಳನ್ನು ಎತ್ತಿಕೊಂಡಿದ್ದ ದಾಸಿ ಮತ್ತು ಅವಳ ಮಗಳು ಕಾಡುಪಾಲಾದರು. ಸುದೈವದಿಂದ ಅಪಹಾರವರ್ಮ ಮತ್ತು ಉಪಹಾರವರ್ಮರೆಂಬ ಆ ಮಕ್ಕಳು ರಾಜಹಂಸನ ಕೈಸೇರಿದವು. ವಿಧಿಯ ಕೈವಾಡದಿಂದಲೇ ರತ್ನೋದ್ಭವನ ಮಗನಾದ ಪುಷ್ಪೋದ್ಭವನೂ, ಕಾಮಪಾಲನ ಮಗನಾದ ಅರ್ಥಪಾಲನೂ, ಸತ್ಯವರ್ಮನ ಮಗನಾದ ಸೋಮದತ್ತನೂ ರಾಜಹಂಸನನ್ನು ಸೇರಿದರು. ಹೀಗೆ ಒಟ್ಟುಗೂಡಿದ ದಶ ಕುಮಾರರು ಬೆಳೆದು ಸಕಲ ವಿದ್ಯೆಗಳಲ್ಲಿ ಪ್ರವೀಣರಾಗಿ ಪ್ರಾಪ್ತವಯಸ್ಕರಾದಮೇಲೆ ದೊರೆಯ ಒಪ್ಪಿಗೆ ಪಡೆದು ದಿಗ್ವಿಜಯವನ್ನು ಕೈಗೊಂಡರು. ದಾರಿಯಲ್ಲಿ ತಂಗಿದ್ದಾಗ ಅರ್ಧರಾತ್ರಿಯಲ್ಲಿ ನಿದ್ರಿಸುತ್ತಿದ್ದ ಮಿತ್ರರನ್ನು ಬಿಟ್ಟು, ಯಜ್ಞೋಪವೀತವನ್ನು ಧರಿಸಿದ್ದರೂ ಕಿರಾತನಂತಿದ್ದ ಮಾತಂಗನಿಗೆ ಸಹಾಯಮಾಡಲು ರಾಜವಾಹನನು ಪಾತಾಳಲೋಕಕ್ಕೆ ಹೋದನು. ಎದ್ದು, ರಾಜಕುಮಾರನನ್ನು ಕಾಣದೆ ವ್ಯಾಕುಲರಾದ ಉಳಿದವರು ಅವನನ್ನು ಹುಡುಕಲು ನಾನಾಕಡೆಗೆ ತೆರಳಿದರು. ತಮ್ಮ ಬುದ್ಧಿ ಮತ್ತು ಸಾಹಸಗಳಿಂದ ಸುಂದರಿಯರಾದ ರಾಜಕುಮಾರಿಯರನ್ನು ಮದುವೆಯಾಗಿ, ರಾಜ್ಯಪಡೆದರು. ಕಾಲಕ್ರಮದಲ್ಲಿ ಅನುಕೂಲವಾಗಿ ಪರಿಣಮಿಸಿದ ವಿಧಿಯಿಂದ ಮತ್ತೆ ಎಲ್ಲರೂ ಒಟ್ಟುಗೂಡಿದರು; ತಮ್ಮ ತಮ್ಮ ಕಥೆಯನ್ನು ಹೇಳಿಕೊಂಡರು. ಅವರು ತಂದೆ, ತಾಯಿ, ಬಂಧುಮಿತ್ರರೊಡಗೂಡಿ ಸಕಲಭೋಗ ಭಾಗ್ಯಗಳನ್ನು ಅನುಭವಿಸಿದರು.

ಪೂರ್ವಪೀಠಿಕೆಯಲ್ಲಿ ದಶಕುಮಾರರು ಒಟ್ಟುಗೂಡಿ ಅಗಲುವ ಕಥಯೊಡನೆ ಸೋಮದತ್ತ ಮತ್ತು ಪುಷ್ಪೋದ್ಭವರ ಕಥೆಗಳು ಬಂದಿವೆ. ಈ ಭಾಗದಲ್ಲಿ ರಾಜವಾಹನನು ವಿದ್ಯೇಶ್ವರನ ಸಹಾಯದಿಂದ ಮಾನಸಾರನ ಮಗಳಾದ ಅವಂತಿಸುಂದರಿಯನ್ನು ಮದುವೆಯಾಗುತ್ತಾನೆ. ಉತ್ತರಪೀಠಿಕೆಯಲ್ಲಿ ರಾಜವಾಹನ, ಅಪಹಾರವರ್ಮ, ಉಪಹಾರವರ್ಮ, ಅರ್ಥಪಾಲ, ಪ್ರಮತಿ, ಮಿತ್ರಗುಪ್ತ, ಮಂತ್ರಗುಪ್ತ ಮತ್ತು ವಿಶ್ರುತರ ಕಥೆಗಳು ಬಂದಿವೆ. ಎಲ್ಲರೂ ಬಂಧುಬಳಗದೊಡನೆ ಬೆರೆತು ಸುಖವಾಗಿ ಬಾಳುವ ಕಥಾಭಾಗವು ಉಪಸಂಹಾರದಲ್ಲಿದೆ. ಈ ಹತ್ತು ಪ್ರಧಾನಕಥೆಗಳೊಳಗೆ ಉಪಕಥೆಗಳೂ ಇವೆ. ಕಥೆಯೊಳಗೆ ಕಥೆಯನ್ನು ತರುವ ಕಥಾತಂತ್ರ ಬಹಳ ಪ್ರಾಚೀನವಾದುದು. ವಸ್ತುವಿನ ಸಂಯೋಜನೆಯಲ್ಲಿ ಲೋಕಸಹಜವೃತ್ತಾಂತಗಳೊಂದಿಗೆ ಅತಿಮಾನುಷ ಘಟನೆಗಳೂ ಹೆಣೆದುಕೊಂಡಿವೆ. ಕಥಾಬೆಳವಣಿಗೆಯಲ್ಲಿ ಯಕ್ಷ ಯಕ್ಷಿಣಿಯರು, ಬ್ರಹ್ಮರಾಕ್ಷಸರು, ಸಿದ್ಧರು. ವಿದ್ಯಾಧರರು, ಚೋರವೀರರು, ದ್ಯೂತ ನಿಪುಣರು. ತಾಪಸ ತಾಪಸಿಯರು, ವಿಟ ವೇಶ್ಯೆಯರು, ರಾಜ ರಾಣಿಯರು, ಐಂದ್ರಜಾಲಿಕ ಮುಂತಾದವರ ಪಾತ್ರವಿದೆ. ಶಾಪ, ವರ, ಕನಸ್ಸು, ಪೂರ್ವಜನ್ಮಸ್ಮರಣೆ, ವಿಧಿ, ಆಕಾಶವಾಣಿ, ಅಮೋಘರತ್ನ, ರಜತ ಶೃಂಖಲೆ. ಪ್ರಕೃತಿವಿಕೋಪ ಮೊದಲಾದುವುಗಳ ನೆರವನ್ನು ಪಡೆಯಲಾಗಿದೆ. ಹಂಸ, ಸಿಂಹ ಮೊದಲಾದ ಪಶು ಪಕ್ಷಿಗಳೂ ಸಹಕರಿಸಿವೆ. ಕಥಾಸಂಯೋಜನೆಯಲ್ಲಿ ಚಾತುರ್ಯವಿದೆ. ಇದೊಂದು ಕಥೆಗಳ ರಾಶಿಯಾದರೂ ಕಥೆಯ ಮೂಲಸೂತ್ರವು ಎಲ್ಲಿಯೂ ಮರೆಯಾಗುವುದಿಲ್ಲ. ಕವಿಯು ಗುಣಾಢ್ಯನ ಬೃಹತ್ಕಥೆಯ ಕಥಾತಂತ್ರವನ್ನು ಅವಲಂಬಿಸಿ ಲೋಕದ ಮೆಚ್ಚುಗೆಯನ್ನು ಗಳಿಸಿರುವ

ಈ ಗದ್ಯ ಕಾವ್ಯವನ್ನು ರಚಿಸಿದ್ದಾನೆ[1] ; ಕಾವ್ಯವು ಪದ್ಯರೂಪವಾಗಿಯೇ ಇರಬೇಕೆಂಬ ಭ್ರಾಂತಿಯನ್ನು ಬಿಡಿಸಿದ್ದಾನೆ. ಇಲ್ಲಿ ಬಂದಿರುವ ಕಥೆಗಳು ಪೂರ್ಣವಾಗಿ ಪೌರಾಣಿಕವೂ ಅಲ್ಲ ; ಐತಿಹಾಸಿಕವೂ ಅಲ್ಲ ; ಕಲ್ಪಿತವೂ ಅಲ್ಲ ; ಎಲ್ಲ ಅಂಶಗಳು ಒಟ್ಟುಗೂಡಿ ವಿನೂತನ ಕಥಾರೂಪವನ್ನು ತಾಳಿ ಸ್ವಾರಸ್ಯವನ್ನುಂಟುಮಾಡುತ್ತಿವೆ. ಸತ್ತ ಮಾತಂಗನು ಯಮಲೋಕವನ್ನು ಸಂದರ್ಶಿಸಿ ಹಿಂದಿರುಗಿ ಸ್ವದೇಹವನ್ನು ಸೇರುತ್ತಾನೆ. ಪುಷ್ಪೋದ್ಭವನು ಬಾಲಚಂದ್ರಿಕೆಯ ಸಖಿಯಂತೆ ವೇಷಧರಿಸಿ ಶಯ್ಯಾಗಾರದಲ್ಲಿ ಕಾಮುಕನಾದ ದಾರುವರ್ಮನನ್ನು ಕೊಂದ ಕಥಾಭಾಗದಲ್ಲಿ ಕೀಚಕವಧೆಯ ಪೂರ್ಣಸಾದೃಶ್ಯವಿದೆ ಯಕ್ಷಕನ್ಯೆಯಾದ ತಾರಾವಳಿಯು ಮಾನವನಾದ ಕಾಮಪಾಲನನ್ನು ಮದುವೆಯಾಗುತ್ತಾಳೆ. ಪರ್ವತದ ಕಾಸಾರವೊಂದರಲ್ಲಿ ನೀರುಕುಡಿಯುತ್ತಿದ್ದ ಮಿತ್ರಗುಪ್ತನನ್ನು ಬ್ರಹ್ಮರಾಕ್ಷಸವೊಂದು ಆಕ್ರಮಿಸಿ, ಇವುಗಳಿಗೆ ಉತ್ತರ ಹೇಳಿದಿದ್ದರೆ ನಿನ್ನನ್ನು ತಿನ್ನುವೆನೆಂದು ಹೇಳಿ ಕೆಲವು ಪ್ರಶ್ನೆಗಳನ್ನು ಕೇಳುತ್ತದೆ—

ಕಿಂ ಕ್ರೂರಂ ಸ್ತ್ರೀಹೃದಯಂ ಕಿಂ ಗೃಹಿಣಃ, ಪ್ರಿಯಹಿತಾಯ ದಾರಗುಣಾಃ ।
ಕಃ ಕಾಮಃ ಸಂಕಲ್ಪಃ ಕಿಂ ದುಷ್ಕರಸಾಧನಂ ಪ್ರಜ್ಞಾ ॥

ಈ ಪ್ರಶ್ನೆಗಳಿಗೆ ಉತ್ತರಿಸಲು ಮಿತ್ರಗುಪ್ತನು ಧೂಮಿನೀ, ಗೋಮಿನೀ, ನಿಂಬವತೀ ನಿತಂಬವತಿಯರ ಕಥೆಗಳನ್ನು ಹೇಳುತ್ತಾನೆ. ಇಲ್ಲಿ ಒಂದು ಕಥೆಯಲ್ಲಿ ಚಮತ್ಕಾರವಾಗಿ ನಾಲ್ಕು ಕಥೆಗಳು ಬಂದಿವೆ. ಈ ಬ್ರಹ್ಮರಾಕ್ಷಸ ಪ್ರಸಂಗದಲ್ಲಿ ಮಹಾಭಾರತದ ಯಕ್ಷಪ್ರಶ್ನೆಯ ಪ್ರಭಾವವಿದೆ.

ದಂಡಿಯ ಶೈಲಿಯು ಪ್ರಭಾವಶಾಲಿಯೂ ಲೋಕಪ್ರಿಯವೂ ಆದುದು. ಅವನ ಲಲಿತ ಪದಗುಂಫನವು ಮನೋಜ್ಞವಾದುದು. 'ದಂಡಿನಃ ಪದಲಾಲಿತ್ಯಂ' ಎಂಬ ಲೋಕೋಕ್ತಿಯೇ ಹುಟ್ಟಿಕೊಂಡಿದೆ. ಇವನಲ್ಲಿ ವಿಶೇಷಾದರವನ್ನು ಪಡೆದಿದ್ದ ಪೂರ್ವಿಕರು ಸರಸ್ವತಿಯ ಬಾಯಿಂದ ಮೂರುಸಾರಿ. ಕವಿರ್ದಂಡೀ 'ಕವಿರ್ದಂಡೀ ಕವಿರ್ದಂಡೀ ನ ಸಂಶಯಃ[2]' ಎಂದು ಹೇಳಿಸಿದ್ದಾರೆ ; ವ್ಯಾಸವಾಲ್ಮೀಕಿಗಳ ಜೊತೆಗೂಡಿಸಿದ್ದಾರೆ.[3] ಇಂದಿನ ವಿಮರ್ಶಕರು ಇವನ ಗದ್ಯಕಾವ್ಯವನ್ನು ಪ್ರಶಂಸಿಸುತ್ತಾರೆ. ಕವಿಯ ಪದಗುಂಫನಸಾಮರ್ಥ್ಯ ಪರಿಚಯಕ್ಕಾಗಿ ಕೆಲವು ನಿದರ್ಶನಗಳನ್ನಿಲ್ಲಿ ಕೊಡಲಾಗಿದೆ.

---

1. It is very Probable that it was from Gunadhya that Dandin derived the conception of the plot of the romance... ಎ. ಬಿ. ಕೀತ್.
2. ದಂಡಿ, ಕಾಳಿದಾಸರಲ್ಲಿ ಯಾರು ಮೇಲೆಂದು ವಿವಾದವೆದ್ದಾಗ ತೀರ್ಪುಗಾರಳಾದ ಸರಸ್ವತಿಯು 'ಕವಿರ್ದಂಡೀ ಕವಿರ್ದಂಡೀ ಕವಿರ್ದಂಡೀ ನ ಸಂಶಯಃ' ಎಂದು ತೀರ್ಪು ಕೊಟ್ಟಳು. ಕೋಪಗೊಂಡ ಕಾಳಿದಾಸನು 'ಕೋಽಹಂ ರಂಡೇ' ಎಂದು ಕೇಳಲು 'ತ್ವಮೇವಾಹಂ ತ್ವಮೇವಾಹಂ ತ್ವಮೇವಾಹಂ ನ ಸಂಶಯಃ' ಎಂದು ಉತ್ತರ ಹೇಳಿದಳು.
3. ಜಾತೇ ಜಗತಿ ವಾಲ್ಮೀಕೌ ಕವಿರಿತ್ಯಭಿಧಾಭವತ್ ।
ಕವೀ ಇತಿ ತತೋ ವ್ಯಾಸೇ ಕವಯಸ್ತ್ವಯಿ ದಂಡಿನಿ ॥



ರಾಜಹಂಸನ ವರ್ಣನೆ—

ಪುರಂದರಪುರಾಂಗಣವನವಿಹರಣಪರಾಯಣತರುಣಗಣಿಕಾಗಣಜೇಗೀಯಮಾನಯತಿಮಾನಯಾ ಶರದಿಂದುಕುಂದಘನಸಾರನೀಹಾರಹಾರಮೃಣಾಲಮರಾಲಸುರಗಜನೀರಕ್ಷೀರಗಿರಿಶಾಟ್ಟಹಾಸ ಕೈಲಾಸಕಾಶನೀಕಾಶಮೂರ್ತ್ಯಾ ರಚಿತದಿಗಂತರಾಲಪೂರ್ತ್ಯಾ ಕೀರ್ತ್ಯಾಭಿತಃ ಸಂರಭಿತಃ .........

ಇಲ್ಲಿ ಪದಗಳು ಭ್ರಮರಗಳಂತೆ ಕುಣಿದು ಶ್ರವಣಮಧುರನಾದವನ್ನುಂಟುಮಾಡುತ್ತವೆ.

ದಿಗ್ವಿಜಯಕ್ಕೆ ಹೊರಟ ದಶಕುಮಾರರ ಚಿತ್ರ :—

ಕುಮಾರಾ ಮಾರಾಭಿರಾಮಾ ರಾಮಾದ್ಯಪೌರುಷಾ ರುಷಾ ಭಸ್ಮೀಕೃತಾರಯೋ ರಯೋಪಹಸಿತಸಮೀರಣಾ ರಣಾಭಿಯಾನೇನ ಯಾನೇನಾಭ್ಯುದಯಾಶಂಸಂ ರಾಜಾನಮಕಾರ್ಷುಃ ।

ಇಲ್ಲಿ ಪೂರ್ವಪೂರ್ವಪದವನ್ನು ಉತ್ತರೋತ್ತರವೂ ತಂದಿರುವುದರಲ್ಲಿ ವಿಶೇಷ ಚಾತುರ್ಯವಿದೆ.

ರಜತ ಶೃಂಖಲೆಯು ರಾಜವಾಹನನ ಚರಣಗಳನ್ನು ಬಂಧಿಸಿದಾಗ ಕನ್ಯಾಂತಃಪುರವು ವ್ಯಾಕುಲಗೊಂಡರೀತಿ :—

ಯೇನ ಚ ತತ್ಸಕಲಮೇವ ಕನ್ಯಾಂತಃಪುರಮಗ್ನಿಪರೀತಮಿವ ಪಿಶಾಚೋಪಹತಮಿವ ವೇಪಮಾನಮನಿರೂಪ್ಯಮಾಣತದಾತ್ವಾಯತಿವಿಭಾಗಮಗಣ್ಯಮಾನರಹಸ್ಯರಕ್ಷಾಸಮಯಮವನಿತಲವಿಪ್ರವಿಧ್ಯಮಾನಗಾತ್ರಮಾಕ್ರಂದವಿದೀರ್ಯಮಾಣಕಂಠಮಶ್ರುಸ್ರೋತೋಽವಗುಂಠಿತಕಪೋಲತಲಮಾಕುಲೀಬಭೂವ.

ಇಲ್ಲಿನ ವ್ಯಾಕುಲತೆಯ ಸ್ವಾಭಾವಿಕ ಚಿತ್ರಣವು ರಮ್ಯವಾಗಿದೆ. ದಂಡಿಯ ಕಾವ್ಯಗಳಲ್ಲಿ ನಿರರ್ಗಳವಾದ ಓಟವಿದೆ.

ಒಬ್ಬ ಕುಮಾರನಿಗೆ ತನ್ನ ಪ್ರೇಯಸಿಯ ಪ್ರೇಮಾವೇಶದ ಚುಂಬನದಲ್ಲುಂಟಾದ ದಂತಕ್ಷತದಿಂದ ತುಟಿಗಳನ್ನು ಕೂಡಿಸುವುದೇ ಕಷ್ಟವಾಯಿತು. ಅವನು ಪವರ್ಗಾಕ್ಷರಗಳನ್ನು ಉಚ್ಚರಿಸಲಾರದವನಾದ. ಕವಿಯು ಅವನು ಹೇಳಿದ ಕಥೆಯನ್ನು ಪರುಷವಾದ ಓಷ್ಠ್ಯ ವರ್ಣಗಳೇ ಬಾರದಂತೆ ಬರೆದಿದ್ದಾನೆ. ಸ್ಪಷ್ಟಾರ್ಥಕ, ಭಾವಯುತ ಮತ್ತು ಶ್ರುತಿಮಧುರವಾಗಿರುವಂತೆ ಬರೆಯುವುದು ದಂಡಿಯ ಪ್ರಕೃತಿ. ಇವನದು ವೈದರ್ಭಶೈಲಿ, ಸಮಸ್ತಪದಗಳಲ್ಲಿಯೂ ಕಾಠಿಣ್ಯವಿಲ್ಲ, ಸುಲಭವಾಗಿ ಅವು ಅರ್ಥವಾಗುತ್ತವೆ.

ಇವನಿಗೆ ಕಥಾಸ್ವಾರಸ್ಯವು ಪ್ರಧಾನ, ವರ್ಣನಾಚಾತುರ್ಯವಲ್ಲ. ವರ್ಣನೆಗಳು ಆಕಾರದಿಂದ ಕಿರಿದಾಗಿದ್ದರೂ ಗುಣದಿಂದ ಹಿರಿದಾಗಿವೆ.

ಪ್ರಾತಃಕಾಲದ ವರ್ಣನೆ :—

ಚಿಂತಯತ್ಯೇವ ಮಯಿ ಮಹಾರ್ಣವೋನ್ಮಗ್ನಮಾರ್ತಾಂಡತುರಂಗಮಶ್ವಾಸರಯಾವಧೂತೇವ ವ್ಯಾವರ್ತತ ತ್ರಿಯಾಮಾ ॥ ಸಮುದ್ರಗರ್ಭವಾಸಜಡೀಕೃತ ಇವ ಮಂದಪ್ರತಾಪೋ ದಿವಸಕರಃ ಪ್ರಾದುರಾಸೀತ್ ॥

ಬೆಳಗಾದುದರ ಸುಂದರ ಚಿತ್ರಣಕ್ಕೆ ಉತ್ಪ್ರೇಕ್ಷೆಯಿಂದ ಕೂಡಿದ ಈ ಎರಡು ವಾಕ್ಯಗಳು ಸಾಕು.

ಅರ್ಥಪಾಲನು ಸುರಂಗದಲ್ಲಿ ಕಂಡ ರಾಜಕನ್ಯೆಯಾದ ಮಣಿಕರ್ಣಿಕೆಯ ವರ್ಣನೆ :—

ತತ್ರ. ಕಾಚಿದಿಂದುಕಲೇವ ಸ್ವಲಾವಣ್ಯೇನ ರಸಾತಲಾಂಧಕಾರಂ ನಿಹ್ನುವಾನಾ, ವಿಗ್ರಹಿಣೀವ ದೇವಿ ವಿಶ್ವಂಭರಾ. ಹರಗೃಹಿಣೀವಾಸುರವಿಜಯಾಯಾವತೀರ್ಣಾ, ಪಾತಾಲಮಾಗತಾ ಗೃಹಿಣೀವ ಭಗವತಃ ಕುಸುಮಧನ್ವನಃ, ರಾಜಲಕ್ಷ್ಮೀರಿವಾನೇಕದುರ್ನೃಪದರ್ಶನಪರಿಹಾರಾಯ ಮಹೀವಿವರಂ ಪ್ರವಿಷ್ಟಾ, ನಿಷ್ಟಪ್ತಕನಕಪುತ್ರಿಕೇವಾವದಾತಕಾಂತಿಃ ಕನ್ಯಕಾ, ಚಂದನಲತೇವ ಮಲಯಮಾರುತೇನ ಮದ್ದರ್ಶನೇನೋದಕಂಪತ ।

ಇಲ್ಲಿ ಪ್ರತಿವಾಕ್ಯವೂ ಸಾಲಂಕಾರವಾಗಿದ್ದು ಕನ್ಯೆಯ ನಿರತಿಶಯ ಸೌಂದರ್ಯವನ್ನು ಪ್ರಕಟಿಸುತ್ತವೆ.

ಕಂದುಕಾವತಿಯನ್ನು ಕಂಡ ಮಿತ್ರಗುಪ್ತನ ಮನಸ್ಸಿನಲ್ಲಿ ಮೂಡಿದ ತರ್ಕವಿತರ್ಕಗಳು :—

ಕಿಮಿಯಂ ಲಕ್ಷ್ಮೀಃ । ನಹಿ ನಹಿ । ತಸ್ಯಾಃ ಕಿಲ ಹಸ್ತೇ ವಿನ್ಯಸ್ತಂ ಕಮಲಂ, ಅಸ್ಯಾಸ್ತು ಹಸ್ತ ಏವ ಕಮಲಂ । ಅಭುಕ್ತಪೂರ್ವಾ ಚಾಸೌ ಪುರಾತನೇನ ಪುಂಸಾ ಪೂರ್ವರಾಜೈಶ್ಚ, ಅಸ್ಯಾಃ ಪುನರನವದ್ಯಮಯಾತಯಾಮಂ ಚ ಯೌವನಂ ।

ಅಪಹಾರವರ್ಮನಿಗೆ ಉದಾರಕನು ತನ್ನ ಕೃತಜ್ಞತೆಯನ್ನು ಪ್ರಕಟಿಸುವ ರೀತಿಯು ವಿನಯ ಸಂಪನ್ನವಾಗಿದೆ—

ತಥಾಹಿ ನ ಜಾನೇ ವಕ್ತುಂ ತ್ವಕ್ಕರ್ಮ್ಯೈತದದುತಮಿತಿ। ನನು ತೇ ಪ್ರಶೀಲಮದ್ಭುತವತ್ಪ್ರತಿಭಾತಿ। ನ್ಯೈವಮನ್ಯೇನಾಪಿ ಕೃತಪೂರ್ವಮಿತಿ ಪ್ರತಿನಿಯತ್ಯೈವ ವಸುಃಶಕಿಃ । ನ ಹಿ ತ್ವಯಾನ್ಯದೀಯಾ ಲೋಭಾದಯಃ । ತ್ವಯಾದ್ಯ ಸಾಧಂತೋನ್ಮೀಲಿತೇತಿ ತತ್ಪ್ರಾಯಂಸ್ತತ್ಪೂರ್ವಾವದಾನೇಭ್ಯೋ ನ ರೋಚತೇ ।

ಹೀಗೆ ಹೃದಯದಲ್ಲಿ ಮೂಡುವ ತರ್ಕವಿತರ್ಕಗಳನ್ನೂ, ಭಾವಪರಂಪರೆಗಳನ್ನೂ ಕವಿಯು ಸುಂದರವಾಗಿ ಪ್ರತಿಪಾದಿಸಬಲ್ಲ.

ಈ ಗದ್ಯಕಾವ್ಯದಲ್ಲಿ ರಾಜವಾಹನನೇ ಪ್ರಧಾನನಾಯಕ. ಅವನು ಅಸಮಪರಾಕ್ರಮಿಯೂ, ಅನುಪಮಸುಂದರನೂ, ಉದಾರಿಯೂ, ದಯಾಳುವೂ, ಉಪಕಾರಿಯೂ ಮತ್ತು ನಿಷ್ಕಳಂಕ ಪ್ರೇಮಿಯೂ ಆದ ತರುಣನಾಗಿ ಚಿತ್ರಿತನಾಗಿದ್ದಾನೆ. ಇಲ್ಲಿರುವ ಕುಮಾರರೆಲ್ಲರೂ ಸಾಹಸಿಗಳೇ, ಮನ್ಮಥರೇ ; ಕುಮಾರಿಯರೆಲ್ಲ ಚತುರೆಯರೇ, ರತಿಯರೇ, ಇವರ ಮುಖ್ಯ ಕಾರ್ಯಕ್ಷೇತ್ರಗಳು ಶ್ರಾವಸ್ತಿ, ಚಂಪಾ ಮತ್ತು ಕುಸುಮಪುರ. ದೀನದಲಿತರ ಸಹಾಯಕ್ಕೆ ಮತ್ತು ದುಷ್ಟರ ದಮನಕ್ಕೆ ಎಲ್ಲರೂ ಧಾವಿಸುವವರೇ. ಇವರಿಗೆ ಶ್ಲಾಘನೀಯವಾದ ಸಿದ್ಧಿ ಮುಖ್ಯ ; ಸಾಧನ ಮಾರ್ಗವಲ್ಲ. ದೀನರೂ, ದರಿದ್ರರೂ ಆಗಿ ಪರ್ಯಟನೆ ಕೈಗೊಂಡು ಬುದ್ಧಿ ಮತ್ತು ಸಾಹಸಗಳಿಂದ ರಾಜಕುಮಾರಿಯರನ್ನು ವರಿಸಿ, ರಾಜ್ಯಗಳಿಸಿಕೊಳ್ಳುತ್ತಾರೆ. ಜಾರರೂ. ಚೋರರೂ ವಂಚಕರೂ, ಜೂಜುಗಾರರೂ, ಕೊಲೆಗಾರರೂ, ಪರದಾರಾಪಹಾರಕರೂ ಆಗಿ ವರ್ತಿಸಿ ಲೋಕ ಮೆಚ್ಚುವ ಉತ್ತಮ ಸಿದ್ಧಿಯನ್ನು ಪಡೆಯುತ್ತಾರೆ. ಉದ್ದೇಶ ಘನವಾದುದರಿಂದ, ಶತ್ರುಗಳು



ದುಷ್ಕರ್ಮಿಗಳೂ, ನೀಚರೂ ಆದುದರಿಂದ ಇವರ ವ್ಯಕ್ತಿತ್ವಕ್ಕೆ ಚ್ಯುತಿಬರುವುದಿಲ್ಲ. ಲೋಕದ ಒಳ್ಳೆಯ ಮತ್ತು ಕೆಟ್ಟ ಜನರೆಲ್ಲಾ ಈ ಕಾವ್ಯದಲ್ಲಿ ಓಡಾಡುತ್ತಾರೆ. ಮಹಾ ತಪಸ್ವಿಯಾದ ಮರೀಚಿಯು ಕಾಮಮಂಜರಿಯೆಂಬ ವೇಶ್ಯೆಯ ಬಲೆಗೆ ಬೀಳುತ್ತಾನೆ. ಧರ್ಮರಕ್ಷಿತೆಯೆಂಬ ಶಾಕ್ಯಭಿಕ್ಷುಕಿಯು ಕಾಮಮಂಜರಿಯ ಪ್ರಧಾನ ದೂತಿಯಾಗಿ ಜೀವನ ನಡೆಸುತ್ತಾಳೆ. ದೊರೆ ಚಂಡವರ್ಮನ ತಮ್ಮನಾದ ದಾರುವರ್ಮನ ನಿತ್ಯಗೆಲಸ ಅತ್ಯಾಚಾರ, ಕೊಲೆ, ಸುಲಿಗೆಗಳ ಬ್ರಾಹ್ಮಣನು ಜೂಜುಕಟ್ಟೆ ಹತ್ತುತ್ತಾನೆ. ಪತಿಯನ್ನು ಕೊಂದ ಜಾರೆ ಉಪಪತಿಯೊಡನೆ ಮಹಾಪತಿವ್ರತೆಯಾಗಿ ಮೆರೆಯುತ್ತಾಳೆ. ವರ್ತಕರು ಜನರ ರಕ್ತವನ್ನು ಹೀರುತ್ತಾರೆ. ದುಡ್ಡಿಗಾಗಿ ವೇಶ್ಯೆಯರು ಬಲೆ ಬೀಸುತ್ತಾರೆ. ಹೀಗೆ ಲೋಕದಲ್ಲಿರುವ ಅತ್ಯಾಚಾರ, ಭ್ರಷ್ಟಾಚಾರ ದೌರ್ಜನ್ಯಗಳನ್ನೆಲ್ಲಾ ಕವಿಯು ಚಿತ್ರಿಸಿ ಯೋಗ್ಯಮಾರ್ಗದ ಅರಿವನ್ನುಂಟುಮಾಡುತ್ತಾನೆ ದಂಡಿಯು ನೀತಿಶಾಸ್ತ್ರ, ರಾಜನೀತಿ, ಕಾಮಶಾಸ್ತ್ರ ಮೊದಲಾದುವುಗಳಲ್ಲಿ ಪರಿಶ್ರಮವುಳ್ಳವನು, ಚೌರ್ಯಶಾಸ್ತ್ರ,ಕಂದುಕಾಕ್ರೀಡನ, ಇಂದ್ರಜಾಲ, ವೇಶ್ಯಾವೃತ್ತಿ, ಅಲ್ಪವ್ಯಯದಲ್ಲಿಭೋಜನವನ್ನು ಸಿದ್ಧಪಡಿಸುವ ವಿಧಾನ ಮುಂತಾದುದರ ಅನುಭವವುಳ್ಳವನು. ಕಾವ್ಯಕ್ಕೆ ಆನಂದದಷ್ಟೇ ನೀತಿ ಬೋಧೆಯು ಮುಖ್ಯವಾದುದು. ಇವನು ಜಗತ್ತಿನ ಲೋಪದೋಷಗಳನ್ನು ಬಯಲಿಗೆಳೆದಿರುವುದರಲ್ಲಿ ಒಳ್ಳೆಯ ಹಾಸ್ಯವಿದೆ. ಹತ್ತುಮಂದಿ ಕುಮಾರರೂ ಪ್ರಣಯಿಗಳಾಗಿ ಚಿತ್ರಿತವಾಗಿರುವುದರಿಂದ ಶೃಂಗಾರವು ಪ್ರಧಾನವಾಗಿ ಬಂದಿದೆ. ಅವರ ಸಾಹಸಪ್ರಸಂಗಗಳಲ್ಲಿ ವೀರರಸವೂ ಇದೆ. ಕರುಣಾದ್ಭುತಾದಿಗಳಿಗೂ ಕೊರತೆಯಿಲ್ಲ.

ಮೃಚ್ಛಕಟಿಕ ನಾಟಕದ ಪಾತ್ರಗಳಂತೆ ಈ ಕಾವ್ಯದಲ್ಲಿಯೂ ವಾಸ್ತವಿಕ ಸಮಾಜದ ವ್ಯಕ್ತಿಗಳೇ ಪಾತ್ರಧಾರಿಗಳು. ಶಬ್ದಪ್ರೌಢಿಮೆ, ಅರ್ಥವೈದಗ್ಧ್ಯ, ವರ್ಣನೆ, ಅಲಂಕಾರಗಳು ದಂಡಿಯಲ್ಲಿ ಗೌಣ ; ಲೋಕದ ಲೋಪದೋಷಗಳನ್ನು ಬಯಲಿಗೆಳೆಯುವ, ಅದ್ಭುತ ಘಟನೆಗಳಿಂದ ಕೂಡಿದ, ಸಾಹಸಮಯವಾದ ಕಥೆಗಳ ಸ್ವಾರಸ್ಯವು ಪ್ರಧಾನ, ಜನರು ಇವನನ್ನು ಆಚಾರ್ಯದಂಡಿಯೆಂದು ಗೌರವಿಸುತ್ತಿದ್ದರು. ದಶಕುಮಾರಚರಿತಕ್ಕೆ ಶಿವರಾಮ, ಗುರುನಾಥ, ಕಾವ್ಯತೀರ್ಥ, ರವೀಂದ್ರಾಚಾರ್ಯ. ಸರಸ್ವತಿ, ಹರಿದಾಸಸಿದ್ಧಾಂತವಾಗೀಶ, ಹರಿಪಾದಚಟ್ಟೋಪಾಧ್ಯಾಯ, ಜಿ.ಕೆ. ಅಂಬೇಡ್ಕರ್, ಎ.ಬಿ. ಗಜೇಂದ್ರಗಡ್ಕರ್, ರೇವತಿಕಾಂತಭಟ್ಟಾಚಾರ್ಯ, ಜೀವಾನಂದ, ತಾರಾನಾಥ ಮತ್ತು ಕೆಲವರು ಅಜ್ಞಾತರ ವ್ಯಾಖ್ಯಾನಗಳಿವೆ.

**ತಿಲಕಮಂಜರೀ** :—ಕಾಶ್ಯಪಗೋತ್ರದ ಸರ್ವದೇವನ ಮಗನಾದ ಧನಪಾಲನ (ಸು|| ಕ್ರಿ.ಶ. 1000) ಕೃತಿ ಇದು. ಇವನು ಹಲಾಯುಧ, ಪದ್ಮಗುಪ್ತ, ಧನಂಜಯ ಮತ್ತು ದೇವಭದ್ರರ ಸಮಕಾಲೀನನಾಗಿದ್ದನು. ಧಾರಾನಗರಿಯ ದೊರೆಗಳಾಗಿದ್ದ ಸೀಯಕ ಮತ್ತು ವಾಕ್ಪತಿಗಳು ಇವನ ಆಶ್ರಯದಾತರು. ತನ್ನ ದೊರೆಯನ್ನು ತೃಪ್ತಿಪಡಿಸಲು ಇವನು ಜೈನ ತತ್ವಗಳನ್ನು ಪ್ರತಿಪಾದಿಸುವ ತಿಲಕಮಂಜರಿಯನ್ನು ರಚಿಸಿದನು. ಇದು ತಿಲಕಮಂಜರೀ ಮತ್ತು ಸಮರಕೇತುಗಳ ಪ್ರಣಯವನ್ನು ಚಿತ್ರಿಸುವ ದೀರ್ಘಕತೆ. ಧನಪಾಲನು ಸಂಪೂರ್ಣವಾಗಿ ಬಾಣನನ್ನು ಅನುಕರಿಸಿದ್ದಾನೆ. ತಿಲಕಮಂಜರಿಯನ್ನು ಕಾದಂಬರಿಯ ಮಪಾಂತರವೆಂದು

ಹೇಳಬಹುದು. ಇದರ ಪ್ರಾರಂಭದ ಪದ್ಯಗಳಲ್ಲಿ ಕವಿಗಳಾದ ಬಾಣ, ಭವಭೂತಿ, ರಾಜಶೇಖರ,
ರುದ್ರ, ಮಹೇಂದ್ರ ಮತ್ತು ಕರ್ದಮಹಾರಾಜರ ಪ್ರಶಂಸೆಯಿದೆ.

ಧನಪಾಲನ ಇತರ ಕೃತಿಗಳಾದ ಋಷಭಪಂಚಾಶಿಕಾ [ಪದ್ಯಕಾವ್ಯ] ಪೈಯಲಚ್ಛಿನಾಮ
ಮಾಲಾ, ಪಂಚವೀಕಹಾಗಳು ಪ್ರಾಕೃತದಲ್ಲಿವೆ.

**ಉದಯಸುಂದರೀ ಕಥಾ** :—ಸೊಲ್ಲಪೇಯನ ಮೊಮ್ಮಗನೂ, ಸೂರನ ಮಗನೂ
ಆದ ಸೋಡ್ಢಲನು (ಸು|| ಕ್ರಿ.ಶ. 1050) ಈ ಕಾವ್ಯದ ಕರ್ತೃ. ಇವನದು ಕಾಯಸ್ಥಕ್ಷತ್ರಿಯ
ಜಾತಿಯ ವಲಭಶಾಖೆ. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಬಂಧುವಾದ
ಗಂಗಾಧರನ ಆಶ್ರಯದಲ್ಲಿ ಬೆಳೆದನು. ಚಂದ್ರನ ಶಿಷ್ಯನಾಗಿ ಅಧ್ಯಯನ ಪೂರೈಸಿ ಕೊಂಕಣ
ದೇಶದ ರಾಜಾಶ್ರಯ ಪಡೆದನು. ಕ್ರಮವಾಗಿ ಗದ್ದುಗೆಯನ್ನು ಹತ್ತಿದ, ಸಹೋದರರಾದ
ಚಿತ್ತರಾಜ, ನಾಗಾರ್ಜುನ ಮತ್ತು ಮುಮ್ಮನಿರಾಜರು—ಇವನಿಗೆ ಆಶ್ರಯನೀಡಿ ಪ್ರೋತ್ಸಾಹಿ
ಸಿದರು. ಲಾಟದೇಶದ ಚಾಲುಕ್ಯದೊರೆಯಾದ ವತ್ಸರಾಜನೂ ಇವನನ್ನು ತನ್ನ ಆಸ್ಥಾನದಲ್ಲಿ
ಗೌರವಿಸಿದನು. ಮುಕ್ತಕಗಳ ರಚನೆಯಲ್ಲಿ ರುಚಿ ಕಡಿಮೆಯೆಂದೂ, ಅವುಗಳ ಮಾಲೆಯು
ಹೆಚ್ಚು ರಮಣೀಯವೆಂದೂ ವತ್ಸರಾಜನು ಅಭಿಪ್ರಾಯಪಡಲು, ಸೋಡ್ಢಲನು ಉದಯ
ಸುಂದರೀ ಕಥೆಯನ್ನು ರಚಿಸಿದಂತೆ ತಿಳಿದು ಬರುತ್ತದೆ.* ಕವಿಯು ತಾನು ಬಾಣ, ವಾಲ್ಮೀಕಿಗಳಿಗೆ
ಸಮಾನನೆಂದು ಹೇಳಿಕೊಂಡಿದ್ದಾನೆ. ಇವನ ಭಾವಕಲ್ಪನೆ ಮತ್ತು ವಿಚಾರಧಾಟಿಗಳು
ಸುಂದರವಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಇವನು ಗಣ್ಯಸ್ಥಾನವನ್ನು ಪಡೆದಿದ್ದಾನೆ.

ಉದಯಸುಂದರೀ ಕಥೆಯಲ್ಲಿ ಎಂಟು ಉಚ್ಛ್ವಾಸಗಳಿವೆ. ನಾಗಲೋಕದ ದೊರೆಯಾದ
ಶಿಖಂಡಿತಿಲಕನ ಕುಮಾರಿ ಉದಯಸುಂದರಿ ಮತ್ತು ಪ್ರತಿಷ್ಠಾನದ ದೊರೆಯಾದ ಮಲಯವಾಹನರ
ಪ್ರಣಯ ವೃತ್ತಾಂತವು ಈ ಕಾವ್ಯದ ವಸ್ತು. ಕವಿಯು ಮೊದಲನೆಯ ಉಚ್ಛ್ವಾಸದಲ್ಲಿ ತನ್ನ
ವಂಶಾವಳಿ, ಆದರ ಹಿರಿಮೆ ಮತ್ತು ಪ್ರಬಂಧರಚನೆಯ ಪ್ರಸಂಗಗಳನ್ನು ತಿಳಿಸಿದ್ದಾನೆ.

**ಗದ್ಯಚಿಂತಾಮಣಿ** :—ಪುಷ್ಪಸೇನಮುನಿಯ ಶಿಷ್ಯನಾದ, ದಿಗಂಬರ ಜೈನಮುನಿ
ವಾದೀಭಸಿಂಹನು (ಕ್ರಿ.ಶ. 12ನೆಯ ಶತಮಾನ) ಈ ಗದ್ಯಕಾವ್ಯವನ್ನು ರಚಿಸಿದವನು. ಅವನ
ನಿಜವಾದ ಹೆಸರು ಒಡೆಯದೇವ. ಆನೆಯನ್ನು ಸಿಂಹದಂತೆ ಇವನು ಪ್ರತಿವಾದಿಗಳನ್ನು ದಮನ
ಮಾಡುತ್ತಿದ್ದುದರಿಂದ ಇವನಿಗೆ ವಾದೀಭಸಿಂಹನೆಂಬ ಹೆಸರು ಬಂದಿತು, ಗುರುವೇ ಅವನಿಗೆ
ಪರಮೋಪಾಸ್ಯದೇವತೆ. ತಮಿಳುನಾಡಿನ ದಕ್ಷಿಣಜಿಲ್ಲೆಯು ಇವನ ವಾಸಸ್ಥಳ.

ಇವನು ಹನ್ನೊಂದು ಲಂಭಗಳನ್ನುಳ್ಳ ತನ್ನ ಗದ್ಯ ಚಿಂತಾಮಣಿಯಲ್ಲಿ ಸತ್ಯಧರರಾಜ ಮತ್ತು
ಅವನ ಕುಮಾರ ಜೀವಂಧರರ ಚರಿತ್ರೆಯನ್ನು ವರ್ಣಿಸಿದ್ದಾನೆ ; ವೈರಾಗ್ಯವು ಶಾಂತಿಧಾಮವೆಂದು
ಪ್ರತಿಪಾದಿಸಿದ್ದಾನೆ, ಗುಣಭದ್ರನ ಉತ್ತರ ಪುರಾಣವನ್ನಾಧರಿಸಿ, ಕಾದಂಬರಿಯ ಸನ್ನಿವೇಶ

* ಏಕೈಕಶಃ ಪ್ರಕೀರ್ಣೈಃ ಮುಕ್ತಾಮಣಿಭಿಃ ಕಿಮೇಭಿರೇಭಿಸ್ತು ।
ಯಸ್ಸ್ರುಜತಿ ಹಂತ ಹಾರಂ ತಸ್ಯಾನ್ಯಃ ಕೋಽಪಿ ಪರಿಭೋಗಃ ॥

ಮತ್ತು ವರ್ಣನೆಗಳನ್ನನುಕರಿಸಿ, ಸುಲಭ ಭಾಷೆಯಲ್ಲಿ ಕಾವ್ಯವನ್ನು ರಚಿಸಲಾಗಿದೆ. ನೀತಿಬೋಧೆಯು ಕವಿಯ ಪ್ರಧಾನಗುರಿ. ಇವನು ಜೀವಂಧರನ ಜೀವನವನ್ನು ಚಿತ್ರಿಸುವ ಹನ್ನೊಂದು ಸರ್ಗಗಳನ್ನುಳ್ಳ ಕ್ಷತ್ರಚೂಡಾಮಣಿಯೆಂಬ ಮತ್ತೊಂದು ಪದ್ಯಕಾವ್ಯವನ್ನೂ ಬರೆದಿದ್ದಾನೆ. ಇದರ ಬಹಳ ಭಾಗ ತಮಿಳು ಕೃತಿಯಾದ ಜೀವಕ ಚಿಂತಾಮಣಿಯ ಸಂಸ್ಕೃತ ರೂಪಾಂತರವಾಗಿದೆ.

**ಮಾಧವಾನಲಕಥಾ** :—ಆನಂದಧರನು ಇದರ ಕವಿ. ವಿಕ್ರಮಾದಿತ್ಯನು ತೀಕ್ಷ್ಣವಾದ ಚರ್ಚೆಯಲ್ಲಿ ಸೋತ ಕಾಮಕಂದಲೆಯನ್ನು ಗೆದ್ದ ಮಾಧವಾನಲನಿಗೆ ಒಪ್ಪಿಸಿದ ಕಥೆ ಈ ಕಾವ್ಯದ ವಸ್ತು. ಗದ್ಯದ ನಡುನಡುವೆ ಪದ್ಯ ಸಮಾವೇಶವೂ ಇದೆ. ಈ ಕೃತಿಯು ಕ್ರಿ. ಶ. 10ನೆಯ ಶತಮಾನಕ್ಕಿಂತ ಪ್ರಾಚೀನವೆಂದು ಊಹಿಸಲಾಗಿದೆ.

**ಗದ್ಯಕರ್ಣಾಮೃತ** :—ವಿದ್ಯಾಚಕ್ರವರ್ತಿಯ (ಕ್ರಿ. ಶ. 13ನೇಯ ಶತಮಾನ) ಈ ಕಾವ್ಯದಲ್ಲಿ ಹೊಯ್ಸಳವಂಶದ ತ್ರಿಭುವನಮಲ್ಲ ವೀರಬಲ್ಲಾಳನ ಮಗನಾದ ಎರಡನೆಯ ನರಸಿಂಹನಿಗೂ, ಪಾಂಡ್ಯರು, ಮಗಧರು ಮತ್ತು ಕಾಡವರ (ಪಲ್ಲವರ) ಮಿತ್ರಕೂಟಕ್ಕೂ ಶ್ರೀರಂಗದಲ್ಲಿ 90 ದಿನಗಳ ಕಾಲ ನಡೆದ ಯುದ್ಧದ ವಿವರಣೆಯಿದೆ. ವ್ಯಾಸನು ಕೈಲಾಸದಲ್ಲಿ ಶಿವ ಮತ್ತು ಪ್ರಮಥರ ಮುಂದೆ ಈ ಕಾವ್ಯವನ್ನು ಓದುತ್ತಾನೆ. ಹೆಸರಿಗೆತಕ್ಕಂತೆ ಕಾವ್ಯವು ಶ್ರವಣಮಧುರವಾಗಿದೆ.

**ಕೃಷ್ಣಚರಿತ** :—ವಾರಂಗಲ್ಲಿನಲ್ಲಿ ರಾಜ್ಯವಾಳುತ್ತಿದ್ದ ಪ್ರತಾಪರುದ್ರದೇವನ (ಕ್ರಿ. ಶ. 1294ರಿಂದ 1325) ಆಸ್ಥಾನ ಕವಿಯಾದ ಅಗಸ್ತ್ಯನ ಕೃತಿ ಇದು. ಇವನು ತನ್ನ ವಿದ್ಯಾ ಪ್ರೌಢಿಮೆಯಿಂದ ವಿದ್ಯಾನಾಥನೆಂಬ ಉಪಾಧಿಯನ್ನು ಪಡೆದಿದ್ದನೆಂದು ತಿಳಿದು ಬರುತ್ತದೆ. ಭಾಗವತದಲ್ಲಿರುವ ಶ್ರೀಕೃಷ್ಣನ ಚರಿತ್ರೆಯು ಇದರ ವಸ್ತು. ಪ್ರತಾಪರುದ್ರೀಯವು ಇವನ ಮತ್ತೊಂದು ಕೃತಿ. ಈ ಅಲಂಕಾರಗ್ರಂಥದಲ್ಲಿ ಲಕ್ಷ್ಯಗಳಿಗಾಗಿ ಪ್ರತಾಪರುದ್ರನ ಚರಿತ್ರೆಯನ್ನು ಚಿತ್ರಿಸುವ ಒಂದು ನಾಟಕವನ್ನೇ ಅಳವಡಿಸಲಾಗಿದೆ. ಅಗಸ್ತ್ಯನ ಗದ್ಯವು ಅವನ ಪದ್ಯದಷ್ಟೇ ಮನೋಹರವಾಗಿದೆ

**ವೇಮಭೂಪಾಲಚರಿತ (ವೀರನಾರಾಯಣ ಚರಿತ)** :—ಬಾಣನ ವತ್ಸಗೋತ್ರದಲ್ಲಿಯೇ ಜನಿಸಿದ ವಾಮನನು, ಬಾಣನನಂತರ ಆತನಿಗೆ ಸರಿದೂಗುವಂತೆ ಸರಸಗದ್ಯವನ್ನು ರಚಿಸುವ ಸಾಮರ್ಥ್ಯವು ಯಾರಿಗೂ ಇಲ್ಲವೆಂಬ ಪ್ರವಾದವನ್ನು ಸುಳ್ಳುಮಾಡಲು ಬಯಸಿ ಈ ಕಾವ್ಯವನ್ನು ರಚಿಸಿದನು*. ಅದೇ ವಂಶದಲ್ಲಿ ಜನಿಸಿದ ತನ್ನಲ್ಲಿಯೂ ಬಾಣನ ಪ್ರತಿಭೆ ಇದೆಯೆಂದು ಭಾವಿಸಿ. ಅವನು ತನ್ನನ್ನು ಅಭಿನವ ಬಾಣನೆಂದು ಕರೆದುಕೊಂಡಿದ್ದಾನೆ ಬಾಣನು ಹರ್ಷಚರಿತದಲ್ಲಿ ತನ್ನ ಆಶ್ರಯದಾತನಾದ ಹರ್ಷನನ್ನು ವರ್ಣಿಸಿರುವುದರಿಂದ ಪ್ರೇರಣೆಗೊಂಡ ಇವನು ವೇಮಭೂಪಾಲಚರಿತದಲ್ಲಿ ತನ್ನ ಆಶ್ರಯದಾತನಾದ ವೇಮಭೂಪಾಲನ

* ಬಾಣಕವೀಂದ್ರಾದನ್ಯೇ ಕಾಣಾಃ ಖಲು ಸರಸಗದ್ಯಸರಣೀಷು ।
ಇತಿ ಜಗತಿ ರೂಢಯಶಸೋ ವತ್ಸಕುಲೋ ವಾಮನೋಽಧುನಾ ಮಾರ್ಷ್ಟಿ ॥

(ವೀರನಾರಾಯಣನ) ಚರಿತ್ರೆಯನ್ನು ಬರೆದಿದ್ದಾನೆ. ಅದ್ದಂಕಿಯ ರೆಡ್ಡಿದೊರೆಯಾದ ವೇಮಭೂಪಾಲನು ಕೊಂಡವೀಡಿನಲ್ಲಿ ರಾಜ್ಯವಾಳುತ್ತಿದ್ದನು. (ಕ್ರಿ.ಶ. 1403–1420).

ವತ್ಸಗೋತ್ರದಲ್ಲಿ ಹುಟ್ಟಿ ಪ್ರೋಲ್ಲರಾಜನು ದಕ್ಷಿಣಾಪಥದ ವಿಕ್ರಮಸಿಂಹರಾಜನ ಮಗಳಾದ ಅನಂತಳನ್ನು ಮದುವೆಯಾಗಿ ಐವರು ಮಕ್ಕಳನ್ನು ಪಡೆದನು. ಇವ ರಲ್ಲೊಬ್ಬನಾದ ಮಾಚನ ಮೂರು ಮಕ್ಕಳಲ್ಲಿ ಪೆಡಕೋಮಟೀಂದ್ರನು ಹಿರಿಯನು. ಈ ಜ್ಯೇಷ್ಠಪುತ ನಮಗನಾದ ವೇಮಭೂಪನು ಈ ಕಾವ್ಯದ ನಾಯಕ. ಇವನ ದಿಗ್ವಿಜಯವನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ಈ ಕಾವ್ಯದಲ್ಲಿ ಭಾವಗಳ ಮಧುರತೆಯೂ ಶಬ್ದಗಳ ಇಂಪೂ ಒಟ್ಟುಗೂಡಿವೆ: ಶೈಲಿಯು ರಮಣೀಯವಾಗಿದೆ.

ಬಾಣನ ಹರ್ಷಚರಿತ್ರೆಯನ್ನು ಓದಿದವರಿಗೆ ಈ ಕೃತಿರಚನೆಯು ಸ್ವತಂತ್ರವೆನಿಸಲಾರದು. ವಾಮನನು ಬಾಣನಿಂದ ಪ್ರಭಾವಿತನಾಗಿದ್ದಾನೆ. ಅನುಕರಣೆಯಲ್ಲಿಯೂ ಕವಿಗಿರುವ ಸಾಮರ್ಥ್ಯವು ಶ್ಲಾಘನೀಯವಾಗಿದೆ. ಅವನ ಶೈಲಿಯ ಪರಿಚಯಕ್ಕಾಗಿ ಒಂದು ವಾಕ್ಯವನ್ನಿಲ್ಲಿ ಉದಾಹರಿಸಲಾಗಿದೆ.

**ಸರ್ವೋತ್ಕರ್ಷೇಣ ವರ್ತಮಾನಃ ಸಾಕ್ಷಾಲ್ಲಕ್ಷ್ಮೀ ಸಮುಚ್ಚಾರಿತ ಜಯಶಬ್ದಃ ವಿಶ್ವವಿಶ್ವಂಭರಾ ಪಾಲಮೌಳಿಮಾಲಾಮಕರಂದಸುರಭಿತಚರಣಾರವಿಂದೋ ಜಯಂತಿ ವಿಶ್ವಾಧಿಕವಿಭವೋ ವೇಮಭೂಪಾಲಃ ।**

**ರಾಮಚರಿತ :** ರಾಜವಿಜಯಸೂರಿಯ ಶಿಷ್ಯನಾದ ದೇವವಿಜಯಗಣಿಯು ಶ್ರೀ ಮಾಲಪುರದಲ್ಲಿ ಈ ಕಾವ್ಯವನ್ನು ರಚಿಸಿದನು (ಕ್ರಿ.ಶ. 1596). ಈ ಗದ್ಯಕಾವ್ಯರಚನೆಗೆ ಕವಿಯು ಹೇಮಚಂದ್ರನ ರಾಮಾಯಣವನ್ನವಲಂಭಿಸಿದ್ದಾನೆ.

**ಶ್ರೀಕೃಷ್ಣಾಭ್ಯುಧಯ :**—ಭಾಸ್ಕರ ಆಚಾರ್ಯನ ಮಗನಾದ ತಿರುಮಲಾಚಾರ್ಯನು (ಕ್ರಿ.ಶ. 1809–1877) ಈ ಕಾವ್ಯದ ಕರ್ತೃ. ಬಾಣನು ಇವನ ಮೆಚ್ಚಿನ ಕವಿ. ಗದ್ಯ ಸಾಹಿತ್ಯದಲ್ಲಿ ಇವನಿಗಿದ್ದ ಪರಿಶ್ರಮ ಮತ್ತು ಆಸಕ್ತಿಗಳಿಂದಾಗಿ ಜನರು ಇವನನ್ನು ಕಾದಂಬರೀ ತಿರುಮಲಾಚಾರ್ಯನೆಂದು ಕರೆಯುತ್ತಿದ್ದರು. ಎರಡು ಭಾಗಗಳನ್ನುಳ್ಳ ಶ್ರೀಕೃಷ್ಣಾಭ್ಯುದಯ ದಲ್ಲಿ ಶ್ರೀಕೃಷ್ಣನ ಪೂರ್ಣಕಥೆ ಇದೆ. ಇವನ ಆಕರ್ಷಕಶೈಲಿಯು ಭಾವಪ್ರಕಾಶನಕ್ಕೆ ಸಮರ್ಥ ವಾಗಿದೆ. ಸಂಸ್ಕೃತಸಾಹಿತ್ಯಕ್ಕೆ ಈ ಕೃತಿಯು ಒಂದು ಒಳ್ಳೆಯ ಕಾಣಿಕೆಯಾಗಿದೆ. ಇವನು ಹನುಮನ್ನಕ್ಷತ್ರಮಾಲಾ, ವೀರಾಂಜನೇಯಾಷ್ಟಕ ಮತ್ತು ಗೋಪಾಲಾರ್ಯಾ ಎಂಬ ಪದ್ಯ ಗಳನ್ನೂ ಮತ್ತು ಭಾರತೀವಿಲಾಸ (ಷೇಕ್ಸ್‌ಪಿಯರನ ಕಾಮೆಡಿ ಆಫ್ ಎರರ್ಸ್) ಮತ್ತು ಕಾವೇರೀಗದ್ಯ (ತಲಕಾವೇರಿಯ ಪ್ರವಾಸ) ಎಂಬ ಗದ್ಯ ಕೃತಿಗಳನ್ನೂ ರಚಿಸಿದ್ದಾನೆ.)

ತಿಮ್ಮಕವಿಯು (ಕ್ರಿ.ಶ. 18ನೆಯ ಶತಮಾನ) ಸುಜನಮನಃಕುಮುದಚಂದ್ರಿಕಾ ಎಂಬ ಗದ್ಯಕಾವ್ಯವನ್ನು ಬರೆದಿದ್ದಾನೆ. ಇದು ತೆಲುಗಿನಲ್ಲಿರುವ ರಸಿಕಜನಮನೋಭಿರಾಮದ ಅನುವಾದವಾಗಿದೆ ಕೇರಳದ ದೊರೆಯಾದ ಕರಾಳವಕ್ತ್ರನು ಬೇಟೆಯ ಸಮಯದಲ್ಲಿ ಕಂಡ



ಹುಡುಗಿಯನ್ನು ಮದುವೆಯಾಗಿ. ಅವಳು ಬಯಸಿದ ಗಿಳಿಯೊಂದನ್ನು ಹಿಡಿಯಲು ಹಿಂಬಾಲಿಸಿ, ಶಿವಾಲಯವನ್ನು ಹೊಕ್ಕು, ಅಲ್ಲಿ ಬಿದ್ದು "ಶಂಕರ" ಎಂದು ಉಚ್ಚರಿಸುತ್ತಾ ಪ್ರಾಣಬಿಟ್ಟು ಮುಕ್ತಿ ಪಡೆದುದು ಈ ಕೃತಿಯ ವಸ್ತು. ಇಂದ್ರನು ಕೇರಳದ ಮಹಾಭಾಗನಿಗೆ ಹೇಳಿದಂತೆ ಕಥೆಯು ಬಂದಿದೆ. ಅಹೋಬಿಲನೃಸಿಂಹನು (ಕ್ರಿ.ಶ. 18ನೆಯ ಶತಮಾನ) ಅಭಿನವ ಕಾದಂಬರಿ (ಮೈಸೂರಿನ ಮೂರನೆಯ ಕೃಷ್ಣರಾಜ ಒಡೆಯರ ಸಾಹಸಗಳ ವರ್ಣನೆ) ಯನ್ನೂ, ಅಪ್ಪಾಶಾಸ್ತ್ರಿಯು (1877–1913) ಲಾವಣ್ಯಮಯೀ (ಬಂಕಿಮ ಚಂದ್ರರ ಕೃತಿಯ ಅನುವಾದ) ಯನ್ನೂ, ಆರ್. ಕೃಷ್ಣಮಾಚಾರ್ಯನು (1869–1924) ಪಾತಿವ್ರತ್ಯ, ಪಾಣಿಗ್ರಹಣ, ವರರುಚಿ ಮತ್ತು ಸುಶೀಲಾಕೃತಿಗಳನ್ನೂ, ಅನಂತಾಚಾರ್ಯನು (ಕ್ರಿ.ಶ. 19ನೆಯ ಶತಮಾನ) ಸಂಸಾರಚಕ್ರ (ಹಿಂದೀ ಕೃತಿಯ ಅನುವಾದ)ವನ್ನೂ, ರಾಜಗೋಪಾಲ ಚಕ್ರವರ್ತಿಯು (1882–1934) ಶೈವಾಲಿನೀ, ಕುಮುದಿನೀ, ವಿಲಾಸಕುಮಾರೀಗಳನ್ನೂ ಬರೆದಿದ್ದಾರೆ. ಅಲ್ಲದೆ ಕನಕಲತಾ, ಮಂದಾರವತೀ, ಜಯಂತಿಕಾ, ದಿವ್ಯಸೂರಿವೈಭವ ಚಂದ್ರಮೌಳಿ, ವಿದ್ವಚ್ಚರಿತಪಂಚಕ ಮುಂತಾದ ಹಲವು ಅರ್ವಾಚೀನ ಗದ್ಯ ಕೃತಿಗಳಿವೆ.

## ಕಥಸಾಹಿತ್ಯ

ಸ್ವಾರಸ್ಯವೇ ಕಥೆಯ ಜೀವ 'ಕಥಾಯಾಂ ಸರಸಂ ವಸ್ತು'; ಉಳಿದ ಪಾತ್ರಪೋಷಣೆ ಗುಣ ಚಿತ್ರಣ, ವರ್ಣನೆ—ಮುಂತಾದುದೆಲ್ಲ ಗೌಣ. ಅಜ್ಜ, ಅಜ್ಜಿಯರಿಗೆ ಮಾತ್ರವಲ್ಲ, ಎಲ್ಲರಿಗೂ ಕಥೆ ಹೇಳಬೇಕೆಂಬ ಆಸೆಯುಂಟು. ಭೀಷ್ಮ, ವಿಶ್ವಾಮಿತ್ರರೂ ಕಥೆ ಹೇಳುತ್ತಾರೆ. ಪಾಂಡವರನ್ನು ಸಂತಯಿಸಲು ಋಷಿಗಳು ಕಥೆ ಹೇಳುತ್ತಾರೆ. ಸಾಹಿತ್ಯದಲ್ಲಿ ಮಾನವರಂತೆ ಪಶುಪಕ್ಷಿಗಳೂ ಕಥೆ ಹೇಳುತ್ತವೆ. ಹೊತ್ತು ಹೋಗದಿದ್ದರೆ ಕಥೆ. ನಿದ್ದೆಬಾರದಿದ್ದರೆ ಕಥೆ, ಹೇಳಿದುದನ್ನು ಸಮರ್ಥಿ ಸುವುದಕ್ಕೆ ಕಥೆ, ವಿರೋಧಿಸುವುದಕ್ಕೆ ಕಥೆ, ಯುದ್ಧಮಧ್ಯದಲ್ಲಿ ಕಥೆ—ಹೀಗೆ ಮಾತೆತ್ತಿದರೆ ಕಥೆಯು ಬಂದು ಮನಸ್ಸನ್ನು ರಂಜಿಸುತ್ತದೆ. ಅನೇಕ ಸಹಸ್ರವರ್ಷಗಳಿಂದಲೂ ಕಥೆಗಳು ಪ್ರಚಾರದಲ್ಲಿವೆ. ಅವು ದೇಶವಿದೇಶಗಳಿಗೆ ಹರಡುತ್ತಾ ಸಾಗಿವೆ. ಭರತಖಂಡವು ಕಥೆಗಳ ತವರು. ಭಾರತವು ವಿಶ್ವಕ್ಕೆ ಕೊಟ್ಟ ದೊಡ್ಡ ಕೊಡುಗೆಯಾಗಿವೆ ಕಥೆಗಳು. ಕ್ರಿ.ಶ. 533 ರಿಂದ ಸತತವಾಗಿ ನಡೆದಿದ. ಪಂಚತಂತ್ರದ ವಿಶ್ವಪರ್ಯಟನ. ಕಥೆಗಳ ಮೂಲಕ ಶಿಕ್ಷಣ ನೀಡುವುದು ಭಾರತದ ವೈಶಿಷ್ಟ್ಯವೆಂದು ವಿಲಿಯಂ ಜೋನ್ಸರು ಅಭಿಪ್ರಾಯ ಪಡುತ್ತಾರೆ. ಕ್ರಿಸ್ತ ಪೂರ್ವದಷ್ಟು ಪ್ರಾಚೀನವಾದ ಕಥೆಗಳು ಭಾರತದಿಂದ ಯೂರೋಪಿನ ನಾನಾ ಭಾಗಗಳಿಗೆ ಹರಿದಿವೆಯೆಂದು ಪಾಶ್ಚಾತ್ಯವಿಮರ್ಶಕರೂ ಅಭಿಪ್ರಾಯಪಟ್ಟಿದ್ದಾರೆ.* ಸಂಹಿತೆಗಳ ಕಾಲದಿಂದಲೂ ಭಾರತದಲ್ಲಿ ನಾನಾರೂಪದ ಕಥೆಗಳು ಪ್ರಚಲಿತವಾಗಿವೆ. ಸಂವಾದಸೂಕ್ತ,

*. Da. Rhys Davids ; ottokeller
ಅರೇಬಿಯನ್ ನೈಟ್ಸ್ ಮತ್ತು ಈಸೋಪನ ಕಥೆಗಳ ಮೇಲೂ ಭಾರತೀಯ ಕಥೆಗಳ ಸಾಕಷ್ಟು ಪ್ರಭಾವವಿದೆ.

ದಾನಸ್ತುತಿಸೂಕ್ತ, ವಿವಾಹಸೂಕ್ತ, ಮುಂತಾದ ಋಗ್ವೇದದ ಸೂಕ್ತಗಳಲ್ಲಿಯೇ ಕಥಾಬೀಜವಿದೆ. ಯಮಯಮಿಸಂವಾದ, ಸೋಮ ಮತ್ತು ಸೂರ್ಯೆಯರ ವಿವಾಹವೃತಾಂತಗಳು ಕಥಾರೂಪವಾಗಿವೆ. ವೃತ್ರನೊಡನೆ ಇಂದ್ರನು ನಡೆಸುವ ಹೋರಾಟವೂ ಕಥಾರೂಪವಾಗಿದೆ. ಬ್ರಾಹ್ಮಣಗಳ ಉಪಾಖ್ಯಾನಗಳಲ್ಲಿರುವ ಪುರೂರವೋರ್ವಶೀ, ಶುನಃಶೇಪ ಮುಂತಾದ ಕಥೆಗಳ ಆಧಾರದಿಂದ ಶಾಕುಂತಲವೇ ಮೊದಲಾದ ಉತ್ತಮ ಕೃತಿಗಳ ರಚನೆಯಾಗಿರುವುದು ಸರ್ವವಿದಿತ. ಉಪನಿಷತ್ತುಗಳಲ್ಲಂತೂ ಕಥೆಗಳು ತುಂಬಿವೆ. ನಾಯಿಗಳು ತಮಗೊಬ್ಬ ನಾಯಕನನ್ನು ಹುಡುಕುತ್ತವೆ ; ಪಕ್ಷಿಗಳ ಮಾತಿನಿಂದ ರೈಕ್ವನು ಜಾಗೃತಿಗೊಳ್ಳುತ್ತಾನೆ. ಸತ್ಯಕಾಮನು ಮೊದಲು ಎತ್ತಿನಿಂದ, ನಂತರ ಪಕ್ಷಿಗಳಿಂದ ಉಪದೇಶ ಪಡೆಯುತ್ತಾನೆ. ಪುರಾಣಗಳಲ್ಲಿಯೂ ಸಾಕಷ್ಟು ಕಥೆಗಳಿವೆ. ಮನು ಮತ್ತು ಮೀನಿನ ಕಥೆ. ಇಂದ್ರನು ಮರ್ಕಟ ಮತ್ತು ಕಪಿಂಜಲ ಪಕ್ಷಿಗಳಾಗಿ ರೂಪಾಂತರಗೊಳ್ಳುವುದು ಋಗ್ವೇದದಲ್ಲಿಯೇ ಬಂದಿದೆ. ಮಂಡೂಕಸೂಕ್ತವು ಜೀವನದಲ್ಲಿ ಮಾನವರಿಗೂ, ಪ್ರಾಣಿಗಳಿಗೂ ಇರುವ ಸಂಬಂಧವನ್ನು ಸೂಚಿಸುತ್ತದೆಂಬ ಅಭಿಪ್ರಾಯವಿದೆ. ಪಶುಪಕ್ಷಿಗಳ ಕಥೆಗಳನ್ನುಳ್ಳ ಪಂಚತಂತ್ರವೇ ಮೊದಲಾದ ಪ್ರಸಿದ್ಧಕೃತಿಗಳಿಗೆ ಇದೆಲ್ಲವೂ ಹಿನ್ನೆಲೆಯಾಗಿದೆ. ಕಥೆಗಳ ಮೂಲಕ ನೀತಿ ಮತ್ತು ಧರ್ಮವನ್ನು ಬೋಧಿಸುವ ಬೌದ್ಧರ ಅವದಾನಗಳು ಕ್ರಿಸ್ತಪೂರ್ವದಲ್ಲಿಯೇ ರಚನೆಯಾದವು. ಬಹಳ ಪ್ರಾಚೀನವಾದ ಅವದಾನಶತಕವು. ಕ್ರಿ. ಶ. 3ನೆಯ ಶತಮಾನದಲ್ಲಿಯೇ ಚೀನಿಭಾಷೆಗೆ ಅನುವಾದಗೊಂಡಿದೆ. ಜಾತಕಕಥೆಗಳಂತೂ ಸುಪ್ರಸಿದ್ಧವಾಗಿವೆ. ದಿವ್ಯಾವದಾನವು ಗದ್ಯರೂಪವಾಗಿದ್ದು ನಡುನಡುವೆ ಭಿನ್ನಭಿನ್ನ ಛಂದಸ್ಸಿನ ಪದ್ಯಗಳನ್ನೊಳಗೊಂಡಿದೆ. ಐತರೇಯ ಬ್ರಾಹ್ಮಣದಲ್ಲಿಯೇ ನೀತಿಪದ್ಯಗಳನ್ನೊಳಗೊಂಡ ಕಥೆಯನ್ನು ಕಾಣುತ್ತೇವೆ. ನೀತಿ ಮತ್ತು ಧರ್ಮಬೋಧೆಗಾಗಿ ಪ್ರಾಚೀನಕಾಲದಲ್ಲಿಯೇ ಜೈನರಿಂದ ರಚಿತವಾದ ಸಾಕಷ್ಟು ಕಥೆಗಳಿವೆ. ಹೀಗೆ ಪ್ರಾಚೀನಕಾಲದಿಂದಲೂ ಭಾರತದಲ್ಲಿ ಬೆಳೆದುಬಂದಿರುವ ಕಥೆಗಳ ರಾಶಿಯಲ್ಲಿ ದಂತಕಥೆ, ಕಟ್ಟುಕಥೆ, ಪುರಾಣಕಥೆ, ಮಾಯಾಕಥೆ, ಧರ್ಮಕಥೆ— ಮುಂತಾದ ಸಕಲ ಕಥಾಪ್ರಕಾರಗಳೂ ಇವೆ.*

ಸೂತ್ರರೂಪವಾದ ಪ್ರಧಾನಕಥೆಯೊಂದಿದ್ದು ಅದರೊಡನೆ ಕಥೆ, ಉಪಕಥೆಗಳು ವಿಚಾರ ಕೊಂಡಿಗಳಿಂದ ಕೂಡಿ ಕಥೆಯ ಬೆಳವಣಿಗೆಯಾಗುತ್ತದೆ. ಒಂದೇ ಕಥೆ ಬಹುದೀರ್ಘವಾಗಿ ಸಾಗುವುದರಿಂದ ಆಗುವ ಬೇಸರ ಇದರಿಂದ ಪರಿಹಾರವಾಗುತ್ತದೆ ; ವಿಭಿನ್ನ ಸ್ವಾರಸ್ಯ ಸಿಕ್ಕುತ್ತದೆ. ಮಕ್ಕಳಿಗಂತೂ ಸಣ್ಣಕಥೆಗಳೇ ಬೇಕು ; ಅವೂ ಪಶುಪಕ್ಷಿಗಳ ಕಥೆಗಳಾದರೆ ಲೇಸು. ಪಂಚತಂತ್ರದಲ್ಲಿ ಮೊದಲಬಾರಿಗೆ ರೂಪತಾಳಿರುವ ಈ ಕಥಾಸಂವಿಧಾನ ಲೋಕಪ್ರಿಯವಾಗಿದೆ. ಪ್ರಾಯಃಕವಾಗಿ

---

*From the earliest times of the life of the vedic Indians in India tales of all sorts passed current among the people, however useless it may be to discriminate them as fairy tales, Marchan, or Myths or fables in the earlier stages of their development—A. B. Keith.



ಕಥೆಗಳು ಗದ್ಯದಲ್ಲಿದ್ದು ಕೊನೆಯಲ್ಲಿ ನೀತಿಬೋಧಕ ಪದ್ಯಗಳನ್ನೊಳಗೊಂಡಿರುತ್ತವೆ. ಕೆಲವೊಮ್ಮೆ ಅಲ್ಲಲ್ಲಿ ಬರುವ ಪದ್ಯಗಳಲ್ಲಿಯೂ ಕಥೆಯು ಹರಿದಿರುವುದುಂಟು. ಕುತೂಹಲವನ್ನು ಕೆರಳಿಸಿ ಮನೋರಂಜನೆಯನ್ನೊದಗಿಸುವುದಷ್ಟೇ ಕಥೆಯ ಗುರಿಯಲ್ಲ ; ನೀತಿ, ಆಚಾರ, ಧರ್ಮಾದಿಗಳ ಬೋಧನೆಯೂ ಕಥಾಕಾರನ ಆಶಯವಾಗಿರುತ್ತದೆ. ಇಂದು ನಡೆಯುತ್ತಿರುವ ಹರಿಕಥೆ–ಹರಕಥೆಗಳಲ್ಲಿಯೂ ಈ ಸಂಪ್ರದಾಯವನ್ನು ಕಾಣುತ್ತೇವೆ. ಪಂಚತಂತ್ರದ ಪರಮಗುರಿ ಶಿಕ್ಷಣ ಉಪನಿಷತ್ತಿನಕಥೆಗಳ ಧ್ಯೇಯ ವೇದಾಂತಬೋಧನೆ. ರಂಜನೆಯೊಡನೆ ಜೀವನವಿಧಾನವನ್ನು ಮನಗಾಣಿಸುವ ಕಥನಕಲೆಯು ಭವ್ಯ ಮತ್ತು ಪ್ರಭಾವಶಾಲಿಯಾದುದು.

ಬೃಹತ್ಕಥಾ :—ನೂರಾರು ಕಥೆಗಳ ಮಹಾಸಾಗರವಾದ ಈ ಕೃತಿಯ ಕರ್ತೃ ಗುಣಾಢ್ಯ. ರಾಮಾಯಣ, ಮಹಾಭಾರತ ಮತ್ತು ಪುರಾಣಗಳಂತೆ ಸಂಸ್ಕೃತಸಾಹಿತ್ಯದ ನಾನಾಪ್ರಕಾರಗಳ ಬೆಳವಣಿಗೆಗೆ ಅಪಾರನೆರವನ್ನು ನೀಡಿರುವ ಈ ಗ್ರಂಥವು ಇಂದು ಉಪಲಬ್ಧವಿಲ್ಲ. ಧರ್ಮ ಮತ್ತು ಮತಾಚಾರಗಳು ಜನಜೀವನವನ್ನು ಆಕ್ರಮಿಸಲು, ಮತಕಥೆಗಳೂ, ಭಕ್ತಿವಿಜಯಗಳೂ ಮೂಡಿ, ಅಂಧಶ್ರದ್ಧೆಯ ಹುಚ್ಚುಹೊಳೆಯಲ್ಲಿ ಪುರಾತನವೂ, ಮಹತ್ವಪೂರ್ಣವೂ, ಲೋಕವಿಶ್ರುತವೂ ಮತ್ತು ಪ್ರಿಯವೂ ಆದ ಬೃಹತ್ಕಥೆಯು ಕೊಚ್ಚಿಹೋಗಿ ನಾಮಾವಶೇಷಗೊಂಡಿತು. ಹೀಗೆಯೇ ನೀತಿ ಮತ್ತು ಮನೋವಿನೋದಗಳನ್ನೊದಗಿಸುತ್ತಿದ್ದ ಹಲವು ಅನರ್ಘ್ಯ ಗ್ರಂಥಗಳು ಮಾಯವಾದವು ; ಸಾಮಾನ್ಯಕೃತಿಗಳೂ ಮತಾಚಾರಗಳ ಅವಲಂಬನದಿಂದ ಪ್ರಕಾಶಗೊಂಡವು. ತೂಕವಾದುದು ಮುಳುಗಿಹೋಗಿ ಹಗುರಾದುದು ತೇಲಿನಿಂತಿತು. ಮಹಾಕವಿಗಳಿಂದ ಪ್ರಶಂಸೆ ಪಡೆದ ಶೂದ್ರಕಕಥಾ, ಸುಮನೋತ್ತರಾ, ವಾಸವದತ್ತಾ, ಭೈಮರಥೀ, ತರಂಗವತೀ, ಭಟ್ಟಾರಹರಿಚಂದ್ರನ ಗದ್ಯಕಥೆ, ಮುಂತಾದವುಗಳನ್ನು ಇಂದು ನಾವು ನೋಡುವಂತಿಲ್ಲ. ಇವುಗಳ ನಾಯಕರು ನಮಗೆ ಸಾಹಿತ್ಯದಲ್ಲಿ ಪುರಾಣ ವ್ಯಕ್ತಿಗಳಂತೆ ಗೋಚರಿಸುತ್ತಾರೆ. ಒಂದಲ್ಲೊಂದು ರೀತಿಯಲ್ಲಿ, ಭಾಸ, ಕಾಳಿದಾಸ, ದಂಡಿ, ಹರ್ಷ, ಸುಬಂಧು, ಬಾಣಭಟ್ಟ ಮುಂತಾದ ಮಹಾಕವಿಗಳೂ ಋಣಿಗಳಾಗಿರುವ ಗುಣಾಢ್ಯನ ಬೃಹತ್ಕಥೆಯು ಲುಪ್ತವಾಗಿಹೋಗಿದೆ. ಗಂಗರಾಜ ದುರ್ವಿನೀತನಿಂದ ರಚಿತವಾದ ಇದರ ಸಂಸ್ಕೃತಾನುವಾದವು ಉಪಲಬ್ಧವಿಲ್ಲ. "ಪೆರುಂಗತೈ" ಎಂಬ ತಮಿಳುಕೃತಿಯಲ್ಲಿ ಇದರ ಕೆಲವು ಭಾಗಗಳು ಮಾತ್ರ ದೊರೆಯುತ್ತವೆ. ಬೃಹತ್ಕಥೆಯ ಆಧಾರದಮೇಲೆ ಕಾಶ್ಮೀರದ ಕ್ಷೇಮೇಂದ್ರನು (ಕ್ರಿ.ಶ. 11 ನೆಯ ಶತಮಾನ) ಬರೆದಿರುವ 'ಬೃಹತ್ಕಥಾಮಂಜರಿ' ಯೆಂಬ ಸಂಗ್ರಹವೂ, ಸೋಮದೇವನು ಬರೆದಿರುವ 'ಕಥಾಸರಿತ್ಸಾಗರ'ವೆಂಬ ಸಂಗ್ರಹವೂ ದೊರೆಯುತ್ತವೆ. ಬುಧಸ್ವಾಮಿಯು ಬರೆದಿರುವ "ಬೃಹತ್ಕಥಾಶ್ಲೋಕಸಂಗ್ರಹ"ವೂ ನೇಪಾಳದಲ್ಲಿ ಅಪೂರ್ಣವಾಗಿ ದೊರೆತಿದೆ. ದಕ್ಷಿಣದ ಕೃತಿಯಾದ ವಾಮನಭಟ್ಟನ ಬೃಹತ್ಕಥಾಮಂಜರಿಯಲ್ಲಿ 24 ನೆಯ ಬೇತಾಳ ಮಾತ್ರ ಕಾಣಿಸಿಕೊಳ್ಳುತ್ತಾನೆ. ಇವುಗಳಲ್ಲೆಷ್ಟು ಮೂಲಕಥೆ ಉಳಿದಿದೆಯೋ ಊಹಿಸುವುದು ಕಷ್ಟ. ಹರಿಷೇಣನು ರಚಿಸಿರುವ ಬೃಹತ್ಕಥಾಕೋಶಕ್ಕೂ, ಬೃಹತ್ಕಥೆಗೂ ಯಾವಸಂಬಂಧವೂ ಇಲ್ಲ. ಹರಿಷೇಣನ ಕೃತಿಯಲ್ಲಿ ಭಗವತೀ ಆರಾಧನೆಗೆ ಸಂಬಂಧಿಸಿದ 157 ಜೈನ ಕಥೆಗಳಿವೆ. ವಾಲ್ಮೀಕಿ ವ್ಯಾಸರೊಡನೆ ಸಮಕಕ್ಷೆಯಲ್ಲಿ ಸಂಭಾವಿತನಾದ ಗುಣಾಢ್ಯನು ಪುರಾಣವ್ಯಕ್ತಿಯಾಗಿ ಪರಿಣಮಿಸಿದ್ದಾನೆ. ಗೋವರ್ಧನನು

ವಾಲ್ಮೀಕಿ, ವ್ಯಾಸ ಮತ್ತು ಗುಣಾಢ್ಯರನ್ನು ವಂದಿಸಿ ಇವರ ರಚನೆಗಳು ಸಾಹಿತ್ಯ ಮಹಾನದಿಯ ಮೂರು ಕವಲುಗಳೆಂದೂ, ವ್ಯಾಸನ ಅವತಾರವೇ ಗುಣಾಢ್ಯನೆಂದೂ ಸಾರಿದ್ದಾನೆ[1]. ಉಜ್ಜಯಿನಿಯ ಪೂರ್ವಿಕರು ಉದಯನನ ಕಥೆಗಳನ್ನು ಬಲ್ಲವರೆಂದು ಕಾಳಿದಾಸನು ಸೂಚಿಸಿದ್ದಾನೆ[2]. ಬಾಣನು ಬೃಹತ್ಕಥೆಯನ್ನು ಹರಲೀಲೆಯೊಡನೆ ಹೋಲಿಸಿದ್ದಾನೆ[3]. ಸುಬಂಧು ಉಪಮೆಯ ಮೂಲಕ ಇದರ ಸೌಂದರ್ಯವನ್ನು ಪ್ರಕಟಿಸಿದ್ದಾನೆ[4]. ದಂಡಿಯು ಇದನ್ನು ಕಥಾಪ್ರಚಾರಕ್ಕೆ ಸೇರಿದುದೆಂದು ಹೇಳಿದ್ದಾನೆ[5]. ದನಂಜಯನು ಇದನ್ನು ಹೆಸರಿಸಿದ್ದಾನೆ. ಧನಿಕನು ಇದನ್ನು ಮುದ್ರಾರಾಕ್ಷಸಕ್ಕೆ ವಸ್ತುವನ್ನೊದಗಿಸಿರುವ ಮೂಲವೆಂದೂ ಹೇಳಿ ಬೃಹತ್ಕಥೆಯ ಪದ್ಯಗಳೆಂದು ಎರಡು ಪದ್ಯಗಳನ್ನು ಉದ್ಧರಿಸಿದ್ದಾನೆ. ನೇಪಾಳ ಮಹಾತ್ಮ್ಯದಲ್ಲಿ ವಾಲ್ಮೀಕಿ, ಗುಣಾಢ್ಯರು ಸಮಾನ ಗೌರವ ಪಡೆದಿದ್ದಾರೆ; ಇವರಿಬ್ಬರೂ ನೇಪಾಳಕ್ಕೆ ಬಂದು ವಾಲ್ಮೀಕೀಶ್ವರ ಮತ್ತು ಭೃಂಗೀಶ್ವರರನ್ನು (ಲಿಂಗಗಳನ್ನು) ಸ್ಥಾಪಿಸಿ, ವಾಲ್ಮೀಕಿಯು ಆಶ್ರಮಕ್ಕೂ, ಗುಣಾಢ್ಯನು ಕೈಲಾಸಕ್ಕೂ ತೆರಳಿದರೆಂದು ಉಲ್ಲೇಖಿಸಲಾಗಿದೆ. ಕೋಲಾರ ಜಿಲ್ಲೆಯ ಗುಮ್ಮಾರೆಡ್ಡಿಪುರದಲ್ಲಿ ದೊರೆತಿರುವ ದುರ್ವಿನೀತರಾಜನ ಆಳ್ವಿಕೆಯ ಕಾಲದ (ಕ್ರಿ.ಶ. 6ನೆಯ ಶತಮಾನದ ಪೂರ್ವಾರ್ಧ) ತಾಮ್ರಶಾಸನದಲ್ಲಿ ಬೃಹತ್ಕಥೆಯ ಸಂಸ್ಕೃತ ಅನುವಾದದ ವಿಚಾರವಿದೆ[6]. ಕಾಂಬೋಡಿಯದಲ್ಲಿರುವ ಕ್ರಿ.ಶ. 9ನೆಯ ಶತಮಾನದ ಒಂದು ಶಾಸನದಲ್ಲಿ ಗುಣಾಢ್ಯನ ಪ್ರಸ್ತಾಪವಿದೆ[7]. ತ್ರಿವಿಕ್ರಮನು ತನ್ನ ಚಂಪುವಿನಲ್ಲಿಯೂ, ಸೋಮದೇವ ಸೂರಿಯು ತನ್ನ ಯಶಸ್ತಿಲಕದಲ್ಲಿಯೂ ಬೃಹತ್ಕಥೆಯನ್ನು ಪ್ರಸ್ತಾಪಿಸಿದ್ದಾರೆ. ಈ ಮೇಲಿನ ಅಂಶಗಳ ಪರಿಶೀಲನೆಯಿಂದ ಬೃಹತ್ಕಥೆಯು ಕ್ರಿ.ಶ. 6ನೆಯ ಶತಮಾನಕ್ಕೂ ಹಿಂದೆ ರಚಿತವಾಗಿದ್ದು, ಕ್ರಿ.ಶ. 12ನೆಯ ಶತಮಾನದ ವೇಳೆಗೆ ಅಗೋಚರವಾಯಿತೆಂದು ತಿಳಿದು ಬರುತ್ತದೆ. ಗುಣಾಢ್ಯನು ಕ್ರಿ.ಶ. 5ನೆಯ ಶತಮಾನಕ್ಕಿಂತ ಈಚಿನವನಲ್ಲವೆಂದು

1. ಶ್ರೀ ರಾಮಾಯಣ ಭಾರತ ಬೃಹತ್ಕಥಾನಾಂ ಕವೀನ್ ನಮಸ್ಕುರ್ಮಃ ।
   ತ್ರಿಸ್ರೋತಾ ಇವ ಸರಸಾ ಸರಸ್ವತೀ ಸ್ಫುರತಿ ಯೈರ್ಭಿನ್ನಾ ॥
   ಅತಿದೀರ್ಘಜೀವಿ ದೋಷಾತ್ ವ್ಯಾಸೇನ ಯಶೋಽಪಹಾರಿತಂ ಹಂತ ।
   ಕೈರ್ನೋಚ್ಯೇತ ಗುಣಾಢ್ಯಃ ಸ ಏವ ಜನ್ಮಾಂತರಾಪನ್ನಃ ॥—ಗೋವರ್ಧನ.
2. ಮೇಘದೂತ
3. ಸಮುದ್ದೀಪಿತಕಂದರ್ಪಾ ಕೃತಗೌರೀಪ್ರಸಾಧನಾ ।
   ಹರಲೀಲೇವ ನೋಕಸ್ಯ ವಿಸ್ಮಯಾಯ ಬೃಹತ್ಕಥಾ ॥—ಹರ್ಷಚರಿತ.
4. ಬೃಹತ್ಕಥಾಲಂಬೈರಿವ ಸಾಲಭಂಜಿಕಾನಿವಹೈಃ ॥—ವಾಸವದತ್ತ.
5. ಕಥಾ ಹಿ ಸರ್ವಭಾಷಾಭಿಃ ಸಂಸ್ಕೃತೇನ ಚ ಬಧ್ಯತೇ ।
   ಭೂತಭಾಷಾಮಯೀಂ ಪ್ರಾಹುರದ್ಭುತಾರ್ಥಾಂ ಬೃಹತ್ಕಥಾಮ್ ॥—ಕಾವ್ಯಾದರ್ಶ 1.38
6. ಶಬ್ದಾವತಾರಕಾರೇಣ ದೇವ ಭಾರತೀ ನಿಬದ್ಧ ಬೃಹತ್ಕಥೇನ ಕಿರಾತಾರ್ಜುನೀಯೇ ।
   ಪಂಚದಶಸರ್ಗಟೀಕಾಕಾರೇಣ ದುರ್ವಿನೀತ ನಾಮಧೇಯೇನ.........................
7. ಪಾರದ ಸ್ಥಿರಕಲ್ಯಾಣೋ ಗುಣಾಢ್ಯಃ ಪ್ರಾಕೃತಪ್ರಿಯಃ ।
   ಅನೀತಿರ್ಯೋ ವಿಶಾಲಾಕ್ಷಶ್ಯಾರೋ ನ್ಯಕ್ಕೃತಭೀಮಕಃ ॥



ಎ.ಬಿ.ಕೀತ್‌ರವರು ಅಭಿಪ್ರಾಯಪಡುತ್ತಾರೆ*. ಬೃಹತ್ಕಥೆಯು ಗುಣಾಢ್ಯ ಮತ್ತು ಶಾತವಾಹನರಿಗೆ (ಶಾಲಿವಾಹನ) ಸಂಬಂಧ ಕಲ್ಪಿಸುವುದರಿಂದ ಗುಣಾಢ್ಯನ ಕಾಲ ಸುಮಾರು ಕ್ರಿ.ಶ. ಒಂದನೆಯ ಶತಮಾನವೆಂದು ಈಚಿನ ವಿದ್ವಾಂಸರ ಅಭಿಪ್ರಾಯ ‡. ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಬೃಹತ್ಕಥೆಯನ್ನು ಪ್ರತಿನಿಧಿಸಿರುವ ಕಾಶ್ಮೀರಕೃತಿಗಳಾದ ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾಸರಿತ್ಸಾಗರಗಳಿಂದ ಇವನ ವಿಷಯದಲ್ಲಿ ಕೆಲವು ಸಂಗತಿಗಳನ್ನು ತಿಳಿಯಬಹುದು. ಗುಣಾಢ್ಯನು ಗೋದಾವರಿಯ ದಡದಲ್ಲಿದ್ದ ಪ್ರತಿಷ್ಠಾನದಲ್ಲಿ ಜನಿಸಿದನೆಂದು ಕ್ಷೇಮೇಂದ್ರನೂ, ಗೋದಾವರಿಯ ದಡದಲ್ಲಿದ್ದ ಪ್ರತಿಷ್ಠಾನದ ರಾಜಧಾನಿಯಾದ ಸುಪ್ರತಿಷ್ಠವು (ಪ್ರತಿಷ್ಠಾನ) ಇವನ ಜನ್ಮಸ್ಥಳವೆಂದು ಸೋಮದೇವನೂ ತಿಳಿಸುತ್ತಾರೆ. ಇವನ ಉಜ್ಜಯಿನಿ ಅಥವಾ ಕೌಶಾಂಬಿಯಲ್ಲಿ ರಾಜಗೌರವ ಪಡೆದು, ಸ್ಫೂರ್ತಿಗೊಂಡು ಗ್ರಂಥವನ್ನು ರಚಿಸಿದನು. ಶಾತವಾಹನನು ಇವನ ಆಶ್ರಯದಾತ. ತಮ್ಮ ವಿರೋಧಿಗಳಾದ ಕ್ಷತ್ರಪರು ಸಂಸ್ಕೃತಕ್ಕೆ ಆಶ್ರಯವನ್ನು ಕೊಟ್ಟಿದ್ದುದರಿಂದ ಶಾತವಾಹನರು ಮೊದಮೊದಲು ಪ್ರಾಕೃತಕ್ಕೆ ಆಶ್ರಯನೀಡಿ ಕಾಲಕ್ರಮದಲ್ಲಿ ಕ್ಷತ್ರಪರನ್ನನುಕರಿಸಿ ಸಂಸ್ಕೃತಕ್ಕೂ ಆಶ್ರಯಕೊಟ್ಟರು. ಕಾಶ್ಮೀರ ಕೃತಿಗಳು ಗುಣಾಢ್ಯನ ಜನನ, ಜೀವನ ಮತ್ತು ಕಾವ್ಯರಚನೆಗಳನ್ನು ಕುರಿತು ಹೀಗೆ ತಿಳಿಸುತ್ತವೆ—

ಒಂದು ದಿನ ಶಿವನು ಪಾರ್ವತಿಯ ಕೋರಿಕೆಯಂತೆ ವಿನೂತನವೂ, ಅದ್ಭುತವೂ ಆದ ಏಳು ಮಂದಿ ವಿದ್ಯಾಧರಚಕ್ರವರ್ತಿಗಳ ಕಥೆಯನ್ನು ಹೇಳಿದನು. ಇದನ್ನು ಕದ್ದು ಕೇಳಿದ ಪುಷ್ಪದಂತನೆಂಬ ಪ್ರಮಥಗಣನು ಅದನ್ನು ತನ್ನ ಪ್ರೇಯಸಿಯೂ, ಪಾರ್ವತಿಯ ಪರಿಚಾರಕಳೂ ಆದ ಜಯಳಿಗೆ ಹೇಳಿದನು. ಅವಳು ಅದನ್ನು ತನ್ನ ಗೆಳತಿಯರಿಗೆಲ್ಲಾ ಹೇಳಿದಳು. ಇದನ್ನು ತಿಳಿದು ಕೋಪಗೊಂಡ ಪಾರ್ವತಿಯು ಮರ್ತ್ಯನಾಗಿ ಹುಟ್ಟೆಂದು ಪುಷ್ಪದಂತನನ್ನು ಶಪಿಸಿದಳು. ಇವನ ನೆರವಿಗೆ ಬಂದ ಮಾಲ್ಯವಂತನೂ ಇದೇ ಶಾಪಕ್ಕೆ ಗುರಿಯಾದನು. ಜಯಳ ದುಃಖವನ್ನು ಕಂಡು ಕನಿಕರಿಸಿದ ಪಾರ್ವತಿಯು, ವಿಂಧ್ಯಾರಣ್ಯದಲ್ಲಿ ಶಾಪದಿಂದ ಪಿಶಾಚನಾಗಿರುವ ಕಾಣಭೂತಿಯನ್ನು ಸಂಧಿಸಿ ಅವನಿಗೆ ಈ ಕಥೆಗಳನ್ನು ಹೇಳಿದ ಮೇಲೆ ಪುಷ್ಪದಂತನೂ, ಕಾಣಭೂತಿಯಿಂದ ಈ ಕಥೆಗಳನ್ನು ಕೇಳಿ ಭೂಮಿಯಲ್ಲಿ ಪ್ರಚಾರಮಾಡಿದ ಮೇಲೆ ಮಾಲ್ಯವಂತನೂ ಶಾಪದಿಂದ ಮುಕ್ತರಾಗಿ ಕೈಲಾಸಕ್ಕೆ ಬರುವರೆಂದು ಶಾಪಪರಿಹಾರವನ್ನು ಕಲ್ಪಿಸಿದಳು. ಪುಷ್ಪದಂತನು ಕೌಶಾಂಬಿಯಲ್ಲಿ ವರರುಚಿಕಾತ್ಯಾಯನನೆಂಬ ಹೆಸರಿನಿಂದ ಹುಟ್ಟಿ, ವ್ಯಾಕರಣಶಾಸ್ತ್ರದಲ್ಲಿ ಪಾರಂಗತನಾಗಿ, ನಂದರ ಕೊನೆಯವನಾದ ಯೋಗಾನಂದನ ಮಂತ್ರಿಯಾದನು. ಕಾಲಕ್ರಮದಲ್ಲಿ ಅವನು ಏಕಾಂತ ಜೀವಿಯಾಗಿ, ವಿಂಧ್ಯವಾಸಿನಿಯ ದೇವಾಲಯಕ್ಕೆ ಯಾತ್ರೆ ಕೈಗೊಂಡು,

* We can fairly claim that Gunadhya is not later than A. D. 500 but to place him in the first century A.D. is quite conjectural. nor in reality is any other date more assured—A History of Sanskrit Literature.

‡ ಶಾತವಾಹನರಲ್ಲಿ ಹಾಲನು (ಶಾತವಾಹನ, ಶಾಲಿವಾಹನ) ಸುಪ್ರಸಿದ್ಧ. ಇವನು ಅರಿಷ್ಟಶಾತಕರ್ಣಿಯ ಮಗನೆಂದು ಪುರಾಣಗಳಿಂದ ತಿಳಿದುಬರುತ್ತದೆ. ಶಾತವಾಹನರು ಆಂಧ್ರದಲ್ಲಿ ಆಳುತ್ತಿದ್ದರು.

ಕಾಣಭೂತಿಯನ್ನು ಸಂಧಿಸಿ ತನ್ನ ಪೂರ್ವಜನ್ಮವನ್ನು ಸ್ಮರಿಸಿಕೊಂಡು, ಅವನಿಗೆ ವಿದ್ಯಾಧರ ಚಕ್ರವರ್ತಿಗಳ ಕಥೆಯನ್ನು ಹೇಳಿ ಶಾಪವಿಮುಕ್ತನಾಗಿ ಕೈಲಾಸ ಸೇರಿದನು. ಮಾಲ್ಯವಂತನೂ ಪ್ರತಿಷ್ಠಾನದಲ್ಲಿ ಗುಣಾಢ್ಯನೆಂಬ ಹೆಸರಿನಿಂದ ಹುಟ್ಟಿ ಸಾತವಾಹನನ ಮಂತ್ರಿಯಾದನು. ಜಲಕ್ರೀಡೆಯ ಸಮಯದಲ್ಲಿ ರಾಣಿಯು ಹೇಳಿದ್ದ 'ನೀರಿನಿಂದ ಹೊಡೆಯಬೇಡ (ಮೋದಕೈಃ—ಮಾ ಉದಕೈಃ), ಎಂಬ ಮಾತನ್ನು 'ಮೋದಕಗಳಿಂದ (ಕಡುಬುಗಳಿಂದ) ಹೊಡಿ ' ಎಂದು ತಪ್ಪರ್ಥಮಾಡಿಕೊಂಡಿದ್ದರಿಂದ ನಾಚಿ ಸಾತವಾಹನನು ಸಂಸ್ಕೃತ ಕಲಿಯಲು ಇಚ್ಛಿಸಿದನು. ಆರು ವರ್ಷಗಳಲ್ಲಿ ಕಲಿಸುವುದಾಗಿ ಗುಣಾಢ್ಯನು ಹೇಳಲು ಕಾತಂತ್ರದ ಕರ್ತೃವಾದ ಶರ್ವವರ್ಮನು ಆರು ತಿಂಗಳಲ್ಲಿ ಕಲಿಸುವುದಾಗಿ ಹೇಳಿದನು. ಹಾಗೆ ಕಲಿಸಿದರೆ ತಾನು ಸಂಸ್ಕೃತ, ಪ್ರಾಕೃತ ಮತ್ತು ದೇಶಭಾಷೆಯನ್ನು ಬಳಸೆನೆಂದು ಗುಣಾಢ್ಯನು ಪ್ರತಿಜ್ಞೆಮಾಡಿದನು ಶರ್ವವರ್ಮನು ಹಾಗೆ ಕಲಿಸುವುದರಲ್ಲಿ ಯಶಸ್ವಿಯಾದುದರಿಂದ ಗುಣಾಢ್ಯನು ವಿಂಧ್ಯಾರಣ್ಯವನ್ನು ಸೇರಿ ಅಲ್ಲಿ ಅಲೆಯುತ್ತಿದ್ದಾಗ ಕಾಣಭೂತಿಯನ್ನು ಸಂಧಿಸಿ ಅವನಿಂದ ವಿದ್ಯಾಧರಚಕ್ರವರ್ತಿಗಳ ಕಥೆಗಳನ್ನು ಕೇಳಿದನು. ತಾನು ಮಾಡಿದ್ದ ಪ್ರತಿಜ್ಞೆಯಂತೆ ಅವನು ಸಂಸ್ಕೃತ ಮತ್ತು ಪ್ರಾಕೃತಗಳನ್ನು ಬಳಸದೆ ಪೈಶಾಚಿಯಲ್ಲಿ ಒಂದೊಂದು ಕಥೆಗೆ ಲಕ್ಷ ಪದ್ಯಗಳಂತೆ ತನ್ನ ರಕ್ತದಿಂದ ಆ ಏಳು ಕಥೆಗಳನ್ನು ಬರೆದನು. ಅವನ ಶಿಷ್ಯರಾದ ಗುಣದೇವ ಮತ್ತು ನಂದೀದೇವರು ಆ ಕಥೆಗಳನ್ನು ಸಾತವಾಹನನಿಗೊಪ್ಪಿಸಲು ತೆಗೆದುಕೊಂಡು ಹೋದರು. ಪಿಶಾಚಿಗಳ ಭಾಷೆಯಲ್ಲಿ ರಕ್ತದಿಂದ ಬರೆದಿದ್ದುದರಿಂದ ಅವನು ಅವುಗಳನ್ನು ತಿರಸ್ಕರಿಸಿದನು. ಬೇಸರಗೊಂಡ ಗುಣಾಢ್ಯನು ಶ್ಲೋಕಗಳನ್ನು ಹಾಡುತ್ತಾ ಕ್ರಮವಾಗಿ ಆ ಕಥೆಗಳನ್ನು ಬೆಂಕಿಗೊಪ್ಪಿಸಿದನು. ಅರಣ್ಯದ ಪಶುಪಕ್ಷಿಗಳು ಅವುಗಳ ಸ್ವಾರಸ್ಯದಿಂದ ಮೈಮರೆತು ಆಹಾರ ನೀರುಗಳನ್ನು ತೊರೆದು ಕೇಳುತ್ತಿದ್ದುವು. ಕಡುಬಡವಾದ ಇವುಗಳ ಬೇಟೆಯಿಂದ ಸಾತವಾಹನನ ಊಟ ರುಚಿಗೆಟ್ಟಿತು. ಅವನು ಕಾರಣವನ್ನು ತಿಳಿಯಲು ಕಾಡಿಗೆ ಬಂದು ಗುಣಾಢ್ಯನನ್ನು ಕಂಡು ಉಳಿದಿದ್ದ ಒಂದು ಕಥೆಯನ್ನು ರಕ್ಷಿಸಿ, ಅದಕ್ಕೆ ಟೀಕೆಯನ್ನು ಬರೆದು ಪ್ರಚಾರಮಾಡಿದನು. ಬೃಹತ್ಕಥೆಯ ಈ ಒಂದು ಭಾಗ ತ್ರಿಲೋಕಗಳಲ್ಲಿಯೂ ಪ್ರಸಿದ್ಧಿಪಡೆಯಿತು.

ಗುಣಾಢ್ಯನ ಮೇಲಿನ ಕಥೆಗೂ ನೇಪಾಳ ಮಾಹಾತ್ಮ್ಯದಲ್ಲಿರುವ ಕಥೆಗೂ ಬಹಳ ವ್ಯತ್ಯಾಸವಿದೆ—

ಒಂದು ದಿನ ಶಿವನು ಪಾರ್ವತಿಯ ಕೋರಿಕೆಯಂತೆ ಯಾರೂ ಕೇಳದ ಕಥೆಯೊಂದನ್ನು ಹೇಳಿದನು. ಬಾಗಿಲುಗಳೆಲ್ಲಾ ಮುಚ್ಚಿದ್ದರೂ ಭೃಂಗಿ ಎಂಬ ಪ್ರಮಥಗಣನು ದುಂಬಿಯ ರೂಪದಲ್ಲಿ ಕಿಂಡಿಯ ಮೂಲಕ ಪ್ರವೇಶಿಸಿ ಕಥೆಯನ್ನು ಕದ್ದು ಕೇಳಿ ತನ್ನ ಹೆಂಡತಿಯಾದ ವಿಜಯೆಗೆ ಹೇಳಿದನು. ಇದನ್ನು ಧ್ಯಾನದೃಷ್ಟಿಯಿಂದ ತಿಳಿದ ಶಿವನು ಭೃಂಗಿಯನ್ನು ಮರ್ತ್ಯನಾಗೆಂದು ಶಪಿಸಿದನು. ಗೋಳಾಡಿ ಕನಿಕರ ಕೋರಿದ ಅವನಿಗೆ ಮಾನವನಾಗಿ ಹುಟ್ಟಿ ಮರ್ತ್ಯನಾಗೆಂದು ಶಪಿಸಿದನು. ಗೋಳಾಡಿ ಕನಿಕರ ಕೋರಿದ ಅವನಿಗೆ ಮಾನವನಾಗಿ ಹುಟ್ಟಿ ಸದ್ಗುಣ, ಪಾಂಡಿತ್ಯ ಪ್ರತಿಭೆಗಳನ್ನು ಗಳಿಸಿಕೊಂಡು ಕದ್ದು ಕೇಳಿದ ಕಥೆಯನ್ನು 9 ಲಕ್ಷಪದ್ಯಗಳಲ್ಲಿ ರಸಸಮನ್ವಿತವಾಗಿ ಬರೆಯಬೇಕೆಂದೂ, ಸುಲಭವಾಗಿ ಮುಟ್ಟಲಾಗದ ಸ್ಥಳದಲ್ಲಿ ಲಿಂಗವೊಂದನ್ನು ಸ್ಥಾಪಿಸಬೇಕೆಂದೂ, ನಂತರ ಮನುಷ್ಯತ್ವದಿಂದ ಬಿಡುಗಡೆಹೊಂದಿ ಕೈಲಾಸಕ್ಕೆ ಬರಬಹುದೆಂದೂ ಶಾಪಪರಿಹಾರವನ್ನು ಕಲ್ಪಿಸಿದನು. ಭೃಂಗಿಯು ಗುಣಾಢ್ಯನೆಂಬ ಹೆಸರಿನಿಂದ ಮಥುರೆಯಲ್ಲಿ ಹುಟ್ಟಿ, ಅನಾಥನಾದುದರಿಂದ ಉಜ್ಜಯಿನಿಗೆ ಹೋದನು. ಆಗ ವಿದುಷಿಯೂ ಗೌಡ ರಾಜಕುಮಾರಿಯೂ ಆದ ಲೀಲಾವತಿಯ ಪತಿಯಾದ ಮದನನು ಅಲ್ಲಿ ರಾಜ್ಯವಾಳುತ್ತಿದ್ದನು. ವಿದ್ವಾಂಸನಾದ ಶರ್ವವರ್ಮನು ಗುಣಾಢ್ಯನ ಪಾಂಡಿತ್ಯ ಪ್ರತಿಭೆಗಳನ್ನು ಪ್ರಶಂಸಿಸಿ ಅವನಿಗೆ ರಾಜಾಸ್ಥಾನದಲ್ಲಿ ಪಂಡಿತ ಪದವಿಯನ್ನು ಕೊಡಿಸಿದನು. ತರುವಾಯ ಹಿಂದಿನ ಕಥೆಯಂತೆ 'ಮೋದಕೈಃ ' ಪ್ರಸಂಗವು ಬರುತ್ತದೆ. ಗುಣಾಢ್ಯನು ಹನ್ನೆರಡು ವರ್ಷಗಳಲ್ಲಿ ವ್ಯಾಕರಣವನ್ನು ಕಲಿಸುವೆನೆಂದು ಹೇಳಿದರೆ, ಶರ್ವವರ್ಮನು ಆರೇ ವರ್ಷಗಳಲ್ಲಿ ಕಲಿಸುವುದಾಗಿ ಹೇಳುತ್ತಾನೆ. ಮೇಲಿನ ಕಥೆಯಂತೆಯೇ ಇಲ್ಲಿಯೂ ಗುಣಾಢ್ಯನು ಪಣ ತೊಡುತ್ತಾನೆ, ಶರ್ವವರ್ಮನು ಸ್ಪರ್ಧೆಯಲ್ಲಿ ಗೆದ್ದನು, ಪ್ರತಿಜ್ಞೆಯಂತೆ ಮೌನತಾಳಿದ್ದ ಗುಣಾಢ್ಯನು ಯತಿಯಾಗಿ ಆಶ್ರಮಕ್ಕೆ ತೆರಳಿದನು. ಒಮ್ಮೆ ಆಶ್ರಮಕ್ಕೆ ಬಂದ ಪುಲಸ್ತ್ಯನು ಪೈಶಾಚಿಯಲ್ಲಿ ಕಥೆಗಳನ್ನು ಬರೆಯುವಂತೆ ಅವನಿಗೆ ಸೂಚಿಸಿದನು. ಅದರಂತೆ ಗುಣಾಢ್ಯನು ಪದ್ಯಗಳನ್ನು ಗಟ್ಟಿಯಾಗಿ ಹಾಡಿಕೊಳ್ಳುತ್ತಾ ಮರದ ಎಲೆಗಳ ಮೇಲೆ ಅವುಗಳನ್ನು ಖನಿಜಸಾರದಿಂದ ಬರೆದನು. ನಂತರ ಹಿಂದಿನ ಕಥೆಯಂತೆಯೇ ದೊರೆಯ ಭೋಜನ ವೃತ್ತಾಂತ ಬರುತ್ತದೆ. ಅರಣ್ಯದ ಪಶುಪಕ್ಷಿಗಳ ಬಡತನಕ್ಕೆ ಕಾರಣವನ್ನು ತಿಳಿಯಲು ಹೋದ ರಾಜನ ಬೇಟೆಗಾರರೂ ಅವುಗಳೊಡನೆ ಕಥೆಕೇಳುತ್ತಾ ನಿಂತರು. ಹಿಂದಿರುಗದ ಅವರ ಗತಿಯನ್ನು ಕಾಣಲುಹೊರಟ ದೊರೆಯು ನಿಜಸಂಗತಿಯನ್ನು ತಿಳಿದು ಆಸ್ಥಾನಕ್ಕೆ ಮತ್ತೆ ಬರುವಂತೆ ಗುಣಾಢ್ಯನನ್ನು ಒತ್ತಾಯಿಸಿದನು. ಆದರೆ ಅವನು ಒಪ್ಪದೆ, ತಾನು ಪೈಶಾಚಿಭಾಷೆಯಲ್ಲಿ ರಚಿಸಿರುವ ರಸಭರಿತವಾದ ಒಂಬತ್ತುಲಕ್ಷ ಪದ್ಯಗಳನ್ನು ಸಂಸ್ಕೃತಕ್ಕೆ ಪರಿವರ್ತಿಸುವಂತೆ ದೊರೆಯನ್ನು ಕೇಳಿಕೊಂಡು ನೇಪಾಳಕ್ಕೆ ಹೋದನು. ಅಲ್ಲಿ ಪಶುಪತೀಶ್ವರನ ದರ್ಶನಪಡೆದು, ಪ್ರದಕ್ಷಿಣೆಮಾಡಿ, ಮುನಿಗಳನ್ನೆಲ್ಲಾ ಬರಮಾಡಿಕೊಂಡು ಭೃಂಗೀಶ್ವರನನ್ನು ಸ್ಥಾಪಿಸಿ, ವಿಮಾನದಮೂಲಕ ಕೈಲಾಸಕ್ಕೆ ತೆರಳಿದನು. ಭೃಂಗಿಯು ಇಂದಿಗೂ ಆಗಾಗ ಭೃಂಗೀಶ್ವರನ ದರ್ಶನಕ್ಕಾಗಿ ದುಂಬಿಯ ರೂಪದಿಂದ ಬರುತ್ತಾನೆಂಬ ಪ್ರವಾದವಿದೆ.

ಬಾಣ ಮೊದಲಾದವರಿಗೆ ಬೃಹತ್ಕಥೆಯು ಒಂದಲ್ಲ ಒಂದು ರೂಪದಲ್ಲಿ ಪರಿಚಯವಿದ್ದಿತು. ಅತಿ ಪ್ರಾಚೀನವಾದ ಈ ಕಥೆಯ ಮೂಲರೂಪವನ್ನು ತಿಳಿಯುವುದು ಕಷ್ಟ. ಗುಣಾಢ್ಯನ ಕಾಲವನ್ನಾಗಲೀ, ದೇಶವನ್ನಾಗಲಿ ನಿರ್ಧರಿಸುವುದೂ ಕಷ್ಟ. ಮೂಲ ಬೃಹತ್ಕಥೆಯು ಶ್ಲೋಕ ರೂಪವಾದುದೋ, ಗದ್ಯರೂಪವಾದುದೋ ಹೇಳಬರುವುದಿಲ್ಲ ಕಾಶ್ಮೀರಿ ಮೂಲಗಳು ಶ್ಲೋಕರೂಪವೆಂದು ತಿಳಿಸಿದರೆ, ದಂಡಿಯು ಕಥಾಪ್ರಕಾರಕ್ಕೆ ಉದಾಹರಿಸುವ ಬೃಹತ್ಕಥೆಯು ಗದ್ಯರೂಪವಾದುದು. ಜಾತಕಮಾಲೆಯಂತೆ ನಡುನಡುವೆ ಪದ್ಯಗಳೂ ಇದ್ದಿರಬಹುದು. ಸೋಮಚಂದ್ರನು ಗುರುತಿಸಿರುವ ಗದ್ಯವು ಬಹಳ ಮಟ್ಟಿಗೆ ಬೃಹತ್ಕಥೆಯಾಗಿದ್ದರೂ ಇರಬಹುದು. ಮಾಳವ್ಯ, ವಿಂಧ್ಯ ಮೊದಲಾದ ಸ್ಥಳಗಳಲ್ಲಿ ಹರಡಿರುವ ಪೈಶಾಚಿಭಾಷೆಗಳಲ್ಲಿ

ವ್ಯತ್ಯಾಸವಿರುವುದರಿಂದ ಗುಣಾಢ್ಯನು ಬಳಸಿರುವ **ಪೈಶಾಚಿಭಾಷೆಯ** ಸ್ವರೂಪದ ವಿಷಯದಲ್ಲಿಯೂ ಸಾಕಷ್ಟು ವಿವಾದವಿದೆ. ಪೈಶಾಚಿಯು ಪಿಶಾಚಿಗಳ ಭಾಷೆಯಲ್ಲ ; ನಾಗರೀಕತೆಯನ್ನು ಕಾಣದ ಗುಡ್ಡಗಾಡು ಜನರ ಬಳಕೆಯ ಭಾಷೆ.

ಬೃಹತ್ಕಥೆಯ ವಸ್ತುವಿವರವನ್ನಾಗಲೀ, ಕವಿಯು ಸಹಾಯ ಪಡೆದಿರಬಹುದಾದ ಮೂಲಕಥೆಗಳನ್ನಾಗಲೀ ಊಹಿಸುವುದು ಕಷ್ಟ. ರಾಮಾಯಣದಲ್ಲಿ ಬಂದಿರುವ, ವಿವಾಹದ ತರುಣದಲ್ಲಿ ಅಪಹೃತಳಾದ ಪ್ರೇಯಸಿಯ ಅನ್ವೇಷಣೆ; ಉಜ್ಜಯಿನಿ ಮತ್ತು ಕೌಶಾಂಬಿಯಲ್ಲಿ ಪ್ರಚಾರದಲ್ಲಿದ್ದ ಪ್ರದ್ಯೋತ ಮತ್ತು ಉದಯನನ ಜಾನಪದಕಥೆಗಳು ಮತ್ತು ಬೌದ್ಧಕಥೆಗಳು ; ವರ್ತಕರ ಮೂಲಕ ಪ್ರಚಾರದಲ್ಲಿದ್ದ ಸಮುದ್ರಪ್ರಯಾಣ ಮತ್ತು ದ್ವೀಪಾಂತರ ಗಮನಗಳ ಸಾಹಸಕಥೆಗಳು ; ಭಾರತದಲ್ಲಿ ತುಂಬಿದ್ದ ಯಕ್ಷಿಣಿಯರಕಥೆಗಳು ಮತ್ತು ಮಾಟ–ಮಂತ್ರಕಥೆಗಳು—ಇವುಗಳಿಂದ ಲಾಭಪಡೆದು ಗುಣಾಢ್ಯನು ಬೃಹತ್ಕಥೆಯನ್ನು ರಚಿಸಿರಬಹುದು. ಬೌದ್ಧರ ಕಥೆಗಳಿಂದ ' ಚಕ್ರವರ್ತಿಯ ' ಕಲ್ಪನೆ ಬಂದಿರಬಹುದು. ಸಾಮ್ರಾಜ್ಯವು ಭೂಲೋಕದ್ದಲ್ಲ ; ವಿದ್ಯಾಧರಲೋಕದ್ದು. ಬೃಹತ್ಕಥೆಯನಾಯಕನಾದ ನರವಾಹನದತ್ತನು ಸಂನ್ಯಾಸ ಸ್ವೀಕರಿಸಿದರೆ ಮಹಾಬುದ್ಧನಾಗ ವುದನ್ನೂ, ವ್ಯವಹಾರಲೋಕದಲ್ಲುಳಿದರೆ ಸಾಮ್ರಾಟನಾಗುವುದನ್ನೂ ಸೂಚಿಸುವ ಮೂವತ್ತೆರಡು ಮಂಗಳ ಲಕ್ಷಣಗಳಿಂದ ಕೂಡಿದ್ದನು. ಇವನು ತನ್ನ ಸಾಹಸಪ್ರೇಮಾದಿಗುಣಗಳಿಂದ ತಂದೆಯಾದ ಉದಯನನ ಪ್ರತಿಕೃತಿಯಂತಿದ್ದನು. ಮಾನಸವೇಗನು ಅಪಹರಿಸಿದ್ದ ತನ್ನ ಪತ್ನಿಯಾದ ಮದನಮಂಜೂಷಿಕೆಯನ್ನೂ, ವಿದ್ಯಾಧರರ ಸಾಮ್ರಾಜ್ಯವನ್ನೂ ಆಪ್ತಸಚಿವನಾದ ಗೋಮುಖನ ಸಹಾಯದಿಂದ ವಶಪಡಿಸಿಕೊಂಡನು. ಇವನ ಸಾಹಸಮತ್ತು ಪ್ರೇಮಕಥೆಗೆ ಪೋಷಕವಾಗಿ ಹಲವು ಕಥೆಗಳು ಬಂದಿವೆ. ಇದೊಂದು ಕಥಾಸಾಗರ. ಅದ್ಭುತ ಕಥೆ, ಮಾಯಾಲೋಕದಕಥೆ, ಕಟ್ಟುಕಥೆ, ಪಶುಪಕ್ಷಿಗಳಕಥೆ, ಧೂರ್ತವಂಚಕರ ಕಥೆ, ಸೂಳೆಸನ್ಯಾಸಿಗಳ ಕಥೆ, ಯಕ್ಷರಾಕ್ಷಸರ ಕಥೆ, ರಾಜರಾಣಿಯರಕಥೆ, ನೀತಿಕಥೆ, ಧರ್ಮಕಥೆ, ಕಾಮಕಥೆ, ಇತ್ಯಾದಿ ಕಥಾಸಾಹಿತ್ಯದ ಸಕಲ ಪ್ರಕಾರಗಳೂ ಬೃಹತ್ಕಥೆಯಲ್ಲಿವೆ. ದೇವತೆಗಳ ಅಮಾನುಷಸಾಧನೆಯಂತೆ ಸಾಮಾನ್ಯಜನರ ಎಟುಕಗಳಿಗೂ ಇಲ್ಲಿ ಅವಕಾಶವಿದೆ. ಮಾಯೆಯ ಕುದರೆ. ಮಾತಾಡುವ ಗಿಳಿ. ಆಕಾಶವಾಣಿ, ವಿದ್ಯಾಧರಿಯರಪ್ರೇಮ, ಆಕಾಶಗಮನ ಮುಂತಾದ ಅಲೌಕಿಕಾದ್ಭುತವೃತ್ತಾಂತಗಳಂತೆ ವಿಟರು, ವಿದೂಷಕರು, ಕಳ್ಳರು, ಜೂಜುಗಾರರು, ತುಂಟರು, ಪುಂಡರು ಮೊದಲಾದವರ ಲೌಕಿಕವೃತಾಂತಗಳೂ ಇವೆ. ಕಥನ ಕಲೆಯ ಸಕಲ ಚಾತುರ್ಯವನ್ನೂ ನಾವಿಲ್ಲಿ ಕಾಣುತ್ತೇವೆ. ಅನೇಕರು ಈ ಮೇರುಕೃತಿಯಿಂದ ಸ್ಫೂರ್ತಿ ಪಡೆದು ಕಾವ್ಯಗಳನ್ನು ರಚಿಸಿದ್ದಾರೆ.

ಭಾಸನ ನಾಟಕಗಳ ಧೀರನೂ, ಸಾಹಸಿಯೂ, ಚತುರನೂ ಮತ್ತು ಸ್ವಾಮಿನಿಷ್ಠನೂ ಆದ ಯೌಗಂಧರಾಯಣನೆಂಬ ಮಂತ್ರಿಯ ಪ್ರತಿಬಿಂಬವನ್ನು ಗೋಮುಖನಲ್ಲಿ ಕಾಣುತ್ತೇವೆ. ಭಾಸನ ಸ್ವಪ್ನವಾಸವದತ್ತ ಯೌಗಂಧರಾಯಣಗಳಲ್ಲಿ ಬಂದಿರುವ ವಾಸವದತ್ತೆಯು ಪೂರ್ಣವಾಗಿ ಮದನಮಂಜೂಷಿಕೆಯನ್ನು ಹೋಲುತ್ತಾಳೆ. ಇದರಿಂದ ಭಾಸನು ಗುಣಾಢ್ಯನಿಂದ ಪ್ರಭಾವಿತನಾಗಿರಬಹುದೆನಿಸುತ್ತದೆ. ಆಗಲಿಕೆಯನಂತರ ಒಟ್ಟುಗೂಡಿದ ನರವಾಹನದತ್ತ ಮತ್ತು ಅವನ



ಮಿತ್ರರು ಪರಸ್ಪರ ಸಾಹಸಗಳನ್ನು ಹೇಳಿಕೊಳ್ಳುವಂತೆ ದಂಡಿಯ ದಶಕುಮಾರಚರಿತದಲ್ಲಿಯೂ ರಾಜವಾಹನ ಮತ್ತು ಅವನ ಮಿತ್ರರು ಅಗಲಿ, ನಂತರ ಒಟ್ಟುಗೂಡಿ ಅನ್ಯೋನ್ಯ ಸಾಹಸಗಳನ್ನು ಹೇಳಿಕೊಳ್ಳುತ್ತಾರೆ. ಬೃಹತ್ಕಥೆಯಂತೆ ದಶಕುಮಾರಚರಿತದಲ್ಲಿಯೂ ವಿಟರು, ವೇಶ್ಯೆಯರು, ಸಂನ್ಯಾಸಿಗಳು, ರಾಜರು, ಚೋರರು, ಜೂಜುಗಾರರು, ಮಂತ್ರ[illegible] ಕಥೆ[illegible] ಪ್ರೇಮದ ದಂಡಿಯು ಗುಣಾಢ್ಯನಿಂದ ಉಪಕೃತನಾಗಿದ್ದಾನೆಂದು ಊಹಿಸಬಹುದಾಗಿದೆ. ಸೋಮದೇವಸೂರಿಯ ಯಶಸ್ತಿಲಕದಲ್ಲಿಯೂ, ಧನಪಾಲನ ತಿಲಕಮಂಜರಿಯಲ್ಲಿಯೂ ಗುಣಾಢ್ಯನ ಕಾವ್ಯರಚನಾಕಲೆಯ ಪ್ರಭಾವವನ್ನು ನೋಡಬಹುದು.



### ಬೃಹತ್ಕಥಾಶ್ಲೋಕಸಂಗ್ರಹ :—

ಬುಧಸ್ವಾಮಿಯಿಂದ ರಚಿತವಾದ ಈ ಕೃತಿಯು ನೇಪಾಳದಲ್ಲಿ ದೊರಕಿದೆ, ಕೃತಿಯು ದೊರೆತಿರುವ ನೆಲೆಯಿಂದ ಇವನು ನೇಪಾಳದವನೆಂದು ಹೇಳುವುದನ್ನು ಬಿಟ್ಟರೆ ಕವಿಯ ಬಗ್ಗೆ ಯಾವ ವಿಚಾರವೂ ತಿಳಿಯದು. ದೊರೆತಿರುವ ಹಸ್ತಪ್ರತಿಗಳ ಆಧಾರದಿಂದ ಕವಿಯ ಕಾಲ ಸುಮಾರು ಕ್ರಿ. ಶ. 8 ಅಥವಾ 9ನೆಯ ಶತಮಾನವೆಂದು ಭಾವಿಸಲಾಗಿದೆ. ಎಫ್. ಲಕೋಟೆಯವರು ಸುಮಾರು ಕ್ರಿ. ಶ. 5 ಅಥವಾ 6ನೆಯ ಶತಮಾನದಲ್ಲಿ ಕವಿಯು ಜೀವಿಸಿದ್ದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಅಪೂರ್ಣವಾಗಿ ದೊರಕಿರುವ ಈ ಪದ್ಯಗ್ರಂಥದ 28 ಸರ್ಗಗಳಲ್ಲಿ 4539 ಶ್ಲೋಕಗಳಿವೆ. ಕವಿಯೇ ಕೃತಿಯನ್ನು ಅಸಮಗ್ರವಾಗಿ ನಿಲ್ಲಿಸಿರಬೇಕು ಅಥವಾ ಉಳಿದ ಸರ್ಗಗಳು ನಶಿಸಿಹೋಗಿರಬೇಕು. ಲಕೋಟೆಯವರು ಕಥೆಯ ಬೆಳವಣಿಗೆಯ ಪರಿಶೀಲನೆಯಿಂದ ಬೃಹತ್ಕಥಾಶ್ಲೋಕಸಂಗ್ರಹದಲ್ಲಿ ಕಡೆಯಪಕ್ಷ 100 ಸರ್ಗಗಳಿಂದ ಕೂಡಿದ 25000 ಶ್ಲೋಕಗಳಿರಬೇಕೆಂದು ಊಹಿಸುತ್ತಾರೆ*. ಈ ಕೃತಿಯನ್ನು ಬೃಹತ್ಕಥೆಯ ವಿಶ್ವಸನೀಯ ಪ್ರಥಮಾನುವಾದವೆಂದು ತಿಳಿಯಲಾಗಿದೆ. ಕ್ಷೇಮೇಂದ್ರನ ಬೃಹತ್ಕಥಾಮಂಜರಿ ಮತ್ತು ಸೋಮದೇವನ ಕಥಾಸರಿತ್ಸಾಗರಗಳಲ್ಲಿ ವೇತಾಳಪಂಚವಿಂಶತಿ, ಪಂಚತಂತ್ರ ಮುಂತಾದ ಮೂಲಕ್ಕೆ ನೇರಸಂಬಂಧವಿಲ್ಲದ ಕಥೆಗಳೂ ಸೇರಿಕೊಂಡಿವೆ ; ಇವುಗಳಲ್ಲಿ ಮದನ ಮಂಜೂಷೆ ಮತ್ತು ನರವಾಹನದತ್ತರ ಪ್ರಣಯಸಂಬಂಧವು ಶ್ಲೋಕಸಂಗ್ರಹದಷ್ಟು ಉತ್ತಮವಾಗಿ ಚಿತ್ರಿತವಾಗಿಲ್ಲ. ಸಾಮಾನ್ಯವರ್ಗಕ್ಕೆ ಸೇರಿದ ಪ್ರಿಯದರ್ಶನೆಯನ್ನು ಕಡೆಗಣಿಸಿ ರಾಜಕುಮಾರಿಯಾದ ಅಜಿನಾವತಿಗೆ ಅನಗತ ಗಮನಕೊಡಲಾಗಿದೆ. ಬುಧಸ್ವಾಮಿಯ ದೃಷ್ಟಿಯು ನರವಾಹನದತ್ತನ ಪ್ರಣಯ ಸಾಹಸಗಳ ಚಿತ್ರಣದಕಡೆಗೆ ಕೇಂದ್ರಿಕೃತವಾಗಿದೆ.

ಈ ಕಾವ್ಯವು ಉಜ್ಜಯಿನಿಯ ಪ್ರಶಂಸೆ ಮತ್ತು ಮಹಾಸೇನನ (ಪ್ರದ್ಯೋತ) ಮರಣ ವೃತ್ತಾಂತದಿಂದ ಪ್ರಾರಂಭವಾಗಿದೆ. ಗದ್ದುಗೆ ಹತ್ತಿದ ಮಹಾಸೇನನ ಮಗನಾದ ಗೋಪಾಲನು ಪಿತೃಘಾತಕನೆಂಬ ಆರೋಪಕ್ಕೆ ಗುರಿಯಾಗಿ ಸಹೋದರನಾದ ಪಾಲಕನಿಗೆ ಸಿಂಹಾಸನವನ್ನು ಒಪ್ಪಿಸುತ್ತಾನೆ ಭೀತನಾದ ಪಾಲಕನು ಸಿಂಹಾಸನ ತ್ಯಜಿಸಲು ಗೋಪಾಲನ ಮಗನಾದ

* I do not think it would be an exaggeration to estimate the whole length of the poem of 25000 verses at least, divided into more than 100 Sargas.

ಅವಂತಿವರ್ಧನನು ದೊರೆಯಾಗುತ್ತಾನೆ. ಅವಂತಿವರ್ಧನ ಮತ್ತು ಸುರತಮಂಜರಿಯ ಪ್ರಣಯ ಕಥೆಯು ಪ್ರಾರಂಭವಾಗುತ್ತದೆ. ಚಕ್ರವರ್ತಿಯಾದ ನರವಾಹನದತ್ತನು ಇವರ ವಿವಾಹಪರವಾಗಿ ನಿರ್ಣಯಕೊಟ್ಟ ತನ್ನ ಇಪ್ಪತ್ತಾರು ಮಂದಿ ಪ್ರೇಯಸಿಯರ ಪ್ರಣಯ ವೃತ್ತಾಂತವನ್ನು ಹೇಳುತ್ತಾನೆ. ಐವರು ಪ್ರೇಯಸಿಯರ ಪೂರ್ಣಕಥೆಗಳಿದ್ದು ಆರನೆಯ ಪ್ರೇಯಸಿಯ ಕಥೆಯು ಅರ್ಧಾಂತವಾಗಿ ನಿಂತುಹೋಗಿದೆ. ಈ ಕೃತಿಯು ಅನುವಾದವಾದರೂ ಕವಿಯ ಪ್ರತಿಭೆಗೆ ಯಾವ ಚ್ಯುತಿಯೂ ಬಂದಿಲ್ಲ. ಕವಿಗೆ ಸಾಕಷ್ಟು ಶಬ್ದಸಂಪತ್ತಿದ್ದು ಕಾವ್ಯವು ಉತ್ತಮ ಕಥನಕಲೆ ಮತ್ತು ವರ್ಣನೆಗಳಿಂದ ರಂಜಕವಾಗಿದೆ. ಇವನ ಶೈಲಿಯು ಸರಳವೂ, ಸ್ಪಷ್ಟಾರ್ಥಕವೂ, ಪ್ರಭಾವಯುತವೂ ಆಗಿದೆ.

ಇವನು ಸೋಮದೇವ ಕ್ಷೇಮೇಂದ್ರರಂತೆ ಪೈಶಾಚಿಯ ಬೃಹತ್ಕಥೆಯನ್ನು ಸಂಸ್ಕೃತಕ್ಕೆ ಪರಿವರ್ತಿಸುತ್ತೇನೆಂದು ಹೇಳಿಕೊಂಡಿಲ್ಲ. ಮಂಗಳವೂ ಇಲ್ಲದೆ ಕಾವ್ಯವು ಪ್ರಾರಂಭವಾಗಿದೆ. ವೇಗವಂತನು ಮಾನಸವೇಗನ ರಾಜ್ಯವನ್ನು ವರ್ಣಿಸಬೇಕೆಂದು ಕೇಳಿದಾಗ ಅದು ಗುಣಾಢ್ಯನಿಗೂ ಅಸಾಧ್ಯವೆಂದು ಕವಿಯು ಪಾತ್ರಗಳ ಮೂಲಕ ಇಡೀ ಕಾವ್ಯದಲ್ಲಿ ಒಂದು ಕಡೆ ಮಾತ್ರ ಗುಣಾಢ್ಯನ ಹೆಸರನ್ನು ಹೇಳಿದ್ದಾನೆ; ಮತ್ತೆಲ್ಲಿಯೂ ಗುಣಾಢ್ಯನ ಹೆಸರು ಬಂದಿಲ್ಲ :—

ತಾಭ್ಯಾಮುಕ್ತಮಶಕ್ಯಂ ತತ್ ಗುಣಾಢ್ಯೇನಾಪಿ ಶಂಸಿತುಂ ।
ತಮುಪೇಕ್ಷ್ಯ ತು ರಾಜಾನಃ ಶೇಷಾಶ್ಚಕ್ರುತ್ರವಿಡಂಬಕಾಃ ॥

ಎಲ್ಲಾ ಪದ್ಯಗಳು ಒಂದೇ ಛಂದಸ್ಸಿನಲ್ಲಿದ್ದು ಮಹಾಕಾವ್ಯಸಂಪ್ರದಾಯದಂತೆ ಪ್ರತಿಸರ್ಗದ ಕೊನೆಯಲ್ಲಿ ಭಿನ್ನವೃತ್ತವಿದೆ. ಇದು ಈ ಕೃತಿಯ ಪ್ರಥಮ ಪದ್ಯ :—

ಮಹಾಖಾತಾ ಮಹಾಶಾಲಾ ಪುರ್ಯಸ್ತ್ಯುಜ್ಜಯನೀತಿ ಯಾ ।
ಮಹಾಂಬೋಧಿಮಹಾಶೈಲಮೇಖಲೇವ ಮಹಾಮಹೀ ॥

ಮಹಾಭಾರತ, ರಾಮಾಯಣ, ಮೇಘಸಂದೇಶ, ಕುಮಾರಸಂಭವ, ರಘುವಂಶ, ಮಾಳವಿಕಾಗ್ನಿಮಿತ್ರ, ಶಾಕುಂತಲ, ಮೃಚ್ಛಕಟಿಕ, ಮುದ್ರಾರಾಕ್ಷಸ ಮುಂತಾದ ಕೃತಿಗಳ ಛಾಯೆಯನ್ನು ಬೃಹತ್ಕಥಾಶ್ಲೋಕಸಂಗ್ರಹದಲ್ಲಿ ಕಾಣಬಹುದು. ಆದರೆ ಬುಧಸ್ವಾಮಿಗೂ, ಕಾಳಿದಾಸಾದಿ ಮಹಾಕವಿಗಳಿಗೂ ಇರುವ ಕಪಿ ಕಾವ್ಯಬಂಧ ತ್ವವನ್ನಾಗಲಿ, ಪೌರ್ವಾಪರ್ಯವನ್ನಾಗಲಿ, ಹೇಳುವುದಕ್ಕಾಗುವುದಿಲ್ಲ.

ಸಮಾನಭಾವಕ್ಕೆ ಒಂದು ಉದಾಹರಣೆ :—

**ರಘುವಂಶ :**

ನವೇ ತಸ್ಮಿನ್ ಮಹೀಪಾಲೇ ಸರ್ವಂ ನವಮಿವಾಭವತ್ ॥

**ಬೃಹತ್ಕಥಾಶ್ಲೋಕಸಂಗ್ರಹ :—**

ಮಂತ್ರಿಪುತ್ರೌ ತು ಮಂತ್ರಿತ್ವಮಥ ಭೂಮಿರ್ನವೇಶ್ವರಾ ।
ನವಮಂತ್ರಿಕೃತಾ ರಕ್ಷಾ ಜಾಯತೇ ಸ್ಮ ಪುನರ್ನವಾ ॥



ಕಾವ್ಯದಲ್ಲಿ ಅಲ್ಲಲ್ಲೇ ಮಧುರವಾದ ತಿಳಿಯಾದ ಹಾಸ್ಯವಿದೆ. ಹೆಣ್ಣುಗಂಡುಗಳ ಸಂಬಂಧದ ಕಥೆಗಳಾದರೂ ಗೌರವಗಾಂಭೀರ್ಯಗಳಿಗೆ ಚ್ಯುತಿಯಿಲ್ಲ. ಅಶ್ಲೀಲಪ್ರವೇಶವಿಲ್ಲ. ಈ ಕೃತಿಯಲ್ಲಿ ವೈದರ್ಭೀಗುಣಗಳಿಗೆ ಬೇಕಾದಷ್ಟು ಉದಾಹರಣೆಗಳು ದೊರೆಯುತ್ತವೆ. ಹಿತಮಿತವರ್ಣನೆ, ಅಕ್ಲಿಷ್ಟ ಅಲಂಕಾರ, ಸ್ವಾರಸ್ಯಕತೆಗಳಿಂದ ಈ ಕಾವ್ಯವು ಮನೋರಂಜಕವಾಗಿದೆ

ಕಾವ್ಯಶೈಲಿಯ ಪರಿಚಯಕ್ಕಾಗಿ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ.

ತಮಾಲಾಲಂಬಿದೋಲಾಂತರ್ವಿಲಸಂತೀಂ ಕುಮಾರಿಕಾಂ ।
ಕಾಲಿಂದೀಹ್ರದಸಂಕ್ರಾಂತಾಂ ಲೋಲಾಮಿಂದುಕಲಾಮಿವ ॥
ಆಚಿರಸ್ಥಾಪಿತಸ್ಫೀತಭಂಗುರಸ್ನಿಗ್ಧಮೂರ್ಧಜಾ ।
ನಿಲೀನಕೋಕಿಲಕುಲಾ ತನ್ವೀ ಚೂತಲತೇವ ಸಾ ॥
ತತ್ರಾಪಶ್ಯಂ ಪುರದ್ವಾರಾನ್ನಿರ್ಯಾಂತೀಂ ಜನತಾಮಹಂ ।
ಚಿತ್ರಾಲಂಕಾರಸಂಸ್ಕಾರಾಂ ವಾಚಂ ಕವಿಮುಖಾದಿವ ॥

**ಬೃಹತ್ಕಥಾಮಂಜರಿ :—**

ಕಾಶ್ಮೀರದ ದೊರೆಯಾದ ಅನಂತನ (ಕ್ರಿ. ಶ. 1029–1064) ಆಸ್ಥಾನ ಕವಿಯಾದ ಕ್ಷೇಮೇಂದ್ರನು ಕಾವ್ಯ ಸಂಗ್ರಹಕಾರ್ಯವನ್ನು ಪ್ರಾರಂಭಿಸಿ ಭಾರತಮಂಜರಿ ಮತ್ತು ರಾಮಾಯಣ ಮಂಜರಿಗಳನ್ನು ಬರೆದಂತೆ ಗುಣಾಢ್ಯನ ಬೃಹತ್ಕಥೆಯ ಸಂಗ್ರಹವಾದ ಬೃಹತ್ಕಥಾಮಂಜರಿಯನ್ನೂ ಬರೆದನು. ಮೊದಲಿನ ಎರಡು ಮಂಜರಿಗಳಲ್ಲಿ ಮೂಲಕಥೆಗಳು ವಿರೂಪಗೊಳ್ಳದಿರುವುದರಿಂದ ಬೃಹತ್ಕಥಾಮಂಜರಿಯಲ್ಲಿಯೂ ಮೂಲಕಥೆಯು ಹೆಚ್ಚು ವ್ಯತ್ಯಾಸಗೊಂಡಿಲ್ಲವೆಂದು ಭಾವಿಸಬಹುದು. ಇದರಲ್ಲಿ 18 ಲಂಬಕಗಳಿದ್ದು ಅವು ಗುಚ್ಛಗಳೆಂಬ ಉಪವಿಭಾಗಗಳನ್ನು ಹೊಂದಿವೆ. ಬೃಹತ್ಕಥೆಗೆ ಪೀಠಿಕೆಯನ್ನು ಹಾಕುವ, ಗುಣಾಢ್ಯನ ಕಥೆಯನ್ನು ತಿಳಿಸುವ ಕಥಾಪೀಠವು ಪ್ರಾರಂಭದಲ್ಲಿದೆ. ಎರಡನೆಯ ಲಂಬಕವು ಉದಯನನ ಸಾಹಸಗಳಿಂದ ಪ್ರಾರಂಭವಾಗಿ ಲಾವಣಕದಲ್ಲಿ ವಾಸವದತ್ತೆಯ ಮರಣವೃತ್ತಾಂತ, ಪದ್ಮಾವತಿಯ ವಿವಾಹ, ವಿದ್ಯಾಧರರ ಚಕ್ರವರ್ತಿಯಾಗುವ ನರವಾಹನದತ್ತನ ಜನನ, ಕಲಿಂಗಸೇನೆಯ ವೃತ್ತಾಂತ, ಯೌಗಂಧರಾಯಣನ ಸಾಚಿವ್ಯ, ನರವಾಹನದತ್ತನ ಪ್ರಣಯ, ಸಾಹಸಗಳು ಮುಂತಾದ ಘಟನೆಗಳು ಅನುಕ್ರಮವಾಗಿ ಬಂದಿವೆ. ಕಥೆಗಳು ತಬ್ಬಿಬ್ಬಾಗಿ ಬೆಳೆದು ಘಟನೆಗಳ ಜೋಡಣೆಯಲ್ಲಿ ಯುಕ್ತಹೊಂದಾಣಿಕೆಯಿಲ್ಲ. ಮೂಲದಲ್ಲಿಲ್ಲದ ಅನ್ಯಕಥೆಗಳ ಪ್ರವೇಶವೂ ಇರಬಹುದು. ಈ ಕೃತಿಯಲ್ಲಿ ಸುಮಾರು 7500 ಪದ್ಯಗಳಿವೆ. ಸಂಗ್ರಹವು ತೀರ ಸಂಕೋಚವಾಗಿರುವುದರಿಂದ ಕೆಲವುಕಡೆ ಅರ್ಥಕ್ಕೂ, ರಸಕ್ಕೂ ಅಡ್ಡಿಯಾಗುವಂತಿದೆ. ಬೃಹತ್ಕಥಾಮಂಜರಿ ಮತ್ತು ಕಥಾಸರಿತ್ಸಾಗರಗಳಿಗೆ ಸಮಾನ ಲಂಬಕಗಳಿದ್ದರೂ 6 ರಿಂದ ಮುಂದಕ್ಕೆ ಅವುಗಳನ್ನು ಜೋಡಿಸಿರುವ ಕ್ರಮದಲ್ಲಿ ವ್ಯತ್ಯಾಸವಿದೆ. ಕವಿಯು ತಾನು ಕಾವ್ಯರಚಿಸಿರುವ ರೀತಿಯನ್ನು ಹೀಗೆ ಹೇಳಿಕೊಂಡಿದ್ದಾನೆ—

ಯಥಾಮೂಲಂ ತಥೈವೈತನ್ನ ಮನಾಗಪ್ಯತಿಕ್ರಮಃ ।
ಗ್ರಂಥವಿಸ್ತರಸಂಕ್ಷೇಪಮಾತ್ರಂ ಭಾಷಾ ಚ ಭಿದ್ಯತೇ ॥
ಔಚಿತ್ಯಾನ್ವಯರಕ್ಷಾ ಚ ಯಥಾಶಕ್ತಿ ವಿಧೀಯತೇ ।
ಕಥಾರಸಾವಿಘಾತೇನ ಕಾವ್ಯಾಂಶಸ್ಯ ಚ ಯೋಜನಾ ॥

ಕ್ಷೇಮೇಂದ್ರ, ಸೋಮದೇವ, ಇವರಿಬ್ಬರ ಕಾವ್ಯಗಳ ಕಥಾಮುಖಗಳೂ ಈ ವೃತ್ತಾಂತದ ಸಂಗ್ರಹದಿಂದ ಆರಂಭವಾಗಿವೆ—

ಬೃಹತ್ಕಥಾಮಂಜರಿ :–

ಗುಣಾಢ್ಯೇನೇತಿ ಲಿಖಿತಾಂ ಶಾತವಾಹನಭೂಪತಿಃ ।
ಬೃಹತ್ಕಥಾಮಕಥಯಂತ್ ವಿದುಷಾಂ ಸುಹೃದಾಂ ಪುರಃ ॥
ಮಹೇಶ್ವರಾತ್ ಪುಷ್ಪದಂತಃ ಕಾಣಭೂತಿರಿಮಾಂ ತತಃ ।
ತಸ್ಮಾದ್ಗುಣಾಢ್ಯಸ್ತಸ್ಮಾಚ್ಚ ಶ್ರುತವಾನ್ ಶಾತವಾಹನಃ ॥

ಕಥಾಸರಿತ್ಸಾಗರ :––

ಕೈಲಾಸೇ ಧೂರ್ಜಟೇರ್ವಕ್ತ್ರಾತ್ ಪುಷ್ಪದಂತಂ ಗಣೋತ್ತಮಂ ।
ತಸ್ಮಾತ್ ವರರುಚೀಭೂತಾತ್ ಕಾಣಭೂತಿಂ ಚ ಭೂತಲೇ ॥
ಕಾಣಭೂತೇರ್ಗುಣಾಢ್ಯಂ ಚ ಗುಣಾಢ್ಯಾತ್ ಸಾತವಾಹನಮ್ ।
ಯಂತ್ಪ್ರಾಪ್ತಂ ಶೃಣುತೇದಂ ತದ್ವಿದ್ಯಾಧರಕಥಾದ್ಭುತಮ್ ॥

## ಕಥಾಸರಿತ್ಸಾಗರ

ಇದರ ಕವಿಯಾದ ಸೋಮದೇವನು ಕಾಶ್ಮೀರದ ದೊರೆಯಾದ ಅನಂತನ (ಕ್ರಿ. ಶ. 1029 1064) ಆಸ್ಥಾನದ ಕವಿಯಾಗಿದ್ದನು. ಇವನ ತಂದೆ ರಾಮದೇವ. ಸೋಮದೇವನು ರಾಜನ ಹೆಂಡತಿಯಾದ ಸೂರ್ಯಮತಿಯ ಚಿತ್ತವಿನೋದಕ್ಕಾಗಿ ಇದನ್ನು ರಚಿಸಿದಂತೆ ಗ್ರಂಥದ ಕೊನೆಯಲ್ಲಿರುವ ಪ್ರಶಸ್ತಿಯಿಂದ ತಿಳಿದುಬರುತ್ತದೆ. ಕಥಾಸರಿತ್ಸಾಗರವೆಂದರೆ ಕಥೆಗಳೆಂಬ ನದಿಗಳು ಬಂದು ಸೇರುವುದರಿಂದಾಗಿರುವ ಸಾಗರವೆಂದರ್ಥ. ಗ್ರಂಥಾಂತ್ಯದ ಪ್ರಶಸ್ತಿಯ ಕೊನೆಯಲ್ಲಿರುವ ಪದ್ಯದಲ್ಲಿ ಕೃತಿಯ ಹೆಸರನ್ನು 'ಕಥಾಸರಿತ್ಸಾಗರ' ವೆಂದು ಹೇಳಲಾಗಿದೆ*. ಈ ಪದ್ಯಕಾವ್ಯವು ಸರ್ಗಗಳಿಗೆ ಬದಲಾಗಿ 'ಲಂಬಕ'ಗಳೆಂಬ ಪ್ರಧಾನ ವಿಭಾಗಗಳನ್ನೂ 'ತರಂಗ'ಗಳೆಂಬ ಉಪವಿಭಾಗಗಳನ್ನೂ ಹೊಂದಿದೆ. ಇವರಲ್ಲಿ ಒಟ್ಟು 18 ಲಂಬಕಗಳೂ, 124 ತರಂಗಗಳೂ, 24000 ಶ್ಲೋಕಗಳೂ ಇವೆ. ಲಂಬಕಗಳು ಅನುಷ್ಟುಪ್ ಛಂದಸ್ಸಿನಲ್ಲಿ ರಚಿತವಾಗಿದ್ದು ಮಂಗಿಯುವಾಗ ಭಿನ್ನವೃತ್ತಗಳಿಂದ ಕೂಡಿವೆ. ಪ್ರತಿಲಂಬಕದ ಪ್ರಾರಂಭದಲ್ಲಿ ಶಿವ, ಪಾರ್ವತಿ, ಗಣಪತಿ, ಸರಸ್ವತಿ, ಮನ್ಮಥ ಇವರಲ್ಲೊಬ್ಬರ ಅಥವಾ ಹಲವರ ಸ್ತೋತ್ರಗಳಿವೆ. ಈ ಲಂಬಕಗಳಿಗೆ ಅನುಕ್ರಮವಾಗಿ ಕಥಾಪೀಠ ಕಥಾಮುಖ, ಲಾವಾಣಕ, ನರವಾಹನದತ್ತ ಜನನ, ಚತುರ್ದಾರಿಕಾ ಮದನಮಂಚುಕಾ, ರತ್ನಪ್ರಭಾ, ಸೂರ್ಯಪ್ರಭಾ, ಅಲಂಕಾರವತೀ, ಶಕ್ತಿಯಶ, ವೇಲಾ ಶಶಾಂಕವತಿ, ಮದಿರಾವತಿ, ಪಂಚ ಮಹಾಭಿಷೇಕ, ಸುರತಮಂಜರೀ, ಪದ್ಮಾವತೀ, ವಿಷಮಶೀಲಗಳೆಂಬ ಹೆಸರುಗಳನ್ನು ಕೊಡಲಾಗಿದೆ. ಒಂದೊಂದು ಲಂಬಕದಲ್ಲಿಯೂ ಹಲವು

* ಪ್ರವಿತತತರಂಗಭಂಗಿಃ ಕಥಾಸರಿತ್ಸಾಗರೋ ವಿರಚಿತೋsಯಮ್ ।
ಸೋಮೇನಾಮಲಮತಿನಾ ಹೃದಯಾನಂದಾಯ ಭವತು ಸತಾಮ್ ॥



ಕಥೆಗಳಿದ್ದು ಪ್ರಧಾನವಾದ ನರವಾಹನದತ್ತನ ಕಥೆಗೆ ಪೋಷಕಗಳಾಗಿವೆ. ಸೋಮದೇವನು ತನ್ನ ಗ್ರಂಥವನ್ನು 'ಕಥಾಮೃತ 'ವೆಂದು ಹೇಳಿಕೊಂಡಿದ್ದಾನೆ*. ಪ್ರಧಾನವಾದ ವತ್ಸರಾಜ ಮತ್ತು ಅವನ ಮಗ ನರವಾಹನದತ್ತರ ಕಥೆಗಿಂತ ಉಪಕಥೆಗಳು ಹೆಚ್ಚು ಸ್ವಾರಸ್ಯವಾಗಿದೆ. ಇವುಗಳನ್ನು ಎಣಿಸಿ ಪಟ್ಟಿಮಾಡುವುದು ಅಸಾಧ್ಯ.

ಕೆಲವೇ ಪಂಕ್ತಿಗಳಲ್ಲಿ ಮುಗಿಯುವ ಕಥೆಗಳೂ ಇವೆ; ಹತ್ತಾರು ಪುಟಗಳನ್ನು ತೆಗೆದುಕೊಂಡಿರುವ ಕಥೆಗಳೂ ಇವೆ. ಶಿವನ ಜಟೆಯ ಗಂಗೆಯಂತೆ ಅವನ ಬಾಯಿಯ ಕಥೆಯೂ ಮೂರುಲೋಕಗಳಲ್ಲಿಯೂ ಹರಿಯುತ್ತದೆ. ನಾಗರು, ವಿದ್ಯಾಧರರು, ದೇವತೆಗಳು, ದೇವರ್ಷಿಗಳು, ಭೂಲೋಕದ ರಾಜರಾಣಿಯರು, ವೇಶ್ಯೆಯರು, ಮೃಗ–ಪಕ್ಷಿಗಳು, ಮಾಂತ್ರಿಕರು ವಂಚಕರು, ಚೋರರು, ವಿಟರು, ಕಾಮಿಗಳು, ತ್ಯಾಗಿಗಳು, ಸ್ವಾಧ್ವಿಯರು, ಪತಿತೆಯರು, ಕುಂಟಲಗಿತ್ತಿ ಮೊದಲಾದವರ ಕಥೆಗಳು ಇಲ್ಲಿವೆ. ಜಂಬೂದ್ವೀಪ, ಶ್ವೇತದ್ವೀಪ, ಕರ್ಪೂರದ್ವೀಪ, ಹಂಸದ್ವೀಪ, ಸುವರ್ಣದ್ವೀಪ, ಕಟಾಹದ್ವೀಪ ಮುಂತಾದ ದ್ವೀಪದ್ವೀಪಾಂತರಗಳ ವೃತ್ತಾಂತಗಳೂ ಇವೆ. ಸಾಧಾರಣವಾಗಿ ಕಥೆಹೇಳುವುದು ಅಜ್ಜಿ ಅಜ್ಜರ ಹಕ್ಕು. ಇಲ್ಲಿ ಪಶುಪತಿಯಿಂದ ಹಿಡಿದು ಪಶುವಿನವರೆಗೆ ಎಲ್ಲರಿಗೂ ಕಥೆಹೇಳುವ ಸ್ವಾತಂತ್ರ್ಯವುಂಟು. ಗುಣಾಢ್ಯನ ಬೃಹತ್ಕಥೆಯ ನಷ್ಟದ ಭಾಗವನ್ನು ಕಥಾಸರಿತ್ಸಾಗರವು ಸಮರ್ಪಕವಾಗಿ ಭರ್ತಿಮಾಡಿದೆ. ಕಥಾಸ್ವಾರಸ್ಯಕ್ಕೆ ಮಕ್ಕಳಿಂದ ಹಿಡಿದು ಮುದುಕರವರೆಗೆ ವಶವಾಗದವರಿಲ್ಲ. ಈ ಕತೆಗಳು ಕುತೂಹಲವನ್ನು ಕೆರಳಿಸಿ ಬೇಸರವನ್ನು ಕಳೆದು ವಿನೋದವನ್ನುಂಟುಮಾಡುವುದರ ಜೊತೆಗೆ ನೀತಿ, ಧರ್ಮ, ಕರ್ಮಗಳ ಪರಿಜ್ಞಾನವನ್ನು ಉಂಟುಮಾಡುತ್ತವೆ. ಇವು ಯಜ್ಞಕಥೆಗಳಲ್ಲ, ವಿನೋದಕಥೆಗಳು. ಋಷಿಗಳು ಬಂದರೂ ಅವರು ಧರ್ಮೋಪನ್ಯಾಸಕರಲ್ಲ. ಇಲ್ಲಿ ಯಾಜ್ಞಿಕರಿಗಿಂತಲೂ ಕಾಪಾಲಿಕರು ಪ್ರಬಲ. ವಿಷಮಶೀಲನು ವಾಮಾಚಾರ, ಬೇತಾಳಗಳಿಂದಲೂ ಮಹತ್ವ ಪಡೆಯುತ್ತಾನೆ. ಹೆಂಡತಿ ಮಕ್ಕಳನ್ನೂ ದಾನ ಮಾಡಿದ ತಾರಾವಲೋಕನ ಕಥೆಯೂ ಇದೆ. ಶಶಾಂಕವತೀ ಮತ್ತು ವಿಷಮಶೀಲ ಲಂಬಕಗಳಲ್ಲಿ ಬೇತಾಳವೃತ್ತಾಂತವಿದೆ. ಭೂತವು ಶವದೊಳಗೆ ಬಂದುಸೇರಿಕೊಳ್ಳುತ್ತದೆಂಬ ನಂಬಿಗೆ ಜಗತ್ತಿನ ಅನೇಕಕಡೆ ಕಂಡುಬರುತ್ತದೆ. ಇದಕ್ಕೆ ಎರಡು ರೂಪಗಳುಂಟು. ಹೆಣಗಳಲ್ಲಿ ಸೇರಿಕೊಂಡು

*ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ದ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

ನಾನಾಕಥಾಮೃತಮಯಸ್ಯ ಬೃಹತ್ಕಥಾಯಾಃ
ಸಾರಸ್ಯ ಸಜ್ಜನಮನೋಂಬುಧಿಪೂರ್ಣಚಂದ್ರಃ ।
ಸೋಮೇನ ವಿಪ್ರವರಭೂರಿಗುಣಾಭಿರಾಮ
ರಾಮಾತ್ಮಜೇನ ವಿಹಿತಃ ಖಲು ಸಂಗ್ರಹೋsಯಮ್ ॥

—ಕಥಾಸರಿತ್ಸಾಗರದ ಆದಿಮಂಗಳ ಪದ್ಯ

ಜೀವಂತ ಮನುಷ್ಯರಂತೆ ವರ್ತಿಸುವ ಅದೃಶ್ಯವೂ ಸೂಕ್ಷ್ಮವೂ ಆದ ಒಂದು ರೂಪ. ಮತ್ತೊಂದು ವಿಕಾರವೂ, ವಿಲಕ್ಷಣವೂ ಆದ ದೈಹಿಕರೂಪ. ಶಶಾಂಕವತಿಯಲ್ಲಿ ಬಂದಿರುವ ಬೇತಾಳನ ವರ್ಣನೆ:

ಸೋಽಪಿ ಕೃಷ್ಣಚ್ಛವಿಃ ಪ್ರಾಂಶುಃ ಉಷ್ಟ್ರಗ್ರೀವೋ ಗಜಾನನಃ ।
ಮಹಿಷಾಂಘ್ರಿರುಲೂಕಾಕ್ಷೋ ವೇತಾಲಃ ಖರಕರ್ಣಕಃ ॥

ಹೆಣ್ಣುಗಂಡುಗಳ ಸಮಸ್ಯೆ ಅನಾದಿ. ಕಟ್ಟಿಕೊಂಡ ಹೆಂಡತಿ ಚಂಡಿ–ಚಾಮುಂಡಿಯಾದರೆ ಬಿಡುವುದಕ್ಕಾಗುತ್ತದೆಯೇ ? ಜೊತೆಗೊಬ್ಬಳನ್ನು ಕಟ್ಟಿಕೊಂಡರೆ ಮನೆಯು ರಣಭೂಮಿಯಾಗುತ್ತದೆ. ಎರಡು ಜಡೆಗಳು ಕೂಡಿದೆಡೆ ಜಗಳ ಕಟ್ಟಿಟ್ಟ ಬುತ್ತಿಯೆಂದು ಹೇಳುತ್ತಾರೆ. ಅತ್ತೆ, ಸೊಸೆ, ಮಗಳು, ನಾದಿನಿ, ಸೋದರಿ, ಮೊದಲಾದವರೂ ಸಮರಸವಾಗಿ ಬಾಳುವುದು ವಿರಳ. ಗೃಹಿಣಿಯಿಲ್ಲದ ಗೃಹವೂ ಇಲ್ಲ. ಹೆಂಗಸು ನೀತಿಗೆಟ್ಟರೆ ಲೋಕಕ್ಕೆ ಹಾನಿ. ಪುರುಷನ ನಡತೆಯು ಅಸಮರ್ಪಕವಾದರೆ ಹೆಂಡತಿಯಾದರೂ ಮಾಡುವುದೇನು ? ಈ ಕ್ಲಿಷ್ಟಸಮಸ್ಯೆಯು ಗಾಢ ಪರಿಶೀಲನೆಯು ಅಗತ್ಯ. ಪರಿಹಾರಕಾಣುವ ಪ್ರಯತ್ನವೂ ಯೋಗ್ಯ, ಕಥಾಸರಿತ್ಸಾಗರದಲ್ಲಿ ಈ ಸಮಸ್ಯೆಯು ನಾನಾಮುಖದ ವಿಶ್ಲೇಷಣೆ—ಚಿಂತನೆಗಳಿವೆ. ಧರ್ಮಮೋಕ್ಷಗಳು ಇಲ್ಲಿ ಗೌಣ. ಅರ್ಥಕಾಮಗಳು ಪ್ರಧಾನ. ಈ ಕೃತಿಯಲ್ಲಿ ಶೃಂಗಾರಾದ್ಭುತಗಳು ಮುಖ್ಯ, ಶಾಂತವಲ್ಲ. ಕಥನಕಲೆಯಲ್ಲಿ ಸೋಮದೇವನು ಅದ್ವಿತೀಯ.

ಅವನ ಪ್ರತಿಭೆ ಅನುಪಮ. ಮಾನವಪ್ರಕೃತಿಯನ್ನು ಚೆನ್ನಾಗಿ ಬಲ್ಲ ಸೋಮದೇವನ ಮನೋಜ್ಞಶೈಲಿ, ಸುಂದರವರ್ಣನೆ, ಪ್ರಭಾವಯುತಬೋಧೆ, ಕಥನಚಾತುರ್ಯಗಳಿಂದ ಕಾವ್ಯ ತುಂಬ ರಮಣೀಯವಾಗಿದೆ*.

ಕಥಾಸರಿತ್ಸಾಗರದ ಕೆಲವು ಸುಭಾಷಿತಗಳು : —

ಭದ್ರಕೃತ್ ಪ್ರಾಪ್ನುಯಾತ್ ಭದ್ರಂ ಅಭದ್ರಂ ಚಾಪ್ಯಭದ್ರಕೃತ್ ॥
ಪುಮಾಂಸಮಾಕುಲಂ ಕ್ರೂರಾ ಪತಿತಂ ದುರ್ದಶಾವಟೇ ।
ಜೀವಂತಮೇವ ಕುಷ್ಣಾತಿ ಕಾಕೀವ ಕುಕುಟುಂಬಿನೀ ॥
ಸ್ನಿಗ್ಧಾ ಕುಲೀನಾ ಮಹತೀ ಗೃಹಿಣೀ ತಾಪಹಾರಿಣೀ ।
ತರುಚ್ಛಾಯೇವ ಮಾರ್ಗಸ್ಥಾ ಪುಣ್ಯೈಃಕಸ್ಯಾಪಿ ಜಾಯತೇ ॥
ಸಂಕಟೇ ಹಿ ಪರೀಕ್ಷ್ಯಂತೇ ಪ್ರಾಜ್ಞಾ ಶೂರಾಶ್ಚ ಸಂಗರೇ ॥
ಕಿಂ ವಾ ವ್ಯೋಮ ವಿನಾರ್ಕೇಣ ಕಿಂ ತೋಯೇನ ವಿನಾ ಸರಃ ।
ಕಿಂ ಮಂತ್ರೇಣ ವಿನಾ ರಾಜ್ಯಂ ಕಿಂ ಸತ್ಯೇನ ವಿನಾ ವಚಃ ॥
ಪುತ್ರ ಚ ಸಹಾಯಾಂತಿ ನ ಭೋಗಾ ನಾರ್ಥಸಂಚಯಾಃ ।
ಏಕಸ್ತು ಬಾಂಧವೋ ಧರ್ಮೋ ನ ಜಹಾತಿ ಪದಾತ್ಪದಂ ॥

---

* his knowledge of human nature, the elegance of his style, the beauty and farce of his descriptions and the wit and wisdom of his aphorisms are masterly in their execution.

— *N. M. Penzer*



ವ ಸನೇಷು ನಿರುದ್ವೇಗಾಃ ವಿಭವೇಷ್ವಪ್ಯಗರ್ವಿತಾಃ ।
ಕಾರ್ಯೇಷ್ವಕಾತರಾ ಯೇ ಚ ತೇ ಧೀರಾಸ್ತೈರ್ಜಿತಂ ಜಗತ್ ॥
ಸಾ ಸಭಾ ಯತ್ರ ಸಭ್ಯೋಽಸ್ತಿ ಸ ಸಭ್ಯೋ ಧರ್ಮಮಾಹ ಯಃ ।
ಸ ಧರ್ಮೋ ಯತ್ರ ಸತ್ಯಂ ಸ್ಯಾತ್ ತತ್ಸತ್ಯಂ ಯತ್ರ ನಲ್ಪಲವಮ್ ॥

ಕಥಾಸರಿತ್ಸಾಗರವನ್ನು ಸಾಗರದ ಶ್ರೀಕಂಠಶರ್ಮ ಮತ್ತು ತರೀಕೆರೆಯ ಚಿದಂಬರ ಪಂಡಿತರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ ಮತ್ತು ಕಥನಕಲೆಗೆ ನೆರವು ಮತ್ತು ಪ್ರೇರಣೆಗಳನ್ನು ನೀಡಿದೆ.

ಎ. ಆರ್. ಕೃಷ್ಣಶಾಸ್ತ್ರಿಗಳು ಇದರ ಕಥೆಗಳನ್ನು ಕಥಾಮೃತದಲ್ಲಿ ಗದ್ಯರೂಪವಾಗಿ ಕನ್ನಡದಲ್ಲಿ ಸಂಗ್ರಹಿಸಿದ್ದಾರೆ. ಜಗನ್ನಾಥಮಿಶ್ರನ ಕಥಾಪ್ರಕಾಶನದಲ್ಲಿಯೂ ಇದರ ಕಥೆಗಳಿವೆ. ಇದೇ ಮಾದರಿಯಲ್ಲಿರುವ 'ಅರೇಬಿಯನ್ ನೈಟ್ಸ್' ಎಂಬ ಪ್ರಸಿದ್ಧ ಕೃತಿಯನ್ನು ಜಗದ್ಬಂಧು ಪಂಡಿತರು 'ಆರಬ್ಯಯಾಮಿನೀ' ಎಂಬ ಹೆಸರಿನಿಂದ ಸಂಸ್ಕೃತಕ್ಕೆ ಅನುವಾದಿಸಿದ್ದಾರೆ.

## ಪಂಚತಂತ್ರ

ವಿಶ್ವವ್ಯಾಪಿಪ್ರಭಾವವನ್ನುಳ್ಳ ಈ ಕೃತಿಯು ವಿಶ್ವಸಾಹಿತ್ಯಕ್ಕೆ ಭಾರತೀಯ ಸಾಹಿತ್ಯ ಸಮರ್ಪಿಸಿದ ದೊಡ್ಡ ಕೊಡುಗೆ. ಇದರ ದೇಶ ವಿದೇಶಗಳ ಪರ್ಯಟನವು ರೋಮಾಂಚಕಾರಿಯಾದುದು. ಜಗತ್ತಿನ ನಾನಾ ಭಾಷೆಗಳಿಗೆ ಅನುವಾದಗೊಂಡಿರುವ ಕೃತಿಗಳಲ್ಲಿ ಇದು ಬೈಬಲ್ಲಿನ ನಂತರದ ಸ್ಥಾನವನ್ನು ಪಡೆದಿದೆ. ಹರ್ಟೆಲ್ ಎಂಬ ಪ್ರಸಿದ್ಧ ಜರ್ಮನ್ ವಿದ್ವಾಂಸನು ಸುಮಾರು 50 ಭಾಷೆಗಳಲ್ಲಿರುವ 200ಕ್ಕೂ ಹೆಚ್ಚಾದ ಇದರ ಸಂಸ್ಕರಣಗಳನ್ನು ಪಟ್ಟಿ ಮಾಡಿದ್ದಾನೆ. ಭಾರತ ಮತ್ತು ಫಾರಸಿದೇಶಗಳಿಗೆ ಬಹಳ ಪ್ರಾಚೀನಕಾಲದಿಂದಲೂ ಘನಿಷ್ಠ ಸಂಬಂಧವಿದ್ದಿತು. ಪಂಚತಂತ್ರದ ಪ್ರಭಾವ ಆ ದೇಶದಲ್ಲಿಯೂ ಹರಡಿದ್ದಿತು. ಅಲ್ಲಿನ ದೊರೆಯಾದ 'ಚೋಶ್ರನ್ ಅನೋಶರ್ವನ್' (Chosran Anosharwan) ನ (ಕ್ರಿ. ಶ. 531–579) ಆಳ್ವಿಕೆಯ ಕಾಲದಲ್ಲಿ 'ಬುಸೋರ್ಯಿ' ಎಂಬ ಸಂಸ್ಕೃತವನ್ನು ಬಲ್ಲ ವೈದ್ಯನು ಮೊಟ್ಟಮೊದಲಿಗೆ ಪಂಚತಂತ್ರವನ್ನು ಪಹ್ಲವೀ (ಪ್ರಾಚೀನ ಫಾರಸೀ) ಭಾಷೆಗೆ ಕ್ರಿ. ಶ. 533ರಲ್ಲಿ 'ಕರಟಕ ಮತ್ತು ದಮನಕ' ಎಂಬ ಶೀರ್ಷಿಕೆಯಿಂದ ಅನುವಾದಿಸಿದನು. ಈ ಪಹ್ಲವೀ ಅನುವಾದವಾಗಲೀ, ಇದರ ಸಂಸ್ಕೃತ ಮೂಲವಾಗಲೀ ಇಂದು ಉಪಲಬ್ಧವಿಲ್ಲ. 'ಬುದ್'ನು (ಒಬ್ಬ ಪಾದ್ರಿ) ಕ್ರಿ. ಶ. 560ರಲ್ಲಿ ಪಹ್ಲವಿಯಿಂದ ಸಿರಿಯಕ್ ಭಾಷೆಗೆ ಮಾಡಿದ ಅನುವಾದವೂ, ಅಬ್ದುಲ್ಲಾ ಇಬ್ನಲ್ ಮೊಗಪ್ಪನು ಕ್ರಿ. ಶ. 750ರಲ್ಲಿ ಸಿರಿಯಕ್ ಮೂಲದಿಂದ ಅರಬ್ಬಿಭಾಷೆಗೆ ಮಾಡಿದ ಅನುವಾದವೂ ದೊರೆಯುತ್ತವೆ. ಅಬ್ದುಲ್ಲಾ ಇಬ್ನಲ್ ಹವಾಜಿಯು ಕ್ರಿ. ಶ. 781ರಲ್ಲಿ ಪಹ್ಲವಿಯಿಂದ ಅರಬ್ಬಿಗೆ ಮಾಡಿದ ದ್ವಿತೀಯಾನುವಾದದಿಂದ ಅರಬ್ಬಿ

ಕವಿತಾರೂಪವಾದ ಪಂಚತಂತ್ರವು ಜನ್ಮತಾಳಿತು. ಪರ್ಷಿಯಾ, ಸಿರಿಯಾ, ಅರೇಬಿಯಾ ಅಲ್ಲಿಂದ ಯೂರೋಪಿನ ದೇಶಗಳು, ಹೀಗೆ ಪಂಚತಂತ್ರವು ಜಗತ್ತಿನ ದಿಗ್ದಿಗಂತಗಳಿಗೂ ಹರಡಿತು. ಲ್ಯಾಟಿನ್, ಗ್ರೀಕ್, ಜರ್ಮನ್, ಫ್ರೆಂಚ್, ಸ್ಪ್ಯಾನಿಷ್, ಇಟಾಲಿಯನ್, ಇಂಗ್ಲಿಷ್ ಮುಂತಾದ ವಿಶ್ವದ ಪ್ರಮುಖ ಭಾಷೆಗಳಿಗೆಲ್ಲಾ ಅನುವಾದಗೊಂಡಿತು. ಭಾಷೆಯಿಂದ ಭಾಷೆಗೆ ಅನುವಾದಗೊಳ್ಳುತ್ತಾ ಗುರುತುಸಿಕ್ಕದ ರೂಪವನ್ನು ಪಡೆಯಿತು. ಷೇಕ್ಸ್‌ಪಿಯರ್ ಮೊದಲಾದ ಪಾಶ್ಚಾತ್ಯ ಮಹಾಕವಿಗಳಿಗೂ ಇದರಿಂದ ಸ್ಫೂರ್ತಿದೊರೆತಿದೆಯೆಂದು ಇಂದಿನ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಪಂಚತಂತ್ರವು ಸಾಕಷ್ಟು ವ್ಯತ್ಯಾಸಗಳನ್ನುಳ್ಳ ಅನೇಕ ಸಂಸ್ಕರಣಗಳಲ್ಲಿ ದೊರೆಯುವುದರಿಂದ ಅವುಗಳಲ್ಲಿ ಯಾವ ಸಂಸ್ಕರಣವು ಹೆಚ್ಚು ವಿಶ್ವಸನೀಯವೆಂದು ನಿರ್ಣಯಿಸುವುದು ಕಷ್ಟ. ಕಾಶ್ಮೀರ ಸಂಸ್ಕರಣವಾದ ತಂತ್ರಾಖ್ಯಾನ ಅಥವಾ ತಂತ್ರಾಖ್ಯಾಯಿಕೆಯು ಬಹಳಮಟ್ಟಿಗೆ ಮೂಲದ ರೂಪವನ್ನುಳಿಸಿಕೊಂಡಿದೆಯೆಂದೂ, ಇದರಿಂದ ಪಹ್ಲವಿಯು ಅನುವಾದವಾಯಿತೆಂದೂ, ಈ ಪರಿಷ್ಕರಣವೇ ಹೆಚ್ಚು ವಿಶ್ವಸನೀಯವೆಂದೂ ಹರ್ಟೆಲ್ ಅಭಿಪ್ರಾಯಪಡುತ್ತಾರೆ. ಈ ಸಂಸ್ಕರಣದ ಕಾಲದ ಸುಮಾರು ಕ್ರಿ. ಶ. 4ನೆಯ ಶತಮಾನವೆಂದು ಭಾವಿಸಬಹುದು. ಜಿನಪತಿ ಸೂರಿಯ ಶಿಷ್ಯನಾದ ಪೂರ್ಣಭದ್ರನೆಂಬ ಶ್ವೇತಾಂಬರ ಜೈನಯತಿಯು ಕ್ರಿ. ಶ. 1199 ರಲ್ಲಿ ರಚಿಸಿದ "ಪಂಚಾಖ್ಯಾನಕವು" ಪ್ರಕೃತ ಪ್ರಚಾರದಲ್ಲಿರುವ ಪಂಚತಂತ್ರಗಳಿಗೆ ಆಧಾರ, ಹರ್ಟೆಲ್ ಅವರು ಇದನ್ನು ಪಂಚತಂತ್ರದ ಪರಿಷ್ಕರಣಗಳಲ್ಲೆಲ್ಲಾ ಅತ್ಯುತ್ತಮವಾದುದೆಂದು ಅಭಿಪ್ರಾಯಪಡುತ್ತಾರೆ*. ಮತ್ತೊಬ್ಬ ಜೈನನಾದ ಮೇಘವಿಜಯನಿಂದ ಕ್ರಿ.ಶ. 1659-60ರಲ್ಲಿ ರಚಿತವಾದ ಪಂಚಾಖ್ಯಾನೋದ್ಧಾರದಲ್ಲಿ ಹೊಸಕಥೆಗಳೂ ಸೇರಿಕೊಂಡಿವೆ. ನೇಪಾಳದಲ್ಲಿ ಸಿಕ್ಕಿರುವ 'ತಂತ್ರಾಖ್ಯಾನ' ದಲ್ಲಿಯೂ ಪಾಠಭೇದಗಳಿವೆ. ದಾಕ್ಷಿಣಾತ್ಯಪಾಠವು ಜಾಗರೂಕತೆಯಿಂದ ರಚಿತವಾಗಿದ್ದು ಮೂಲಕಥೆಗಳನ್ನೂ, ಭಾಷೆಯನ್ನೂ ಉಳಿಸಿಕೊಂಡಿದೆಯೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕ್ಷೇಮೇಂದ್ರನ ಬೃಹತ್ಕಥಾಮಂಜರಿ ಮತ್ತು ಸೋಮದೇವನ ಕಥಾಸರಿತ್ಸಾಗರಗಳಲ್ಲಿಯೂ ಪಂಚತಂತ್ರಪಾಠವಿದೆ.

ಪಂಚತಂತ್ರದಲ್ಲಿ ಮಿತ್ರಭೇದ, ಮಿತ್ರಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ ಮತ್ತು ಅಸಮೀಕ್ಷ್ಯಕಾರಿತ್ವಗಳೆಂಬ ಐದು ತಂತ್ರಗಳಿವೆ. ರಾಜಕೀಯ ವಿಚಾರಗಳಾದ ಈ ತಂತ್ರಗಳನ್ನು ಮೊಟ್ಟಮೊದಲಿಗೆ ಪ್ರತಿಪಾದಿಸುವ ಕೃತಿ ಚಾಣಕ್ಯನ ಅರ್ಥಶಾಸ್ತ್ರ. ಪ್ರಕೃತಿಶಬ್ದವನ್ನು (ಮಿತ್ರಪ್ರಕೃತಿ, ಅರಿಪ್ರಕೃತಿ) ಮಿತ್ರ ಮತ್ತು ಶತ್ರು ರೂಪವಾದ ಅರ್ಥಗಳಲ್ಲಿ ಮೊದಲು ಬಳಸಿರುವವನೂ ಚಾಣಕ್ಯನೇ. ಈ ಶಬ್ದವು ತನ್ನದೇ ಆದ ಪ್ರಯೋಗವೆಂದು ಅವನು ಅರ್ಥಶಾಸ್ತ್ರದ "ತಂತ್ರಯುಕ್ತಿ"ಯೆಂಬ 15ನೆಯ ಅಧ್ಯಾಯದಲ್ಲಿ ಸ್ಪಷ್ಟಪಡಿಸಿದ್ದಾನೆ. ದೇಶದ ಒಳಗಿರುವ

*ಪ್ರತ್ಯಕ್ಷರಂ ಪ್ರತಿಪದಂ ಪ್ರತಿವಾಕ್ಯಂ ಪ್ರತಿಕಥಂ ಪ್ರತಿಶ್ಲೋಕಂ ।
ಶ್ರೀ ಪೂರ್ಣಭದ್ರಸೂರಿರ್ವಿಶೋಧಯಾಮಾಸ ಶಾಸ್ತ್ರಮಿದಂ ॥
— ಎಂದು ಪೂರ್ಣಭದ್ರನು ಹೇಳಿಕೊಂಡಿದ್ದಾನೆ.



ಮಿತ್ರ ಅಥವಾ ಶತ್ರುವನ್ನು ಅಭ್ಯಂತರ ಪ್ರಕೃತಿಯೆಂದೂ, ಹೊರಗಿರುವವನನ್ನು ಬಾಹ್ಯ ಪ್ರಕೃತಿಯೆಂದೂ ಕರೆಯಲಾಗಿದೆ. ಪ್ರಕೃತಿಶಬ್ದವನ್ನು ಪಂಚತಂತ್ರಕಾರನೂ ಬಳಸಿಕೊಂಡಿರುವುದಲ್ಲದೆ, ಚಾಣಕ್ಯನನ್ನು ನೃಪಶಾಸ್ತ್ರ ಅಥವಾ ನೀತಿಶಾಸ್ತ್ರದ ಕರ್ತೃವೆಂದೂ ಹೇಳಿದ್ದಾನೆ. ಆದ್ದರಿಂದ ಪಂಚತಂತ್ರಕಾರನು ಚಾಣಕ್ಯನಿಂದ ಉಪಕೃತನಾಗಿದ್ದಾನೆಂದು ಭಾವಿಸಬಹುದು. ಆರ್ಷಕಾಲದಿಂದಲೂ ಪ್ರಚಲಿತವಾಗಿದ್ದ ಕಥಾತಂತ್ರವನ್ನು ತೆಗೆದುಕೊಂಡು, ಜೊತೆಗೆ ಚಾಣಕ್ಯ, ಶುಕ್ರ, ಬೃಹಸ್ಪತಿ ಮುಂತಾದವರ ನೀತಿಶಾಸ್ತ್ರವನ್ನು ಸೇರಿಸಿಕೊಂಡು ಪಂಚತಂತ್ರವನ್ನು ರಚಿಸಿರಬೇಕು. ಇದರ ಕಥಾಭಾಗವು ಗದ್ಯರೂಪವಾಗಿದ್ದು ಪದ್ಯಗಳು ನೀತಿಯನ್ನು ಪ್ರತಿಪಾದಿಸುತ್ತವೆ. ಮಹಿಲಾರೋಪ್ಯ ನಗರದ ದೊರೆಯಾದ ಅಮರ ಶಕ್ತಿಯ ಮಂದಮತಿಗಳಾದ ರಾಜಕುಮಾರರ ಶಿಕ್ಷಣಕ್ಕಾಗಿ ವಿಷ್ಣುಶರ್ಮನು ಪಂಚತಂತ್ರವನ್ನು ರಚಿಸಿದನೆಂಬ ಪ್ರತೀತಿಯಿದೆ. ಇದರ ಕಾಲ ಕ್ರಿ. ಶ. ಮೂರನೆಯ ಶತಮಾನಕ್ಕಿಂತ ಅರ್ವಾಚೀನವಲ್ಲವೆಂದು ಹೇಳಬಹುದು.

ಈ ಗ್ರಂಥದ ಪ್ರತಿತಂತ್ರದಲ್ಲಿಯೂ ಒಂದೊಂದು ಪ್ರಧಾನ ಕಥೆಯಿದ್ದು, ಅದರೊಡನೆ ನೀತಿ ಬೋಧೆಗಾಗಿ ಹಲವು ಉಪಕಥೆಗಳು ಸೇರಿಕೊಂಡಿವೆ. ಕಥೆಗಳೆಂದರೆ ಮಕ್ಕಳಿಗೆ ಬಹಳ ಇಷ್ಟ. ಕಥಾಮಾಧ್ಯಮವು ನೀತಿಬೋಧೆಗೆ ಉತ್ತಮ ಸಾಧನ. ತತ್ವಪ್ರತಿಪಾದಕರೂ, ಪ್ರಚಾರಕರೂ ಕಥೆಗಳನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಈ ಕೃತಿಯು ಪಶುಪಕ್ಷಿಗಳ ಕಥೆಗಳ ಮೂಲಕ ಕೋಮಲಮತಿಗಳಾದ ಅರಸುಕುಮಾರರಿಗೆ ಉತ್ತಮರಾಜಕೀಯ ಶಿಕ್ಷಣವನ್ನು ನೀಡುತ್ತದೆ. ಪಶುಪಕ್ಷಿಗಳಾದರೂ ಅವು ಮಾನವರಿಗಿಂತ ಮಿಗಿಲಾಗಿ ವರ್ತಿಸಿ ನಿತ್ಯಜೀವನದ ವ್ಯವಹಾರಕೌಶಲ ಮತ್ತು ಸದಾಚಾರಗಳನ್ನು ಮನಮುಟ್ಟಿಸುವ ರೀತಿಯು ಆಕರ್ಷಕವಾಗಿದೆ. ಕರಟಕ ದಮನಕರು ಪಿಂಗಳಕ ಮತ್ತು ಸಂಜೀವಕರ ಗಾಢಮೈತ್ರಿಯನ್ನು ಮುರಿಯುತ್ತವೆ; ಕಪೋತರಾಜನು ಆತ್ಮರಕ್ಷಣೆಯನ್ನು ಕಡೆಗಣಿಸಿ ವ್ಯಾಧನ ಬಲೆಯಿಂದ ಸಂಗಡಿಗರನ್ನು ಕಾಪಾಡುತ್ತದೆ. ಕಾಗೆಗಳು ಚಾತುರ್ಯದಿಂದ ಪ್ರಬಲ ಶತ್ರುವಾದ ಗೂಗೆಯ ನೆಲೆಯನ್ನು ಸುಡುತ್ತವೆ; ಹೆಂಡತಿಯ ಪ್ರೇರಣೆಯಿಂದ ಕೊಲ್ಲಲು ಯೋಜಿಸಿದ ಮೊಸಳೆಯಿಂದ ಕಪಿಯು ತನ್ನನ್ನು ಕಾಪಾಡಿಕೊಳ್ಳುತ್ತದೆ. ಕಥಾಸಂವಿಧಾನದಲ್ಲಿ ಕವಿಯ ಕೈ ಪಳಗಿದೆ. ಅವು ಎಲ್ಲಿಯೂ ಜಾಡುತಪ್ಪಿಲ್ಲ; ಬರಡಾಗಿಲ್ಲ. ಪದ್ಯಗಳೆಲ್ಲವೂ ನೀತಿಯಿಂದ ತುಂಬಿ, ಮನೋರಂಜಕವಾಗಿದ್ದು ಕಂಠಪಾಠಯೋಗ್ಯವಾಗಿವೆ. ಜಿಂಕೆಯ ಕಥೆಯಲ್ಲಿ ಬಂದಿರುವ ಈ ಪದ್ಯವು ರಾಜಕುಮಾರರಿಗೆ ಶಿಕ್ಷಣ ನೀಡುವ ಕವಿಯ ಉದ್ದೇಶವನ್ನು ಸುಂದರವಾಗಿ ಧ್ವನಿಸುತ್ತದೆ—

ವಾತವೃಷ್ಟಿವಿಧೂತಸ್ಯ ಮೃಗಯೂಥಸ್ಯ ಧಾವತಃ ।
ಪೃಷ್ಠತೋಽನುಗಮಿಷ್ಯಾಮಿ ಕದಾ ತನ್ಮೇ ಭವಿಷ್ಯತಿ ॥

ಮಿತ್ರನಾಗಿದ್ದ ಕಪಿಯನ್ನು ವಂಚಿಸಲು ಮುಂದಾದ ಮೊಸಳೆಯ ಒಳಗುದಿಯನ್ನು ಈ ಶ್ಲೋಕವು ರಮ್ಯವಾಗಿ ಪ್ರಕಟಿಸುತ್ತದೆ—

ಏಕಃ ಸಖಾ ಪ್ರಿಯೋ ಭೂಯಃ ಉಪಕಾರೀ ಗುಣಾನ್ವಿತಃ ।
ಹಂತವ್ಯಃ ಸ್ತ್ರೀನಿಮಿತ್ತೇನ ಕಷ್ಟಮಾಪತಿತಂ ಮಮ ॥

ಈ ಶ್ಲೋಕವು ಸುಹೃದ್ಧರ್ಮವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ—

ಏಕ ಏವ ಸುಹೃದ್ಧರ್ಮೋ ನಿಧನೇಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ॥

ಪಂಚತಂತ್ರಕಾರನದು ಪ್ರಭಾವಯುತವಾದ ಬರೆವಣಿಗೆ, ಶೈಲಿಯು ಸರಳವೂ, ಸುಂದರವೂ ಆಗಿದೆ. ದೀರ್ಘಸಮಾಸಗಳ ಭಾರವಾಗಲೀ, ಅಸ್ಫುಟಾರ್ಥಗಳ ಕ್ಲೇಶವಾಗಲೀ ಎಲ್ಲಿಯೂ ಇಲ್ಲ. ವ್ಯವಹಾರಕೌಶಲಪ್ರತಿಪಾದನೆಗೆ ಹೊರಟ ಈ ಕೃತಿಯಲ್ಲಿ ಶೃಂಗಾರಕ್ಕೆ ಅವಕಾಶವಿಲ್ಲ. ಅಲ್ಲಲ್ಲಿ ಲಘು ಹಾಸ್ಯವೂ ದೊರೆಯುತ್ತದೆ. ಈ ಕೃತಿಯಲ್ಲಿ ಭಾರತೀಯ ಸಂಸ್ಕೃತಿಯು ಉತ್ತಮವಾಗಿ ಪ್ರತಿಬಿಂಬಿತವಾಗಿದೆ.

**ಹಿತೋಪದೇಶ* :—**

ಇದು ಪಂಚತಂತ್ರದ ಸುಪ್ರಸಿದ್ಧವೂ, ಜನಪ್ರಿಯವೂ ಆದ ಒಂದು ಪರಿಷ್ಕರಣವಾದರೂ ಸ್ವತಂತ್ರ ಗ್ರಂಥವೆಂಬಂತೆ ಪ್ರಚಾರದಲ್ಲಿದೆ. ಬಂಗಾಳದ ನಾರಾಯಣನು ಧವಳಚಂದ್ರನ ಆಶ್ರಯದಲ್ಲಿ ಇದನ್ನು ರಚಿಸಿದನು. ಇದರ ಒಂದು ಹಸ್ತಪ್ರತಿಯು ಕ್ರಿ.ಶ. 1373ರಲ್ಲಿ ರಚಿತವಾಗಿದೆ. ಈ ಕೃತಿಯಲ್ಲಿ ಕಾಳಿದಾಸ ಮಾಘಾದಿ ಕವಿಗಳ ಪದ್ಯಗಳೂ ಉದಾಹೃತವಾಗಿವೆ. ಕವಿಯು ಕ್ರಿ.ಶ.9ನೆಯ ಶತಮಾನದಿಂದ ಕ್ರಿ.ಶ 14ನೆಯ ಶತಮಾನದೊಳಗೆ ಜೀವಿಸಿರಬೇಕೆಂದು ಊಹಿಸಲಾಗಿದೆ. ಸಂಸ್ಕೃತಶಿಕ್ಷಣ ಮತ್ತು ನೀತಿಬೋಧೆಯ ಗುರಿಯಿಂದ ಪಂಚತಂತ್ರವನ್ನಾಧರಿಸಿ ಈ ಕೃತಿಯನ್ನು ರಚಿಸಿರುವುದಾಗಿ ಕವಿಯು ತಾನೇ ಹೇಳಿಕೊಂಡಿದ್ದಾನೆ. ಇವನ ಹೆಸರು ನಾರಾಯಣನೆಂದಿದ್ದರೂ, ತನ್ನ ಪ್ರಭುವಿನ ಒಳಿತಿಗಾಗಿ ತನ್ನನ್ನೂ ತನ್ನ ಕುಟುಂಬದವರನ್ನೂ ಶಿವನಿಗೊಪ್ಪಿಸುವ ವೀರನ ಕಥೆಯಿಂದಲೂ, ಪ್ರತಿ ಅಧ್ಯಾಯವೂ ಶಿವಸ್ತೋತ್ರದಿಂದ ಮುಗಿಯುವುದರಿಂದಲೂ ಇವನು ಶೈವನೆಂದು ತಿಳಿದುಬರುತ್ತದೆ.

ಪಂಚತಂತ್ರದ ಮೊದಲಿನ ಎರಡು ಕಥೆಗಳಾದ ಮಿತ್ರಭೇದ ಮತ್ತು ಮಿತ್ರಸಂಪ್ರಾಪ್ತಿಗಳು ಹಿತೋಪದೇಶದಲ್ಲಿ ಹಿಂದುಮುಂದಾಗಿ ಬಂದಿವೆ. ಪಂಚತಂತ್ರದ ಮೂರನೆಯ ಕಥೆಯನ್ನು ಎರಡಾಗಿ ಒಡೆದು ವಿಗ್ರಹ ಮತ್ತು ಸಂಧಿಯೆಂಬ ಹೆಸರುಗಳನ್ನು ಕೊಡಲಾಗಿದೆ. ಹಿತೋಪದೇಶದ ಮೂರನೇ ಅಧ್ಯಾಯದಲ್ಲಿ ಪಂಚತಂತ್ರದ ಮೂರನೇ ಅಧ್ಯಾಯದ ಪೂರ್ಣ ಚಿತ್ರವಿಲ್ಲ : ನಾಲ್ಕನೇ ಅಧ್ಯಾಯ ಪೂರ್ಣ ಹೊಸದು. ಈ ಕೃತಿಯಲ್ಲಿ ಪಂಚತಂತ್ರದ ನಾಲ್ಕನೆಯ ಅಧ್ಯಾಯವನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ ; ಐದನೆಯ ಅಧ್ಯಾಯವನ್ನು ಮೂರು ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಅಳವಡಿಸಲಾಗಿದೆ. ಹಿತೋಪದೇಶದಲ್ಲಿ ಕವಿಯು ಬೇರೆ ಮೂಲಗಳಿಂದ ತೆಗೆದುಕೊಂಡಿರಬಹುದಾದ 17 ಹೊಸಕಥೆಗಳಿವೆ†. ಪಂಚತಂತ್ರದ ರಾಜನೀತಿ ಪ್ರತಿಪಾದನೆಯನ್ನು ಹಿತೋಪದೇಶದಲ್ಲಿ ಉಳಿಸಿಕೊಳ್ಳಲಾಗಿದೆ. ಸುಲಭವೂ ಸುಂದರವೂ ಆದ

* 'ಹಿತೋಪದೇಶ ಪದ್ಯಸಂಗ್ರಹ' ಎಂಬ ಮತ್ತೊಂದು ಗ್ರಂಥವಿದೆ.

† ಬೇತಾಳಪಂಚವಿಂಶತಿ, ಶುಕಸಪ್ತತಿ, ಮುಂತಾದ ಮೂಲದಿಂದ ಎತ್ತಿಕೊಂಡಿರಬಹುದು.



ಭಾಷೆಯುಳ್ಳ ಈ ಗ್ರಂಥವು ಸಂಸ್ಕೃತಾಭ್ಯಾಸಿಗಳಿಗೆ ಬಹಳ ಉಪಕಾರಕವಾಗಿದೆ. ನೀತಿಬೋಧಕ ಪದ್ಯಗಳು ಬೇಸರ ಹುಟ್ಟಿಸುವಂತೆ ಸಮೂಹ ಸಮೂಹವಾಗಿ ಬಂದಿದ್ದರೂ ತಮ್ಮ ಸೊಗಸು ಸೌಂದರ್ಯಗಳಿಂದ ಆಕರ್ಷಕವಾಗಿಯೇ ಇವೆ.

ಈ ಶ್ಲೋಕ ಪರಪರಿರಕ್ಷಣೆಯನ್ನು ಪ್ರಭಾವಯುತವಾಗಿ ಬೋಧಿಸುತ್ತದೆ—

ಮರ್ತವ್ಯಮಿತಿ ಯದ್ದುಃಖಂ ಪುರುಷಸ್ಯೋಪಜಾಯತೇ ।
ಶಕ್ಯಃ ತೇನಾನುಮಾನೇನ ಪರೋಽಪಿ ಪರಿರಕ್ಷಿತುಮ್ ॥

ಈ ಶ್ಲೋಕವು ಪ್ರಕೃತಿಪ್ರಭಾವವನ್ನು ವರ್ಣಿಸುತ್ತದೆ—

ನ ಧರ್ಮಶಾಸ್ತ್ರಂ ಪಠತೀತಿಕಾರಣಂ ನ ಚಾಪಿ ವೇದಾಧ್ಯಯನಂ ದುರಾತ್ಮನಃ ।
ಸ್ವಭಾವ ಏವಾತ್ರ ತಥಾತಿರಿಚ್ಯತೇ ಯಥಾ ಪ್ರಕೃತ್ಯಾ ಮಧುರಂ ಗವಾಂ ಪಯಃ ॥

**ಪಂಚೋಪಾಖ್ಯಾನಸಂಗ್ರಹ (ಕಥಾಮೃತನಿಧಿ) :—**

ಕಣ್ವಗೋತ್ರದ ನಾಗದೇವಭಟ್ಟನ ಮಗನಾದ ಅನಂತಭಟ್ಟನು ಇದರ ಕರ್ತೃ. ಪಂಚತಂತ್ರದ ಕಥೆಗಳನ್ನೊಳಗೊಂಡಿರುವ ಈ ಕೃತಿಯು ಮಾನವನ ಒಳ್ಳೆಯ ನಡತೆ ಮತ್ತು ಲೋಕದ ದುರ್ಗುಣಗಳನ್ನು ವಿವರಿಸುತ್ತದೆ.

**ಸಿಂಹಾಸನ ದ್ವಾತ್ರಿಂಶಿಕಾ (ವಿಕ್ರಮಾರ್ಕಚರಿತ) :—**

ಈ ಕೃತಿಯನ್ನು 'ದ್ವಾತ್ರಿಂಶತ್ಪುತ್ಥಲಿಕಾ' ಎಂದೂ ಕರೆಯುತ್ತಾರೆ. ಇದರಲ್ಲಿ ಸಿಂಹಾಸನದ ಸಾಲುಗೊಂಬೆಗಳು ಹೇಳುವ 32 ಕಥೆಗಳಿವೆ. ಇಂದ್ರನು ವಿಕ್ರಮಾದಿತ್ಯನಿಗೆ ಬಹುಮಾನವಾಗಿ ಒಂದು ಸಿಂಹಾಸನವನ್ನು ಕೊಟ್ಟಿದ್ದನು. ಶಾಲಿವಾಹನನು ವಿಕ್ರಮಾದಿತ್ಯನನ್ನು ಯುದ್ಧದಲ್ಲಿ ಸಂಹರಿಸಿದ ಮೇಲೆ ಈ ಸಿಂಹಾಸನವನ್ನು ಭೂಮಿಯಲ್ಲಿ ಹೂಳಲಾಯಿತು. ಮುಂದೆ ಧಾರಾನಗರಿಯ ಭೋಜನು ಭೂಮಿಯಲ್ಲಿ ತನಗೆ ದೊರೆತ ಈ ಸಿಂಹಾಸನವನ್ನು ಹತ್ತಲು ಹೋದಾಗ ಅದರಲ್ಲಿ ಕಡೆದಿದ್ದ ಬಾಲಿಕೆಯರ ಸಾಲುಗೊಂಬೆಗಳು ಚೈತನ್ಯಗೊಂಡು ವಿಕ್ರಮಾದಿತ್ಯನ ಗುಣಗಳನ್ನು ಪ್ರಶಂಸಿಸುವ ಕಥೆಗಳನ್ನು ಹೇಳಿ ಬಿಡುಗಡೆ ಹೊಂದುತ್ತವೆ.

ಅನೇಕ ಸಂಸ್ಕರಣಗಳಲ್ಲಿ ದೊರೆಯುವ ಈ ಕೃತಿಯ ಕರ್ತೃವನ್ನು ಕಾಳಿದಾಸ, ರಾಮಚಂದ್ರ, ಶಿವ ಮತ್ತು ಸಿದ್ಧಸೇನದಿವಾಕರರಿಗೆ ಆರೋಪಿಸಲಾಗಿದೆ. ಕ್ರಿ. ಶ. 14 ನೆಯ ಶತಮಾನದ ಪ್ರಾರಂಭದಲ್ಲಿದ್ದ ಕ್ಷೇಮಂಕರನ ಜೈನ ಸಂಸ್ಕರಣದಲ್ಲಿ ಪರಾಕ್ರಮದಿಂದ ಗಳಿಸಿದ ತನ್ನ ಸರ್ವಸ್ವವನ್ನೂ ದಾನಮಾಡಿದ ದೊರೆಯ ಔದಾರ್ಯವನ್ನು ಚಿತ್ರಿಸಲಾಗಿದೆ. ಗದ್ಯದಲ್ಲಿರುವ ಕಥೆಗಳ ಪ್ರಾರಂಭ ಮತ್ತು ಅಂತ್ಯಗಳಲ್ಲಿ ಪದ್ಯಗಳಿದ್ದು, ಅವುಗಳಲ್ಲಿಯೂ ಕಥಾ ಬೆಳವಣಿಗೆಯೇ ಇದೆ. ಮೂಲಕ್ಕೆ ಸಮೀಪವಾಗಿದ್ದಿರಬಹುದಾದ ದಾಕ್ಷಿಣಾತ್ಯ ಸಂಸ್ಕರಣದಲ್ಲಿ ಕಥೆಗಳು ಗದ್ಯರೂಪವಾಗಿದ್ದು ನೀತಿಬೋಧಕ ಪದ್ಯಗಳನ್ನೊಳಗೊಂಡಿವೆ ; ಅಲ್ಲಲ್ಲಿ ಕಥೆಯು ಪದ್ಯಗಳಲ್ಲಿ ಹರಿದಿರುವುದೂ ಉಂಟು. ಈ ಸಂಸ್ಕರಣವನ್ನು ವಿಕ್ರಮಾರ್ಕ ಚರಿತವೆಂದು ಕರೆಯುವ ರೂಢಿಯಿಂದೆ. ದೊರೆತಿರುವ ಅಜ್ಞಾತರ ಎರಡು ಔತ್ತರೀಯ ಸಂಸ್ಕರಣಗಳಲ್ಲಿ ಒಂದು ಪದ್ಯರೂಪವಾಗಿದೆ. ಬಂಗಾಳಸಂಸ್ಕರಣದ ಕರ್ತೃತ್ವವನ್ನು ವರರುಚಿಗೆ ಆರೋಪಿಸಲಾಗಿದೆ.

ಖಚಿತವಾಗಿ ಕಾಲಶಿಳಿಯಂದ ಈ ಕೃತಿಯು ವೇತಾಳಪಂಚವಿಂಶತಿಕೆಗಿಂತ ಈಚಿನದೆಂದು ಎ. ಬಿ. ಕೀತರು ಅಭಿಪ್ರಾಯಪಡುತ್ತಾರೆ. ಇದರಲ್ಲಿರುವ ಒಂದು ಕಥೆಯಲ್ಲಿ ದೊರೆಯು ತನ್ನ ಪ್ರಿಯಪತ್ನಿಗೆ ವೃದ್ಧಾಪ್ಯವನ್ನು ಬರದಂತೆ ಮಾಡುವ ಒಂದು ಹಣ್ಣನ್ನು ಕೊಡುತ್ತಾನೆ; ಅವಳು ಅದನ್ನು ಕುದುರೆಗಳ ಮೇಲ್ವಿಚಾರಕನಿಗೂ, ಅವನು ಅದನ್ನು ವೇಶ್ಯೆಗೂ ಕೊಡುತ್ತಾರೆ; ಇದನ್ನು ತಿಳಿದು ಜುಗುಪ್ಸೆಗೊಂಡ ದೊರೆಯು ಸಿಂಹಾಸನವನ್ನು ತ್ಯಜಿಸುತ್ತಾನೆ.

ಶುಕಸಪ್ತತಿ :—

170 ಕಥೆಗಳನ್ನುಳ್ಳ ಈ ಕೃತಿಯು ಅಜ್ಞಾತಕಾಲದ ಮೂರು ಸಂಸ್ಕರಣಗಳಲ್ಲಿ ದೊರೆಯುತ್ತದೆ. ಪ್ರಕೃತ ಪ್ರಚಾರದಲ್ಲಿರುವ ಶುಕಸಪ್ತತಿಯ ರೂಪವು ಸಾಕಷ್ಟು ವ್ಯತ್ಯಾಸದ ಫಲವಾಗಿ ಉಳಿದುದು. ಜೈನ ಹೇಮಚಂದ್ರನಿಗೆ ಒಂದಲ್ಲ ಒಂದು ರೂಪದಲ್ಲಿ ಶುಕಸಪ್ತತಿಯ ಪರಿಚಯ ಇದ್ದಿತೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಚಿಂತಾಮಣಿಭಟ್ಟನ ಸಂಸ್ಕರಣವು ಪೂರ್ಣಭದ್ರನ ಜೈನ ಪಂಚತಂತ್ರದಿಂದ ಉಪಕೃತವಾಗಿದೆ. ಪಂಚತಂತ್ರವು ಪ್ರಾಚೀನ ಶುಕಸಪ್ತತಿಯ ಮೂಲದಿಂದ ಅಪ್ರಾಮಾಣಿಕರಾದ ಹೆಂಡತಿಯರ ಕಥೆಗಳನ್ನು ತೆಗೆದುಕೊಂಡಿದೆ ಎಂಬ ಅಭಿಪ್ರಾಯವೂ ಇದೆ. ಪದ್ಯರೂಪವಾದ ಶುಕಸಪ್ತತಿಯ ಮೂಲದಿಂದ ಶ್ವೇತಾಂಬರ ಜೈನನಸಂಸ್ಕರಣ ರಚಿತವಾಗಿರಬೇಕು. ಇದರಲ್ಲಿರುವ ಪ್ರಾಕೃತಪದ್ಯಗಳು ಮೂಲಪ್ರಾಕೃತದಲ್ಲಿರಬೇಕೆಂಬ ಊಹೆಗೆ ಎಡೆಕೊಟ್ಟಿವೆ. ಪುರುಷೋತ್ತಮದೇವನ ಮಗನಾದ ದೇವದತ್ತನು ಸಂಸ್ಕೃತ ಮೂಲದಿಂದ ಒಂದು ಸಂಸ್ಕರಣವನ್ನು ರಚಿಸಿದ್ದಾನೆ. ಶುಕಸಪ್ತತಿಯ ಮೂಲರೂಪವು ನೀತಿ ಪದ್ಯಗಳಿಂದ ಕೂಡಿದ ಗದ್ಯವಾಗಿರಬೇಕೆಂದೂ, ಪ್ರತಿಯೊಂದು ಕಥೆಯ ಆದ್ಯಂತಗಳಲ್ಲಿರಬಹುದಾದ ಪದ್ಯಗಳೂ ಕಥೆಯನ್ನೇ ತಿಳಿಸುತ್ತವೆಯೆಂದೂ ವಿಮರ್ಶಕರು ಊಹಿಸುತ್ತಾರೆ.

ನಾರದನು ಶುಕರೂಪವಾಗಿ ಆಸ್ಥಾನದಲ್ಲಿಇಂದ್ರನಿಗೆ ಕಥೆಗಳನ್ನು ಹೇಳಿದನೆಂದೂ, ಇವುಗಳ ಶ್ರವಣದಿಂದ ಚತುರ್ವರ್ಗ ಲಾಭವಾಗುವುದೆಂದೂ ಹೇಳಿಕೆಯಿದೆ. ತನ್ನ ಹೆಂಡತಿಯನ್ನು ಬಹಳ ಪ್ರೀತಿಸುತ್ತಿದ್ದ ದೇವದಾಸನು ತಾನು ಸಾಕಿದ್ದ ಗಿಳಿಗೆ ಅವಳ ರಕ್ಷಣೆಯ ಭಾರವನ್ನು ವಹಿಸಿ ದೂರ ದೇಶಕ್ಕೆ ತೆರಳಿದನು. ಅವನಿಲ್ಲದಿದ್ದಾಗ ಅವಳು ದೊರೆಯೊಡನೆ ರತಿಸುಖವನ್ನು ಬಯಸಿದಳು. ಆಗ ಗಿಳಿಯು ಪ್ರತಿ ರಾತ್ರಿ ಬೆಳಗಾಗುವವರೆಗೆ ಕಥೆಯೊಂದನ್ನು ಹೇಳಿ, ಅದರ ಚಮತ್ಕಾರದಿಂದ ಅವಳ ಕಾಮಲಾಲಸೆಯನ್ನು ಮರೆಸುತ್ತಿದ್ದಿತು. 70 ಕಥೆಗಳು ಮುಗಿಯುವ ವೇಳೆಗೆ ಗಂಡನು ಹಿಂದಿರುಗಿದ್ದರಿಂದ ಯಾವ ಅನರ್ಥವೂ ಜರುಗಲಿಲ್ಲ.

ಈ ಕೃತಿಯಲ್ಲಿ ಕಾಮುಕಥೆಗಳಿದ್ದರೂ ಅವು ನೀತಿ ಬೋಧೆಯಲ್ಲಿ ಮುಳುಗುತ್ತವೆ. ವೈವಾಹಿಕ ಸಂಬಂಧದ ಮರಿಯಾದೆಯನ್ನವಲಂಬಿಸಿ ಬಹಳ ಕಥೆಗಳು ರಚಿತವಾಗಿವೆ. ವಿಟ ವೇಶ್ಯೆಯರ ಚಾತುರ್ಯದ ಕಥೆಗಳು ಇವೆ. ಸಾಲೋಮನ್ನನ ನ್ಯಾಯನಿರ್ಣಯ ಪ್ರಸಂಗವನ್ನೂ ಈ ಕಥೆಗಳಲ್ಲಿ ಕಾಣುತ್ತೇವೆ. ಇಲ್ಲಿರುವ ಹೆಂಡತಿಯರು ತಮ್ಮಿಂದ ದೂರದಲ್ಲಿರುವ ಗಂಡಂದಿರಲ್ಲಿ ಅವಿಶ್ವಾಸ ತಾಳುತ್ತಾರೆ; ವಿರಸಗೊಳ್ಳುತ್ತಾರೆ. ಎಷ್ಟೋ ಸಾರಿ ಅತಿಯಾದ ಧರ್ಮಶ್ರದ್ಧೆಯು ಅನೀತಿಗೆ ಅವಕಾಶ ಕಲ್ಪಿಸುತ್ತದೆ. ಧಾರ್ಮಿಕಸಮಾರಂಭ, ದೇವಾಲಯ, ಯಾತ್ರೆ, ವಿವಾಹ, ಯಾಗ ಮುಂತಾದುವುಗಳನ್ನು ಕಥೆಗಳ ಬೆಳವಣಿಗೆಗೆ ಬಳಸಿಕೊಳ್ಳಲಾಗಿದೆ.



ವೇತಾಳಪಂಚವಿಂಶತಿ :

25 ಕಥೆಗಳಿರುವುದರಿಂದ ಈ ಕೃತಿಗೆ ವೇತಾಳಪಂಚವಿಂಶತಿಯೆಂಬ ಹೆಸರು ಬಂದಿದೆ. ಬಹಳಪ್ರಾಚೀನವಾದ ಇದರ ಕಥೆಗಳು ಕ್ಷೇಮೇಂದ್ರನ ಬೃಹತ್ಕಥಾಮಂಜರಿಯಲ್ಲಿಯೂ, ಸೋಮದೇವನ ಕಥಾಸರಿತ್ಸಾಗರದಲ್ಲಿಯೂ ಬಂದಿವೆ. ಈ ಕೃತಿಯು ಅನೇಕ ಪರಿಷ್ಕರಣಗಳಲ್ಲಿ ಸ್ವತಂತ್ರವಾಗಿಯೂ ದೊರೆಯುತ್ತದೆ. ಶಿವದಾಸನಿಂದ ರಚಿತವಾದ ಸಂಸ್ಕರಣವು ಗದ್ಯ ಮತ್ತು ಪದ್ಯಗಳನ್ನು ಹೊಂದಿದೆ. ಬಹಳಮಟ್ಟಿಗೆ ಇದು ಮೂಲವನ್ನು ಪ್ರತಿನಿಧಿಸುತ್ತದೆಂದು ಭಾವಿಸಲಾಗಿದೆ. ಬೃಹತ್ಕಥಾಮಂಜರಿಯನ್ನು ಆಧರಿಸಿ ಅಜ್ಞಾತಕವಿಯಿಂದ ರಚಿತವಾದ ಒಂದು ಸಂಸ್ಕರಣವು ಗದ್ಯರೂಪದಲ್ಲಿದೆ. ಜಂಬಾಲದತ್ತನಿಂದ ರಚಿತವಾದ ಸಂಸ್ಕರಣವು ಗದ್ಯರೂಪವಾಗಿದೆ. ವಲ್ಲಭದಾಸನಿಂದ ಸಂಗ್ರಹರೂಪವಾಗಿ ರಚಿತವಾದ ಒಂದು ಸಂಸ್ಕರಣದಿಂದ ವೇತಾಳಪಂಚವಿಂಶತಿಯು ಅನೇಕ ಭಾರತೀಯ ಭಾಷೆಗಳಿಗೂ ಬಂದಿದೆ. ಮಂಗೋಲಿಯಾ ಭಾಷೆಗೂ ಈ ಕಥೆಗಳು ಹೋಗಿವೆ. ವೆಂಕಟಭಟ್ಟನಿಂದ ರಚಿತವಾದ ವೇತಾಳವಿಂಶತಿ ಎಂಬ ಕೃತಿಯೂ ಇದೆ.

ದೊರೆಯಾದ ತ್ರಿವಿಕ್ರಮಸೇನನು (ವಿಕ್ರಮಾದಿತ್ಯ) ಪ್ರತಿವರ್ಷ ಒಬ್ಬ ಯತಿಯು ತನಗೆ ಸಮರ್ಪಿಸುತ್ತಿದ್ದ ಒಂದು ಹಣ್ಣನ್ನು ಭಂಡಾರಿಯ ವಶಕ್ಕೆ ಕೊಡುತ್ತಿದ್ದನು. ಅದರಲ್ಲಿ ಅಮೂಲ್ಯ ರತ್ನವಿರುವುದು ಒಂದುದಿನ ದೊರೆಯ ಗಮನಕ್ಕೆ ಬಂದಿತು. ಆಗ ಅವನು ಯತಿಗೆ ಸಹಾಯ ಮಾಡಲು ಇಚ್ಛಿಸಿದನು. ಯತಿಯು ಸ್ಮಶಾನದಲ್ಲಿ ಒಂದು ಮರದ ಮೇಲಿರುವ ಶವವನ್ನು ತನಗಾಗಿ ತರುವಂತೆ ಅವನನ್ನು ಕೇಳಿಕೊಂಡನು. ದೊರೆಯು ಶವವನ್ನಿಳಿಸಿಕೊಂಡು ಹೊತ್ತು ತರುತ್ತಿದ್ದಾಗ ಅದರಲ್ಲಿದ್ದ ಬೇತಾಳವು ದಾರಿಯುದ್ದಕ್ಕೂ ಒಂದು ಕಥೆಯನ್ನು ಹೇಳಿ ಕೊನೆಗೆ ಬಿಡಿಸಲು ಒಂದು ಸಮಸ್ಯೆಯನ್ನು ಒಡ್ಡುತ್ತಿತ್ತು. ದೊರೆಯು ಉತ್ತರ ಹೇಳಿದ ಕೂಡಲೇ ಶವವು ಕೆಳಕ್ಕೆ ಬಿದ್ದು ಮರವನ್ನು ಸೇರುತ್ತಿದ್ದಿತು. ಕೊನೆಗೆ ಒಂದು ಸಮಸ್ಯೆಯನ್ನು ಬಿಡಿಸಲಾರದೆ ದೊರೆಯು ಸೋತನು. ಆಗ ಬೇತಾಳವು ದೊರೆಯನ್ನು ಬಲಿಕೊಡಬೇಕೆಂಬ ಯತಿಯ ದುರುದ್ದೇಶವನ್ನು ತಿಳಿಸಿತು. ವಿಚಾರ ತಿಳಿದ ದೊರೆಯು ಯಜ್ಞದಲ್ಲಿ ಶವಹೊತ್ತು ಪ್ರಯಾಣ ಮಾಡಬೇಕಾದ ಬಗೆಯನ್ನು ಆಚರಿಸಿ ತೋರಿಸುವಂತೆ ಯತಿಯನ್ನು ಕೇಳಿಕೊಂಡನು. ಒಪ್ಪಿ ಯತಿಯು ಬಗ್ಗಿದಾಗ ಅವನ ತಲೆಯನ್ನು ಕಡಿದು ದೊರೆಯೇ ಅಗ್ನಿಗರ್ಪಿಸಿದನು.

ಬಿಡಿಸುವಂತೆ ಬೇತಾಳವು ಕೇಳುವ ಪ್ರಶ್ನೆಗಳು ಕುತೂಹಲಜನಕವಾಗಿವೆ. ಶಿವದಾಸನ ಸಂಸ್ಕರಣದಲ್ಲಿ ನಾನಾಮೂಲಗಳಿಂದ ತೆಗೆದುಕೊಂಡ ಸುಂದರವಾದ ಸುಭಾಷಿತಗಳಿವೆ. ಇವುಗಳಲ್ಲಿ ರುದ್ರಭಟ್ಟನ ಪದ್ಯಗಳೂ ಇವೆ. ಕಥೆಯನ್ನು ತಿಳಿಸುವ ಪದ್ಯಗಳೂ ಇರುವುದರಿಂದ ಈ ಕೃತಿಯು ಚಂಪೂರೂಪವಾಗಿದೆ. ಈ ಕೃತಿಯು ಕ್ರಿ. ಶ. 12ನೆಯ ಶತಮಾನಕ್ಕಿಂತ ಪ್ರಾಚೀನವಲ್ಲ. ಉದಾಹರಣೆಗಾಗಿ ಶಬ್ದ ಚಮತ್ಕಾರವನ್ನುಳ್ಳ ಒಂದು ಪದ್ಯವನ್ನಿಲ್ಲಿ ಕೊಡಲಾಗಿದೆ :—

ಸ ಧೂರ್ಜಟಿಜಟಾಜೂಟೋ ಜಾಯತಾಂ ವಿಜಯಾಯ ವಃ ।
ಯತ್ರೈಕಪಲಿತಭ್ರಾಂತಿಂ ಕರೋತ್ಯದ್ಯಾಪಿ ಜಾಹ್ನವೀ ॥

## ಚಂಪೂಕಾವ್ಯಗಳು

ಗದ್ಯಪದ್ಯ ಸಂಮಿಶ್ರವಾದ ಕಾವ್ಯಭೇದವು ಚಂಪೂ ಎಂದು ಪ್ರಸಿದ್ಧವಾಗಿದೆ. ಚಂಪೂ ಶಬ್ದದ ಮೂಲವೇನು ? ಇದು ಯಾವಾಗ ಬಳಕೆಗೆ ಬಂದಿತು ?—ಎಂಬುದು ನಿಶ್ಚಿತವಾಗಿಲ್ಲ. ನಮಗೆ ತಿಳಿದಂತೆ ದಂಡಿಯು ಮೊದಲು,

ಗದ್ಯಪದ್ಯಮಯೀ ಕಾಚಿಚ್ಚಂಪೂರಿತ್ಯಭಿಧೀಯತೇ ॥

—ಕಾವ್ಯ 1-31

ಎಂದಿದ್ದಾನೆ. ದಂಡಿಯ ಕಾಲದಲ್ಲಿ (ಕ್ರಿ. ಶ. 6ನೆಯ ಶತಕ) ಚಂಪೂಕಾವ್ಯಗಳು ಇದ್ದವು. ಅವು ಕಾಲಮಹಿಮೆಯಿಂದ ಲುಪ್ತವಾಗಿವೆ. ನಮಗೆ ಉಪಲಬ್ಧವಾದ ಪ್ರಥಮಚಂಪುವೆಂದರೆ 10ನೆಯ ಶತಕದಲ್ಲಿ ರಚಿತವಾದ ತ್ರಿವಿಕ್ರಮಭಟ್ಟನ ನಳಚಂಪೂ.

'ಚಮತ್ಕೃತ್ಯ ಪುನಾತಿ ಸಹೃದಯಾನ್ ವಿಸ್ಮಯೀಕೃತ್ಯ ಪ್ರಸಾದಯತಿ ಇತಿ ಚಂಪೂಃ' ಎಂದು ಶ್ರೀಹರಿದಾಸಭಟ್ಟಾಚಾರ್ಯರು ಚಂಪೂಶಬ್ದದ ವ್ಯುತ್ಪತ್ತಿಯನ್ನು ಹೇಳುತ್ತಾರೆ. 'ಚಪಿ ಗತ್ಯಾಂ' ಎಂಬ ಧಾತುವಿದೆ. ಚಂಪಾ, ಚಾಂಪೇಯ, ಚಂಪಕ, ಚಂಪಾಲು ಶಬ್ದಗಳಂತೆ ಚಂಪೂಶಬ್ದವೂ ಈ ಧಾತುವಿನಿಂದ ನಿಷ್ಪನ್ನವಾಗಿರಬಹುದು. 'ಚಂಪಯತಿ ರಸಭಾವಾದಿ ವಿಶಿಷ್ಟಂ ವಸ್ತು ಪ್ರಕಾಶಯತಿ ಇತಿ ಚಂಪೂಃ' ಎಂದು ನಿಷ್ಪತ್ತಿಯನ್ನು ಹೇಳಲು ಸಾಧ್ಯ. 'ಪ್ರಾಣೈಃ ಪೀಚ್ಚಂಪುಭಾರತಂ' (ಅನಂತಭಟ್ಟ). 'ಚಂಪು' ಎಂದು ಹ್ರಸ್ವಾಂತವೂ ಇದೆ. ಹತ್ತನೆಯ ಶತಮಾನದ ಕನ್ನಡ ಕವಿಗಳ ಈಗ ಉಪಲಬ್ಧವಾಗಿರುವ ಆದ್ಯಚಂಪೂಕಾವ್ಯಗಳು ಹತ್ತನೆಯ ಶತಮಾನದ ಕನ್ನಡ ಕವಿಗಳ ಕೃತಿಗಳಾಗಿರುವುದರಿಂದಲೂ ದಾಕ್ಷಿಣಾತ್ಯರಿಂದಲೇ ಈ ಬಗೆಯ ಪ್ರಬಂಧಗಳು ಹೆಚ್ಚು ರಚಿತವಾಗಿರುವುದರಿಂದಲೂ ಅಚ್ಚಗನ್ನಡದ ಇಂಪು, ಅಲಂಪು, ಸೊಂಪು, ಕಂಪು ಮುಂತಾದ ಶಬ್ದಗಳೊಡನೆ ಚಂಪು ಎಂಬ ಶಬ್ದವು ಶ್ರುತಿಸಾಮ್ಯವನ್ನು ಪಡೆದಿರುವುದರಿಂದಲೂ ಇದು ಕನ್ನಡ ಶಬ್ದವಾಗಿರಬೇಕೆಂದೂ ಸಂಸ್ಕೃತದವರು ಕನ್ನಡಿಗರಿಂದಲೇ ಈ ಹೆಸರನ್ನು ಎತ್ತಿಕೊಂಡಿರಬೇಕೆಂದೂ ಕೆಲವರು ವಿದ್ವಾಂಸರು ಊಹಿಸಿದ್ದಾರೆ.

ಈ ಊಹೆಗೆ ಆಧಾರ ಸಾಲದು. ಶ್ರುತಿಸಾಮ್ಯವು ಚಂಪಾ ಚಂಪಕಾದಿ ಸಂಸ್ಕೃತ ಶಬ್ದಗಳೊಡನೆಯೂ ಉಂಟು. 6ನೆಯ ಶತಕಕ್ಕಿಂತ ಪೂರ್ವದಲ್ಲಿ ಚಂಪೂಗ್ರಂಥಗಳು ಸಂಸ್ಕೃತದಲ್ಲಿದ್ದವೆಂದು ದಂಡಿಯ ಮಾತಿನಿಂದ ಸ್ಪಷ್ಟವಾಗಿದೆ. ಕನ್ನಡದಲ್ಲಿ ಪ್ರಥಮ ಕಾವ್ಯಲಕ್ಷಣಗ್ರಂಥವಾದ ಕವಿರಾಜಮಾರ್ಗದಲ್ಲಾಗಲಿ (9ನೆಯ ಶತಮಾನ) ದಂಡಿಯಮತವನ್ನನುಸರಿಸಿದ್ದೇನೆಂದು ಹೇಳುವ ನಾಗವರ್ಮನ ಕಾವ್ಯಾವಲೋಕನ (12ನೆಯ ಶತಮಾನ) ದಲ್ಲಾಗಲಿ ಚಂಪುವಿನ ಪ್ರಸ್ತಾವ ಇಲ್ಲ. ಕನ್ನಡ ಚಂಪೂಗ್ರಂಥಗಳಾದ ಪಂಪನ ವಿಕ್ರಮಾರ್ಜುನವಿಜಯ ನಾಗವರ್ಮನ ಕಾದಂಬರಿ, ರನ್ನನ ಗದಾಯುದ್ಧ ಮೊದಲಾದವುಗಳನ್ನು ಆಯಾ ಕವಿಗಳು ಚಂಪುವೆಂದು ಹೆಸರಿಸಿಲ್ಲ. ವಿಕ್ರಮಾರ್ಜುನವಿಜಯಚಂಪೂ, ಕಾದಂಬರೀಚಂಪೂ, ಗದಾಯುದ್ಧಚಂಪೂ ಇತ್ಯಾದಿ



ಪ್ರಸಿದ್ಧಿಯೂ ಇಲ್ಲ. ಚಂಪೂಶಬ್ದವು ಕನ್ನಡದಲ್ಲಿ ಬಳಕೆಯಿತ್ತೆಂಬುದಕ್ಕೆ ಆಧಾರವೇನೂ ಇಲ್ಲ. ಇದ್ದರೆ ಕನ್ನಡಲಾಕ್ಷಣಿಕರಾಗಲಿ, ಕನ್ನಡಕವಿಗಳಾಗಲಿ ಅದನ್ನೇಕೆ ಉಪಯೋಗಿಸಲಿಲ್ಲವೆಂಬ ಪ್ರಶ್ನೆ ನಿರುತ್ತರವಾಗುತ್ತದೆ. ದಂಡಿಯ ಅನಂತರ ಹೇಮಚಂದ್ರ, ವಾಗ್ಭಟ, ವಿಶ್ವನಾಥ ಮೊದಲಾದವರು ಚಂಪೂವನ್ನು ಲಕ್ಷಿಸಿದ್ದಾರೆ. ಡಾ॥ ಛವಿನಾಥತ್ರಿಪಾಠಿಯವರು ಆ ಲಕ್ಷಣಗಳಲ್ಲಿ ಅವ್ಯಾಪ್ತಿ ಮುಂತಾದ ದೋಷಗಳನ್ನು ಶಂಕಿಸಿ. ತಾವೇ ಒಂದು ಪರಿಷ್ಕೃತಲಕ್ಷಣಗಳನ್ನು ಹೀಗೆ ನಿರ್ಮಿಸಿದ್ದಾರೆ.

ಗದ್ಯಪದ್ಯಮಯಂ ಶ್ರವ್ಯಂ ಸಬಂಧಂ ಬಹುವರ್ಣಿತಂ ।
ಸಾಲಂಕೃತಂ ರಸೈಃ ಸಿಕ್ತಂ ಚಂಪೂಕಾವ್ಯಮುದಾಹೃತಂ* ॥

ಗದ್ಯಪದ್ಯಮಯವಾದ ಶ್ರವ್ಯಕಾವ್ಯ ಚಂಪೂ ಎಂದರೆ ಸಾಕೆನಿಸುತ್ತದೆ. ನಾಟಕಗಳಲ್ಲಿ ಶ್ರವ್ಯಗಳಿಲ್ಲ. ಪಂಚತಂತ್ರ, ಬಿರುದಾವಳಿ ಮೊದಲಾದವು ಕಾವ್ಯಗಳಲ್ಲ. ಹರಿಷೇಣನ ಸಮುದ್ರಗುಪ್ತ ಪ್ರಶಸ್ತಿ(ಕ್ರಿ. ಶ. 350)ಯನ್ನು ಕಾವ್ಯವೆನ್ನುವುದಾದರೆ 'ಚಂಪೂ' ಎಂಬ ಕಾವ್ಯಜಾತಿಗೆ ಸೇರುತ್ತದೆ.

### ಮಿಶ್ರರಚನೆಯ ಉದ್ಗಮ—ವಿಕಾಸ

ಗದ್ಯಪದ್ಯಗಳ ಮಿಶ್ರರಚನೆ ಬ್ರಾಹ್ಮಣಗಳಲ್ಲಿಯೇ ಕಂಡುಬರುತ್ತದೆ. ಐತರೇಯಬ್ರಾಹ್ಮಣದ ಹರಿಶ್ಚಂದ್ರೋಪಾಖ್ಯಾನ ಮುಖ್ಯ ಉದಾಹರಣೆ. ಆರಣ್ಯಕವು ಸಾಮಾನ್ಯವಾಗಿ ಗದ್ಯದಲ್ಲಿದೆ. ಕೇನೋಪನಿಷತ್ತಿನ ಯಕ್ಷೋಪಾಖ್ಯಾನದಲ್ಲಿಯೂ ಕಠೋಪನಿಷತ್ತಿನ ನಚಿಕೇತನ ಪ್ರಕರಣದಲ್ಲಿಯೂ ಮಿಶ್ರರಚನೆಯುಂಟು. ಮಹಾಭಾರತದ ಆದಿಪರ್ವಾಂತರ್ಗತ ಪೌಷ್ಯಪರ್ವದಲ್ಲಿ ವಿಶೇಷವಾಗಿ, ಉಳಿದೆಡೆ ವಿರಳವಾಗಿ ಗದ್ಯಪದ್ಯಗಳ ಸಂಮಿಶ್ರಣವನ್ನು ಕಾಣಬಹುದು. ವಿಷ್ಣು ಪುರಾಣ ಭಾಗವತಗಳಲ್ಲಿಯೂ ಅಲ್ಲಲ್ಲಿ ಮಿಶ್ರ ಶೈಲಿ ಇದೆ. ಕ್ರಿಸ್ತನ ಪೂರ್ವೋತ್ತರ ಶತಕಗಳಲ್ಲಿ ರಚಿತವಾದ ಪಾಳೀಭಾಷೆಯ ಜಾತಕಕಥೆಗಳಲ್ಲಿಯೂ ಇದನ್ನು ಕಾಣಬಹುದು. ಸಂಸ್ಕೃತದಲ್ಲಿರುವ ಅವದಾನಶತಕ ಜಾತಕ—ಮಾಲೆಗಳಲ್ಲಿ ಭಾಷೆ ಪ್ರೌಢವಾಗುತ್ತ ಬಂದು ಚಂಪೂಕಾವ್ಯದ ಶೈಲಿಗೆ ಸಮೀಪವಾದ ಭಾಷೆಯನ್ನು ಕಾಣಬಹುದಾಗಿದೆ. ಕಥೆಯ ಮೂಲಕ ನೀತಿಯನ್ನು ಉಪದೇಶಿಸುವುದೇ ಪ್ರಧಾನವಾದ್ದರಿಂದ ಪ್ರಬಂಧಾತ್ಮಕವಾದ ವಿಸ್ತೃತ ವರ್ಣನೆ ಇವುಗಳಲ್ಲಿಲ್ಲ. ಮಾದರಿಗಾಗಿ ಜಾತಕಮಾಲೆಯ ಒಂದು ಪದ್ಯವನ್ನಿಲ್ಲಿ ಉದಾಹರಿಸಿದೆ. ಮೈತ್ರಬಲನೆಂಬ ರಾಜನ ವರ್ಣನೆ ಇದು :—

ಕನಕಗಿರಿಶಿಲಾವಿಶಾಲವಕ್ಷಾಃ ಶರದಮಲೇಂದುಮನೋಜ್ಞವಕ್ತ್ರಶೋಭಃ ।
ಕನಕಪರಿಘಪೀನಲಂಬಬಾಹುಃ ವೃಷಭನಿಭೇಕ್ಷಣವಿಕ್ರಮೋ ನರೇಂದ್ರಃ ॥

ಇವುಗಳಲ್ಲಿ ಚಂಪುವಿನ ಗದ್ಯವನ್ನು ಹೋಲುವ ಸಮಾಸಭೂಯಿಷ್ಠವಾದ ಗದ್ಯಪಂಕ್ತಿಯೂ ಕಂಡುಬರುತ್ತದೆ.

---

* ಚಂಪೂಕಾವ್ಯಕಾ ಆಲೋಚನಾತ್ಮಕ ಏವಂ ಸೇತಿಹಾಸಿಕ ಅಧ್ಯಯನ. ಪೃ. 49.

ಗದ್ಯಪಂಕ್ತಿಗೆ ಉದಾಹರಣೆ : "ಕ್ರಮೇಣ ಚಾಪಜಗಾಹಿರೇ ವಿವಿಧ-ವಿಮಾನಕುಲ-ವಿಚರಿತ ಮನಿಭೃತಜಲಕಲಕಲಾರಾವಮನಿಲಬಲವಿಲಾಸಪ್ರವಿಚಲಿತ-ತರಂಗ-ಬಹುವಿಧರತ್ನೈರ್ಭೂಮಿ ವಿಶೇಷೈರರ್ಪಿತರಂಗಫೇನಾವಲೀಕುಸುಮದಾಮ ವಿಚಿತ್ರಮಸುರವಾಸ-ಭುಜಗಭವನಂ ದುರಾಪ ಪಾತಾಲಮಪ್ರಮೇಯತೋಯಂ ಮಹಾಸಮುದ್ರಮ್"

—ಸುಪಾರಗ ಜಾತಕಮ್

## ಶಿಲಾಲೇಖಗಳಲ್ಲಿ ಸಂಮಿಶ್ರಶೈಲಿ :

ಕ್ರಿ. ಪೂ. ದ ನಾರಾಯಣ ವಾಟಿಕಾಪ್ರಶಸ್ತಿ, ಕ್ರಿ, ಶ, 2ನೇ ಶತಮಾನದ ರುದ್ರದಾಮನ ಗಿರನಾರಶಿಲಾಶಾಸನಗಳಲ್ಲಿ ದೀರ್ಘ ಸಮಾಸದ ಗದ್ಯವನ್ನು ಕಾಣಬಹುದು. ಕ್ರಿ. ಶ. 360ರ ಹರಿಷೇಣನ ಸಮುದ್ರಗುಪ್ತ ಪ್ರಶಸ್ತಿಯಲ್ಲಿ ಗದ್ಯಪದ್ಯಗಳ ಬಂಧವು ಇನ್ನೂ ಪ್ರೌಢವಾಗಿದ್ದು ಚಂಪೂಗ್ರಂಥಗಳ ಶೈಲಿಯ ಪ್ರಥಮೋದಾಹರಣೆಯಾಗಿದೆ. ಇದರ ಆರಂಭದಲ್ಲಿ ಸ್ರಗ್ಧರಾ, ಶಾರ್ದೂಲವಿಕ್ರೀಡಿತಗಳಂಥ 8 ದೊಡ್ಡ ವೃತ್ತಗಳಿವೆ. ಇದರಲ್ಲಿ ಸಮುದ್ರಗುಪ್ತನ ಕೀರ್ತಿ ವರ್ಣಿತವಾಗಿದೆ. ಅನಂತರ ಬೃಹತ್ತಾದ ಒಂದು ಗದ್ಯದಲ್ಲಿ ಅವನ ದಿಗ್ವಿಜಯದ ವರ್ಣನೆಯುಂಟು. ಕಡೆಯಲ್ಲಿ 2 ಶ್ಲೋಕಗಳಿವೆ. ಹೀಗೆ ಕ್ರಿ.ಶ. 10ನೇ ಶತಕದವರೆಗಿನ ಇನ್ನಿತರ ಶಿಲಾಲೇಖಗಳಲ್ಲಿಯೂ ಸಂಮಿಶ್ರಶೈಲಿಯಲ್ಲಿ ಸಾಲಂಕಾರವಾದ ವರ್ಣನೆಗಳು ಕಂಡುಬರುತ್ತವೆ. ಇವುಗಳಲ್ಲಿ ಗದ್ಯಭಾಗವೇ ಅಧಿಕ. 11ನೇ ಶತಮಾನಕ್ಕೆ ಸೇರಿದ ಒಂದು ಜೈನಶಿಲಾ ಲೇಖದಲ್ಲಿ 72 ಶ್ಲೋಕಗಳೂ ಕೆಲವು ಚೂರ್ಣಿಕೆಗಳೂ ಇದ್ದು ಲೇಖವು ಪದ್ಯ ಪ್ರಚುರವಾಗಿದೆ.

ಹೀಗೆ ಚಂಪೂಸದೃಶವಾದ ಪ್ರೌಢಶೈಲಿಯು ಬೆಳೆಯುತ್ತಿರುವಾಗಲೇ ಜೊತೆಜೊತೆಯಾಗಿ ಪಂಚತಂತ್ರ, ಹಿತೋಪದೇಶ, ವಿಕ್ರಮಾರ್ಕಚರಿತ, ಶುಕಸಪ್ತತಿ ಮುಂತಾದ ಕಥೆಗಳೂ, ಅಶ್ವಘೋಷ, ಭಾಸ, ಕಾಳಿದಾಸಾದಿಗಳ ನಾಟಕಗಳೂ ಲಲಿತವಾದ ಮಿಶ್ರಶೈಲಿಯಲ್ಲಿಯೇ ರಚಿತವಾಗುತ್ತಿದ್ದವೆಂಬುದನ್ನು ಗಮನಿಸಬೇಕಾಗುತ್ತದೆ. ಭಾಷೆಯ ಲಾಲಿತ್ಯ ಪ್ರೌಢಿಮೆಗಳಿಗೆ ಕವಿಗಳು ರಚಿಸಲು ಉದ್ದೇಶಿಸಿದ ಗ್ರಂಥ ಪ್ರಕಾರಗಳೇ ಮುಖ್ಯ ಕಾರಣವೆಂದು ತಿಳಿಯಬೇಕಾಗುತ್ತದೆ.

## ಚಂಪೂಕಾವ್ಯಗಳ ವೈಶಿಷ್ಟ್ಯ

ಕೇವಲ ಪದ್ಯ ಅಥವಾ ಕೇವಲ ಗದ್ಯಕ್ಕಿಂತ ಉಭಯಮಿಶ್ರಣವು ಹೆಚ್ಚು ಆಕರ್ಷಕವೆಂಬ ಭಾವನೆ ಚಂಪೂರಚನೆಗೆ ಪ್ರೇರಕವಾಗಿರಬೇಕು. ಗದ್ಯಸಹಿತವಾದ ಪದ್ಯವು ವೀಣಾದಿವಾದ್ಯ ಸಹಿತವಾದ ಸಂಗೀತವಿದ್ದಂತೆ ಎನ್ನುತ್ತಾನೆ ಭೋಜರಾಜ.

ಗದ್ಯಾನುಬಂಧರಸಮಿಶ್ರಿತಪದ್ಯಸೂಕ್ತಿಃ
ಹೃದ್ಯಾಹಿ ವಾದ್ಯಕಲಯಾ ಕಲಿತೇವ ಗೀತಿಃ ॥

'ಗದ್ಯಪದ್ಯಗಳ ಮಿಶ್ರಣ ಆಹ್ಲಾದಕಾರಿ. ದ್ರಾಕ್ಷಿ-ಜೇನು ಸೇರಿದರೆ ಯಾರಿಗೆ ರುಚಿಸದೆ ಇದ್ದೀತು ?' ಎಂದು ಕೇಳುತ್ತಾನೆ ವೆಂಕಟಾಧ್ವರಿ—

ಅದತ್ತೇ ಹಿ ತಯೋಃ ಪ್ರಯೋಗ ಉಭಯೋರಾಮೋದಭೂಮೋದಯಂ
ಸಂಗಃ ಕಸ್ಯ ಹಿ ನ ಸ್ವದೇತ ಮನಸೇ ಮಾಧ್ವೀಕಮೃದ್ವೀಕಯೋಃ ॥

ವಿಶ್ವ 1-4



ಚಂಪೂಕವಿಗಳಿಗೆ ಇನ್ನೊಂದು ಸೌಕರ್ಯವಿದೆ. ಒಂದು ಸ್ತಬಕದಲ್ಲಿ ಅಥವಾ ಉಚ್ಛ್ವಾಸದಲ್ಲಿ ಒಂದೇ ಬಗೆಯ ವೃತ್ತವನ್ನು ರಚಿಸಬೇಕಾಗಿದೆ. ಯಾವ ವೃತ್ತವನ್ನು ಎಲ್ಲಿಯಾದರೂ ಬಳಸಬಹುದು. ಪೂರ್ವಾಪರ ಸಂಬಂಧವನ್ನು ಒಂದು ಗದ್ಯವಾಕ್ಯದಲ್ಲಿ ಜೋಡಿಸಬಹುದು. ಛಂದಸ್ಸಿನ ನಿರ್ಬಂಧವಿಲ್ಲದೆ ಗದ್ಯದಲ್ಲಿ ಯಥೇಚ್ಛವಾಗಿ ಯಮಕಾನುಪ್ರಾಸಗಳನ್ನು ತರಬಹುದು. ಅಲ್ಲದೆ ಗದ್ಯಪದ್ಯಗಳೆರಡರಲ್ಲಿಯೂ ತಮ್ಮ ರಚನಾಸಾಮರ್ಥ್ಯವನ್ನು ಒಂದೇ ಗ್ರಂಥದಲ್ಲಿ ಪ್ರಕಟಿಸಬಹುದೆಂಬ ಉದ್ದೇಶವೂ ಚಂಪೂರಚನೆಗೆ ಪ್ರೇರಕವಾಗಿರಬೇಕು.

ಚಂಪೂಗಳಲ್ಲಿ ಅಂತರ್ವಿಭಾಗದ ಹೆಸರು ಯಾವುದೆಂಬ ನಿಯಮವಿಲ್ಲ. ಕವಿಗಳು ತಮಗೆ ಸಮೀಚೀನವೆನಿಸಿದಂತೆ ಸ್ತಬಕ, ಉಚ್ಛ್ವಾಸ, ಆಶ್ವಾಸ, ವಿಲಾಸ, ಉಲ್ಲಾಸ, ಅಂಕ, ಕಾಂಡ, ತರಂಗ, ಸರ್ಗ, ವರ್ಣ್ಯ, ಲಂಬಕ, ಕಲ್ಲೋಲ, ಮನೋರಥ, ಬಿಂದು, ಪರಿಚ್ಛೇದ—ಎಂದು ನಾಮಕರಣ ಮಾಡಿದ್ದಾರೆ. ನಾರಾಯಣಚಂಪು, ವಿಶ್ವಗುಣಾದರ್ಶಚಂಪುಗಳಲ್ಲಿ ಈ ವಿಭಾಗವೂ ಇಲ್ಲ.

ವರ್ಣನೀಯ ವಿಷಯವನ್ನವಲಂಬಿಸಿ ಚಂಪೂಗಳನ್ನು ನಾಲ್ಕು ಗುಂಪು ಮಾಡಬಹುದು.

1. ಪೌರಾಣಿಕ ಅಥವಾ ಐತಿಹಾಸಿಕ ಕಥೆಯನ್ನವಲಂಬಿಸಿದ ನಳಚಂಪೂ, ವರದಾಂಬಿಕಾ ಪರಿಣಯ, ಇತ್ಯಾದಿ.

2. ಕಾಲ್ಪನಿಕ ಕಥೆಯನ್ನವಲಂಬಿಸಿದ ವಿಕ್ರಮಸೇನಚಂಪೂ, ಇತ್ಯಾದಿ.

3. ತೀರ್ಥಕ್ಷೇತ್ರಾದಿಗಳನ್ನು ವರ್ಣಿಸುವ ವಿಶ್ವಗುಣಾದರ್ಶ, ಇತ್ಯಾದಿ.

4. ತತ್ವಗುಣಾದರ್ಶ, ವಿದ್ವನ್ಮೋದತರಂಗಿಣೀ ಮುಂತಾದವು ವಿಚಾರಪ್ರಧಾನವಾದ ದಾರ್ಶನಿಕ ಚಂಪೂಗಳು. ಇವನ್ನು ಕಾವ್ಯಗಳಲ್ಲಿ ಸೇರಿಸುವುದು ಯುಕ್ತವಲ್ಲ.

ಸಂಸ್ಕೃತದಲ್ಲಿ ಇದುವರೆಗೆ 245 ಚಂಪೂಕಾವ್ಯಗಳು ರಚಿತವಾಗಿವೆಯೆಂಬುದಕ್ಕೆ ಆಧಾರ ದೊರಕಿದೆ. ಅವುಗಳಲ್ಲಿ ಪ್ರಕಾಶವಾಗಿರತಕ್ಕವು 74 ಮಾತ್ರ. ರಾಮಾಯಣ, ಮಹಾಭಾರತಗಳನ್ನೂ, ಭಾಗವತಾದಿ ಪುರಾಣಗಳನ್ನೂ ಆಶ್ರಯಿಸಿದ ಚಂಪೂಕಾವ್ಯಗಳೇ ಅಧಿಕ. ಚಾರಿತ್ರಿಕ ವಿಷಯದ ಮೇಲಿರುವ ಗ್ರಂಥಗಳಿಗೆ ದ್ವಿತೀಯಸ್ಥಾನ. ಜೈನಪುರಾಣಗಳನ್ನವಲಂಬಿಸಿ ಆರು ಚಂಪೂಗಳೂ ದೊರಕುತ್ತವೆ. ಹತ್ತರಿಂದ ಹದಿನೈದನೆಯ ಶತಮಾನದವರೆಗೆ ರಚಿತವಾಗಿ ಉಪಲಬ್ಧವಾಗಿರತಕ್ಕವು ಕೇವಲ 20 ಚಂಪೂಕಾವ್ಯಗಳು. ವಿಶೇಷವೇನೆಂದರೆ, ಚಂಪೂ ಕಾವ್ಯಗಳು ದಕ್ಷಿಣದೇಶದಲ್ಲಿಯೇ ಅಧಿಕಸಂಖ್ಯೆಯಲ್ಲಿ ರಚಿತವಾಗಿವೆ. ಉತ್ತರ ಭಾರತದಲ್ಲಿ ರಚಿತವಾದವು ಐವತ್ತರ ಮೇಲಿಲ್ಲ. ಶೇಖರಪ್ರಾಯವಾದ ಕೆಲವು ಚಪೂಗಳ ಪರಿಚಯವನ್ನು ಮುಂದೆ ಕೊಡಲಾಗಿದೆ.

## 1. ನಲಚಂಪೂ ಅಥವಾ ದಮಯಂತೀಕಥಾ

ಇದರ ಕರ್ತೃ ತ್ರಿವಿಕ್ರಮಭಟ್ಟ, ಇವನಿಗೆ ಸಿಂಹಾದಿತ್ಯ ಎಂಬ ಇನ್ನೊಂದು ಹೆಸರಿತ್ತು. ತಂದೆ ನೇಮಾದಿತ್ಯ ಪಿತಾಮಹ ಶ್ರೀಧರ. ಈತನು ಶಾಂಡಿಲ್ಯ ಗೋತ್ರದವನು. ರಾಷ್ಟ್ರಕೂಟದ ದೊರೆ ಮೂರನೆಯ ಇಂದ್ರನ ಆಸ್ಥಾನಕವಿ. ಕಾಲ ಕ್ರಿ.ಶ. 915.

ತ್ರಿವಿಕ್ರಮನ ವಿಷಯವಾಗಿ ಒಂದು ದಂತಕಥೆ ಇದೆ. ಆಸ್ಥಾನಪಂಡಿತನಾಗಿದ್ದ ಈತನ ತಂದೆ ಊರಲ್ಲಿಲ್ಲದಾಗ ಒಬ್ಬ ವಿದ್ವಾಂಸನು ರಾಜಾಸ್ಥಾನಕ್ಕೆ ಆಗಮಿಸಿ, ತನ್ನೊಡನೆ ಸ್ಪರ್ಧೆಗೆ ಕರೆನೀಡಿದನು. ರಾಜನು ತ್ರಿವಿಕ್ರಮನಿಗೆ ಹೇಳಿ ಕಳಿಸಿದನು. ಅವನು ಉಪಾಸ್ಯ ದೇವತೆಯಾದ ಸರಸ್ವತಿಯ ಅನುಗ್ರಹವನ್ನು ಪಡೆದು ಸಭೆಗೆ ಹೋಗಿ ನಲಚಂಪುವನ್ನು ರಚಿಸಲಾರಂಭಿಸಿದನು. ಏಳನೆಯ ಉಚ್ಛ್ವಾಸವು ಮುಗಿಯುವಹೊತ್ತಿಗೆ ಆತನ ತಂದೆ ಆಗಮಿಸಿದನು. ಫಲವಾಗಿ ಸರಸ್ವತಿಯ ಅನುಗ್ರಹದ ಅವಧಿ ಮುಗಿಯಿತು. ಆದ್ದರಿಂದ ನಲಚಂಪೂ ಅಲ್ಲಿಗೇ ನಿಂತಿತು. ನಳನು ಇಂದ್ರಾದಿದಿಕ್ಪಾಲರ ಸಂದೇಶವನ್ನು ದಮಯಂತಿಗೆ ಮುಟ್ಟಿಸುವವರೆಗಿನ ಕಥಾಭಾಗ ಮಾತ್ರ ಇದರಲ್ಲಿದೆ. ಕಥೆ ಅಪೂರ್ಣ.

ತ್ರಿವಿಕ್ರಮನು ವ್ಯಾಸರನ್ನೂ, ಬಾಣಕವಿಯನ್ನೂ ಸ್ಮರಿಸಿದ್ದಾನೆ. ಭೋಜನು ಸರಸ್ವತೀಕಂಠಾಭರಣದಲ್ಲಿ ತ್ರಿವಿಕ್ರಮನನ್ನು ಉಲ್ಲೇಖಿಸಿದ್ದಾನೆ. ನಲಚಂಪುವಿನ ಮೇಲೆ ಚಂಡಪಾಲ, ಗುಣವಿನಯಗಣಿ. ದಾಮೋದರಭಟ್ಟ ಮತ್ತು ನಾಗದೇವ ಎಂಬುವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಉಪಲಬ್ಧವಾದ ಚಂಪೂಗಳಲ್ಲಿ ಇದೇ ಮೊದಲನೆಯದು. ಮೂಲಕಥಾವಸ್ತು ಮಹಾಭಾರತದ ವನಪರ್ವದಲ್ಲಿದೆ. ತ್ರಿವಿಕ್ರಮನ ಶೈಲಿ ಪ್ರೌಢವಾದುದು ; ಸುಬಂಧು, ಬಾಣ, ಮಯೂರ ಕವಿಗಳನ್ನು ಸ್ಮರಣೆಗೆ ತರುತ್ತದೆ. ತ್ರಿವಿಕ್ರಮನು ಶ್ಲೇಷದಲ್ಲಿ ವ್ಯಾಮೋಹವಿರುವ ವಿದ್ವತ್ಕವಿ. ಶಬ್ದಭಂಡಾರ ಸಮೃದ್ಧವಾಗಿದೆ. ಕ್ರಿಯಾಪದಗಳ ವಿವಿಧರೂಪಗಳನ್ನು ಪ್ರಯೋಗಿಸುವುದರಲ್ಲಿ ಈತನು ನಿಪುಣ.

1. 'ಕವಿಯ ಕಾವ್ಯ ಧನುರ್ಧರನ ಬಾಣವಿದ್ದಂತೆ. ಅದು ವಾಚಕನ ಹೃದಯವನ್ನು ಪ್ರವೇಶಿಸಿ ತಲೆದೂಗಿಸಬೇಕು' ಎನ್ನುತ್ತಾನೆ ತ್ರಿವಿಕ್ರಮ—

ಕಿಂ ಕವೇಸ್ತಸ್ಯ ಕಾವ್ಯೇನ ಕಿಂ ಕಾಂಡೇನ ಧನುಷ್ಮತಃ ।
ಪರಸ್ಯ ಹೃದಯೇ ಲಗ್ನಂ ನ ಘೂರ್ಣಯತಿ ಯಚ್ಛಿರಃ ॥—ನ. ಚಂ. 1—5.

2. ಅಸಮರ್ಥರಾದ ಕವಿಗಳು ಬಾಲಕರಿದ್ದಂತೆ—

ಅಪ್ರಗಲ್ಭಾಃ ಪದನ್ಯಾಸೇ ಜನನೀರಾಗಹೇತವಃ ।
ಸಂತ್ಯೇಕೇ ಬಹುಲಾಲಾಪಾಃ ಕವಯೋ ಬಾಲಕಾ ಇವ ॥
(ಜನ + ನೀರಾಗ, ಜನನೀ + ರಾಗ)—1—6.



3. ಶ್ಲೇಷಚಮತ್ಕಾರಕ್ಕೆ ಒಂದು ಉದಾಹರಣೆ—

ಯಃ ಶೃಂಗಾರಂ ಜನಯತಿ ನಾರೀಣಾಂ ನಾರೀಣಾಂ, ಯಃ ಕರೋತ್ಯಾಶ್ರಿತಸ್ಯ ನವಂ ಧನಂ, ನ ಬಂ(ವಂ)ಧನಂ, ಯೋ ಗುಣೇಷು ರಜ್ಯತೇ ನರಮಣೀನಾಂ ನ ರಮಣೀನಾಂ, ಯಸ್ಯ ಚ ನಮಸ್ಯಾಗ್ರಹಾರೇಷು ಶ್ರೂಯತೇ ನಲೋಪಾಖ್ಯಾನಂ, ನ ಲೋಪಾಖ್ಯಾನು ॥—ಉಚ್ಛ್ವಾಸ ೩

ಕೆಳಗಿನ ಶ್ಲೋಕದಿಂದ ಕವಿಗೆ ಯಾಮುನತ್ರಿವಿಕ್ರಮ ಎಂಬ ಹೆಸರು ಬಂದಿತಂತೆ—

ಉದಯಗಿರಿಗತಾಯಾಂ ಪ್ರಾಕ್ ಪ್ರಭಾ ಪಾಂಡುತಾಯಾಂ
ಅನುಸರತಿ ನಿಶೀಥೇ ಶೃಂಗಮಸ್ತಾಚಲಸ್ಯ ।
ಜಯತಿ ಕಿಮಪಿ ತೇಜಃ ಸಾಂಪ್ರತಂ ವ್ಯೋಮಮಧ್ಯೇ
ಸಲಿಲಮಿವ ವಿಭಿನ್ನಂ ಜಾಹ್ನವಂ ಯಾಮುನಂ ಚ ॥

6–1

2. ಮದಾಲಸಾಚಂಪೂ :— ಇದೂ ತ್ರಿವಿಕ್ರಮಭಟ್ಟನ ಇನ್ನೊಂದು ಕೃತಿಯೆಂದು ತಿಳಿದುಬರುತ್ತದೆ. ಕುವಲಯಾಶ್ವ-ಮದಾಲಸೆಯರ ಪ್ರಣಯ ಕಥೆ ವರ್ಣಿತವಾಗಿದೆ. ಈ ಕಥೆಯ ಮೂಲ ಮಾರ್ಕಂಡೇಯ ಪುರಾಣದಲ್ಲಿ ದೊರೆಯುತ್ತದೆ. ನಲಚಂಪುವಿನಲ್ಲಿರುವ ಭಾಷೆಯ ಸೌಷ್ಠವವಾಗಲಿ, ವರ್ಣನಾಕೌಶಲವಾಗಲಿ ಇದರಲ್ಲಿ ಕಂಡುಬರುವುದಿಲ್ಲ.

3. ಯಶಸ್ತಿಲಕಚಂಪೂ :— ಸೋಮದೇವಸೂರಿಯೆಂಬ ಜೈನಕವಿ ಇದನ್ನು ರಚಿಸಿದ್ದಾನೆ. ಕವಿಯು ನೇಮಿದೇವಮುನಿಯ ಶಿಷ್ಯ. ಈತನಿಗೆ ತಾರ್ಕಿಕಚಕ್ರವರ್ತಿ, ವಾದೀಭಸಿಂಹ ಮುಂತಾದ ಬಿರುದುಗಳಿದ್ದವು. ಸೋಮದೇವನು ತನ್ನ ದೇಶಕಾಲಾದಿಗಳನ್ನು ತಿಳಿಸಿದ್ದಾನೆ. ಅದರ ಪ್ರಕಾರ ಚಾಲುಕ್ಯರಾಜ ಅರಿಕೇಸರಿಯ ಮಗ ವಾಗ್ರಾಜನ ಆಶ್ರಯದಲ್ಲಿದ್ದು, ಕ್ರಿ.ಶ. 959ರಲ್ಲಿ ಯಶಸ್ತಿಲಕಚಂಪುವನ್ನು ಬರೆದು ಮುಗಿಸಿದ್ದಾನೆ. ಅರಿಕೇಸರಿಯು ರಾಷ್ಟ್ರಕೂಟ ದೊರೆಯಾದ ಮೂರನೆಯ ಕೃಷ್ಣದೇವರಾಜನ ಸಾಮಂತರಾಜ. ಕನ್ನಡದ ಕವಿ ಪಂಪನು ಈ ಅರಿಕೇಸರಿಯ ಆಸ್ಥಾನದಲ್ಲಿದ್ದನು. ಅವನು, ತನ್ನ ವಿಕ್ರಮಾರ್ಜುನ ವಿಜಯವನ್ನು ಕ್ರಿ.ಶ. 941ರಲ್ಲಿ ಬರೆದನೆಂದು ಕನ್ನಡ ಕವಿಚರಿತಕಾರರು ನಿರ್ಣಯಿಸಿದ್ದಾರೆ. ಆದ್ದರಿಂದ ಪಂಪ-ಸೋಮದೇವರು ಸಮಕಾಲಿಕರೆಂದೂ ಒಂದೇ ರಾಜಕುಟುಂಬದ ಆಶ್ರಯದಲ್ಲಿದ್ದುದರಿಂದ ಅವರಿಗೆ ಅನ್ಯೋನ್ಯಪರಿಚಯವಿತ್ತೆಂದೂ ಹೇಳಬಹುದು.

ಸೋಮದೇವಸೂರಿಯು ಮಹಾವಿದ್ವಾಂಸನೆಂದೂ, ಜೈನಾಚಾರ್ಯನೆಂದೂ ಪರಿಗಣಿತನಾಗಿ ರಾಜಮಾನ್ಯನಾಗಿದ್ದನು. ಇವನ ಇನ್ನೊಂದು ಕೃತಿ ರಾಜನೀತಿಯನ್ನು ಪ್ರತಿಪಾದಿಸುವ ನೀತಿವಾಕ್ಯಾಮೃತ. ಅಲ್ಲದೆ ಷಣ್ಣವತಿಪ್ರಕರಣ, ಮಹೇಂದ್ರಮಾತಲಿಸಜಲ್ಪ, ಯುಕ್ತಿಚಿಂತಾಮಣಿ ಮತ್ತು ಸ್ಯಾದ್ವಾದೋಪನಿಷತ್ತುಗಳನ್ನು ರಚಿಸಿದ್ದಾನೆಂದು ತಿಳಿದು ಬರುತ್ತದೆ. ಯಶಸ್ತಿಲಕಕ್ಕೆ ಶ್ರುತಸಾಗರಸೂರಿಯ ವ್ಯಾಖ್ಯಾನ ದೊರಕಿದೆ.

ಈ ಚಂಪುವಿನಲ್ಲಿ ಎಂಟು ಆಶ್ವಾಸಗಳಿದ್ದು ಗ್ರಂಥವು ಬಹುವಿಸ್ತೃತವಾಗಿದೆ. ಕಡೆಯ ಎರಡು ಆಶ್ವಾಸಗಳಲ್ಲಿ ಜೈನಧರ್ಮದ ಆಚಾರ, ನೀತಿ, ಅಣುವ್ರತ, ಉಪಾಸನೆಯ ಪ್ರಕಾರ ಮುಂತಾದ ಧಾರ್ಮಿಕ ವಿಷಯಗಳು ಪ್ರಸ್ತುತವಾಗಿವೆ. ರಮಣೀಯ ವರ್ಣನೆಗಳಿಗೂ, ಸಮಯೋಚಿತ

ಸೂಕ್ತಿಗಳಿಗೂ ಇದು ಆಕರ. ರಸಭಾವಗಳ ಪುಷ್ಟಿ ಇದೆ. ಅರ್ಥಚಮತ್ಕಾರವುಳ್ಳ ವಕ್ರೋಕ್ತಿಗಳೂ, ಸ್ವಭಾವೋಕ್ತಿಗಳೂ ವಿಪುಲವಾಗಿವೆ. ಎಲ್ಲ ಬಗೆಯ ಗದ್ಯಪದ್ಯಗಳ ವೈಚಿತ್ರ್ಯ ಉಂಟು. 'ಸದ್ಯೋಽನವದ್ಯಗದ್ಯಪದ್ಯವಿದ್ಯಾಧರಚಕ್ರವರ್ತಿ' ಎಂಬುದು ಕವಿಯ ಬಿರುದು. ವ್ಯುತ್ಪತ್ತಿಯನ್ನುಂಟುಮಾಡುವ ಕಾವ್ಯವಿದು.

**ಕಥಾಮೂಲ :**—ಜೈನಸಾಹಿತ್ಯದಲ್ಲಿ ಯಶೋಧರಚರಿತೆ ಪ್ರಸಿದ್ಧವಾದುದು. ಪ್ರಾಕೃತ ಮತ್ತು ದೇಶೀಯ ಭಾಷೆಗಳಲ್ಲಿ ಅನೇಕ ಕವಿಗಳು ಇದನ್ನು ವಿವರಿಸಿದ್ದಾರೆ. ಕನ್ನಡ ಕವಿಯಾದ ಜನ್ನನು 'ಯಶೋಧರಚರಿತ್ರೆ'ಯನ್ನು ಬರೆದಿದ್ದಾನೆ. ಹರಿಭದ್ರನ ಪ್ರಾಕೃತರಚನೆಯಾದ 'ಸಮರಾಇಚ್ಚಕಥಾ'ದಲ್ಲಿ ಬರುವ ಯಶೋಧರಚರಿತೆಯೇ ಸೋಮದೇವನ ಯಶಸ್ತಿಲಕ ಚಂಪುವಿಗೆ ಆಧಾರವೆಂದು ತೋರುತ್ತದೆ.

**ಕಥಾಸಾರಾಂಶ :**—ಮಾರಿದತ್ತನು ಯೌಧೇಯದೇಶದ ನೃಶಂಸನಾದ ದೊರೆ. ಅವನು ಚಂಡಮಾರಿದೇವತೆಗೆ ಬಲಿಯಾಗಿ ಕೊಡಲು ಅಭಯರುಚಿ' ಅಭಯಮತಿ ಎಂಬ ಇಬ್ಬರು ಸೋದರಸೋದರಿಯರನ್ನು ಹಿಡಿದುತರಿಸಿದನು. ಅವರಿಬ್ಬರೂ ಸುದತ್ತನೆಂಬ ಜೈನಮುನಿಯ ಶಿಷ್ಯರು. ಬಾಲ್ಯದಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದ್ದರು. ಮಾರಿಕಾದೇವಾಲಯದಲ್ಲಿ ಅಭಯರುಚಿ ಮಾರಿದತ್ತನಿಗೆ ಈ ಕಥೆಯನ್ನು ಹೇಳಿದನು—

ಅವಂತಿಯಲ್ಲಿ ಯಶೋರ್ಘನೆಂಬ ರಾಜನಿದ್ದನು. ಅವನು ತನ್ನ ಮಗನಾದ ಯಶೋಧರನಿಗೆ ಪಟ್ಟಾಭಿಷೇಕ ಮಾಡಿ ಸಂನ್ಯಾಸವನ್ನು ಸ್ವೀಕರಿಸಿದನು. ಯಶೋಧರನ ಹೆಂಡತಿ ಅಮೃತಮತಿ. ಅವಳು ಕೆಟ್ಟ ನಡತೆಯವಳಾಗಿದ್ದು ಒಬ್ಬ ಕುರೂಪಿಯಾದ ಮಾವುತನಲ್ಲಿ ಅನುರಕ್ತಳಾಗಿದ್ದಳು. ತನ್ನ ಪತಿಯಾದ ಯಶೋಧರನಿಗೂ, ಅವನ ತಾಯಿ ಚಂದ್ರಮತಿಗೂ ವಿಷವನ್ನುಣ್ಣಿಸಿ ಕೊಲ್ಲಿಸಿದಳು. ಹಿಟ್ಟಿನ ಕೋಳಿಯನ್ನು ಬಲಿಯಾಗಿ ಕೊಂದ ಪಾಪದಿಂದ ಯಶೋಧರ. ಚಂದ್ರಮತಿಯರು ಅನೇಕ ಪಕ್ಷಿಜನ್ಮಗಳನ್ನೆತ್ತಿ ಜನ್ಮಾಂತರದಲ್ಲಿಯೂ ಅನ್ಯರಿಂದ ಹತರಾದರು. ಯಶೋಧರನ ಮಗ ಯಶೋಮತಿಯು ರಾಜ್ಯವಾಳುತ್ತಿರುವಾಗ, ಈ ಜನ್ಮಾಂತರಗಳು ಅವನ ಪರಿಸರದಲ್ಲಿಯೇ ನಡೆದವು. ಕಡೆಯಲ್ಲಿ ಅವರಿಬ್ಬರೂ ಯಶೋಮತಿಯ ಪತ್ನಿ ಕುಸುಮಾವಳಿಯ ಗರ್ಭದಲ್ಲಿ ಅವಳಿಮಕ್ಕಳಾಗಿ ಹುಟ್ಟಿದರು. ಗಂಡುಮಗುವಿನ ಹೆಸರು ಯಶಸ್ತಿಲಕ, ಹೆಣ್ಣುಮಗು ಮದನಮತಿ.

ಒಮ್ಮೆ ಯಶೋಮತಿಗೆ ಸುದತ್ತಮುನಿಯ ಪರಿಚಯವಾಯಿತು. ಸುದತ್ತನು ತ್ರಿಕಾಲಜ್ಞಾನಿ. ಅವನು ಯಶೋಮತಿಗೆ ಹೀಗೆಂದನು: "ನಿನ್ನ ಅಜ್ಜ ಯಶೋರ್ಘನು ಸದ್ಗತಿಯನ್ನು ಪಡೆದಿದ್ದಾನೆ. ನಿನ್ನ ತಾಯಿ ಅಮೃತಮತಿ ತನ್ನ ಪಾಪದ ಫಲವಾಗಿ ಕುಷ್ಠರೋಗದಿಂದ ನರಳಿ ಸತ್ತು ನರಕವನ್ನು ಸೇರಿದ್ದಾಳೆ. ನಿನ್ನ ತಂದೆ ಯಶೋಧರನೂ, ಅಜ್ಜಿ ಚಂದ್ರಮತಿಯೂ ನಿನಗೆ ಮಕ್ಕಳಾಗಿ ಹುಟ್ಟಿದ್ದಾರೆ. ಯಶೋಧರನೇ ಯಶಸ್ತಿಲಕ. ಚಂದ್ರಮತಿಯೇ ಮದನಮತಿ!" ಈ ಪೂರ್ವಜನ್ಮಗಳ ವೃತ್ತಾಂತವನ್ನು ತಿಳಿದು ಅವಳಿಮಕ್ಕಳಿಬ್ಬರೂ ವಿರಕ್ತವಾಗಿ ಸುದತ್ತನ ಶಿಷ್ಯರಾದರು. "ಯಶಸ್ತಿಲಕನೇ ನಾನು—ಅಭಯರುಚಿ, ನನ್ನ ಸೋದರಿ ಮದನಮತಿಯೇ ಇವಳು—ಅಭಯಮತಿ!"



ಅವರಿಬ್ಬರ ತಾಯಿ ಕುಸುಮಾವಳಿ ಮಾರಿದತ್ತನ ತಂಗಿಯಾಗಿದ್ದಳು. ಮಾರಿದತ್ತನು ವಿರಕ್ತನಾಗಿ ಸುದತ್ತಮುನಿಗೆ ಶರಣಾದನು.

ಸೋಮದೇವನು ಈ ಕಥೆಯನ್ನು ರಂಜಕವಾಗಿ ವರ್ಣಿಸಿದ್ದಾನೆ. ನಾನಾಭಾವಗಳ ಅಭಿವ್ಯಕ್ತಿಗೂ ಕಥೆಯಿಂದ ವಿಪುಲಸಾಮಗ್ರಿ ದೊರಕಿದೆ.

**ಕಾವ್ಯಪರಿಶೀಲನೆ :**

1. ಸೋಮದೇವನು ಶಾಸ್ತ್ರಜ್ಞ. ಕರ್ಕಶತರ್ಕವನ್ನು ಕಲಿತ ತನ್ನಿಂದ ಕಾವ್ಯರಚನೆ ಹೇಗಾಯಿತೆಂದರೆ "ಸುಕೃತಿಗಳ ಪುಣ್ಯದಿಂದ' ಎನ್ನುತ್ತಾನೆ. ಒಣಹುಲ್ಲನ್ನು ತಿನ್ನುವ ಹಸುವಿನಿಂದ ಕ್ಷೀರಧಾರೆ ಬಂದಂತೆ ಎಂದು ದೃಷ್ಟಾಂತ ಕೊಡುತ್ತಾನೆ—

ಆಜನ್ಮಸಮಭ್ಯಸ್ತಾತ್ ಶುಷ್ಕಾತ್ ತರ್ಕಾತ್ ತೃಣಾದಿವ ಮಮಾಸ್ಯಾಃ ।
ಮತಿಸುರಭೇರಭವದಿದಂ ಸೂಕ್ತಿಪಯಃ ಸುಕೃತಿನಾಂ ಪುಣ್ಯೈಃ ॥ 1–17

2. ಇನ್ನೊಂದು ಕಾವ್ಯದ ಸಹಾಯವನ್ನೂ, ಆದರ್ಶವನ್ನೂ ಅವಲಂಬಿಸದೆ ಇದನ್ನು ರಚಿಸಿದ್ದೇನೆಂದು ಕವಿಗೆ ಹೆಮ್ಮೆ—

ಅಸಹಾಯಮನಾದರ್ಶಂ ರತ್ನಂ ರತ್ನಾಕರಾದಿವ ।
ಮತ್ತಃ ಕಾವ್ಯಮಿದಂ ಜಾತಂ ಸತಾಂ ಹೃದಯಮಂಡನಂ ॥ 1–14

3. ಸಹೃದಯನಿಗೆ ಕಾವ್ಯನಿರ್ಮಾಣಶಕ್ತಿ ಇಲ್ಲದಿದ್ದರೂ ರಸಜ್ಞತೆ ಇರುತ್ತದೆ. ಸಹೃದಯನೇ ಕಾವ್ಯದ ಒರೆಗಲ್ಲು—

ಅವಕ್ತಾಪಿ ಸ್ವಯಂ ಲೋಕಃ ಕಾಮಂ ಕಾವ್ಯಪರೀಕ್ಷಕಃ
ರಸಪಾಕಾನಭಿಜ್ಞೋಽಪಿ ಭೋಕ್ತಾ ವೇತ್ತಿ ನ ಕಿಂ ರಸಂ ॥ 1–29

4. ಕವಿತೆಯ ಈ ವ್ಯಾಜಸ್ತುತಿ ಸುಂದರವಾಗಿದೆ—

ನಿದ್ರಾಂ ವಿದೂರಯಸಿ ಶಾಸ್ತ್ರರಸಂ ರುಣತ್ಸಿ
ಸರ್ವೇಂದ್ರಿಯಾರ್ಥಮಸಮರ್ಥವಿಧಿಂ ವಿಧತ್ಸೇ ।
ಚೇತಶ್ಚ ವಿಭ್ರಮಯಸೇ ಕವಿತೇ ಪಿಶಾಚಿ
ಲೋಕಸ್ತಥಾಪಿ ಸುಕೃತೀ ತ್ವದನುಗ್ರಹೇಣ ॥ 1–41

5. ಇದು ವಿರಹಿಣಿಯ ವರ್ಣನೆ—

ಶುಷ್ಕಂ ಕುಂತಲಕುಡ್ಮಲೈರ್ವಿಕಲಿತಂ ಕರ್ಣಾವತಂಸೋತ್ಪಲೈಃ
ಕೀರ್ಣಂ ಕೇಲಿಜಲೇರುಹೈರ್ವಿಗಲಿತಂ ಗಂಡಸ್ಥಲೀಚಂದನೈಃ ।
ತತ್ತತ್ಪಲ್ಲವಪೇಶಲೈಶ್ಚ ಶಯನೈರಾಮ್ಲಾನಮಾಮೂಲತಃ
ತನ್ವ್ಯಾಸ್ತ್ವದ್ವಿರಹೇಣ ಸಾಂಪ್ರತಮಿಯಂ ಭ್ರಾತರ್ದಶಾ ವರ್ತತೇ ॥ 3–490

ಸೋಮದೇವನ ಗದ್ಯದಲ್ಲಿ ಬಾಣನ ಕಾದಂಬರಿಯ ಗದ್ಯಬಂಧದ ಪ್ರಭಾವ ಕಂಡುಬರುತ್ತದೆ. ಒಂದೆಡೆ ಬಾಣಕವಿಯ ನಾಮನಿರ್ದೇಶವನ್ನೂ ಮಾಡಿದ್ದಾನೆ—

'ಕಥಂ ಚೇದಂ ಮೃಗಯೋಗಪ್ರಯೋಗಾನಂದಂ ಶಬರವೃಂದಂ ನಿಂದಿತಮಾದಿಬಾಣೇನ'

— ಆಶ್ವಾಸ 4.

ಈ ವರ್ಣನೆಗಳಲ್ಲಿ ಕಾದಂಬರಿಯ ಸಾಮ್ಯ ಕಂಡುಬರುತ್ತದೆ :

ಸುದತ್ತ–ಜಾಬಾಲಿ, ಸುವೇಲ ಪರ್ವತದ ಮಹಾವೃಕ್ಷ—ಶಾಲ್ಮಲಿವೃಕ್ಷ, ಶಂಖನಖನ ಉಪದೇಶ–ಶುಕನಾಸೋಪದೇಶ ಇತ್ಯಾದಿ. ಅಲ್ಲದೆ ಕುರಂಗಿಕೆ. ಕಿಶೋರಿಕೆ, ಲವಂಗಿಕೆ ಮುಂತಾದ ಚಿತ್ರಮಯ ನಾಮಗಳು ಕಾದಂಬರಿಯಲ್ಲಿರುವಂತೆ ಯಶಸ್ತಿಲಕದಲ್ಲಿಯೂ ಇವೆ. ಕಾದಂಬರಿಯಲ್ಲಿ ಶುಕವು ತನ್ನ ಪೂರ್ವಜನ್ಮವೃಂತಾಂತವನ್ನು ಹೇಳುವಂತೆ ಇಲ್ಲಿ ಅಭಯರುಚಿ ಹೇಳುತ್ತಾನೆ. ಸುಬಂಧುವಿನ ವಾಸವದತ್ತೆಯ ಪರಿಚಯವೂ ಸೋಮದೇವನಿಗೆ ಇದ್ದಿರಬಹುದು.

ಈ ಕವಿಯ ಗದ್ಯಶೈಲಿಗೆ ಉದಾಹರಣೆ—

1. ಕಾಂತಾರಕುಹರವಿಹರಚ್ಛೆಕಿಲಕುಲಕೋಲಾಹಲೋತ್ಥಾಪಿತಾನಂಗವ್ಯಾಲವ್ಯಾಕುಲಿತ ಕಾಮುಕೇಷು —ಆಶ್ವಾಸ 1

2. ಕೃತಕಾರ್ಥಚಂದ್ರಚುಂಬಿತಚಂದ್ರಕಾಪೀಡವಿಡಂಬಿತಮುಂಡಮಂಡಲಃ ತೂಲಿನೀಕುಸುಮಕೂಡ್ಮಲಾಕೃತಿಜಾತುಷೋತ್ಕಾಷಿತಕರ್ಣಕುಂಡಲಃ —ಆಶ್ವಾಸ 3

ಗದ್ಯಪದ್ಯಗಳೆರಡರಲ್ಲಿಯೂ ಕೆಲವೆಡೆ ವೈದರ್ಭೀರೀತಿಯನ್ನೂ, ಕೆಲವೆಡೆ ಗೌಡೀರೀತಿಯನ್ನೂ ಕಾಣಬಹುದು. ವೃತ್ತಗಂಧಿಯಾದ ಗದ್ಯಗಳು ಹಲವಾರು, ನಾಟಕಗಳಲ್ಲಿರುವಂತೆ ಸಂಭಾಷಣೆಗಳೂ ಇವೆ. ಚಂಪೂಗಳಲ್ಲಿ ಯಶಸ್ತಿಲಕದ ಸ್ಥಾನ ಗಣ್ಯವಾದದ್ದು, ಕವಿಯ ಆತ್ಮಪ್ರಶಂಸೆಯಲ್ಲಿ ತಿರುಳಿದೆ.

ಸುಭಾಷಿತಗಳು

1. ಚಾರೋ ಯಸ್ಯ ವಿಚಾರಶ್ಚ ರಾಜ್ಞೋ ನಾಸ್ತೀಕ್ಷಣದ್ವಯಂ ।
ತಸ್ಯಾಂಧದುಗ್ಧವದ್ರಾಜ್ಯಂ ಮಂತ್ರಿಮಾರ್ಜಾರಗೋಚರಂ ॥ 3–173

2. ಅಸಹಾಯಃ ಸಮರ್ಥೋಽಪಿ ನ ಜಾತು ಹಿತಸಿದ್ಧಯೇ ।
ವಹ್ನಿರ್ವಾತವಿಹೀನೋ ಹಿ ಬುಸಸ್ಯಾಪಿ ನ ದೀಪಕಃ ॥ 3–228

3. ಹತಂ ಜ್ಞಾನಂ ಕ್ರಿಯಾಶೂನ್ಯಂ ಹತಾಜ್ಞಾ ಜ್ಞಾನಿನಃ ಕ್ರಿಯಾ ।
ಧಾವನ್ನಪ್ಯಂಧಕೋ ನಷ್ಟಃ ಪಶ್ಯನ್ನಪಿ ಚ ಪಂಗುಕಃ ॥ 3–5

ಶ್ರೇಯಾಂಸಿ ಬಹುವಿಘ್ನಾನಿ, ಗತೋದಕೇ ಕಃ ಖಲು ಸೇತುಬಂಧಃ, ಶಿರೋಮುಂಡಾಯಿಂತ್ವಾ ನಕ್ಷತ್ರಪ್ರಶ್ನಃ, ಇತಸ್ತಟಮಿತೋ ವ್ಯಾಘ್ರಃ—ಇತ್ಯಾದಿ ಸುಪ್ರಸಿದ್ಧ ಸೂಕ್ತಿಗಳೂ ಕಂಡುಬರುತ್ತವೆ.

4. ಜೀವಂಧರಚಂಪೂ

ಇದರ ಕವಿ ಹರಿಚಂದ್ರ, ಬಾಣನು ಹರ್ಷಚರಿತದಲ್ಲಿ 'ಭಟ್ಟಾರ ಹರಿಚಂದ್ರಸ್ಯ ಗದ್ಯಬಂಧೋ ನೃಪಾಯತೇ' ಎಂದು ಗದ್ಯಕವಿ ಹರಿಚಂದ್ರನನ್ನು ಸ್ಮರಿಸಿದ್ದಾನೆ. ಆತನು



ಇನ್ನೊಬ್ಬ ನಿರಬಹುದು. ಧರ್ಮಶರ್ಮಾಭ್ಯುದಯವನ್ನು ರಚಿಸಿದ ಹರಿಚಂದ್ರನೇ ಜೀವಂಧರ ಚಂಪುವನ್ನು ರಚಿಸಿದನೋ ಎಂಬುದು ನಿಶ್ಚಿತವಾಗಿಲ್ಲ. ರಾಜಶೇಖರನ ಕರ್ಪೂರಮಂಜರಿಯಲ್ಲೂ ಹರಿಚಂದ್ರನ ಉಲ್ಲೇಖವಿದೆ. ಈತನ ಕಾಲ 10ನೆಯ ಶತಕವಿರಬಹುದು.*

ಜೀವಂಧರಚಂಪುವಿನ ಮೂಲಕಥೆ ಗುಣಭದ್ರನ ಉತ್ತರಪುರಾಣದಲ್ಲಿದೆ. ಜೀವಂಧರನೆಂಬ ರಾಜಕುಮಾರನು ಜೈನಮುನಿಯಾದನೆಂಬುದು ಕಥಾವಸ್ತು. ಕಾವ್ಯರೂಪದಲ್ಲಿ ಜೈನಧರ್ಮದ ಉಪದೇಶವೇ ಕವಿಯ ಮುಖ್ಯ ಉದ್ದೇಶವಾಗಿ ಕಾಣುತ್ತದೆ. ಗದ್ಯಪದ್ಯರಚನೆಯಲ್ಲಿ ಕವಿಗೆ ನಿರರ್ಗಳಗತಿ ಇದೆ. ಇದರಲ್ಲಿ 11 ಲಂಬಕಗಳುಂಟು. ಕಥೆಯ ಪವಿತ್ರತೆಯನ್ನು ಕವಿ ಹೀಗೆ ಪ್ರಕಟಿಸಿದ್ದಾನೆ—

ಜೀವಂಧರಸ್ಯ ಚರಿತಂ ದುರಿತಸ್ಯ ಹಂತೃ
ಪ್ರಾಪ್ತಾ ಮಲೀಮಸತಮಾಪಿ ಮದೀಯವಾಣೀ ।
ಧೀರಾನ್ ಧಿನೋತಿ ನಿಯತಂ ಮಲಿನಾಂಜನಶ್ರೀಃ
ಬಿಂಬಾಧರಾನಯನಪಂಕಜಸಂಗತೇವ ॥ 1—12

ಶ್ಲೇಷಗರ್ಭಿತವಾದ ಈ ನಗರವರ್ಣನೆ ಸುಂದರವಾಗಿದೆ—

ಯತ್ಸೌಧಾನವಲೋಕ್ಯ ನಿರ್ಜರಪತಿರ್ದ್ರಾಗ್ ನಿರ್ನಿಮೇಷೋಽಭವತ್
ಯಸ್ಯಾ ವೀಕ್ಷ್ಯ ಸರೋಜಶೋಭಿಪರಿಖಾಂ ಗಂಗಾ ವಿಷಾದಂ ಗತಾ ।
ಯತ್ರತ್ಯಾನಿ ಜಿನಾಲಯಾನಿ ಕಲಯನ್ ಮೇರುಃ ಸ್ವಕಾರ್ತಸ್ವರಂ
ಸ್ವೀಚಕ್ರೇ ಚ ಬಲದ್ವಿಷಃ ಸುರಪುರೀ ಯಾಂ ವೀಕ್ಷ್ಯ ಶೋಕಾಕುಲಾ ॥

5. ಚಂಪೂ ರಾಮಾಯಣ

ಜನಪ್ರಿಯವಾದ ಈ ಪ್ರಸಿದ್ಧ ಚಂಪುವನ್ನು ರಚಿಸಿದವನು ವಿದರ್ಭರಾಜನಾದ ಭೋಜ. ಕಾಂಡಗಳ ಪರಿಸಮಾಪ್ತಿ ವಾಕ್ಯದಲ್ಲಿ 'ಇತಿಶ್ರೀವಿದರ್ಭರಾಜ ವಿರಚಿತೇ ಚಂಪೂರಾಮಾಯಣೇ' ಎಂದಿದೆ. ಕವಿಯ ಹೆಸರು ಭೋಜನೆಂದು ಲಕ್ಷ್ಮಣನೇ ಮೊದಲಾದ ವ್ಯಾಖ್ಯಾನಕಾರರು ಹೇಳಿದ್ದಾರೆ. ಸರಸ್ವತೀಕಂಠಾಭರಣ, ಶೃಂಗಾರ ಪ್ರಕಾಶಗಳಲ್ಲಿ 'ಇತಿಶ್ರೀಮಹಾರಾಜಾಧಿರಾಜ ಶ್ರೀ ಭೋಜದೇವ ವಿರಚಿತೇ' ಎಂದು ಪರಿಸಮಾಪ್ತಿವಾಕ್ಯಗಳಿವೆ. ಈ ಭೋಜದೇವನು ಮಾಳವಾಧಿಪತಿ. ಧಾರಾನಗರ ಇದರ ರಾಜಧಾನಿ. ವಿದರ್ಭ, ಮಾಳವ ಇವು ವಿಭಿನ್ನದೇಶಗಳು. ಆದ್ದರಿಂದ ಚಂಪೂರಾಮಾಯಣವನ್ನು ಒರೆದ ವಿದರ್ಭರಾಜನು ಬೇರೆಯವನಿರಬಹುದೆ ?

* ಕ್ರಿ. ಶ. 853ರಲ್ಲಿದ್ದ ಅಸಗನ ವರ್ಧಮಾನ ಪುರಾಣದಲ್ಲಿ ಜೀವಂಧರಾಚಂಪುವಿನೊಡನೆ ಶಬ್ದಾರ್ಥ ಸಾದೃಶ್ಯವಿರುವ ಹಲವಾರು ಪದ್ಯಗಳು ದೊರೆಯುತ್ತವೆ. ಅಸಗನೇ ಜೀವಂಧರಚಂಪುವಿನಿಂದ ನಕಲು ಮಾಡಿದ್ದಾನೆಂದು ಹೇಳುವುದಾದರೆ, ಈ ಚಂಪುವಿನ ಕಾಲ ಒಂದು ಶತಕದಷ್ಟಾದರೂ ಪ್ರಾಚೀನವೆನ್ನಬಹುದು. ಈ ಪಕ್ಷದಲ್ಲಿ ಹರಿಚಂದ್ರನ ಕಾಲ 8ನೆಯ ಶತಕವಾಗುತ್ತದೆ. ಜೀವಂದರ ಚಂಪುವೇ ಸಂಸ್ಕೃತವಾಙ್ಮಯದಲ್ಲಿ ಮೊದಲನೆಯ ಉಪಲಬ್ಧ ಚಂಪೂ, ತ್ರಿವಿಕ್ರಮಭಟ್ಟನ ನಳಚಂಪುವಲ್ಲವೆನ್ನಬೇಕಾಗುತ್ತದೆ.

ಎಂಬ ಶಂಕೆಗೆ ಅವಕಾಶವಿದೆ, ಪ್ರಾಯಶಃ ಧಾರಾಧಿಪತಿಯಾದ ಭೋಜನಿಗೆ ವಿದರ್ಭದೇಶವೂ ಅಧೀನ ರಾಜ್ಯವಾಗಿದ್ದು ಆತನು ವಿದರ್ಭರಾಜನೆಂದು ಹೇಳಿಕೊಂಡಿರಬಹುದೇನೋ. ಕ್ರಿ. ಶ. 1018—63ರಲ್ಲಿ ಧಾರಾಧೀಶ ಭೋಜನು ಇದ್ದನೆಂದು ಐತಿಹಾಸಿಕ ಪ್ರಮಾಣಗಳಿಂದ ನಿಶ್ಚಿತವಾಗಿದೆ. ಭೋಜನು ಸ್ವಯಂ ವಿದ್ವಾಂಸನೂ, ಕವಿಯೂ ಆಗಿದ್ದನಲ್ಲದೆ ಬಹುಮಂದಿ ವಿದ್ವಾಂಸರಿಗೆ ಆಶ್ರಯವನ್ನಿತ್ತಿದ್ದನು. ಈತನು ಚಂಪೂರಾಮಾಯಣವನ್ನಲ್ಲದೆ ಸರಸ್ವತೀ ಕಂಠಾಭರಣ. ಶೃಂಗಾರಪ್ರಕಾಶ. ರಾಜಮೃಗಾಂಕ, ಸಿದ್ಧಾಂತಸಂಗ್ರಹ, ಶಬ್ದಾನುಶಾಸನ— ಮೊದಲಾದ ಸುಮಾರು 21 ಗ್ರಂಥಗಳನ್ನು ರಚಿಸಿದ್ದಾನೆಂದು ತಿಳಿದುಬರುತ್ತದೆ.

ಬಾಲಕಾಂಡದಿಂದ ಸುಂದರಕಾಂಡ ಪೂರ್ತಿಯಾಗಿ ಐದು ಕಾಂಡಗಳನ್ನು ಮಾತ್ರ ಭೋಜನು ರಚಿಸಿದ್ದಾನೆ. ಯುದ್ಧಕಾಂಡವನ್ನು ಭಾರತಚಂಪೂತಿಲಕದ ಕರ್ತೃವಾದ ಲಕ್ಷ್ಮಣಕವಿ ಬರೆದಿದ್ದಾನೆ. ಹೀಗೆಯೇ ರಾಜಚೂಡಾಮಣಿದೀಕ್ಷಿತ ಘನಶ್ಯಾಮ. ಏಕಾಮ್ರನಾಥ—ಎಂಬ ಕವಿಗಳು ಪೂರಕವಾಗಿ ಯುದ್ಧಕಾಂಡವನ್ನು ರಚಿಸಿದ್ದಾರೆ. ಉತ್ತರಕಾಂಡದ ಕಥೆಯನ್ನು ಉತ್ತರಚಂಪೂ ಎಂಬ ಹೆಸರಿನಿಂದ ಯತಿರಾಜ, ಶಂಕರಾಚಾರ್ಯ, ವೆಂಕಟಾಧ್ವರಿ ಮತ್ತು ಮೈಸೂರಿನ ಗರಳಪುರಿಶಾಸ್ತ್ರಿಗಳು ಬರೆದಿದ್ದಾರೆ.

## ವ್ಯಾಖ್ಯಾನಕಾರರು

ಚಂಪೂರಾಮಾಯಣದ ಮೇಲೆ ನಾರಾಯಣ, ರಾಮಚಂದ್ರ, ಬುಧೇಂದ್ರ. ಕಾಮೇಶ್ವರ, ಮಾನವೇದ, ಘನಶ್ಯಾಮ ಎಂಬುವರು ಬರೆದ ವ್ಯಾಖ್ಯಾನಗಳು ಉಪಲಬ್ಧವಾಗಿದೆ. ಇವರಲ್ಲಿ ನಾರಾಯಣನು ಪ್ರಸಿದ್ಧನಾದ ಕೋಲಾಚಲಮಲ್ಲಿನಾಥಸೂರಿಯ ವಂಶದವನೂ ಅವನಿಂದ ಹತ್ತನೆಯ ತಲೆಯವನೂ ಆಗಿದ್ದಾನೆ. ರಾಮಚಂದ್ರ ಬುಧೇಂದ್ರನು ಶಾಂಡಿಲ್ಯಗೋತ್ರದವನು. ಧನ್ವಂತರಿಯ ಅವತಾರವೆನಿಸಿದ ಕೋದಂಡಪಂಡಿತವರ್ಯನ ತನೂಜ. ಈತನ ವ್ಯಾಖ್ಯಾನ ಸುಪ್ರಸಿದ್ಧವಾಗಿದೆ.

ಭೋಜನದು ಲಲಿತಮನೋಹರವಾದ ವೈದರ್ಭಿಶೈಲಿ. ಕೋಮಲವಾದ ಪದಪ್ರಾಸ, ಸುಂದರವಾದ ಅಲಂಕಾರ, ಹೃದಯಸ್ಪರ್ಶಿಯಾದ ಭಾವಾವಿಷ್ಕರಣ ಕವಿಯ ಹಸ್ತಗತವಾಗಿವೆ. 'ಗದ್ಯಾನುಬಂಧರಸಮಿಶ್ರಿತಪದ್ಯಸೂಕ್ತಿಃ । ಹೃದ್ಯಾ ಹಿ ವಾದ್ಯಕಲಯಾ ಕಲಿತೇವ ಗೀತಿಃ ಎಂದು ಅವನು ಹೇಳಿರುವ ಚಂಪೂಕಾವ್ಯದ ಪ್ರಶಂಸೆ ಮೊದಲು ಅವನ ಚಂಪೂ ರಾಮಾಯಣಕ್ಕೇ ಅನ್ವಯಿಸುತ್ತದೆ.

1. ಕಥೆಯ ಆರಂಭವೇ ಸೊಗಸು—

   ವಾಚಂ ನಿಶಮ್ಯ ಭಗವಾನ್ ಸ ತು ನಾರದಸ್ಯ
   ಪ್ರಾಚೇತಸಃ ಪ್ರವಚಸಾಂ ಪ್ರಥಮಃ ಕವೀನಾಂ ।
   ಮಾಧ್ಯಂದಿನಾಯ ನಿಯಮಾಯ ಮಹರ್ಷಿಸೇವ್ಯಾಂ
   ಪುಣ್ಯಾಮವಾಪ ತಮಸಾಂ ತಮಸಾಂ ನಿಹಂತ್ರೀಂ ॥ 1—5



2. ಸ್ತುತಿಗೆ ಅನುಗುಣವಾದ ಲಲಿತಪದ ರಚನೆ—

   ನಾರಾಯಣಾಯ ನಲಿನಾಯತಲೋಚನಾಯ
   ನಾಮಾವಶೇಷಿತಮಹಾಬಲಿವೈಭವಾಯ ।
   ನಾನಾಚರಾಚರವಿಧಾಯಕಜನ್ಮದೇಶ
   ನಾಭೀಪುಟಾಯ ಪುರುಷಾಯ ನಮಃ ಪರಸ್ಮೈ ॥ 1–16

3. ವನಕ್ಕೆ ಹೊರಡುವಾಗ ಶ್ರೀರಾಮನು ಜಾನಕಿಯ ಕಣ್ಣೀರಿಂದ ನೆನೆದು ಮೃದುವಾದ ವಲ್ಕಲವನ್ನು ಧರಿಸಿದನಂತೆ—

   ಅಧಿಕುಚತಟವಲ್ಗಜ್ಜಾನಕೀಬಾಷ್ಪಸೇಕಾತ್
   ಅಪಗತಖರಭಾವಂ ವಲ್ಕಲಂ ಪರ್ಯಧತ್ತ ॥ 2—38

4. ರಾವಣನು ಸೀತೆಯನ್ನು ಅಪಹರಿಸಿದಾಗ ಶ್ರೀರಾಮನಿಗಾದ ಶೋಕವನ್ನು ಯಾರು ವರ್ಣಿಸಿಯಾರು ? ಅದನ್ನೂ ವರ್ಣಿಸಿದ ವಾಲ್ಮೀಕಿಮುನಿಗಳು ಕಠೋರಮನಸ್ಕರಾಗಿರಬೇಕು !

   ಇತ್ಥಂ ವಿಲಪ್ಯ ದಯಿತಾಂ ವಿಪಿನೇ ವಿಚಿನ್ವನ್
   ರಾಮೋ ನಾ ತತ್ರ ಧೃತಿಮಾನ್ನ ಚ ಲಕ್ಷ್ಮಣೋಽಪಿ ।
   ತಾದೃಗ್ವಿಧಾಮಪಿ ಕಥಾಂ ಕಥಯನ್ ಸ್ವವಾಚಾ
   ವಲ್ಮೀಕಜನ್ಮಮುನಿರೇವ ಕಠೋರಚೇತಾಃ ॥ 3—41

5. ಲಲಿತವಾದ ಶಬ್ದಾಲಂಕಾರಕ್ಕೆ ಒಂದು ಉದಾಹರಣೆ—

   ಯಾತು ನಃ ಪವವೀ ಸೈಷಾ ಯಾತುನಶ್ಯಾಸ್ಯ ಲಕ್ಷ್ಮಣ ।
   ಯಾತು ಕಾಮಂ ತಯೈವೇದಂ ಯಾತು ಕಾಮಂ ನ ಹನ್ಯತಾಂ ॥ 3—4

ಅರಣ್ಯಕಾಂಡದಲ್ಲಿ ಹೇಮಂತವರ್ಣನೆ, ಸುಂದರಕಾಂಡದಲ್ಲಿ ಸಂಧ್ಯಾವರ್ಣನೆ, ಕಿಷ್ಕಿಂಧಾ ಕಾಂಡದಲ್ಲಿ ವರ್ಷರ್ತು ವರ್ಣನೆಗಳು ಅಲಂಕಾರಮಯವಾದ ಗದ್ಯಬಂಧಕ್ಕೆ ಉದಾಹರಣೆಗಳು.

**ಲಕ್ಷ್ಮಣಕವಿಯ ಯುದ್ಧಕಾಂಡ** :—ಭೋಜರಾಜನ ಅಪೂರ್ಣಕಾವ್ಯವನ್ನು ಪೂರ್ಣ ಮಾಡಿರುವ ಲಕ್ಷ್ಮಣಕವಿಗೆ ಅರ್ಹವಾದ ಕವಿತಾಸಾಮರ್ಥ್ಯವುಂಟು, ಅವನು ಭೋಜನನ್ನು ವಿನಯದಿಂದ ಸ್ಮರಿಸಿಕೊಂಡು ಯುದ್ಧಕಾಂಡವನ್ನಾರಂಭಿಸುತ್ತಾನೆ. ಈ ಶ್ಲೋಕವೇ ಅವನ ಕವಿತಾಶಕ್ತಿಗೆ ಸಾಕ್ಷಿ—

   ಮುದ್ರಾಮುದ್ರಿತಜೀವಿತಾಂ ಜನಕಜಾಂ ಮೋಹಾಕುಲಂ ರಾಘವಂ
   ಚೂಡಾರತ್ನವಿಲೋಕನೇನ ಸುಚಿರಂ ನಿಧ್ಯಾಯ ನಿಧ್ಯಾಯ ಚ ।
   ಪ್ರಾರೇಭೆ ಹೃದಿ ಲಕ್ಷ್ಮಣಃ ಕಲಯಿತುಂ ಪೌಲಸ್ತ್ಯವಿಧ್ವಂಸನಂ
   ಧೀರಃ ಪೂರಯಿತುಂ ಕಥಾಂ ಚ ವಿಮಲಾಮೇಕೇನ ಕಾಂಡೇನಸಃ ॥ 6—3

ಇಲ್ಲಿ ರಾಮಾಯಣದ ಲಕ್ಷ್ಮಣನಿಗೂ ತನಗೂ ಶ್ಲೇಷದಿಂದ ಹೋಲಿಕೆಯನ್ನಿತ್ತು ಕಥೆಯನ್ನು ಮುಂದುವರಿಸಿರುವುದು ಚಮತ್ಕಾರಿಯಾಗಿದೆ.

ಈ ಲಕ್ಷ್ಮಣಕವಿ ಭಾರತಚಂಪೂತಿಲಕವೆಂಬ ಚಂಪುವನ್ನು ರಚಿಸಿದ್ದಾನೆ. ಈತನ ಕಾಲ ಕ್ರಿ. ಶ. 16ನೇ ಶತಕದ ಆದಿಭಾಗವಿರಬಹುದು.

ಇಂದ್ರಜಿತುವಿನ ಮಾಯಾಸೀತಾವಧೆಯನ್ನು ಕೇಳಿದ ಶ್ರೀರಾಮನ ವಿಲಾಪವಿದು—

ಜಜ್ಞೇ ತದತ್ರ ಭವತೀ ಜನಕಸ್ಯ ಯಜ್ಞೇ
ದೇವ್ಯಾಶ್ಚಿರಾಯ ಧರಣೇರರಣೇಃ ಶಿಖೇವ ।
ವಂಶೇ ಮನೋರಪಿ ವಧೂರಭವತ್ ಕಿಮನ್ಯತ್
ರಾಮಸ್ತಥಾಪಿ ವಿಧಿನಾ ರಚಿತೋ ವಿರಾಮಃ ॥ 6—69

ಹೀಗೆ ಕಾವ್ಯಸಮಾಪ್ತಿಯನ್ನು ಮಾಡಿದ್ದಾನೆ—

ಸ್ವಚ್ಛಂದಂ ಸುಚಿರಂ ಸುಖಾನ್ಯನುಭವನ್ ದೇವ್ಯಾ ತಥಾ ಸೀತಯಾ ।
ರಾಮಃ ಪಾಲಯತಿ ಸ್ಮ ಕೀರ್ತಿವಿಭವೈರಾಮೋದಿನೀಂ ಮೇದಿನೀಂ ॥ 6—109

## 6. ಉದಯಸುಂದರೀಕಥಾ :

ದಕ್ಷಿಣ ಗುಜರಾತಿನ ಲಾಟದೇಶದಲ್ಲಿ ಜನಿಸಿದ ಸೊಡ್ಡಲನು ಇದರ ಕರ್ತೃ, ತಂದೆಯು ಮೃತನಾಗಲು ಬಾಲ್ಯದಲ್ಲಿಯೇ ಸೋದರಮಾವನ ಆಶ್ರಯದಲ್ಲಿ ಬೆಳೆದನು. ಚಂದ್ರ ಎಂಬ ಗುರುವಿನ ಬಳಿ ವಿದ್ಯಾಭ್ಯಾಸವನ್ನು ಮಾಡಿ ಕೊಂಕಣಾಧಿಪತಿಯಾದ ಮುಮ್ಮಣಿರಾಜನ ಆಸ್ಥಾನದಲ್ಲಿದ್ದನು. ಈ ರಾಜನು ಕ್ರಿ. ಶ. 1060 ರಲ್ಲಿದ್ದನೆಂದು ಶಿಲಾಶಾಸನದಿಂದ ಗೊತ್ತಾಗಿದೆ. ಲಾಟದೇಶದ ವತ್ಸರಾಜನಿಂದಲೂ ಸೊಡ್ಡಲನು ಬಹುಮಾನಿತನಾಗಿದ್ದನು. ಉದಯಸುಂದರೀಕಥೆಯ ಮೊದಲನೆಯ ಉಚ್ಛ್ವಾಸದಲ್ಲಿ ತನ್ನ ವಂಶದ ವಿವರವನ್ನೂ, ಅನೇಕ ಪ್ರಾಚೀನ ಕವಿಗಳ ಹೆಸರನ್ನೂ ತಿಳಿಸಿದ್ದಾನೆ, ಬಾಣಕವಿಯ ವಿಷಯವಾಗಿ—

ಬಾಣಸ್ಯ ಹರ್ಷಚರಿತೇ ನಿಶಿತಾಮುದೀಕ್ಷ್ಯ
ಶಕ್ತಿಂ ನ ಕೇಽತ್ರ ಕವಿತಾಸ್ತ್ರಮದಂ ತ್ಯಜಂತಿ ॥

ಎಂದಿದ್ದಾನೆ. ಬಾಣನಲ್ಲಿ ಆತನಿಗೆ ಅಧಿಕ ಗೌರವವಿತ್ತೆಂದು ಈ ಶ್ಲೋಕದಿಂದ ಗೊತ್ತಾಗುತ್ತದೆ—

ವಾಗೀಶ್ವರಂ ಹಂತ ಭಜೇಽಭಿನಂದಂ
ಅರ್ಥೇಶ್ವರಂ ವಾಕ್ಪತಿರಾಜಮೀಡೇ ।
ರಸೇಶ್ವರಂ ಸ್ತೌಮಿ ಚ ಕಾಳಿದಾಸಂ
ಬಾಣಂ ತು ಸರ್ವೇಶ್ವರಮಾನತೋಽಸ್ಮಿ ॥

ಉದಯಸುಂದರೀಕಥೆಯಲ್ಲಿ ಎಂಟು ಉಚ್ಛ್ವಾಸಗಳಿವೆ. ಪ್ರತಿಷ್ಠಾನದ ರಾಜನಾದ ಮಲಯವಾಹನನಿಗೂ, ಶಿಖಂಡತಿಲಕನೆಂಬ ನಾಗರಾಜನ ಕನ್ಯೆ ಉದಯಸುಂದರಿಗೂ ನಡೆದ ವಿವಾಹ ಇಲ್ಲಿಯ ಕಥಾವಸ್ತು.

ಸೊಡ್ಡಲನ ಗದ್ಯದಲ್ಲಿ ಬಾಣನ ಪ್ರಭಾವ ಎದ್ದು ಕಾಣುತ್ತದೆ. ಶಬ್ದಚಮತ್ಕಾರಗಳೂ ರಮ್ಯವಾದ ವರ್ಣನೆಗಳೂ ಇವೆ. ಈತನು ಕಲ್ಪನಾಶಕ್ತಿಯುಳ್ಳ ಉತ್ತಮ ಕವಿ.



1. ಸೂರ್ಯನು ಅಸ್ತಂಗತನಾಗಲು ಬೆಳದಿಂಗಳು ಹರಡಿತು; ಕಮಲಿನಿ ವಿಧವೆಯಂತೆ ಬಿಳಿಯ ಸೀರೆಯನ್ನುಟ್ಟಳು !

ಕಮಲಿನೀ ಭುವನಾಂತರಿತೇ ರವೌ ವ್ಯಪಗತಾಲಿಕಲಾಪಶಿರೋರುಹಾ ।
ಪರಿದಧೇ ವಿಧವೇವ ಸುಧಾಕರದ್ಯುತಿವಿತಾನಮಿಷೇಣ ಸಿತಾಂಶುಕಂ ॥

2. ಕವಿಯ ವಿಚಿತ್ರ ಕಲ್ಪನೆಗೆ ಇನ್ನೊಂದು ಉದಾಹರಣೆ : ರಾತ್ರಿಯೇ ಒಂದು ಎಮ್ಮೆ; ಚಂದ್ರಮಂಡಲವೆಂಬ ಪಾತ್ರೆಯಲ್ಲಿದ್ದ ಆ ಎಮ್ಮೆಯ ಹಾಲು ಕಾದು ಉಕ್ಕಿ ಆಕಾಶದಲ್ಲಿ ಚೆಲ್ಲಿ ಹೋಯಿತು !

ಚಾಂದ್ರಂ ಮಹೋ ಮಂಡಲಭಾಜನಸ್ಥಂ
ದುಗ್ಧಂ ಯಥಾ ಯಾಮವತೀಮಹಿಷ್ಯಾಃ ।
ವಿಯೋಗಿನಾಂ ದೃಗ್ದಹನೋಪತಾಪೈಃ
ಉಲ್ಲಾಸಿತಂ ವ್ಯೋಮತಲೇ ಲುಲೋಠ ॥

## 7. ಭಾಗವತಚಂಪೂ

ಇದರ ಕವಿ 'ಅಭಿನವ ಕಾಳಿದಾಸ' ಅಥವಾ 'ನವಕಾಳಿದಾಸ', "ಅಭಿನವ ಪದಪೂರ್ವಃ ಕಾಲಿದಾಸಃ ಪ್ರಗಲ್ಭಃ" (1–7), "ತಸ್ಯಾಸೌ ನವಕಾಲಿದಾಸವಿದುಷಃ" (1–98) ಎಂದು ತನ್ನ ಬಿರುದನ್ನು ಹೇಳಿಕೊಂಡಿದ್ದಾನೆ. ನಿಜವಾದ ಹೆಸರು ತಿಳಿಯದು. ಇವನ ಶಿಷ್ಯನಾದ ಕವಿಕುಂಜರನ ರಾಜಶೇಖರಚರಿತದಲ್ಲಿ ತನಗೆ ಆಶ್ರಯದಾತನಾದ ರಾಜಶೇಖರನು ಪಿನಾಕಿನೀ ನದಿಯ (ಉತ್ತರ ಪೆನ್ನಾರ್) ತೀರದಲ್ಲಿದ್ದ ವಿದ್ಯಾನಗರದ ದೊರೆಯೆಂದು ಹೇಳಿದ್ದಾನೆ. ರಾಜಶೇಖರನ ಕಾಲ 11ನೇ ಶತಕದ ಮಧ್ಯಭಾಗವಿರಬಹುದು. ಅಭಿನವ ಕಾಳಿದಾಸನು 11ನೇ ಶತಕದ ಆದಿಭಾಗದಲ್ಲಿದ್ದನೆಂದು ಹೇಳಬಹುದು. ಭಾಗವತಚಂಪುವನ್ನಲ್ಲದೆ ಅಭಿನವಭಾರತ ಚಂಪು, ಭಗವತ್ಪಾದಸಪ್ತತಿ ಮತ್ತು ಕಲಿವಿಡಂಬನಗಳನ್ನು ಈತನು ರಚಿಸಿದ್ದಾನೆ.

ಭಾಗವತಪುರಾಣದ ದಶಮಸ್ಕಂಧವೇ ಕಥೆಗೆ ಆಧಾರ. ಇದರಲ್ಲಿ ಆರು ವಿಲಾಸಗಳಿವೆ. ಚಂಪುವಿನ ಈ ಮಂಗಳಶ್ಲೋಕ ಕವಿಯ ಶೈಲಿಗೆ ಉದಾಹರಣೆಯಾಗಬಹುದು—

ಕಲ್ಯಾಣಂ ನಃ ಪ್ರಭೂತಂ ಕಲಯತು ಲಲಿತಾಲಾಪಶೈಲೇಯಬಾಲಾ
ಲೀಲಾಜಾಲಾನುಕೂಲಾ ಶಿಶಿರಕರಕಲಾ ಭಾನುಮಾಲಾ ಜಟಾಲಾ ।
ವಿಷ್ವಕ್ಶೇಷಾಹಿಭೂಷಾ ಪರಿಕಲಿತಸುಧಾಪೂರಧಾರಾನುಕಾರಾ
ಭದ್ರಾ ಮುದ್ರಾ ವಿನಿದ್ರಾ ಪುರಹರಣವಿಧೌ ಕಾಪಿ ಕಾರುಣ್ಯಪೂರ್ಣಾ ॥

ಕೃಷ್ಣನು ರುಕ್ಮಿಣಿ, ರಾಧೆ, ಗೋಪಿಕೆಯರೊಡನೆ ವಿಹರಿಸುವುದನ್ನು ಕವಿ ಮುಖ್ಯವಾಗಿ ವರ್ಣಿಸಿದ್ದಾನೆ. ಭಾಗವತಕ್ಕೆ ಉಚಿತವಾದ ಭಕ್ತಿ, ಆಧ್ಯಾತ್ಮಿಕತೆಗಳಿಗೆ ಇಲ್ಲಿ ಪ್ರಾಧಾನ್ಯವನ್ನು ಕೊಟ್ಟಿಲ್ಲ—

ಉಪಕ್ರಮ್ಯ ಸ್ತೋತುಂ ಹರಿಮಿಹ ಹಿ ವಾತ್ಸ್ಯಾಯನಕಥಾ
ಮುಧಾ ಮಾಘಾದೀನಾಮಿವ ಕೃತಿಷು ನೈವ ಪ್ರಕಟಿತಾಃ ॥ 1—12

ಎಂದು ಹೇಳಿ, ಹರಿಕಥಾಪ್ರಸಂಗದಲ್ಲಿ ಕಾಮಶಾಸ್ತ್ರವನ್ನು ವರ್ಣಿಸಿದರೆಂದು ಮಾಘಾದಿ ಕವಿಗಳನ್ನು ಆಕ್ಷೇಪಿಸಿದ್ದಾನೆ. ಈತನೇ ತನ್ನ ಕಾವ್ಯದಲ್ಲಿ ಶೃಂಗಾರದ ಅತಿರೇಕಕ್ಕೆ ಹೋಗಿ ಅಶ್ಲೀಲತೆಯನ್ನು ಮುಟ್ಟಿದ್ದಾನೆ ! ಯಮಕಾದ್ಯಲಂಕಾರಗಳಲ್ಲಿಯೂ, ಕೃತಕವಾದ ಅರ್ಥ ಚಮತ್ಕಾರದಲ್ಲಿಯೂ ಈತನಿಗೆ ಆದರ. ಗದ್ಯಪದ್ಯಗಳಲ್ಲಿ ಲಲಿತಪದರಚನೆಯೂ, ಅಲ್ಲಲ್ಲಿ ಮಧುರ ಭಾವಗಳ ಅಭಿವ್ಯಕ್ತಿಯೂ ಇದೆ. ಚಂಪೂಭಾಗವತಕ್ಕೆ ಅಕ್ಕಯ್ಯಸೂರಿಯು ರತ್ನಾವಳಿಯೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

## 8. ಚಂಪೂಭಾರತ

ಇದನ್ನು ರಚಿಸಿದ ಅನಂತಭಟ್ಟನಿಗೆ ಸಂಬಂಧಿಸಿದ ವಿವರ ದೊರೆತಿಲ್ಲ. ಈತನ ಕಾಲವು ನಿರ್ಣೀತವಾಗಿಲ್ಲ. ಭಾಗವತಚಂಪುವನ್ನು ಬರೆದ ಅಭಿನವಕಾಳಿದಾಸನೊಡನೆ ಸ್ಪರ್ಧಿಸಿ ಈತನು ಭಾರತಚಂಪುವನ್ನೂ, ಭಾಗವತಚಂಪುವನ್ನೂ ಬರೆದನೆಂದು ಪ್ರತೀತಿ ಇದೆ. ಇದು ನಿಜವಾಗಿದ್ದಲ್ಲಿ ಈತನ ಕಾಲವೂ 11ನೆಯ ಶತಕ ಈತನು ಅಷ್ಟು ಪ್ರಾಚೀನನಾಗಿರಲಾರ. 16ನೆಯ ಶತಕದಲ್ಲಿದ್ದ ಮಲಬಾರಿನ ನಾರಾಯಣಭಟ್ಟತಿರಿಯು ತನ್ನ ಪ್ರಬಂಧಗಳಲ್ಲಿ ಈತನನ್ನು ವಿಶೇಷವಾಗಿ ಉದಾಹರಿಸಿರುವುದರಿಂದ ಆತನ ಕಾಲಕ್ಕಿಂತ ಹಿಂದಿನವನು. ಚಂಪೂರಾಮಾಯಣದ ಯುದ್ಧ ಕಾಂಡವನ್ನು ಬರೆದ ಲಕ್ಷ್ಮಣಕವಿಯೊಡನೆ ಇವನು ಸ್ಪರ್ಧಿಸಿದನೆಂದು ಕಥೆ ಇದೆ. ಆ ಪಕ್ಷದಲ್ಲಿ ಅನಂತಭಟ್ಟನ ಕಾಲ 16ನೇ ಶತಕದ ಆದಿಭಾಗವಾಗುತ್ತದೆ. ಇದೇ ಕಾಲದಲ್ಲಿದ್ದವನೂ, ವ್ಯಾಸಯೋಗಿಚರಿತ ಚಂಪುವಿನ ಕರ್ತನೂ ಆದ ಸೋಮನಾಥನು ಅನಂತಭಟ್ಟನ ಸೋದರ ಅಳಿಯನೆಂದು ಪ್ರತೀತಿ ಇದೆ. ಚಂಪೂಭಾರತಕ್ಕೆ 17ನೆಯ ಶತಕದಲ್ಲಿದ್ದ ಮಾನವೇದನ ವ್ಯಾಖ್ಯಾನ ದೊರಕಿದೆ. ಅಲ್ಲದೆ ಈ ಚಂಪುವಿನ ಮೇಲೆ ಕುರವಿಕುಲದ ರಾಮಕವಿ, ಮಲ್ಲಾದಿ ಲಕ್ಷ್ಮಣಸ್ವಾಮಿ, ನಾರಾಯಣಸ್ವಾಮಿ, ಕುಮಾರತಾತಾರ್ಯ ಮತ್ತು ನರಸಿಂಹಾಚಾರ್ಯ ಎಂಬವರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ.

ಚಂಪೂಭಾರತದಲ್ಲಿ ಮಹಾಭಾರತದ ಕಥೆ 12 ಸ್ತಬಕಗಳಲ್ಲಿ ಸಂಗೃಹೀತವಾಗಿದೆ. ಭಾಷೆಯು ಪ್ರೌಢವಾಗಿದ್ದು ವ್ಯುತ್ಪಾದಕವಾಗಿದೆಯೆಂಬ ಕಾರಣದಿಂದ ಇದು ವಿಶೇಷ ಪ್ರಸಿದ್ಧವಾಗಿದೆ. ರಸಭಾವಗಳ ದೃಷ್ಟಿಯಿಂದ ನೋಡುವುದಾದರೆ ಇದರಲ್ಲಿ ಚಂಪೂರಾಮಾಯಣದ ಮಾಧುರ್ಯ ಇಲ್ಲ. ವಿಚಿತ್ರ ಕಲ್ಪನೆಯಲ್ಲಿಯೂ, ಶಬ್ದಚಮತ್ಕಾರದಲ್ಲಿಯೂ ಕವಿಗೆ ಆಸಕ್ತಿ. ಅಲ್ಲಲ್ಲಿ ರಂಜಕವಾದ ಕೆಲವು ವರ್ಣನೆಗಳು ದೊರೆಯುತ್ತವೆ. ಕಾವ್ಯದೃಷ್ಟಿಯಿಂದ ಮೊದಲಿನ ಸ್ತಬಕಗಳು ಉತ್ತಮ. ಉಳಿದದ್ದು ಬರಿಯ ಕಥಾಸಂಗ್ರಹ.

1. ಇದು ಹಸ್ತಿನಾವತಿಯ ವರ್ಣನೆ—

ತುಹಿನಕಿರಣವಂಶಸ್ಥೂಲಮುಕ್ತಾಫಲಾನಾಂ
ವಿಪುಲಭುಜವಿರಾಜದ್ವೀರಲಕ್ಷ್ಮೀವಿಭೂಷ್ಣಾಂ।
ಹಸಿತಸುರಪುರಶ್ರೀರಸ್ತಿ ಸಾ ಹಸ್ತಿನಾಖ್ಯಾ
ರಿಪುಜನದುರವಾಪಾ ರಾಜಧಾನೀ ಕುರೂಣಾಂ ॥ 1-3



2. ಮಕ್ಕಳಿಲ್ಲವೆಂದು ಕೊರಗುತ್ತಿದ್ದ ಪಾಂಡುವಿನ ಹಂಬಲವಿದು—

ಅಹಂ ಕಿಮಂಬಾ ಕಿಮಭೀಷ್ಟತಾಪದೇ
ತವೇತಿ ಮಾತುರ್ಧುರಿ ತಾತಪೃಚ್ಛಯಾ ।
ಪ್ರಲೋಭಿತುಲ್ಯಂ ಪ್ರವದಂತಮರ್ಭಕಂ
ಮುದಾ ಹಸನ್ ಜಿಘ್ರತಿ ಮೂರ್ಧ್ನಿ ಪುಣ್ಯಭಾಕ್ ॥ 1-34

3. ವಸಂತವರ್ಣನೆಯಲ್ಲಿರುವ ಗದ್ಯಪದ್ಯಗಳು ಲಲಿತಪದಗುಂಫನದಿಂದ ಬಂಧುರ ವಾಗಿವೆ—

(i) ಅಥ ಕದಾಚಿದಖಿಲಹರಿದಂತರನಿರಂತರಚಲಮಾನಮಲಯಪವಮಾನಕಂಪಿತಚಂಪಕಸಂಪಾದಿತಸಂಪದನುಕಂಪಿತನಿಲಿಂಪಪಥಾಃ, ಕೇಸರಕುಸುಮಕೇಸರಶಿಖರಭಾಸುರಧೂಲಿಧೂಸರದಿಶಃ ...।

(ii) ಕಿಂಶುಕಸ್ಯ ವದನೇ ರುಚಿರತ್ವಂ ಕಿಂಶುಕಸ್ಯ ಹೃದಯೇಽಪಿ ಮಶಿತ್ವಂ ।
ಕಿಂಶುಕಸ್ಯ ಕುಸುಮೇಷು ನದಂತೀ ಶಂಸತಿಸ್ಮ ಮಧುಪಾಲಿರಿತೀವ ॥
ಕುರುಬಕೈರವಕೇಲಿಭೃತಃ ಸುಧಾಸಮಧುರಂ ಮಧುರಂ ಮಧುಪಾ ಪಪುಃ ।
ಪಪುರಪಾಪುರವಾರ್ಯಮಪಿ ಸ್ಮಯಂ ನೃಪವನೇ ಪವನೇರಿತಪಾದಪೇ ॥ 1-68, 69

4. ಕವಿಯ ಅನುಪ್ರಾಸಮೋಹಕ್ಕೆ ಉದಾಹರಣೆ—

ಅಥ ಭಿಲ್ಲಮಲ್ಲ ಕುರುವಲ್ಲಭಾಪುಭಾ
ಪರಿಫುಲ್ಲಭಲ್ಲಕುಲಶಲ್ಯಪಲ್ಲವೈಃ ।
ಸ್ಥಗಿತಾವಲೋಕಸರಣಿಂ ದಿವೌಕಸಾಂ
ಸಮರಂ ಭಯಂಕರಜಪಂ ವಿತೇನತುಃ ॥ 4-83

ಕಾವ್ಯಸಮಾಪ್ತಿಯಲ್ಲಿರುವ ಕವಿಪ್ರಶಸ್ತಿ ಇದು—

ದಿಗಂತರಲುಠತ್ಕೀರ್ತಿರನಂತಕವಿಕುಂಜರಃ ।
ಪ್ರಾಣೈಸ್ತುಲ್ಯಂ ಸರಸ್ವತ್ಯಾಃ ಪ್ರಾಣೈಷೀಚ್ಚಂಪುಭಾರತಂ ॥
ವಾಚಾಮನಂತಸುಕವೇರ್ಮಸಂಧ್ಯೈವ ಮೂಲ್ಯಂ ॥

ಈ ಪ್ರಶಂಸೆ ಅತಿಶಯೋಕ್ತಿಯೆಂದು ಇಂದಿನ ದೃಷ್ಟಿಗೆ ತೋರಬಹುದು.

## 9. ಪುರುದೇವಚಂಪೂ :

ಜೈನಕವಿ ಅರ್ಹದಾಸನು ಈ ಚಂಪುವಿನಲ್ಲಿ ಜೈನಸಂತನಾದ ಪುರುದೇವನ ಜೀವನವೃತ್ತಾಂತವನ್ನು ವರ್ಣಿಸಿದ್ದಾನೆ. ಅರ್ಹದಾಸನು ಮಹಾವಿದ್ವಾಂಸನಾದ ಆಶಾಧರನ ಶಿಷ್ಯ. ಈತನ ಕಾಲ ಕ್ರಿ. ಶ. 13ನೇ ಶತಕ.

ಪುರುದೇವನ ಕಥೆ ಜೈನರ ಆದಿಪುರಾಣ ಮತ್ತು ಸುವ್ರತ ಪುರಾಣಗಳಲ್ಲಿದೆ. ತನ್ನ ಕವಿತೆ ಭಗವದ್‌ಭಕ್ತಿಯೆಂಬ ಬೀಜದಿಂದ ಹುಟ್ಟಿದ ಲತೆಯೆನ್ನುತ್ತಾನೆ ಅರ್ಹದಾಸ—

ಜಾತೇಯಂ ಕವಿತಾಲತಾ ಭಗವತೋ ಭಕ್ತ್ಯಾಖ್ಯಬೀಜೇನ ಮೇ
ಚಂಚತ್ಕೋಮಲಚಾರುಶಬ್ದನಿಚಯೈಃ ಪದ್ಯೈಃ ಪ್ರಕಾಮೋಜ್ಜ್ವಲಾ ।
ವೃತ್ತೈಃ ಪಲ್ಲವಿತಾ ತತಃ ಕುಸುಮಿತಾಲಂಕಾರವಿಚ್ಛಿತ್ತಿಭಿಃ
ಸಂಪ್ರಾಪ್ತಾ ವೃಷಭೇಶಕಲ್ಪತರುಂ ವ್ಯಂಗ್ಯಶ್ರಿಯಾ ವರ್ಧತೇ ॥

ಗದ್ಯದಲ್ಲಿ ಅನುಪ್ರಾಸಸಮಾಸಗಳ ಬಾಹುಳ್ಯ ಉಂಟು.

## 10. ವಿರೂಪಾಕ್ಷವಸಂತೋತ್ಸವ :

ವೆಂಕಟಾಚಾರ್ಯ ಮತ್ತು ಲಕ್ಷ್ಮಿ ಎಂಬ ದಂಪತಿಗಳ ಮಗನಾದ ಅಹೋಬಲಸೂರಿ ಈ ಚಂಪುವನ್ನು ರಚಿಸಿದ್ದಾನೆ. ಇತಿಹಾಸ ದೃಷ್ಟಿಯಿಂದ ಇದು ಗಣ್ಯವಾದದ್ದು. ವಿಜಯನಗರದಲ್ಲಿ ಪಂಪಾವಿರೂಪಾಕ್ಷ ವಸಂತರಥೋತ್ಸವವು ಹೇಗೆ ನಡೆಯುತ್ತಿತ್ತೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಪಾಮುಡಿಪಟ್ಟನ್ ಎಂಬ ಸ್ಥಳದ ಅಧಿಪತಿಯಾದ ಭೋಗೀಶ್ವರನ ಪ್ರೇರಣೆಯಿಂದ ಇದನ್ನು ಬರೆದುದಾಗಿ ಕವಿ ಹೇಳಿಕೊಂಡಿದ್ದಾನೆ. ಈ ಚಂಪುವಿನಲ್ಲಿ ಅಹೋಬಲನು ವಿದ್ಯಾರಣ್ಯರನ್ನೂ ವಿಜಯನಗರದ ರಾಜನಾದ ಹರಿಹರನನ್ನೂ ಪ್ರತ್ಯಕ್ಷದರ್ಶಿಯಂತೆ ವರ್ಣಿಸಿದ್ದಾನೆ. ಅವರ ಸಮಕಾಲಿಕನಾದ ಈ ಕವಿ 14ನೇ ಶತಮಾನದ ಉತ್ತರಾರ್ಧದಲ್ಲಿದ್ದನು.

ಇದರಲ್ಲಿ ನಾಲ್ಕು ಕಾಂಡಗಳಿವೆ. ವಸಂತನವರಾತ್ರದಲ್ಲಿ ನಡೆಯುವ ವಿರೂಪಾಕ್ಷದೇವರ ರಥೋತ್ಸವ. ಪಂಪಾಂಬಿಕೆಯೊಡನೆ ವಿವಾಹೋತ್ಸವ, ಬೇಟೆ ಮೊದಲಾದುವನ್ನು ಅವಭೃಥ ಸ್ನಾನಪರ್ಯಂತವಾಗಿ ವರ್ಣಿಸಲಾಗಿದೆ. ಉತ್ಸವದಲ್ಲಿ ಅನೇಕ ದೇಶಗಳ ರಾಜರೂ, ಸೇನಾಪತಿಗಳೂ, ವಿದ್ವಾಂಸರೂ, ಕವಿಗಳೂ ಭಾಗವಹಿಸುತ್ತಾರೆ. ಉತ್ಸವದಲ್ಲಿ ನೆರೆದಿರುವ ವ್ಯಕ್ತಿ ಅವರು ಯಾರೆಂದು ಕೇಳುತ್ತಾನೆ, ಅದಕ್ಕೆ ಉತ್ತರವಾಗಿ ವರ್ಣನೆ ಪ್ರಸ್ತುತವಾಗುತ್ತದೆ. ಪಾನಕ ಪೂಜೆಯ ವರ್ಣನೆಯೂ ಬರುತ್ತದೆ.

ವಿಜಯನಗರದ ಸ್ಥಾಪಕರಾದ ವಿದ್ಯಾರಣ್ಯರಿಗೂ, ಹರಿಹರನಿಗೂ ವರ್ಣನೆಯಲ್ಲಿ ಪ್ರಾಧಾನ್ಯ ಉಂಟು. ಕಾಶ್ಮೀರ, ಮೋಕ್ಷಪುರ, ಮಂಶನಗರ ಮೊದಲಾದ ದೇಶಗಳ ದೊರೆಗಳನ್ನೂ, ಸಾಮಂತರನ್ನೂ ವರ್ಣಿಸಲಾಗಿದೆ. ವಿದ್ಯಾನಗರ, ಕಮಲಾಪುರ, ಪಂಪಾ, ತುಂಗಭದ್ರಾ, ಪಾತಾಳವಿರೂಪಾಕ್ಷ—ಮೊದಲಾದ ಸ್ಥಳೀಯ ವರ್ಣನೆಗಳು ಸುಂದರವಾಗಿವೆ. ಹರದತ್ತಾಚಾರ್ಯ, ದೀಕ್ಷಿತ, ವಿದ್ಯಾಸಾಗರ ಮೊದಲಾದ ವಿದ್ವಾಂಸರ ಮತ್ತು ಕವಿಗಳ ಪ್ರಸ್ತಾವ ಇದೆ.

ಅಹೋಬಲಸೂರಿಯ ಇನ್ನೊಂದು ಕೃತಿ ಯತಿರಾಜ ವಿಜಯಚಂಪೂ.

## 11. ಆನಂದವೃಂದಾವನಚಂಪೂ :

ಚೈತನ್ಯಪಂಥದ ಪರಮಾನಂದದಾಸನು ಈ ಕೃತಿಯನ್ನು ರಚಿಸಿದ್ದಾನೆ. ಕವಿಕರ್ಣಪೂರ ಎಂಬುದು ಈತನ ಕಾವ್ಯರಚನಾಸಾಮರ್ಥ್ಯದಿಂದ ಬಂದ ಹೆಸರು. ಕಲ್ಕತ್ತೆಯ ಸಮೀಪದಲ್ಲಿರುವ



ಕುಮಾರಹಟ್ಟದಲ್ಲಿ ಕ್ರಿ. ಶ. 1524ರಲ್ಲಿ ಈತನು ಜನಿಸಿದನು. ತಂದೆಯ ಹೆಸರು ಶಿವಾನಂದಸೇನ. ಗುರು ಶ್ರೀನಾಥದೇವ. ಚೈತನ್ಯಚಂದ್ರೋದಯ ನಾಟಕ, ಅಲಂಕಾರ ಕೌಸ್ತುಭವೆಂಬ ಅಲಂಕಾರಗ್ರಂಥ—ಈತನ ಇನ್ನೆರಡು ಕೃತಿಗಳು.

ಆನಂದವೃಂದಾವನವು 22 ಸ್ತಬಕಗಳುಳ್ಳ ಬೃಹತ್ಕಾವ್ಯ. ಇದರಲ್ಲಿ ಶ್ರೀಕೃಷ್ಣನ ಜನ್ಮ ಮತ್ತು ಲೀಲೆಗಳನ್ನು ವರ್ಣಿಸಲಾಗಿದೆ. ಕರ್ಣಪೂರನು ಭಕ್ತಿಭಾವದಿಂದ ತುಂಬಿದ ಭಾವುಕನೂ, ಸಹೃದಯನೂ ಆದ ಕವಿ. ಲಲಿತಪದರಚನೆಯಿಂದ ಕೋಮಲಭಾವಗಳನ್ನು ಪ್ರಕಟಿಸುವುದರಲ್ಲಿ ಸಮರ್ಥ. ನೃತ್ಯ ಸಂಗೀತಗಳಲ್ಲಿ ಕವಿಗೆ ಒಳ್ಳೆಯ ಪಾಂಡಿತ್ಯವಿದೆ. ಈ ಚಂಪುವಿನಲ್ಲಿ ಪ್ರಧಾನ ರಸ ಶೃಂಗಾರ. ಅಲ್ಲಲ್ಲಿ ವೀರ ಅದ್ಭುತಗಳ ಅಭಿವ್ಯಕ್ತಿಯುಂಟು. ಕೃಷ್ಣನ ಮಿತ್ರ ಕುಸುಮಾಸವನಿಂದ ಹಾಸ್ಯವೂ ಪ್ರಕಟವಾಗಿದೆ. ವೃಂದಾವನಚಕ್ರವರ್ತಿ ಈ ಚಂಪುವಿನ ಮೇಲೆ ವ್ಯಾಖ್ಯಾನವನ್ನು ಬರೆದಿದ್ದಾನೆ.

1. ಖಳಜನರ ನಾಲಗೆ ಪರಕೆ ಇದ್ದಂತೆ—ಎನ್ನುತ್ತಾನೆ ಪರಮಾನಂದದಾಸ.

ನಿರ್ಮಲಯಸಿ ಭುವನತಲಂ ಸತತಾಕ್ಷಿಪ್ತೇನ ಪರಿಮಲೇನ ।
ಖಲರಸನೇ ಸಂಮಾರ್ಜನಿ ! ತದಪಿ ಚ ಭೀತಿರ್ಭವತ್‌ಸ್ಪರ್ಶೇ ॥ 1–6

2. ಕೃಷ್ಣನಲ್ಲಿ ರಾಧೆಯ ಅನುರಾಗವನ್ನು ಕಂಡು ಒಬ್ಬ ಗೋಪಿ ಹೇಳುತ್ತಾಳೆ. 'ನ ಹಿ ಕುಮುದಬಾಂಧವಮಂತರೇಣ ಕುಮುದ್ವತೀ ಮುದ್ವತೀ ಭವಿತುಮರ್ಹತಿ, ತಪನಮಂಡಲಮಂತರೇಣ ಕಮಲಿನೀ ಮಲಿನೀಭಾವಮರ್ಹತಿ. ನಹಿ ಜಲಧರೋತ್ಸಂಗಸಂಗಮಂತರೇಣ ಸೌದಾಮಿನೀ ದಾಮಿನೀಭವಿತುಮೀಷ್ಟೇ' ॥

## 12. ಗೋಪಾಲಚಂಪೂ :

ಚೈತನ್ಯಪಂಥದಲ್ಲಿ ಪ್ರಸಿದ್ಧನಾದ ಜೀವಗೋಸ್ವಾಮಿ ಇದನ್ನು ರಚಿಸಿದ್ದಾನೆ. ಕವಿಯು ಶ್ರೀಸರ್ವಜ್ಞ ಎಂಬ ಕರ್ಣಾಟರಾಜನ ವಂಶದವನು. ಈ ವಂಶದ ಕುಮಾರದೇವನಿಗೆ ಸನಾತನ, ರೂಪ, ವಲ್ಲಭ ಎಂಬ ಮೂವರು ಮಕ್ಕಳು. ವಲ್ಲಭನು ಚೈತನ್ಯಪ್ರಭುವಿನ ಶಿಷ್ಯ. ಈತನ ಮಗ ಜೀವಗೋಸ್ವಾಮಿ.

ಕವಿಯು ಫತೇಹ್‌ಬಾದ್ ಸಮೀಪದಲ್ಲಿರುವ ರಾಮಕೇಳಿಯಲ್ಲಿ ಕ್ರಿ. ಶ. 1523ರಲ್ಲಿ ಜನಿಸಿದನೆಂದು ತಿಳಿದುಬರುತ್ತದೆ. ಕಾಶಿಯಲ್ಲಿ ವಿದ್ಯಾಭ್ಯಾಸಮಾಡಿ ವೃಂದಾವನಕ್ಕೆ ಹೋಗಿ ನೆಲೆಸಿದನು. ತನ್ನ 85ನೆಯ ವಯಸ್ಸಿನಲ್ಲಿ—ಕ್ರಿ. ಶ. 1608ರಲ್ಲಿ ದೇಹತ್ಯಾಗ ಮಾಡಿದರು.

ಜೀವಗೋಸ್ವಾಮಿ ವ್ಯಾಕರಣಾದಿಶಾಸ್ತ್ರಗಳಲ್ಲಿ ನಿಷ್ಣಾತ. ಶ್ರೇಷ್ಠವಾದ ಕವಿತಾಸಾಮರ್ಥ್ಯ ಈತನಿಗಿದೆ. ಗೋಪಾಲಚಂಪುವನ್ನಲ್ಲದೆ ಹರಿನಾಮಾಮೃತವ್ಯಾಕರಣ. ಧಾತುಸಂಗ್ರಹ. ಷಟ್‌ಸಂದರ್ಭ ಮುಂತಾದ ಗ್ರಂಥಗಳನ್ನೂ ಬರೆದಿದ್ದಾನೆ. ಭಾಗವತಕ್ಕೆ ಕ್ರಮಸಂದರ್ಭ, ಬೃಹತ್‌ಕ್ರಮಸಂದರ್ಭ, ಸಂಕ್ಷೇಪವೈಷ್ಣವತೋಷಿಣಿ ಎಂಬ ಮೂರು ವ್ಯಾಖ್ಯಾನಗಳನ್ನು ರಚಿಸಿದ್ದಾನೆ. ಒಟ್ಟು ಇವನ ಕೃತಿಗಳು ಸುಮಾರು 21. ಈತನ ದೊಡ್ಡಪ್ಪನಾದ

ರೂಪಗೋಸ್ವಾಮಿಯು ಉಜ್ಜ್ವಲನೀಲಮಣಿ, ವಿದಗ್ಧಮಾಧವ ಮುಂತಾದ ಗ್ರಂಥಗಳನ್ನು ರಚಿಸಿ ಸುಪ್ರಸಿದ್ಧನಾಗಿದ್ದಾನೆ.

## ಗ್ರಂಥಪರಿಚಯ :

ಗೋಪಾಲಚಂಪುವಿನಲ್ಲಿ ಪೂರ್ವಚಂಪೂ, ಉತ್ತರಚಂಪೂ, ಎರಡು ವಿಭಾಗಗಳಿವೆ. ಕವಿಯು 'ಚಂಪೂದ್ವಯ' ಎಂದು ಕರೆದಿದ್ದಾನೆ. ಪೂರಣ ಎಂದು ಅಂತರ್ವಿಭಾಗದ ಹೆಸರು. ಪೂರಣಗಳ ಸಂಖ್ಯೆ ಪೂರ್ವಚಂಪುವಿನಲ್ಲಿ 33. ಉತ್ತರಚಂಪುವಿನಲ್ಲಿ 37. ಕವಿಯು ಈ ಚಂಪೂದ್ವಯವನ್ನು ಕ್ರಮವಾಗಿ ಕ್ರಿ.ಶ. 1510 ಮತ್ತು 1514ರಲ್ಲಿ ಬರೆದು ಮುಗಿಸಿದನು.

ಭಾಗವತದ ದಶಮಸ್ಕಂಧದಲ್ಲಿರುವ ಶ್ರೀಕೃಷ್ಣಚರಿತೆ ಈ ಕಾವ್ಯದ ವಸ್ತು. ಚೈತನ್ಯ ಸಂಪ್ರದಾಯದಂತೆ ರಾಧೆ ಕೃಷ್ಣಪತ್ನಿಯರಲ್ಲಿ ಶ್ರೇಷ್ಠಳು. ವಸುದೇವ ದೇವಕಿಯರು ನಾಮಮಾತ್ರದಿಂದ ಕೃಷ್ಣಜನ್ಮ ಪ್ರಸಂಗದಲ್ಲಿ ಬರುತ್ತಾರೆ. ನಂದಯಶೋದೆಯರಿಗೇ ಪ್ರಾಧಾನ್ಯ. ಗೋಕುಲದಲ್ಲಿ ಹಿಂದೆ ನಡೆದ ಕಥೆಯನ್ನು ಪರಂಧಾಮವಾದ ಗೋಲೋಕದಲ್ಲಿ ಪೂರ್ವಕಥಾಶ್ರವಣಪ್ರಸಂಗವೆಂದು ನಿರೂಪಿಸಲಾಗಿದೆ.

ಗೋಲೋಕದಲ್ಲಿ ನಂದನಸಭೆ ನಡೆಯುತ್ತದೆ. ಮಧುಕಂಠ, ಸ್ನಿಗ್ಧಕಂಠ ಎಂಬ ಇಬ್ಬರು ಸೂತಪುತ್ರರು ಕಥೆಯನ್ನು ಹೇಳುತ್ತಾರೆ. ಪ್ರಾತಃಸಭೆಯಲ್ಲಿ ನಂದಾದಿಗೋಪಾಲರೂ, ಯಶೋದೆ, ರಾಧೆ ಮುಂತಾದ ಸ್ತ್ರೀಯರೂ ಇರುತ್ತಾರೆ. ಆಗ ವಾತ್ಸಲ್ಯಭಾವದ ನಿರೂಪಣೆ ಇರುತ್ತದೆ. ರಾತ್ರಿ ಸಭೆಯಲ್ಲಿ ಶೃಂಗಾರಭಾವದ ನಿರೂಪಣೆ. ಆಗ ನಂದ, ಯಶೋದೆ ಮುಂತಾದ ಹಿರಿಯರು ಇರುವುದಿಲ್ಲ. ಶ್ರೀಕೃಷ್ಣ, ಬಲರಾಮರು ಉಭಯಸಭೆಗಳಲ್ಲಿಯೂ ಉಪಸ್ಥಿತರಾಗಿರುತ್ತಾರೆ.

ಕಥೆಯನ್ನು ಉಪನ್ಯಾಸ ಅಥವಾ ಹರಿಕಥೆಯ ರೂಪದಲ್ಲಿ ಹೇಳಿದೆ. ಭಾಗವತ, ಮನುಸ್ಮೃತಿ ಮುಂತಾದುವನ್ನು ಅಲ್ಲಲ್ಲಿ ಉದಾಹರಿಸಿದೆ. ನಡುನಡುವೆ ಶ್ರೋತೃಗಳು ಪ್ರಶ್ನೆಯನ್ನು ಕೇಳುತ್ತಾರೆ. ಪ್ರಾತಃಸಭೆಯಲ್ಲಿ ನಂದನನ್ನೂ, ರಾತ್ರಿಸಭೆಯಲ್ಲಿ ರಾಧೆಯನ್ನೂ ಸಂಬೋಧಿಸಿ ಒಂದೊಂದು ಪೂರಣದ ಸಮಾಪ್ತಿ ಇರುತ್ತದೆ. ಉದಾ:—

1. ಈದೃಶಸ್ತವ ಗೋಪೇಂದ್ರ ಪುತ್ರಃ ಪುಣ್ಯಕೃತಸ್ತವಃ ।
ಪ್ರೇಮಾದ್ರ್ರಃ ಸುಹೃದಾಂ ಯಸ್ತು ದಾವಾಗ್ನಿಮಪಿ ಪೀತವಾನ್ ॥

ಪೂ.ಚಂ. 16–69

2. ರಾಧೇ ಪೂರ್ವಕಥಾ ಸೇಯಂ ನತು ಸಾಂಪ್ರತಿಕೀ ಸ್ಥಿತಿಃ ।
ಪಶ್ಯ ತ್ವದ್ವದನಂ ಮ್ಲಾನಂ ಪಶ್ಯನ್ ಮ್ಲಾಯತಿ ಸೋಽಪ್ಯಸೌ ॥

ಉ. ಚಂ. 2–69

ಜೀವಗೋಸ್ವಾಮಿಯು ವ್ಯಾಕರಣಶಾಸ್ತ್ರಕ್ಕೆ ಸಂಬಂಧಿಸಿದಂತೆ ಧಾತುಕೃತ್ತದ್ಧಿತಗಳ ಅಪೂರ್ವ ಪ್ರಯೋಗಗಳನ್ನು ವಿಪುಲವಾಗಿ ಮಾಡಿದ್ದಾನೆ. ಆದರೂ ಬಂಧಮಾಧುರ್ಯವು ಕೆಡದಂತೆ



ಎಚ್ಚರಿಕೆ ವಹಿಸಿದ್ದಾನೆ. ನಾನಾಬಗೆಯ ವೃತ್ತಗಳನ್ನೂ, ಜಯದೇವನ ಗೀತಗೋವಿಂದದಲ್ಲಿರುವಂತೆ ಅನುಪ್ರಾಸಯುಕ್ತವಾದ ಗೀತೆಗಳನ್ನೂ ಬಳಸಿದ್ದಾನೆ. ವಾತ್ಸಲ್ಯಶೃಂಗಾರಭಾವಗಳೇ ಇಲ್ಲಿ ಮುಖ್ಯ. ಕಂಸವಧೆ ಮುಂತಾದ ಪ್ರಸಂಗಗಳನ್ನು ಸಂಕ್ಷೇಪವಾಗಿ ಮುಗಿಸಿಬಿಡುತ್ತಾನೆ.

ಗದ್ಯವು ಸಾಕಷ್ಟಿದ್ದರೂ ದೀರ್ಘಸಮಾಸರಚನೆ ಇಲ್ಲ. ಸಾಮಾನ್ಯವಾಗಿ ಎಲ್ಲವೂ ಚಿಕ್ಕ ವಾಕ್ಯಗಳು. ಕವಿಯ ಸಂರಂಭವೆಲ್ಲವೂ ಶ್ರೀಕೃಷ್ಣನ ಲೀಲೆಯನ್ನೂ, ರಾಧೆಯ ಸೌಭಾಗ್ಯವನ್ನೂ ವರ್ಣಿಸುವದರಲ್ಲಿ ವಿನಿಯುಕ್ತವಾಗಿದೆ.

1. ಯಶೋದೆ ಮೊಸರು ಕಡೆಯುವಾಗ ಹೇಳಿಕೊಳ್ಳುವ ಹಾಡು—
ಆನಂದೋದ್ಭವ—ಜನ್ಮಮಹೋತ್ಸವ—ನಂದಿತಗೋಪಸಮಾಜ ।
ಪೂತನಿಕಾಮೃತಿ—ನವಮಂಗಲಕೃತಿ—ಪಲಯಿತಗೋಕುಲರಾಜ ॥
ಧೈರ್ಯನಿವರ್ತನ—ಶಕಟವಿವರ್ತನಮನುಭವ್ಯೇನ ಪರೀತ ।
ಸತೃಣಾವರ್ತಕ—ವಾಯುನಿವರ್ತಕ—ಪರಮೇಶೇನಾನೀತ ॥
ಮಧುರಪ್ರಾಂಗಣ—ವಿರಚಿತರಿಂಗಣ—ಜಲಜನಯನಸುಪುಣ್ಯ ।
ನಾನಾಕೇಲಿಷು ನೃಶ್ಯಕಲಾಲಿಷು ದರ್ಶಿತವರನೈಪುಣ್ಯ ॥

ಪೂ. ಚಂ. 8—5

2. ಹಸುಗಳೂ ಶ್ರೀಕೃಷ್ಣನನ್ನು ಬಿಟ್ಟಿರಲಾರವು—
ಗಾವೋಽಹಂಕೃತಿಘೋಷಣಾಪಲಯಿತಾಃ ಕೃಷ್ಣಂ ಲಿಹಂತ್ಯಶ್ಚಿರಾತ್
ತದ್ಬ್ರಹುಂದ್ವಯವೇಷ್ಟನೇನ ವಿಲಸತ್ಕಂಠ್ಯಃ ಸಮುತ್ಕಂಠಿತಾಃ ।
ಯತ್ನಾತ್ತ್ಯಾಜಿತತದ್ಗ್ರಹಾಶ್ಚ ಪಶುಪೈಃ ಕ್ಷಿಪ್ತಾಶ್ಚ ತಸ್ಥುಶ್ಚಿರಂ
ತಾಸ್ತದ್ವಕ್ತ್ರಸುಧಾಕರದ್ಯುತಿಸುಧಾಪೀತಾ ನ ತೃಪ್ತೇಕ್ಷಣಾಃ ॥

ಪೂ. ಚಂ. 17—19

3. ಭಾಗವತದ ಗೋಪಿಕಾಗೀತೆಯ ಛಾಯೆಯನ್ನಿಲ್ಲಿ ಕಾಣಬಹುದು—
ಯದಪಿ ತೇ ಪದಂ ಶ್ರೀನಿಕೇತನಂ
ವೃಜಿನಜಿನ್ಮಹಾಪುಣ್ಯಕೇತನಂ ।
ತದಪಿ ಗೋಗಣಸ್ಯಾನುವರ್ತನಂ
ವಿಷಭೃತಃ ಶಿರೋವರ್ತಿನರ್ತನಂ ॥

ಪೂ. ಚಂ. 25—11

4. ಶ್ಲೇಷದ ಬಳಕೆ ಪರಿಮಿತ. ಕೃಷ್ಣನು ಕಾಳಿಯಸರ್ಪಕ್ಕೆ ಹೇಳುವ ಮಾತಿದು—
ರೇಫಂ ವಿಸೃಷ್ಟಂ ನಿರ್ಮಾಯಾತ್ ಅವಸಾನೇ ಪದಾಂತಗಂ ।
ಇತಿ ಶಾಸನವಿಜ್ಞಾನಾಂ ಮತಮೇವ ಮತಂ ಮಮ ॥

ಪೂ. ಚಂ, 13—75

(ರೇಫ=ನೀಚ; ರಕಾರ, ವಿಸೃಷ್ಟ=ಪರಿತ್ಯಕ್ತ; ವಿಸರ್ಗ)

5. ಕೃಷ್ಣನಿಂದ ಎಳೆಯಲ್ಪಟ್ಟ ಕಂಸನು ಮಂಚದಿಂದ ಕೆಳಗೆ ಬಿದ್ದನು—

ಪತತ್‌ಖಡ್ಗ ಚರ್ಮಾ ಗಲದ್ರತ್ನವರ್ಮಾ
ಭ್ರಮತ್ಸರ್ವಕೇಶಃ ಸ್ಖಲನ್ಮೂರ್ಧವೇಶಃ ।
ಸ ಮಂಚಾದಧಸ್ತಾತ್ ಜನಾನಾಂ ಪುರಸ್ತಾತ್
ಅನೇನಾಧಿರೂಢಃ ಪಪಾತಾತಿಮೂಢಃ ॥

ಉ.ಚಂ. 5–76

13. ವರದಾಂಬಿಕಾಪರಿಣಯಚಂಪೂ :

ವಿಜಯನಗರದ ರಾಜ ಅಚ್ಯುತರಾಯನ ರಾಣಿ ತಿರುಮಲಾಂಬೆ ಇದರ ಕವಯಿತ್ರಿ. ಅಚ್ಯುತರಾಯನು ಕ್ರಿ.ಶ. 1529ರಲ್ಲಿ ಪಟ್ಟಾಭಿಷಿಕ್ತನಾದನೆಂದು ಕಾಳಹಸ್ತಿಯ ಒಂದು ಶಾಸನದಿಂದ ಗೊತ್ತಾಗಿದೆ. ಇವನು ಕ್ರಿ.ಶ. 1542ರವರೆಗೆ ಹಂಪೆಯಲ್ಲಿ ಅರಸನಾಗಿದ್ದನು. ಈ ರಾಜನು ವರದಾಂಬೆಯನ್ನು ಮದುವೆಯಾದನೆಂದೂ, ಅವರ ಮಗ ಚಿನವೇಂಕಟಾದ್ರಿಯು ಚಿಕ್ಕವಯಸ್ಸಿನಲ್ಲಿ ಯುವರಾಜನಾದನೆಂದೂ ಈ ಚಂಪುವಿನಲ್ಲಿ ವರ್ಣಿತವಾಗಿದೆ. ಆದ್ದರಿಂದ ಕ್ರಿ.ಶ. 1540–42ರ ಅವಧಿಯಲ್ಲಿ ಈ ಕಾವ್ಯ ರಚಿತವಾಗಿರಬೇಕು.

ತಿರುಮಲಾಂಬೆ ಅಚ್ಯುತರಾಯನ ಪತ್ನಿ. ಸುಭದ್ರಾಪರಿಣಯವೆಂಬ ಪ್ರಾಚೀನ ತೆಲುಗು ಕಾವ್ಯದಲ್ಲಿ ಅವಳು ಅಚ್ಯುತರಾಯನ ರಾಜಮಹಿಷಿಯೆಂದು ವರ್ಣಿತವಾಗಿದೆ. ವರದಾಂಬಿಕಾಪರಿಣಯದ ಸಮಾಪ್ತಿವಾಕ್ಯದಲ್ಲಿ ಸ್ವಲ್ಪಮಟ್ಟಿಗೆ ತನ್ನ ಪರಿಚಯವನ್ನು ಕವಯಿತ್ರಿ ಮಾಡಿಕೊಟ್ಟಿದ್ದಾಳೆ—

"ಇತ್ಯೇಕಮಾರಾಕರ್ಣನಮಾತ್ರಹೃದ್ಯಥಾವಧಾರಿತನವ್ಯಕಾವ್ಯನಾಟಕಾಲಂಕಾರಪುರಾಣಾಗಮರಹಸ್ಯಸಾರಸ್ಯಾನುಬಂಧಸಮಿಂಧಾನಸ್ವಾಭಾವಿಕಪ್ರತಿಭಾನುಭಾವಯಾ,......ವಿರಿಂಚಿಚಂಚಲಸಮಾನಾನಖಾಂಚಲ—ಸಮುದಂಚಿತ–ವಿಪಂಚೀ–ಪ್ರಪಂಚಿತ– ಪಂಚಮಮಾಧುರೀಮೋದಂಚನವಿಕಸ್ವರಕಂಠಸ್ವರಯಾ, ನಾನಾದೇಶಪ್ರತಿಷ್ಠಿತಾನೇಕವಿರಚಿತ–ವಾಜಪೇಯ–ಪೌಂಡರೀಕ–ಸರ್ವತೋಮುಖ–ಮಹಾಧ್ವರ – ದ್ವಿಜವರ – ವಿತೀರ್ಯಮಾಣಾಶ್ರೀಪಾದಪರಿಪೋಷಿತ – ಭಾಗ್ಯಸೌಭಾಗ್ಯಯಾ, ನಿಯತರಕ್ಷಿತಕವಿಕುಟುಂಬಯಾ, ತಿರುಮಲಾಂಬಯಾ ನಿರ್ಮಿತಂ ವರದಾಂಬಿಕಾಪರಿಣಯಂ ನಾಮ ಚಂಪೂಕಾವ್ಯಮಾಚಂದ್ರತಾರಕಮಭಿವರ್ಧತಾಂ ॥"

—ಕವಯಿತ್ರಿಯ ಮಧುರವಾದ ಗದ್ಯರಚನಾಶೈಲಿಗೆ ಇದು ಉದಾಹರಣೆಯಾಗಿದೆ.

**ಕಥಾಸಾರಂಶ :**

ಅಚ್ಯುತರಾಯನ ತಂದೆ ನೃಸಿಂಹರಾಜನು ಮಹಾಶೂರ; ಚಂದ್ರವಂಶೀಯನಾದ ಕ್ಷತ್ರಿಯ, ನಾಲ್ಕುದಿಕ್ಕುಗಳಿಗೂ ಹೋಗಿ ದಿಗ್ವಿಜಯ ಮಾಡಿಕೊಂಡು ಬರುತ್ತಾನೆ. ದಕ್ಷಿಣದಲ್ಲಿ ಚೋಲ ರಾಜನನ್ನು ಜಯಿಸಿ ರಾಮೇಶ್ವರದವರೆಗೆ ಹೋಗಿ ಹಿಂದಿರುಗುತ್ತ ಶ್ರೀರಂಗಪಟ್ಟಣವನ್ನು ಗೆಲ್ಲುತ್ತಾನೆ. ಗೋಕರ್ಣದಲ್ಲಿ ಗೋಕರ್ಣೇಶ್ವರನನ್ನು ಪೂಜಿಸಿ ಚಿನ್ನದ ತುಲಾಭಾರವನ್ನು ಮಾಡಿಸಿಕೊಂಡು ಎಲ್ಲ ಚಿನ್ನವನ್ನೂ ದಾನಮಾಡುತ್ತಾನೆ. ಉತ್ತರದಲ್ಲಿ ಕಾಂಭೋಜ, ಬಾಹ್ಲೀಕ, ತುರುಕ್ಕ, ಸುರತ್ರಾಣ(ಸುಲ್ತಾನ್)ರನ್ನು ಜಯಿಸಿ ವಿಜಯನಗರಕ್ಕೆ ಹಿಂದಿರುಗುತ್ತಾನೆ. ಅನಂತರ ಓಬಮಾಂಬಾ ಎಂಬವಳನ್ನು ಮದುವೆಯಾಗುತ್ತಾನೆ. ರಾಜಾನೃಸಿಂಹನಿಗೆ ಅಚ್ಯುತರಾಯನೆಂಬ ಮಗನು ಜನಿಸಿ ಪಟ್ಟಾಭಿಷಿಕ್ತನಾಗುತ್ತಾನೆ. ಅಚ್ಯುತರಾಯನು ಒಂದು ದೇವಸ್ಥಾನದಲ್ಲಿ ಸೂರ್ಯವಂಶದ ವರದಾಂಬಿಕೆ ಎಂಬ ಕನ್ಯೆಯನ್ನು ನೋಡಿ ಮೋಹಿತನಾಗಿ ಮದುವೆಯಾಗುತ್ತಾನೆ. ಆ ದಂಪತಿಗಳ ಮಗ ಚಿನವೇಂಕಟಾದ್ರಿ, ಅವನು ಚಿಕ್ಕವಯಸ್ಸಿನಲ್ಲಿಯೇ ಯುವರಾಜನಾದನೆಂಬಲ್ಲಿಗೆ ಕಥೆ ಸಮಾಪ್ತವಾಗುತ್ತದೆ.

ಚಾರಿತ್ರಿಕ ವಿಷಯವನ್ನು ತಿರುಮಲಾಂಬೆ ಕಾವ್ಯಶೈಲಿಯಲ್ಲಿ ವರ್ಣಿಸಿದ್ದಾಳೆ. ವರದಾಂಬೆ ತನ್ನ ಸವತಿಯಾದರೂ ಅವಳನ್ನು ತಿರುಮಲಾಂಬೆ ಕವಿದೃಷ್ಟಿಯಿಂದ ನೋಡಿ ಆತ್ಮೀಯವಾಗಿ ವರ್ಣಿಸಿರುವುದು ಕವಯಿತ್ರಿ ಸಹೃದಯತೆಗೆ ನಿದರ್ಶನ.

ಈ ಚಂಪುವಿನಲ್ಲಿ ಗದ್ಯಪದ್ಯಗಳ ಸಮಮಿಶ್ರಣವಿದೆ. ಲಲಿತಪದರಚನೆ. ವರ್ಣನಾಚಾತುರ್ಯ ಮೆಚ್ಚುವಂತಹವು. ಅಚ್ಯುತರಾಯನ ರೂಪವರ್ಣನೆ ವಿಸ್ತೃತವಾಗಿದೆ. ಪುರುಷಸೌಂದರ್ಯವನ್ನು ಇಷ್ಟು ದೀರ್ಘವಾಗಿ ಚಿತ್ರಿಸಿರುವುದು ಸಂಸ್ಕೃತಸಾಹಿತ್ಯದಲ್ಲಿ ವಿರಳ. ವರದಾಂಬೆಯಲ್ಲಿ ಅನುರಕ್ತನಾದ ಅಚ್ಯುತರಾಯನ ವಿಪ್ರಲಂಭಶೃಂಗಾರವೂ ವಿಸ್ತೃತ. ಈ ಕಾವ್ಯದಲ್ಲಿ ಸ್ತಬಕ ಮುಂತಾದ ಅಂತರ್ವಿಭಾಗಗಳಿಲ್ಲ.

1. ಇದು ಕಾವೇರೀವರ್ಣನೆ :

............ಶಮಿಜನಮ್ಮತಿಮಿವ ಸರ್ವರಸಾವಧೀರಣನಿಪುಣಾಮೃತರುಚಿಂ, ಶರ್ವಾಣೀಮಿವ ಸಹ್ಯಗಿರೀಶದೃಢತರರಸಾನುಭವಾಂ, ರಾಮಕಥಾಮಿವ ಬಹುಲಹಂಲಸಿತಾಂ, ಶೈಲೂಷೀಮಿವ ಬಹುಶಸ್ತ್ರರಂಗನಟನಶೋಭಿತಾಂ............ಪಾಥೋರಸಾವಧ ತಸುಧಾಮಾಧುರೀಂ, ಪಯೋಧಿರಾಜಪ್ರಧಾನಾಂತಃಪುರೀಂ, ಪಾತಕವಾತಂಧಯಮಯೂರೀಂ, ಕಾವೇರೀಮತಾರೀತ್॥

2. ರಾಜನೃಸಿಂಹನ ರಾಣಿ ಓಬಮ್ಮನಿಗೆ ಪುತ್ರೋತ್ಸವವಾಯಿತು—

ದುಗ್ಧಾಂಬುರಾಶಿಲಹರೀವ ತುಷಾರಭಾನುಂ
ಅರ್ಥಂ ನವೀನಮನಘಾ ಸುಕವೇರಿವೋಕ್ತಿಃ ।
ಪ್ರತ್ಯಙ್ಮುಖಸ್ಯ ಯಮಿನಃ ಪ್ರತಿಭೇವ ಬೋಧಂ
ಪ್ರಾಸೂತ ಭಾಗ್ಯಮಹಿತಂ ಸುತಮೋಬಮಾಂಬಾ ॥

3. ಜಲಕ್ರೀಡೆಯಾಡುವಾಗ ನೀರಲ್ಲಿ ಮುಳುಗಿ ಏಳುತ್ತಿದ್ದ ಒಬ್ಬ ಸುಂದರಿ ಮೇಘದಲ್ಲಿ ಉನ್ಮೇಷಗೊಳ್ಳುವ ಮಿಂಚಿನಂತೆ ಕಾಣಿಸಿದಳು—

ಮುಹುಃ ಸರೋವಾರಿಷು ಕೇಲಿಲೋಲಾ
ನಿಮಜ್ಜನೋನ್ಮಜ್ಜನಮಾಚರಂತೀ ।
ಬಲಾಹಕಾಂತಃಪರಿನೃತ್ಯಮಾನಾ
ಸೌದಾಮಿನೀವಾಜನಿ ಚಂಚಲಾಕ್ಷೀ ॥ —152

ವಿಜಯನಗರದ ರಾಜಪರಂಪರೆಯಲ್ಲಿ ಹಿಂದೆ ಗಂಗಾಂಬಿಕೆ ಮಧುರಾವಿಜಯವನ್ನು ಬರೆದಿದ್ದಳು. ಅದು ಪೂರ್ತಿಯಾಗಿ ದೊರಕಿಲ್ಲ. ಮಹಿಳೆಯರು ಬರೆದ ಕಾವ್ಯಗಳಲ್ಲಿ ಪೂರ್ಣವಾಗಿ ದೊರಕಿರುವ ಕಾವ್ಯ ವರದಾಂಬಿಕಾಪರಿಣಯ ಒಂದೇ.

## 14. ಶ್ರೀರಾಮಾನುಜಚಂಪೂ :

ಇದನ್ನು ರಚಿಸಿದ ರಾಮಾನುಜಾಚಾರ್ಯನು ಈ ಚಂಪುವಿನ ಆರಂಭದಲ್ಲಿ ತನ್ನ ಪರಿಚಯವನ್ನು ತಿಳಿಸಿದ್ದಾನೆ. ಈತನು ವಾಧೂಲಗೋತ್ರದ ಶರಣಮಾಚಾರ್ಯನ ಮಗ. ಜನಿಸಿದ ಸ್ಥಳ ಚಿಂಗಲಪೇಟೆ ಜಿಲ್ಲೆಯ ತಿರುವೆಲ್ಲೂರು. ಕವಿಯು ವೆಂಕಟಾಚಾರ್ಯನಿಂದ ದಿವ್ಯಪ್ರಬಂಧವನ್ನೂ, ಯಜ್ಞನಾರಾಯಣನಿಂದ ವ್ಯಾಕರಣವನ್ನೂ, ಲಕ್ಷ್ಮಣಾಚಾರ್ಯನಿಂದ ಶ್ರೀಭಾಷ್ಯವನ್ನೂ ಅಧ್ಯಯನ ಮಾಡಿದ್ದನು. ಈತನ ಪ್ರಪಿತಾಮಹನ ತಂದೆ ರಂಗರಾಜನು ವಿಜಯನಗರದ ಕೃಷ್ಣದೇವರಾಯನಿಂದ (ಕ್ರಿ. ಶ. 1509—1529) ಸಂಮಾನಿತನಾಗಿದ್ದನು. ಆದ್ದರಿಂದ ರಾಮಾನುಜಕವಿಯ ಕಾಲ ಕ್ರಿ. ಶ. 17ನೆಯ ಶತಕದ ಆದಿಭಾಗವಾಗಿರಬಹುದು.

ವಿಶಿಷ್ಟಾದ್ವೈತಮತಾಚಾರ್ಯರಾದ ಶ್ರೀರಾಮಾನುಜರ ಜೀವನಚರಿತೆ ಇದರಲ್ಲಿ ವರ್ಣಿತವಾಗಿದೆ. ಶ್ರೀರಾಮಾನುಜರ ಬಾಲ್ಯ, ವಿದ್ಯಾಭ್ಯಾಸ, ಯಾಮುನಾಚಾರ್ಯದರ್ಶನ, ಸಂನ್ಯಾಸ, ಗ್ರಂಥಪ್ರಣಯನ, ಚೋಳರಾಜನ ಆಗ್ರಹ, ದಿಲ್ಲೀಶ್ವರನ ಮಗಳ ಬಳಿಯಿದ್ದ 'ರಾಮಪ್ರಿಯ' ವಿಗ್ರಹವನ್ನು ತಂದು ಯಾದವಗಿರಿಯಲ್ಲಿ (ಮೇಲುಕೋಟೆ ಪ್ರತಿಷ್ಠಾಪನೆ. ಶ್ರೀರಂಗದಲ್ಲಿ ನಿವಾಸ—ಇವುಗಳನ್ನು ಕವಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಮತೀಯವಿಚಾರಗಳನ್ನು ಹೆಚ್ಚಾಗಿ ಪ್ರಸ್ತಾವಿಸದೆ ಕಥಾವರ್ಣನೆಯಲ್ಲಿ ಕವಿ ಆಸಕ್ತನಾಗಿದ್ದಾನೆ. ಗದ್ಯಪದ್ಯಗಳು ಸರಸಬಂಧುರವಾಗಿವೆ. ಈ ಚಂಪುವಿನಲ್ಲಿ ಹತ್ತು ಸ್ತಬಕಗಳಿವೆ.

1. ರಾಮಾನುಜರು ದುರ್ಗಮವಾದ ವಿಂಧ್ಯಾಟವಿಯನ್ನು ಕಾಣುತ್ತಾರೆ—

'ಕಿಂಚಿದ್ದ್ವಪದಂ ಸಮಂಚನ್ ಕಂತರ್ಕೈರಿವ ಕಂಟಕೈರಾಕೀರ್ಣಂ, ದರ್ವಾದಿಭಿರಿವ ದುಷ್ಟಮೃಗೈಃ ಸಂಪೂರ್ಣಂ, ಆತಪತಪ್ತಸಿಕತಾಚೂರ್ಣಂ, ವಿದೀರ್ಣವಿಶೀರ್ಣಶಿಲಾಶಕಲೋದೀರ್ಣಾಭ್ಯರ್ಣಂ, ದುಸ್ತರಂ ದಂತುರಂ ಕಾಂತಾರಾಂತರಂ ಸಮಂತಾದವೇಕ್ಷಮಾಣಃ' 3–35

2. 'ರಾಮಪ್ರಿಯ' ವಿಗ್ರಹದಿಂದ ವಿರಹಿತಳಾದ ದಿಲ್ಲೀಶ್ವರಪುತ್ರಿಯ ವಿಪ್ರಲಂಭವಿದು—

ಸ್ಮಾರಂ ಸ್ಮಾರಂ ಮದನಜನಕಂ ತದ್ವಿಯೋಗಾತಿಖಿನ್ನಾ
ನಾಹಾರೇಚ್ಛಾಂ ಕಲಯತಿ ಪರಂ ನೋ ವಿಹಾರೇಷು ವಾಂಛಾಂ ।
ಆಶಾಃ ಸರ್ವಾಃ ಸ್ತಿಮಿತನಯನಂ ಶಶ್ವದಾಲೋಕಯಂತೀ
ಕಾಂತಾ ಸೇಯಂ ಸಪದಿ ಸುತರಾಂ ಭ್ರಾಂತಚಿತ್ತೇವ ಜಾತಾ ॥ 10–2

## 15. ಪಾರಿಜಾತಹರಣಚಂಪೂ :

ಪ್ರಸಿದ್ಧವೈಯಾಕರಣ ನಾಗೇಶಭಟ್ಟನ ಗುರುವಾದ ಶೇಷಕೃಷ್ಣನು ಈ ಚಂಪುವನ್ನು ರಚಿಸಿದ್ದಾನೆ. ಇವನ ತಂದೆ ಶೇಷನರಸಿಂಹ. ಮೊಗಲ್ ಚಕ್ರವರ್ತಿ ಅಕ್ಬರನ ಮಂತ್ರಿ ತೋದರಮಲ್ಲನ ಮಗ ಗೋವರ್ಧನಧಾರಿಯು ಶೇಷಕೃಷ್ಣನಿಗೆ ಆಶ್ರಯವನ್ನಿತ್ತಿದ್ದನು. ಕವಿಯ ಕಾಲ



ಕ್ರಿ ಶ. 16ನೇ ಶತಕದ ಕಡೆಯಭಾಗ. ಈತನು ಕಾಶಿಯಲ್ಲಿ ನೆಲೆಸಿದ್ದನೆಂದೂ, ಕಾಶೀರಾಜನ ತಮ್ಮನಾದ ನರೋತ್ತಮನ ಪ್ರೇರಣೆಯಿಂದ ಈ ಚಂಪುವನ್ನು ರಚಿಸಿದನೆಂದೂ ತಿಳಿದು ಬರುತ್ತದೆ. ಶೇಷಕೃಷ್ಣನು ಕಂಸವಧ, ಮುರಾರಿವಿಜಯ ಮುಂತಾದ ನಾಟಕಗಳನ್ನೂ, ಉಷಾಪರಿಣಯ ಮೊದಲಾದ ಚಂಪುಗಳನ್ನೂ ಸಹ ರಚಿಸಿದ್ದಾನೆ.

ಈ ಚಂಪೂವಿನಲ್ಲಿ 5 ಸ್ತಬಕಗಳಿವೆ. ಶ್ರೀಕೃಷ್ಣನು ಇಂದ್ರನನ್ನು ಜಯಿಸಿ ಪಾರಿಜಾತವನ್ನು ಸತ್ಯಭಾಮೆಗೆ ತಂದುಕೊಟ್ಟನೆಂಬುದು ಕಥಾವಸ್ತು. ಗದ್ಯಪದ್ಯಗಳ ಶೈಲಿ ಪ್ರೌಢವೂ, ಸುಂದರವೂ ಆಗಿದೆ. ಶೃಂಗಾರವು ಪ್ರಧಾನ.

## 16. ತೀರ್ಥಯಾತ್ರಾಪ್ರಬಂಧಚಂಪೂ

ಇದರ ಕವಿ ವಾಧೂಲಗೋತ್ರದ ಸಮರಪುಂಗವದೀಕ್ಷಿತ. ಜನ್ಮಸ್ಥಳ ವಟವನವೆಂಬ ನಗರ. ತಂದೆ ವೆಂಕಟೇಶ. ತಾಯಿ ಅನಂತಮ್ಮ. 'ಕನಕಾತಪಾತ' ಎಂದು ಕವಿಯ ಬಿರುದು. ಈತನು ಸುಪ್ರಸಿದ್ಧರಾದ ಅಪ್ಪಯ್ಯದೀಕ್ಷಿತರ ಶಿಷ್ಯ. ಕವಿಯ ಕಾಲ 16ನೇ ಶತಕದ ಉತ್ತರಾರ್ಧವಿರಬೇಕು. ಆನಂದಕಂದ ಎಂಬ ಇನ್ನೊಂದು ಚಂಪುವನ್ನೂ ಇವನು ಬರೆದಿದ್ದಾನೆ.

ತೀರ್ಥಯಾತ್ರಾಪ್ರಬಂಧದಲ್ಲಿ ಎಂಟು ಆಶ್ವಾಸಗಳಿದ್ದು ರಾಮೇಶ್ವರದಿಂದ ಕೇದಾರೇಶ್ವರದವರೆಗಿನ ತೀರ್ಥಕ್ಷೇತ್ರಗಳ ವರ್ಣನೆಗಳೂ ನಾನಾ ದೇವತೆಗಳ ಸ್ತುತಿಗಳೂ ಇವೆ. ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದ ನಾಯಕನನ್ನು 'ಬುಧಪುಂಗವ, ಆರ್ಯಸೇವಿ' ಇತ್ಯಾದಿ ಶಬ್ದಗಳಿಂದ ಪರಾಮರ್ಶಿಸಿದ್ದಾನೆಯೇ ಹೊರತು ನೇರವಾಗಿ ಅಂಕಿತನಾಮವನ್ನು ಕವಿ ತಿಳಿಸಿಲ್ಲ. ಆದರೆ ನಾಯಕನು ಕವಿಯ ಅಣ್ಣನಾದ ಸೂರ್ಯನಾರಾಯಣ ದೀಕ್ಷಿತನೆಂದು ನಿರ್ಣಯಿಸಲು ಸಾಕಷ್ಟು ಆಧಾರಗಳಿವೆ. ಕಾವ್ಯೋಚಿತವಾದ ಕಥೆ ಇಲ್ಲದಿದ್ದರೂ ಸೂರ್ಯೋದಯಾದಿ ವರ್ಣನೆಗಳನ್ನು ಕವಿ ತಂದಿದ್ದಾನೆ. ಗದ್ಯಪದ್ಯಗಳು ಪ್ರೌಢಶೈಲಿಯಲ್ಲಿವೆ.

## 17. ನೃಸಿಂಹಚಂಪೂ

ಇದನ್ನು ರಚಿಸಿದವನು ಸೂರ್ಯಕವಿ. ಈತನು ಜ್ಯೋತಿಶ್ಶಾಸ್ತ್ರದಲ್ಲಿ ವಿದ್ವಾಂಸನೂ, 'ಸಂಗೀತಾಗಮಕಾವ್ಯನಾಟಕಪಟು'ವೂ ಆಗಿದ್ದನು. ಗೋದಾವರೀತೀರದ ಪಾರ್ಥಾ ನಗರದಲ್ಲಿ ಕವಿಯ ಜನ್ಮ. ಇವನು ಭಾರದ್ವಾಜಗೋತ್ರದ ಜ್ಞಾನರಾಜನ ಮಗ. ಲೀಲಾವತಿಯೆಂಬ ಗಣಿತಗ್ರಂಥಕ್ಕೆ ಈತನು ಕ್ರಿ.ಶ. 1541ರಲ್ಲಿ ವ್ಯಾಖ್ಯಾನವನ್ನು ಬರೆದಿರುವುದರಿಂದ ಇವನ ಕಾಲ 16ನೇ ಶತಕದ ಮಧ್ಯಭಾಗ.

ನೃಸಿಂಹಚಂಪುವಿನಲ್ಲಿ 5 ಉಚ್ಛ್ವಾಸಗಳಿವೆ. ಪೌರಾಣಿಕವಾದ ನರಸಿಂಹಾವತಾರದ ಕಥೆ ವರ್ಣ್ಯವಸ್ತು. ಕವಿಯೇ ಹೇಳಿಕೊಂಡಿರುವಂತೆ ನವರಸಗಳಿಗೂ ಪೋಷಣೆ ಇದೆ. ಶೈಲಿ ಪ್ರೌಢವಾದುದು;

## 18. ಮತ್ಸ್ಯಾವತಾರಪ್ರಬಂಧ

ನಾರಾಯಣಭಟ್ಟತಿರಿ (ಭಟ್ಟಪಾದ) ಎಂಬ ಸುಪ್ರಸಿದ್ಧನಾದ ಕೇರಳದ ವಿದ್ವತ್ಕವಿ ಇದನ್ನು ರಚಿಸಿದ್ದಾನೆ. ಇವನು ಮೆಲಪುತ್ತೂರ್ ಗ್ರಾಮವಾಸಿಯಾದ ನಂಬೂದಿರಿಬ್ರಾಹ್ಮಣ. ಇವನ ತಂದೆ ಮಾತೃದತ್ತನು ಪೂರ್ವಮೀಮಾಂಸಾಶಾಸ್ತ್ರದಲ್ಲಿ ಪಂಡಿತನಾಗಿದ್ದನು. ನಾರಾಯಣಭಟ್ಟತಿರಿ ತನ್ನ ತಂದೆಯಿಂದ ಮೀಮಾಂಸೆಯನ್ನೂ, ಅಚ್ಯುತನಿಂದ ವ್ಯಾಕರಣವನ್ನೂ, ದಾಮೋದರನಿಂದ ತರ್ಕವನ್ನೂ, ಮಾಧವನಿಂದ ವೇದವನ್ನೂ ಕಲಿತಿದ್ದನು. ಈತನು ರಚಿಸಿದ ಭಾಗವತವು ನಾರಾಯಣೀಯ ಎಂಬ ಹೆಸರಿನಿಂದ ಈಗಲೂ ಕೇರಳದಲ್ಲಿ ಜನಪ್ರಿಯವಾಗಿದೆ. ವ್ಯಾಕರಣ ಮೀಮಾಂಸಾಶಾಸ್ತ್ರಗಳಲ್ಲಿಯೂ ಈತನು ಗ್ರಂಥಗಳನ್ನು ರಚಿಸಿದ್ದಾನೆ. ಹದಿನಾಲ್ಕು ಚಂಪೂಕಾವ್ಯಗಳನ್ನು ಬರೆದಿದ್ದಾನೆ. ಪ್ರಕ್ರಿಯಾಸರ್ವಸ್ವ ಈತನ ವ್ಯಾಕರಣಗ್ರಂಥ.

ನಾರಾಯಣಭಟ್ಟತಿರಿಗೆ ವಾತರೋಗ ಬಂದಿತೆಂದೂ, ಗುರುವಾಯೂರು ದೇವಸ್ಥಾನದಲ್ಲಿದ್ದ 'ನಾರಾಯಣೀಯ'ವನ್ನು ರಚಿಸಿ ರೋಗಮುಕ್ತನಾದನೆಂದೂ ಪ್ರತೀತಿ ಇದೆ*

ಈ ಕವಿ ಕ್ರಿ.ಶ. 1560–1646ರ ಮಧ್ಯಕಾಲದಲ್ಲಿ ಇದ್ದನು.

ಮತ್ಸ್ಯಾವತಾರಚಂಪೂ ಒಂದು ಲಘುಕಾವ್ಯ. 67 ಪದ್ಯಗಳೂ, 12 ಗದ್ಯಗಳೂ ಇವೆ. ಕಥೆ ಪೌರಾಣಿಕ, ವಿಷ್ಣು ಮತ್ಸ್ಯವಾಗಿ ಅವತರಿಸಿ ಹಯಗ್ರೀವಾಸುರನಿಂದ ವೇದವನ್ನು ರಕ್ಷಿಸಿದನೆಂಬುದು ಕಥಾವಸ್ತು.

ಕವಿಗೆ ಓಜಸ್ವಿಯಾದ ಗದ್ಯಪದ್ಯರಚನೆ ಹಸ್ತಗತವಾಗಿದೆ. ವ್ಯಾಕರಣಶುದ್ಧವಾಗಿಯೂ, ಅರ್ಥಪುಷ್ಟವಾಗಿಯೂ ಇರುವ ಪ್ರೌಢಶೈಲಿ ಈತನದು.

ಹಯಗ್ರೀವನು ಶ್ರುತಿಕನ್ಯೆಯನ್ನಪಹರಿಸಿ ಪೂರ್ಣಕಾಮನಾದನು—

ಉದ್ಯತ್ತಾರಾಭಿರಾಮಾಂ ವಿಧಿಮುಖವದನಾಲಕ್ಷ್ಯ ಕಾದಾನುಬಂಧಾಂ
ಸೋऽಯಂ ಪೌಢಾರ್ಥವಾದಪ್ರಚುರಕಚಭರಾಂ ಚಾರುಮಂತ್ರಾನುಲಾಪಾಂ।
ಗೂಢಾದ್ವೈತಪ್ರದೇಶಾತ್ಮಕಗುರುಜಘನಾಮುಲ್ಲಸತ್ಪಾದಶೋಭಾಂ
ಅಪೂರ್ಣಾಂಗೀಂ ತ್ರಿವೇದೀಸುದೃಶಮಪಹರನ್ ಪೂರ್ಣಕಾಮೋ ಬಭೂವ ॥

## 19 ಆನಂದಕಂದ ಚಂಪೂ

ಇದರ ಕವಿ ಮಿತ್ರಮಿಶ್ರನು ಶಾಂಡಿಲ್ಯಗೋತ್ರದ ಪರುಶುರಾಮಮಿಶ್ರನ ಮಗ. ಇವನ ಸ್ಥಳ ಗೋಪಾಚಲ (ಗ್ವಾಲಿಯರ್). ಮಿತ್ರಮಿಶ್ರನು ಪ್ರತಾಪರುದ್ರನ ಪೌತ್ರ ವೀರಸಿಂಹದೇವನ

*ಸಿದ್ಧಾಂತಕೌಮುದಿಯನ್ನು ಬರೆದ ಭಟ್ಟೋಜಿದೀಕ್ಷಿತನು (ಕ್ರಿ. ಶ. 1550—1630). ಈತನ ವಿಖ್ಯಾತಿಯನ್ನು ಕೇಳಿ ಇವನನ್ನು ನೋಡಲು ಕೇರಳಕ್ಕೆ ಹೋದನೆಂದೂ, ಅಷ್ಟರಲ್ಲಿ ನಾರಾಯಣಭಟ್ಟತಿರಿ ಮೃತನಾಗಿದ್ದನೆಂದೂ, ದೀಕ್ಷಿತನು ವಿಷಣ್ಣನಾಗಿ ಉತ್ತರದೇಶಕ್ಕೆ ಮರಳಿದನೆಂದೂ ಹೇಳುತ್ತಾರೆ.



ಆಶ್ರಯದಲ್ಲಿದ್ದನು. ವೀರಸಿಂಹನ ಶಾಸನಕಾಲ ಕ್ರಿ. ಶ. 1605–1627. ಅಲ್ಲದೆ ಕವಿಯು ತನ್ನ ಚಂಪುವಿನಲ್ಲಿಯೇ ಅದನ್ನು ರಚಿಸಿದ ಕಾಲವನ್ನು ತಿಳಿಸಿದ್ದಾನೆ. ಅದು ಕ್ರಿ.ಶ. 1631 ಆಗುತ್ತದೆ.

ಈ ಕಾವ್ಯದಲ್ಲಿ ಎಂಟು ಉಲ್ಲಾಸಗಳಿದ್ದು ಶ್ರೀಕೃಷ್ಣನ ಚರಿತ್ರೆ ವರ್ಣಿತವಾಗಿದೆ. ಗೌಡೀ ರೀತಿಯ ಪ್ರಭಾವ ಅಧಿಕ. ಗದ್ಯದಲ್ಲಿ ಶ್ಲೇಷಪರಿಸಂಖ್ಯಾದ್ಯಲಂಕಾರಗಳು ವಿಪುಲ. ಕಾವ್ಯದ ಕಡೆಯಲ್ಲಿ ತನಗೆ ಆಶ್ರಯವನ್ನಿತ್ತ ವೀರಸಿಂಹದೇವನ ಪ್ರಶಸ್ತಿಯನ್ನು ಅದ್ಭುತವಾಗಿ ವರ್ಣಿಸಿದ್ದಾನೆ. ದೇಶೀಶಬ್ದಗಳನ್ನು ಕವಿ ಸ್ವಚ್ಛಂದವಾಗಿ ಬಳಸಿದ್ದಾನೆ.

ಒಂದು ಉದಾಹರಣೆ—

ಉದಂಚಿತಕಚೋರಿಕಾ ಮಧುರಿಕಾ ಮನಶ್ಚೋರಿಕಾ
ಸುಧಾರಸಪುರೀ ಪುರೀ ನ ಉಚಿಮೀಸಮೋರ್ವೀತಲೇ ।
ಹರೇರ್ಹರಿಣಲೋಚನಾ ಹರಿಣಹೀನಚಂದ್ರಾನನಾ-
ತ್ರಪೋಷಿತಸುಧಾನಿಧಿಃ ಸುಮಧುವಾಟಿಕಾ ಶೋಟಿಕಾ ॥

## 20. ನೀಲಕಂಠವಿಜಯಚಂಪೂ

ಇದನ್ನು ರಚಿಸಿದ ನೀಲಕಂಠದೀಕ್ಷಿತನು ಸುಪ್ರಸಿದ್ಧರಾದ ಅಪ್ಪಯ್ಯದೀಕ್ಷಿತರ ತಮ್ಮ ಅಚ್ಚಾನ್‌ದೀಕ್ಷಿತನ ಮೊಮ್ಮಗ. ಕವಿಯ ತಂದೆ ನಾರಾಯಣದೀಕ್ಷಿತ. ತಾಯಿ ಭೂಮಿದೇವಿ. ನೀಲಕಂಠ ವಿಜಯವನ್ನು ರಚಿಸಿದಕಾಲವನ್ನು ಕವಿಯೇ ತಿಳಿಸಿದ್ದಾನೆ.

ಅಷ್ಟತ್ರಿಂಶದುಪಸ್ಕೃತಸಪ್ತಶತಾಧಿಕಚತುಃಸಹಸ್ರೇಷು ।
ಕಲಿವರ್ಷೇಷು ಗತೇಷು ಪ್ರಥಿತಃ ಕಿಲ ನೀಲಕಂಠವಿಜಯೋऽಯಂ ॥ 1–10

ಇದರ ಪ್ರಕಾರ ಕಲಿಯುಗದ 4738ರಲ್ಲಿ ಗ್ರಂಥರಚನೆಯಾಯಿತು. ಇದು ಕ್ರಿ ಶ. 1636 ಆಗುತ್ತದೆ.

ನೀಲಕಂಠದೀಕ್ಷಿತನಿಗೆ 12 ವರ್ಷ ವಯಸ್ಸಾಗಿದ್ದಾಗ ಅಪ್ಪಯ್ಯದೀಕ್ಷಿತರು ನಿಧನ ಹೊಂದಿದರೆಂದೂ, ಅವರಿಗೆ ಈ ಬಾಲಕನ ಮೇಲೆ ಅತಿಶಯವಾದ ಪ್ರೀತಿ ಇತ್ತೆಂದೂ ಹೇಳುತ್ತಾರೆ. ಈತನ ಗುರು ವೆಂಕಟೇಶ್ವರಮಖಿ. ನೀಲಕಂಠದೀಕ್ಷಿತನು ಮಧುರೆಯ ಪಾಂಡ್ಯರಾಜ ತಿರುಮಲನಾಯಕನ ಆಸ್ಥಾನಪಂಡಿತನಾಗಿದ್ದನು. ಇವನು ದೊಡ್ಡ ವಿದ್ವಾಂಸ, ಉತ್ತಮ ಕವಿ ; ಶಿವಭಕ್ತ ಮತ್ತು ಮೀನಾಕ್ಷೀದೇವಿಯ ಉಪಾಸಕ. ಕಡೆಯಲ್ಲಿ ಸಂನ್ಯಾಸವನ್ನು ಸ್ವೀಕರಿಸಿದನು.

ಇವನು ನೀಲಕಂಠವಿಜಯವನ್ನಲ್ಲದೆ ಶಿವಲೀಲಾರ್ಣವ, ಗಂಗಾವತರಣ ಎಂಬ ಎರಡು ಕಾವ್ಯಗಳನ್ನೂ, ಸಳಚರಿತ್ರವೆಂಬ ನಾಟಕವನ್ನೂ, ಕಲಿವಿಡಂಬನ, ಸಭಾರಂಜನ ಮುಂತಾದ

ಶತಕಗಳನ್ನೂ ರಚಿಸಿದ್ದಾನೆ; ಮತ್ತು ಶಿವತತ್ತ್ವರಹಸ್ಯವೆಂಬ ದರ್ಶನಗ್ರಂಥವನ್ನೂ, ಕೈಯಟನ ಪ್ರದೀಪದ ಮೇಲೆ ವ್ಯಾಖ್ಯಾನವನ್ನೂ ಬರೆದಿದ್ದಾನೆ. ಒಟ್ಟು ಈತನ 32 ಗ್ರಂಥಗಳು ಉಪಲಬ್ಧವಾಗಿವೆ. ಈ ಚಂಪುವಿನ ಮೇಲೆ ಪತಾಕಾ ಎಂಬ ವ್ಯಾಖ್ಯಾನವೂ, ಘನಶ್ಯಾಮನ ಇನ್ನೊಂದು ವ್ಯಾಖ್ಯಾನವೂ ದೊರೆಯುತ್ತದೆ.

ನೀಲಕಂಠವಿಜಯದಲ್ಲಿ ಸಮುದ್ರಮಥನದ ಕಥೆ ವರ್ಣಿತವಾಗಿದೆ. ಇದರಲ್ಲಿ 5 ಆಶ್ವಾಸಗಳಿವೆ. ಕವಿ ವಕ್ರೋಕ್ತಿಯಲ್ಲಿ ನಿಪುಣ. ಕಾವ್ಯೋಚಿತವಾದ ಪ್ರತಿಭೆಯುಂಟು. ವಿಡಂಬನಾತ್ಮಕ ಚಿತ್ರಣಗಳಿಂದಲೂ ಮನೋಹರ ವರ್ಣನೆಗಳಿಂದಲೂ ಈ ಚಂಪು ಸಂಸ್ಕೃತಸಾಹಿತ್ಯಕ್ಷೇತ್ರದಲ್ಲಿ ಗಣನೀಯವಾದ ಸ್ಥಾನವನ್ನು ಗಳಿಸಿದೆ. ತನ್ನ ಚಂಪುವನ್ನು ವಕ್ರೋಕ್ತಿಯಿಂದಲೇ ಆರಂಭಿಸುತ್ತಾನೆ—

ವಂದೇ ವಾಂಛಿತಲಾಭಾಯ ಕರ್ಮ ಕಿಂ ತನ್ನ ಕಥ್ಯತೇ ।
ಕಿಂ ದಂಪತಿಮಿತಿ ಬ್ರೂಯಾಮುತಾಹೋ ದಂಪತೀ ಇತಿ ॥

'ಇಷ್ಟಾರ್ಥ ಸಿದ್ಧಿಗಾಗಿ ವಂದಿಸುತ್ತೇನೆ'. ಯಾರನ್ನು? ಹೇಳಲಾಗುವುದಿಲ್ಲ! 'ದಂಪತಿಂ' ಎಂಬ ಏಕವಚನವನ್ನು ಪ್ರಯೋಗಿಸಲೋ? ಅಥವಾ 'ದಂಪತೀ' ಎಂದು ದ್ವಿವಚನವನ್ನೋ? ಏಕವಚನವನ್ನು ಹೇಳಿದರೆ ಅಪಶಬ್ದವಾಗುತ್ತದೆ. ದ್ವಿವಚನವನ್ನು ಹೇಳೋಣವೆಂದರೆ ಅರ್ಧನಾರೀಶ್ವರನಾದ ವ್ಯಕ್ತಿ ಒಬ್ಬನೇ!

ಅಮರಾವತಿಯನ್ನು ವರ್ಣಿಸುವ ತನ್ನ ಚಂಪುವನ್ನು "ಅಸ್ತಿ ಕಿಲ ಸಮಸ್ತಸುರಾಸುರಸ್ತೋಮವಂದಿತಚರಣಾರವಿಂದಸ್ಯ ಭಗವತೋ ಮಹೇಂದ್ರಸ್ಯ ಸ್ಥಾನಂ, ಆಸ್ಥಾನಮಮೃತಾಂಧಸಾಂ, ಆಯತನಮಾಶ್ಚರ್ಯಾಣಾಂ, ಆಕರೋ ರತ್ನಾನಾಂ, ಅವಧಿರ್ವೈಷಯಿಕಾನಂದಸ್ಯ, ಕಿಮಪರಮಗೋಚರೇ ಗಿರಾಮಮರಾವತೀ ನಾಮ ನಗರೀ" ಎಂದು ಆರಂಭಿಸುತ್ತಾನೆ. "ಆ ನಗರವು ನಿರಾಲಂಬವಾದ ಆಕಾಶದಲ್ಲಿರುವುದರಿಂದ ಅಸ್ತಿಭಾರದ ಶಿಲಾಸ್ಥಾಪನೆ ಬೇಕಾಗಿಲ್ಲ, ಎಲ್ಲಡೆಯೂ ದ್ವಾರವಿರುವುದರಿಂದ ಪ್ರತೀಹಾರರು ಅನಾವಶ್ಯಕ, ಕಂದಕರಚನೆ ಅಸಾಧ್ಯ. ಅಮೃತವನ್ನುಂಡ ಪೌರರಿಗೆ ಆಹಾರವನ್ನು ಒದಗಿಸಬೇಕಾಗಿಲ್ಲ, ಇಷ್ಟವಸ್ತುಗಳೆಲ್ಲವನ್ನೂ ಕೊಡುವ ಕಲ್ಪವೃಕ್ಷಾದಿಗಳಿರುವುದರಿಂದ ಕೊಳ್ಳಬೇಕಾದ್ದೂ ಇಲ್ಲ, ಮಾರಬೇಕಾದ್ದೂ ಇಲ್ಲ. ಅಲ್ಲಿಯ ಹಸುಗಳು ದೇವತೆಗಳಲ್ಲವಾದ್ದರಿಂದ ಅಮೃತಭೋಜಿಗಳಲ್ಲ, ಹುಲ್ಲು ದೊರೆಯದಿರುವುದರಿಂದ ಹುಲ್ಲು ತಿನ್ನುವಂತೆಯೂ ಇಲ್ಲ, ಆದರೂ ಕಾಮಧೇನುಗಳು!" ಎಂದು ವಿನೋದವಾಗಿ ಅಮರಾವತಿಯ ಐಶ್ವರ್ಯವನ್ನು ವರ್ಣಿಸಿದ್ದಾನೆ. "ದೇವತೆಗಳಿಗೆ ತಿನ್ನಲು ಅಮೃತವಿದೆ, ಉಡಲು ಬಟ್ಟೆ ಇದೆ, ತೊಡಲು ಆಭರಣವಿದೆ. ಸರ್ವಸಮೃದ್ಧಿ ಇದ್ದರೂ ಬದುಕುವ ವಿಧಾನ ಗೊತ್ತಿಲ್ಲ. ನಾನು ಸೇವಕ, ಅವನು ಒಡೆಯ ಎಂದು ವ್ಯರ್ಥವಾಗಿ ಸೇವಾವೃತ್ತಿಯನ್ನವಲಂಬಿಸಿದ್ದಾರೆ. ಈ ಬುದ್ಧಿಗೇಡಿಗಳು!" ಎನ್ನುತ್ತಾನೆ. 'ನೀಲಕಂಠಸ್ಯ ವಕ್ರೋಕ್ತಿಃ ಸಾ ಮುಗ್ಧೇಂದುಕಲಾಯತೇ.'





ದೇವೇಂದ್ರನ ವೈಭವದ ಮೆರವಣಿಗೆ, ಕ್ರುದ್ಧನಾದ ದುರ್ವಾಸಮುನಿಯು ಕೊಟ್ಟ ಶಾಪ ಪ್ರಸಂಗ, ದೇವಾಸುರಯುದ್ಧ, ಇಂದ್ರಾದಿದೇವತೆಗಳ ಪಲಾಯನ, ಬೃಹಸ್ಪತಿಯು ಶುಕ್ರನೊಡನೆ ನಡೆಸಿದ ಸಂಧಾನ, ವೈಕುಂಠದ ವರ್ಣನೆ, ಸಮುದ್ರಮಥನ ಪ್ರಕಾರ, ಹಾಲಾಹಲದ ಘೋರತೆ, ಪ್ರಸನ್ನನಾದ ಪರಮೇಶ್ವರನು ವಿಷವನ್ನು ಕುಡಿದಿದ್ದು, ಅಮೃತದ ವಿತರಣೆ—ಈ ಮುಖ್ಯ ಘಟನೆಗಳೆಲ್ಲವೂ ಮನೋಹರವಾಗಿ ಚಿತ್ರಿತವಾಗಿವೆ. ಗದ್ಯಪದ್ಯಗಳೆರಡರಲ್ಲಿಯೂ ಲಲಿತ ಪದಬಂಧವಿದೆ. ದೀರ್ಘಸಮಾಸಗಳ ಕ್ಲಿಷ್ಟತೆ ಇಲ್ಲ. ಶ್ಲೇಷದ ಬಳಕೆ ಪರಿಮಿತ. ನಿಸ್ಸಾರವಾದ ವಾಕ್ಯವಿಲ್ಲ. ಎಲ್ಲವೂ ಹಿತಮಿತ. ಸಮಾಪ್ತಿಯವರೆಗೂ ಕವಿ ತನ್ನ ವಿಡಂಬನಾಶೈಲಿಯನ್ನು ಉಳಿಸಿಕೊಂಡಿದ್ದಾನೆ. ಯುದ್ಧಪ್ರಸಂಗದಲ್ಲಿ ರಾಕ್ಷಸರು ತಮ್ಮನ್ನೆದುರಿಸಿದ ಅಗ್ನಿಯನ್ನು "ವಾಡವೋಽಯಂ ಶಿಖಾಂ ಪ್ರದರ್ಶಯಂತಿ" ಎಂದು ಶ್ಲೇಷದಿಂದ ಹಾಸ್ಯಮಾಡುತ್ತಾರೆ. ದೇವತಾವರ್ಣನಪ್ರಸಂಗದಲ್ಲಿ ಭವ್ಯವಾದ ಕಲ್ಪನೆಯುಂಟು. ಇದು ರಸಿಕಜನಪ್ರಿಯವಾಗಿರುವುದು ಸಹಜವೇ.

1. ನಾರಾಯಣನ ಶಯನಾಗಾರವು ಓಂಕಾರರೂಪವಾಗಿದೆ—

ಪಶ್ಯ ಜ್ಞಾನಕ್ರಿಯೇಚ್ಛಾಮಣಿಮಯಮುಕುರಾಬದ್ಧಮಧ್ಯಾತ್ಮವಿದ್ಯಾ
ಭಾಸ್ವದ್ರತ್ನಪ್ರದೀಪಪ್ರಕರಪರಿಹೃತಧ್ವಾಂತಮಂತಃಸಮಂತಾತ್ ।
ಗಾಢಾವಿದ್ಯಾಕವಾಟಂ ಪ್ರಬಲಶಮದಮದ್ವಾರಪಾಲಾಭಿಗುಪ್ತಂ
ಭಕ್ತಿದ್ವಾರಂ ಮುರಾರೇರಿದಮಿಹ ಶಯನಾಗಾರಮೋಂಕಾರರೂಪಂ ॥ 2–34

2. ಉಮಾಸಹಿತನಾದ ಪರಮೇಶ್ವರನ ಸ್ತುತಿ ಇದು. ಓಮ್—ಉಮಾ ಎಂದು ಹೆಸರು ಒಂದೇ. ಒಂದು ಸೃಷ್ಟಿಗೆ ಆದಿ—ಇನ್ನೊಂದು ಸೃಷ್ಟಿಗೆ ಅಂತ್ಯ ಎಂಬುದೇ ಭೇದ. ವಾಚ್ಯವಾದ ವಸ್ತುವೂ ಒಂದೇ. ಒಂದು ಕಡೆ ವೇಣಿ ಇದೆ, ಇನ್ನೊಂದು ಕಡೆ ಜಟೆ ಇದೆ—

ಓಮಿತ್ಯುಮೇತಿ ಯುವಯೋರಭಿಧಾನಮೇಕಂ
ಸೃಷ್ಟ್ಯಾದಿ ಸೃಷ್ಟ್ಯವಧಿತಾಗುಣಮಾತ್ರಭಿನ್ನಂ ।
ಏಕಂ ಚ ತಾವದಭಿಧೇಯಮುಪೀಹ ರೂಪಂ
ವೇಣೀ ಜಟೇತಿ ಕಚಸಂಹತಿಮಾತ್ರಭಿನ್ನಂ ॥ 4–24

ಇಲ್ಲೊಂದು ಚಮತ್ಕಾರ ಉಂಟು. ಅ ಉಮ್ = ಇದು ಓಂಕಾರವಾಗಿದೆ. ಇದನ್ನೇ ಉಮ್ ಅ ಎಂದು ವ್ಯತ್ಯಸ್ತ ಮಾಡಿದರೆ ಸ್ತ್ರೀಲಿಂಗದಲ್ಲಿ ಉಮಾ. ಆದ್ಯಂತಗಳಲ್ಲಿ ಅಕಾರವೆಂಬ ಗುಣಮಾತ್ರದಿಂದ ಭಿನ್ನ.

ನೀಲಕಂಠದೀಕ್ಷಿತನು ವೈಯಾಕರಣ. ಪೂರ್ವೋತ್ತರಮೀಮಾಂಸೆಗಳಲ್ಲಿ ವಿದ್ವಾಂಸ. ಭಗವದ್ಭಕ್ತನೂ, ರಸಿಕನೂ ಆದ ಕವಿ. ಈ ಅಭಿಪ್ರಾಯವನ್ನು ವ್ಯಕ್ತಪಡಿಸಿಯೂ ಇದ್ದಾನೆ!

ವಾಚಂ ವ್ಯಾಕುರುತೇ ಚಿರಂತನಗಿರಂ ಮೀಮಾಂಸತೇ ಚೋಭಯೀಂ
ಪಾಂಥಃ ಕಾವ್ಯಪಥೇಷು ಪಾದಕಮಲೇ ಸಕ್ತಃ ಪುರಾರೇರಿತಿ ।
ಮಾಪೇತತ್ ಕಥಯಿಷ್ಯತೀತಿ ರಚಿತಂ ಕಾವ್ಯಂ ಮಯಾ ತತ್ಪುನಃ
ತಾವದ್ವಕ್ಷ್ಯತಿ ವಾ ನ ವಾ ತದುಪರಿ ನ್ಯಸ್ತಃ ಸಮಸ್ತೋ ಭರಃ ॥ 5–63

## 21. ವಿಶ್ವಗುಣಾದರ್ಶ

ಇದರ ಕವಿ ವೆಂಕಟಾಧ್ವರಿಯು ಆತ್ರೇಯಗೋತ್ರದ ರಘುನಾಥದೀಕ್ಷಿತನ ಮಗ. ತಾಯಿ ಸೀತಾಂಬೆ. ಇವನ ಪಿತಾಮಹ ಅಪ್ಪಯ್ಯಗುರು. ಅಪ್ಪಯ್ಯಗುರುವಿಗೆ ಶ್ರೀನಿವಾಸ ಎಂಬ ಇನ್ನೊಂದು ಹೆಸರಿತ್ತು. ಅವನು ತಾತಾಚಾರ್ಯನ ಸೋದರಳಿಯ. ತಾತಾಚಾರ್ಯನು ಕುವಲಯಾನಂದಕರ್ತನಾದ ಅಪ್ಪಯ್ಯದೀಕ್ಷಿತನ ಸಮಕಾಲಿಕ. ವೆಂಕಟಾಧ್ವರಿಯೂ ನೀಲಕಂಠದೀಕ್ಷಿತನೂ ಸಮಕಾಲದವರೆಂದು ಪ್ರತೀತಿ ಇದೆ. ನೀಲಕಂಠದೀಕ್ಷಿತನು ಕ್ರಿ.ಶ. 1636ರಲ್ಲಿ ನೀಲಕಂಠವಿಜಯವನ್ನು ರಚಿಸಿರುವುದರಿಂದ ವೆಂಕಟಾಧ್ವರಿಯೂ ಇದೇ ಕಾಲದವನೆಂದು ಹೇಳಬಹುದು. ಈತನು ಶ್ರೀವೈಷ್ಣವ. ವಡಗಲೆ ಸಂಪ್ರದಾಯದವನೆಂದು ತಿಳಿದುಬರುತ್ತದೆ. ಯಾದವರಾಘವೀಯ, ಶ್ರವಣಾನಂದ, ಸಂಭಾಷಿತಕೌಸ್ತುಭ, ವರದಾಭ್ಯುದಯ ಅಥವಾ ಹಸ್ತಿಗಿರಿಚಂಪೂ, ಲಕ್ಷ್ಮೀಸಹಸ್ರ, ಶ್ರೀನಿವಾಸಸಹಸ್ರ, ಪ್ರದ್ಯುಮ್ನಾನಂದ ನಾಟಕಗಳು ಈ ಕವಿಯ ಇತರ ಗ್ರಂಥಗಳು.

ವೆಂಕಟಾಧ್ವರಿಯು ಸ್ವತಂತ್ರ ಕಲ್ಪನೆಯುಳ್ಳ ಪ್ರತಿಭಾನ್ವಿತನಾದ ಕವಿ. ಕೃಶಾನು ವಿಶ್ವಾವಸು ಎಂಬ ಇಬ್ಬರು ಗಂಧರ್ವರ ಮೂಲಕ ವಿಶ್ವದ ವೈಚಿತ್ರ್ಯವನ್ನು ಈ ಚಂಪುವಿನಲ್ಲಿ ವರ್ಣಿಸಿದ್ದಾನೆ. ಇಬ್ಬರು ಗಂಧರ್ವರು ವಿಮಾನದಲ್ಲಿ ದೇಶಪರ್ಯಟನೆಯನ್ನು ಕೈಗೊಳ್ಳುತ್ತಾರೆ. ದೇಶ, ನಗರ, ಯಾತ್ರಾಸ್ಥಳ, ನದಿ, ವಿವಿಧ ರಾಷ್ಟ್ರಗಳಲ್ಲಿ ವಾಸಿಸುವ ವಿಭಿನ್ನಮತೀಯರು, ದಾರ್ಶನಿಕರು— ಎಲ್ಲರೂ ಇವರ ಪರಿಶೀಲನೆಗೆ ಒಳಪಡುತ್ತಾರೆ. ಕೃಶಾನು ಎಲ್ಲೆಡೆಯೂ ದೋಷವನ್ನು ಎತ್ತಿ ಆಪೇಕ್ಷಿಸುತ್ತಾನೆ. ವಿಶ್ವಾವಸು ಅವನ ಆಕ್ಷೇಪಗಳಿಗೆ ಸಮಾಧಾನವನ್ನಿತ್ತು ಗುಣವನ್ನು ಎತ್ತಿ ಹಿಡಿಯುತ್ತಾನೆ.

ಜಗತ್ತಿನಲ್ಲಿ ದೋಷಲೇಶವೂ ಇಲ್ಲದ ವಸ್ತುವಾಗಲಿ, ಮನುಷ್ಯನಾಗಲಿ ಇಲ್ಲ. ಹಂಸಕ್ಷೀರನ್ಯಾಯದಂತೆ ಗುಣವನ್ನು ಗ್ರಹಿಸಿ ಸಂತುಷ್ಟರಾಗಬೇಕು ಎಂಬುದು ಕವಿಯ ಮುಖ್ಯ ಸಂದೇಶವಾಗಿದೆ.

ವಿಶ್ವಗುಣಾದರ್ಶದಲ್ಲಿ ಸ್ತಬಕ ಮುಂತಾದ ವಿಭಾಗಗಳಿಲ್ಲ. ಒಂದೊಂದು ವಿಷಯದ ವರ್ಣನೆಯೇ ವಿಭಾಗ. ಉಪೋದ್ಘಾತ ಕವಿವಾಕ್ಯಗಳೂ ಸೇರಿ 53 ವಿಭಾಗಗಳಾಗುತ್ತವೆ. ಈ ಚಂಪುವಿನಲ್ಲಿ ಪದ್ಯಗಳೇ ಅಧಿಕ. ಕಾವೇರೀ ವರ್ಣನೆಯಲ್ಲಿರುವ ಒಂದು ಗದ್ಯವನ್ನು ಬಿಟ್ಟರೆ, ಉಳಿದವು ಸಂಭಾಷಣಾರೂಪವಾದ ಬಿಡಿ ವಾಕ್ಯಗಳು. ಅನುಸ್ಯೂತವಾದ ಕಥೆ ಇಲ್ಲವಾದರೂ ನಾನಾಭಾವಗಳ ಅಭಿವ್ಯಕ್ತಿ ಮನೋಜ್ಞವಾಗಿದೆ.

ಕೃಶಾನುವಿನ ದೋಷೈಕದೃಷ್ಟಿ ರೋಚಕವಾಗಿರುತ್ತದೆ. ಅವನು ಸಮುದ್ರವನ್ನು ಹೀಗೆ ದೂಷಿಸುತ್ತಾನೆ—

ಸೃಷ್ಟಿರೇವಾಸ್ಯ ವಿಫಲೇತಿ ಮೇ ದೃಷ್ಟಿಃ । ತಥಾಹಿ—

ಸೃಷ್ಟಿರೇವಾಸ್ಯ ವಿಫಲೇತಿ ಮೇ ದೃಷ್ಟಿಃ । ತಥಾಹಿ—
ನಾಸ್ತ್ಯೇಷಾಮುಪಯುಕ್ತತಾ ತಟತರೋಃ ಸಸ್ಯೋಪಯೋಗಃ ಕುತಃ
ನ ಸ್ನಾನಾಯ ಚ ಯೋಗ್ಯತಾಸ್ಯ ಪಯಸಾಂ ಕಾ ನಾಮ ಪಾನಾರ್ಹತಾ ।
ಉನ್ಮಜ್ಜನ್ಮಕರಾಂತರಾಂತರಗತಾ ... ದುರ್ಜನ್ತುಭಿರ್ಭೀಷಣಾಂ
... ಕೋ ವಾ ... ಕಥಂ ತಾಂ ॥ ಶ್ಲೋ. 106
ಸ್ರಷ್ಟುಃ ಸೃಷ್ಟ ... ತೋ ಜಲಾಶ್ರ ...

ಇದು ವೈಯಾಕರಣರ ನಿಂದೆ—

ರೇಫೋಽನ್ತಃ ಶಶ್ಛೋಽಟಿ ಶೇಷೋ ಘ್ಯಸಖಿ ಸಸಜುಷೋ ರೋರ್ವಿರಾಮೋಽವಸಾನಂ
ಭೇ ಚೇತಿ ವ್ಯರ್ಥವಾಚಃ ಸದಸಿ ಯದಿ ಸತಾಂ ಶಾಬ್ದಿಕಾಶ್ಚೇದ್ ಬುಧಾಃ ಸ್ಯುಃ ।
ಕಿಂ ತೈರೇವಾಪರಾದ್ಧಂ ನಟವಿಟಗಣಿಕಾನೃತ್ಯಹಸ್ತಪ್ರಚಾರ್ಯೈಃ
ತೋಧೀ ತೋಧೀ ತಧೀತಿತ್ತಕಿಟ ತಕಿಟಧಿಕ್ ತಾಹಧಿಕ್ ತತ್ತಕಾರ್ಯೈಃ ॥ ಶ್ಲೋ. 569

ಕವಿಯ ಮಧುರ ಪದರಚನೆಗೆ ಒಂದು ಉದಾಹರಣೆ—

ಕಲ್ಯಾಣೋಲ್ಲಾಸಸೀಮಾ ಕಲಯತು ಕುಶಲಂ ಕಾಲಮೇಘಾಭಿರಾಮಾ
ಕಾಚಿತ್ ಸಾಕೇತಧಾಮಾ ಭವಗಹನಗತಿಕ್ಲಾಂತಿಹಾರಿಪ್ರಣಾಮಾ ।
ಸೌಂದರ್ಯಹ್ರೀಣಕಾಮಾ ಧೃತಜನಕಸುತಾಸಾದರಾಪಾಂಗದಾಮಾ
ದಿಕ್ಷು ಪ್ರಖ್ಯಾತಭೂಮಾ ದಿವಿಷದಭಿನುತಾ ದೇವತಾ ರಾಮನಾಮಾ ॥ ಶ್ಲೋ. 38

ಕರ್ಣಾಟಕದೇಶದ ವಿಷಯವಾಗಿ ವೆಂಕಟಾಧ್ವರಿಯ ದೃಷ್ಟಿ ಕುತೂಹಲಕಾರಿ—

ವಿಶ್ವಾವಸು :

ಲೋಚನಾಸೇಚನಕಂ ಕಿಲ ದೇಶಸ್ಯಾಸ್ಯ ರಾಮಣೀಯಕಂ.
ಪ್ರತಿನಗರಮಿಹಾರಾಮಾಃ ಪ್ರತ್ಯಾರಾಮಂ ಪಚೇಲಿಮಾಃ ಕ್ರಮುಕಾಃ ।
ಪ್ರಸವಾಃ ಪ್ರತಿಕ್ರಮುಕಮುಪ್ಯತ್ಸರ್ಪತಿ ಮಧುತತಿಃ ಪ್ರತಿಪ್ರಸವಂ ॥
ಪ್ರತಿಮಧುಬಿಂದು ಮಿಲಿಂದಾಃ ಪ್ರೇಂಖತಿ ಪ್ರತಿಮಿಲಿಂದಮಾರಾವಾಃ ।
ಪ್ರತ್ಯಾರಾವಂ ಸುದೃಶಾಂ ಮುದಾ ಉದಾರಾಃ ಪ್ರತಿಮುದಂ ಮದನಾಃ ॥

ಶ್ಲೋಕ 166–167

ಚಂಪೂಭಾರತಕ್ಕೆ ವ್ಯಾಖ್ಯಾನವನ್ನು ಬರೆದ ಕುರವಿರಾಮ, ಲಕ್ಷ್ಮೀಧರನ ಮಗ ಪ್ರಭಾಕರ, ಮಧುರ ಸುಬ್ಬಾಶಾಸ್ತ್ರಿ ಮತ್ತು ಆಧುನಿಕರಾದ ಬಾಲಕೃಷ್ಣಶರ್ಮ—ಇವರು ಈ ಕೃತಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಸಂಭಾಷಿತಗಳು :

1. ಶಸ್ತ್ರೇ ಶತ್ರುಜಯಾಯ ನೈಜಗುರುಣಾ ದತ್ತೇಽಥ ತೇನೈವ ಚೇತ್
   ಪುತ್ರೋ ಹಂತಿ ನಿಜಂ ವಪುಃ ಕಥಯ ರೇ ತತ್ರಾಪರಾಧೀ ತು ಕಃ ॥
2. ಗವ್ಯಂ ದುಗ್ಧಮುಪಾಸ್ಯ ಪಾಸ್ಯತಿ ಜನಃ ಕೋ ವಾ ಯವಾಗೂರಸಂ ॥
3. ವ್ಯಾಪಾರಾಂತರಮುತ್ಸೃಜ್ಯ ವೀಕ್ಷಮಾಣೋ ವಧೂಮುಖಂ ।
   ಯೋ ಗೃಹೇಷ್ವೇವ ನಿದ್ರಾತಿ ದರಿದ್ರಾತಿ ಸ ದುರ್ಮತಿಃ ॥
4. ಕಷ್ಟಂ ಶಿಷ್ಟಕ್ಷತಿಕೃತಿ ಕಲೌ ಕಾರ್ಶ್ಯಮೃಚ್ಛಂತಿ ವಿದ್ಯಾಃ ।
5. ತಿಮಿರೇಭ್ಯೋ ನ ಹಿ ಭಯಂ ದೀಪಶ್ಚೇಲ್ಲಭ್ಯತೇ ಮಹಾನ್ ।

## 22. ವರದಾಭ್ಯುದಯ ಅಥವಾ ಹಸ್ತಿಗಿರಿಚಂಪೂ

ಇದು ವೆಂಕಟಾಧ್ವರಿಯ ಇನ್ನೊಂದು ಕೃತಿ. ಇದರಲ್ಲಿ ಕಾಂಚೀನಗರದ ದೇವರಾಜಸ್ವಾಮಿಯ ಮಹತ್ತ್ವ, ಮಹಿಮೆಗಳನ್ನು ವರ್ಣಿಸಿದ್ದಾನೆ. ಲಕ್ಷ್ಮೀನಾರಾಯಣರ ವಿವಾಹೋತ್ಸವವೂ ಚಿತ್ರಿತವಾಗಿದೆ. ಬ್ರಹ್ಮನು ಭೃಗುವಿಗೂ, ಆತನು ನಾರದನಿಗೂ ಇದನ್ನು ಹೇಳಿದಂತೆ ಒಂದು ಪೌರಾಣಿಕ ಕಥೆಯನ್ನಿದು ಅವಲಂಬಿಸಿದೆ.

ಇದು ಮಂಗಳಪದ್ಯ

ಕಲ್ಯಾಣೈಕನಿಕೇತನಂ ತದನಘಂ ಕಾಲಾಂಬುದಶ್ಯಾಮಲಂ
ಚಿತ್ತೇ ನೃತ್ಯತು ಶೇಷಭೂಧರಶಿರೋರತ್ನಂ ಚಿರತ್ನಂ ಮಹಃ ॥
ಯಸ್ಯೋರಸ್ಯನಿಶಂ ಸಂತಾ ಜಲನಿಧೇರ್ಯಸ್ಯಾಸ್ತಿ ತನ್ಮೇಖಲಾ
ಪಾರ್ಶ್ವೇ ಯಸ್ಯ ಪದೇ ಚ ತತ್ಪ್ರಿಯತಮಾ ಯತ್ರತತ್ರ ಶೇತೇ ಸ್ವಯಂ ॥

ಭಕ್ತಿಪೂರ್ವಕವಾದ ವರ್ಣನೆಗಳಿಂದಲೂ, ಲಲಿತಶೈಲಿಯಿಂದಲೂ ಈ ಚಂಪು ಆದರಣೀಯವಾಗಿದೆ. ವಿಶ್ವಗುಣಾದರ್ಶದಂತಲ್ಲದೆ ಗದ್ಯಭಾಗ ಸಮೃದ್ಧವಾಗಿದೆ.

## 23. ದ್ರೌಪದೀಪರಿಣಯಚಂಪೂ

ಇದನ್ನು ರಚಿಸಿದವನು ಚಕ್ರಕವಿ, ತಂದೆ ಲೋಕನಾಥ, ತಾಯಿ ಅಂಬಾ. ಇವನು ಪಾಂಡ್ಯ ಮತ್ತು ಚೇರದೇಶದ ರಾಜರ ಆಶ್ರಯದಲ್ಲಿದ್ದನು. ನೀಲಕಂಠವಿಜಯವನ್ನು ಬರೆದ ನೀಲಕಂಠದೀಕ್ಷಿತನನ್ನು ಇವನು ಉಲ್ಲೇಖಿಸಿರುವುದರಿಂದ ಈತನ ಕಾಲ 17ನೇ ಶತಕವಿರಬೇಕು.

ಈ ಚಂಪುವಿನಲ್ಲಿ 6 ಆಶ್ವಾಸಗಳಿದ್ದು, ಪಾಂಡವರ ಏಕಚಕ್ರನಗರವಾಸದಿಂದ ದ್ರೌಪದೀಪರಿಣಯದ ಪರ್ಯಂತವಾದ ಕಥೆ ವರ್ಣಿತವಾಗಿದೆ. ಪದಬಂಧವು ಲಲಿತವಾಗಿದೆ. ಇದನ್ನಲ್ಲದೆ ರುಕ್ಮಿಣೀಪರಿಣಯ, ಪಾರ್ವತೀಪರಿಣಯ ಎಂಬೆರಡು ಚಂಪುಗಳನ್ನೂ ಇವನು ರಚಿಸಿದ್ದಾನೆ. ಕಾಳಿದಾಸನ ಈ ಪ್ರಶಂಸೆ ಸುಂದರವಾಗಿದೆ.

ಪ್ರಾಚೇತಸೇ ಯಥಾ ಜಗತಿ ಪ್ರರೂಢಾ
ಯಥಾ ಪುಷ್ಪಿತಾ ಸತ್ಯವತೀಕುಮಾರೇ ।
ಸಾ ಕಾಲಿದಾಸೇ ಫಲಿತಾ ಕವೀನಾಂ
ಏಕೋಪಮಾನೇ ಕವಿತಾಲತಾಭೂತ್ ॥

## 24. ಶ್ರೀನಿವಾಸಚಂಪೂ

ಇದನ್ನು ಬರೆದವನು ವೆಂಕಟೇಶ ಅಥವಾ ವೆಂಕಟಾಧ್ವರಿ. ತಿರುಪತಿಯ ದೇವತೆ ಶ್ರೀನಿವಾಸನಿಗೂ ಪದ್ಮಾವತಿಗೂ ನಡೆದ ವಿವಾಹವನ್ನು ವರ್ಣಿಸಿದ್ದಾನೆ. ಈ ಕಾವ್ಯದಲ್ಲಿ 10 ಉಲ್ಲಾಸಗಳಿವೆ. ಶ್ಲೇಷ, ಯಮಕ, ಸಮಸ್ಯಾಪೂರ್ತಿ, ಚಕ್ರಬಂಧಾದಿ ಚಮತ್ಕಾರಗಳನ್ನು ಕವಿ ತೋರಿಸಿದ್ದಾನೆ. ತನ್ನ ಕಾವ್ಯವು 'ಶ್ಲೇಷಸಾರ' ವೆಂದೂ, ತಾನು 'ಕವಿಮಶಕಶಿಶು' ವೆಂದೂ



ಹೇಳಿಕೊಂಡಿದ್ದಾನೆ. ಇವನ ಕಾಲ 17ನೇ ಶತಕವಿರಬಹುದು. ಕವಿಯ ವಿಚಿತ್ರ ಕಲ್ಪನೆಗೆ ಒಂದು ಉದಾಹರಣೆ—

ಪ್ರತಿಪಾದ್ಯ ದುಹಿತರಂ ಸ್ವಾಂ ಗಂಗಾಂ ಭರ್ತ್ರೇ ಸ್ರವಂತೀನಾಂ ।
ಜಗೃಹೇ ತದೀಯಕನ್ಯಾಂ ಲಕ್ಷ್ಮೀಂ ಕೃಷ್ಣಃ ಕಲತ್ರಾರ್ಥೀ ॥

## 25. ಚೋಲಚಂಪೂ

ಇದನ್ನು ರಚಿಸಿದ ವಿರೂಪಾಕ್ಷಕವಿ ಪರಮಶೈವ. ಇವನ ಇನ್ನೊಂದು ಕೃತಿಯಾದ ಶಿವವಿಲಾಸ ಚಂಪುವಿನಲ್ಲಿ ತನ್ನ ತಂದೆ ಶಿವ, ತಾಯಿ ಗೋಮತಿ, ಕೌಶಿಕಗೋತ್ರ ಎಂದು ತಿಳಿಸಿದ್ದಾನೆ. ಚೋಳರಾಜ ಕುಲೋತ್ತುಂಗ ಮತ್ತು ಅವನ ಮಗ ದೇವಚೋಲನ ಕಥೆ ಚೋಲಚಂಪುವಿನ ವರ್ಣನೀಯ ವೃತ್ತಾಂತ. ಇವನ ಕಾಲ 17ನೆಯ ಶತಕ. ಈತ ವಿದ್ವತ್ಕವಿ. ಕಾವ್ಯವು ಪ್ರೌಢವಾಗಿಯೂ, ಶಿವಭಕ್ತಿಪೂರ್ಣವಾಗಿಯೂ ಇದೆ.

## 26. ಕಾರ್ತವೀರ್ಯವಿಜಯ

ಇದರ ಕವಿ ತಿರುವಾಂಕೂರಿನ ಯುವರಾಜನಾಗಿದ್ದ ಅಶ್ವಿನ ರಾಮವರ್ಮ. ಕಾಲ ಕ್ರಿ.ಶ. 1765—94. ಈತನು ಸಂತಾನಗೋಪಾಲ ಎಂಬ ಇನ್ನೊಂದು ಚಂಪುವನ್ನೂ, ಕೆಲವು ನಾಟಕ, ಭಾಣಗಳನ್ನೂ ರಚಿಸಿದ್ದಾನೆ. ಇದೊಂದು ಲಘುಪ್ರಬಂಧವಾಗಿದ್ದು, ಕಾರ್ತವೀರ್ಯನು ರಾವಣನನ್ನು ಗೆದ್ದು ಸೆರೆಯಲ್ಲಿರಿಸಿ ಪುಲಸ್ತ್ಯಮುನಿಯ ಕೋರಿಕೆಯಂತೆ ಬಿಡುಗಡೆ ಮಾಡಿದ್ದನೆಂಬ ಕಥೆ ವರ್ಣಿತವಾಗಿದೆ. ಶೈಲಿಯು ಪ್ರೌಢವಾಗಿ ಕಾವ್ಯರಚನಾಕೌಶಲವನ್ನು ವ್ಯಕ್ತಪಡಿಸುತ್ತದೆ.

## 27. ಆನಂದರಂಗಚಂಪೂ

ಇದು ಐತಿಹಾಸಿಕ ವಿಷಯವನ್ನು ವರ್ಣಿಸಿರುವ ಚಂಪೂ. ಫ್ರೆಂಚ್ ಆಡಳಿತಗಾರ ಡೂಪ್ಲೆಯ ಕಾಲದಲ್ಲಿ ಆನಂದರಂಗಪಿಳ್ಳೆ ಎಂಬುವನು ಪಾಂಡಿಚೆರಿಯಲ್ಲಿ ಪ್ರಮುಖ ಅಧಿಕಾರಿಯಾಗಿದ್ದನು. ಅವನು ಬರೆದಿಟ್ಟ ದಿನಚರ್ಯೆ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ. ಆನಂದಗಿರಿಪಿಳ್ಳೆಯ ಜೀವನದ ಪ್ರಮುಖಘಟನೆಗಳು ಈ ಚಂಪುವಿನಲ್ಲಿ ವರ್ಣಿತವಾಗಿವೆ. ಪ್ರಾಸ್ತಾವಿಕವಾಗಿ ವಿಜಯನಗರದ ಮತ್ತು ಚಂದ್ರಗಿರಿಯ ರಾಜವಂಶದ ವರ್ಣನೆ ಬಂದಿದೆ. ಈ ಚಂಪುವಿನಲ್ಲಿ 8 ಸ್ತಬಕಗಳಿವೆ.

ಈ ಚಂಪುವನ್ನು ರಚಿಸಿದವನು 18ನೆಯ ಶತಮಾನದಲ್ಲಿದ್ದ ಶ್ರೀನಿವಾಸಕವಿ. ಶ್ರೀವತ್ಸ ಗೋತ್ರದ ಗಂಗಾಧರ ತಂದೆ. ಪಾರ್ವತಿ ತಾಯಿ. ಈತನು ಕಾವ್ಯರಚನಾಸಾಮರ್ಥ್ಯವಿರುವ ಪ್ರೌಢಕವಿ. ತನ್ನ ತಂದೆಯನ್ನು ಪ್ರಶಂಸೆಮಾಡುವ ಪದ್ಯವಿದು—

ವರಕವಿಕುಲಮೌಲಿಸ್ಫಾರಮಾಣಿಕ್ಯಕಾಂತಿ-
ದ್ಯುಮಣಿಕಿರಣಪುಂಜಪ್ರೋಲ್ಲಸತ್ಪಾದಪದ್ಮಃ ।
ನಿಖಿಲನಿಗಮಮೂರ್ತಿಃ ಸ್ಫೂರ್ತಿರೀಶಸ್ಯ ಸಾಕ್ಷಾತ್
ಜಯತಿ ಜಗತಿ ತಾತೋ ಯಸ್ಯ ಗಂಗಾಧರಾರ್ಯಃ ॥

## 28. ಭಾಗೀರಥೀ ಚಂಪೂ

ನಾರಾಯಣ ಮತ್ತು ಅನ್ನಪೂರ್ಣೆಯರ ಮಗ ಅಚ್ಯುತಶರ್ಮನು ಈ ಚಂಪುವನ್ನು ಕ್ರಿ.ಶ. 1814ರಲ್ಲಿ ರಚಿಸಿದ್ದಾನೆ. ತಾನು ಜನಸ್ಥಾನ ನಿವಾಸಿಯೆಂದು ತಿಳಿಸಿ, ನಾರಾಯಣ ದೇಶಿಕ ಮಸ್ಕಾರೀಂದ್ರ, ರಘೂತ್ತಮ ಗುರು ಮತ್ತು ತನ್ನ ಮಾತಾಪಿತೃಗಳಿಗೆ ಈ ಕಾವ್ಯವನ್ನು ಭಕ್ತಿಯಿಂದ ಅರ್ಪಿಸಿದ್ದಾನೆ.

ಈ ಚಂಪುವಿನಲ್ಲಿ ಏಳು ಮನೋರಥಗಳಿವೆ. ಸೂರ್ಯನಿಂದಾರಂಭಿಸಿ ಇಕ್ಷ್ವಾಕುವಂಶಾವಳಿಯನ್ನು ವರ್ಣಿಸಿ ಭಗೀರಥನ ಯೌವನಾದಿಗಳನ್ನು ಸುಂದರವಾಗಿ ನಿರೂಪಿಸಿದ್ದಾನೆ. ಶಿವಪಾರ್ವತಿಯರ ವಿವಾಹ, ಸ್ಕಂದನ ಉತ್ಪತ್ತಿ, ಗೌತಮನ ತಪಸ್ಸಿನಿಂದ ಗೋದಾವರಿಯ ಜನನ, ಬ್ರಹ್ಮಲೋಕಕ್ಕೆ ಅವಳ ಪ್ರಯಾಣ, ಭಗೀರಥನ ತಪಸ್ಸಿನಿಂದ ಗೋದಾವರಿಯೇ ಗಂಗೆಯಾಗಿ ಭೂಮಿಗೆ ಇಳಿದು ಬಂದದ್ದು, ಕಪಿಲಾಶ್ರಮದಲ್ಲಿ ಹರಿದು ಭಗೀರಥನ ಪಿತೃಗಳಿಗೆ ಗಂಗಾಸ್ಪರ್ಶದಿಂದ ಸದ್ಗತಿ—ಇತ್ಯಾದಿ ಕಥೆ ಸುಂದರ ಶೈಲಿಯಲ್ಲಿ ವರ್ಣಿತವಾಗಿದೆ.

ಅಚ್ಯುತಕವಿಯು 'ಬ್ರಹ್ಮಾದ್ವೈತರೂಪ, ಶಿವೈಕಾಕಾರ' ಮುಂತಾದ ಪ್ರಯೋಗಗಳಿಂದ ಈತನು ಅದ್ವೈತಿಯೆಂದು ಹೇಳಬಹುದು. ಗದ್ಯಪದ್ಯಗಳಲ್ಲಿ ಲಲಿತಪದರಚನೆಯಿದ್ದರೂ, ಪ್ರೌಢವಾದ ಕವಿಕಲ್ಪನೆಯುಂಟು ಹತ್ತೊಂಬತ್ತನೆಯ ಶತಮಾನದ ಚಂಪುಗಳಲ್ಲಿ ಇದು ಪ್ರಶಂಸನೀಯವಾದ ಕೃತಿ.

1. ಇದು ಗಂಗೆಯ ವರ್ಣನೆ—
'ತತಃ ಸಾ ಕ್ವಚಿಚ್ಚಂಚಲಾ ಕ್ವಚಿತ್ ಕುಂಟಿಲಾ ಕ್ವಚಿದ್ವಿಸ್ತೀರ್ಣಾ ಕ್ವಚಿನ್ಮಂಥರಾ ಕ್ವಚಿದುದ್ಧತಾ ಕ್ವಚಿತ್ ಸಾವರ್ತಾ ಕ್ವಚಿತ್ ಫೇನಹಾಸವತೀ...'

2. ಕೆಲವೆಡೆ ಚಮತ್ಕಾರಕ್ಕಾಗಿ ನೈಯಾಯಿಕಶೈಲಿ ಪ್ರಯುಕ್ತವಾಗಿದೆ.—
ಕಿಂ ಬ್ರೂಷೇ ಭಾವತ್ವಾವಚ್ಛಿನ್ನಜನ್ಯತ್ವಾವಚ್ಛೇದೇನ ।
ವಿನಶ್ವರತ್ವನೈಯತ್ಯವಿರುದ್ಧಂ ಸ್ವಪ್ನೇಷ್ವಪ್ಯಸಂಭಾವ್ಯಂ ॥

### ಚಂಪೂಕಾವ್ಯಗಳ ಸಮೀಕ್ಷೆ

ಪ್ರಕಾಶಿತ ಚಂಪೂಕಾವ್ಯಗಳಲ್ಲಿ ಪ್ರಸಿದ್ಧವಾದವುಗಳನ್ನು ಇದುವರೆಗೆ ಪರಾಮರ್ಶಿಸಲಾಯಿತು. ಪ್ರಕಾಶನಗೊಳ್ಳದ ಚಂಪೂಗಳ ಸಂಖ್ಯೆಯೂ ವಿಪುಲವಾಗಿದೆ. ಕ್ರಿ.ಶ. 6ನೆಯ ಶತಕಕ್ಕಿಂತ ಪೂರ್ವದಲ್ಲಿ ಚಂಪೂಪ್ರಬಂಧಗಳಿದ್ದವೆಂದು ದಂಡಿಯ ಮಾತಿನಿಂದ ನಿಶ್ಚಿತವಾಗಿದ್ದರೂ 10ನೆಯ ಶತಕದಲ್ಲಿ ರಚಿತವಾದ ನಲಚಂಪುವಿಗಿಂತ ಪ್ರಾಚೀನವಾದದ್ದು ದೊರಕಿಲ್ಲ. 11ನೆಯ ಶತಕದವರೆಂದು ಹೇಳಲಾದ 'ವಿದರ್ಭರಾಜ', ಅಭಿನವ ಕಾಳಿದಾಸ—ಮೊದಲಾದವರು ಆ ಕಾಲದಲ್ಲಿದ್ದವರೆಂಬುದಕ್ಕೆ ನಿಶ್ಚಿತಪ್ರಮಾಣವಿಲ್ಲ. 12ನೆಯ ಶತಕವಂತೂ ಚಂಪೂಗ್ರಂಥಗಳ ಇತಿಹಾಸದಲ್ಲಿ ಒಂದು ಶೂನ್ಯಕಾಲವೆನಿಸುತ್ತದೆ. 13ನೆಯ ಶತಕದಲ್ಲಿ ಸೊಡ್ಡಲನೂ, 14ರಲ್ಲಿ



ಅಹೋಬಲಸೂರಿಯೂ ಉಲ್ಲೇಖಯೋಗ್ಯರಾದವರು. 15ನೆಯ ಶತಕದ ಉತ್ತರಾರ್ಧದಿಂದ ಚಂಪೂರಚನೆ ಮತ್ತೆ ಚೇತರಿಸಿಕೊಂಡಿತು. 16, 17ನೆಯ ಶತಕಗಳು ಚಂಪೂಗಳ ಉಚ್ಛ್ರಾಯ ಕಾಲವೆನ್ನಬಹುದು. ಈ ಸಮಯದಲ್ಲಿ ಸುಮಾರು 200 ಚಂಪೂಗಳ ನಿರ್ಮಾಣವಾಗಿದೆ. ಅಲ್ಲಿಂದ ಮುಂದೆ 18—19ನೆಯ ಶತಮಾನಗಳಲ್ಲಿ ಒಂದರಮೇಲೊಂದರಂತೆ ಈ ಬಗೆಯ ಗ್ರಂಥಗಳು ನಿರ್ಮಾಣಗೊಂಡರೂ ಉಲ್ಲೇಖಯೋಗ್ಯವಾದ ಸುಪ್ರಸಿದ್ಧ ಗ್ರಂಥಗಳು ವಿರಳವಾದವು. ಈ ಬಗೆಯ ಏರಿಳಿತಗಳಿಗೆ ದೇಶದ ರಾಜಕೀಯ ಪರಿಸ್ಥಿತಿಯೂ, ಜನರ ಅಭಿರುಚಿಯೂ ಕಾರಣವಾಗಿರಬೇಕು.

ದಕ್ಷಿಣಭಾರತದಲ್ಲಿ ವಿಜಯನಗರ, ತಂಜಾವೂರು, ತಿರುವಾಂಕೂರು ಮತ್ತು ಮೈಸೂರು ಸಂಸ್ಥಾನದ ಪ್ರಭುಗಳೂ, ಉತ್ತರಭಾರತದಲ್ಲಿ ರೀವಾ, ಒರಿಸ್ಸಾ, ಕಾಶೀರಾಜರೂ ಚಂಪೂಕವಿಗಳಿಗೆ ಆಶ್ರಯದಾತರೆನ್ನಬಹುದು. ಸ್ವತಃ ವಿದರ್ಭರಾಜನೇ ಚಂಪೂರಾಮಾಯಣವನ್ನು ರಚಿಸಿದನು. ಇವರಲ್ಲದೆ ಕೆಲವು ಸಾಮಂತರಾಜರೂ ಆಶ್ರಯವನ್ನಿತ್ತಿದ್ದಾರೆ. ದಕ್ಷಿಣದಲ್ಲಿ ಜೈನ, ಶೈವ, ವೈಷ್ಣವ ಮತಗಳೂ, ಉತ್ತರದಲ್ಲಿ ಚೈತನ್ಯವಲ್ಲಭಸಂಪ್ರದಾಯಗಳೂ ಮುಖ್ಯವಾಗಿ ಚಂಪೂರಚನೆಗೆ ಪ್ರೇರಕವಾದವು. ಮತಸಂಪ್ರದಾಯಗಳ ಕೇಂದ್ರಗಳಾಗಿದ್ದ ಮಠಮಂದಿರಗಳೂ ಅನೇಕ ಕವಿಗಳಿಗೆ ಆಶ್ರಯವನ್ನಿತ್ತು ಪ್ರೋತ್ಸಾಹಿಸಿವೆ.

ರಾಮಾಯಣ, ಭಾರತ, ಭಾಗವತ, ಶಿವಪುರಾಣ, ಜೈನಪುರಾಣಗಳು ಚಂಪೂಕಾವ್ಯಗಳಿಗೆ ಪ್ರಧಾನವಾದ ಮೂಲಸ್ರೋತಗಳು. ಅವುಗಳಿಗೆ ಪ್ರಥಮಸ್ಥಾನ. ಆಶ್ರಯದಾತರ ಚರಿತೆಗೆ ಎರಡನೆ ಸ್ಥಾನ. ಉಳಿದವು ಯಾತ್ರಾಪ್ರಬಂಧ ಮತ್ತು ಸ್ಥಾನೀಯ ದೇವತೆಗಳಿಗೆ ಸಂಬಂಧಿಸಿದವು. ಸೊಡ್ಡಲನ ಉದಯಸುಂದರೀಕಥಾ, ನಾರಾಯಣಭಟ್ಟನ ಕೋಟಿವಿರಹ, ನಾರಾಯಣರಾಯನ ವಿಕ್ರಮಸೇನಚಂಪೂ—ಇವು ಮೂರು ಕಲ್ಪಿತಕಥೆಗಳನ್ನು ಅವಲಂಬಿಸಿವೆ.

ಗದ್ಯಪದ್ಯಸಂಮಿಶ್ರಣವುಳ್ಳ ಸಾಹಿತ್ಯ ಸಂಸ್ಕೃತವಾಙ್ಮಯಕ್ಕೆ ಹೊಸದಾಗಿ ಬಂದುದೇನಲ್ಲ. ಬ್ರಾಹ್ಮಣ, ಉಪನಿಷತ್ತು, ಭಾರತ, ಭಾಗವತಾದಿಗಳಲ್ಲಿ ಈ ಮಿಶ್ರಶೈಲಿಯನ್ನು ಕಂಡಿದ್ದೇವೆ. ಅಶ್ವಘೋಷ, ಭಾಸಾದಿಗಳ ನಾಟಕಗಳಲ್ಲಿಯೂ, ಪ್ರಶಸ್ತಿಗಳಲ್ಲಿಯೂ ಕಾವ್ಯರೂಪದಲ್ಲಿಯೇ ಈ ಶೈಲಿ ಕಂಡುಬಂದಿದೆ. ಚಂಪೂ ಎಂಬ ಹೆಸರಿನಿಂದ ಈ ಕಾವ್ಯವು ಕ್ರಿ. ಶ. 6ನೆಯ ಶತಕಕ್ಕಿಂತ ಹಿಂದೆ ಇದ್ದರೂ 10ನೇ ಶತಕಕ್ಕಿಂತ ಪೂರ್ವದಲ್ಲಿದ್ದುದು ಉಪಲಬ್ಧವಾಗಿಲ್ಲವೆಂಬುದೇ ವಿಶೇಷ. ಆದರೆ ದಕ್ಷಿಣಭಾರತದಲ್ಲಿಯೇ ಈ ಕಾವ್ಯಗಳು ಹೆಚ್ಚಾಗಿ ನಿರ್ಮಾಣವಾಗಲು ಕಾರಣವೇನಿರಬಹುದೆಂದು ಸ್ವಲ್ಪಮಟ್ಟಿಗೆ ವಿಚಾರ ಮಾಡಬಹುದು.

ಯಾವ ಸಾಹಿತ್ಯವು ನಿರ್ಮಾಣವಾಗಬೇಕಾದರೂ ದೇಶದಲ್ಲಿ ಶಾಂತಿಸುಭಿಕ್ಷೆಗಳು ನೆಲಸಿರಬೇಕೆಂಬುದು ವಾಸ್ತವ ಸಂಗತಿ. ಕ್ರಿ. ಶ. 11ನೆಯ ಶತಮಾನದಿಂದ ಉತ್ತರಭಾರತವು ಪರಕೀಯರ ಧಾಳಿಗೆ ಸಿಕ್ಕ ರಾಜಕೀಯ ಕ್ಷೋಭೆಗೆ ಗುರಿಯಾಯಿತು. ಸುಲ್ತಾನ್ ಮುಹಮ್ಮದನ ದಂಡಯಾತ್ರೆ ಆರಂಭವಾದದ್ದು ಆಗಲೇ. ಅನಂತರ ಮುಹಮ್ಮದ್ ಘೋರಿಯ ಆಕ್ರಮಣ.

ಕ್ರಿ. ಶ. 1205ರ ಹೊತ್ತಿಗೆ ಬಿಹಾರ, ಬಂಗಾಳದೇಶಗಳೂ ಸೇರಿ ಉತ್ತರಭಾರತವೆಲ್ಲವೂ ಮುಸಲ್ಮಾನರಿಗೆ ವಶವಾಗಿತ್ತು. ಎಲ್ಲೆಲ್ಲಿಯೂ ರಾಜಕೀಯ ಕಲಹಗಳೂ, ಯುದ್ಧಗಳೂ ನಡೆಯುತ್ತಿದ್ದವು. ಅಕ್ಬರನ ಕಾಲದವರೆಗೂ (ಕ್ರಿ. ಶ. 1556–1605) ಈ ಪರಿಸ್ಥಿತಿಯೇ ಮುಂದುವರಿಯಿತು. ಆತನ ಆಳ್ವಿಕೆಯಲ್ಲಿ ಸ್ವಲ್ಪಕಾಲ ಶಾಂತಿ ಉಂಟಾದರೂ ಅದು ದೀರ್ಘಕಾಲ ಉಳಿಯಲಿಲ್ಲ. 19ನೆಯ ಶತಕದವರೆಗೂ ಕ್ಷೋಭೆ ತಪ್ಪಲಿಲ್ಲ.

ಆದರೆ ದಕ್ಷಿಣಭಾರತದಲ್ಲಿ ಈ ಪರಿಸ್ಥಿತಿ ಇರಲಿಲ್ಲ. ಮುಸಲ್ಮಾನರು ದಕ್ಷಿಣಕ್ಕೆ, ಮೊದಲನೆಯ ಸಲ ನುಗ್ಗಿದುದು ಕ್ರಿ. ಶ. 1294 ರಲ್ಲಿ. ಆಗ ಅಲ್ಲಾಉದ್ದೀನನು ದಕ್ಷಿಣದಲ್ಲಿ ದಂಡಯಾತ್ರೆ ಮಾಡಿದರೂ ಇಲ್ಲಿ ನೆಲಸಲಿಲ್ಲ. ಮುಂದೆ ಕ್ರಿ. ಶ. 1336 ರಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯವು ಪ್ರಬಲವಾಗಿದ್ದು ಸುಮಾರು 230 ವರ್ಷಗಳವರೆಗೆ ಸಂಸ್ಕೃತಸಾಹಿತ್ಯಕ್ಕೆ ಪ್ರೋತ್ಸಾಹವನ್ನಿತ್ತಿತು. ಅಲ್ಲದೆ ದಕ್ಷಿಣದಲ್ಲಿ ಪಲ್ಲವರು, ಚಾಲುಕ್ಯರು, ರಾಷ್ಟ್ರಕೂಟರು, ಕಾಲಚೂರ್ಯರು, ಹೊಯ್ಸಳರು, ಪಾಂಡ್ಯರು ಮತ್ತು ಚೋಳರು ಸಂಸ್ಕೃತ ಕವಿಗಳಿಗೆ ಆಶ್ರಯವನ್ನಿತ್ತು ಪ್ರೋತ್ಸಾಹಿಸಿದರು. ವಿಜಯನಗರಸಾಮ್ರಾಜ್ಯವು 1565ರ ತಾಳೀಕೋಟೆ ಯುದ್ಧದಲ್ಲಿ ನಶಿಸಿಹೋದರೂ, ದಕ್ಷಿಣದಲ್ಲಿ ಚಿಕ್ಕ ಸಂಸ್ಥಾನಗಳೂ, ಪಾಳೆಯಗಾರರೂ ಸಂಸ್ಕೃತಾಭಿಮಾನಿಗಳಾಗಿಯೇ ಇದ್ದು ಕವಿಗಳಿಗೂ, ವಿದ್ವಾಂಸರಿಗೂ ಆಶ್ರಯವನ್ನಿತ್ತರು. ಅಲ್ಲದೆ ತಂಜಾವೂರಿನಲ್ಲಿ ಸ್ಥಾಪಿತವಾದ ಮರಾಠರಾಜ್ಯವು ಬಹುಮಂದಿ ಕವಿಗಳಿಗೆ ಪ್ರೋತ್ಸಾಹವನ್ನು ಕೊಟ್ಟಿತು. ಹೀಗೆಯೇ ತಿರುವಾಂಕೂರು, ಮೈಸೂರು, ಕೊಚ್ಚಿನ್ ಸಂಸ್ಥಾನಗಳೂ ಪ್ರೋತ್ಸಾಹವನ್ನಿತ್ತವು. ಕ್ರಿ. ಶ. 11–17ನೆಯ ಶತಮಾನಗಳ ಅಂತರದಲ್ಲಿ ಶಾಸ್ತ್ರಗ್ರಂಥಗಳೂ ಸಹ ದಕ್ಷಿಣದಲ್ಲಿಯೇ ಅಧಿಕವಾಗಿ ನಿರ್ಮಿತವಾಗಿವೆಯೆಂಬುದೂ ಗಮನಾರ್ಹ. ಈ ಪರಿಸ್ಥಿತಿಯಲ್ಲಿ ಚಂಪೂಕಾವ್ಯಗಳು ಇಲ್ಲಿ ಅಧಿಕಸಂಖ್ಯೆಯಲ್ಲಿ ನಿರ್ಮಿತವಾದುದು ಸಹಜವೇ ಆಗಿದೆ.

ದಕ್ಷಿಣದೇಶದ ರಾಜರೂ, ಮಠಮಂದಿರಗಳೂ ದೇಶಭಾಷೆಗಳಾದ ಕನ್ನಡ, ತಮಿಳು, ಮಲೆಯಾಳ ಮತ್ತು ತೆಲುಗು ಭಾಷೆಗಳಿಗೆ ಪ್ರೋತ್ಸಾಹವನ್ನಿತ್ತರು. ಶೈವ, ವೈಷ್ಣವ, ಜೈನ ಪಂಥಗಳ ಭಕ್ತಿಮಾರ್ಗದ ಆಂದೋಳನ ಇಲ್ಲಿ ನಡೆದಿತ್ತು. ಆದ್ದರಿಂದ ಕವಿಗಳು ದೇಶಭಾಷೆಗಳಲ್ಲಿಯೂ ವಿಶೇಷವಾಗಿ ಕಾವ್ಯಗಳನ್ನು ಬರೆದರು. ಅವರು ರಚಿಸುತ್ತಿದ್ದ ದೇಶಭಾಷೆಯ ಚಂಪೂಕಾವ್ಯಗಳು ಸಂಸ್ಕೃತಕವಿಗಳಿಗೂ, ಸಂಸ್ಕೃತಚಂಪೂಗಳು ದೇಶಭಾಷೆಯ ಕವಿಗಳಿಗೂ ಉತ್ತೇಜನವನ್ನು ಕೊಟ್ಟಿವೆ. ಪಂಪನು ವಿಕ್ರಮಾರ್ಜುನವಿಜಯವೆಂಬ ಕನ್ನಡಚಂಪುವನ್ನೂ, ಸೋಮದೇವಸೂರಿ ಯಶಸ್ತಿಲಕವೆಂಬ ಸಂಸ್ಕೃತಚಂಪುವನ್ನೂ ರಚಿಸಿರುವುದೂ, ಅವರಿಬ್ಬರೂ ಒಂದೇ ಕಾಲದಲ್ಲಿ ಅರಿಕೇಸರಿಯ ಆಸ್ಥಾನದಲ್ಲಿದ್ದರೆಂಬುದೂ ಗಮನಾರ್ಹ.

ಉತ್ತರಭಾರತದಂತೆ ರಾಜಕೀಯಕ್ಷೋಭೆ ಇಲ್ಲದಿದ್ದುದು, ರಾಜರು ಮತ್ತು ಮಠಗಳು ಕವಿಗಳಿಗೆ ಆಶ್ರಯವನ್ನಿತ್ತುದು, ವಿಶೇಷವಾಗಿ ಭಕ್ತಿಪಂಥದ ಆಂದೋಲನ, ಪ್ರಾದೇಶಿಕ ಭಾಷೆಗಳಲ್ಲಿಯೂ ಚಂಪೂಗಳ ರಚನೆ—ಇವು ದಕ್ಷಿಣಭಾರತದಲ್ಲಿ ಚಂಪೂಗಳ ರಚನೆ ಅಧಿಕವಾಗುವುದಕ್ಕೆ ಕಾರಣ



## ಆಧುನಿಕಸಾಹಿತ್ಯ (ಕ್ರಿ. ಶ. 1920 ನೆಯ ಶತಮಾನ)

ಸಂಸ್ಕೃತವಾಙ್ಮಯದಲ್ಲಿ ಕಾವ್ಯಪರಂಪರೆ ವಾಲ್ಮೀಕಿಮುನಿಗಳ ಶ್ರೀಮದ್ರಾಮಾಯಣದಿಂದ ಇದುವರೆಗೂ ಕನಿಷ್ಠಪಕ್ಷ 25 ಶತಕಗಳನ್ನು ಮಿಕ್ಕು ಸಾಗಿಬಂದಿದೆ. ದೀರ್ಘವಾದ ಈ ಕಾವ್ಯಪರಂಪರೆಯಲ್ಲಿ ಮುಖ್ಯವಾದ ಮೂರು ಬಗೆಗಳನ್ನು ಕಾಣಬಹುದು. ಧರ್ಮೋಪದೇಶವನ್ನು ಪ್ರಧಾನವಾಗಿಟ್ಟುಕೊಂಡು ಪ್ರಶಂಸನೀಯವಾದ ಕಾವ್ಯಪ್ರತಿಭೆಯನ್ನು ಬೆಳಗಿಸಿರುವ ರಾಮಾಯಣ, ಮಹಾಭಾರತಾದಿ ಆರ್ಷಕಾವ್ಯಗಳು ಒಂದು ಬಗೆ. ಅಶ್ವಘೋಷನ ಬುದ್ಧಚರಿತ, ಸೌಂದರನಂದ, ಬುದ್ಧಘೋಷನ ಪದ್ಯಚೂಡಾಮಣಿ, ಜಿನಸೇನನ ಪೂರ್ವಪುರಾಣ ಮೊದಲಾದವೂ ಇದೇ ಗುರಿಯುಳ್ಳವು. ಧರ್ಮೋಪದೇಶವನ್ನು ಸಂಕ್ಷೇಪಗೊಳಿಸಿ ಪ್ರತಿಭೋಲ್ಲಾಸಿತವರ್ಣನೆಗಳಿಗೆ ಪ್ರಾಧಾನ್ಯವಿತ್ತಿರುವ ರಘುವಂಶ, ಜಾನಕೀಹರಣಾದಿಗಳು ಇನ್ನೊಂದು ಬಗೆಯವು. ಕಾವ್ಯಪ್ರತಿಭೆಗಿಂತಲೂ ಶಾಸ್ತ್ರಪಾಂಡಿತ್ಯ, ಕಲ್ಪನಾಚಾತುರ್ಯಗಳನ್ನು ಮೆರೆಸಿರುವ ಭಟ್ಟಿಕಾವ್ಯ, ನೈಷಧೀಯಚರಿತ ಮೊದಲಾದವು ಮೂರನೆಯ ಬಗೆಯವು.

ವಿಶೇಷವಾಗಿ ಪೌರಾಣಿಕ ಕಥೆಗಳನ್ನೂ, ಕವಿಗಳಿಗೆ ಆಶ್ರಯದಾತರಾದ ನಾಯಕರ ಚರಿತ್ರೆಯನ್ನೂ ಆಧರಿಸಿ ಪ್ರವೃತ್ತವಾದ ಈ ಕಾವ್ಯಪರಂಪರೆ 19–20ನೆಯ ಶತಮಾನದಲ್ಲಿಯೂ ತನ್ನ ಹಳೆಯ ಜಾಡಿನಲ್ಲಿ ಹರಿದಿರುವುದನ್ನು ಕಾಣಬಹುದು. ಆಧುನಿಕಜನತೆಯ ಅಭಿರುಚಿಯೂ, ಜೀವನ ಮೌಲ್ಯವೂ ದೇಶಕಾಲಗಳಿಗೆ ತಕ್ಕಂತೆ ಬದಲಾಯಿಸುತ್ತಿದೆ. ಈಗಿನ ಸಾಮಾಜಿಕಜೀವನವನ್ನೂ, ನಿತ್ಯವ್ಯವಹಾರವನ್ನೂ ಆಶ್ರಯಿಸಿದ ನೂತನಮಾರ್ಗದಕಾವ್ಯ ಇಂದಿನಬಹುಜನರಿಗೆ ಪ್ರಿಯವಾಗಬಹುದು. ಜನತೆಯ ಈ ಮನೋಭಾವವನ್ನು ಸಂಸ್ಕೃತ ಕವಿಗಳು ಗುರುತಿಸಿ ಆಧುನಿಕಮಾರ್ಗದಲ್ಲಿಯೂ ಕಾವ್ಯಗಳನ್ನು ರಚಿಸುತ್ತಿದ್ದಾರೆ. ಈ ಬಗೆಯ ರಚನಾಪ್ರವೃತ್ತಿ ವಿಶೇಷವಾಗಿ 20ನೆಯ ಶತಕದ ಸಾಹಿತ್ಯದಲ್ಲಿ ಕಂಡುಬರುತ್ತದೆ.

19–20 ನೆಯ ಶತಕಗಳಲ್ಲಿ ರಚಿತವಾದ ಮಹಾಕಾವ್ಯ, ಲಘುಕಾವ್ಯ, ನಾಟಕ, ಸ್ತೋತ್ರ, ಕಾವ್ಯಾದಿಗಳು ಬೃಹತ್ಪ್ರಮಾಣದಲ್ಲಿವೆ. ಅವುಗಳಲ್ಲಿ ಮುದ್ರಿತವಾದ ಗ್ರಂಥಗಳ ಸಂಖ್ಯೆ ಅತ್ಯಲ್ಪ. ಕಾವ್ಯನಿರ್ಮಾಣದ ರೀತಿ ಹೇಗೆ ಸಾಗಿದೆ ಎಂಬುದರ ದಿಗ್ದರ್ಶನವನ್ನು ಮಾತ್ರ ಇಲ್ಲಿ ಮಾಡಿಕೊಡಲಾಗಿದೆ.

### ಕಾವ್ಯಗಳು

19ನೆಯ ಶತಕದ ಆದಿಭಾಗದಲ್ಲಿದ್ದ ಅಭಿನವರಾಮಾನುಜಾಚಾರ್ಯನ 'ಶ್ರೀನಿವಾಸಗುಣಾಕರವು' 8 ಸರ್ಗಗಳ ಪ್ರೌಢಕಾವ್ಯ. ಇವರಲ್ಲಿ ತಿರುಪತಿ ವೆಂಕಟರಮಣನ ಕಥೆ ವರ್ಣಿತವಾಗಿದೆ. ಇದಕ್ಕೆ ಸ್ವೋಪಜ್ಞ ವ್ಯಾಖ್ಯಾನವಿದೆ. ಅನ್ನದಾಚಾರಣನ 'ರಾಮಾಭ್ಯುದಯ' ಮತ್ತು 'ಮಹಾಪ್ರಸ್ಥಾನ'ಗಳು ರಾಮಾಯಣ, ಮಹಾಭಾರತಗಳನ್ನವಲಂಬಿಸಿದ ಕಾವ್ಯಗಳು, ತಿರುಮಲೈ ತಾತಾಚಾರ್ಯನ

'ದೂತಚರಿತ' ಸುಂದರವಾದ ಲಲಿತಶೈಲಿಯ ಕಾವ್ಯ. ಜಯಪುರದ ಕೃಷ್ಣರಾಮಕವಿಯು 'ಕಚ್ಛವಂಶ', ಜಯಪುರವಿಲಾಸ'–ಎಂಬೆರಡು ಕಾವ್ಯಗಳಲ್ಲಿ ಜಯಪುರರಾಜವಂಶಾವಳಿಯ ಮಹತ್ತ್ವವನ್ನು ವರ್ಣಿಸಿದ್ದಾನೆ. ಬಂಗಾಳದ ಮಹೇಶಚಂದ್ರತರ್ಕಚೂಡಾಮಣಿಯ 'ದಿನಾಜಪುರರಾಜವಂಶ ಕಾವ್ಯ'ದಲ್ಲಿ 17 ಸರ್ಗಗಳೂ, ಆತನ 'ಭೂದೇವಚರಿತ'ದಲ್ಲಿ 24 ಸರ್ಗಗಳೂ ಇವೆ. ಕೇರಳವರ್ಮ ಪರ್ಪರಾಜನ 19 ಸರ್ಗಗಳ 'ವಿಶಾಖವಿಜಯ'ವೂ ಶ್ರೀಕುಣ್ಣಿರುದ್ರದಾಸನ 'ಶ್ರೀರಾಮವರ್ಮವಿಜಯ'ವೂ ಕೇರಳದ ಇಬ್ಬರು ರಾಜರುಗಳ ಚರಿತ್ರೆಯನ್ನು ಚಿತ್ರಿಸಿರುವ ಶ್ರೇಷ್ಠವರ್ಗದ ಕಾವ್ಯಗಳು.

19ನೆಯ ಶತಕದ ಆದಿಭಾಗದಲ್ಲಿ ಮೈಸೂರಿನ ಅನಂತಾಚಾರ್ಯನು 'ಯಾದವ–ರಾಘವ–ಪಾಂಡವೀಯ' ಎಂಬ ಚಿತ್ರಕಾವ್ಯವನ್ನು ರಚಿಸಿದನು. ಇದರ ಒಂದೊಂದು ಶ್ಲೋಕದಲ್ಲಿಯೂ ಭಾಗವತ–ರಾಮಾಯಣ–ಭಾರತದ ಕಥೆಗಳು ಶ್ಲೇಷದಿಂದ ನಿರೂಪಿತವಾಗಿವೆ ಈತನ ಮಗಳು ತ್ರಿವೇಣಿ 'ರಂಗಾಭ್ಯುದಯ,' 'ಸಂಪತ್ಕುಮಾರವಿಜಯ' ಎಂಬೆರಡು ಕಾವ್ಯಗಳನ್ನು ಬರೆದಿದ್ದಾಳೆ. ಮುಮ್ಮಡಿ ಕೃಷ್ಣರಾಜ ಒಡೆಯರು ಕವಿಗಳಿಗೆ ಆಶ್ರಯದಾತರಾಗಿದ್ದರಲ್ಲದೆ ಸ್ವತಃ ಕವಿಗಳಾಗಿದ್ದರು. ಅವರ 'ಸೂರ್ಯಚಂದ್ರಾದಿವಂಶಾವತರ' ಕಾವ್ಯದಲ್ಲಿ ರಾಮಾಯಣ–ಮಹಾಭಾರತಗಳ ಉಪಾಖ್ಯಾನಗಳನ್ನೂ, ಮೈಸೂರು ರಾಜರ ಮೂಲಪುರುಷರಾದ ಯದುರಾಯ–ಕೃಷ್ಣರಾಯರ ಸಾಹಸ ಕಾರ್ಯಗಳನ್ನೂ ಚಿತ್ರಿಸಲಾಗಿದೆ. "ರಾಮಾಯಣಕಥಾಪುಷ್ಪಮಂಜರಿ' ಎಂಬುದು ಅವರ ಇನ್ನೊಂದು ಕಾವ್ಯ. ಶ್ರೀನಿವಾಸಕವಿಸಾರ್ವಭೌಮನ' ಕೃಷ್ಣರಾಜಪ್ರಭಾವೋದಯ'ವು ಮುಮ್ಮಡಿ ಕೃಷ್ಣರಾಜಒಡೆಯರ ಜೀವನವನ್ನು ನಿರೂಪಿಸುತ್ತದೆ. ಭಾಗವತಕೃಷ್ಣನ 'ಕೃಷ್ಣರಾಜಾಭ್ಯುದಯ', ತ್ರಿವಿಕ್ರಮಶಾಸ್ತ್ರಿಯ 'ಕೃಷ್ಣರಾಜಗುಣಾಲೋಕ,' ಗೀತಾಚಾರ್ಯನ 'ಕೃಷ್ಣರಾಜಾಭ್ಯುದಯಚಂಪೂ' ಇವೂ ಸಹ ಮುಮ್ಮಡಿ ಕೃಷ್ಣರಾಜ ಒಡೆಯರ ಪೆಂಪನ್ನು ಚಿತ್ರಿಸುವ ಕಾವ್ಯಗಳು ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಮೈಸೂರು ಜಿಲ್ಲಾ ಖಜಾನೆಯ ನೌಕರನಾದ ಬೇಲೂರು ಕೃಷ್ಣಯ್ಯಂಗಾರ್ಯನು 'ರಾಮಚರ್ಯಾಮೃತಚಂಪು' ವನ್ನು ಬರೆದಿದ್ದಾನೆ. 19ನೆಯ ಶತಕದ ಮಧ್ಯಕಾಲದಲ್ಲಿ ಕೋಲಾರಜಿಲ್ಲೆಯ ದೇವನಹಳ್ಳಿಯ ನಿವಾಸಿಯಾದ ವೆಂಕಟಸೂರಿಯು 'ಹರಿವಂಶಚಂಪು' ವನ್ನು ರಚಿಸಿದ್ದಾನೆ. ಇದರಲ್ಲಿ 8 ವಿಲಾಸಗಳಿವೆ. ಕವಿ ತನ್ನ ವಿನಯವನ್ನು ಹೀಗೆ ಪ್ರದರ್ಶಿಸಿದ್ದಾನೆ—

> ನಾಹಂ ಶಬ್ದವಿಚಕ್ಷಣೋ ನ ಹಿ ರಸಾಲಂಕಾರವೇದೀ ತತಃ ।
> ಶಂಕೇ ಸೇಯಮಧೋಕ್ಷಜಸ್ಯ ಕರುಣಾವೇಣೀ ನ ವಾಣೀ ಮಮ ॥ 1-3

ಇದು ವರ್ಷಾಕಾಲದ ವರ್ಣನೆ-

> ಅಥ ಜಲಪಸಮೂಹೈಃ ಕ್ರಾಂತರೋದೋಽಂತರಾಲಾಃ
> ಅವಿರಲಜಲಧಾರಾಚ್ಛನ್ನದಿಕ್ ಚಕ್ರವಾಲಾಃ ।
> ಸ್ಫುಟಿಕುಟಜಕದಂಬಾಃ ಕೇಽಪಿ ಕಾದಂಬದೂರಾಃ
> ಭುವಿ ಮುದಿತಮಯೂರಾ ವಾಸರಾಃ ಪ್ರಾದುರಾಸನ್ ॥ 7—45



19ನೆಯ ಶತಕದಲ್ಲಿ ಬಹುಶಃ ಆಂಧ್ರಪ್ರಾಂತದವನಾದ ಚೆಲ್ಲಕೊಂಡ ರಾಮಕವಿಯೆಂಬವನು 9 ವಿಲಾಸಗಳಿರುವ 'ರುಕ್ಮಿಣೀಪರಿಣಯ' ವೆಂಬ ಚಂಪುವನ್ನು ರಚಿಸಿದ್ದಾನೆ. ಶ್ಲೇಷ ಮತ್ತು ಶಬ್ದಾಡಂಬರಗಳಲ್ಲಿ ಕವಿಗೆ ಪ್ರೀತಿ. ರುಕ್ಮಿಣಿಯು ಗೌರೀಪೂಜೆಗೆ ಹೋದಾಗ ದೇವಿಯ ಸ್ತುತಿ ಇದು—

> ಕದಂಬವನವಾಸಿನೀ ಸಿತಸದಂಬರೋದ್ಭಾಸಿನೀ
> ಮದಂಬ ಶುಭಕಾರಿಣೀ ಮುನಿಕದಂಬಸಂತಾರಿಣೀ ।
> ಹೃದಂಬರವಿಹಾರಿಣೀ ಸುರಕದಂಬಸಂರಕ್ಷಿಣೀ
> ಸದಂಬರಮಣಿದ್ಯುತಿರ್ಮಮ ಮುದಂ ಬಹುಂ ತ್ವಂ ದಿಶ ॥

ಶ್ರೀಶ್ವರವಿದ್ಯಾಲಂಕಾರನು 'ವಿಜಯಿನೀಕಾವ್ಯ', 'ದಿಲ್ಲೀಮಹೋತ್ಸವಕಾವ್ಯ' ಎಂಬೆರಡು ಕೃತಿಗಳನ್ನು ರಚಿಸಿದ್ದಾನೆ. ವಿಜಯಿನೀಕಾವ್ಯವು ಇಂಗ್ಲೆಂಡಿನ ವಿಕ್ಟೋರಿಯಾರಾಣಿಯ ಆಳ್ವಿಕೆಯನ್ನು ಚಿತ್ರಿಸುವ 12 ಸರ್ಗಗಳ ಕೃತಿ. ಇಂಗ್ಲೆಂಡ್‌ದೇಶ, ವಿಕ್ಟೋರಿಯಾಜೀವನ, ಇಂಡಿಯಾದೇಶದಲ್ಲಿ ಬ್ರಿಟಿಷ್ ಆಡಳಿತ, ರೈಲ್ವೆ–ಟೆಲಿಗ್ರಾಫ್, ಪೋಸ್ಟ್‌ಆಫೀಸ್, ಆಸ್ಪತ್ರೆ ಮುಂತಾದ ಜನೋಪಕಾರಿಯಾದ ಕಾರ್ಯ, ಸಿಪಾಯಿದಂಗೆ, ದಕ್ಷಿಣ ಆಫ್ರಿಕ, ಬೋಯರ್ ಯುದ್ಧ–ಮುಂತಾದ ವಿಷಯಗಳನ್ನು ಇದರಲ್ಲಿ ಮನೋಜ್ಞವಾಗಿ ವರ್ಣಿಸಲಾಗಿದೆ.

ಇದು ವಿಶ್ವವಿದ್ಯಾಲಯವನ್ನು ವರ್ಣಿಸುವ ಶ್ಲೋಕ—

> ಯೂನಿವರ್ಸಿಟಿರಶೇಷಶಿಕ್ಷಯಾ
> ವೇದಕಾವ್ಯಗಣಿತಾದಿದೀಕ್ಷಯಾ ।
> ನಿರ್ಮಿತಾ ಜಗತಿ ತೃಪ್ತಯೇ ಸುಧಾ
> ಜ್ಞಾನರತ್ನಖಚಿತಾಶ್ಚ ಯದ್ಬುಧಾಃ ॥ 4-69

'ದಿಲ್ಲೀಮಹೋತ್ಸವಕಾವ್ಯ' ದಲ್ಲಿ ಏಳನೆಯ ಎಡ್ವರ್ಡ್ ದೊರೆ ಡೆಲ್ಲಿಯಲ್ಲಿ ನಡೆಸಿದ ಐತಿಹಾಸಿಕ ದರ್ಬಾರಿನ ಕಥೆ ಪ್ರಸ್ತುತವಾಗಿದೆ. ಲಾರ್ಡ್ ಕರ್ಸನ್, ಅವನ ಆಡಳಿತ, ಎಡ್ವರ್ಡ್ ದೊರೆಯ ಸಿಂಹಾಸನಾರೋಹಣ, ಮಿಲಿಟರಿ ಕವಾಯತು ಮುಂತಾದವುಗಳ ವರ್ಣನೆ ಇದೆ. ಕಡೆಯ ಆರನೆಯ ಸರ್ಗದಲ್ಲಿ ಯುಧಿಷ್ಠಿರನಿಂದ ಆಂಗ್ಲರವರೆಗೆ ದೆಹಲಿಯನ್ನು ಆಳಿದ ರಾಜರ ಐತಿಹಾಸಿಕ ವಿಷಯವನ್ನು ವರ್ಣಿಸಲಾಗಿದೆ. ಇದು ಷಹಜಹಾನನ ಮಯೂರಾಸನದ ವರ್ಣನೆ—

> ಆಶ್ಚರ್ಯಂ ತನ್ಮಯೂರಾಸನಮಿಹ ವಿದಿತಂ ಸರ್ವರತ್ನಪ್ರಧಾನಂ
> ಯತ್ತದ್ ರತ್ನಚ್ಛಟಾಭಿರ್ದಿಶಿ ನಿಶಿ ಸಮರೇ ದೀಪದರ್ಪಂ ವಿಧುನ್ವತ್ ।
> ಚತ್ವಾರೋ ಯನ್ಮಯೂರಾ ವಿಕಸಿತಗರುತೋ ರತ್ನಪಾರ್ಶ್ವೈರುದಾರೈಃ
> ಸಮ್ಯಕ್ ತತ್ ಪಶ್ಯತಾಂ ಯೇ ಸ್ವಕಿರಣರಜಸಾ ಚಕ್ರಿರೇ ನೇತ್ರಮುದ್ರಾಂ ॥ 6-31

ರಾಜರಾಜವರ್ಮನ 'ಆಂಗ್ಲಸಾಮ್ರಾಜ್ಯ', ಪದ್ಮನಾಭನ 'ಜಾರ್ಜ್‌ದೇವಚರಿತ'ಗಳು ಆಂಗ್ಲರ ಆಳ್ವಿಕೆಗೆ ಸಂಬಂಧಿಸಿದವು. ಕೆ. ಎಸ್. ಕೃಷ್ಣಮೂರ್ತಿಶಾಸ್ತ್ರಿಗಳ 'ಸತೀಚರಿತ'ವು ಚಿಕ್ಕದಾದರೂ ಚೇತೋಹಾರಿಯಾಗಿದೆ. ಸತ್ಯವಾನ್-ಸಾವಿತ್ರಿಯರ ಮಧುರದಾಂಪತ್ಯವು ಇದರಲ್ಲಿ

ಚಿತ್ರಿತವಾಗಿದೆ. ಮಥುರಾನಾಥಶಾಸ್ತ್ರಿಗಳ 'ಗೋವಿಂದವೈಭವ' ಉಮಾಮಹೇಶ್ವರಶಾಸ್ತ್ರಿಗಳ 'ಕಂಸಸಂಹಾರಮಹಾಕಾವ್ಯ', ಸತ್ಯವ್ರತಶಾಸ್ತ್ರಿಗಳ 'ಬೋಧಿಸತ್ವಚರಿತ'—ಇವು ಶ್ರೇಷ್ಠ ಕೃತಿಗಳು. ಪ್ರಭುದತ್ತಸ್ವಾಮಿಗಳ 'ಪೂರ್ವಭಾರತ'ವೂ ದಿನೇಶಪ್ರಸಾದ ಪಾಂಡೇಯರ 'ಭಾರತಾಯನ'ವೂ ಪ್ರಾಚೀನಭಾರತದ ಇತಿಹಾಸವನ್ನು ಚಿತ್ರಿಸುವ ಚಾರಿತ್ರಿಕ ಕಾವ್ಯಗಳು. ಡಾ॥ ಶ್ರೀ. ಭಾ. ವರ್ಣೇಕರ್ ಅವರ 'ಶಿವರಾಜ್ಯೋದಯ'ವು ಛತ್ರಪತಿ ಶಿವಾಜಿಯ ಚರಿತೆಯನ್ನು ವರ್ಣಿಸುವ ವೀರರಸ ಪ್ರಧಾನವಾದ ಐತಿಹಾಸಿಕ ಮಹಾಕಾವ್ಯ. ಯಳಂದೂರು ಶ್ರೀಕಂಠಶಾಸ್ತ್ರಿಗಳ 'ಜಗದ್ಗುರು ಜಯಕಾವ್ಯ', ಶೇಷದೀಕ್ಷಿತರ 'ಕೃಷ್ಣವಿಲಾಸ', ರಘೂತ್ತಮರ ಮುಕುಂದವಿಲಾಸ, ಸೋದೆಮಠದ ಶ್ರೀವಿಬುಧವರ್ಯತೀರ್ಥರ 'ಸುಭದ್ರಾಹರಣ'ಗಳು ಉಲ್ಲೇಖಾರ್ಹವಾದುವು. ಎ. ರಾಮಕೃಷ್ಣಭಟ್ಟರು 'ಶಿವಾನಂದವಿಲಾಸ' ಎಂಬ ಉತ್ಕೃಷ್ಟಕಾವ್ಯವನ್ನು ರಚಿಸಿದ್ದಾರೆ. ಹೃಷಿಕೇಶದಲ್ಲಿ ನೆಲೆಸಿದ್ದ ಸ್ವಾಮಿ ಶಿವಾನಂದರ ಜೀವನಚರಿತೆಯನ್ನು ಈ ಕಾವ್ಯದಲ್ಲಿ ಮನೋಹರವಾಗಿ ಚಿತ್ರಿಸಿದ್ದಾರೆ.

ಜಗ್ಗೂವಕುಲಭೂಷಣ ಎಂಬ ನಾಮಾಂತರದಿಂದ ವಿಖ್ಯಾತರಾದ ಜಗ್ಗೂ ಆಳ್ವಾರ್ ಐಯಂಗಾರ್ಯರು ಶ್ರೇಷ್ಠವರ್ಗದ ಕವಿಗಳು. ಗದ್ಯ-ಪದ್ಯ-ಚಂಪೂಕಾವ್ಯಗಳನ್ನಲ್ಲದೆ 'ಅದ್ಭುತಾಂಶುಕ' ಮುಂತಾದ 16 ರೂಪಕಗಳನ್ನೂ ಹಲವಾರು ಸ್ತೋತ್ರಗಳನ್ನೂ, ರಚಿಸಿದ್ದಾರೆ. 'ಅದ್ಭುತದೂತ' 'ಕರುಣರಸತರಂಗಿಣೀ', 'ಪಥಿಕೋಕ್ತಿಮಾಲಾ' ಮತ್ತು 'ಶೃಂಗಾರ ಲೀಲಾಮೃತ'ಗಳು ಇವರ ಪದ್ಯಕಾವ್ಯಗಳು. 'ಅದ್ಭುತದೂತ'ವು ಮಹಾಭಾರತದ ಶ್ರೀಕೃಷ್ಣಸಂಧಾನವನ್ನು ವರ್ಣಿಸುವ 15 ಸರ್ಗಗಳ ಮಹಾಕಾವ್ಯ. ಇದಕ್ಕೆ ಭಗವಲ್ಲಕ್ಷ್ಮೀದಾಸಾನುಗೃಹೀತವಾದ 'ರತ್ನಪ್ರಭೆ' ಎಂಬ ಸರಳ ವ್ಯಾಖ್ಯಾನವಿದೆ. ಶ್ರೀಕೃಷ್ಣನ ದರ್ಶನಕ್ಕಾಗಿ ಸಂಭ್ರಮದಿಂದ ಬರುತ್ತಿದ್ದ ಒಬ್ಬ ತರುಣಿಯ ವರ್ಣನೆ ಇದು—

ತ್ವರೆಯಿಂದ ಬರುವಾಗ ಅವಳ ಜರತಾರಿಯ ಸೆರಗು ಜಾರಿತು. ಅದನ್ನು ಸರಿಪಡಿಸಿಕೊಳ್ಳಲು ಜಗ್ಗೆಂದು ಹರಡಿದ್ದ ತನ್ನ ಒಡವೆಗಳ ಕಾಂತಿಯೇ ಸೆರಗೆಂದು ಕೈನೀಡಿ, ತನ್ನ ಮುಗ್ಧತೆಗೆ ತಾನೇ ನಕ್ಕಳಂತೆ !

ಉರಸಶ್ಚ್ಯುತಚಿತ್ರಪಟಾ ತ್ವಪರಾ
ಮಣಿಭೂಷಣಜಾಲಮರೀಚಿಚಯೇ ।
ಸಿಚಯಭ್ರಮತಃ ಕರಮಾದಧತೀ
ತ್ರಪಯಾ ಸ್ವಯಮೇವ ಜಹಾಸ ಭೃಶಂ ॥ 9–15

ವಕುಲಭೂಷಣರ ಸೋದರರಾದ ಜಗ್ಗೂ ಶಿಂಗರಾರ್ಯರು ಉತ್ತಮವರ್ಗದ ಕವಿಗಳು. ಇವರ 'ದಾಶರಥಿಚರಿತ'ವು ರಾಮಾಯಣದ ಸಂಗ್ರಹಕಾವ್ಯ. ಚಿತ್ರಕೂಟಗಿರಿಯಲ್ಲಿ ಸೀತಾಸಮೇತನಾದ ಶ್ರೀರಾಮನ ವನವಿಹಾರವರ್ಣನೆ ವಿಸ್ತೃತವಾಗಿದ್ದು ರಮಣೀಯವಾಗಿದೆ.



ಶ್ರೀರಾಮನು ಕೊಳದಿಂದ ತಾವರೆಯ ಹೂಗಳನ್ನು ಕಿತ್ತು ಸೀತೆಗೆಕೊಟ್ಟನು. ಇದನ್ನು ಕಂಡು ಅಲ್ಲಿದ್ದ ಕಾಡಾನೆಗಳು ತಮ್ಮ ಹೆಣ್ಣಾನೆಗಳಿಗೆ ಕೊಡಲು ತಾವೂ ತಾವರೆಹೂಗಳನ್ನು ಕಿತ್ತವಂತೆ !

ಸರಸಿಜಾನ್ಯಪಚಿತ್ಯ ಮಯಾ ಕರೇ
ತವ ಕೃತೇ ವಿಧೃತಾನ್ಯಯಿ ಸುಂದರಿ ।
ಪರಿಚಿತಾಃ ಸಮವೇಕ್ಷ್ಯ ಕರ್ಯೈಃ ಸ್ವಯಂ
ದಧುರಿಮೇ ಧುರಿ ಮೇ ಕರಿಣೋಽಂಬುಜಂ ॥

ದಾಶರಥಿಚರಿತವನ್ನಲ್ಲದೇ ಈ ಕವಿಗಳು 'ಯದುಶೈಲಚಂಪು'ವನ್ನೂ, 'ಶಿಬಿವೈಭವ', 'ಯಕ್ಷಪ್ರಶ್ನೆ', 'ಧರ್ಮವ್ಯಾಧದರ್ಶನ' ಎಂಬ ನಾಟಕಗಳನ್ನೂ, ಹಲವಾರು ಸ್ತೋತ್ರಗ್ರಂಥಗಳನ್ನೂ ರಚಿಸಿದ್ದಾರೆ.

ಡಾ ॥ ಕೆ. ಎಸ್. ನಾಗರಾಜನ್ ಅವರು 'ಸೀತಾಸ್ವಯಂವರ', ಸ್ಕಾಂದಪುರಾಣದ ಕಥಾನಕವನ್ನಾಧರಿಸಿದ 'ಶಬರೀವಿಲಾಸ', 'ಲವಲೀಪರಿಣಯ' ಎಂಬ ಕಾವ್ಯಗಳನ್ನೂ, 'ಉನ್ಮತ್ತಕೀಚಕ'ವೆಂಬ ನಾಟಕವನ್ನೂ, 'ಭಾರತೀಯ ದೇಶಭಕ್ತಚರಿತ' ಎಂಬ ಗದ್ಯಕಾವ್ಯವನ್ನೂ, ಹಲವಾರು ಸ್ತೋತ್ರಗಳನ್ನೂ ಪ್ರಸನ್ನಶೈಲಿಯಲ್ಲಿ ರಚಿಸಿದ್ದಾರೆ.

'ದಯಾಸಹಸ್ರ'ವು ಕೆಲವೇ ವರ್ಷಗಳ ಹಿಂದೆ ವರವರ್ಣಿನೀ ಎಂಬ ಮಹಿಳೆಯ ಮುಖದಿಂದ ಬಂದ ಬೃಹತ್ ಸ್ತೋತ್ರಕಾವ್ಯ. ಇದು 'ವೇದಾಂತದೇಶಿಕಾನುಗೃಹೀತ'. ವಿಷ್ಣುವಿನ ನಾನಾ ಅವತಾರಗಳಲ್ಲಿ ಆತನ ದಯೆ ಹೇಗೆ ಪ್ರಕಟವಾಗಿದೆಯೆಂಬುದನ್ನು ಈ ಕೃತಿ ನಿರೂಪಿಸುತ್ತದೆ. ಸ್ರಗ್ಧರಾ, ಶಾರ್ದೂಲವಿಕ್ರೀಡಿತಾದಿ ನಾನಾವೃತ್ತಗಳಿಂದ ಶೋಭಿಸುವ ಈ ಗ್ರಂಥ ಪ್ರಶಂಸನೀಯವಾದದ್ದು. ಅರ್ಥಪುಷ್ಟವಾದ ಈ ಕೃತಿ ಉತ್ತಮ ಕಾವ್ಯಪಂಕ್ತಿಯಲ್ಲಿ ಸೇರುತ್ತದೆ. ಇದರಿಂದ ಎರಡು ಶ್ಲೋಕಗಳನ್ನು ಉದಾಹರಿಸಿದೆ.

1. ಹೇ ಸ್ವಾಮಿ, ಕರ್ಣನು ಅರ್ಜುನನಿಗಾಗಿ ಕಾದಿರಿಸಿದ್ದ ಶಕ್ತ್ಯಾಯುಧವನ್ನು ಘಟೋತ್ಕಚನ ಮೇಲೆ ಪ್ರಯೋಗಿಸುವಂತೆ ಮಾಡಿ, ಭಕ್ತನಾದ ಅರ್ಜುನನನ್ನು ರಕ್ಷಿಸಿದ್ದೀಯೆ. ಇದರಲ್ಲಿ ಆಶ್ಚರ್ಯವೇನು ? ಭಕ್ತರಕ್ಷಣೆಗೆ ಏನನ್ನು ಮಾಡದಿರುವೆ ?

ಉದ್ದಿಶ್ಯ ಶ್ವೇತವಾಹಂ ತಪನತನುಭುವಾ ರಕ್ಷಿತಾಂ ಶಕ್ತಿಮೇಕಾಂ
ರಕ್ಷಸ್ಯಕ್ಷೋಭ್ಯದಾಕ್ಷ್ಯೇ ಪವನತನಯಜೇ ಪಾತಯಿತ್ವಾ ರಜನ್ಯಾಂ ।
ಜಿಷ್ಣುಂ ಭಕ್ತಾಗ್ರಗಣ್ಯಂ ರಣಭುವಿ ವಿಪದೋ ಮೋಚಯಾಮಾಸಿಥಾಹೋ
ಭಕ್ತತ್ರಾಣಾಯ ಕಿಂ ವಾ ಕಲಯಸಿ ಕೃಪಯಾ ನಾತ್ರ ಚಿತ್ರಂ ನ ಕಿಂಚಿತ್ ॥

2. ಕ್ಷತ್ರಿಯ ಕುಲವಿಧ್ವಂಸಕವಾದ ಕುಠಾರವನ್ನು ಹಿಡಿದು ಭಾರ್ಗವರಾಮನು ಎದುರಿಗೆ ಬಂದಾಗ ಶ್ರೀರಾಮನ ಬಲ ಇಮ್ಮಡಿಯಾಯಿತು. ಅವನು ಪರಶುರಾಮನನ್ನು ಜಯಿಸಿದನು. ಅಂಥ ವೀರನನ್ನು ಬಿಟ್ಟು ಇನ್ನು ಯಾರನ್ನು ಭಜಿಸಲಿ ?

ಕ್ಷೀಬಕ್ಷಾತ್ರಪ್ರಶಮನರತಸ್ಫೀತಚಂಚತ್ ಕುಠಾರಂ
ಕ್ರೂರಾಕಾರದ್ವಿಗುಣಿತಧರಾಪಾಲಕಸ್ವಾಂತಕಂಪಂ ।
ಸೀತಾವೀಕ್ಷಾದ್ವಿಗುಣಿತಬಲೋ ಭಾರ್ಗವಂ ಭಗ್ನಶಕ್ತಿಂ
ಯಶ್ಚಕ್ರೇ ಶ್ರೀವೃಷಗಿರಿಪತಿಂ ತಂ ವಿನಾ ಕಂ ಭಜಾಮಿ

'ಸೀತಾವೀಕ್ಷಾದ್ವಿಗುಣಿತಬಲಃ' ಸೀತೆಯು ವೀಕ್ಷಿಸಿದ್ದರಿಂದ ದ್ವಿಗುಣಿತಬಲನೋ ? ಸೀತೆಯನ್ನು ವೀಕ್ಷಿಸುತ್ತಿದ್ದುದರಿಂದ ದ್ವಿಗುಣಿತಬಲನೋ ? ಉಭಯವೂ ಆಗಬಹುದು !

ಮಹಾಮಹೋಪಾಧ್ಯಾಯ ಟಿ. ಗಣಪತಿಶಾಸ್ತ್ರಿಗಳ ಸಾಧನೆ ದೊಡ್ಡದು. ಕಣ್ಮರೆಯಾಗಿದ್ದ ಭಾಸನ ನಾಟಕಗಳನ್ನು ಹುಡುಕಿ ಬೆಳಕಿಗೆ ತಂದ ಕೀರ್ತಿ ಇವರದು. ಆ ನಾಟಕಗಳನ್ನು ಪರಿಷ್ಕರಿಸಿ ವ್ಯಾಖ್ಯಾನಗಳನ್ನು ಬರೆದು ಪ್ರಕಟಿಸಿದ್ದಾರೆ. ಇವರ ತಂದೆ ರಾಮಸುಬ್ಬಐಯರ್. ತಿನ್ನವೆಲ್ಲಿ ತಾಲೂಕಿನ ತರುವೈ ಇವರ ಜನ್ಮಸ್ಥಳ. ತಮ್ಮ 17ನೆಯ ವಯಸ್ಸಿನಲ್ಲಿ ಶಾಸ್ತ್ರಿಗಳು 'ಮಾಧವೀವಸಂತ' ಎಂಬ ನಾಟಕವನ್ನು ರಚಿಸಿದರು. ತಿರುವಾಂಕೂರು ರಾಜರ ವಂಶಾವಳಿಯನ್ನು ವರ್ಣಿಸುವ 'ಶ್ರೀಮೂಲಚರಿತಕಾವ್ಯ'. ಭಾರತವರ್ಣನ, 'ತುಲಾಪುರುಷದಾನ ಕಾವ್ಯ' 'ಅಪರ್ಣಾಸ್ತವ' ಮೊದಲಾದವು ಇವರ ಕೃತಿಗಳು.

ವಾಸಿಷ್ಠಮುನಿಗಳೆಂದು ವಿಖ್ಯಾತರಾದ ವಾಸಿಷ್ಠಗಣಪತಿಶಾಸ್ತ್ರಿಗಳು ಆಶ್ಚರ್ಯಕರವಾದ ಕಾವ್ಯ ಪ್ರತಿಭೆಯುಳ್ಳವರು. ಇವರಿಗೆ 'ಕಾವ್ಯಕಂಠ' ಎಂಬ ಬಿರುದಿತ್ತು. ಜನ್ಮತಃ ಆಂಧ್ರ ದೇಶೀಯ ರಾದರೂ ವಿಶೇಷವಾಗಿ ಕನ್ನಡನಾಡಿನಲ್ಲಿ ನೆಲೆಸಿದ್ದರು. ಜೀವಿತಕಾಲ ಕ್ರಿ. ಶ. 1878–1936. ಆಶುಕವಿತೆಯಲ್ಲಿ ಗಣಪತಿಶಾಸ್ತ್ರಿಗಳು ನಿಃಸೀಮರು. ಅಷ್ಟಾವಧಾನ—ಶತಾವಧಾನಗಳನ್ನೂ ಸಮಸ್ಯಾಪೂರ್ತಿಗಳನ್ನೂ ನಡೆಸುತ್ತಿದ್ದರು. ಅಧ್ಯಾತ್ಮನಿಷ್ಠರಾದ ಇವರು 'ಪೂರ್ಣಾ' ಎಂಬ ಕಾದಂಬರಿಯನ್ನೂ, ಹಲವಾರು ಸ್ತುತಿಗ್ರಂಥಗಳನ್ನೂ ವೇದಾರ್ಥವಿಮರ್ಶೆಗಳನ್ನೂ ರಚಿಸಿದ್ದಾರೆ. 'ಉಮಾಸಹಸ್ರ' ಎಂಬುದು ಇವರ 40 ಸ್ತಬಕಗಳ ಬೃಹತ್ ಸ್ತೋತ್ರಕಾವ್ಯ. ಅದರಿಂದಾರಿಸಿದ ಶ್ಲೋಕಗಳಿವು—

ಹರ್ತಾರಃ ಶಶಿಕೀರ್ತೇಃ ಕರ್ತಾರೋ ನವಭಾರಾಂ ।
ಭರ್ತಾರೋ ಮಮ ಸಂತು ಸ್ಕಂದಾಂಬಾದರಹಾಸಾಃ ॥
ದಿಗ್ವಲ್ಲೀಷ್ವತಿಶುಭ್ರಾಂ ಕುರ್ವಂತಃ ಕುಸುಮರ್ಧಿಂ ।
ಭೂಯಾಸುಸ್ತವ ಭೂತ್ಯೈ ಮನ್ಮಾತುಃ ಸ್ಮಿತಲೇಶಾಃ ॥
ಕಾರಂ ಕಾರಮುಮೇ ಯದ್ ಬ್ರಹ್ಮಾಂಡಾನಿ ನಿಹಂಸಿ ।
ತನ್ಮನ್ಯೇ ಸುರಮಾನ್ಯೇ ಬಾಲ್ಯೈವಾಂಬ ಸದಾ ತ್ವಂ ॥



ಉಮಾಸಹಸ್ರಕ್ಕೆ ಕಪಾಲಿಶಾಸ್ತ್ರಿಗಳು ಲಲಿತವಾದ ಟೀಕೆಯನ್ನು ಬರೆದಿದ್ದಾರೆ.

ಇನ್ನು ಆಧುನಿಕ ಭಾರತವನ್ನೂ, ರಾಜಕೀಯನಾಯಕರನ್ನೂ ಅಧಿಕರಿಸಿ, ಸಾಮಾಜಿಕ ಮತ್ತು ರಾಜಕೀಯ ವೃತ್ತಾಂತಗಳನ್ನು ಪ್ರಸ್ತಾಪಿಸಿ, ದೇಶಭಕ್ತಿಯನ್ನು, ಸಾಮಾಜಿಕ ಪ್ರಜ್ಞೆಯನ್ನು, ಜನಜಾಗೃತಿಯನ್ನು ಪ್ರಬುದ್ಧಗೊಳಿಸುವ ಮಹಾಕಾವ್ಯಗಳನ್ನೂ, ಸಂಸ್ಕೃತ ಕವಿಗಳು ವಿರಚಿಸಿದ್ದಾರೆ. ಸಂಸ್ಕೃತಕಾವ್ಯಪರಂಪರೆಯಲ್ಲಿ ಇದೊಂದು ಸ್ತುತ್ಯವಾದ ಬೆಳವಣಿಗೆ.

ಮಾ. ಹ. ಅಣೇಮಹಾಶಯರು ಲೋಕಮಾನ್ಯ ತಿಲಕರ ಚರಿತೆಯನ್ನು ಅಧಿಕರಿಸಿ 'ಶ್ರೀತಿಲಕಯಶೋರ್ಣವ' ಎಂಬ 85 ಸರ್ಗಗಳ ಭವ್ಯ ಕಾವ್ಯವನ್ನು ನಿರ್ಮಿಸಿದ್ದಾರೆ. ಕವಯಿತ್ರಿ ಪಂಡಿತಾ ಕ್ಷಮಾ ರಾವ್ ಅವರ 'ಸ್ವರಾಜ್ಯವಿಜಯ'ವು ಭಾರತದ ಸ್ವಾತಂತ್ರ್ಯದ ಚರಿತೆಯನ್ನು ನಿರೂಪಿಸುವ 20 ಅಧ್ಯಾಯಗಳ ಕಾವ್ಯ. ಬ್ರಹ್ಮಾನಂದ ಶುಕ್ಲರ 'ಶ್ರೀನೆಹರೂಚರಿತವು' 18 ಸರ್ಗಗಳಿರುವ ಕಾವ್ಯ. ರಾಮನಿರೀಕ್ಷಣಸಿಂಹರ 'ಸ್ವಾಧೀನಭಾರತ', ಶ್ಯಾಮವರ್ಣದ್ವಿವೇದಿಗಳ 'ವಿಶಾಲ ಭಾರತ'—ಇವೆರಡೂ ಉಲ್ಲೇಖಾರ್ಹವಾದವು.

## ಲಘುಕಾವ್ಯ, ಭಾವಗೀತೆ ಇತ್ಯಾದಿ

ಮೈಸೂರು ದೇಶವನ್ನಾಳಿದ ನಾಲ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದ ಮುಂಡಿಕಲ್ ರಾಮಶಾಸ್ತ್ರಿಗಳು 'ಮೇಘಪ್ರತಿಸಂದೇಶ' ಎಂಬ ಮನೋಜ್ಞವಾದ ಲಘು ಕಾವ್ಯವನ್ನು ರಚಿಸಿದ್ದಾರೆ. ಇದು ಕಾಳಿದಾಸನ 'ಮೇಘಸಂದೇಶ'ದ ಪೂರಕ ಭಾಗದಂತಿದ್ದು, ಯಕ್ಷಪತ್ನಿಯ ಪ್ರತಿಸಂದೇಶವನ್ನೊಳಗೊಂಡಿದೆ. ಕಾಮಾರ್ತನಾದ ಯಕ್ಷನು ಪ್ರಕೃತಿಕೃಪಣನಾಗಿ ಅಚೇತನವಾದ ಮೇಘದೊಡನೆ ಸಂದೇಶವನ್ನಿತ್ತುದರಲ್ಲಿ ಔಚಿತ್ಯ ಉಂಟು. ಮೇಘವು ಆ ಸಂದೇಶವನ್ನು ಯಕ್ಷಪತ್ನಿಗೆ ಮುಟ್ಟಿಸಿತೆಂಬುದೂ ಆ ಸಂದೇಶವನ್ನವಲಂಬಿಸಿ ಆಕೆ ಪ್ರತಿಸಂದೇಶವನ್ನು ಕಳಿಸಿದಳೆಂಬುದೂ ಔಚಿತ್ಯದೂರವಾಗಿ ತೋರಬಹುದಾದರೂ ಕವಿತಾ ಸೌಂದರ್ಯವು ಪ್ರಶಂಸನೀಯವಾಗಿದೆ.

ಮೇಘಸಂದೇಶದಂತೆ ಈ ಕಾವ್ಯವೂ ಮಂದಾಕ್ರಾಂತಾವೃತ್ತದಿಂದ ರಚಿತವಾಗಿ ಎರಡು ಸರ್ಗಗಳನ್ನು ಒಳಗೊಂಡಿದೆ. ಕಾಳಿದಾಸನ ಮನೋಜ್ಞವಾದ ವೈದರ್ಭೀಶೈಲಿಯ ಸೊಗಸನ್ನು ಇಲ್ಲಿಯೂ ಸವಿಯಬಹುದು. ಒಂದನೆಯ ಸರ್ಗದಲ್ಲಿ ಯಕ್ಷಪತ್ನಿಯ ಪ್ರತಿಸಂದೇಶವೂ, ಎರಡನೆಯ ಸರ್ಗದಲ್ಲಿ ಯಕ್ಷನ ಬಳಿಗೆ ಹೋಗುವ ಮಾರ್ಗದ ವರ್ಣನೆಯೂ ಇವೆ. ಯಕ್ಷನು ಒಂದು ವೇಳೆ ರಾಮಗಿರ್ಯಾಶ್ರಮದಲ್ಲಿ ಇಲ್ಲದಿದ್ದಲ್ಲಿ ರಾಮೇಶ್ವರ ಪರ್ಯಂತವಾಗಿ ಆತನನ್ನು ಹುಡುಕಬೇಕೆಂದು ಯಕ್ಷಪತ್ನಿಯು ಮೇಘಕ್ಕೆ ತಿಳಿಸುತ್ತಾಳೆ. ಈ ಪ್ರಸಂಗದಿಂದ ಕಾಶ್ಮೀರ, ಪಂಜಾಬ್, ದೆಹಲಿ, ವಿದರ್ಭದೇಶ, ಗೋದಾವರೀ, ಕೃಷ್ಣಾನದೀಪ್ರಾಂತಗಳು, ವಿಂಧ್ಯಾರಣ್ಯ, ಆಂಧ್ರಪ್ರದೇಶ, ಬೆಂಗಳೂರು, ಮೈಸೂರು, ಕೇರಳ ಮುಂತಾದವುಗಳ ವರ್ಣನೆ ಪ್ರಸಕ್ತವಾಗಿದೆ.

ಮೇಘಸಂದೇಶದಲ್ಲಿ ಯಕ್ಷನು 'ಆಶಾಬಂಧಃ ಕುಸುಮಸದೃಶಃ ಪ್ರಾಯಶೋ ಹ್ಯಂಗನಾನಾಂ' ಎಂಬ ಕೋಮಲಭಾವವನ್ನು ತಳೆದರೆ, ಹತಾಶಳಾದ ಯಕ್ಷಿ 'ಮನ್ಯೇ ಪುಂಸಾಂ

ಕುಸುಮಪಿಹಿತಂ ವಜ್ರಮೇವಾಂತರಂಗಂ' ಎಂಬ ಪರುಷಭಾವವನ್ನು ತಳೆಯುತ್ತಾಳೆ. ರಾಮಗಿರ್ಯಾಶ್ರಮದಲ್ಲಿ ಯಕ್ಷನು ನೆಲೆಸಿದ್ದು ಮಾನವಸುಂದರಿಯರ ಸೌಂದರ್ಯವನ್ನು ಸವಿಯುವುದಕ್ಕಾಗಿ ಇರಬಹುದೆಂಬ ಈರ್ಷ್ಯೆಯಿಂದ—

ನೋ ಚೇದೇವಂ ವದ ಕಿತವ ಮೇ ತೇಷು ಕಸ್ಮಾದಕಾರ್ಷೀಃ
ಸ್ನಿಗ್ಧಚ್ಛಾಯಾತರುಷು ವಸತಿಂ ರಾಮಗಿರ್ಯಾಶ್ರಮೇಷು ॥

ಎಂದು ಆಕ್ಷೇಪಿಸುತ್ತಾಳೆ. ಈ ಬಗೆಯ ಪ್ರಣಯಕೋಪಾನ್ವಿತವಚನಗಳನ್ನು ಕ್ಷಣಕಾಲ ಆಡಿದರೂ, ಮುಂದೆ ದೈನ್ಯದಿಂದ ವಿರಹಕಾತರೆಯಾಗಿ ತನ್ನ ಪ್ರೇಮಸಂದೇಶವನ್ನು ನೀಡುತ್ತಾಳೆ. ಎಲ್ಲ ವರ್ಣನೆಗಳೂ ಸುಂದರವಾಗಿವೆ. ಕವಿಪ್ರತಿಭೆ ಉತ್ತಮವರ್ಗಕ್ಕೆ ಸೇರಿದ್ದು.

ಮೇಘಸಂದೇಶವನ್ನಲ್ಲದೆ ಮಂಡಿಕಲ್ ರಾಮಶಾಸ್ತ್ರಿಗಳು 'ಚಾಮರಾಜಕಲ್ಯಾಣಚಂಪೂ', 'ಕುಂಭಾಭಿಷೇಕಚಂಪೂ', 'ಭೈಮೀಪರಿಣಯನಾಟಕ'—ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಮಹಾಮಹೋಪಾಧ್ಯಾಯ ಕೆ. ಎಸ್. ಕೃಷ್ಣಮೂರ್ತಿಶಾಸ್ತ್ರಿಗಳ 'ಪ್ರಕೃತಿವಿಲಾಸ' ದಲ್ಲಿ ಕಾನನ, ಪರ್ವತ-ಸಮೀರ,ಇತ್ಯಾದಿಗಳ ಚಿತ್ರಣ ಮನೋಜ್ಞವಾಗಿದೆ. ಮಹಾಮಹೋಪಾಧ್ಯಾಯ ಗಂಗಾಧರಶಾಸ್ತ್ರಿಗಳ 'ಅಲಿವಿಲಾಸಿಸಂಲಾಪ'ವು ವಿಶಿಷ್ಟರೀತಿಯ ಖಂಡಕಾವ್ಯ, ಸಾಹಿತ್ಯ, ವ್ಯವಹಾರ, ತೀರ್ಥ, ದೇವತೆ, ಅಧ್ಯಾತ್ಮವಿಚಾರಗಳನ್ನು ಸುಂದರಶೈಲಿಯಲ್ಲಿ ಚಿತ್ರಿಸಲಾಗಿದೆ. ಇದರಲ್ಲಿ ಒಂದು ಸಾವಿರ ಶ್ಲೋಕಗಳಿವೆ. ಸಿ. ಜಿ. ಪುರುಷೋತ್ತಮ ಅವರ 'ಕಾವ್ಯತರಂಗಿಣಿ, ಯು ಕೆಲವು ಸ್ವತಂತ್ರ ನವೀನಕವಿತೆಗಳನ್ನೂ ಕನ್ನಡದಲ್ಲಿ ಪ್ರಸಿದ್ಧರಾದ ಬಿ. ಎಂ. ಶ್ರೀ. ಕುವೆಂಪು ಮೊದಲಾದವರ ಗೀತೆಗಳ ಭಾವಾನುವಾದವನ್ನು ಒಳಗೊಂಡಿದೆ. ಮ. ರಾಮಕೃಷ್ಣ ಭಟ್ಟರ 'ಕಾವ್ಯೋದ್ಯಾನ'ವು ವಿವಿಧ ಸಂದರ್ಭಗಳಲ್ಲಿ ರಚಿತವಾದ ಕವಿತೆಗಳ ಸಂಗ್ರಹ. ದೇವತಾಸ್ತುತಿ, ಸ್ವಾಗತ, ಶುಭಾಶಂಸನೆಗಳಲ್ಲದೆ ನಾನಾಸಂನಿವೇಶಗಳಲ್ಲಿ ಕವಿಗೋಚರವಾದ ವಸ್ತುಗಳನ್ನು ಕುರಿತ ಮುಕ್ತಕಗಳನ್ನಿಲ್ಲಿ ಕಾಣಬಹುದು. ಈ ಗ್ರಂಥದ ಶೈಲಿ ಪ್ರಸನ್ನ ರಮಣೀಯವಾಗಿದೆ.

1. ನಮ್ಮ ಭಾರತದೇಶವು ಸ್ವತಂತ್ರವಾಯಿತು—

ಯತ್ ಪೂರ್ವಂ ತಾಪಸೇಂದ್ರೈಃ ಶ್ರುತಿಮಧುರವಚಃಸ್ಫೀತನಾದೈಃ ಸಂಪೂತಂ
ಶ್ರೀರಾಮಾದ್ಯೈಶ್ಚ ದಿವ್ಯೋದಿತಚರಿತಚಣೈಃ ಪ್ರಾಪಿತಂ ಧರ್ಮದೀಪ್ತಿಂ ।
ರಾಜನ್ಯಚ್ಛಿದ್ಧಸತ್ತ್ವೋರ್ಜನಕಮುಖನೃಪೈಃ ಸಾರ್ವಭೌಮಂ ಚ ಜಾತಂ
ಸಂಪನ್ನಂ ಸಾಂಪ್ರತಂ ತತ್ ಸುಕೃತತತಿವಶಾದ್ಭಾರತಂ ತತ್ ಸ್ವತಂತ್ರಂ ॥

2. ಮಹಾತ್ಮಾ ಗಾಂಧೀಜಿಯವರ ನಿಧನದಿಂದ ಶೋಕ :—

ಸಹಸಾಸ್ತಮಿತೋ ಜಗನ್ಮಿತಃ ಸ ಮಹಾತ್ಮಾನುಪಜಾತಶತ್ರುಕಃ ।
ಮಹಸಾಂ ನಿಚಯೈರ್ಮಹೋಜ್ಜ್ವಲೋ ವಿದಧಲ್ಲೋಕವಿಮುಂ ತಮೋಮಯಂ ॥



3. ನಾಪಿತಶಾಲೆಗೆ ಹೋಗಿ ತನ್ನ ಸರದಿಗಾಗಿ ಕಾಯುವುದು ಶೋಚನೀಯ ಸ್ಥಿತಿ. ಅದಕ್ಕಿಂತ ಗಡ್ಡ ಬೆಳೆಸುವುದು ಒಳ್ಳೆಯದು. ಅದರಿಂದ ಲೋಕಸಂಮಾನವೂ ಉಂಟು—

ನಾಪಿತಶಾಲಾಂ ಗತ್ವಾ ವಾರಂ ಪ್ರತಿಪಾಲಯನ್ ಸ್ವಕಂ ಶೋಚ್ಯಃ ।
ಕಾಲಂ ಕ್ಷಪಯನ್ ಮರ್ತ್ಯೋ ಹ್ಯಕ್ಷತಕೂರ್ಚಸ್ತು ಯಾತಿ ಜಗದರ್ಚಾಂ ॥

ರವೀಂದ್ರನಾಥ ಠಾಕೂರರ ಗೀತಾಂಜಲಿಯನ್ನು ಗಣೇಶ ಲಕ್ಷ್ಮಣ ಆಮಲಾದಿಯವರು ಅನುವಾದಿಸಿದ್ದಾರೆ. ರವೀಂದ್ರರ ಇತರ ಕೃತಿಗಳನ್ನು ವಿಭಿನ್ನ ಕವಿಗಳು ಸಂಸ್ಕೃತಕ್ಕೆ ಪರಿವರ್ತಿಸಿದ್ದಾರೆ. ಡಾ॥ ಡಿ.ವಿ. ಗುಂಡಪ್ಪನವರ ಮಂಕುತಿಮ್ಮನ ಕಗ್ಗವನ್ನು ಕ. ಶಂಭುಶರ್ಮರು ಭಾಷಾಂತರಿಸಿದ್ದಾರೆ. ವರ್ಡ್ಸ್‌ವರ್ತ್, ಬ್ರೌನಿಂಗ್, ಷೆಲ್ಲಿ—ಮುಂತಾದವರ ಕೆಲವು ಕವಿತೆಗಳನ್ನು ರಾಮಚಂದ್ರಾಚಾರ್ಯರು ಅನುವಾದಿಸಿ ಲಘುಕಾವ್ಯಮಾಲೆಯಲ್ಲಿ ಪ್ರಕಟಿಸಿದ್ದಾರೆ.

ಡಾ॥ ಜತೀಂದ್ರವಿಮಲ ಚೌದರಿಗಳ 'ನಿಷ್ಕಿಂಚನಯಶೋಧರ' 7 ಅಂಕಗಳ ನಾಟಕ ಗೌತಮಬುದ್ಧನ ಪತ್ನಿ ಯಶೋಧರೆಗೆ ಸಂಬಂಧಿಸಿದ್ದು. ಕರುಣರಸ ಪ್ರಧಾನ. ರಾವಣನು ಕೈಲಾಸ ಶೈಲವನ್ನೆತ್ತಿದ ಕಥಾನಕವನ್ನು ಮಹಾಲಿಂಗ ಶಾಸ್ತ್ರಿಗಳು 'ಉದ್ಗಾತೃದಶಾನನ' ವೆಂಬ 7 ಅಂಕಗಳ ನಾಟಕದಲ್ಲಿ ಚಿತ್ರಿಸಿದ್ದಾರೆ. ಮಥುರಾನಾಥಶಾಸ್ತ್ರಿಗಳ 'ಪೃಥ್ವೀರಾಜವಿಜಯ,' ಡಾ॥ ವರ್ಣೇಕರ್ ಅವರ 'ವಿವೇಕಾನಂದವಿಜಯ', ಪುಲ್ಲೇ ರಾಮಚಂದ್ರುಡು ಅವರ 'ಸುಸಂಹತ ಭಾರತ', ರಾಮಕಿಶೋರಮಿಶ್ರರ 'ಅಂಗುಷ್ಠದಾನ', ವಿಘ್ನೇಶ್ವರ ಶರ್ಮರ 'ರತ್ನಾಂಗುಲೀಯಕ'—ಇವು ಉಲ್ಲೇಖಾರ್ಹವಾದ ಆಧುನಿಕ ನಾಟಕಗಳು. ಮಹೀಧರ ವೆಂಕಟರಾಮ ಶಾಸ್ತ್ರಿಗಳ 'ಸರೋಜಿನೀಸೌರಭ'ವು ಒಂದು ಸಾಮಾಜಿಕ ನಾಟಕ' ವರದಕ್ಷಿಣೆ, ದ್ರಾಮೋದ್ಧಾರ, ಜಾತಿಕಲಹ—ಮುಂತಾದ ವಿಷಗಳು ಇದರಲ್ಲಿ ಪ್ರಸ್ತುತವಾಗಿವೆ. ವಿ.ಪಿ. ಬೋಕಿಲ್ ಅವರ 'ರಮಾಮಾಧವ'ವೆಂಬ 5 ಅಂಕಗಳ ನಾಟಕವು ಪೇಷ್ವೆ ಮಾಧವರಾಯನ ಪತ್ನಿ ರಮಾದೇವಿಯ ಸಹಗಮನವನ್ನು ಚಿತ್ರಿಸುತ್ತದೆ.

ಪ್ರಹಸನಗಳಲ್ಲಿ ಸುಂದರರಾಜಕವಿಗಳ ಸ್ನುಷಾವಿಜಯ, ರಾಮಾಶಾಸ್ತ್ರಿಗಳ 'ದೋಲಾ', ಕೆ. ಎಲ್. ವಿ. ಶಾಸ್ತ್ರಿಗಳ 'ಲೀಲಾವಿಲಾಸ', ಮಹಾಲಿಂಗಶಾಸ್ತ್ರಿಗಳ 'ಕೌಂಡಿನ್ಯಪ್ರಹಸನ,' ಮತ್ತು 'ಶೃಂಗಾರನಾರದೀಯ', ಕೆ. ಆರ್. ನಾಯರ್ ಅವರ 'ಅಲಬ್ಧಕರ್ಮೀಯ'—ಇವು ಉದಾಹರಣೀಯ ಕೃತಿಗಳು.

ಹಲವಾರು ವಿಡಂಬನಗ್ರಂಥಗಳನ್ನು ಆಧುನಿಕ ಕವಿಗಳು ನಿರ್ಮಿಸಿದ್ದಾರೆ. ಸಹಸ್ರಬುದ್ಧೆಯವರ 'ಕಾಕದೂತ', ಕೆ.ವಿ. ಕೃಷ್ಣಮೂರ್ತಿಗಳ 'ಶುನಕದೂತ', ಕೃಷ್ಣಶರ್ಮರ 'ಪಲಾಂಡುಪ್ರಾರ್ಥನಾ', ಆನಂದಾಳ್ವಾರ್ ಅವರ 'ಮಾರ್ಜನೀ', ಕೃಷ್ಣಮೂರ್ತಿಗಳ 'ಮತ್ಕುಣಾಷ್ಟಕ', ಆತ್ರೇಯರ್ ಕಾಫೀಷೋಡಶಿಕಾ', ತಾತಾಚಾರ್ಯರ 'ಕಪೀನಾಮುಪವಾಸಃ', ಮಹಾವೀರಪ್ರಸಾದ ದ್ವಿವೇದಿಗಳ 'ಕನ್ಯಾಕುಬ್ಜಲೀಲಾಮೃತ'—ಇವು ಉಲ್ಲೇಖನೀಯವಾದವು.



66*

ಕುಟಿಕಾರ್ಜುನ ರಚಿತವಾದ 'ಕುಟಕಾಂಜಲಿ' ಅಥವಾ 'ನವನೀತಿಶತಕ' ವು ಗಮನಾರ್ಹವಾದ ವಿಡಂಬಿನಕಾವ್ಯ, ಸಮಾಜದ ಉಚ್ಛೃಂಖಲ ಪ್ರವೃತ್ತಿಯನ್ನೂ ಕುಟಿಲ ರಾಜಕೀಯ ವ್ಯವಹಾರವನ್ನೂ ವಿಡಂಬನಾತ್ಮಕವಾಗಿ ಇದರಲ್ಲಿ ಚಿತ್ರಿಸಲಾಗಿದೆ. 'ಜಿಂಕೆ. ತಾವರೆ, ದುಂಬಿ, . . . . . ಹಂಸ, ಮಾನಸಸರೋವರ—ಮುಂತಾದವನ್ನೇ ಆಸ್ವಾದಿಸಿ ಅರೋಚಕ ಗ್ರಸ್ತಳಾದ ಹೇ ವಾಣಿ, ಈ ಅರೋಚಕತೆ ಹೋಗಲೆಂದು 'ಕುಟಕ'ಗಳಿಂದ ಒಂದು ನೂತನ ಕಷಾಯವನ್ನು ರಚಿಸಿದ್ದೇನೆ !' ಎಂದು ಈ ಕೃತಿಯ ಆರಂಭಕ್ಕೆ ಕಾರಣವನ್ನು ಕವಿ ಹೇಳಿದ್ದಾರೆ.

1. ಮಂತ್ರಿಗೂ ಕಳ್ಳನಿಗೂ ನಡೆದ ಸಂಭಾಷಣೆ ಇದು :—

ಮಂತ್ರೀ ತಸ್ಕರಮಾಹ ಕೋಽಪಿ ಶಠ ರೇ ! ಲೋಕೈಃ ಶ್ರಮೇಣಾರ್ಜಿತಂ
ವಿತ್ತಂ ಭಿತ್ತಿ ವಿಭೇದನೇನ ಹರಸೇ ಧಿಕ್ ತ್ವಾಂ ಜನದ್ರೋಹಿಣಂ ! ।
ಪೂರ್ವಂ ಪ್ರಾಹ ಪರಃ ಕಥಂ ಜನಧನಂ ತ್ವಂಭಿತ್ತಿಭೇದಾದ್ ವಿನಾ
ಗೃಹ್ಣೀಷೇ ಚ ನ ದಂಡ್ಯಸೇ ಚ ? ಭಗವಾನ್ ! ಶಿಷ್ಯೋಽಸ್ಮಿ ತೇ ಶಾಧಿ ಮಾಂ ! ॥

2. 'ಅರ್ಥೋಽಸ್ತು ನಃ ಕೇವಲಂ' ಎಂದು ಸುಭಾಷಿತ ತ್ರಿಶತಿಯಲ್ಲಿ ನುಡಿದ ಭರ್ತೃಹರಿಯ ಮಾರ್ದನಿ ಈ ಶ್ಲೋಕದಲ್ಲಿದೆ:—

ಮಾತರ್ಮಾನವತೇ ! ಪಿತಃ ಪಶುಪತೇ ! ಭ್ರಾತಃ ಸ್ವಧರ್ಮ ! ಪ್ರಿಯೇ
ಲಜ್ಜೇ ಗೇಹಿನಿ ! ಪುತ್ರ ಧೈರ್ಯ ! ದುಹಿತರ್ಭೂತಾನುಕಂಪೇ ! ಕ್ಷಮೇ ।
ಶಾಸ್ತ್ರಾದೇಶ ಸಖೇ; ನಮೋಽಸ್ತು, ಸಕಲಾನಾಮಂತ್ರಯೇ ಸ್ವಸ್ತಿ ವಃ !
ವ್ಯಚ್ಛಿನ್ನಾಖಿಲಬಂಧನಃ ಪರಮಿತೋ ಲೀಯೇಂಧನಬ್ರಹ್ಮಣಿ ॥

3. ಗ್ರಂಥರಚನೆಯನ್ನು ಕುರಿತು ವಿದ್ವಜ್ಜನರಿಗೆ ಉಪದೇಶವಿದು:—

ಕಲ್ಯಾಣೇ ಯದಿ ತೇ ಸ್ಪೃಹಾಸ್ತಿ ಸುಮತೇ ! ಮಾ ಪುಸ್ತಕಂ ಲಿಖ್ಯತಾಂ
ಲೇಖ್ಯಂ ಚೇತ್, ಶಿಶುಮಾಙ್ಮಯಂ ಲಿಖ ಸಖೇ ! ಶಾಸ್ತ್ರೀರುಚಿಸಜ್ಯ್ಯಜ್ಯತಾಂ ।
ಶಾಸ್ತ್ರೇ ಸಾಹಸಿಕೋಽಪಿ ಮಾ ಜಡಮತೇ ! ಗ್ರಂಥಂ ಬೃಹಂತಂ ಕುರು
ತತ್ರಾಪಿ ಸ್ಖಲಿತೋಽಸಿ ಚೇತ್ ಹಾಮತ್ಯೇ !ಕ್ಷಾಟನಂ ಸ್ವೀಕುರು ॥

## ಗದ್ಯ-ಕಥಾ-ಅನುವಾದ ಇತ್ಯಾದಿ

'ಸಂಸ್ಕೃತಚಂದ್ರಿಕಾ ಮತ್ತು 'ಸೂನೃತವಾದಿ' ಎಂಬ ಪತ್ರಿಕೆಗಳ ಸಂಪಾದಕರಾಗಿದ್ದ ಅಪ್ಪಾಶಾಸ್ತ್ರಿಗಳು ಸಂಸ್ಕೃತಪ್ರಪಂಚದಲ್ಲಿ ವಿಖ್ಯಾತಕೀರ್ತಿಗಳು. ಆ ಪತ್ರಿಕೆಗಳಲ್ಲಿ ಅವರು ಬರೆದ ಲೇಖನಗಳೂ, ಪತ್ರಗಳೂ ಉತ್ತಮಸಾಹಿತ್ಯದ ಘನತೆಯನ್ನು ಗಳಿಸಿವೆ. ಇವರು ಬಂಕಿಂಚಂದ್ರರ ಲಾವಣ್ಯಮಯೀಯೆಂಬ ಬಂಗಾಳಿ ಕಾದಂಬರಿಯನ್ನು ಲಲಿತಗದ್ಯದಲ್ಲಿ ಪರಿವರ್ತಿಸಿದ್ದಾರೆ. ಅಪ್ಪಾಶಾಸ್ತ್ರಿಗಳಿಗೆ ವಿದ್ಯಾವಾಚಸ್ಪತಿ ಮತ್ತು ವಿದ್ಯಾಲಂಕಾರ ಎಂಬ ಬಿರುದುಗಳಿದ್ದವು. ಅವರ ಜೀವಿತಕಾಲ ಕ್ರಿ.ಶ. 1873–1913.



ಕ್ರಿ. ಶ. 1874ರಲ್ಲಿ ಕುಂಚಿಯಲ್ಲಿ ಜನಿಸಿದ ಅನಂತಾಚಾರ್ಯರು ಜಗನ್ನಾಥ ಪ್ರಸಾದರ ಹಿಂದೀ ಕಾದಂಬರಿ 'ಸಂಸಾರಚಕ್ರ' ವನ್ನು ಸಮರ್ಥರೀತಿಯಲ್ಲಿ ಪರಿವರ್ತಿಸಿದ್ದಾರೆ. ಇದೇ ಕಾಲದಲ್ಲಿದ್ದ ಕುಂಭಕೋಣದ ಆರ್. ವಿ. ಕೃಷ್ಣಮಾಚಾರ್ಯರು ಬಾಣನ ಕಾದಂಬರಿ, ಹರ್ಷಚರಿತಗಳನ್ನು ಉತ್ತಮವಾಗಿ ಸಂಕ್ಷೇಪಿಸಿ ಪ್ರಕಟಿಸಿದ್ದಾರೆ. ಸುಬಂಧುವಿನ ವಾಸವದತ್ತಾ ಎಂಬ ಶ್ಲೇಷಮಯ ಗದ್ಯಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾರೆ.

ಜಗ್ಗೂ ಆಳ್ವಾರ್ ಐಯಂಗಾರ್ಯರ 'ಜಯಂತಿಕಾ' ಎಂಬುದು ಸುಂದರವಾದ ಗದ್ಯಕಾವ್ಯ. ಶಿಂಗ್ರೈಯಂಗಾರ್ಯರ' ದಿವ್ಯಸೂರಿವೈಭವ'ವು ವೈಷ್ಣವ ಆಳ್ವಾರರ ಮಹಿಮೆಯನ್ನು ನಿರೂಪಿಸುತ್ತದೆ. ಮದ್ರಾಸಿನ ಲೇಡಿ ವಿಲ್ಲಿಂಗ್‌ಡನ್ ಕಾಲೇಜಿನಲ್ಲಿ ಅಧ್ಯಾಪಿಕೆಯಾಗಿದ್ದ ರಾಜಮ್ಮ ಎಂಬುವರು ಬೆಂಗಳೂರಿನವರು. ಈಕೆ 'ಚಂದ್ರಮೌಳಿ' ಎಂಬ ಸಾಮಾಜಿಕ ಕಾದಂಬರಿಯನ್ನು ರಚಿಸಿದ್ದಾಳೆ. ರಾಜಗೋಪಾಲಚಕ್ರವರ್ತಿಗಳ 'ಶೈವಲಿನಿ' ಮತ್ತು ಶ್ರೀಶೈಲತಾತಾಚಾರ್ಯರ 'ದುರ್ಗೇಶನಂದಿನಿ' (ಬಂಗಾಳಿಯಿಂದ ಅನುವಾದ) ಉಲ್ಲೇಖಾರ್ಹ ಕೃತಿಗಳು. ಅಂಬಿಕಾದತ್ತ ವ್ಯಾಸರ 'ಶಿವರಾಜವಿಜಯ'ವು ಶಿವಾಜಿಯ ಚರಿತೆಯನ್ನು ಚಿತ್ರಿಸುವ ಗದ್ಯಗ್ರಂಥ. ಪಂಡಿತಾಕ್ಷಮಾರಾವ್ ಅವರ 'ಕಥಾಮುಕ್ತಾವಳಿ'ಯಲ್ಲಿ 15 ಕಥೆಗಳಿವೆ. ಎಲ್ಲವೂ ಲಲಿತವಾದ ಗದ್ಯದಲ್ಲಿವೆ. ಅವರ 'ಗ್ರಾಮಜ್ಯೋತಿ'ಯಲ್ಲಿ ಗ್ರಾಮೀಣಜನರಿಗೆ ಜಾಗೃತಿಯನ್ನುಂಟುಮಾಡುವ ಪದ್ಯಮಯ ಕಥೆಗಳಿವೆ. ಪ್ರಸಿದ್ಧ ಸಿಂದಬಾದನ ಕಥೆಗಳನ್ನು 'ಗಂಭೀರ ಎಂಬವರು 'ಪರ್ಯಟನಶೂರ ಸಿಂದಬಾದ' ಎಂಬ ಗ್ರಂಥದಲ್ಲಿ ಅನುವಾದಿಸಿದ್ದಾರೆ. ಸಂನಿಧಾನಂ ಸೂರ್ಯನಾರಾಯಣ ಶಾಸ್ತ್ರಿಗಳು ಪೋತನನ ಆಂಧ್ರಭಾಗವತವನ್ನೂ, ತಿರುವೆಂಕಟಾಚಾರ್ಯರು ತುಲಸೀದಾಸನ ರಾಮಾಯಣವನ್ನೂ, ಕಲ್ಕಿಸಿಂಹ ಎಂದು ಖ್ಯಾತರಾದ ನರಸಿಂಹಯ್ಯಂಗಾರ್ಯರು ತಮಿಳಿನ ತಿರುವಾಯ್ಮೊಳಿಯನ್ನೂ ಸಂಸ್ಕೃತಕ್ಕೆ ಪರಿವರ್ತಿಸಿದ್ದಾರೆ. ಹರಿದಾಸ ಸಿದ್ಧಾಂತವಾಗೀಶರ'ಸರಳಾ' ರಾಜಗೋಪಾಲ ಚಕ್ರವರ್ತಿಗಳ 'ಕುಮುದಿನೀ', ಕಾವ್ಯಕಂಠ ಗಣಪತಿಶಾಸ್ತ್ರಿಗಳ 'ಪೂರ್ಣಾ' ಮೇಧಾವ್ರತರ 'ಕುಮುದಿನೀಚಂದ್ರ', ಕೋಟೇಶ್ವರ ನರಸಿಂಹಾಚಾರ್ಯರ 'ಸೌದಾಮಿನೀ'—ಇವು ಉಲ್ಲೇಖಾರ್ಹವಾದ ಸ್ವತಂತ್ರ ಕಥಾಸಾಹಿತ್ಯ. ವೆಂಕಟರಾಮಶಾಸ್ತ್ರಿಗಳ 'ಕಥಾಶತಕ ಪ್ರಸಿದ್ಧವಾದದ್ದು. ಪಿ. ವಿ. ಕಾಣೆಯವರ 'ಗದ್ಯಾವಳಿ' ಸುಂದರವಾದ ಗದ್ಯಗಳ [ಪ್ರಬಂಧ' ಭಗವಾನ್ ದತ್ತಶಾಸ್ತ್ರಿಗಳ 'ಕಾಮಾಯನೀ', ಹರಿಚರಣಭಟ್ಟಾಚಾರ್ಯರ 'ಕಪಾಲಕುಂಡಲಾ' ಶ್ರೇಷ್ಠವರ್ಗದ ಅನುವಾದ ಕೃತಿಗಳು.

ಮಹಾಮಹೋಪಾಧ್ಯಾಯ ಗಣಪತಿ ಶಾಸ್ತ್ರಿಗಳ 'ಸೇತುಯಾತ್ರಾವರ್ಣನ', ಎಸ್. ವಿ. ಭಟ್ಟಾಚಾರರ್ಯರ 'ಉತ್ತರಖಂಡಯಾತ್ರಾ'—ಇವು ಯಾತ್ರಾಪ್ರಬಂಧಗಳು. ಬಿ. ಚಿ. ಛಬ್ರ ಎಂಬುವರು ಹಾಲೆಂಡ್ ದೇಶವನ್ನು 'ನ್ಯಕ್ತರಜನಪದಶೋಭಾ' ಎಂಬ ಗ್ರಂಥದಲ್ಲಿ ವರ್ಣಿಸಿದ್ದಾರೆ. ಕಪಾಲಿಶಾಸ್ತ್ರಿಗಳು ಕಾವ್ಯಕಂಠ ಗಣಪತಿಶಾಸ್ತ್ರಿಗಳ ಜೀವನ ಚರಿತೆಯನ್ನು 'ವಾಸಿಷ್ಠವೈಭವ' ಎಂಬ ಗ್ರಂಥದಲ್ಲಿ ಅತ್ಯಂತ ರಮಣೀಯವಾಗಿ ಚಿತ್ರಿಸಿದ್ದಾರೆ. ಕೊಂಡ

ರಾಮಕೃಷ್ಣಕವಿಗಳ 'ಸ್ವೋದಯೇಕಾವ್ಯ', ದುರ್ಗಾನಂದಸ್ವಾಮಿಗಳ 'ಜೀವನ ಚರಿತಗಳು' ಆತ್ಮಚರಿತೆಗಳು.

ಷೇಕ್ಸ್‌ಪಿಯರ್ ಮಹಾಕವಿಯ ಕೆಲವು ಆಂಗ್ಲಕೃತಿಗಳು ಸಂಸ್ಕೃತದಲ್ಲಿ ಅನೂದಿತವಾಗಿವೆ.

| ಕೃತಿ ಕಾವ್ಯನಾಮ | ಅನುವಾದಕರು |
|---|---|
| Lucrece = ಕನಕಲತಾ | ಕಲ್ಯಾಣರಾಮಶಾಸ್ತ್ರಿ |
| Comedy of errors = ಭ್ರಾಂತಿವಿಲಾಸ | ಶ್ರೀಶೈಲದೀಕ್ಷಿತ |
| Othello = ಒಥೆಲೋ | ರಾಜವರ್ಮಾ |
| A mid-summer nights' dream = ವಾಸಂತಿಕಾಸ್ವಪ್ನ | ಆರ್. ಕೃಷ್ಣಮಾಚಾರ್ಯ |
| As you like it = ಯಥಾಭಿಮತಂ | ಎಸ್. ಎನ್. ತಾಡಪತ್ರಿಕರ್ |

ಪ್ರಸಿದ್ಧ ಪರ್ಷಿಯನ್ ಕವಿ ಉಮರ್ ಖಯ್ಯಾಮನ ಪ್ರಣಯಗೀತೆಗಳನ್ನು ಹರಿಚರಣ ಭಟ್ಟಾಚಾರ್ಯರು ಪರಿವರ್ತಿಸಿದ್ದಾರೆ. ಇದರಲ್ಲಿ 75 ಶಾರ್ದೂಲವಿಕ್ರೀಡಿತ ವೃತ್ತಗಳಿವೆ. ಶೈಲಿ ಪ್ರಶಂಸನೀಯವಾದದ್ದು.

ಕೆಲವು ಫ್ರೆಂಚ್ ಕಥೆಗಳ ಅನುವಾದವನ್ನು 'ಕಥಾಮಂಜರಿ' ಎಂಬ ಹೆಸರಿನಿಂದ ಪಾಂಡಿಚೆರಿಯ ಅರವಿಂದಾಶ್ರಮವು ಪ್ರಕಟಿಸಿದೆ.

'ಕೌಮುದೀಕಥಾಕಲ್ಲೋಲಿನಿ' ಎಂಬುದು ಗಮನಾರ್ಹವಾದ ಕೃತಿ. ರಾಮಶರಣ ಶಾಸ್ತ್ರಿಗಳು ಪ್ರಸನ್ನಗಂಭೀರವಾದ ಶೈಲಿಯಲ್ಲಿ ನರವಾಹನದತ್ತನ ಕಥೆಯನ್ನು ವಿಸ್ತಾರವಾಗಿ ಬರೆದಿದ್ದಾರೆ. ಸಿದ್ಧಾಂತಕೌಮುದಿಯ ಸೂತ್ರಕ್ರಮದಲ್ಲಿ ವ್ಯಾಕರಣಶಾಸ್ತ್ರಕ್ಕೆ ಉದಾಹರಣೆಗಳನ್ನು ಒದಗಿಸಿದ್ದಾರೆ. ಭಟ್ಟಿಕಾವ್ಯದ ಮಾದರಿಯಲ್ಲಿ ರಚಿತವಾದ ಈ ಕೃತಿ ವ್ಯುತ್ಪಾದಕವೂ ಮನೋಹರವೂ ಆದ ಗದ್ಯಕಾವ್ಯ.

ಭಾರತವು ಪ್ರಾಚೀನ ಸಂಸ್ಕೃತಿಯ ಮಹತ್ವವನ್ನೂ, ಆಧುನಿಕ ಅಭಿರುಚಿಯನ್ನೂ ಅಳವಡಿಸಿಕೊಂಡಿರುವ ಈ ಸಂಸ್ಕೃತಕಾವ್ಯಪರಂಪರೆ ಅನುಸ್ಯೂತವಾಗಿ ಪ್ರವಹಿಸುತ್ತಲೇ ಇದೆ.

ಚಾಮರಾಜನಗರದ ರಾಮಶಾಸ್ತ್ರಿಗಳು 'ಸೀತಾರಾವಣಸಂವಾದಝರೀ' ಎಂಬ ಚಿತ್ರ ಕಾವ್ಯವನ್ನು ರಚಿಸಿದ್ದಾರೆ. 'ಧಾತುರೂಪಪ್ರಕಾಶಿಕಾ' ಮುಂತಾದ ಗ್ರಂಥಗಳನ್ನು ರಚಿಸಿದ ಸುಪ್ರಸಿದ್ಧ ವೈಯಾಕರಣರಾದ ಶ್ರೀಕಂಠಶಾಸ್ತ್ರಿಗಳು ಇವರ ಅಣ್ಣಂದಿರು. ಲಂಕೆಯಲ್ಲಿ ಸೀತೆಗೂ ರಾವಣನಿಗೂ ನಡೆದ ಸಂವಾದವನ್ನು ಈ ಕಾವ್ಯವು ಚಿತ್ರಿಸುತ್ತದೆ. ಪ್ರತಿಯೊಂದು ಶ್ಲೋಕದಲ್ಲಿಯೂ ರಾವಣನು ತನ್ನ ಮಹಿಮೆಯನ್ನು ಹೇಳಿಕೊಂಡು ತನಗೆ ವಶಳಾಗಬೇಕೆಂದು



ಸೀತೆಗೆ ಹೇಳುತ್ತಾನೆ. ಸೀತೆ ಅವನ ಮಾತನ್ನು ಧಿಕ್ಕರಿಸುತ್ತಾಳೆ. ಅವಳ ಧಿಕ್ಕಾರದಲ್ಲಿ ಚಮತ್ಕಾರಿಯಾದ ಒಂದು ಗೂಢೋತ್ತರವೂ ಇರುತ್ತದೆ. ಒಂದು ಉದಾಹರಣೆ—

ಜುಷ್ಟೋ ಮಂತ್ರಿಜನೇನ ಸಂಗತಧಿಯಾ ಮದ್ವನ್ನ ಕಶ್ಚಿತ್ ಪ್ರಭುಃ
ಪ್ರಾಪ್ತಾತ್ಯುಜ್ಜ್ವಲಕೀರ್ತಿಸಂಹತಿರಹಂ ತೈಸ್ತೈಶ್ಚರಿತ್ರೈರ್ನಿಜೈಃ ।
ರಾಮೋ ನಾರ್ಹತಿ ತುಲ್ಯತಾಂ ಜನಕಜೇ ಸಂಗ್ರಾಮಸಿಂಹಸ್ಯ ಮೇ
ಸರ್ವಂ ಸತ್ಯಮರೇ ಪರಂ ತ್ವನುಚಿತಃ ಸಂನ್ಯಾಸ ಏಕಸ್ತವ ॥

ಈ ಶ್ಲೋಕದ ಮೊದಲನೆಯ ಮೂರು ಸಾಲು ರಾವಣನ ನುಡಿ ಕಡೆಯ ಸಾಲು ಸೀತೆಯದು ಎಲ್ಲವೂ ಸತ್ಯವೇ. ಆದರೆ (ಕಪಟ) ಸಂನ್ಯಾಸವನ್ನು ಸ್ವೀಕರಿಸಿದ್ದೆಯಲ್ಲ ಅದೊಂದು ಅನುಚಿತ ಎಂದು ಸೀತೆಯ ಮಾರ್ಮಿಕವಾದ ಹೇಳಿಕೆ. ಇದರಲ್ಲಿ ಪ್ರಭಾವಶಾಲಿಯಾದ ಗೂಢೋತ್ತರವೂ ಉಂಟು. "ನಿನ್ನ ಮಾತಿನಲ್ಲಿ 'ಸಂ' = ಸಂಶಬ್ದದ, ನ್ಯಾಸ = ಸೇರಿಸುವಿಕೆ ಅನುಚಿತ. 'ಸಂ' ಶಬ್ದವನ್ನು ತೆಗೆದುಹಾಕಿದರೆ ನಿನ್ನ ಮಾತು ಸರಿಹೋಗುತ್ತದೆ" ಎಂದು ಅಭಿಪ್ರಾಯ. 'ಗತಧಿಯಾ' ಮಂತ್ರಿಜನೇನ, ಕೀರ್ತಿಹತಿಃ, ಗ್ರಾಮಸಿಂಹಸ್ಯ ಮೇ' ಎಂದುಕೊಳ್ಳಬೇಕೆಂದು ಸೀತೆಯ ಗೂಢೋತ್ತರ.

ಆಧುನಿಕ ಕೃತಿಗಳಲ್ಲಿ ಇದೊಂದು ಗಮನಾರ್ಹವಾದ ಗ್ರಂಥ. ಇದಕ್ಕೆ ಸ್ವೋಪಜ್ಞ ವ್ಯಾಖ್ಯಾನವಿದೆ.

## ಉಪಸಂಹಾರ

ಭಾರತದ ಸಾಹಿತ್ಯೇತಿಹಾಸ ವಿಶ್ವಸಾಹಿತ್ಯಗಳಲ್ಲೆಲ್ಲ ಅತಿ ಪ್ರಾಚೀನ ಮಾತ್ರವಲ್ಲ. ಅತಿ ಶ್ರೀಮಂತವೂ, ಅತಿ ಶ್ರೇಷ್ಠವೂ ಆದುದೆಂದು ಪಾಶ್ಚಾತ್ಯ ವಿದ್ವಾಂಸರೇ ಏಕಕಂಠದಿಂದ ಒಪ್ಪುತ್ತಾರೆ. 'ಗ್ರೀಕ್ ಸಾಹಿತ್ಯಕ್ಕಿಂತ ಅದು ಪ್ರಾಚೀನ ಲ್ಯಾಟಿನ್ ಸಾಹಿತ್ಯಕ್ಕಿಂತ ಅದು ವಿಸ್ತೃತ ಮತ್ತು ಅವೆರಡಕ್ಕಿಂತಲೂ ಮನೋಹರ' ವೆಂದು ಸರ್ ವಿಲಿಯಂ ಜೋನ್ಸ್ ಉದ್ಗರಿಸಿ ಎರಡು ನೂರು ವರ್ಷಗಳಾದವು. 'ಭಾರತದೇಶದ ಭೂತಕಾಲ ಮತ್ತು ವರ್ತಮಾನಕಾಲಗಳ ನಡುವೆ ಒಂದು ನಿರಂತರ ಸಾತತ್ಯವನ್ನು ಸಂಸ್ಕೃತಭಾಷೆ ಕಲ್ಪಿಸಿದೆ'; ಇತಿಹಾಸದಲ್ಲಿ ಎಷ್ಟೆಷ್ಟು ಪರಿ ಸಾಮಾಜಿಕ ಆಂದೋಲನಗಳು. ಧಾರ್ಮಿಕ ಸುಧಾರಣೆಗಳು, ರಾಜಕೀಯ ಆಕ್ರಮಣಗಳು ಮೇಲ್ವಾಯ್ದು ಬಂದರೂ, ಅವನ್ನೆಲ್ಲ ಮೀರಿ ಆ ಮಹಾಭೂಖಂಡದಲ್ಲೆಲ್ಲ ಭಾವೈಕ್ಯವನ್ನು ಕಲ್ಪಿಸಿರುವ ಏಕಮಾತ್ರ ಭಾಷಾಮಾಧ್ಯಮವೇ ಸಂಸ್ಕೃತ' ಎಂಬುದು ಮ್ಯಾಕ್ಸ್ ಮ್ಯುಲರ್ ಮಹಾಶಯನ ಹೃತ್ಪೂರ್ವಕ ಪ್ರಶಸ್ತಿವಾಕ್ಯ, ಅವನ 'ಭಾರತ' ಅದು ನಮಗೇನನ್ನು ಕಲಿಸಬಲ್ಲುದು ?' ಎಂಬ ಗ್ರಂಥದಲ್ಲಿ (ಪು. 78–79). ಅದರಂತೆ, ಮೂರು ಮಹಾಸಂಪುಟಗಳಲ್ಲಿ ಈ ಭಾರತೀಯ ಸಾಹಿತ್ಯಚರಿತ್ರೆಯ ವಿಮರ್ಶಾತ್ಮಕ ಅನುಸಂಧಾನ ಮಾಡಿದ ಮಾರಿಸ್ ವಿಂಟರ್ನಿಟ್ಸ್ ಹೇಳುವ ಕಡೆಯ ತೀರ್ಮಾನ ಹೀಗಿದೆ :—" ಇಂದಿಗೂ ಸಹ ಸಂಸ್ಕೃತ 'ಮೃತ' ಭಾಷೆಯಲ್ಲ. ಇಂದಿಗೂ ಭಾರತದಲ್ಲಿ ಹಲವಾರು ಸಂಸ್ಕೃತ ನಿಯತಕಾಲಿಕ ಪತ್ರಿಕೆಗಳು

ಪ್ರಕಟವಾಗುತ್ತಿವೆ ; ದೈನಂದಿನ ವ್ಯವಹಾರದ ವಿಷಯಗಳೂ ಸಂಸ್ಕೃತದಲ್ಲಿ ಚರ್ಚಿಸಲ್ಪಡುತ್ತವೆ. ಇಂದೂ ಮಹಾಭಾರತದ ವಾಚನ ಸಾರ್ವಜನಿಕವಾಗಿ ಸಾಗುತ್ತದೆ. ಇಂದಿನವರೆಗೂ ಸಂಸ್ಕೃತದಲ್ಲಿ ಕವಿತಾರಚನೆ ಮಾಡುವವರಿದ್ದಾರೆ. ಪ್ರೌಢಗ್ರಂಥಗಳನ್ನು ಬರೆಯುತ್ತಿರುವವರಿದ್ದಾರೆ, ಶಾಸ್ತ್ರೀಯ ವಿಷಯಗಳನ್ನು ಇಂದೂ ಪಂಡಿತರು ಚರ್ಚಿಸುವುದು ಸಂಸ್ಕೃತದಲ್ಲಿಯೇ. ಮಧ್ಯಯುಗದ ಯೂರೋಪಿನಲ್ಲಿ ಲ್ಯಾಟಿನ್ ಭಾಷೆಗೆ ಮತ್ತು ಜ್ಯೂಗಳಲ್ಲಿ ಹಿಬ್ರೂ ಭಾಷೆಗೆ ಯಾವ ಪೂಜ್ಯಸ್ಥಾನ ಮೀಸಲಾಗಿತ್ತೋ ಅದೇ ಸ್ಥಾನ ಇಂದೂ ಭಾರತದಲ್ಲಿ ಸಂಸ್ಕೃತಕ್ಕೆ ಸಲ್ಲುತ್ತದೆ" (ಸಂಪುಟ 1 ಪು. 45).

ಭಾರತೀಯ ಮೇಧಾವಿಗಳಾದ ಹರ ಬಿಲಾಸ ಸಾರದಾ ಅವರ ಹೆಮ್ಮೆಯ ನುಡಿಗಳಂತೂ ರೋಮಾಂಚಕವಾಗಿವೆ :— "ಭಾರತವನ್ನು ಬಿಟ್ಟು ಮತ್ತಾವ ದೇಶಕ್ಕಾಗಲಿ, ಸಂಸ್ಕೃತವನ್ನು ಬಿಟ್ಟು ಮತ್ತಾವ ಭಾಷೆಗಾಗಲೀ ಇಷ್ಟೊಂದು ಪ್ರಾಚೀನ ಅಥವಾ ಪೂಜ್ಯ ಪೂರ್ವಾರ್ಜಿತಸಂಪತ್ತಿನ ಹೆಮ್ಮೆಗವಕಾಶವಿಲ್ಲ. ಹಿಂದುಗಳಲ್ಲದೆ ಮತ್ತಾವ ಜನಾಂಗದವರೂ ಜಗತ್ತಿನ ಮುಂದೆ ಎದ್ದು ನಿಂತು ತನ್ನ ಪಿತ್ರಾರ್ಜಿತನಿಧಿ ಎಷ್ಟೊಂದು ಭವ್ಯ ಹಾಗೂ ಉದಾತ್ತ ಹಾಗೂ ಅದ್ವಿತೀಯವಿದೆಯೆಂಬುದನ್ನು ಸಾರಿಹೇಳುವಂತಿಲ್ಲ. ಮಾನವತೆಯ ಮುನ್ನಡೆಗೆ ದಿವ್ಯಪ್ರಕಾಶ ಬೀರುವ ದೀಪಸ್ತಂಭಗಳಾಗಿರುವ ನಮ್ಮ ವೇದಗಳ ತೇಜಸ್ಸು ಅನ್ಯಾದೃಶ"— ('ಹಿಂದೂ ಮೇಲ್ಮೈ' ಪು. 180).

ಜಗತ್ತಿನಲ್ಲಿ ತುಲನಾತ್ಮಕ ಭಾಷಾಶಾಸ್ತ್ರ, ತುಲನಾತ್ಮಕ ದೈವತ ಪುರಾಣಶಾಸ್ತ್ರ (Mythology) ಮುಂತಾದ ಆಧುನಿಕ ಶಾಸ್ತ್ರಗಳ ಆವಿರ್ಭಾವಕ್ಕೆ ಕೂಡ ಯೂರೋಪಿಯನ್ ವಿದ್ವಾಂಸರು ಸಂಸ್ಕೃತಭಂಡಾರದ ಮುದ್ರೆಯನ್ನೊಡೆದುದೇ ಕಾರಣ. ಪಾಣಿನಿಯ ಭಾಷಾವೈಜ್ಞಾನಿಕ ನಿಷ್ಕೃಷ್ಟತೆಯನ್ನು ಕಂಡು ಅತ್ಯಾಧುನಿಕ ಭಾಷಾಶಾಸ್ತ್ರಜ್ಞರು ನಿಬ್ಬೆರಗಾಗಿರುವುದಷ್ಟೇ ಅಲ್ಲ, ತಮ್ಮ ತಮ್ಮ ಭಾಷೆಗಳ ಶಾಸ್ತ್ರೀಯ ವ್ಯಾಕರಣಗಳ ನೂತನ ನಿರ್ಮಾಣಕ್ಕೂ ಪಾಣಿನಿಯಿಂದಲೇ ಸ್ಫೂರ್ತಿ ಪಡೆದಿದ್ದಾರೆ. ಭಾರತೀಯ ಋಷಿವಾಣಿಯಂತೂ ಸಂಸ್ಕೃತವನ್ನು ದೇವವಾಣಿಯೆಂದೇ ಘೋಷಿಸಿದೆ ; ಆದರ ಅನುಗ್ರಹವನ್ನು ಹಾರೈಸಿದೆ :—

" ದೇವೀಂ ವಾಚಮಜನಯನ್ತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದನ್ತಿ ।
ಸಾ ನೋ ಮನ್ದ್ರೇಷಮೂರ್ಜಂ ದಧಾನಾ ಧೇನುರ್ವಾಗಸ್ಮಾನುಪಷ್ಟುತೈತು ॥
(ಋಗ್ವೇದ viii,1 0011)

ಪತಂಜಲಿಗಳು ಮಹಾಭಾಷ್ಯದಲ್ಲಿ— "ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾಃ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ" ಎಂಬ ವೇದಮಂತ್ರದ ವರ್ಣನೆ ಸಂಸ್ಕೃತ ಭಾಷೆಗೇ ಅನ್ವಯಿಸುವುದೆಂದು ಸಿದ್ಧಮಾಡಿದಂತೆ, ದಂಡಿಯು ಅಭಿಮಾನಪೂರ್ವಕವಾಗಿ—

'ಸಂಸ್ಕೃತಂ ನಾಮ ದೈವೀ ವಾಗನ್ವಾಖ್ಯಾತಾ ಮಹರ್ಷಿಭಿಃ'

ಎಂದು ಸಾರಿದ್ದಾನೆ. 'ಪ್ರಥಮೋ ಹಿ ವಿದ್ವಾಂಸೋ ವೈಯಾಕರಣಾಃ' ಎಂದು ಮುಕ್ತಕಂಠದಿಂದ ಒಪ್ಪಿ ಶಿಷ್ಟಭಾಷೆಗೆ ವ್ಯಾಕರಣ ಸಂಸ್ಕಾರವನ್ನು ಹೀಗೆ ಒದಗಿಸಿ. ಸಾವಿರಾರು



ವರ್ಷಗಳು ಕಳೆದರೂ ಭಾಷಾಶುದ್ಧಿ ಹಾಗು ಪಾವಿತ್ರ್ಯ ಏಕರೀತಿಯಾಗಿ ಉಳಿದಿರುವಂತೆ ಯೋಜಿಸಿರುವ ಭಾರತೀಯರ ಸಾಧನೆ ಮತ್ತು ಸಿದ್ಧಿ ವಿಶ್ವಸಾಹಿತ್ಯದಲ್ಲೇ ಒಂದು ಅಪೂರ್ವ ಅದ್ಭುತವೆನ್ನಬಹುದು.

ಸಂಸ್ಕೃತ ವರ್ಣಮಾಲೆ ಕೂಡ 'ದೇವ–ನಾಗರೀ' ಎಂದು ಹೇಳಿಕೊಳ್ಳುವುದು ಸಾರ್ಥಕವಾಗುವಷ್ಟು ಶ್ರೇಷ್ಠವಾಗಿದ್ದು, ಧ್ವನಿಶಾಸ್ತ್ರದ ದೃಷ್ಟಿಯಿಂದ ಅತ್ಯಂತ ಸೂಕ್ಷ್ಮಗ್ರಾಹಿಯೂ, ಪರಿಪೂರ್ಣವೂ ಆಗಿದೆ. ಪ್ರತಿಯೊಂದು ಸೂಕ್ಷ್ಮ ಉಚ್ಚಾರ ಭೇದಕ್ಕೂ ಒಂದು ಸ್ವತಂತ್ರ ವರ್ಣಾಕೃತಿಯಿದೆ. ವರ್ಣಗಳ ಸಂಖ್ಯೆ ವಿವರವಾಗಿ ಬಿಡಿಸಿದಾಗ 50 ರಿಂದ 63 ರವರೆಗೂ ಹೋಗುತ್ತದೆ. ಇಷ್ಟು ಸೂಕ್ಷ್ಮಗ್ರಾಹಿಯೂ, ಪರಿಪೂರ್ಣವೂ, ವಿಪುಲವೂ ಆದ ವರ್ಣಮಾಲೆಯೇ ಮತ್ತಾವ ಭಾಷೆಗೂ ವಿಶ್ವದಲ್ಲಿಯೇ ಕಾಣಸಿಗದು. ಇಂಗ್ಲಿಷಿನಲ್ಲಿರುವ ವರ್ಣಮಾಲೆ 26 ಅಕ್ಷರಗಳಷ್ಟೇ ಪರಿಮಿತ ಸಂಖ್ಯೆಯದು. "ಸೋಽಯಮಕ್ಷರಸಮಾಮ್ನಾಯೋ ವಾಕ್ಸಮಾಮ್ನಾಯಃ ಪುಷ್ಪಿತಃ ಫಲಿತಶ್ಚಂದ್ರತಾರಕವತ್ ಪ್ರತಿಮಂಡಿತೋ ವೇದಿತವ್ಯೋ ಬ್ರಹ್ಮರಾಶಿಃ" ಎಂಬ ಪತಂಜಲಿಗಳ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲವೆಂಬುದು ಮನನ ಮಾಡಿದಂತೆಲ್ಲ ಅನುಭವಕ್ಕೆ ಬರುತ್ತದೆ. 'ಸಂಸ್ಕೃತ' ಈ ಶಬ್ದದಲ್ಲೇ ಭಾಷೆಗೆ ಪ್ರಕೃತಿ–ಪ್ರತ್ಯಯ ವಿಭಾಗಾತ್ಮಕ ಸಂಸ್ಕಾರ ಸೇರಿ ಶೋಭಿತವಾಗಿರುವ ಅಂಶ ಅಡಕವಾಗಿದೆ. ಅದನ್ನೇ ವಾಗ್ಭಟನು ತನ್ನ ಲಕ್ಷಣಗ್ರಂಥದಲ್ಲಿ (II. 3) "ಸಂಸ್ಕೃತಂ ಸ್ವರ್ಗಿಣಾಂ ಭಾಷಾ ಶಬ್ದಶಾಸ್ತ್ರೇಷು ನಿಶ್ಚಿತಾ" ಎಂದು ಬಿಡಿಸಿ ಹೇಳಿದ್ದಾನೆ.

ಭಾರತೀಯರ ಪೂರ್ವೇತಿಹಾಸವೆಲ್ಲ ಪುರಾಣಕಾವ್ಯಗಳಲ್ಲಿ ಮತ್ತು ಆರ್ಷಕಾವ್ಯೇತಿಹಾಸಗಳಲ್ಲಿ ಹಾಗು ಆಸ್ಥಾನಕವಿಗಳ ಪ್ರಶಸ್ತಿಕಾವ್ಯಗಳಲ್ಲಿ ಅಡಗಿ ಕುಳಿತಿದೆ. ಅದನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸದೆಯೇ ಕುಂದಿಟ್ಟು ಜರೆಯುವುದು ತರವಲ್ಲ. ಭಾರತೀಯರ ಇತಿಹಾಸದೃಷ್ಟಿ ಕೇವಲ ತತ್ಕಾಲೀನ ತಿಥಿನಿರೂಪಣೆಯ ವರದಿಗಾರನದಕ್ಕಿಂತ ಭಿನ್ನವಾಗಿ, ಇಡಿಯ ರಾಷ್ಟ್ರಜೀವನವನ್ನೇ ಪೋಷಿಸಬಲ್ಲ ಸಾಂಸ್ಕೃತಿಕ ಶಾಶ್ವತ ಮೌಲ್ಯಗಳಿಂದ ತರಂಗಿತವಾಗಿದ್ದು, ಅದೇ ಯುಕ್ತತರ ವಿಶಾಲದೃಷ್ಟಿಯೆಂದು ಟಾಯ್ನ್‌ಬೀ ಮುಂತಾದ ಅತ್ಯಾಧುನಿಕ ಇತಿಹಾಸಶಾಸ್ತ್ರಜ್ಞರು ಒಪ್ಪುವ ಕಾಲವೀಗ ಬರುತ್ತಿದೆ.

ಸಂಸ್ಕೃತ ಸಾಹಿತ್ಯದ ಸರ್ವಾಂಗೀಣ ಸಮೃದ್ಧಿಯನ್ನು ಅವಲೋಕಿಸಿದವರು ಅದರ ಶ್ಲಾಘ್ಯ ಪ್ರಭಾವ ಯಾವ ರೀತಿಯಾಗಿ ಬಂಗಾಳಿ, ಮರಾಠಿ, ಹಿಂದೀ, ಗುಜರಾತೀ, ಮಲಯಾಳಂ, ತೆಲುಗು, ಕನ್ನಡ ಮುಂತಾದ ಸಕಲ ಭಾರತೀಯ ಆಧುನಿಕ ಭಾಷೆಗಳ ಮೇಲೂ ಆಗಿದೆಯೆಂಬುದನ್ನು ಮನಗಾಣಬೇಕಾದರೆ ಈ ವಿಭಿನ್ನ ಭಾರತೀಯ ಭಾಷಾ ಸಾಹಿತ್ಯಗಳ ಇತಿಹಾಸವನ್ನು ತುಲನಾತ್ಮಕವಾಗಿ ಪರೀಕ್ಷಿಸಿ ನೋಡಬೇಕು. ಸಂಸ್ಕೃತದಲ್ಲಿಯೇ ಒಂದು ರಾಮಾಯಣ ಅನೇಕ ರಾಮಾಯಣಗಳ ಉದಯಕ್ಕೆ ಪ್ರೇರಕವಾದಂತೆ ಕಾಲಾಂತರಗಳಲ್ಲಿ ದೇಶಭಾಷೆಗಳಲ್ಲೂ ನಾನಾ ಬಗೆಯ ರಾಮಾಯಣಗಳನ್ನು ನಿರ್ಮಿಸಲು ಸ್ಫೂರ್ತಿಯನ್ನು ನೀಡಿತು. ಹಿಂದಿಯ ತುಲಸೀ

ರಾಮಾಯಣವಾಗಲಿ, ಬಂಗಾಲಿಯ ಕೃತಿ ವ್ಯಾಸರಾಮಾಯಣವಾಗಲಿ, ವಾಲ್ಮೀಕಿಯ ಸ್ತುತಿಯಿಂದಲೇ ಆರಂಭವಾಗಿ ಆಯಾ ಭಾಷೆಗಳನ್ನು ನೂತನ ಸಾಹಿತ್ಯಸಂಪತ್ತಿನ ಶಿಖರಕ್ಕೇರಿಸಿದವು. ಕಾಳಿದಾಸನು ಸಕಲ ಭಾಷಾ ಕವಿಗಳಿಗೂ ಆದರ್ಶ ಕವಿಯಾಗಿ ಪ್ರೇರಣೆಯನ್ನು ನೀಡಿದನು. ಸಂಸ್ಕೃತದ ಕಾವ್ಯಜಾತಿಗಳೇ ಸಕಲ ಭಾರತೀಯ ಭಾಷಾ ಕಾವ್ಯಪ್ರಕಾರಗಳಿಗೂ ಮಾದರಿಯಾಗಿ ಹದಿನೆಂಟನೆಯ ಶತಮಾನದ ಕಡೆಯವರೆಗೂ ಸ್ಫೂರ್ತಿ ನೀಡುತ್ತಿದ್ದವು. ಪ್ರಾಕೃತ—ಅಪಭ್ರಂಶ ಸಾಹಿತ್ಯವೆಲ್ಲ ಸಂಸ್ಕೃತದ ಪಡಿನೆಳಲೇ ಎಂದರೂ ಸಲ್ಲುತ್ತದೆ. ಪಾಶ್ಚಾತ್ಯ ಪ್ರಭಾವ ಪ್ರಾದೇಶಿಕ ಭಾಷೆಗಳ ಮೇಲೆ ಆಗತೊಡಗಿದ ಈ ಒಂದೂವರೆ ಶತಮಾನದಲ್ಲಿ ಕೂಡ ಸಂಸ್ಕೃತ ಶಬ ಸಂಪತ್ತಿನಿಂದಲೇ ವಿಚಾರಸಾಹಿತ್ಯದ ಮುನ್ನಡೆ ಸಾಧ್ಯವಾಗುತ್ತಿದೆ. ಇವೆರಡರ ಮಧುರ ಸಮನ್ವಯಕ್ಕಾಗಿ ಸ್ವಾತಂತ್ರ್ಯೋತ್ತರ ಭಾರತ ಎದುರು ನೋಡುತ್ತಿದೆ. ಈ ಸಂಧಿ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಅಭ್ಯಾಸ ಆಳವೂ, ಅರ್ಥಪೂರ್ಣವೂ ಆದರೆ ಮಾತ್ರ ಸಂಸ್ಕೃತದ ಪ್ರಗತಿ ಮಾತ್ರವಲ್ಲ, ಪ್ರಾದೇಶಿಕ ಭಾಷೆಗಳ ಪ್ರಗತಿಯೂ ಶ್ರೇಯಸ್ಕರವಾದೀತೆನಿಸುತ್ತದೆ. ಏಕೆಂದರೆ ಪಾಶ್ಚಾತ್ಯ ಪ್ರಭಾವಕ್ಕೆ ಮುಂಚೆ ರಚಿತವಾದ ಪ್ರಾದೇಶಿಕ ಭಾಷಸಾಹಿತ್ಯವೆಲ್ಲವೂ ಕೂಡ ಸಂಸ್ಕೃತದ ಮೂಲಪ್ರಭಾವದ ಪರಿಜ್ಞಾನವಿಲ್ಲದವರಿಗೆ ತನ್ನ ಪೂರ್ಣ ರಹಸ್ಯವನ್ನು ಬಿಟ್ಟುಕೊಡಲಾರದು. ವೇದಾಂತ, ಧರ್ಮಶಾಸ್ತ್ರ. ವ್ಯಾಕರಣಶಾಸ್ತ್ರ, ತರ್ಕಶಾಸ್ತ್ರ, ಅಲಂಕಾರಶಾಸ್ತ್ರ, ಛಂದಶ್ಶಾಸ್ತ್ರ, ಜೋತಿಷ್ಯಶಾಸ್ತ್ರ, ವೈದ್ಯಶಾಸ್ತ್ರ—ಇತ್ಯಾದಿ ಸಕಲ ಶಾಸ್ತ್ರವೂ ಭಾಷಾಭೇದವಿಲ್ಲದೆ ಭಾರತಕ್ಕೆಲ್ಲ ಒಂದೇ ಆಗಿರುವುದಂತೂ ನಿರ್ವಿವಾದ. ಆ ಶಾಸ್ತ್ರವ್ಯುತ್ಪತ್ತಿಯ ಅಮೃತವನ್ನೇ ಸಂಸ್ಕೃತ ಕವಿಗಳು ಕಾವ್ಯರೂಪದಲ್ಲಿ ಆಬಾಲಗೋಪವಿದಿತವಾಗುವಂತೆ ಬಟ್ಟಿಯಿಳಿಸಿ ಸಾರವನ್ನು ಮಾತ್ರ ಕೊಟ್ಟಿದ್ದಾರೆ. ಶಾಸ್ತ್ರ–ಕಾವ್ಯಗಳ ಸಂಬಂಧ ನಿಕಟವಾದದ್ದು. ಒಂದನ್ನು ಬಿಟ್ಟು ಒಂದಿಲ್ಲ. ಸಂಸ್ಕೃತಕಾವ್ಯವು ಸಂಸ್ಕೃತಶಾಸ್ತ್ರವೃಕ್ಷದ ಕುಸುಮವೆಂದರೂ ಸಲ್ಲುತ್ತದೆ.

"ಸೋऽಯಂ ಕಲ್ಪತರೂಪಮಾನಮಹಿಮಾ ಭೋಗ್ಯೋऽಸ್ತು ಭವ್ಯಾತ್ಮನಾಮ್,"

## ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ

ಸಹವಾಸಸಾಹಚರ್ಯಗಳಿಂದ ಸಹಜವಾಗಿ ಪರಸ್ಪರ ವಿನಿಮಯ ಮತ್ತು ಅನುಕರಣೆಗಳು ನಡೆಯುತ್ತವೆ. ವೇಷ, ಭಾಷೆ, ಸಂಸ್ಕೃತಿ, ಸಾಹಿತ್ಯ—ಎಲ್ಲಕ್ಕೂ ಈ ಮಾತು ಅನ್ವಯಿಸುತ್ತದೆ. ಹೀಗೆ ವಿನಿಮಯದಿಂದ ಸಮೃದ್ಧವಾಗುವುದು ಪ್ರಗತಿಯ ಲಕ್ಷಣ. ಈ ವಿನಿಮಯವು ಕನ್ನಡ ಸಂಸ್ಕೃತಗಳಲ್ಲಿಯೂ ನಡೆದಿದೆ. ಅನೇಕ ಸಹಸ್ರ ವರ್ಷಗಳ ಕಾಲ ಹೆಮ್ಮರವಾಗಿ ಬೆಳೆದು ಅಪಾರ ಶಬ್ದಸಂಪತ್ತು ಮತ್ತು ಭವ್ಯಸಾಹಿತ್ಯಗಳಿಂದ ಸಮೃದ್ಧವಾಗಿರುವ ಸಂಸ್ಕೃತವು ಒಂದಲ್ಲೊಂದು ರೀತಿಯಲ್ಲಿ ಜಗತ್ತಿನ ನಾನಾಭಾಷೆ ಮತ್ತು ಸಾಹಿತ್ಯಗಳಿಗೆ ಗಣನೀಯವಾದ ನೆರವನ್ನು ನೀಡಿದೆ. ಸುಮಾರು ಉತ್ತರ ಭಾರತದ ಸಕಲ ಭಾಷೆಗಳೂ ಸಂಸ್ಕೃತದಿಂದ ಮೂಡಿ, ಬೆಳೆದು, ವಿಕಾಸಗೊಂಡಂತೆಯೇ ದಕ್ಷಿಣ



ಭಾರತದ ದ್ರಾವಿಡ ಭಾಷೆಗಳೂ ಇದರಿಂದ ಉಪಕೃತವಾಗಿವೆ. ದ್ರಾವಿಡ ಭಾಷೆಗಳಲ್ಲೊಂದಾದ ಕನ್ನಡಕ್ಕೂ, ಸಂಸ್ಕೃತಕ್ಕೂ ಇರುವ ಬಾಂಧವ್ಯವು ಮಧುರವೂ, ಘನಿಷ್ಠವೂ ಆದುದು. ಸಂಸ್ಕೃತಕ್ಕೆ ಕನ್ನಡಿಗರ ಕೊಡುಗೆಯೂ ಕಡಿಮೆಯಲ್ಲ. ಸುಮಾರು ಕ್ರಿ. ಶ. 6 ನೆಯ ಶತಮಾನದ ಗಂಗದೊರೆಯಾದ ದುರ್ವಿನೀತನು ಸಂಸ್ಕೃತದಲ್ಲಿ ಬೃಹತ್ಕಥೆಯನ್ನು ಬರೆದನು. ಪ್ರಸಿದ್ಧ ಭಾಷ್ಯಕಾರನಾದ ಸಾಯಣನು ಕನ್ನಡರಾಜ್ಯ ಸಂಸ್ಥಾಪಕನಾದ ವಿದ್ಯಾರಣ್ಯನ ಸೋದರ. ಕರ್ಣಾಟಕ ಚಕ್ರವರ್ತಿಯಾದ ಕೃಷ್ಣದೇವರಾಯನೂ ಜಾಂಬವತೀಪರಿಣಯವೇ ಮುಂತಾದ ಸಂಸ್ಕೃತಕಾವ್ಯಗಳನ್ನು ಬರೆದಿದ್ದಾನೆ. ಸಾಳ್ವನರಸಿಂಹನೂ ರಾಮಾಭ್ಯುದಯವೇ ಮೊದಲಾದ ಸಂಸ್ಕೃತಕೃತಿಗಳನ್ನು ರಚಿಸಿದ್ದಾನೆ. ಗಂಗಾದೇವಿ*, ವಿಜ್ಜಿಕಾ, ಶೀಲಾಭಟ್ಟಾರಿಕಾ, ತಿರುಮಲಾಂಬೆ ಮೊದಲಾದ ಕನ್ನಡ ದೇಶದ ವಿದುಷಿಯರೂ ಸಂಸ್ಕೃತಕಾವ್ಯಗಳನ್ನು ರಚಿಸಿದ್ದಾರೆ. ಷಡಕ್ಷರಿಯೇ† ಮುಂತಾದ ಪ್ರಸಿದ್ಧ ಕನ್ನಡ ಕವಿಗಳಿಂದ ರಚಿತವಾದ ಸಂಸ್ಕೃತಕೃತಿಗಳಿವೆ. ಕನ್ನಡಿಗರು ಸಂಸ್ಕೃತದ ನಿಕಟಸಂಬಂಧವನ್ನು ಹೊಂದಿದ್ದು ಅದರಲ್ಲಿ ಅಪಾರ ಪಾಂಡಿತ್ಯವನ್ನು ಪಡೆದಿದ್ದರು. ಹೀಗೆಯೇ ಸಂಸ್ಕೃತದ ಮೇಲೆ ಕನ್ನಡದ ಪ್ರಭಾವವನ್ನೂ ಗುರುತಿಸಬಹುದಾಗಿದೆ.

ಕನ್ನಡ ಭಾಷೆಯಲ್ಲಿ ಸಂಸ್ಕೃತ ಶಬ್ದಗಳು ಹೇರಳವಾಗಿ ಬೆರೆತಿವೆ. ಮಣಿ, ಮಂಚ, ಚಂದ್ರ. ರತ್ನ ಮುಂತಾದ ಕೆಲವು ಶಬ್ದಗಳು ವಿಕಾರಗೊಳ್ಳದೆ ಸಮಸಂಸ್ಕೃತಗಳಾಗಿ ಬೆರೆತಿವೆ. ಬಿಜ್ಜೆ, ಬಂಚೆ, ಹವಳ, ಸೊಗ ಮುಂತಾದ ಹಲವು ಶಬ್ದಗಳು ವಿಕಾರಗೊಂಡು ತದ್ಭವಗಳಾಗಿ ಬೆರೆತಿವೆ. ಇದರಿಂದ ಎಷ್ಟೋ ಶುದ್ಧ ಕನ್ನಡ ಶಬ್ದಗಳು ಮೂಲೆ ಸೇರಿ ಅವು ಇಲ್ಲವೇನೋ ಎಂಬಂತಾಗಿವೆ‡. ಸಂಸ್ಕೃತ ಶಬ್ದಗಳ ಬಳಕೆಯು ವಿದ್ಯಾವಂತನ ಲಕ್ಷಣವಾಗಿ ಪರಿಣಮಿಸಿದೆ. ತಿಳಿದೋ ತಿಳಿಯದೆಯೋ ಎಲ್ಲರೂ ಧಾರಾಳವಾಗಿ ಸಂಸ್ಕೃತ ಶಬ್ದಗಳನ್ನು ಸಹಜವಾಗಿ ಬಳಸುತ್ತಾರೆ. ನಿತ್ಯವ್ಯವಹಾರದಲ್ಲಿ ಬಳಕೆಯಲ್ಲಿರುವ ಎಷ್ಟೋ ವಾಕ್ಯಗಳಲ್ಲಿ ಕ್ರಿಯಾಪದವನ್ನು ಬಿಟ್ಟರೆ ಉಳಿದ ಶಬ್ದಗಳೆಲ್ಲಾ ಸಂಸ್ಕೃತವಾಗಿರುತ್ತವೆ. ಆಗಮಿಸು, ಹರ್ಷಿಸು. ರಚಿಸು, ಉಪಕರಿಸು, ಸ್ಥಾಪಿಸು, ಪ್ರೇರಿಸು—ಹೀಗೆ 'ಲ್ಯುಡಂತ' ಸಂಸ್ಕೃತ ಶಬ್ದಗಳಿಗೆ 'ಇಸು' ಪ್ರತ್ಯಯವನ್ನು ಸೇರಿಸಿ ಕ್ರಿಯಾಪದಗಳನ್ನು ಮಾಡಿಕೊಳ್ಳಲಾಗುತ್ತಲಾದ್ದೆ§. ಅಲ್ಲದೆ ಭೋಗಾದಿಯಾದ ಆಕೃತಿಗಣವನ್ನು ರಚಿಸಿ ಲ್ಯುಡಂತಗಳಲ್ಲದೆ ಭೋಗ, ರಾಗ, ಭಾವ, ಕಾಮ, ವೇಗ, ರೂಢಿ ಮೊದಲಾದ ಸಂಸ್ಕೃತ ಶಬ್ದಗಳಿಗೂ 'ಇಸು' ಪ್ರತ್ಯಯವನ್ನು ಹಚ್ಚಿ ಕ್ರಿಯಾಪದಗಳನ್ನು ಮಾಡಿಕೊಳ್ಳುತ್ತಾರೆ. ‖

---

* ವೀರಕಂಪರಾಯ ಚರಿತಂ (ಮಧುರಾವಿಜಯ).

† ವೀರಭದ್ರಗದ್ಯ, ಭಕ್ತಾಧಿಕ್ಯರತ್ನಾವಲೀ.

‡ ಚಂದ್ರ (ತಿಂಗಳು) ; ನಕ್ಷತ್ರ (ಅರಿಲ್, ಚುಕ್ಕಿ) ; ಸೂರ್ಯ (ಹೊತ್ತು) ; ಅನ್ನ (ಬೋನ, ಕೂಳು) ಇತ್ಯಾದಿ.

§ ಇಸುಪ್ ತತ್ಕರೋತಿ ಭಾವೇ ಲ್ಯುಟೋऽಶಯನಾದೇರ್ಲುಪ್ತ ದೋಃ...ಶಬ್ದಾನುಶಾಸನ

‖ ಭೋಗಾದಿಭ್ಯಃ—ಶಬ್ದಾನುಶಾಸನ.

ಸಂಸ್ಕೃತಾವ್ಯಯಂಗಳು ಕನ್ನಡದಲ್ಲಿ 'ಲಿಂಗ' (ಪ್ರಾತಿಪದಿಕ)ಗಳಾಗಿಯೂ, ಲಿಂಗಗಳಾಗದೆಯೂ ಬಳಕೆಯಲ್ಲಿವೆ. ಸಾಕಷ್ಟು ಶತೃಂತಗಳೂ ಕನ್ನಡಕ್ಕೆ ಬಂದಿವೆ. ಕನ್ನಡದ ಜಾಯಮಾನಕ್ಕೆ ಅಸಹಜವಾದರೂ ಕರ್ಮಣಿಪ್ರಯೋಗವನ್ನು ಸಂಸ್ಕೃತದ ಪ್ರಭಾವದಿಂದ ಬಳಕೆಗೆ ತಂದು ಕೊಳ್ಳಲಾಗಿದೆ. ಪ್ರಾಚೀನ ಕನ್ನಡ ವ್ಯಾಕರಣಕಾರರೆಲ್ಲಾ ಇದನ್ನು ಅಂಗೀಕರಿಸಿದ್ದಾರೆ. ಸಂಸ್ಕೃತಿ, ಶಾಸ್ತ್ರ, ಧರ್ಮ, ಮಂತ್ರ, ಕಲೆ ಮುಂತಾದುವುಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳೆಲ್ಲಾ ಬಹಳ ಮಟ್ಟಿಗೆ ಸಂಸ್ಕೃತದಿಂದ ಬಂದಿವೆ. ಹೀಗೆ ಕನ್ನಡವು ಸಂಸ್ಕೃತಮಯವಾಗಿದೆ ಅಥವಾ ಕನ್ನಡಸಂಸ್ಕೃತಗಳು ಯಾವ ಭೇದಭಾವವೂ ಇಲ್ಲದೆ ಸುಂದರವಾಗಿ ಹೊಂದಿಕೊಂಡಿವೆ. "ದೀನ ನಾನು ಸಮಸ್ತಲೋಕಕೆ ದಾನಿ ನೀನು, ವಿಚಾರಿಸಲು ಮತಿಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು " ಇಲ್ಲಿ ನಾನು ನೀನು ಎಂಬೆರಡು ಕನ್ನಡ ಶಬ್ದಗಳನ್ನು ಬಿಟ್ಟರೆ ಉಳಿದವು ಸಂಸ್ಕೃತ ಶಬ್ದಗಳ ಕನ್ನಡ ರೂಪಾಂತರಗಳು.

ಕನ್ನಡ ಭಾಷೆಯ ಇಂದಿನ ರೂಪಕ್ಕೆ ಧಾರ್ಮಿಕಪ್ರಭಾವವೂ ಒಂದು ಪ್ರಧಾನ ಕಾರಣ. ನಾಮಕರಣ, ವಿವಾಹಾದಿ ಸಕಲ ಧಾರ್ಮಿಕ ಕಾರ್ಯಗಳಲ್ಲಿ ಇಂದಿಗೂ ವೇದಮಂತ್ರಗಳನ್ನು ಬಳಸುವ ಪರಿಪಾಠವಿದೆ. ದಿನ, ತಿಥಿ, ವಾರ, ನಕ್ಷತ್ರಾದಿಗಳನ್ನು ನಿರ್ಣಯಿಸುವ ಜ್ಯೋತಿಷ್ಯ ಬಾಳಿಗೆ ಅಂಟಿಕೊಂಡಿದೆ. ದೇವಾಲಯಗಳಲ್ಲಿ ಆಗಮಗಳಿಗನುಸಾರವಾಗಿ, ಮಂತ್ರಪುರಸ್ಸರವಾಗಿ ಅರ್ಚನೆ ನಡೆಯುತ್ತದೆ. ಹಬ್ಬಹರಿದಿನಗಳೆಲ್ಲಾ ಈ ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದಿವೆ. ಈ ಕಾರ್ಯಗಳನ್ನು ನಡೆಸಲು ಪುರೋಹಿತರ ಮತ್ತು ಅರ್ಚಕರ ವರ್ಗಗಳಿವೆ.

ರಾಮಾಯಣ ಮಹಾಭಾರತಾದಿಗಳ ಪ್ರವಚನ ಪಾರಾಯಣಗಳಿಂದ ಪುಣ್ಯ ಬರುತ್ತದೆಂಬ ನಂಬುಗೆಯಿದೆ. 'ಸತ್ತರು' ಎಂದು ಹೇಳದೆ 'ದೈವಾಧೀನವಾದರು', 'ಕಾಲಾಧೀನವಾದರು, 'ಶಿವೈಕ್ಯಹೊಂದಿದರು', 'ಸ್ವರ್ಗಸ್ಥರಾದರು' ಮುಂತಾದ ಶಬ್ದಗಳನ್ನು ಬಳಸಿದರೇ ತೃಪ್ತಿ. ವಿಧಾನಸೌಧ, ಪುಷ್ಪಕಾಶಿ, ಉಪಾಹಾರಮಂದಿರ, ಮೃಗಾಲಯ ಮುಂತಾದ ಶಬ್ದಗಳ ಕಡೆಗೇ ಜನರ ಒಲವು. ಹೀಗೆ ಜನಜೀವನವು ಒಂದು ಧಾರ್ಮಿಕ ಚೌಕಟ್ಟಿನಲ್ಲಿ ರೂಪುಗೊಂಡಿದ್ದರಿಂದಲೂ ಕನ್ನಡದ ಮೇಲೆ ಸಂಸ್ಕೃತದ ಅಧಿಕ ಪ್ರಭಾವ ಬಿದ್ದಿತು. ಕೆಲವೊಮ್ಮೆ ಜನರ ಸ್ವಭಾವವೂ ಕೊಂಚ ಮಟ್ಟಿಗೆ ಕಾರಣವಾಗುತ್ತದೆ. ಧರ್ಮಾಸಕ್ತಿ, ಸಹನೆ, ಮಾರ್ದವ, ಔದಾರ್ಯಗಳಿಂದ ತುಂಬಿದ ಕನ್ನಡಿಗರ ಸರಳ ಸ್ವಭಾವವೂ ಸಂಸ್ಕೃತವನ್ನು ಸ್ವಾಗತಿಸಿರಬೇಕು. ತಮಿಳು, ಗುಜರಾತಿ, ಮರಾಠಿ, ತೆಲುಗು, ಬಂಗಾಳಿಗಳಂತೆ ಸಂಸ್ಕೃತವು ಒಂದು ಪ್ರದೇಶದ ಅಥವಾ ಒಂದು ಜನಾಂಗದ ಭಾಷೆಯಾಗದಿರುವುದರಿಂದ ಎಲ್ಲರ ಮನ್ನಣೆ ಪಡೆದಿದೆ.

ಕರ್ನಾಟಕದಲ್ಲಿ ಬಹಳ ಮಟ್ಟಿಗೆ ಸಂಸ್ಕೃತದಲ್ಲಿಯೇ ಶಾಸನಗಳ ರಚನೆಯಾಗಿದ್ದು, ಇರುವ ಕನ್ನಡ ಶಾಸನಗಳೂ ಸಂಸ್ಕೃತ ಭೂಯಿಷ್ಠವಾಗಿವೆ. ದೊರೆತಿರುವ ಕನ್ನಡದ ಪ್ರಥಮಶಾಸನವಾದ ಹಲ್ಮಿಡಿ ಶಾಸನದಲ್ಲಿ (ಕ್ರಿ. ಶ. 450) ಕೇವಲ ಇಪ್ಪತ್ತು ಕನ್ನಡ ಶಬ್ದಗಳಿವೆ. 'ಆ ಬಟರಿ ಕುಲಾಮಲವ್ಯೋಮತಾರಾಧಿನಾಥನ್, ಅಳಪಗಣಪಶುಪತಿ ಆ ದಕ್ಷಿಣಾಪಥಬಹುಶತವಹನಾ



ಹವದುಳ್'-ಹಲ್ಮಿಡಿ ಶಾಸನದ ಈ ವಾಕ್ಯಖಂಡದಲ್ಲಿ ಪದಗಳೆಲ್ಲಾ ಸಂಸ್ಕೃತವಾಗಿದ್ದು ನಾಥನ್ ಆಹವದುಳ್, ಎಂಬ ಶಬ್ದಗಳಿಗೆ ಕನ್ನಡ ಪ್ರತ್ಯಯವನ್ನು ಹಚ್ಚಲಾಗಿದೆ. 53 ಪದ್ಯಗಳಿರುವ ವಿಷ್ಣುವರ್ಧನನ ಬೇಲೂರು ಶಾಸನದಲ್ಲಿ ಸುಮಾರು ಅರ್ಧಸಂಸ್ಕೃತ ಪದ್ಯಗಳಿವೆ ; ಕಂದವನ್ನು ಬಿಟ್ಟರೆ ಉಳಿದ ಛಂದಸ್ಸುಗಳೆಲ್ಲಾ ಸಂಸ್ಕೃತವೃತ್ತಗಳಾಗಿವೆ. ಇವರ ಗದ್ಯವಂತೂ ದೀರ್ಘ ಸಮಾಸಗಳಿಂದ ಕೂಡಿ ಕೊನೆಯಲ್ಲಿ ಕನ್ನಡರೂಪ ಪಡೆದ ಸಂಸ್ಕೃತವೇ ಆಗಿದೆ—

'ಸಮಸ್ತಮಂಗಳಾಭ್ಯುದಯಕರಲಕ್ಷಣಲಕ್ಷಿತಮುಂ, ಶಬ್ದವಿದ್ಯೆಯಂತೆ ಸೂತ್ರಮುಖ ಸಿದ್ಧಮುಂ, ಶ್ರುತಿಕದಂಬದಂತೆ ಪದಕ್ರಮಾನುವಿದ್ಧಮುಂ'... ಇತ್ಯಾದಿ. ಕ್ರಿ.ಶ. 1686ರಲ್ಲಿ ರಚಿತವಾದ ಚಿಕ್ಕದೇವರಾಯನ ಶ್ರೀರಂಗಪಟ್ಟಣದ ಶಾಸನದಲ್ಲಿ 42 ಸಂಸ್ಕೃತ ಪದ್ಯಗಳಿದ್ದು ಕೊನೆಯಲ್ಲಿ ಕನ್ನಡಗದ್ಯವಿದೆ. ಸಂಸ್ಕೃತಕ್ಕೆ ಆಳರಸರ ಆಶ್ರಯವಿದ್ದಿತು ; ಮನ್ನಣೆಯಿದ್ದಿತು. ಆದ್ದರಿಂದ ಶಾಸನಗಳಲ್ಲಿ ಸಂಸ್ಕೃತವು ಮೆರೆಯಿತು.

ಸಾಮಾನ್ಯವಾಗಿ ಎಲ್ಲ ಬೆಳೆದ ಭಾಷೆಗಳೂ ಶಬ್ದಸ್ವರೂಪನಿರ್ವಚನ ಮತ್ತು ಪ್ರಯೋಗ ವಿಧಾನಗಳನ್ನು ತಿಳಿಸುವ ವ್ಯಾಕರಣಗಳನ್ನು ಪಡೆದಿವೆ. ಸಂಸ್ಕೃತವಾಗಲಿ, ಕನ್ನಡವಾಗಲಿ ಯಾವುದೇ ಭಾಷೆಯ ಕಾವ್ಯಗಳ ಅಭ್ಯಾಸಕ್ಕೆ ವ್ಯಾಕರಣ, ನಿಘಂಟು. ಛಂದಸ್ಸು, ಅಲಂಕಾರಶಾಸ್ತ್ರ–ಇವುಗಳ ತಿಳುವಳಿಕೆ ಅಗತ್ಯ. ಕನ್ನಡ ಭಾಷೆಯ ಮೇಲೆ ಬಿದ್ದಿದ್ದ ಸಂಸ್ಕೃತ ವ್ಯಾಕರಣದ ಪ್ರಭಾವವನ್ನೂ, ಕನ್ನಡದ ಸ್ವಂತವ್ಯಕ್ತಿತ್ವವನ್ನೂ, ಈ ಎರಡೂ ಭಾಷೆಗಳ ಬೆರಕೆಯಿಂದ ಉದ್ಭವಿಸಿದ್ದ ವಿಶೇಷಲಕ್ಷಣ ಮತ್ತು ಸಮಸ್ಯೆಗಳನ್ನೂ 'ಪ್ರಯೋಗಶರಣಾಃ ವೈಯಾಕರಣಾಃ' ಎಂಬ ಸೂಕ್ತಿಗನುಸಾರವಾಗಿ ಕನ್ನಡ ವ್ಯಾಕರಣಕಾರರು ಪರಿಶೀಲಿಸಿದರು. ಸಂಸ್ಕೃತದಲ್ಲಿಯೂ ವಿದ್ವಾಂಸರಾದ ಇವರು ಸಂಸ್ಕೃತವ್ಯಾಕರಣಗಳ ಮಾದರಿಯಲ್ಲಿಯೇ ಕನ್ನಡವ್ಯಾಕರಣಗಳನ್ನು ರಚಿಸಿದರು. ಆದ್ದರಿಂದ ಕನ್ನಡವ್ಯಾಕರಣಗಳು ವಿಷಯವರ್ಗೀಕರಣ, ನಿರೂಪಣವಿಧಾನ, ಸೂತ್ರರಚನೆ, ಪಾರಿಭಾಷಿಕಶಬ್ದಗಳ ಉಪಯೋಗ ಮುಂತಾದ ಅಂಶಗಳಲ್ಲಿ ಸಂಸ್ಕೃತವ್ಯಾಕರಣ ಗಳನ್ನೇ ಅನುಕರಿಸಿವೆ. ಎ, ಒ. ಱ, ಕುಳ, ಕ್ಷಳ ಈ ಐದು ದೇಶೀಯಾಕ್ಷರಗಳನ್ನು ಬಿಟ್ಟರೆ ಕನ್ನಡವರ್ಣಮಾಲೆಯಲ್ಲಿಯೂ, ಸಂಸ್ಕೃತವರ್ಣಮಾಲೆಯಲ್ಲಿಯೂ ಸಮಾನ ವರ್ಣಗಳಿವೆ. ಶುದ್ಧ ಕನ್ನಡಕ್ಕೆ ಅನಗತ್ಯವಾದರೂ ವರ್ಣಮಾಲೆಯಲ್ಲಿ ಋ, ೠ, ಇ, ಶ, ಷ, ವಿಸರ್ಗ ಜಿಹ್ವಾಮೂಲೀಯ, ಉಪಧ್ಮಾನೀಯಗಳನ್ನು ಸೇರಿಸಿಕೊಂಡಿರುವುದು ಕನ್ನಡದ ಮೇಲೆ ಸಂಸ್ಕೃತದ ಪ್ರಭಾವಕ್ಕೆ ಜ್ವಲಿಂತಸಾಕ್ಷಿ.

ಕನ್ನಡಸಾಹಿತ್ಯ ಪ್ರಾರಂಭವಾಗುವ ವೇಳೆಗಾಗಲೇ ಸಂಸ್ಕೃತಸಾಹಿತ್ಯ ಸಮೃದ್ಧವಾಗಿ ಬೆಳೆದಿದ್ದಿತು; ಸರ್ವಕಾವ್ಯಪ್ರಕಾರಗಳಿಂದ ಶೋಭಿಸುತ್ತಿದ್ದಿತು. ಇದರ ಅಧ್ಯಯನ, ಆಸ್ವಾದನೆಗಳಿಂದ ಪ್ರಭಾವಿತರಾದ ಕನ್ನಡನಾಡಿನವಿದ್ವಾಂಸರು ಅದೇ ದಾರಿಯಲ್ಲಿ ನಡೆದು ಕನ್ನಡವಲ್ಲಿ ಕಾವ್ಯಗಳನ್ನು ರಚಿಸಿದರು. ಸಂಸ್ಕೃತದ ವಸ್ತು, ಕಾವ್ಯರಚನಾತಂತ್ರ ಮುಂತಾದುವುಗಳನ್ನೇ ಅನುಕರಿಸಿದರು,

ರಾಜಾಸ್ಥಾನಗಳಲ್ಲಿದ್ದ ಪಂಡಿತರು ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಪ್ರೌಢವಿದ್ವಾಂಸರಾಗಿದ್ದರು. ಅಂದಿನ ವಿದ್ವಾಂಸರನ್ನು ತಲೆದೂಗುವಂತೆ ದೂಡಿ ರಾಜರ ಮೆಚ್ಚುಗೆಯನ್ನು ಗಳಿಸಬೇಕಾಗಿದ್ದರೆ ಸಂಸ್ಕೃತಪದಪುಂಜ, ವೃತ್ತ, ತಂತ್ರ ಮೊದಲಾದವುಗಳನ್ನು ಅನಿವಾರ್ಯವಾಗಿ ಆಶ್ರಯಿಸ ಬೇಕಾಗಿದ್ದಿತು. ಇದರ ಫಲವಾಗಿ ಕ್ರಿ.ಶ. 19ನೆಯ ಶತಮಾನದ ಕಡೆಯವರೆಗೂ ಸಂಸ್ಕೃತ ಸಾಹಿತ್ಯದ ಪಡಿಯಚ್ಚಿನಂತೆ ಕನ್ನಡಸಾಹಿತ್ಯ ಮೂಡಿ ಬೆಳೆಯಿತು. ಸಂಸ್ಕೃತಸಾಹಿತ್ಯವೇ ಸ್ವಲ್ಪ ವೇಷ ಬದಲಿಸಿಕೊಂಡು ಕನ್ನಡರಂಗಕ್ಕಿಳಿಯಿತೆಂದರೂ ತಪ್ಪಾಗದು. ಕನ್ನಡಸಾಹಿತ್ಯದ ಬೆಳವಣಿಗೆಯನ್ನು ಪರಿಶೀಲಿಸಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು 'ಕನ್ನಡ ಸಾಹಿತ್ಯಕ್ಕೆ ಸಂಸ್ಕೃತಸಾಹಿತ್ಯವೇ ಪ್ರೇರಕ, ಪೋಷಕ ಗುರು'* ಎಂದಿದ್ದಾರೆ. ಸಂಸ್ಕೃತವು ಭರತಖಂಡದ ಬುದ್ಧಿಯ ಹಾಗೂ ಪ್ರತಿಭೆಯ ಭಾಷೆ. ಇದು ಬಹಳ ಕಾಲ ರಾಜಪೂಜ್ಯ ಭಾಷೆಯಾಗಿಯೂ ಇದ್ದಿತು. ವ್ಯಾಸವಾಲ್ಮೀಕಿಗಳ ನಂತರ ಭಾಸ, ಕಾಳಿದಾಸ, ಭವಭೂತಿ, ಬಾಣ, ಭಾರವಿ, ಮಾಘ ಮೊದಲಾದವರ ಅಮರ ಕೃತಿಗಳ ಪ್ರಭಾವ ಕನ್ನಡ ಕವಿಗಳ ಮೇಲೂ ಬಿದ್ದಿದೆ. ಕನ್ನಡ ಕವಿಗಳು ಸಂಸ್ಕೃತಕಾವ್ಯಗಳಿಂದ ವಸ್ತುವನ್ನೂ, ವರ್ಣನೆಗಳನ್ನೂ, ಪದಪುಂಜಾದಿಗಳನ್ನೂ ಧಾರಾಳವಾಗಿ ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಪಂಪ, ರನ್ನ, ರುದ್ರಭಟ್ಟ, ಪೊನ್ನ, ನೇಮಿಚಂದ್ರ, ಜನ್ನ, ಹರಿಹರ, ಷಡಕ್ಷರಿ, ಚಿಕ್ಕದೇವರಾಜ, ಕುವೆಂಪು ಮೊದಲಾದವರ ಕೃತಿಗಳಲ್ಲಿ ಹೇರಳವಾಗಿ ಸಂಸ್ಕೃತದ ಪ್ರಭಾವವಿದೆ. ರನ್ನನು ತನ್ನನ್ನು 'ಉಭಯಕವಿತೆ'ಯಲ್ಲಿ ಸಂಪನ್ನನೆಂದು ಕರೆದುಕೊಂಡಿದ್ದಾನೆ. ಪೊನ್ನ, ಜನ್ನರು ತಮ್ಮನ್ನು 'ಉಭಯಕವಿ ಚಕ್ರವರ್ತಿ'ಗಳೆಂದು ಸಾರಿಕೊಂಡಿದ್ದಾರೆ. ರಾಘವಾಂಕನಿಗೆ 'ಉಭಯಕವಿಕಮಲರವಿ' ಎಂಬ ಬಿರುದಿದ್ದಿತು.

ಕನ್ನಡದಲ್ಲಿ ರಾಮಾಯಣ, ಮಹಾಭಾರತಗಳನ್ನವಲಂಬಿಸಿ ರಚಿಸಿದ ಅನೇಕ ಕಾವ್ಯಗಳಿವೆ. ವೈದಿಕರು, ಜೈನರು, ಶೈವರು ತಮ್ಮ ತಮ್ಮ ಮತಧರ್ಮಾನುಸಾರವಾಗಿ ಮೂಲಕಥೆ ಮತ್ತು ವಿಚಾರಗಳಲ್ಲಿ ಸಾಕಷ್ಟು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ಚಾವುಂಡರಾಯಪುರಾಣ ದಲ್ಲಿ ಮೊಟ್ಟಮೊದಲಿಗೆ ರಾಮಕಥೆ ಕಾಣಿಸಿಕೊಳ್ಳುತ್ತದೆ. ಪಂಪರಾಮಾಯಣ, ಕುಮುದೇಂದು ರಾಮಾಯಣ, ರಾಮವಿಜಯಚರಿತೆ, ರಾಮಕಥಾವತಾರ—ಇವು ಮುಖ್ಯವಾದ ಜೈನ ರಾಮಾಯಣಗಳು. ಬತ್ತಲೇಶ್ವರ (1470)ನೆಂಬ ವೀರಶೈವ ಕವಿಯು ಭಾಮಿನೀಷಟ್ಪದಿಯಲ್ಲಿ ಒಂದು ರಾಮಾಯಣವನ್ನು ಬರೆದಿದ್ದಾನೆ. ಕುಮಾರ ವಾಲ್ಮೀಕಿಯು ತೊರವೆ ರಾಮಾಯಣವು ವೈದಿಕಪರಂಪರೆಗೆ ಸೇರಿದುದು. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯೂ ರಾಮಾಶ್ವಮೇಧದ ಕಥೆಯಿದೆ. ಮುದ್ದಣನ ರಾಮಾಶ್ವಮೇಧ ಮತ್ತು ಅದ್ಭುತ ರಾಮಾಯಣಗಳು ಕನ್ನಡಿಗರ ಮೆಚ್ಚುಗೆಯನ್ನು ಪಡೆದಿವೆ. ಕುವೆಂಪು ಅವರ ಶ್ರೀರಾಮಾಯಣದರ್ಶನವು ಕನ್ನಡ ಸಾಹಿತ್ಯಕ್ಕೆ 20ನೆಯ ಶತಮಾನದ ಅಮೂಲ್ಯ ಕೊಡುಗೆ.

*ಕನ್ನಡ ಕೈಪಿಡಿ—ಸಂಪುಟ 2.



ವಿಕ್ರಮಾರ್ಜುನವಿಜಯ ಮತ್ತು ಸಾಹಸಭೀಮವಿಜಯಗಳು ಮೂಲಕ್ಕೆ ಹೆಚ್ಚು ಚ್ಯುತಿ ಬಾರದಂತೆ ರಚಿತವಾದ ಜೈನಭಾರತಗಳು.* ಸಾಳ್ವ ಭಾರತವು ಜೈನಧರ್ಮಕ್ಕಾಗಿ ಮೂಲದಿಂದ ಹೆಚ್ಚು ವ್ಯತ್ಯಾಸ ಪಡೆದ ಜಿನಭಾರತ. ಗದುಗಿನ ಭಾರತ ಮತ್ತು ಜೈಮಿನಿ ಭಾರತಗಳು ವೈದಿಕ ಪರಂಪರೆಯವು. ಚಾಟುವಿಠಲನು ಕನ್ನಡ ಭಾಗವತವನ್ನು ಬರೆದಿದ್ದಾನೆ. ಸಂಸ್ಕೃತ ಪುರಾಣಗಳ ಆಧಾರದಿಂದ ರಚಿತವಾದ ಅನೇಕ ಕನ್ನಡ ಕೃತಿಗಳಿವೆ ; ಅವು ಮತಾನುಸಾರವಾಗಿ ಭಿನ್ನ ಭಿನ್ನವಾಗಿವೆ.

* ಕಾಲ ಮತ್ತು ಮಹತ್ವಗಳ ದೃಷ್ಟಿಯಿಂದ ಕನ್ನಡದ ಆದಿಕವಿಯಾದ ಪಂಪನ ಕೀರ್ತಿಯು ಚಿರಾಯುವಾಗಿರುವುದು ಮಹಾಭಾರತವನ್ನಾಧರಿಸಿ ರಚಿತವಾದ ವಿಕ್ರಮಾರ್ಜುನವಿಜಯದಿಂದ. ಇದು ಸಂಕ್ಷೇಪವೂ, ಸಮಗ್ರವೂ, ಸುಂದರವೂ ಆಗಿ ಮಹಾಭಾರತವನ್ನು ಪ್ರತಿನಿಧಿಸುತ್ತದೆ. ಇದರ ಪ್ರಾರಂಭದಲ್ಲಿ ಕವಿಯು "ವ್ಯಾಸಮುನೀಂದ್ರರುಂದ್ರವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನ್" ಎಂದು ತನ್ನ ಆನೃಣ್ಯವನ್ನೂ, ವಿನಯವನ್ನೂ ಪ್ರಕಟಿಸಿಕೊಂಡಿದ್ದಾನೆ. ಇವನು ಕಾಳಿದಾಸ, ಬಾಣ, ಭಟ್ಟನಾರಾಯಣರಿಂದ ಪ್ರಭಾವಿತನಾಗಿ ಅವರ ಕೃತಿಗಳಿಂದಲೂ ಉಪಕೃತನಾಗಿದ್ದಾನೆ. ಜಿನಸೇನಾಚಾರ್ಯ ಮತ್ತು ಗುಣಭದ್ರಾಚಾರ್ಯರ ಮಹಾಪುರಾಣವು ಪಂಪನ ಆದಿಪುರಾಣಕ್ಕೆ ಮೂಲ. ಪಂಪನು ಬಾಣನಿಂದುಪ ಕೃತನಾಗಿರುವುದಕ್ಕೆ ಒಂದೆರಡು ಉದಾಹರಣೆ :—

1. ರೋಹಿಣೀ ಚರಣಾಲಕ್ತಕರಾಗಮುಚ್ಚಿರಿದುದೋ ಮೇಣ್ ಕಾಮಿಗಳ್ಗೀವರಾಗರಸಂ ಪೊಣ್ಮಿ ದುದೋ.........ರಕ್ತರುಚಿಯಿಂ ಬಿಂಬಂ ಸುಧಾಸೂತಿಯ (ಪಂಪಭಾರತ).

ರತಿಕಲಹಕುಪಿತರೋಹಿಣೀಚರಣಾಲಕ್ತಕರಸಲಾಂಛಿತಮಿವ, ಅಭಿನವೋದಯಲೋಹಿತಂ ರಜನಿಕರ ಮುದಿತಂ.........(ಕಾದಂಬರಿ).

2. ಉದಯಗಿರಿಕಟಕಕುಹರಪರಿಕರನಿಶಾಕರಂ ಹರದಳಿತನಿಜಹರಿಣರುಧಿರನಿಚಯನಿಚಿತಮಾದಂತೆ ಲೋಹಿತಾಂಗನಾಗೆ (ಪಂಪಭಾರತ).

ಭಗವತ್ಯುದಯಗಿರಿಶಿಖರಕಟಕಕುಹರಗತಹರಿಖರನಖರನಿವಹಹೇತಿನಿಹತನಿಜಹರಿಣಗಲಿತರುಧಿರ ನಿಚಯನಿಚಿತಮಿವ ಲೋಹಿತಂ ವಪುಃ (ಹರ್ಷಚರಿತ).

ರನ್ನನ ಸಾಹಸ ಭೀಮ ವಿಜಯದಲ್ಲಿ ಭಾಸನ ಊರುಭಂಗ ಮತ್ತು ಭಟ್ಟನಾರಾಯಣನ ವೇಣೀ ಸಂಹಾರಗಳ ಪ್ರಭಾವ ಸಾಕಷ್ಟಿದೆ—

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮೀ ನಾಲ್ವರುಂ ಸಂಗರಾ-
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತವ್ರತಂ ।
ಚರಣವ್ಯಾಪಿಕೆಯುಂ ಭವತ್ಪರಿಭವಂ ಸಂಚಾರಕಂ ಕೌರವೇ-
ಶ್ವರನೀತಂ ಪಶುವಾಗೆ ಬೇಳ್ವೆನಿವನಂ ಕೋಪಾಗ್ನಿಯಿಂದಗ್ನಿಜೇ (ಗದಾಯುದ್ಧ 8-46]
ಚತ್ವಾರೋ ವಯಮೃತ್ವಿಜಃ ಸ ಭಗವಾನ್ ಕರ್ಮೋಪದೇಷ್ಟಾ ಹರಿಃ
ಸಂಗ್ರಾಮಾಧ್ವರದೀಕ್ಷಿತೋ ನರಪತಿಃ ಪತ್ನೀ ಗೃಹೀತವ್ರತಾ ।
ಕೌರವ್ಯಾಃ ಪಶವಃ ಪ್ರಿಯಾಪರಿಭವಕ್ಲೇಶೋಪಶಾಂತಿಃ ಫಲಂ
ರಾಜನ್ಯೋಪನಿಮಂತ್ರಣಾಯ ರಸತಿ ಸ್ಫೀತಂ ಯಶೋದುಂದುಭಿಃ (ವೇಣೀಸಂಹಾರ).

ಬಾಣನ ಕಾದಂಬರಿಯನ್ನು ಅವಲಂಬಿಸಿ ಮೊದಲನೆಯ ನಾಗವರ್ಮನು ಕರ್ನಾಟಕ ಕಾದಂಬರಿಯನ್ನು ರಚಿಸಿದ್ದಾನೆ. ಜನ್ನನ ಯಶೋಧರಚರಿತೆಗೆ ವಾದಿರಾಜನ ಯಶೋಧರ ಚರಿತವೂ, ದುರ್ಗಸಿಂಹನ ಕನ್ನಡ ಪಂಚತಂತ್ರಕ್ಕೆ ವಸುಭಾಗಭಟ್ಟನ ಸಂಸ್ಕೃತಪಂಚತಂತ್ರವೂ ಮೂಲಗಳು. ಹರಿಹರನ ಗಿರಿಜಾಕಲ್ಯಾಣದ ಮೇಲೆ ಕಾಲಿದಾಸನ ಕುಮಾರಸಂಭವದ ಪ್ರಭಾವವಿದೆ. ಸಂಸ್ಕೃತದಿಂದ ಅನುವಾದಗೊಂಡಿರುವ 'ಮಿತ್ರವಿಂದಾಗೋವಿಂದ'ವೇ ಉಪಲಬ್ಧವಿರುವ ಕನ್ನಡನಾಟಕಗಳಲ್ಲಿ ಮೊದಲನೆಯದು. ಸುಮಾರು ಎಲ್ಲ ಸಂಸ್ಕೃತನಾಟಕಗಳೂ ಕನ್ನಡಕ್ಕೆ ಭಾಷಾಂತರವಾಗಿವೆ. ಬಸಪ್ಪಶಾಸ್ತ್ರಿಗಳು ಅನುವಾದಿಸಿರುವ ಅಭಿಜ್ಞಾನಶಾಕುಂತಲ ಮತ್ತು ರತ್ನಾವಳಿಗಳು ಜನಪ್ರಿಯವಾಗಿವೆ. ಸೀತಾರಾಮಶಾಸ್ತ್ರಿಗಳು ವೇಣೀಸಂಹಾರವನ್ನೂ, ಸುಬ್ಬಾಶಾಸ್ತ್ರಿಗಳು ಮೃಚ್ಛಕಟಿಕವನ್ನೂ, ಅನಂತನಾರಾಯಣಶಾಸ್ತ್ರಿಗಳು ನಾಗಾನಂದವನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಒಂದೊಂದು ನಾಟಕವನ್ನು ಹಲವಾರು ಭಾಷಾಂತರಿಸಿರುವುದೂ ಉಂಟು. ಸಂಸ್ಕೃತ ಕಾವ್ಯಗಳ ಅನುವಾದವು ಇಂದೂ ಮುಂದುವರಿಯುತ್ತಲೇ ಇದೆ.

ಸಂಸ್ಕೃತದಲ್ಲಿ ಉದ್ದಾಮ ಪಂಡಿತರಾಗಿದ್ದವರು ಸಾಹಿತ್ಯವನ್ನೂ ರಚಿಸಿದುದರಿಂದ ಮೊದಮೊದಲು ಕನ್ನಡಸಾಹಿತ್ಯ ಸಂಸ್ಕೃತಸಾಹಿತ್ಯದ ಅಪರಾವತಾರವಾಯಿತು. ಕಾವ್ಯಗಳ ಕನ್ನಡ ಕೇವಲ ಒಗ್ಗರಣೆಯಂತಿದ್ದಿತು. 'ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲಿಂದೊರೆದೆಂ' ಎಂದು ಪ್ರತಿಜ್ಞೆ ಮಾಡಿದ ಆಂಡಯ್ಯನ 'ಕಬ್ಬಿಗರ ಕಾವ'ದಲ್ಲಿ ತದ್ಭವಗಳು ತುಂಬಿವೆ. 'ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ' ಎಂದು ನುಡಿದ ಮುದ್ದಣನ 'ರಾಮಾಶ್ವಮೇಧ'ಕ್ಕೆ ತದ್ಭವರೂಪಗಳು ಅನುಪಮ ಸೌಂದರ್ಯ ತಂದಿವೆ. ಗಡಸು, ಗಾಂಭೀರ್ಯಗಳಿಂದ ಹಿಂದಿನ ಕನ್ನಡಸಾಹಿತ್ಯ ಜನಸಾಮಾನ್ಯರಿಗೆ ನಿಲುಕಲಿಲ್ಲ. ಸಂಸ್ಕೃತದ ಹೊರೆ ಸಹಿಸಲಾಗದ ಭಾರವೆನಿಸಿತು. ಕಾಲಕ್ರಮದಲ್ಲಿ 'ಮುತ್ತುಂ ಮೆಣಸುಂ ಕೋದಂತಿರೆ' (ನಾಗವರ್ಮ), 'ಸಕ್ಕದನಿಕ್ಕುವವನುಂ ಕವಿಯೇ' (ನಯಸೇನ), 'ಸಕ್ಕದಮಂ ಪೇಳ್ವೊಡೆ ನೆರೆ ಸಕ್ಕದಮಂ ಪೇಳ್ಗೆ...... ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ' (ನಯಸೇನ), 'ಸುಲಿದ ಬಾಳೆಯ ಹಣ್ಣಿನಂದದಿ......... ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ ಸಂಸ್ಕೃತದೊಳಿನ್ನೇನು' (ಮಹಲಿಂಗರಂಗ) ಎಂದು ಮುಂತಾಗಿ ಮೀರಿಮೀರಿದ ಸಂಸ್ಕೃತ ಬಳಕೆಗೆ ವಿರೋಧ ಮೂಡಿತು. ಕ್ರಿ.ಶ. 12ನೆಯ ಶತಮಾನದಿಂದೀಚೆಗೆ ಸಂಸ್ಕೃತದ ಹಿಡಿತದಿಂದ ಕನ್ನಡದ ಬಿಡುಗಡೆ ಮೊದಲಾಯಿತು. ಕನ್ನಡವು ತನ್ನತನದಿಂದ ಬೆಳಗಿತು. ಈ ಮುಕ್ತಿಯು ಭಾಷಾವಿಷಯಕ್ಕೆ ಬಹುಮಟ್ಟಿಗೆ ಅನ್ವಯಿಸಿದರೂ ವಸ್ತು, ಸತ್ವ, ಕಾವ್ಯತಂತ್ರಾದಿಗಳ ವಿಷಯಕ್ಕೆ ಅಷ್ಟಾಗಿ ಅನ್ವಯಿಸುವುದಿಲ್ಲ.

———



# ಅನುಬಂಧ

## ಉದಾಹೃತ ಪದ್ಯಗಳ ಅಕಾರಾದಿ

## ಕವಿಗಳ ಅಕಾರಾದಿ

———



## ಕೃತಿಗಳ ಅಕಾರಾದಿ

———

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 18 | 11 | 'ಕೆ' 'ಶ' | 'ಕ' 'ಶ' |
| 48 | 8 | ಶಂಪ್ಕೇಂಧೋ | ಶುಷ್ಕೈಧೋ |
| 48 | 9 | ಅರ್ಥಶೂನ್ಯ | ಅರ್ಥಜ್ಞಾನಶೂನ್ಯ |
| 60 | 26 | ಯಂಜಂರ್ವೇದೋ | ಯಂಜುರ್ವೇದಃ |
| 61 | 5 | ರಚಿಸಿದೆ | ಒಳಗೊಂಡಿದೆ |
| 69 | 20 | ಉಪನಿಷುದ್ವೇದಾಂತದ | ಉಪನಿಷದ್ವೇದಾಂತದ |
| 81 | 20 | ಊಹಗಾನ | ಊಹ್ಯಗಾನ |
| 83 | ಕಡೆಯಂದಂ | ಶಂನಶ್ಯೇಪೋ– | ಶಂನಶ್ಯೇಪೋ– |
| 92 | 16 | ಸ್ಮಾರ್ತಸೂತ್ರ | ಗೃಹ್ಯಸೂತ್ರ |
| 119 | ಕಡೆಯಂದಂ | ರಕ್ಷ್ಯಥ | ರಕ್ಷಥ |
| 125 | 18 | ಚಾಗ್ರವೀರ್ಯಃ | ಚಾಗ್ರವೀರ್ಯಃ |
| 125 | 25 | ಸಂಪ್ರಚಾರಾವಂ | ಸಂಪ್ರಜಾ ರಾವಂ |
| 131 | 9 | ಜಿತ್ವಾ | ಜಿತ್ವಾ |
| 131 | 14 | ಚಿತ್ವಾ | ಜಿತ್ವಾ |
| 142 | 19 | ಅನೌಚಿತ | ಅದೌಚಿತ್ಯ |
| 155 | 5 | ಗಾಂಧರ್ರ್ವ | ಗಾಂಧರ್ವ |
| 155 | 24 | ಸಗ್ಧರಾ | ಸ್ರಗ್ಧರಾ |
| 157 | ಟಿಪ್ಪಣಿ ಕಡೆಯ ಸಾಲು | ಪ್ರಯಃನ್ನೇನ | ಪ್ರಯತ್ನೇನ |
| 158 | 18 | ಪಿಭೂಪಾಣಾಯಃ | ವಿಭೂಷಣಾಯಾಃ |
| 158 | 19 | ತರುವಂಡ | ತರಂಷಂಡ |
| 159 | ಟಿಪ್ಪಣಿ 1ನೆಯ ಸಾಲು | ತಂಪ್ಪಾಪಯಾ | ತುಷ್ಟಾಶಯಾ |
| 161 | 20 | ವಂನಃಜೇನ್ದನ್ರ | ವಂನಂಜೇನ್ದ್ರ |
| 173 | 4 | ಯಂಬ | ಯಂಬ್ಧ |
| 189 | 13 | ಬಂಧನವನ್ನ ನ್ನು | ಬಂಧನವನ್ನವನು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 192 | ಕಡೆಯ ಸಾಲು | ಸಿತಃ | ಸ್ಥಿತಃ |
| 197 | 13 | ಸತಿ | ಸತಿ ಹಿ |
| 205 | 5 | ದಿಙ್ನಾಗ | ದಿಙ್ನಾಗ |
| 206 | 14 | ಶೃಗಾರ | ಶೃಂಗಾರ |
| 207 | ಟಿಪ್ಪಣಿ 7 | ಅವಧಾನಾಕ್ಶಿಯಾ- | ಅವಧಾನಾಕ್ಷಿಯಾ- |
| 211 | 12 | ಧೀರದಲಿತ | ಧೀರಲಲಿತ |
| 212 | 24 | ಪರೀಪ್ಸ್ಯಾ | ಪರೀಕ್ಷ್ಯಾ |
| 213 | 27 | ತಿರಸ್ಕರಣೀಯಂ | ತಿರಸ್ಕರಿಣೀಯಂ |
| 219 | 14 | ತ್ಪುಂಡರೀಕೇ | ತ್ಪುಂಡರೀಕೇ |
| 220 | 4 | ಆಸ್ವಾದ್ಧ್ಯ | ಆಸ್ವಾದ್ಯ |
| 220 | 19 | ಚೈಪ | ಚೈಷ |
| 235 | 3 | ಔತ್ರರೇಯಂ | ಔತ್ತರೇಯಂ |
| 243 | 25 | ಮೇತದ್ಬೇದಕಾ | ಮೇತದ್ಭೇದಕಂ |
| 243 | 29 | ಜೀರ್ಣೋಧ್ಯಾನ | ಜೀರ್ಣೋದ್ಯಾನ |
| 251 | 23 | ದೇವೇನಾಪರ್ವ | ದೇವೇನಾಪೂರ್ವ |
| 252 | 28 | ಜನಸ್ಥಾ ಸಮಂತಾಂ | ಜನಸ್ಥಾತ್ಮಸಮಂತಾಂ |
| 253 | 24 | ಕೃಪಣಾ | ಕೃಪಣಾ |
| 255 | 7 | ಮುಖಭೂದ್ಧ್ರುವಂ | ಮುಖಮಭೂದ್ಧ್ರುವಂ |
| 255 | 8 | ನಿಜಾಸನಾಂಭೋಜನಿಮೀಲನ | ನಿಜಾಸನಾಂಭೋಜವಿನಿಮೀಲನ |
| 255 | 13 | ದರ್ಪಸ್ಯಾದವೃತೇನ.... ಸ್ಯೈವ | ದರ್ಪಃ ಸ್ಯಾದ ... ಸ್ಯೈವ |
| 255 | 16 | ಏಕೇನಾಪಿ | ಏಕಾಕಿನಾಪಿ |
| 262 | 4 | ಜ್ಯೋತಿಜ್ವಾಲಾ | ಜ್ಯೋತಿರ್ಜ್ವಾಲಾ |
| 266 | 25 | ಬಹುರುಪಾಧೀನ್ | ಬಹಿರುಪಾಧೀನ್ |



| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 268 | 5 | ತತ್ಪ್ರಾರ್ಥ್ಯತೇ | ತತ್ಪ್ರಾಪ್ಯತೇ |
| 276 | 21 | ವಿದ್ಯತೇ ನವೇತಿ | ವಿದ್ಯತೇ ವಾ ನ ವೇತಿ |
| 292 | 26 | ರಸಾವತಾರ | ರಸಾವತಾರಂ |
| 292 | 27 | ನ್ನವ್ಯೋ | ನವ್ಯೋ |
| 298 | 6 | ವಿಜಾನಾದಿಗಳೂ | ವಿಜ್ಞಾನಾದಿಗಳೂ |
| 303 | 12 | ತುರ್ಯ | ತೂರ್ಯ |
| 305 | 10 | ಭಾರಸ್ತೋ | ಭಾರಸ್ಯೋ |
| 306 | ಟಿಪ್ಪಣಿ 27 | ಗಂಫೇಷು | ಗಂಂಫೇಷು |
| 310 | 2 | ವ್ಯತೀಯಂ | ವ್ಯತೀಯಂಃ |
| 311 | 8 | ಪಿತರೌ | ಪಿತರೌ |
| 312 | 17 | ಕರುಣಾವಿಮುಖೇನ | ಕರುಣಾವಿಮುಖೇನ |
| 320 | 11 | ಪ್ರತಿಪನ್ನಂ | ಪ್ರತಿಪನ್ನಂ ಹಿ |
| 321 | 2 | ಕಂಟುಂಬಿನ | ಕಂಟುಂಬಿನಃ |
| 321 | 24 | ವಿಧತ್ನೇ | ವಿಧತ್ತೇ |
| 324 | 21 | ಮೇಂರತಾ | ಮೇಂಥತಾಂ |
| 331 | ಕಡೆಯ ಸಾಲು | ಏವೇಂದ್ರ | ಮಿವೇಂದ್ರ |
| 332 | 6 | ಪ್ರಕಾರಾಂಶು | ಪ್ರಕರಾಂಶು |
| 357 | 1 | ರಸಪವಾಹ | ರಸಪ್ರವಾಹ |
| 374 | 13 | ಮಂಕರಕೇತೋತಾರಸ | ಮಂಕರಕೇತೋಃ ಸಾರಸ |
| 379 | 6 | ಪುನರ್ಯೋಷಾಂ | ಪುನರ್ಯೋಷಾಂ |
| 381 | 11 | ಲಲಿತುಲಸ್ಯಾ | ಲಲಿತತಾಲಸ್ಯಾ |
| 386 | 15 | ಶತವ | ಶತ್ರವ |
| 389 | 19 | ಚಾವಸ್ತ್ರವ | ಚಾಪಸ್ತ್ರವ |
| 391 | 27 | ವಿದ್ಯಾ | ವಿದ್ಯಾಂ |
| 417 | 17 | ಬಿಸನೀ | ಬಿಸಿನೀ |
| 429 | 25 | ಚಾರುಂಚುಂಬನ | ಚಾರುಚುಂಬನ್ |
| 434 | ಕಡೆಯದು | ಮಾಧವನೀ | ಮಾಘವನೀ |
| 435 | 17 | ಧೂಮಾಯಿತ್ಸೈ | ಧೂಮಾಯಿತ್ಸೈ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 447 | 7 | ಮಿಹತ್ರ | ಮಿಹ |
| 448 | 5 | ತಪ್ಯತೇ | ತಪತೇ |
| 452 | 5 | ಉತ್ಕಿಪ್ತಾ | ಉತ್ಕ್ಷಿಪ್ತಾ |
| 452 | 23 | ಕರ್ಮಣೀ | ಕರಿಣೀ |
| 454 | 4 | ಪುಸಾಂ | ಪುಂಸಾಂ |
| 455 | 11 | ಬ್ರಾಂತ್ವಾ | ಭ್ರಾಂತ್ವಾ |
| 455 | 17 | ಯಾತಾ | ಯಾತಾಃ |
| 455 | 17 | ವಯುಮೇವಜೀರ್ಣಾ | ವಯುಮೇವ ಜೀರ್ಣಾಃ |
| 461 | 4 | ಷಥಿಕ | ಪಥಿಕ |
| 467 | 8 | ಚ ಸರಸ್ವತ್ಯಾ | ಸರಸ್ವತ್ಯಾ |
| 477 | 17 | ಪ್ರಭವಭಯೋ- | ಪ್ರಭವಭವಭಯೋ- |
| 478 | 23 | ಸ್ಕಂಧಿನಿ | ಸ್ಯಂದಿನಿ |
| 479 | 3 | ಕರಾಚಿಯಲ್ಲಿ | ಕಾಂಚಿಯಲ್ಲಿ |
| 481 | 23 | ತವ ಮರಣೇ | ಮರಣೇ |
| 482 | 5 | ಕೃತಮಿತ | ಕೃತಮಿವ |
| 482 | 18 | ಸಕಲಲೋಕೋ | ಸಕಲೇಽ |
| 483 | 4 | ಅವಧೀರತ | ಅವಧೀರಿತ್ರ |
| 483 | 17 | ತೌಕಿಕೀ | ಲೌಕಿಕೀ |
| 484 | 18 | ಅಲ್ಪಶೃತಂ ಶೃತವತಾಂ | ಅಲ್ಪಶ್ರುತಂ ಶ್ರುತವತಾಂ |
| 484 | 18 | ತ್ವದ್ಧಕ್ತಿರೇವ | ತ್ವದ್ಭಕ್ತಿರೇವ |
| 484 | 19 | ಚೂತತಲಿಕಾ | ಚೂತಕಲಿಕಾ |
| 484 | 24 | ಪಾತೆನ ನಿರ್ಭಿನ್ನಃ | ಪಾತೇನ ನಿರ್ಭಿನ್ನಾಃ |
| 486 | 6 | ನ ಚ | ಸ ಚ |
| 486 | 7 | ಮೀಶ್ವರೇಜ್ಛಾ | ಮೀಶ್ವರೇಚ್ಛಾ |
| 486 | 11 | ಜೈತ್ರ | ಚೈತ್ರ |
| 491 | 3 | ಮಣಿಭಿತ್ತ್ಯನು | ಮಣೀರ್ಭಿತ್ತ್ಯನು |
| 492 | ಟಿಪ್ಪಣಿ 8 | ಶ್ಚೀತ್ | ಚೈತತ್ |
| 496 | ಟಿಪ್ಪಣಿ 9 | ಲಾಂಗೂ | ಲಾಂಗೂಲ |
| 496 | ಕಡೆಯಿಂದ | ವ ಚಭತಿ | ಚೈವಂ ಭವತಿ |



| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 497 | ಟಿಪ್ಪಣಿ 5 | ಕಾರೌ | ಕಾರೌ ಖ್ಯಾತೌ |
| 497 | ಟಿಪ್ಪಣಿ 6 | ರೋಪವರೌ | ರೋಪವಂಪ್ |
| 502 | 21 | ಯಂದಪ | ಯಂದಪ್ಯ |
| 508 | 15 | ವಿಧುತಶಿರಃ | ವಿಧುತಶಿರಾಃ |
| 508 | 19 | ರಂತ್ಕೇಪ | ರಂತ್ಕ್ಷೇಪ |
| 512 | ಟಿಪ್ಪಣಿ 1 | ರಂಪಾದಿತಾಃ | ರಂಪಪಾದಿತಾಃ |
| 518 | 23 | ವಂಧಿರ | ಷಂಧೀರ |
| 518 | 24 | ಕ್ಷುದ್ಯ | ಕ್ಷುಂದ್ರ |
| 525 | 1 | ಮಾನಯಂಯತಿ | ಮಾನಯಾತಿ |
| 525 | 26 | ತಂರಂಗವಂಶಾರಯಾ | ತಂರಂಗವಂರಯಾ |
| 526 | 10 | ಕಿಮಿಯಂಂ | ಕಿಮಿಯಂಂ |
| 526 | 14 | ವಂದ್ಭುಭತವತ್ | ಅದ್ಭುತವತ್ |
| 526 | 15 | ವಸ್ತುಶಕಿಃ | ವಸ್ತುಶಕ್ತಿಃ |
| 534 | ಟಿಪ್ಪಣಿ 7 | ನೋಕಸ್ಯ | ನೋ ಕಸ್ಯ |
| 540 | 15 | ಶೇಷಾಚ್ಛತ್ರ | ಶೇಷಾಃ ಛತ್ರ |
| 543 | ಟಿಪ್ಪಣಿ 3 | ಲಬ್ಧಾರ್ಧಯೋ | ಲಬ್ಧಾರ್ಧಯೋ |
| 545 | 1 | ವಸನೇಷು | ವ್ಯಸನೇಷು |
| 546 | 24 | ಅಸಮಿಕ್ಷ್ಯ | ಅಸಮೀಕ್ಷ |
| 562 | 26 | ಆರಂಭಮೆ | ಆರಂಭವೇ |
| 574 | 25 | ನಾಹಾರೇಚ್ಛಾಂ | ನಾಹಾರೇಚ್ಛಾಂ |
| 580 | 30 | ದರ್ಜಜಃಗಂತಂ | ದಂರ್ಜಗಂತಂ |

———

